ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ ೧೬

ಶ್ರೀ ಶಂಕರಾಚಾರ್ಯರವರ ಗ್ರಂಥಗಳು

# ಉಪನಿಷದ್ಭಾಷ್ಯಗಳು

## ಸಂಪುಟ ೨

(ಐತರೇಯ, ತೈತ್ತಿರೀಯ,)

ಯಲ್ಲಂಬಳಸೆ ಸುಬ್ರಹ್ಮಣ್ಯಶರ್ಮ



ಅಧ್ಯಾತ್ಮಪ್ರಕಾಶಕಾರ್ಯಾಲಯ
ಹೊಳೆನರಸೀಪುರ
೧೯೪[illegible]

# ಪ್ರಕಾಶಕರ ಬಿನ್ನಹ

---

ಶ್ರೀ ಶಂಕರಾಚಾರ್ಯರವರ ಅಮೋಘವಾದ ಕೃತಿಗಳನ್ನೆಲ್ಲ ಕನ್ನಡಿಸಿ ಮಹಾಜನರ ಮುಂದೆ ಇಡುವ ಸುಯೋಗವು ಕಾರ್ಯಾಲಯಕ್ಕೆ ಇದೀಗ ಲಭಿಸಿರುತ್ತದೆ. ನಮ್ಮನ್ನಾಳುವ ಶ್ರೀಮತ್ಕರ್ಣಾಟಕಸಿಂಹಾಸನಾಧೀಶ್ವರರಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ.,** ಜಿ.ಸಿ.ಎಸ್.ಐ. ರವರು ಜಗತ್ಪ್ರಸಿದ್ಧರಾದ ಆಚಾರ್ಯರವರ ಗ್ರಂಥಗಳೆಲ್ಲವನ್ನೂ ಪರಿಶೋಧಿಸಿ ಸಮೂಲವಾಗಿ ಕನ್ನಡಿಸಿ ಪ್ರಕಟಿಸಬೇಕೆಂದು ಕೊಡಿಸಿರುವ ಉದಾರಾಜ್ಞೆಯನ್ನು ಶಿರಸಾವಹಿಸಿ ಈ ಮಹಾಕಾರ್ಯವನ್ನು ನಾವು ಕೈಗೊಂಡಿರುತ್ತೇವೆ.

ಇದುವರೆಗೆ ನಾವು ಪ್ರಕಟಿಸಿದ್ದ ಕೆಲವು ಗ್ರಂಥಗಳನ್ನು ಈ ಸಲ ಸಂಪೂರ್ಣವಾಗಿ ಪರಿಷ್ಕರಿಸಿ ಸಂಸ್ಕೃತಮೂಲ, ಕನ್ನಡ ಅನುವಾದ, ಮುಖ್ಯ ವಿಷಯಗಳನ್ನು ವಿಶದೀಕರಿಸುವ ಟಿಪ್ಪಣಿಗಳು, ಆಚಾರ್ಯರ ಮಿಕ್ಕ ಗ್ರಂಥಗಳಲ್ಲಿರುವ ವಿಷಯ ವಿವೇಚನೆಯ ಹೋಲಿಕೆಯನ್ನು ಸುಲಭಗೊಳಿಸುವ ಗ್ರಂಥಪರಾಮರ್ಶಿಕೆಗಳು, ಆಯಾ ಗ್ರಂಥದ ಸಾರ, ಮಂತ್ರಗಳ ಅಥವಾ ಶ್ಲೋಕಗಳ ಅಕ್ಷರಾನುಕ್ರಮಣಿಕೆ, ಶಬ್ದಾನುಕ್ರಮಣಿಕೆ—ಇಷ್ಟನ್ನೂ ಸೇರಿಸಿ ಪರಿಪೂರ್ತಿಗೊಳಿಸಿರುತ್ತದೆ. ಉಳಿದ ಗ್ರಂಥಗಳನ್ನು ಮೊದಲನೆಯ ಸಲಕ್ಕೆ ಕನ್ನಡಿಸಿ ಇದೇ ರೀತಿಯ ಸಲಕರಣೆಗಳೊಡನೆ ಹೊರಕ್ಕೆ ತರಲಾಗಿದೆ. ಗ್ರಂಥದ ಪೀಠಿಕೆಯಲ್ಲಿ ಕಾಣುವ ವಿಷಯವಿವೇಚನೆಯು ವಿಚಾರಪ್ರಚೋದಕವಾಗಿರುವಂತೆ ಏರ್ಪಡಿಸಲಾಗಿದೆ. ಮೂಲಭಾಷ್ಯವನ್ನು ತಕ್ಕಂತೆ ಪ್ರಘಟ್ಟಗಳಾಗಿ ವಿಂಗಡಿಸಿ ತಲೆಬರಹಗಳನ್ನು ಸೇರಿಸಿರುವದು; ಮುಖ್ಯ ಪಾಠಭೇದಗಳನ್ನು ಸೂಚಿಸಿರುವದು; ಪ್ರಮಾಣವಚನಗಳ ಸ್ಥಾನವನ್ನು ಅಲ್ಲಲ್ಲಿಯೇ ತೋರಿಸಿರುವದು; ಭಾಷ್ಯ, ಅನುವಾದ, ಟಿಪ್ಪಣಿಗಳು ಮುಂತಾದವುಗಳು ವಿಂಗಡವಾಗಿ ಕಾಣುವಂತೆ ಬೇರೆಬೇರೆಯ ತರದ ಅಚ್ಚಿನ ಅಕ್ಷರಗಳನ್ನು ಆರಿಸಿಕೊಂಡಿರುವದು—ಇವಿಷ್ಟೂ ಈ ಗ್ರಂಥರತ್ನಮಾಲೆಯ ವಿಶೇಷಗಳು.

ಈ ಗ್ರಂಥಾವಳಿಯ ಪ್ರಯೋಜನವು ಕನ್ನಡನಾಡಿನ ಮಹಾಜನರಿಗೆ ಸತತವಾಗಿ ಲಭಿಸುವಂತೆಯೂ, ಇದಕ್ಕೆ ಉದಾರಹಸ್ತಾವಲಂಬನವನ್ನಿತ್ತಿರುವ ಮಹಾಪ್ರಭುಗಳವರಿಗೆ ಇತೋಽಪ್ಯತಿಶಯವಾದ ಆಯುರಾರೋಗ್ಯೈಶ್ವರ್ಯವಿಜಯಕೀರ್ತಿವಂಶಾಭಿವೃದ್ಧ್ಯಾದಿಗಳನ್ನು ಸುರಿಮಳೆಗರೆಯುವಂತೆಯೂ, ಅನುಗ್ರಹಿಸಬೇಕೆಂದು ಅಖಿಲಾತ್ಮನೂ ಲೋಕಶಂಕರನೂ ಆದ ಭಗವಂತನನ್ನು ಭಕ್ತಿಪೂರ್ವಕವಾಗಿ ಪ್ರಾರ್ಥಿಸುತ್ತೇವೆ.

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ ೩೬

ಶ್ರೀ ಶಾಂಕರಭಾಷ್ಯ ಸಮೇತ

# ಐತರೇಯೋಪನಿಷತ್ತು

(ಉಪನಿಷತ್ತಿನ ಮತ್ತು ಭಾಷ್ಯದ ಸಂಸ್ಕೃತಮೂಲ, ಅನುವಾದ, ಟಿಪ್ಪಣಿ, ಸಾರ-ಮುಂತಾದವುಗಳೊಡನೆ)

ಬರೆದವರು :
ಅಧ್ಯಾತ್ಮ ಗ್ರಂಥಾವಳಿಯ ಸಂಪಾದಕ
**ಯಲ್ಲಂಬಳಸೆ ಸುಬ್ರಹ್ಮಣ್ಯಶರ್ಮ**

ಅಧ್ಯಾತ್ಮ ಗ್ರಂಥಾವಳಿಯ ಕ್ರಮಾಂಕ ೭

ಅಧ್ಯಾತ್ಮ ಪ್ರಕಾಶ ಕಾರ್ಯಾಲಯ
ಹೊಳೆನರಸೀಪುರ
೧೯೪೫

# ಪೀಠಿಕೆ

## ಉಪನಿಷತ್ತಿನ ಸ್ಥಾನ

ಐತರೇಯೋಪನಿಷತ್ತು ಋಗ್ವೇದಕ್ಕೆ ಸೇರಿದ್ದು. ಋಗ್ವೇದದ ಸಂಹಿತೆಯು ಶಾಕಲಸಂಹಿತೆಯೆಂದೂ ಶಾಂಖಾಯನಸಂಹಿತೆಯೆಂದೂ ಎರಡು ಬಗೆಯಾಗಿರುವಂತೆ ತೋರುತ್ತದೆ. ಶಾಕಲಸಂಹಿತೆಯ ಮಂತ್ರಗಳನ್ನು ವಿವರಿಸುವ ಭಾಗಕ್ಕೆ ಐತರೇಯಬ್ರಾಹ್ಮಣವೆಂದು ಹೆಸರು. ಶಾಂಖಾಯನಸಂಹಿತೆಯು ಈವರೆಗೆ ನಮಗೆ ದೊರಕಿರುವದಿಲ್ಲ; ಆದರೆ ಶಾಂಖಾಯನಬ್ರಾಹ್ಮಣವು ಆನಂದಾಶ್ರಮ ಗ್ರಂಥಾವಳಿಯಲ್ಲಿ ಮುದ್ರಿತವಾಗಿರುತ್ತದೆ. ಬ್ರಾಹ್ಮಣಗಳಿಗೆ ಪರಿಶಿಷ್ಟವಾಗಿ ಆರಣ್ಯಕಗಳು ಸೇರಿಕೊಂಡಿವೆ. ಐತರೇಯಬ್ರಾಹ್ಮಣದ ಆರಣ್ಯಕದಲ್ಲಿ ಪ್ರಕೃತವಾದ ಉಪನಿಷತ್ತು ಕಂಡುಬರುತ್ತದೆ. ಆದ್ದರಿಂದ ಇದಕ್ಕೆ ಐತರೇಯೋಪನಿಷತ್ತು ಎಂಬ ಹೆಸರು ಬಂದಿದೆ. 'ಐತರೇಯ' ಎಂಬ ಹೆಸರು 'ಇತರಾ' ಎಂಬಾಕೆಯ ಮಗನಾದ 'ಮಹಿದಾಸ''ನೆಂಬ ಸಂಪ್ರದಾಯಪ್ರವರ್ತಕನಾದ ಋಷಿಯಿಂದ ಬಂದದ್ದು. ಐತರೇಯಾರಣ್ಯಕದಲ್ಲಿ ಒಟ್ಟು ಐದು ಭಾಗಗಳಿವೆ. ಒಂದನೆಯ ಆರಣ್ಯಕದಲ್ಲಿ ಮಹಾವ್ರತವೆಂಬ ಕರ್ಮದ ವಿಚಾರವಿದೆ. ಎರಡನೆಯ ಆರಣ್ಯಕದಲ್ಲಿ ಪ್ರಾಣೋಪಾಸನೆಯೂ ಆತ್ಮವಿಚಾರವೂ ಇದೆ. ಮೂರನೆಯ ಆರಣ್ಯಕದಲ್ಲಿ ಸಂಹಿತಾವಿಷಯಕವಾದ ಉಪಾಸನೆಯನ್ನು ಹೇಳಿದೆ. ನಾಲ್ಕನೆಯ ಆರಣ್ಯಕದಲ್ಲಿಯೂ ಐದನೆಯ ಆರಣ್ಯಕದಲ್ಲಿಯೂ ಮಹಾವ್ರತದ ವಿವರಗಳಿವೆ.

## ಭಾಷ್ಯದ ವಿಚಾರಕ್ಷೇತ್ರ

ಮೇಲೆ ಕೊಟ್ಟಿರುವ ವಿಂಗಡದಿಂದ ಎರಡನೆಯ ಆರಣ್ಯಕದಲ್ಲಿ ಮಾತ್ರವೇ ಉಪನಿಷತ್ತಿಗೆ ಬೇಕಾದ ಮುಖ್ಯವಾದ ಆತ್ಮವಿಚಾರವು ಅಡಕವಾಗಿರುವದೆಂದು ಕಂಡುಬರುತ್ತದೆಯಷ್ಟೆ. ಆದ್ದರಿಂದಲೇ ಶಂಕರಾಚಾರ್ಯರವರು ಈ ಭಾಗಕ್ಕೇ ಭಾಷ್ಯವನ್ನು ಬರೆದಿರುತ್ತಾರೆ. ಆದರೆ ಅವರು ಭಾಷ್ಯವನ್ನು ಗ್ರಂಥದ ಯಾವ ಭಾಗದಿಂದ ಪ್ರಾರಂಭಿಸಿರುತ್ತಾರೆ?--ಎಂಬ ಬಗ್ಗೆ ಸಂಶಯಕ್ಕೆಡೆಯಿದೆ. ಏಕೆಂದರೆ ಈಗ ಅಚ್ಚಾಗಿರುವ ಭಾಗದಲ್ಲಿ ಉಪನಿಷತ್ತಿನ ಸಂಬಂಧಭಾಷ್ಯವು ಪ್ರಾರಂಭವನ್ನು ಸೂಚಿಸುವದಿಲ್ಲ. ಹಿಂದಿನ ಭಾಗಕ್ಕೂ ಆಚಾರ್ಯರು ಭಾಷ್ಯವನ್ನು ಬರೆದಿರಬಹು

ದೆಂಬ ಕಲ್ಪನೆಗೆ ಅವಕಾಶವನ್ನು ಕೊಡುವ ಎರಡು ವಾಕ್ಯಗಳು ಇಲ್ಲಿ ಕಂಡುಬರುತ್ತವೆ. ಹೇಗೆಂದರೆ:

(೧) **“ತಸ್ಮಾತ್ ಏಷ ಪನ್ಥಾ ಏತತ್ ಕರ್ಮೈತತ್ಸತ್ಯಮ್ ಯದೇತತ್ಪರಬ್ರಹ್ಮವಿಜ್ಞಾನಮ್”** (ಭಾ. ಭಾ ೩೭). ಇಲ್ಲಿ ಹಿಂದೆ (೨-೧-೧ ರಲ್ಲಿ) ಹೇಳಿದ್ದಕ್ಕೆ ಕಾರಣವಾಗಿ ದೇವತೆಗಳೂ ಸಂಸಾರಿಗಳೆಂಬ ವಾಕ್ಯದರ್ಥವನ್ನು ಸಂಬಂಧಿಸಿರುತ್ತದೆ. ಈ ವಾಕ್ಯಕ್ಕೆ ವ್ಯಾಖ್ಯಾನಕಾರರು ತಮ್ಮ ಟೀಕೆಯಲ್ಲಿ “ಯದ್ಯಪ್ಯೇತದ್ವಾಕ್ಯವ್ಯಾಖ್ಯಾನಾವಸರೇ ಕರ್ಮಮಾರ್ಗೋಽಪಿ ಪಥಿಶಬ್ದಾರ್ಥತ್ವೇನೋಕ್ತಃ, ತಥಾಪಿ ಜ್ಞಾನಮಾರ್ಗೋಪಾಯತ್ವೇನ ಸ ಉಕ್ತಃ, ನ ಪ್ರಾಧಾನ್ಯೇನ–ಇತಿ ಭಾವಃ” (ಈ ವಾಕ್ಯಕ್ಕೆ ವ್ಯಾಖ್ಯಾನ ಮಾಡುವ ಕಾಲದಲ್ಲಿ ಭಾಷ್ಯದಲ್ಲಿ ‘ಪನ್ಥಾಃ’ ಎಂಬುದಕ್ಕೆ ಕರ್ಮಮಾರ್ಗವೂ ಅರ್ಥವಾಗುವದೆಂದು ಹೇಳಿತ್ತಾದರೂ ಅದು ಜ್ಞಾನಮಾರ್ಗಕ್ಕೆ ಉಪಾಯವೆಂಬ ದೃಷ್ಟಿಯಿಂದಲೇ ಹಾಗೆ ಹೇಳಿದೆಯೇ ಹೊರತು ಅದೇ ಮುಖ್ಯವೆಂಬ ಅಭಿಪ್ರಾಯದಿಂದಲ್ಲ ಎಂದು ಭಾವ)–ಎಂದು ಬರೆದಿರುತ್ತಾರೆ. ಇದನ್ನು ನೋಡಿದರೆ ಟೀಕಾಕಾರರಿಗೆ ಭಾಷ್ಯವು “ಏಷ ಪನ್ಥಾಃ” ಎಂಬ ವಾಕ್ಯದಿಂದಲೂ ಆರಂಭಿಸಿದೆ ಎಂಬ ಅಭಿಪ್ರಾಯವಿತ್ತೆಂದು ಹೇಳಬೇಕಾಗುತ್ತದೆ.

(೨) **“ಕರಣಸಂಹತಿರೂಪಶ್ಚ ಪ್ರಾಣಃ ಇತ್ಯವೋಚಾಮ ಪ್ರಾಣಸಂವಾದಾದೌ”** ॥ (ಭಾ. ಭಾ. ೮೫). ಇಲ್ಲಿ ‘ಪ್ರಾಣಸಂವಾದದ ಮೊದಲಿನಲ್ಲಿ’ ಪ್ರಾಣವೆಂದರೆ ಕರಣಗಳ ಸಂಘಾತವು ಎಂದು ಹೇಳಿರುತ್ತೇವೆ–ಎಂದದ್ದರಿಂದ ಹಿಂದೆ (೨-೧-೪ ರಲ್ಲಿ) ಮಿಕ್ಕ ಕರಣಗಳೆಲ್ಲವೂ ಪ್ರಾಣವೇ ಉಕ್ಥನೆಂದೂ ತಾವೆಲ್ಲರೂ ಪ್ರಾಣನನ್ನೇ ಅವಲಂಬಿಸಿದವರೆಂದೂ ಒಪ್ಪಿಕೊಂಡದ್ದರ ಪರಾಮರ್ಶವಿದೆ. “ಹೀಗೆಂದು ಹೇಳಿರುತ್ತೇವೆ” ಎಂಬ ಮಾತು ಆ ಭಾಗಕ್ಕೂ ಆಚಾರ್ಯರು ಭಾಷ್ಯವನ್ನು ಬರೆದಿದ್ದಾರೆಂಬ ಊಹೆಗೆ ಅವಕಾಶವನ್ನು ಕೊಡುವಂತಿದೆ.

ಹಿಂದಿನ ಮೂರು ಅಧ್ಯಾಯಗಳ ಸಂಬಂಧವನ್ನು ಈ ಭಾಷ್ಯದಲ್ಲಿ ಮತ್ತೆ ಮತ್ತೆ ವಿಚಾರಮಾಡಿರುತ್ತದೆ. ಆ ಅಧ್ಯಾಯಗಳಲ್ಲಿರುವ ಕೆಲವು ವಾಕ್ಯಗಳು ಮಿಕ್ಕ ಉಪನಿಷತ್ತುಗಳ ಮತ್ತು ಬ್ರಹ್ಮಸೂತ್ರದ ಭಾಷ್ಯಗಳಲ್ಲಿಯೂ ಆಗಾಗ್ಗೆ ಉದಾಹೃತವಾಗಿರುತ್ತವೆ. ಆಚಾರ್ಯರು ಆ ಮೂರು ಅಧ್ಯಾಯಗಳಿಗೂ ಭಾಷ್ಯವನ್ನು ಬರೆದಿರಬಹುದೆಂಬ ತರ್ಕಕ್ಕೆ ಇದೂ ಬೆಂಬಲವನ್ನು ಕೊಡುತ್ತದೆ.

ಐತರೇಯೋಪನಿಷತ್ತನ್ನು **“ಆತ್ಮಷಟ್ಕ”** ವೆಂದು ಕರೆಯುವ ರೂಢಿಯೊಂದು ಇರುತ್ತದೆ. “ಆತ್ಮಾ ವಾ ಇದಮಗ್ರ ಆಸೀತ್” ಎಂಬಲ್ಲಿಂದಲೇ ಉಪ

ನಿಷತ್ತು ಮೊದಲಾಗಿರುವದೆಂದು ಇಟ್ಟುಕೊಂಡರೆ ಈ ಹೆಸರು ಉಪನಿಷತ್ತಿಗೆ ಏತಕ್ಕೆ ಬಂದಿರಬಹುದು ಎಂಬುದನ್ನು ಗೊತ್ತುಪಡಿಸುವದು ಕಷ್ಟವಾಗುತ್ತದೆ. ಈ ಗ್ರಂಥದಲ್ಲಿ ಆರು ಅಧ್ಯಾಯಗಳಾಗಲಿ ಆರು ಖಂಡಗಳಾಗಲಿ ಇರುವದಿಲ್ಲ. "ವಾಙ್ಮೇ ಮನಸಿ" ಎಂಬ ಮುಂದಿನ ಖಂಡವನ್ನೂ ಸೇರಿಸಿ ಆರು ಖಂಡಗಳಾಯಿತು ಎನ್ನುವವರಿಗೆ ನಾಲ್ಕು ಅಧ್ಯಾಯಗಳಿರುವದರಿಂದ ಆತ್ಮಚತುಷ್ಕವೆಂಬ ಹೆಸರೇಕೆ ಬಂದಿಲ್ಲ?–ಎಂಬ ಶಂಕೆಗಾಗಲಿ ಭಾಷ್ಯಕಾರರೇಕೆ ಐದನೆಯ ಖಂಡದ ಕೊನೆಯಲ್ಲಿಯೇ ತಮ್ಮ ಭಾಷ್ಯವನ್ನು ಮುಗಿಸಿದರು?–ಎಂಬ ಶಂಕೆಗಾಗಲಿ ಪರಿಹಾರವು ದೊರಕುವದಿಲ್ಲ. ಆದ್ದರಿಂದ ಹಿಂದಿನ ಮೂರು ಅಧ್ಯಾಯಗಳೂ ಈ ಮೂರು ಅಧ್ಯಾಯಗಳೂ ಸೇರಿ ಪರಾಪರಬ್ರಹ್ಮರೂಪನಾದ ಪರಮಾತ್ಮನ ವಿಚಾರವನ್ನು ಮಾಡುವದರಿಂದ ಇದಕ್ಕೆ ಆತ್ಮಷಟ್ಕವೆಂದು ಹೆಸರು ಬಂದಿದೆ ಎಂದು ಬಗೆಯುವದು ಹೆಚ್ಚು ಯುಕ್ತವಾಗಿರುತ್ತದೆ.

ಇದಕ್ಕನುಗುಣವಾಗಿ ಶ್ರೀ ಶಂಕರಾಚಾರ್ಯಕೃತಭಾಷ್ಯವೆಂಬ ಹೆಸರಿನಿಂದ ಈ ಆರು ಅಧ್ಯಾಯಗಳಿಗೂ ಒಟ್ಟು ಭಾಷ್ಯವಿರುವ ಒಂದು ಹಸ್ತಲಿಖಿತ ಪ್ರತಿಯೂ ನನಗೆ ಸಿಕ್ಕಿರುತ್ತದೆ. ಆ ಪ್ರತಿಯಲ್ಲಿ ಮೊದಲನೆಯ ಮೂರಧ್ಯಾಯಗಳ ಭಾಷ್ಯದ ಜೊತೆಗೆ ಮುದ್ರಿತವಾಗಿ ಪ್ರಚಾರದಲ್ಲಿರುವ ಮೂರಧ್ಯಾಯಗಳ ಭಾಷ್ಯವೂ ಇದೆ. ಬೇರೆ ಕೈ ಬರಹದ ಪ್ರತಿಗಳು ಎಲ್ಲಿಯಾದರೂ ದೊರೆತಾವೆಂಬ ಪ್ರತ್ಯಾಶೆಯಿಂದ ಈ ಪೂರ್ವಭಾಗವನ್ನು ಇದುವರೆಗೆ ಪ್ರಕಟಿಸದೆ ಇರುತ್ತೇನೆ. ಇದಂತಿರಲಿ. ಮೇಲೆ ಹೇಳಿದ ಎಲ್ಲಾ ಕಾರಣಗಳಿಂದ ಐತರೇಯೋಪನಿಷದ್ಭಾಷ್ಯವನ್ನು ಅರ್ಥಮಾಡಿಕೊಳ್ಳುವದಕ್ಕೆ ಈ ಆರು ಅಧ್ಯಾಯಗಳನ್ನೂ ಒಟ್ಟುಗೂಡಿಸಿಕೊಂಡು ನೋಡುವದು ಅವಶ್ಯವೆಂಬುದನ್ನು ಓದುಗರು ಲಕ್ಷ್ಯದಲ್ಲಿಟ್ಟಿರಬೇಕು. ಆಚಾರ್ಯರು ಈ ಆರು ಅಧ್ಯಾಯಗಳ ಅಭಿಪ್ರಾಯವನ್ನೂ ಒಟ್ಟಾಗಿಯೇ ಇಟ್ಟುಕೊಂಡು ವಿಚಾರ ಮಾಡಿರುತ್ತಾರೆಂಬುದು ಸ್ಪಷ್ಟವಾಗಿರುತ್ತದೆ.

## ಭಾಷ್ಯದಲ್ಲಿ ಮುಖ್ಯಾಂಶಗಳು

ಈ ಉಪನಿಷತ್ತಿನಲ್ಲಿ ಮುಖ್ಯವಾಗಿ ಕರ್ಮಸಂಬಂಧವಿಲ್ಲದ ಆತ್ಮನ ವಿಚಾರವನ್ನೇ ಹೇಳಿದೆ ಎಂಬುದೊಂದು, ಆತ್ಮನು ಅದ್ವಿತೀಯನಿರ್ವಿಶೇಷಚಿನ್ಮಾತ್ರನು–ಎಂಬುದೊಂದು–ಹೀಗೆ ಮುಖ್ಯವಾಗಿ ಎರಡು ವಿಚಾರಗಳನ್ನು ಭಾಷ್ಯಕಾರರು ಚರ್ಚೆಗೆ ತೆಗೆದುಕೊಂಡಿರುತ್ತಾರೆ. ಇವೆರಡೂ ಸಿದ್ಧಾಂತಕ್ಕೆ ಅಡಿಗಟ್ಟಾಗಿರುವದರಿಂದ ಇವುಗಳ ವಿಷಯಕ್ಕೆ ಭಾಷ್ಯದಲ್ಲಿ ಅನುಸರಿಸಿರುವ ವಿಚಾರಸರಣಿಯನ್ನು ಸಂಕ್ಷೇಪವಾಗಿ ನಿರೂಪಣೆಮಾಡುವದು ಪ್ರಯೋಜನಕರವಾಗಿರುತ್ತದೆ.

## (ಅ) ಕೇವಲಾತ್ಮಜ್ಞಾನ

ಎರಡನೆಯ ಆರಣ್ಯಕದಲ್ಲಿ ಪ್ರಾಣನೆಂಬ ಅಪರಬ್ರಹ್ಮದ ಉಪಾಸನೆಯಿದೆ ಯಾದ್ದರಿಂದಲೂ ಅದನ್ನು ಕರ್ಮಕ್ಕೆ ಸಂಬಂಧಪಡಿಸಿಯೇ ಉಪದೇಶಮಾಡಿರುವದ ರಿಂದಲೂ ಈ ಉಪನಿಷತ್ತು ಮುಗಿದ ಬಳಿಕ ಮತ್ತೆ ಸಂಹಿತೋಪಾಸನೆಯೇ ಮುಂತಾದವುಗಳನ್ನು ಹೇಳಿರುವದರಿಂದಲೂ ನಡುವೆ ಉಪನಿಷತ್ತಿನಲ್ಲಿರುವ ಆತ್ಮ ಜ್ಞಾನವೂ ಕರ್ಮಕ್ಕೆ ಸಂಬಂಧಪಟ್ಟದ್ದೇ ಎಂದು ಜ್ಞಾನಕರ್ಮಸಮುಚ್ಚಯವಾದಿಗಳು ಕಲ್ಪಿಸಿರುತ್ತಾರೆ.

**ಪೂರ್ವಪಕ್ಷಿಗಳ ಅಭಿಪ್ರಾಯ**ವೇನೆಂದರೆ :—ಹಿಂದಿನ ಭಾಗದಲ್ಲಿ ಪ್ರಾಣನು ಸರ್ವಾತ್ಮನು ಎಂದು ಉಪಸಂಹಾರಮಾಡಿರುವಂತೆ ಇಲ್ಲಿಯೂ ಆತ್ಮನು ಸರ್ವರ ಆತ್ಮನೆಂದು ಉಪಸಂಹಾರಮಾಡಿರುತ್ತದೆ. ಅಲ್ಲಿ ಸೂರ್ಯನಲ್ಲಿರುವ ಪ್ರಾಣನೂ ನಮ್ಮ ಶರೀರದಲ್ಲಿರುವ ಪ್ರಜ್ಞಾತ್ಮನೂ ಒಬ್ಬನೇ ಎಂದು ಹೇಳಿರುವಂತೆ ಇಲ್ಲಿಯೂ ಪ್ರಜ್ಞಾನವು ಬ್ರಹ್ಮವು ಎಂದು ಹೇಳಿರುತ್ತದೆ. ಉಪನಿಷತ್ತಿನ ಮುಂದೆ ಬರುವ ಸಂಹಿತೋಪನಿಷತ್ತಿನಲ್ಲಿಯೂ ಎಲ್ಲರ ಆತ್ಮನಾಗಿರುವ ಬ್ರಹ್ಮನು ಪ್ರಾಣವೇ ಎಂದು ಹೇಳಿ ರುತ್ತದೆ. ಆದ್ದರಿಂದ ಸಗುಣಬ್ರಹ್ಮವು ಜಗತ್ಕಾರಣನೆಂದು ಉಪಾಸನೆಮಾಡ ಬೇಕೆಂದು ತಿಳಿಸುವದಕ್ಕೆ, ಅಥವಾ ಕರ್ಮವನ್ನು ಮಾಡದೆ ಇರುವಾಗ ಬರಿಯ ಆತ್ಮನನ್ನೇ ಉಪಾಸನೆಮಾಡಬೇಕೆಂದು ತಿಳಿಸುವದಕ್ಕೆ, ಅಥವಾ ಈ ಆತ್ಮನು ತನ ಗಿಂತ ಬೇರೆಯಲ್ಲವೆಂದೂ ಉಪಾಸನೆಮಾಡಬೇಕೆಂದು ತಿಳಿಸುವದಕ್ಕೆ ಉಪನಿಷತ್ತು ಬಂದಿರುತ್ತದೆ. ಕರ್ಮತ್ಯಾಗಪೂರ್ವಕವಾಗಿ ಆತ್ಮಜ್ಞಾನವನ್ನು ಸಂಪಾದಿಸಬೇ ಕೆಂದು ಇಲ್ಲಿ ಹೇಳಿಯೇ ಇಲ್ಲ; ಕರ್ಮದೊಡನೆ ಆತ್ಮೋಪಾಸನೆಯನ್ನೂ ಮಾಡಬೇ ಕೆಂಬುದು ಉಪನಿಷತ್ತಿನ ತಾತ್ಪರ್ಯವು. ಮನುಷ್ಯನು ಬದುಕಿರುವವರೆಗೆ ಕರ್ಮ ವನ್ನು ಮಾಡುತ್ತಲೇ ಇರಬೇಕೆಂದೂ ಹುಟ್ಟಿದವರೆಲ್ಲ ಋಣತ್ರಯವನ್ನು ತೀರಿಸಲೇ ಬೇಕೆಂದೂ ಕರ್ಮವನ್ನು ವಿಧಿಸುವ ಶ್ರುತಿಯೂ ಈ ಅಭಿಪ್ರಾಯಕ್ಕೆ ಬೆಂಬಲವಾಗಿ ರುತ್ತದೆ.

ಇದಕ್ಕೆ **ಸಿದ್ಧಾಂತಿಯ ಉತ್ತರ**ವೇನೆಂದರೆ :—ಎಲ್ಲರ ಆತ್ಮನಾದ ಬ್ರಹ್ಮದ ಜ್ಞಾನವನ್ನು ಇಲ್ಲಿ ಹೇಳಿರುತ್ತದೆ, ಉಪಾಸನೆಯನ್ನು ಹೇಳಿಲ್ಲ. ಈ ಆತ್ಮಜ್ಞಾನ ವುಂಟಾದ ಬಳಿಕ ಕರ್ಮದಿಂದ ಆಗುವ ಪ್ರಯೋಜನವು ಬೇಕಾಗುವದೇ ಇಲ್ಲ. ಆದ್ದರಿಂದ ಈ ಜ್ಞಾನವು ಕರ್ಮಿಗೆ ಹೇಳಿದ್ದಲ್ಲ. ಬದುಕಿರುವವರೆಗೆ ಕರ್ಮವನ್ನು ಮಾಡಬೇಕೆಂದು ವಿಧಿಸಿರುವದೂ ಋಣತ್ರಯವನ್ನು ತೀರಿಸಲೇಬೇಕೆಂದು ವಿಧಿಸಿರು ವದೂ ಆತ್ಮಜ್ಞಾನಿಗಳಲ್ಲದವರಿಗಾಗಿ. ಆತ್ಮಜ್ಞಾನವಿಲ್ಲದವರುಕೂಡ ವಿರಕ್ತರಾದರೆ

ಕರ್ಮಸಂನ್ಯಾಸವನ್ನು ಮಾಡಿ ಆತ್ಮನಿಷ್ಠೆಯನ್ನು ಸಂಪಾದಿಸಿಕೊಳ್ಳಬೇಕೆಂದು ಶ್ರುತಿಯಲ್ಲಿದೆ; ಆದ್ದರಿಂದ ಮುಮುಕ್ಷುಗಳಲ್ಲದ ಅಜ್ಞರಿಗೆ ಮಾತ್ರ ಕರ್ಮವಿಧಿಯು ಸಂಬಂಧಿಸಿರುತ್ತದೆ ಎಂದು ತಿಳಿಯಬೇಕು. ಕರ್ಮೋಪಾಸನೆಗಳ ಸಮುಚ್ಚಯಕ್ಕೆ '**ದೇವತಾಪ್ಯಯು**' (ಉಪಾಸನೆಮಾಡಿದ ದೇವತೆಯನ್ನು ಸೇರಿಹೋಗುವದು) ಎಂಬುದು ಪರಮಫಲವು. ಆದರೆ ದೇವತೆಗಳೂ ಸಂಸಾರಕ್ಷೇತ್ರದಲ್ಲಿಯೇ ಇರುವದರಿಂದ ಸಮುಚ್ಚಯದಿಂದಲೂ ಮುಕ್ತಿಯು ದೊರಕಲಾರದು. ಕರ್ಮವನ್ನು ಮಾಡಿ ಚಿತ್ತಶುದ್ಧಿಯನ್ನು ಹೊಂದಿ ಜ್ಞಾನದಿಂದ ಮುಕ್ತಿಯನ್ನು ಪಡೆದುಕೊಳ್ಳಬೇಕೆಂಬುದು ಶ್ರುತಿಯ ಅಭಿಪ್ರಾಯವೇ ಹೊರತು ಕರ್ಮವನ್ನೂ ಜ್ಞಾನವನ್ನೂ ಒಬ್ಬನೇ ಒಂದೇ ಕಾಲದಲ್ಲಿ ಸೇರಿಸಿ ಅನುಷ್ಠಾನಮಾಡಬೇಕೆಂಬುದಲ್ಲ. ಕರ್ಮವು ಆತ್ಮನನ್ನು ಅರಿಯದ್ದರ ಫಲವಾದ್ದರಿಂದ ಕರ್ಮವೂ ಜ್ಞಾನವೂ ಒಂದೇ ಕಾಲದಲ್ಲಿ ಒಬ್ಬನಲ್ಲಿಯೇ ಇರಲೂ ಆರವು. ಹಿಂದಿನ ಗ್ರಂಥಭಾಗದಲ್ಲಿ ಹೇಳಿರುವ ಪ್ರಾಣನು ಸವಿಶೇಷನಾಗಿರುತ್ತಾನೆ; ಅವನು ಸರ್ವಜೀವರ ಕರಣಾತ್ಮನಾಗಿರುತ್ತಾನೆ. ಈ ಉಪನಿಷತ್ತಿನ ಭಾಗದಲ್ಲಿ ಹೇಳಿರುವ ಆತ್ಮನು ನಿರ್ವಿಶೇಷಚಿನ್ಮಾತ್ರನು; ಅವನು ಜೀವರುಗಳ ಪರಮಾರ್ಥಸ್ವರೂಪವೇ ಆಗಿರುತ್ತಾನೆ. ಆದ್ದರಿಂದ ಆರಣ್ಯಕದ ಈ ಎರಡು ಭಾಗಗಳಲ್ಲಿ ಹೇಳಿರುವ ಆತ್ಮಜ್ಞಾನವೂ ಅವುಗಳ ಫಲವಾದ ಸರ್ವಾತ್ಮಭಾವವೂ ಬೇರೆ ಬೇರೆಯ ಜಾತಿಯವಾಗಿರುತ್ತವೆ. ಆದಕಾರಣ ಹಿಂದೆ ಹೇಳಿರುವ ಆತ್ಮಜ್ಞಾನವು ಕರ್ಮಕ್ಕೆ ಸಂಬಂಧಪಟ್ಟಿದ್ದರೂ ಇಲ್ಲಿ ಹೇಳಿರುವ ಜ್ಞಾನವು ಕರ್ಮಕ್ಕೆ ಸಂಬಂಧಪಟ್ಟದ್ದಲ್ಲವೆಂದೇ ನಿಶ್ಚಯಿಸಬೇಕು.

## (ಆ) ನಿರ್ವಿಶೇಷಚಿನ್ಮಾತ್ರವಾದ

ಆತ್ಮನು ಜಗತ್ತೆಲ್ಲವನ್ನೂ ಸೃಷ್ಟಿಮಾಡಿ ಅದರಲ್ಲಿ ಜೀವರೂಪದಿಂದ ಒಳಹೊಕ್ಕು ಸಂಸಾರಮಾಡುತ್ತಿದ್ದು ವಿಚಾರದಿಂದ ನಾನು ಚಿನ್ಮಾತ್ರಸ್ವರೂಪನು ಎಂದು ಸಾಕ್ಷಾತ್ಕಾರಮಾಡಿಕೊಳ್ಳುತ್ತಾನೆ ಎಂದು ಈ ಉಪನಿಷತ್ತಿನಲ್ಲಿ ವರ್ಣಿಸಿದೆಯಷ್ಟೆ. ಇದರ ಅಭಿಪ್ರಾಯವನ್ನು ಸ್ಪಷ್ಟಗೊಳಿಸುವದಕ್ಕಾಗಿ ಆಚಾರ್ಯರು ಬರೆದಿರುವದರ ಸಾರವೇನೆಂದರೆ :—

ಆತ್ಮನೆಂದರೆ ನಮ್ಮ ಸ್ವರೂಪವೇ. ಅವನಲ್ಲಿ ಶಬ್ದವೇ ಮುಂತಾದ ಗುಣಗಳು ಯಾವವೂ ಇಲ್ಲದ್ದರಿಂದ ಅವನನ್ನು ಪ್ರತ್ಯಕ್ಷದಿಂದಲಾಗಲಿ ಅನುಮಾನದಿಂದಲಾಗಲಿ ಅರಿಯುವದಕ್ಕೆ ಆಗುವದಿಲ್ಲ. ನಾವು ಜೀವರೆಂದೂ ಶ್ರವಣಮನನವಿಜ್ಞಾನಾದಿಧರ್ಮಗಳುಳ್ಳವರೆಂದೂ ತಿಳಿಯುವದು ಅಂತಃಕರಣದ ಶ್ರವಣಾದಿರೂಪವಾದ

ವೃತ್ತಿಗಳಿಂದಾದ ಭ್ರಾಂತಿಯು. ಶ್ರವಣಾದಿಗಳಿಂದ ಆಗುವಂತೆ ತೋರುವ ಅರಿವು ನಮ್ಮ ಸ್ವರೂಪವೇ ಆಗಿರುವದರಿಂದ ಅದು ನಿತ್ಯವಾಗಿರುತ್ತದೆ; 'ಶ್ರವಣಮಾಡಿದೆನು' ಎಂದು ಅನಿತ್ಯವಾಗಿ ತೋರುವದು ಅಂತಃಕರಣದ ವೃತ್ತಿಯು, ಆತ್ಮನ ಅರಿವಲ್ಲ. ನಿತ್ಯವಾದ ಅರಿವು, ಅನಿತ್ಯವಾದ ವೃತ್ತಿ-ಇವುಗಳೆರಡನ್ನೂ ಬಿಡಿಸಿ ತಿಳಿದುಕೊಳ್ಳಲಾರದೆ ಜನರು ಆತ್ಮನ ವಿಷಯಕ್ಕೆ ಬಗೆಬಗೆಯ ವಿಕಲ್ಪಗಳನ್ನು ಮಾಡುತ್ತಿರುವರು. ಆತ್ಮನಲ್ಲಿ ಗುಣಗಳನ್ನೂ ಜೀವ, ಈಶ್ವರ, ಬ್ರಹ್ಮ-ಎಂದು ಭೇದವನ್ನೂ ಕಲ್ಪಿಸಿರುವದು ಈ ಅಜ್ಞಾನದಿಂದಲೇ. ಸರಿಯಾಗಿ ನೋಡಿದರೆ ಆತ್ಮನನ್ನಾಗಲಿ ಆತ್ಮನ ಭೇದಗಳನ್ನಾಗಲಿ ಧರ್ಮಗಳನ್ನಾಗಲಿ ಅರಿಯುವದಕ್ಕೆ ಯಾವ ಪ್ರಮಾಣವೂ ಸಾಧಕವಾಗಲಾರದು. ಏಕೆಂದರೆ ಪ್ರಮಾಣವು ಪ್ರಮೇಯವನ್ನು ವಿಷಯೀಕರಿಸೀತೇ ಹೊರತು ಪ್ರಮಾತೃವಿನ ಸ್ವರೂಪವನ್ನು ಎಂದಿಗೂ ವಿಷಯೀಕರಿಸಲಾರದು. ಆತ್ಮನು ತಾನೇ ತನ್ನ ಸ್ವರೂಪವನ್ನು ಅರಿಯುವದಕ್ಕೆ ತನ್ನಲ್ಲಿ ಎರಡು ಅಂಶಗಳಿರಬೇಕಾಗುವದು; ಅಥವಾ ತನ್ನನ್ನು ಅರಿಯುವದಕ್ಕೆ ತನಗಿಂತ ಬೇರೆಯಾಗಿರುವ ಮತ್ತೊಂದು ಅರಿವು ಇದೆ ಎಂದರೆ ಅದನ್ನು ಅರಿಯುವದಕ್ಕೆ ಮತ್ತೊಂದು, ಅದನ್ನು ಅರಿಯುವದಕ್ಕೆ ಮತ್ತೊಂದು-ಹೀಗೆ ಕೊನೆಯಿಲ್ಲದೆ ಅರಿವುಗಳ ಸಾಲು ಬೇಕಾಗುವುದು. ಇವೆರಡೂ ಆಗುವಹಾಗಿಲ್ಲವಾದ್ದರಿಂದ ನಿತ್ಯಚೈತನ್ಯಸ್ವರೂಪನಾದ ಆತ್ಮನನ್ನು ಅರಿಯುವದಕ್ಕೆ ಮತ್ತೆ ಯಾವ ಪ್ರಮಾಣವೂ ಬೇಕಿಲ್ಲವೆಂದು ನಿಶ್ಚಯಿಸಬೇಕು. ಆತ್ಮನಲ್ಲಿ ಕಲ್ಪಿಸಿರುವ ಅನಾತ್ಮವನ್ನೂ ಅನಾತ್ಮಧರ್ಮಗಳನ್ನೂ ಅಲ್ಲಗಳೆಯುವ ಶಾಸ್ತ್ರದ ಪ್ರಮಾಣದಿಂದ ಆತ್ಮನು ನಿರ್ವಿಶೇಷಚಿನ್ಮಾತ್ರನೇ ಎಂದು ಮನಗಾಣಬೇಕು. ಇದೇ ಆತ್ಮಸಾಕ್ಷಾತ್ಕಾರವು.

## (ಇ) ಶಾಸ್ತ್ರಪ್ರಾಮಾಣ್ಯ

ಹೀಗೆ ಆತ್ಮನಲ್ಲಿಲ್ಲದ ಧರ್ಮಗಳನ್ನು ಅಲ್ಲಗಳೆಯುವದರಿಂದ ಮಾತ್ರವೇ ಶಾಸ್ತ್ರವು ಆತ್ಮನ ವಿಷಯಕ್ಕೆ ಪ್ರಮಾಣವೆನಿಸಿರುತ್ತದೆ. ಶಾಸ್ತ್ರವು ವಿಧಿಪರವೆಂದೂ ಅದು ಜ್ಞಾನಿಯನ್ನೂ ವಿಧಿಗೆ ಕಟ್ಟುಬೀಳಿಸುವದೆಂದೂ ಕೆಲವರು ಬಗೆಯುತ್ತಾರೆ. ಅದು ಸರಿಯಲ್ಲ. ಏಕೆಂದರೆ ಶಾಸ್ತ್ರವು ಜೀವನ ಪರಮಾರ್ಥಸ್ವರೂಪವು ಪರಮಾತ್ಮನೇ ಎಂದು ಬೋಧಿಸುತ್ತದೆ. ಪರಮಾತ್ಮನಿಂದಲೇ ಉಂಟಾಗಿರುವ ಶಾಸ್ತ್ರವು ಪರಮಾತ್ಮನನ್ನೇ ಕರ್ಮಕ್ಕೆ ಕಟ್ಟುಬೀಳಿಸುವದೆಂಬುದು ಸರಿಯಲ್ಲ. ಶಾಸ್ತ್ರವು ನಿತ್ಯವೆಂಬ ಮೀಮಾಂಸಕರ ಪಕ್ಷವನ್ನು ಇಟ್ಟುಕೊಂಡರೂ ಅದು ಒಬ್ಬ ಜೀವನಿಗೇ ಕರ್ತೃತ್ವವನ್ನೂ ಅಕರ್ತೃತ್ವವನ್ನೂ ಬೋಧಿಸುತ್ತದೆ ಎಂದು ತಿಳಿಯುವದು ವಿರುದ್ಧವಾಗಿರು

ತ್ತದೆ. ಆದ್ದರಿಂದ ಜ್ಞಾನವನ್ನು ಉಪದೇಶಿಸಿದ ಬಳಿಕ ಕರ್ಮವನ್ನೂ ವಿಧಿಸುತ್ತದೆ ಎಂಬುದು ಸರಿಯಲ್ಲ. ಶಾಸ್ತ್ರವು ಜೀವನಿಗೆ ಪರಮಾತ್ಮಸ್ವರೂಪವೇ ನೀನೆಂದು ಉಪದೇಶಿಸುತ್ತಿರುವದರಿಂದಲೂ ಆ ಉಪದೇಶದಿಂದ ಉಂಟಾಗುವ ಜ್ಞಾನವು ಬಾಧಿತವಾಗುವದಿಲ್ಲವಾದ್ದರಿಂದಲೂ ಶಾಸ್ತ್ರಪ್ರಾಮಾಣ್ಯಕ್ಕೆ ಹಾನಿಯಿಲ್ಲ–ಎಂದು ಭಾಷ್ಯಕಾರರು ಶಾಸ್ತ್ರಪ್ರಾಮಾಣ್ಯವನ್ನು ಉಪಪಾದಿಸಿರುತ್ತಾರೆ.

## (ಈ) ಮಹಾವಾಕ್ಯ

ಜೀವಪರಮಾತ್ಮೈಕ್ಯವನ್ನು ಬೋಧಿಸುವ ವಾಕ್ಯಗಳನ್ನು **ಮಹಾವಾಕ್ಯಗಳು** ಎಂದು ಕರೆಯುವದು ಈಗಿನ ವೇದಾಂತಗ್ರಂಥಗಳಲ್ಲಿ ರೂಢಿಯಾಗಿದೆ. ಮಹಾವಾಕ್ಯವೆಂಬ ಶಬ್ದವು ಈ ಉಪನಿಷತ್ತಿನ ಭಾಷ್ಯದಲ್ಲಿ ಒಂದು ಕಡೆ (ಭಾ. ಭಾ. ೫೭. "ವೇದಾನ್ತಮಹಾವಾಕ್ಯಭೇರ್ಯಾಮ್" ಎಂಬಲ್ಲಿ) ಕೆಲವು ಪುಸ್ತಕಗಳಲ್ಲಿ ಕಂಡುಬರುತ್ತದೆ. ಆದರೆ ಅಲ್ಲಿ (ಮಹಾಭೇರ್ಯಾಮ್ ಎಂಬ) ಪಾಠಾಂತರವಿರುವದರಿಂದಲೂ ಮಿಕ್ಕ ಭಾಷ್ಯಗಳಲ್ಲಿ ಎಲ್ಲಿಯೂ "ಮಹಾವಾಕ್ಯ" ವೆಂಬ ಶಬ್ದವು ಕಾಣದೆ ಇರುವದರಿಂದಲೂ ಆಚಾರ್ಯರು ಈ ಶಬ್ದವನ್ನು ಪಾರಿಭಾಷಿಕವಾಗಿ ಎಣಿಸಿದ್ದರೆಂಬುದಕ್ಕೆ ಆಧಾರವೇನೂ ಕಾಣಿಸುವದಿಲ್ಲ. ಆದರೂ ಉಪನಿಷತ್ತುಗಳ ಮಹಾತಾತ್ಪರ್ಯವು ಆತ್ಮೈಕ್ಯವನ್ನು ತಿಳಿಸುವದರಲ್ಲಿಯೇ ಇರುವದರಿಂದ ಇಂಥ ವಾಕ್ಯಗಳನ್ನು ಮಹಾವಾಕ್ಯಗಳು ಎಂದು ಕರೆದರೆ ತಪ್ಪೇನೂ ಇಲ್ಲ. ಆದರೆ ಒಂದೊಂದು ವೇದಕ್ಕೆ ಒಂದೊಂದರಂತೆ 'ತತ್ತ್ವಮಸಿ" 'ಅಹಂಬ್ರಹ್ಮಾಸ್ಮಿ', 'ಅಯಮಾತ್ಮಾ ಬ್ರಹ್ಮ', 'ಪ್ರಜ್ಞಾನಂ ಬ್ರಹ್ಮ' ಎಂದು ನಾಲ್ಕೇ ಮಹಾವಾಕ್ಯಗಳೆಂದು ಕೆಲವರು ಕಲ್ಪಿಸಿರುವದು ಸರಿಯಲ್ಲವೆಂದೇ ಹೇಳಬೇಕಾಗಿದೆ. ಪ್ರತಿಯೊಂದು ಉಪನಿಷತ್ತಿನಲ್ಲಿಯೂ ಆತ್ಮೈಕ್ಯವನ್ನು ತಿಳಿಸಿರುತ್ತದೆ. ಆ ಅಭಿಪ್ರಾಯವನ್ನು ತಿಳಿಸುವ ವಾಕ್ಯಗಳನ್ನೆಲ್ಲ "ಮಹಾವಾಕ್ಯ" ಗಳೆಂದು ಕರೆಯುವದೇ ಯುಕ್ತವಾಗಿರುತ್ತದೆ. ಮಹಾವಾಕ್ಯಗಳನ್ನು ಮಂತ್ರಗಳೆಂದು ಭಾವಿಸಿ ಜಪಮಾಡುವದಕ್ಕೆ ವಿನಿಯೋಗಿಸಬೇಕೆಂದು ಕೂಡ ಈಗಿನ ಕೆಲವರು ಹೇಳುತ್ತಿರುವರು. ಈ ಅಭಿಪ್ರಾಯಕ್ಕೆ ಮುಖ್ಯವಾದ ಉಪನಿಷತ್ತುಗಳಲ್ಲಾಗಲಿ ಆಚಾರ್ಯರ ಭಾಷ್ಯಗಳಲ್ಲಾಗಲಿ ಎಲ್ಲಿಯೂ ಬೆಂಬಲವು ಸಿಕ್ಕುವದಿಲ್ಲ.

ಜ್ಞಾನಕ್ಕೆ ಮಹಾವಾಕ್ಯವನ್ನು ಕರಣವೆನ್ನಬೇಕೆ, ಅಂತಃಕರಣವನ್ನು ಕರಣವೆನ್ನಬೇಕೆ ?–ಎಂಬ ಬಗ್ಗೆ ವ್ಯಾಖ್ಯಾನಕಾರರಲ್ಲಿ ಎರಡು ಭಿನ್ನಾಭಿಪ್ರಾಯಗಳಾಗಿರುತ್ತವೆ. ಆಚಾರ್ಯರ ಭಾಷ್ಯದಲ್ಲಿ ಈ ವಿಷಯಕ್ಕೆ ಅಷ್ಟೇನೂ ಮಹತ್ತ್ವವಿಲ್ಲ. **ಏಕೆಂ**

ದರೆ ವಾಕ್ಯದ ಸಹಾಯವಿಲ್ಲದ ಅಂತಃಕರಣದಿಂದಲಾಗಲಿ ಅಂತಃಕರಣದ ಸಂಬಂಧ ವಿಲ್ಲದ ಬರಿಯ ವಾಕ್ಯದಿಂದಲಾಗಲಿ ಜ್ಞಾನವುಂಟಾಗುವದೆಂದು ಯಾರೂ ಹೇಳುವಂತಿಲ್ಲ. ಶಾಸ್ತ್ರಾಚಾರ್ಯಸಂಸ್ಕೃತವಾದ ಮನಸ್ಸೇ ಕರಣವು, ಶ್ರವಣಮನನನಿದಿಧ್ಯಾಸನಗಳಿಂದ ಕೂಡಿದ ಶಾಸ್ತ್ರವೇ ಪ್ರಮಾಣವು—ಎಂಬ ವಾಕ್ಯಗಳಿಗೆ ರೂಪಭೇದವೇ ಹೊರತು ತಾತ್ಪರ್ಯದಲ್ಲಿ ಭೇದವಿಲ್ಲ. ಆದ್ದರಿಂದ "**ಶಾಸ್ತ್ರಯೋನಿತ್ವಾತ್**" ಎಂಬ (ಬ್ರ. ಸೂ. ೧-೧-೩) ಬಾದರಾಯಣಸೂತ್ರವನ್ನೂ ಬಹುಮತವನ್ನೂ ಅನುಸರಿಸಿ ವಾಕ್ಯವು ಬ್ರಹ್ಮಾತ್ಮಜ್ಞಾನಕ್ಕೆ ಕರಣವೆಂದು ಹೇಳುವದಕ್ಕೆ ಯಾವ ಬಾಧಕವೂ ತೋರುವದಿಲ್ಲ.

## ಭಾಷ್ಯದ ವ್ಯಾಖ್ಯಾನಕಾರರು

ಈ ಉಪನಿಷದ್ಭಾಷ್ಯಕ್ಕೆ ವ್ಯಾಖ್ಯಾನವನ್ನು ಬರೆದಿರುವ "**ಆನಂದಗಿರಿ**" ಗಳ ವಿಷಯದಲ್ಲಿ ಕೆಲವು ಮಾತುಗಳನ್ನು ಬರೆಯುವದು ಅತ್ಯವಶ್ಯವಾಗಿರುತ್ತದೆ. ಆನಂದಗಿರಿಗಳು ಶ್ರೀ ಶಂಕರಾಚಾರ್ಯರವರ ಸಾಕ್ಷಾಚ್ಛಿಷ್ಯರೆಂಬ ನಂಬಿಕೆಯು ನಮ್ಮಲ್ಲಿ ಅನೇಕರಿಗೆ ಇರುತ್ತದೆ. "ಇತಿ ಶ್ರೀಮದ್ಭಗವತ್ಪೂಜ್ಯಪಾದಶಿಷ್ಯಶ್ರೀಮದಾನನ್ದಜ್ಞಾನಕೃತಾವೈತರೇಯೋಪನಿಷದ್ಭಾಷ್ಯಟೀಕಾಯಾಂ ದ್ವಿತೀಯೋಽಧ್ಯಾಯಃ" ಎಂದು ಆನಂದಾಶ್ರಮಮುದ್ರಣಾಲಯದ ಪುಸ್ತಕದಲ್ಲಿ ಅಚ್ಚಾಗಿಯೂ ಇದೆ. ಆದರೂ "ಆನಂದಗಿರೀಯ" ವೆಂದು ಹೆಸರುಪಡೆದಿರುವ ಟೀಕೆಗಳೆಲ್ಲ ಒಬ್ಬರೇ ಬರಹಗಾರರ ಕೈವಾಡವಲ್ಲವೆಂಬುದನ್ನು ನಾನು ಕೇನಕಠಭಾಷ್ಯಗಳ ಅನುವಾದದ ಪೀಠಿಕೆಗಳಲ್ಲಿ ತೋರಿಸಿಕೊಟ್ಟಿರುತ್ತೇನೆ. ಐತರೇಯದ ಟೀಕಾಕಾರರು **ಸಾಯಣರ ದೀಪಿಕೆಯನ್ನು** ಉದಾಹರಿಸಿ (ಆನಂದಾಶ್ರಮಮುದ್ರಣ ಪು. ೨೫, ೨೭, ೪೨) ಕೆಲವು ಕಡೆಗಳಲ್ಲಿ ಸಮ್ಮತಿಯನ್ನೂ ಮತ್ತೆ ಕೆಲವು ಕಡೆಗಳಲ್ಲಿ ತಮ್ಮ ಸ್ವಂತ ಅಭಿಪ್ರಾಯವನ್ನೂ ಕೊಟ್ಟಿರುತ್ತಾರೆ ಈ ಟೀಕೆಯು **ಅಭಿನವನಾರಾಯಣೇಂದ್ರಸರಸ್ವತಿ** ಎಂಬವರದ್ದೆಂದು ಕಾಶ್ಮೀರದ ರಘುನಾಥದೇವಾಲಯದ ಕೈಪ್ರತಿಗಳಲ್ಲಿರುವದಾಗಿ "ಆನಂದಗಿರಿಕೃತತರ್ಕಸಂಗ್ರಹದ" (Gaikwad's Oriental Series) ಇಂಗ್ಲೀಷು ಪೀಠಿಕೆಯಲ್ಲಿ ಬರೆದಿದೆ. ಪ್ರಶ್ನೋಪನಿಷತ್ತಿನ ಭಾಷ್ಯದ ಟೀಕೆಯನ್ನು ಬರೆದವರೂ ಇದೇ ಅಭಿನವನಾರಾಯಣೇಂದ್ರಸರಸ್ವತಿಗಳೆಂದು ಆನಂದಾಶ್ರಮಮುದ್ರಣಾಲಯದಲ್ಲಿರುವ ಕೆಲವು ಕೈಬರಹದ ಪುಸ್ತಕಗಳಲ್ಲಿ ಆಧಾರವು ಸಿಕ್ಕುತ್ತದೆ. ಆ ಟೀಕೆಯಲ್ಲಿ "**ಶಂಕರಾನಂದರ ಉಪನಿಷದ್ದೀಪಿಕೆಯನ್ನು**" ಉದಾಹರಿಸಿರುತ್ತದೆ. ಇದರಿಂದ ಈ ಟೀಕಾಕಾರರು ಶಂಕರಾಚಾರ್ಯರಿಗಿಂತ ಬಹಳ ಈಚಿನವರೆಂದು ಸ್ಪಷ್ಟ

ವಾಗುತ್ತದೆ. ಭಾಷ್ಯಕ್ಕೆ ಟೀಕೆಯನ್ನು ಬರೆದವರು ಆನಂದಗಿರಿಗಳೆಂಬ ಹೆಸರಿನ ಒಬ್ಬರೇ ವ್ಯಕ್ತಿಗಳೆಂದೂ ಆನಂದಗಿರಿಗಳು ಶ್ರೀಶಂಕರಾಚಾರ್ಯರವರ ನೇರಾದ ಶಿಷ್ಯರೆಂದೂ ಭ್ರಮೆಯಿಂದ ಇಟ್ಟುಕೊಂಡು ಭಾಷ್ಯಕ್ಕೆ ತಾತ್ಪರ್ಯವನ್ನು ನಿಶ್ಚಯಿಸುವಾಗ ಟೀಕೆಯನ್ನೇ ಉಪಯೋಗಿಸುವದಕ್ಕೆ ಹೋಗುವದು ಅಪಾಯಕರವೆಂಬುದಕ್ಕೆ ಐತರೇಯ ಭಾಷ್ಯವೇ ಸಾಕಾದಷ್ಟು ಆಧಾರವನ್ನು ಕೊಡುತ್ತದೆ. ಏಕೆಂದರೆ ಈ ವ್ಯಾಖ್ಯಾನಕಾರರು ಭಾಷ್ಯದಲ್ಲಿ ಪಾಠಾಂತರವನ್ನು ಕಲ್ಪಿಸಿ ಭಾಷ್ಯಪ್ರಕ್ರಿಯೆಯನ್ನೇ ತಲೆಕೆಳಗುಮಾಡುವ ಅರ್ಥವನ್ನು ಕೊಟ್ಟಿರುವ ಸಂದರ್ಭಗಳೂ ಇಲ್ಲದೆ ಇಲ್ಲ. ಅವರ ಕೆಲವು ಯುಕ್ತಿಗಳೂ ಭಾಷ್ಯವ್ಯಾಖ್ಯಾನಗಳೂ ಬಹಳ ಶ್ಲಾಘನೀಯವಾಗಿರುತ್ತವೆ, ಕೆಲವು ಕಡೆಗಳಲ್ಲಿ ಮಾತ್ರ ತೀರ ದಾರಿಯನ್ನು ಬಿಟ್ಟುಹೋಗಿ ಮುಗ್ಗರಿಸಿರುತ್ತಾರೆ. ಅವರ ಅಭಿಪ್ರಾಯಗಳು ಅಸಮ್ಮತವಾದವೆಂದು ನನಗೆ ತೋರಿದ ಕಡೆಗಳಲ್ಲಿ ಟಿಪ್ಪಣಿಗಳಲ್ಲಿ ಅದನ್ನು ಸೂಚಿಸಿರುತ್ತೇನೆ. ಎರಡು ಪ್ರಶ್ನಚಿಹ್ನಗಳನ್ನು ಹಾಕಿದ್ದರೆ ಭಾಷ್ಯಕ್ಕೂ ಯುಕ್ತಿಗೂ ದೂರಬಿಟ್ಟು ಹೋಗಿರುತ್ತಾರೆಂದು ಅರ್ಥಮಾಡಿಕೊಳ್ಳಬೇಕು. ಭಾಷ್ಯವನ್ನು ಕನ್ನಡಿಸುವಾಗ ನಾನು ಮಿಕ್ಕ ಅನುವಾದಕಾರರಂತೆ ಯಾವಾಗಲೂ ವ್ಯಾಖ್ಯಾನವನ್ನೇ ಬೆಂಬಿಡದೆ ಹಿಂಬಾಲಿಸದೆ ಇರುವದಕ್ಕೆ ಕಾರಣವೇನೆಂಬುದು ಇದರಿಂದ ವಾಚಕರಿಗೆ ಸ್ಪಷ್ಟವಾಗುವದೆಂದು ನಂಬಿರುತ್ತೇನೆ. ಆದರೆ ನನ್ನ ಅನುವಾದವು ಪ್ರಸ್ಥಾನತ್ರಯ ಭಾಷ್ಯದ ಪ್ರಕ್ರಿಯೆಯನ್ನು ಬಿಟ್ಟು ಒಂದು ಹೆಜ್ಜೆಯೂ ಅತ್ತಿತ್ತ ಕದಲದಂತೆ ಎಚ್ಚರಿಕೆಯಿಂದ ನೋಡಿಕೊಂಡಿರುತ್ತೇನೆ

## ಭಾಷ್ಯದ ಅನುವಾದ

ಈಶಕೇನಕಠಗಳಂತೆಯೇ ಈ ಉಪನಿಷತ್ತಿನ ಅನುವಾದವನ್ನು ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಿಗೆ ಒಪ್ಪಾಗುವಂತೆ ಸಂಸ್ಕೃತಭಾಷ್ಯದ ಮೂಲದ ಸಮೇತವಾಗಿ ಬರೆದಿರುತ್ತೇನೆ. ಆನಂದಾಶ್ರಮದ ಮುದ್ರಿತಪ್ರತಿಯನ್ನು ಅನುವಾದಕ್ಕೆ ಮುಖ್ಯವಾದ ಆಧಾರವಾಗಿಟ್ಟುಕೊಂಡಿರುತ್ತೇನಾದರೂ ವಾಣೀವಿಲಾಸ ಶ್ರೀರಂಗಮ್, ವೇದಾಂತವಿದ್ಯಾವಿಲಾಸ, ಮದರಾಸು-ಮುಂತಾದ ಮುದ್ರಣಪ್ರತಿಗಳನ್ನೂ ಹೋಲಿಕೆಗೆ ತೆಗೆದುಕೊಂಡಿರುತ್ತೇನೆ. ಈ ಅನುವಾದಕ್ಕೆ ವ್ಯಾಖ್ಯಾನವೇ ಅಲ್ಲದೆ ಶ್ರೀಯುತ ಎಸ್. ಜಿ. ಬ್ರತಕೀಮುಕರ್‌ರವರು ಪ್ರಕಟಿಸಿರುವ ಅನುವಾದ, ರಾಜಸೇವಾಸಕ್ತ ವಿದ್ಯಾಭ್ಯಾಸದ ಇಲಾಖೆಯ ರಿಟೈರ್ಡ್ ಸರ್ಕಲ್ ಇನ್ಸ್‌ಪೆಕ್ಟರ್ ಶ್ರೀ ಬಿ ವೆಂಕಟರಾಮಯ್ಯನವರು ಬರೆದಿರುವ ಅನುವಾದ, ಶ್ರೀಯುತ ವಿ. ಸಿ. ಶೇಷಾಚಾರಿಯರವರು ಪ್ರಕಟಿಸಿರುವ ಅನುವಾದ-ಈ ಮೂರು ಇಂಗ್ಲಿಷು ಅನು

ವಾದಗಳ ಸಹಾಯವನ್ನೂ ಅಲ್ಲಲ್ಲಿ ತೆಗೆದುಕೊಂಡಿರುತ್ತೇನೆ. ಆದರೆ ಶಾಂಕರಸಿದ್ಧಾಂತಕ್ಕೆ ಅನುಗುಣವೆಂದು ಪ್ರಸ್ಥಾನತ್ರಯಭಾಷ್ಯದ ಹೋಲಿಕೆಯಿಂದ ತಿಳಿದುಬಂದ ಅರ್ಥವನ್ನನುಸರಿಸಿಯೇ ಸ್ವತಂತ್ರವಾಗಿ ಕನ್ನಡಿಸಿರುವದರಿಂದ ಒಟ್ಟಿನಲ್ಲಿ ಈ ಅನುವಾದಕ್ಕೆ ನಾನೇ ನೇರಾಗಿ ಹೊಣೆಯಾಗಿರುತ್ತೇನೆ. ಪಾಠಾಂತರಗಳಿಂದಲೂ ಶಬ್ದಸ್ಖಾಲಿತ್ಯಗಳಿಂದಲೂ ಕೂಡಿರುವದರಿಂದ ಬಹು ಕಷ್ಟವಾಗಿ ತೋರುವ ಈ ಭಾಷ್ಯದ ಅರ್ಥವನ್ನು ತಿಳಿಯುವದಕ್ಕೆ ಈ ಅನುವಾದವು ಜಿಜ್ಞಾಸುಗಳಿಗೆ ಒಂದಿಷ್ಟಾದರೂ ಸಹಾಯವನ್ನು ಮಾಡಿದರೆ ನಾನು ಕೃತಕೃತ್ಯನು. ಪರಮೇಶ್ವರನ ದಯದಿಂದ ಈ ಆರಣ್ಯಕದ ಹಿಂದಿನ ನೂರು ಅಧ್ಯಾಯಗಳ ಭಾಷ್ಯವನ್ನೂ ಪ್ರಕಟಿಸುವ ಸುಯೋಗವು ದೊರೆತರೆ ಇನ್ನೂ ಕೆಲವು ವಿಚಾರಗಳನ್ನು ಅದರ ಪೀಠಿಕೆಯಲ್ಲಿ ಅರಿಕೆಮಾಡಿಕೊಳ್ಳುವೆನು. ಈಗಿನ ಅನುವಾದವನ್ನು ಉತ್ತಮಗೊಳಿಸುವದಕ್ಕೆ ಅನುಕೂಲಿಸುವ ಸೂಚನೆಗಳನ್ನು ಕಳುಹಿಸುವ ಗುಣಜ್ಞರಿಗೆ ನಾನು ಕೃತಜ್ಞನಾಗಿ ಮುಂದಿನ ಮುದ್ರಣದಲ್ಲಿ ಅವುಗಳ ಲಾಭವನ್ನು ಪಡೆಯುವೆನು.

ಯಂ. ಸುಬ್ರಹ್ಮಣ್ಯಶರ್ಮ.

# ಸಂಕೇತಗಳ ವಿವರ

**ಈಶ, ಕೇನ, ಕಠ**–ಈ ಉಪನಿಷತ್ತುಗಳಂತೆಯೇ ಇಲ್ಲಿಯೂ ಉಪನಿಷತ್ತುಗಳು, ಗೀತೆ–ಇವುಗಳನ್ನು ಮೊದಲನೆಯ ಅಕ್ಷರದಿಂದಲೂ ಆಯಾ ಭಾಷ್ಯವನ್ನು ಭಾ. ಎಂಬಕ್ಷರದಿಂದಲೂ ಸೂಚಿಸಿರುತ್ತದೆ. ಕೆಲವು ಸಂಕೇತಗಳನ್ನು ಮಾತ್ರ ಈ ಕೆಳಗೆ ವಿವರಿಸಿರುತ್ತದೆ.

**ಆ॥** ಆನಂದಾಶ್ರಮಮುದ್ರಿತಪುಸ್ತಕದಲ್ಲಿರುವ ಪಾಠ, ಆನಂದಜ್ಞಾನರವ್ಯಾಖ್ಯಾನ.

**ಆ. ಧ.** ಆಪಸ್ತಂಬಧರ್ಮಸೂತ್ರ.

**ಋ.** ಋಗ್ವೇದ.

**ಐ. ಆ.** ಐತರೇಯ ಆರಣ್ಯಕ.

**ಕಾ॥** ಕಾಶಿಯಲ್ಲಿ ಹಿತಚಿಂತಕಮುದ್ರಣಾಲಯದಲ್ಲಿ ಅಚ್ಚಾಗಿರುವ ಪುಸ್ತಕದ ಪಾಠ.

**ಕೌ.** ಕೌಶೀತಕಿಬ್ರಾಹ್ಮಣೋಪನಿಷತ್.

**ಗೀ॥** ಗೀತೆ. ಗೋರಖಪುರದ ಗೀತಾ ಪ್ರೆಸ್ಸಿನಲ್ಲಿ ಅಚ್ಚಾಗಿರುವ ಪುಸ್ತಕದ ಪಾಠ.

**ತಂ. ವಾ.** ತಂತ್ರವಾರ್ತಿಕ, ಆನಂದಾಶ್ರಮಮುದ್ರಣಾಲಯದ ಪುಸ್ತಕ.

**ತೈ. ಸಂ.** ತೈತ್ತಿರೀಯಸಂಹಿತೆ.

**ಬ್ರ. ಸೂ.** ಬ್ರಹ್ಮಸೂತ್ರ.

**ಭಾ. ಭಾ.** ಭಾಷ್ಯಭಾಗ. ಈ ಉಪನಿಷತ್ತಿನ ಅಥವಾ ಬೇರೊಂದು ಉಪನಿಷತ್ತಿನ ಭಾಷ್ಯವನ್ನು ಈ ಗ್ರಂಥರತ್ನಮಾಲೆಯಲ್ಲಿ ಒಡೆದುಕೊಂಡಿರುವ ಪೃಥುಟ್ಟದ ಸಂಖ್ಯೆ.

**ಮಾ. ಕಾ. / ಮಾಂ. ಕಾ.** ಮಾಂಡೂಕ್ಯ ಕಾರಿಕಾ. ಗೌಡಪಾದರು ಮಂಡೂಕ್ಯೋಪನಿಷತ್ತಿಗೆ ಬರೆದಿರುವ ವಿವರಣೆ.

**ವಾ॥** ವಾಣೀವಿಲಾಸಮುದ್ರಣಾಲಯದ ಪುಸ್ತಕದ ಪಾಠ.

**ವಿ. ಪು.** ವಿಷ್ಣುಪುರಾಣ.

**ವೇ. ವಿ.** ವೇದಾಂತವಿದ್ಯಾವಿಲಾಸ, ಮದರಾಸು–ಇಲ್ಲಿ ಮುದ್ರಿತವಾದ ತೆಲುಗಕ್ಷರ ಪುಸ್ತಕದ ಪಾಠ.

**ಸೂ. ಭಾ.** ಸೂತ್ರಭಾಷ್ಯ. ಬ್ರಹ್ಮಸೂತ್ರಕ್ಕೆ ಶ್ರೀ ಶಂಕರಾಚಾರ್ಯರು ಬರೆದಿರುವ ಭಾಷ್ಯ.

# ವಿಷಯಾನುಕ್ರಮಣಿಕೆ

## ಭಾಷ್ಯಕಾರರ ಅವತರಣಿಕೆ



## ಒಂದನೆಯ ಅಧ್ಯಾಯ—ಒಂದನೆಯ ಖಂಡ

### (ಲೋಕಲೋಕಪಾಲಕರುಗಳ ಸೃಷ್ಟಿ)



## ಒಂದನೆಯ ಅಧ್ಯಾಯ—ಎರಡನೆಯ ಖಂಡ

### (ದೇವತೆಗಳಿಗೆ ಸಂಸಾರಬಂಧ)

## ಒಂದನೆಯ ಅಧ್ಯಾಯ—ಮೂರನೆಯ ಖಂಡ

### (ಅನ್ನದ ಸೃಷ್ಟಿ, ಸೃಷ್ಟಿಯಲ್ಲಿ ಆತ್ಮನ ಪ್ರವೇಶ)



## ಒಂದನೆಯ ಅಧ್ಯಾಯದ ವಿಷಯಕ್ಕೆ ಚರ್ಚೆ



## ಎರಡನೆಯ ಅಧ್ಯಾಯ

### (ಜೀವನ ಬಂಧಮೋಕ್ಷಗಳು)



## ಮೂರನೆಯ ಅಧ್ಯಾಯ

### (ಪರಬ್ರಹ್ಮಸ್ವರೂಪನಿರ್ಧಾರಣ, ಬ್ರಹ್ಮಜ್ಞಾನಫಲೋಪಸಂಹಾರ)

ಓಂ.

ಶಾಂಕರಭಾಷ್ಯಸಮೇತವಾದ

# ಐತರೇಯೋಪನಿಷತ್ತು

---

## ಭಾಷ್ಯಕಾರರ ಅವತರಣಿಕೆ

### ಹಿಂದಿನ ಗ್ರಂಥಕ್ಕೂ ಈ ಉಪನಿಷದ್ಭಾಗಕ್ಕೂ ಸಂಬಂಧ[1]

(ಭಾಷ್ಯ)

೧. ಪರಿಸಮಾಪ್ತಂ ಕರ್ಮ ಸಹಾಪರಬ್ರಹ್ಮವಿಷಯವಿಜ್ಞಾನೇನ । ಸೈಷಾ ಕರ್ಮಣೋ ಜ್ಞಾನಸಹಿತಸ್ಯ ಪರಾ ಗತಿಃ ಉಕ್ಥವಿಜ್ಞಾನದ್ವಾರೇಣ ಉಪಸಂಹೃತಾ । "ಏತತ್ ಸತ್ಯಂ ಬ್ರಹ್ಮ ಪ್ರಾಣಾಖ್ಯಮ್" (ಐ. ಆ. ೨-೧-೫), "ಏಷ ಏಕೋ ದೇವಃ, ಏತಸ್ಯೈವ ಪ್ರಾಣಸ್ಯ ಸರ್ವೇ ದೇವಾ ವಿಭೂತಯಃ" (ಐ. ಆ. ೨-೧-೭), "ಏತಸ್ಯ ಪ್ರಾಣಸ್ಯ ಆತ್ಮಭಾವಂ ಗಚ್ಛನ್ ದೇವತಾ ಅಪ್ಯೇತಿ" (ಐ. ಆ. ೨-೨-೪) ಇತ್ಯುಕ್ತಮ್ ॥

(ಭಾಷ್ಯಾರ್ಥ)

ಅಪರಬ್ರಹ್ಮದ ವಿಷಯವಾದ ವಿಜ್ಞಾನದೊಡನೆ[2] ಕರ್ಮವನ್ನು (ಹೇಳಿ) ಮುಗಿಸಿದ್ದಾಯಿತು. ಜ್ಞಾನಸಹಿತವಾದ ಕರ್ಮಕ್ಕೆ ಆಗುವ ಆ ಈ ಕೊನೆಯ ಗತಿಯನ್ನು **ಉಕ್ಥವಿಜ್ಞಾನದ**[3] ದ್ವಾರದಿಂದ ಉಪಸಂಹಾರಮಾಡಿದ್ದಾಗಿದೆ." ಪ್ರಾಣನೆಂಬ ಹೆಸರಿನ ಈ ಬ್ರಹ್ಮವು ಸತ್ಯವು (ಐ. ಆ. ೨-೧ ೫) "ಈತನೊಬ್ಬನೇ ದೇವನು, ದೇವತೆಗಳೆಲ್ಲ ಇದೇ ಪ್ರಾಣನ ವಿಭೂತಿಗಳು" (ಐ. ಆ. ೨-೧-೭)

---

1. ಋಗ್ವೇದದ ಸಂಹಿತೆ, ಬ್ರಾಹ್ಮಣ, ಆರಣ್ಯಕದ ಒಂದನೆಯ ಭಾಗ, ಎರಡನೆಯ ಭಾಗದ ಮೂರು ಅಧ್ಯಾಯಗಳು—ಇಷ್ಟು ಗ್ರಂಥಭಾಗವು ಇದರ ಹಿಂದೆ ಇದೆ. ಆದರೆ ಇಲ್ಲಿ ಎರಡನೆಯ ಆರಣ್ಯಕದ ಮೂರು ಅಧ್ಯಾಯಗಳನ್ನು ಮಾತ್ರ ಮುಖ್ಯವಾಗಿ ಹಿಡಿದು ಸಂಬಂಧವನ್ನು ಬರೆದಿರುತ್ತದೆ. ಪೀಠಿಕೆಯನ್ನು ನೋಡಿರಿ.

2. ಉಪಾಸನಾಸಹಿತವಾದ.

3. ಎರಡನೆಯ ಆರಣ್ಯಕದ ಒಂದನೆಯ ಅಧ್ಯಾಯದ ಎರಡನೆಯ ಖಂಡದಿಂದ ಮೂರನೆಯ ಅಧ್ಯಾಯದವರೆಗೂ ಉಕ್ಥವಿಚಾರವೇ ಇದೆ. ಉಕ್ಥವೆಂಬುದು ಸ್ತೋತ್ರಕ್ಕಾಗಿ ಉಪಯೋಗಿಸಿರುವ ಒಂದಾನೊಂದು ಸೂಕ್ತವು; ಇಂಥ ಸೂಕ್ತವನ್ನು ಶಸ್ತ್ರವೆಂದು ಕರೆಯುತ್ತಾರೆ.

“ಈ ಪ್ರಾಣನ ಸ್ವರೂಪವನ್ನು ಪಡೆದವನು ದೇವತೆಗಳಲ್ಲಿ ಲಯವಾಗುವನು” (ಐ. ಆ. ೨-೨-೪) ಎಂದು [1] ಹೇಳಿರುತ್ತದೆ.[2]

(ಭಾಷ್ಯ)

೨. ಸೋಽಯಂ ದೇವತಾಪ್ಯಯಲಕ್ಷಣಃ ಪರಃ ಪುರುಷಾರ್ಥಃ । ಏಷ ಮೋಕ್ಷಃ। ಸ ಚಾಯಂ ಯಥೋಕ್ತೇನ ಜ್ಞಾನಕರ್ಮಸಮುಚ್ಚಯೇನ ಸಾಧನೇನ ಪ್ರಾಪ್ತವ್ಯಃ । ನಾತಃ ಪರಮಸ್ತಿ – ಇತ್ಯೇಕೇ ಪ್ರತಿಪನ್ನಾಃ । ತಾನ್ನಿರಾಚಿಕೀರ್ಷುಃ ಉತ್ತರಂ ಕೇವಲಾತ್ಮಜ್ಞಾನವಿಧಾನಾರ್ಥಮ್ “ಆತ್ಮಾ ವಾ ಇದಮ್” (೧-೧, ಐ. ಆ. ೨-೪-೧) ಇತ್ಯಾದ್ಯಾಹ ॥

(ಭಾಷ್ಯಾರ್ಥ)

ದೇವತೆಗಳಲ್ಲಿ ಲಯವಾಗುವರೆಂಬ ಆ ಇದೇ ಪರಮಪುರುಷಾರ್ಥವು ; ಇದೇ ಮೋಕ್ಷವು. ಮತ್ತು ಆ ಈ (ಮೋಕ್ಷವು) ಹಿಂದೆ ಹೇಳಿದ ಜ್ಞಾನಕರ್ಮಸಮುಚ್ಚಯವೆಂಬ ಸಾಧನದಿಂದ ಪಡೆಯತಕ್ಕದ್ದು. ಇದಕ್ಕಿಂತ ಹೆಚ್ಚಿನದು ಯಾವದೂ ಇಲ್ಲ— ಎಂದು ಕೆಲವರು [3] ಭಾವಿಸಿರುತ್ತಾರೆ. ಅವರನ್ನು ನಿರಾಕರಣೆಮಾಡುವದಕ್ಕಾಗಿ ಕೇವಲಾತ್ಮಜ್ಞಾನವನ್ನು ತಿಳಿಯಿಸುವದಕ್ಕೋಸ್ಕರ “ಆತ್ಮಾ ವಾ ಇದಮ್” (೧-೧, ಐ ಆ. ೨-೪-೧) ಎಂದು [3] ಮುಂತಾಗಿರುವ (ಗ್ರಂಥವನ್ನು) ಹೇಳಿರುತ್ತದೆ.

(ಭಾಷ್ಯ)

೩. ಕಥಂ ಪುನರಕರ್ಮಸಮ್ಬನ್ಧಿಕೇವಲಾತ್ಮವಿಜ್ಞಾನವಿಧಾನಾರ್ಥ ಉತ್ತರೋ ಗ್ರನ್ಥ ಇತಿ ಗಮ್ಯತೇ ? ಅನ್ಯಾರ್ಥಾನವಗಮಾತ್ । ತಥಾ ಚ ಪೂರ್ವೋಕ್ತಾನಾಂ ದೇವತಾನಾಮ್ ಅಗ್ನ್ಯಾದೀನಾಂ ಸಂಸಾರಿತ್ವಂ ದರ್ಶಯಿಷ್ಯತ್ಯಶನಾಯಾದಿದೋಷವತ್ತ್ವೇನ “ತಮಶನಾಯಾಪಿಪಾಸಾಭ್ಯಾಮನ್ವವಾರ್ಜತ್ (೧-೨, ಐ. ಆ. ೨-೪-೨) ಇತ್ಯಾದಿನಾ । ಅಶನಾಯಾದಿಮತ್ ಸರ್ವಂ ಸಂಸಾರ ಏವ । ಪರಸ್ಯ ತು ಬ್ರಹ್ಮಣೋಽಶನಾಯಾದ್ಯತ್ಯಯಶ್ರುತೇಃ ॥

---

1. ಇಲ್ಲಿ ಕೊಟ್ಟಿರುವುದು ವಾಕ್ಯಗಳ ಅರ್ಥಮಾತ್ರವಾಗಿದೆ. ಮೂಲದಲ್ಲಿ “ತತ್ಸತ್ಯಂ ಸದಿತಿ ಪ್ರಾಣಸ್ತ್ರೀತ್ಯನ್ನಮ್” (ಐ. ಆ. ೨-೧-೫), “ಅಥಾತೋ ವಿಭೂತಯೋಽಸ್ಯ ಪುರುಷಸ್ಯ” (ಐ. ಆ. ೨-೧-೭), “ಸಂಭೂಯ ದೇವತಾ ಅಪ್ಯೇತಿ ಯ ಏವಂ ವೇದ” (ಐ. ಆ. ೨-೨-೪) ಎಂಬ ವಾಕ್ಯಗಳಿವೆ.

2. ಜ್ಞಾನಕರ್ಮಸಮುಚ್ಚಯವಾದಿಗಳು.

3. ಇಲ್ಲಿ ಕೊಟ್ಟಿರುವುದು ಉಪನಿಷತ್ತಿನ ಅಧ್ಯಾಯ, ಖಂಡ ಇವುಗಳ ಸಂಖ್ಯೆ ; ಇದರ ಮುಂದೆಯೇ ಕೊಟ್ಟಿರುವದು ಆರಣ್ಯಕ, ಅಧ್ಯಾಯ, ಖಂಡ ಇವುಗಳ ಸಂಖ್ಯೆ. ಸಂಕೇತಾಕ್ಷರವಿಲ್ಲದೆ ಕೊಟ್ಟಿರುವ ಸಂಖ್ಯೆಗಳನ್ನು ಮುಂದೆಯೂ ಹೀಗೆಯೇ ತಿಳಿಯಬೇಕು.

(ಭಾಷ್ಯಾರ್ಥ)

(ಪ್ರಶ್ನೆ):—ಮುಂದಿನ ಗ್ರಂಥವು ಕರ್ಮಕ್ಕೆ ಸಂಬಂಧವಿಲ್ಲದ ಬರಿಯ ಆತ್ಮಜ್ಞಾನವನ್ನು ತಿಳಿಸುವದಕ್ಕಾಗಿ (ಬಂದಿದೆ) ಎಂಬುದು ಹೇಗೆ ಗೊತ್ತಾಗುತ್ತದೆ ?

(ಉತ್ತರ):—ಏಕೆಂದರೆ (ಈ ಗ್ರಂಥಕ್ಕೆ) ಮತ್ತೆ ಯಾವ ಅರ್ಥವಾದರೂ ಉಂಟೆಂದು ತಿಳಿಯಬರುವದಿಲ್ಲ. ಆದ್ದರಿಂದಲೇ ಹಿಂದೆ[1] ಹೇಳಿದ ಅಗ್ನಿಯೇ ಮೊದಲಾದ ದೇವತೆಗಳಿಗೆ ಹಸಿವು, ನೀರಡಿಕೆ – ಮುಂತಾದ ದೋಷಗಳಿರುವದರಿಂದ (ಅವರು) ಸಂಸಾರಿಗಳೇ ಎಂಬುದನ್ನು "ಅವನನ್ನು ಹಸಿವುನೀರಡಿಕೆಗಳಿಗೆ ಕಟ್ಟು ಬೀಳಿಸಿದನು" (೧-೨, ಐ.ಆ. ೨-೪-೨) ಮುಂತಾದ ವಾಕ್ಯದಿಂದ ಮುಂದೆ ತೋರಿಸಿ ಕೊಡಲಾಗುವದು. ಹಸಿವು ಮುಂತಾದವುಗಳ್ಳುಳ್ಳದ್ದೆಲ್ಲವೂ ಸಂಸಾರವೇ[2]; ಏಕೆಂದರೆ ಪರಬ್ರಹ್ಮವು ಮಾತ್ರ ಹಸಿವುನೀರಡಿಕೆಗಳನ್ನು ಮೀರಿರುವದೆಂದು ಶ್ರುತಿಯಿದೆ.[3]

## ಸಮುಚ್ಚಯವಾದಿಯ ಪೂರ್ವಪಕ್ಷ: (ಅ) ಕರ್ಮಿಗೇ ಆತ್ಮಜ್ಞಾನದಲ್ಲಿ ಅಧಿಕಾರ

(ಭಾಷ್ಯ)

೪. ಭವತ್ವೇವಂ ಕೇವಲಾತ್ಮಜ್ಞಾನಮ್ ಮೋಕ್ಷಸಾಧನಮ್ । ನ ತ್ವತ್ರ ಅಕರ್ಮ್ಯೇವಾಧಿಕ್ರಿಯತೇ । ವಿಶೇಷಾಶ್ರವಣಾತ್ । ಅಕರ್ಮಿಣ ಆಶ್ರಮ್ಯನ್ತರಸ್ಯ ಇಹಾಶ್ರವಣಾತ್ । ಕರ್ಮ ಚ ಬೃಹತೀಸಹಸ್ರಲಕ್ಷಣಂ ಪ್ರಸ್ತುತ್ಯ ಅನನ್ತರಮೇವಾತ್ಮಜ್ಞಾನಂ ಪ್ರಾರಭ್ಯತೇ । ತಸ್ಮಾತ್ ಕರ್ಮ್ಯೇವ ಅಧಿಕ್ರಿಯತೇ ॥

(ಭಾಷ್ಯಾರ್ಥ)

ಹೀಗೆ (ಕರ್ಮಕ್ಕೆ ಸಂಬಂಧವಿಲ್ಲದ) ಬರಿಯ ಆತ್ಮಜ್ಞಾನವೇ ಮೋಕ್ಷಕ್ಕೆ ಸಾಧನ (ವೆಂದಾ)ಗಲಿ. ಆದರೆ ಆ (ಜ್ಞಾನಕ್ಕೆ) ಕರ್ಮವನ್ನು ಬಿಟ್ಟ (ಸಂನ್ಯಾಸಿ) ಯೇ ಅಧಿಕಾರಿಯೆಂದು (ಹೇಳುವದಕ್ಕಾಗುವ) ದಿಲ್ಲ. ಏಕೆಂದರೆ (ಇಂಥವನೇ ಅಧಿಕಾರಿ

---

1. ಐ. ಆ. ೨-೧-೭ ರಿಂದ ಮುಂದಕ್ಕೆ ಹೇಳಿರುವ ವಿಭೂತಿಗಳಾದ ದೇವತೆಗಳಿಗೆ ಹಸಿವು ಮುಂತಾದ ಸಂಸಾರದೋಷವುಂಟೆಂದು ಹೇಳಿರುವದರಿಂದ ದೇವತಾಪ್ಯಯವೇ ಪರಮಪುರುಷಾರ್ಥವೆಂಬ ಪಕ್ಷವು ಸರಿಯಲ್ಲವೆಂದರ್ಥ.

2. "ಸಂಸಾರೇ" ಎಂದು ಸಪ್ತಮಿಯ ಪಾಠವನ್ನು ಇಟ್ಟುಕೊಂಡರೆ "ಸಂಸಾರದೊಳಗೇ ಇರುತ್ತದೆ ಎಂದು ಕನ್ನಡಿಸಬೇಕು.

3. "ಬ್ರಹ್ಮಣೋಽಶನಾಯಾದ್ಯತ್ಯಯಃ" ಎಂದು ವಿಸರ್ಗದ ಪಾಠವಿದ್ದರೆ ಪರಬ್ರಹ್ಮವು ಮಾತ್ರ ಹಸಿವು ಮುಂತಾದುವುಗಳನ್ನು ದಾಟಿರುತ್ತದೆ; ಏಕೆಂದರೆ ಹಾಗೆಂದು ಶ್ರುತಿಯಿದೆ— ಎಂದು ಕನ್ನಡಿಸಬೇಕು. ಇಲ್ಲಿ ಉದಾಹರಿಸಿರುವ ಶ್ರುತಿ ಬೃ. ೩-೫-೧.

ಯೆಂದು) ವಿಶೇಷವನ್ನು ಶ್ರುತಿಯಲ್ಲಿ (ಹೇಳಿರುವ)ದಿಲ್ಲ; ಇಲ್ಲಿ ಕರ್ಮವನ್ನು ಬಿಟ್ಟ (ಸಂನ್ಯಾಸಿಯೆಂಬ) ಮತ್ತೊಂದಾಶ್ರಮಕ್ಕೆ ಸೇರಿದವನ (ವಿಷಯವೇ) ಶ್ರುತಿಯಲ್ಲಿರುವ ದಿಲ್ಲ. ಅದೂ ಅಲ್ಲದೆ **ಬೃಹತೀಸಹಸ್ರ**ವೆಂಬ[1] ಕರ್ಮವನ್ನು (ಹೇಳುವದಕ್ಕೆ) ಪ್ರಾರಂಭಿಸಿದ ಬಳಿಕವೇ ಆತ್ಮಜ್ಞಾನವನ್ನು (ಹೇಳುವದಕ್ಕೆ) ಮೊದಲುಮಾಡಿರುತ್ತದೆ. ಆದ್ದರಿಂದ ಕರ್ಮಿಯೇ[2] (ಈ ಜ್ಞಾನಕ್ಕೆ) ಅಧಿಕಾರಿಯಾಗಿರುತ್ತಾನೆ.

## (ಆ) ಆತ್ಮಜ್ಞಾನವು ಕರ್ಮಸಂಬದ್ಧವಾದದ್ದೇ

(ಭಾಷ್ಯ)

೫. ನ ಚ ಕರ್ಮಾಸಮ್ಬನ್ಧಿ ಆತ್ಮವಿಜ್ಞಾನಮ್ । ಪೂರ್ವವದನ್ತೇ ಉಪಸಂಹಾರಾತ್ । ಯಥಾ ಕರ್ಮಸಮ್ಬನ್ಧಿನಃ ಪುರುಷಸ್ಯ ಸೂರ್ಯಾತ್ಮನಃ ಸ್ಥಾವರಜಙ್ಗಮಾದಿಸರ್ವಪ್ರಾಣ್ಯಾತ್ಮತ್ವಮುಕ್ತಂ ಬ್ರಾಹ್ಮಣೇನ ಮನ್ತ್ರೇಣ ಚ "ಸೂರ್ಯ ಆತ್ಮಾ" (ಐ.ಆ. ೨-೨-೪) ಇತ್ಯಾದಿನಾ, ತಥೈವ "ಏಷ ಬ್ರಹ್ಮೈಷ ಇನ್ದ್ರಃ" (೩-೩, ೨-೬-೧) ಇತ್ಯಾದ್ಯುಪಕ್ರಮ್ಯ ಸರ್ವಪ್ರಾಣ್ಯಾತ್ಮತ್ವಂ "ಯಚ್ಚ ಸ್ಥಾವರಂ ಸರ್ವಂ ತತ್ ಪ್ರಜ್ಞಾನೇತ್ರಮ್" (೩-೩, ಐ.ಆ. ೨-೬-೧) ಇತ್ಯುಪಸಂಹರಿಷ್ಯತಿ । ತಥಾ ಚ **ಸಂಹಿತೋಪನಿಷದಿ** "ಏತಂ ಹ್ಯೇವ ಬಹ್ವೃಚಾ ಮಹತ್ಯುಕ್ಥೇ ಮೀಮಾಂಸನ್ತೇ" (ಐ.ಆ. ೩-೨-೩) ಇತ್ಯಾದಿನಾ ಕರ್ಮಸಮ್ಬನ್ಧಿತ್ವಮುಕ್ತ್ವಾ "ಸರ್ವೇಷು ಭೂತೇಷ್ವೇತಮೇವ ಬ್ರಹ್ಮೇತ್ಯಾಚಕ್ಷತೇ" (ಐ.ಆ. ೩-೨-೩) ಇತ್ಯುಪಸಂಹರತಿ । ತಥಾ ತಸ್ಯೈವ "ಯೋಽಯಮಶರೀರಃ ಪ್ರಜ್ಞಾತ್ಮಾ" (ಐ.ಆ. ೩-೨-೩) ಇತ್ಯುಕ್ತಸ್ಯ "ಯಶ್ಚಾಸಾವಾದಿತ್ಯ ಏಕಮೇವ ತದಿತಿ ವಿದ್ಯಾತ್" (ಐ.ಆ. ೩-೨-೩) ಇತ್ಯೇಕತ್ವಮುಕ್ತಮ್ । ಇಹಾಪಿ "ಕೋಽಯಮಾತ್ಮಾ" (೩-೧ ಐ.ಆ. ೨-೬-೧) ಇತ್ಯುಪಕ್ರಮ್ಯ ಪ್ರಜ್ಞಾತ್ಮತ್ವಮೇವ "ಪ್ರಜ್ಞಾನಂ ಬ್ರಹ್ಮ" (೩-೧ ಐ.ಆ. ೨-೬-೧) ಇತಿ ದರ್ಶಯಿಷ್ಯತಿ । ತಸ್ಮಾತ್ ನಾಕರ್ಮಸಂಬನ್ಧಿ ಆತ್ಮವಿಜ್ಞಾನಮ್ ॥

---

1. "ಬೃಹತೀಸಹಸ್ರ" ಎಂಬ ಶಸ್ತ್ರದಲ್ಲಿ ೩೬೦೦೦ ಅಕ್ಷರಗಳಿರುತ್ತವೆ. ಮಹಾವ್ರತವೆಂಬ ಕರ್ಮದಲ್ಲಿ ನಿಷ್ಕೇವಲ್ಯವೆಂಬ ಶಸ್ತ್ರವಿದೆ. ಅದಕ್ಕೆ ಪಕ್ಷಿಯ ರೂಪವನ್ನು ಕಲ್ಪಿಸಿ ಹತ್ತು ಅವಯವಗಳು ಪಕ್ಷಿಗೂ ಶಸ್ತ್ರಕ್ಕೂ ಹೋಲಿಕೆ ಇದೆ ಎಂದು ಹೇಳಿದ ಬಳಿಕ ಆಯಾ ಭಾಗಕ್ಕೆ ಹಂಚಿದಂತೆ ಅನೇಕ ಸೂಕ್ತಗಳನ್ನು ಅಲ್ಲಿ ಹೇಳಿರುತ್ತದೆ. ಆ ಸೂಕ್ತಗಳು ನಾನಾ ಛಂದಸ್ಸುಗಳಲ್ಲಿರುವವಾದರೂ ಒಟ್ಟು ಅಕ್ಷರಗಳನ್ನು ಲೆಕ್ಕಹಾಕಿದರೆ ೩೬ ಅಕ್ಷರಕ್ಕೆ ಒಂದು ಬೃಹತಿಯಂತೆ ಸಾವಿರ ಬೃಹತಿಗಳಾಗುವವು, ಐ. ಆ. ೨-೨-೩ ರ ಸಾಯಣಭಾಷ್ಯವನ್ನು ನೋಡಿರಿ.

2. ಮೊದಲು ಅಕರ್ಮಿಯೊಬ್ಬನೇ ಅಧಿಕಾರಿಯಲ್ಲ ಎಂದು ಹೇಳಿತ್ತು; ಅವನೂ ಅಧಿಕಾರಿಯೆಂಬ ಅಂಗೀಕಾರವನ್ನು ಬಿಟ್ಟು ಈಗ ಕರ್ಮಿಯೇ ಅಧಿಕಾರಿ ಎಂದು ಹೇಳಿದೆ.

(ಭಾಷ್ಯಾರ್ಥ)

ಆತ್ಮಜ್ಞಾನವು ಕರ್ಮಕ್ಕೆ ಸಂಬಂಧಪಟ್ಟಿದ್ದಲ್ಲವೆಂಬುದೂ (ಸರಿ)ಯಲ್ಲ.[1] ಏಕೆಂದರೆ (ಇಲ್ಲಿಯೂ) ಮೊದಲಿನಂತೆಯೇ[2] ಕೊನೆಯಲ್ಲಿ ಉಪಸಂಹಾರಮಾಡಿರುತ್ತದೆ. ಕರ್ಮಸಂಬಂಧಿಯಾದ ಪುರುಷನಾದ ಸೂರ್ಯಾತ್ಮನು[3] ಸ್ಥಾವರ, ಜಂಗಮ- ಮುಂತಾದ (?) ಸರ್ವಪ್ರಾಣಿಗಳ ಸ್ವರೂಪನಾಗಿರುವನೆಂದು **ಬ್ರಾಹ್ಮಣದಲ್ಲಿಯೂ** "ಸೂರ್ಯನು (ಜಂಗಮಕ್ಕೂ ಸ್ಥಾವರಕ್ಕೂ) ಆತ್ಮನು" (ಐ.ಆ. ೨-೨-೪) ಎಂದು ಮುಂತಾಗಿರುವ **ಮಂತ್ರದಿಂದಲೂ**[4] ಹೇಗೆ ಹೇಳಿರುತ್ತದೆಯೋ ಅದರಂತೆಯೇ (ಇಲ್ಲಿಯೂ) "ಇವನು ಬ್ರಹ್ಮನು, ಇವನೇ ಇಂದ್ರನು" (೩-೩ ಐ.ಆ. ೨-೬-೧) ಎಂದು ಮುಂತಾಗಿ ಸರ್ವಪ್ರಾಣಿಗಳ ಸ್ವರೂಪದಲ್ಲಿಯೂ ಇರುವನೆಂದು ಉಪಕ್ರಮದಲ್ಲಿ ಹೇಳಿ, ಮತ್ತು ಸ್ಥಾವರವಾಗಿರುವದು ಯಾವದೋ ಅದೆಲ್ಲವೂ ಪ್ರಜ್ಞೆಯೆಂಬ ನೇತ್ರವುಳ್ಳದ್ದು (೩-೧ ಐ.ಆ. ೨-೬-೧) ಎಂದು ಮುಂದೆ ಉಪಸಂಹಾರಮಾಡಲಾಗುವದು. ಹೀಗೆಯೇ **ಸಹಿಂತೋಪನಿಷತ್ತಿನಲ್ಲಿಯೂ**[5] ಈತನನ್ನೇ **ಬಹ್ವೃಚರು**[6] ದೊಡ್ಡದಾಗಿರುವ ಉಕ್ಥದಲ್ಲಿ ಧ್ಯಾನಮಾಡುತ್ತಾರೆ. (ಐ.ಆ ೩-೨-೩) ಎಂದು ಮುಂತಾಗಿರುವ ಗ್ರಂಥದಿಂದ (ಆತ್ಮನು) ಕರ್ಮಕ್ಕೆ ಸಂಬಂಧಪಟ್ಟವನೆಂದು ಹೇಳಿದ (ಬಳಿಕ) "ಎಲ್ಲಾ ಭೂತಗಳಲ್ಲಿಯೂ ಈತನನ್ನೇ ಬ್ರಹ್ಮವೆಂದು ಹೇಳುತ್ತಾರೆ"

---

1. ಜ್ಞಾನವು ಕರ್ಮಕ್ಕೆ ಸೇರದೆಯೂ ಇರಬಹುದೆಂದು ಹಿಂದೆ ಒಪ್ಪಿತ್ತು ; ಈಗ ಆ ಅಂಗೀಕಾರವನ್ನು ಬಿಟ್ಟು ಜ್ಞಾನಕರ್ಮಗಳು ಕೂಡಿಯೇ ಇರಬೇಕೆಂದು ಪೂರ್ವಪಕ್ಷಿಯು ವಾದಿಸುತ್ತಾನೆ.

2. ಹಿಂದಿನ ಆರಣ್ಯಕದಲ್ಲಿ ಕರ್ಮಕ್ಕೆ ಸಂಬಂಧಪಟ್ಟ ಆತ್ಮನನ್ನು ಹೇಳಿ ಅವನಿಗೇ ಸರ್ವಾತ್ಮತ್ವವನ್ನು ಹೇಳಿರುವಂತೆ, ಇಲ್ಲಿಯೂ ಹೇಳಿರುತ್ತದೆ. ಆದ್ದರಿಂದ ಇಲ್ಲಿಯೂ ಕರ್ಮಕ್ಕೆ ಸಂಬಂಧಪಟ್ಟ ಆತ್ಮನ ಜ್ಞಾನವಿದೆಯೆಂಬುದೇ ಯುಕ್ತ.

3. ಪ್ರಾಣನು ಸೂರ್ಯಾತ್ಮನೆಂದೂ ಆ ಸೂರ್ಯಾತ್ಮನು ಸರ್ವಾತ್ಮನೆಂದೂ ೨-೨-೧ ರಲ್ಲಿ ಹೇಳಿರುತ್ತದೆ. ಈ ಪುರುಷನು ಉಕ್ಥಕ್ಕೆ ಸಂಬಂಧಪಟ್ಟವನಾದ್ದರಿಂದ ಕರ್ಮಕ್ಕೆ ಸಂಬಂಧಪಟ್ಟವನು.

4. ಆರಣ್ಯಕವು ಪ್ರಾಣನಿಗೆ ಸೂರ್ಯಾತ್ಮತ್ವವನ್ನೂ ಸರ್ವಾತ್ಮತ್ವವನ್ನೂ ಹೇಳಿರುವದಲ್ಲದೆ ೨-೨-೪ ರಲ್ಲಿ ಋಗ್ವೇದಸಂಹಿತೆಯ (೧-೧೧೫-೧) ಮಂತ್ರವನ್ನೂ ಉದಾಹರಿಸಿದೆ. ಆ ಮಂತ್ರವೂ ಕರ್ಮಕ್ಕೆ ಸಂಬಂಧಪಟ್ಟದ್ದು ಇದರಂತೆಯೇ ಇಲ್ಲಿಯೂ ಸರ್ವಾತ್ಮತ್ವವನ್ನು ಉದಾಹರಿಸಿರುವುದರಿಂದ ಬ್ರಹ್ಮೇಂದ್ರಾದಿಸರ್ವಭೂತಗಳ ಆತ್ಮನೆಂದು ಈ ಉಪನಿಷತ್ತಿನಲ್ಲಿರುವುದೂ ಕರ್ಮಸಂಬಂಧಿಯಾದ ಆತ್ಮನ ಜ್ಞಾನವೇ ಎಂದು ಅಭಿಪ್ರಾಯ.

5. ಈ ಉಪನಿಷತ್ತಾದ ಬಳಿಕ ಸಂಹಿತೋಪನಿಷತ್ತು ಬಂದಿರುತ್ತದೆ.

6. ಅನೇಕ ಋಕ್ಕುಗಳನ್ನು ಯಜ್ಞದಲ್ಲಿ ಉಪಯೋಗಿಸುವ ಹೋತೃಗಳು, ಋಗ್ವೇದಿಗಳು,

(೩-೨-೩) ಎಂದು ಉಪಸಂಹಾರಮಾಡಲಾಗುವದು. ಮತ್ತು ಯಾವ ಇವನು ಅಶರೀರನಾದ ಪ್ರಜ್ಞಾತ್ಮನೋ (ಅವನೇ ಆ ಶಾರೀರಾತ್ಮನ ರಸವು) (೩-೨-೩) ಎಂದು ಹೇಳಿದ ಆ (ಆತ್ಮನಿಗೇ) (ಯಾವ ಈ ಅಶರೀರಪ್ರಜ್ಞಾತ್ಮನಿರುವನೋ) ಮತ್ತು ಆದಿತ್ಯನಲ್ಲಿರುವ ಆ (ಈಶ್ವರನು ಯಾವನಿರುವನೋ) ಆ (ತತ್ತ್ವವು) ಒಂದೇ ಎಂದು ತಿಳಿಯಬೇಕು (೩-೨-೩). ಎಂದು ಏಕತ್ವವನ್ನು[1] ಹೇಳಿರುತ್ತದೆ. ಇಲ್ಲಿಯೂ "ಈ ಆತ್ಮನು ಯಾರು ?" (೩-೧, ಐ. ಆ. ೨-೬೧) ಎಂದು ಉಪಕ್ರಮದಲ್ಲಿ ಹೇಳಿ "ಪ್ರಜ್ಞಾನವು ಬ್ರಹ್ಮವು" (೩-೧, ಐ.ಆ. ೨-೬-೧) ಎಂದು (ಆತ್ಮನು) ಪ್ರಜ್ಞಾತ್ಮನೆಂದೇ[2] (ಉಪಸಂಹಾರದಲ್ಲಿ) ತೋರಿಸಲಾಗುವದು. ಆದ್ದರಿಂದ ಆತ್ಮಜ್ಞಾನವು ಕರ್ಮಕ್ಕೆ ಸಂಬಂಧಪಟ್ಟದ್ದಲ್ಲವೆಂಬುದು (ಸರಿ) ಯಲ್ಲ.

## (ಇ) ಹಿಂದಿನ ಆರಣ್ಯಕಭಾಗಕ್ಕೂ ಈ ಉಪನಿಷದ್ಭಾಗಕ್ಕೂ ತಾರತಮ್ಯ

(ಭಾಷ್ಯ)

೬. ಪುನರುಕ್ತ್ಯಾ ಆನರ್ಥಕ್ಯಮ್ ಇತಿ ಚೇತ್ । ಕಥಮ್ ? "ಪ್ರಾಣೋ ವಾ ಅಹಮಸ್ಮ್ಯೃಷೇ" (ಐ.ಆ. ೨-೨-೩) ಇತ್ಯಾದಿಬ್ರಾಹ್ಮಣೇನ "ಸೂರ್ಯ ಆತ್ಮಾ" (ಐ.ಆ. ೨-೨-೪) ಇತಿ ಚ ಮನ್ತ್ರೇಣ ನಿರ್ಧಾರಿತಸ್ಯ ಆತ್ಮನಃ "ಆತ್ಮಾ ವಾ ಇದಮ್" (೧-೧, ಐ.ಆ. ೨-೪-೬) ಇತ್ಯಾದಿಬ್ರಾಹ್ಮಣೇನ "ಕೋಽಯಮಾತ್ಮಾ" (೩-೧, ಐ.ಆ. ೨-೬-೧) ಇತಿ ಪ್ರಶ್ನಪೂರ್ವಕಂ ಪುನರ್ನಿರ್ಧಾರಣಂ ಪುನರುಕ್ತಮನರ್ಥಕಮ್ ಇತಿ ಚೇತ್ । ನ । ತಸ್ಯೈವ ಧರ್ಮಾನ್ತರವಿಶೇಷನಿರ್ಧಾರಣಾರ್ಥತ್ವಾತ್ । ನ ಪುನರುಕ್ತತಾ ದೋಷಃ । ಕಥಮ್ ? ತಸ್ಯೈವ ಕರ್ಮಸಮ್ಬನ್ಧಿನೋ ಜಗತ್ಸೃಷ್ಟಿಸ್ಥಿತಿಸಂಹಾರಾದಿಧರ್ಮವಿಶೇಷನಿರ್ಧಾರಣಾರ್ಥತ್ವಾತ್ । ಕೇವಲೋಪಾಸ್ತ್ಯರ್ಥತ್ವಾದ್ವಾ। ಅಥವಾ "ಆತ್ಮಾ" (೧-೧, ಐ. ಆ. ೨-೪-೬) ಇತ್ಯಾದಿಃ ಪರೋಗ್ರನ್ಥಸನ್ದರ್ಭಃ ಆತ್ಮನಃ

---

1. ಪ್ರಜ್ಞಾತ್ಮನಾದ ಪ್ರಾಣನೇ ಜೀವನಲ್ಲಿಯೂ ಆದಿತ್ಯನಲ್ಲಿಯೂ ಇರುತ್ತಾನೆ ಎಂದು ಏಕತ್ವವನ್ನು ಸಂಹಿತೋಪನಿಷತ್ತಿನಲ್ಲಿ ಹೇಳಿರುತ್ತದೆ.

2. ಬ್ರಹ್ಮ, ಇಂದ್ರ—ಮೊದಲಾದವರಲ್ಲಿಯೂ ಸರ್ವ ಭೂತಗಳಲ್ಲಿಯೂ ಇರುವವನು ಪ್ರಜ್ಞಾತ್ಮನೇ ಎಂದು ಇಲ್ಲಿಯೂ ಹೇಳಿದೆ ಆರಣ್ಯಕದ ಹಿಂದಿನ ಭಾಗದಲ್ಲಿಯೂ ಮುಂದಿನ ಭಾಗದಲ್ಲಿಯೂ ಕರ್ಮಕ್ಕೆ ಸಂಬಂಧಪಟ್ಟ ಆತ್ಮನನ್ನೇ ಹೇಳಿರುವದರಿಂದಲೂ ಇಲ್ಲಿ ಹೇಳಿರುವ ಆತ್ಮನ ಸ್ವರೂಪವು ಅದೇ ಆಗಿರುವದರಿಂದಲೂ ಇಲ್ಲಿಯೂ ಕರ್ಮಕ್ಕೆ ಸಂಬಂಧಪಟ್ಟ ಆತ್ಮನನ್ನು ಹೇಳಿದೆ ಎಂಬುದೇ ಯುಕ್ತ–ಎಂಬುದು ಸಮುಚ್ಚಯವಾದಿಯ ಅಭಿಪ್ರಾಯ.

ಕರ್ಮಿಣಃ ಕರ್ಮಣೋಽನ್ಯತ್ರೋಪಾಸನಾಪ್ರಾಪ್ತೌ ಕರ್ಮಪ್ರಸ್ತಾವೇಽವಿಹಿತತ್ವಾತ್ ಕೇವಲೋಽಪ್ಯಾತ್ಮಾ ಉಪಾಸ್ಯಃ ಇತ್ಯೇವಮರ್ಥಃ । ಭೇದಾಭೇದೋಪಾಸ್ಯತ್ವಾದ್ವಾ । ಏಕ ಏವಾತ್ಮಾ ಕರ್ಮವಿಷಯೇ ಭೇದದೃಷ್ಟಿಭಾಕ್ । ಸ ಏವ ಅಕರ್ಮಕಾಲೇ ಅಭೇದೇನಾಪ್ಯುಪಾಸ್ಯಃ ಇತಿ । ಏವಮ್ ಅಪುನರುಕ್ತತಾ ॥

(ಭಾಷ್ಯಾರ್ಥ)

(ಆಕ್ಷೇಪ) : –ಹೀಗಾದರೆ ಪುನರುಕ್ತಿಯಾಗುವದರಿಂದ (ಉಪನಿಷದ್ಭಾಗವು) ವ್ಯರ್ಥವಾಗುತ್ತದೆ. ಹೇಗೆಂದರೆ: "ಋಷಿಯೆ, ನಾನು ಪ್ರಾಣನೇ ಆಗಿರುತ್ತೇನೆ."[1] (ಐ. ಆ. ೨-೨-೩) ಮುಂತಾದ ಬ್ರಾಹ್ಮಣದಿಂದಲೂ "ಸೂರ್ಯನು (ಜಂಗಮಕ್ಕೂ ಸ್ಥಾವರಕ್ಕೂ) ಆತ್ಮನು" (ಐ. ಆ. ೨-೨-೪) ಎಂದು ಮುಂತಾಗಿರುವ ಮಂತ್ರದಿಂದಲೂ ನಿಶ್ಚಿತವಾಗಿರುವ ಆತ್ಮನನ್ನು "ಇದು (ಮೊದಲು) ಆತ್ಮನೇ (ಆಗಿತ್ತು) (೧-೧ ಐ.ಆ ೨-೪-೬) ಮುಂತಾದ ಬ್ರಾಹ್ಮಣವು[2] "ಈ ಆತ್ಮನು ಯಾರು?" (೩-೧, ಐ.ಆ. ೨-೬-೧) ಎಂಬ ಪ್ರಶ್ನೆಯನ್ನು (ಹಾಕುವದರ) ಮೂಲಕ ಮತ್ತೆ ನಿಶ್ಚಯಿಸುವದು ಪುನರುಕ್ತಿಯಾಗುವದರಿಂದ[3] (ಉಪನಿಷದ್ಭಾಗವು) ವ್ಯರ್ಥವು.

(ಪರಿಹಾರ) : –ಅಲ್ಲ, ಏಕೆಂದರೆ ಅದೇ[4] ಆತ್ಮನ ಚಿಂತೆಯು ಧರ್ಮವಿಶೇಷಗಳನ್ನು ನಿಶ್ಚಯಿಸುವದಕ್ಕೆ (ಉಪನಿಷದ್ಭಾಗವು ಬಂದಿರುತ್ತದೆ). (ಇದರ ವಿವರ): ಪುನರುಕ್ತಿಯ ದೋಷವಿರುವದಿಲ್ಲ. ಹೇಗೆಂದರೆ ಕರ್ಮಸಂಬಂಧಿಯಾದ ಅದೇ (ಆತ್ಮನಿಗೆ) ಜಗತ್ತನ್ನು ಸೃಷ್ಟಿಸುವದು[5], ಕಾಪಾಡುವದು, ಸಂಹಾರಮಾಡುವದು— ಮುಂತಾದ ಧರ್ಮವಿಶೇಷಗಳನ್ನು ನಿಶ್ಚಯಿಸುವದಕ್ಕೆ (ಈ ಉಪನಿಷದ್ಭಾಗವು)

---

1. ಇದು ಇಂದ್ರನು ವಿಶ್ವಾಮಿತ್ರನಿಗೆ ಹೇಳಿದ ಮಾತು ನಾನು, ನೀನು, ಸೂರ್ಯನು ಸರ್ವಭೂತಗಳು_ಎಲ್ಲವೂ ಸೂರ್ಯಾತ್ಮನಾದ ಪ್ರಾಣನೇ ಎಂದು ಈ ವಾಕ್ಯದಲ್ಲಿದೆ.

2. ವೇದವು ಮಂತ್ರ, ಬ್ರಾಹ್ಮಣ ಎಂದು ಎರಡೇ ಭಾಗವಾಗಿರುತ್ತದೆ. ಈ ಉಪನಿಷತ್ತು ಐತರೇಯಾರಣ್ಯಕವೆಂಬ ಬ್ರಾಹ್ಮಣಭಾಗದಲ್ಲಿದೆ.

3. ಸೂರ್ಯಾತ್ಮನಾದ ಪ್ರಾಣನೇ ಸರ್ವಾತ್ಮನು ಎಂಬುದು ಹಿಂದಿನ ಆರಣ್ಯಕದಲ್ಲಿಯೂ ಇದ್ದು ಅದೇ ವಿಷಯವು ಉಪನಿಷತ್ತಿನಲ್ಲಿಯೂ ಇದ್ದರೆ ಉಪನಿಷದ್ಭಾಗವು ಪುನರುಕ್ತಿ ಎಂದಾಗುತ್ತದೆ. ಆದ್ದರಿಂದ ಇದನ್ನು ಕರ್ಮಕ್ಕೆ ಸಂಬಂಧಪಡದ ನಿರ್ವಿಶೇಷಾತ್ಮನ ವಿಚಾರವೆಂದು ಭಾವಿಸಬೇಕಲ್ಲವೆ?_ಎಂದು ಸಿದ್ಧಾಂತಿಯು ಶಂಕಿಸಿದಂತೆ ಭಾವಿಸಿ ಪೂರ್ವಪಕ್ಷಿಯು ಮುಂದೆ ಪರಿಹಾರವನ್ನು ಹೇಳುತ್ತಾನೆ.

4. ಸವಿಶೇಷನಾಗಿರುವ ಪ್ರಾಣಾತ್ಮನ.

5. ಆತ್ಮನು ಸೃಷ್ಟ್ಯಾದಿಗಳನ್ನು ಮಾಡುವನೆಂದು ಹಿಂದಿನ ಭಾಗದಲ್ಲಿ ಹೇಳಿಲ್ಲ; ಇಲ್ಲಿ ಅದನ್ನು ಹೇಳುವದಕ್ಕಾಗಿ ಮಿಕ್ಕದ್ದನ್ನು ಅನುವಾದಮಾಡಿಕೊಂಡಿದೆ. ಆದ್ದರಿಂದ ಪುನರುಕ್ತಿದೋಷವಿಲ್ಲ_ಎಂದು ಭಾವ.

ಬಂದಿರುತ್ತದೆ. ಅಥವಾ ಬರಿಯ ಉಪಾಸನೆಗಾಗಿ (ಈ ಭಾಗವು ಬಂದಿರುವದರಿಂದ ದೋಷವಿಲ್ಲ ಎಂದೂ ಹೇಳಬಹುದು). ಆತ್ಮನನ್ನು ಕರ್ಮಿಯು ಕರ್ಮದಲ್ಲಲ್ಲದೆ ಮತ್ತೆ ಯಾವಾಗಲೂ ಉಪಾಸನೆಮಾಡತಕ್ಕದ್ದಲ್ಲ ಎಂದು (ಹಿಂದಿನ ಗ್ರಂಥದಿಂದ) ಆಗಿರುತ್ತದೆಯಾಗಿ (ಇಲ್ಲಿ) ಕರ್ಮಪ್ರಸ್ತಾವದಲ್ಲಿ ವಿಧಿಸಿಲ್ಲವಾದ್ದರಿಂದ[1] ಬರಿಯ ಆತ್ಮನನ್ನೂ ಉಪಾಸನೆಮಾಡಬಹುದು[2] ಎಂಬೀ (ಅಭಿಪ್ರಾಯವನ್ನು ತಿಳಿಸುವ) ದಕ್ಕೋಸ್ಕರ "ಆತ್ಮಾ ವಾ" (೧-೧, ಐ. ಆ. ೨-೪-೬) ಎಂಬುದೇ ಮುಂತಾದ ಮುಂದಿನ ಗ್ರಂಥವು (ಬಂದಿರುತ್ತದೆ) ಎಂದಾದರೂ (ಹೇಳಬಹುದು). ಅಥವಾ ಭೇದಾಭೇದಗಳಿಂದ ಉಪಾಸನೆಮಾಡಬಹುದು (ಎಂದು ತಿಳಿಸುವದಕ್ಕೆ ಬಂದಿರುವದರಿಂದ ದೋಷವಿಲ್ಲ). ಒಬ್ಬ ಆತ್ಮನೇ ಕರ್ಮವಿಷಯದಲ್ಲಿ ಭೇದದೃಷ್ಟಿಗೆ ವಿಷಯನಾಗಿರುತ್ತಾನೆ; ಕರ್ಮವನ್ನು ಮಾಡದೆ ಇರುವ ಕಾಲದಲ್ಲಿ ಅವನೇ ಅಭಿನ್ನನೆಂದೂ ಉಪಾಸನೆಮಾಡಬಹುದು ಎಂದು (ಹೇಳುವದಕ್ಕೆ ಉಪನಿಷದ್ಭಾಗವು ಬಂದಿರುತ್ತದೆ). ಈ ರೀತಿಯಲ್ಲಿ ಪುನರುಕ್ತಿ (ದೋಷ) ವಿರುವದಿಲ್ಲ.[3]

---

1. ಹಿಂದಿನ ಆರಣ್ಯಕದಲ್ಲಿ ಉಕ್ಥವಿಜ್ಞಾನವನ್ನು ಮಹಾವ್ರತವೆಂಬ ಕರ್ಮಪ್ರಸ್ತಾವದಲ್ಲಿ ಹೇಳಿದೆಯಾದ್ದರಿಂದ ಆ ಉಪಾಸನೆಯನ್ನು ಕರ್ಮದೊಡನೆಯೇ ಮಾಡಬೇಕು; ಇಲ್ಲಿ ಕರ್ಮಪ್ರಸ್ತಾವವಿಲ್ಲದೆ ಹೇಳಿದೆ, ಆದ್ದರಿಂದ ಬರಿಯ ಉಪಾಸನೆಯನ್ನೂ ಮಾಡಬಹುದೆಂದು ತಿಳಿಸಿದಂತೆ ಆಯಿತು. ಉಪಾಸ್ಯನಾದ ಸವಿಶೇಷ ಆತ್ಮನು ಮಾತ್ರ ಪ್ರಾಣಾತ್ಮನೇ ಎಂದು ಭಾವ. ಕರ್ಮಪ್ರಸ್ತಾವೇ ವಿಹಿತತ್ವಾತ್ ಎಂದಿಟ್ಟುಕೊಂಡು ಹಿಂದಕ್ಕೆ ಅನ್ವಯಿಸಿದರೂ ಈ ಅರ್ಥವು ಬರುತ್ತದೆ.

2. ಅದ್ವೈತದೃಷ್ಟಿಯು ಕರ್ತೃತ್ವಬುದ್ಧಿಯಿಂದ ಕೂಡಿದ ಕರ್ಮಕ್ಕೆ ವಿರುದ್ಧವೆಂದು ಸಿದ್ಧಾಂತಿ ಹೇಳಬಹುದು; ಆದರೆ ಕರ್ಮವನ್ನು ಮಾಡದೆ ಇರುವ ಕಾಲದಲ್ಲಿ ಪರಮೇಶ್ವರನು ನನ್ನ ಆತ್ಮನೇ ಎಂದು ಉಪಾಸನೆಮಾಡುವದರಲ್ಲಿ ಯಾವ ಬಾಧಕವೂ ಇಲ್ಲ ಎಂದು ಪೂರ್ವಪಕ್ಷಿಯ ಭಾವ

3. ಹಿಂದಿನ ಆರಣ್ಯಕದಲ್ಲಿ ಹೇಳಿದ ಪ್ರಾಣನೆಂಬ ಆತ್ಮನೇ ಇಲ್ಲಿಯೂ ಉಕ್ತನಾಗಿರುತ್ತಾನೆ ಎಂಬುದಕ್ಕೆ ಉಪಸಂಹಾರವು ಎರಡರಲ್ಲಿಯೂ ಒಂದೇ ಇರುವದೆಂಬ ಗುರುತನ್ನು ಕೊಟ್ಟಿತ್ತು. ಎರಡರಲ್ಲಿಯೂ ಒಂದೇ ವಿಷಯವಿರುವದು ಪುನರುಕ್ತಿದೋಷವಲ್ಲವೆ? ಎಂಬ ಆಕ್ಷೇಪಕ್ಕೆ ಮೂರು ಪರಿಹಾರವನ್ನು ಪೂರ್ವಪಕ್ಷಿಯು ಕೊಟ್ಟಿರುತ್ತಾನೆ. ಸಮಾನವಿಷಯವು ಅನುವಾದವು; ಆದರೆ ಸೃಷ್ಟ್ಯಾದಿಧರ್ಮಗಳನ್ನು ಹೇಳುವದು, ಕೇವಲಾತ್ಮೋಪಾಸನೆಯನ್ನು ಹೇಳಿರುವದು ಅಥವಾ ಅಭೇದೋಪಾಸನೆಯನ್ನು ಹೇಳುವದು—ಉಪನಿಷತ್ತಿನಲ್ಲಿರುವ ಹೊಸ ವಿಷಯ ಎಂಬುದು ಅವನ ಅಭಿಪ್ರಾಯ. ಮೂರು ಪಕ್ಷದಲ್ಲಿಯೂ ಕರ್ಮಿಯೇ ಉಪಾಸನೆಗೂ ಅಧಿಕಾರಿ; ಎರಡನೆಯ ಮೂರನೆಯ ಪಕ್ಷಗಳಲ್ಲಿ ಕರ್ಮವನ್ನು ಮಾಡದೆ ಇರುವ ಕಾಲದಲ್ಲಿ ಉಪಾಸನೆಯನ್ನು ಮಾಡಬೇಕು ಎಂಬುದು ಪೂರ್ವಪಕ್ಷದ ಸಾರವು.

## (ಈ) ಕರ್ಮಜ್ಞಾನಸಮುಚ್ಚಯವೇ ಶ್ರುತಿವಿಹಿತ

(ಭಾಷ್ಯ)

೭. "ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋಭಯಗ್ಂ ಸಹ । ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಮೃತಮಶ್ನುತೇ" (ಈ ೧೧) "ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಗ್ಂ ಸಮಾಃ" (ಈ. ೨) ಇತಿ ಚ ವಾಜಿನಾಮ್ । ನ ಚ ವರ್ಷಶತಾತ್ ಪರಮ್ ಆಯುರ್ಮರ್ತ್ಯಾನಾಮ್, ಯೇನ ಕರ್ಮಪರಿತ್ಯಾಗೇನ ಆತ್ಮಾನಮುಪಾಸೀತ । ದರ್ಶಿತಂ ಚ "ತಾವನ್ತಿ ಪುರುಷಾಯುಷೋಽಹ್ನಾಂ ಸಹಸ್ರಾಣಿ ಭವನ್ತಿ" (ಐ. ಆ. ೨-೩-೮) ಇತಿ । ವರ್ಷಶತಂ ಚ ಆಯುಃ ಕರ್ಮಣ್ಯೈವ ವ್ಯಾಪ್ತಮ್ । ದರ್ಶಿತಶ್ಚ ಮನ್ತ್ರಃ "ಕುರ್ವನ್ನೇವೇಹ ಕರ್ಮಾಣಿ" (ಈ. ೨.) ಇತ್ಯಾದಿಃ । ತಥಾ "ಯಾವಜ್ಜೀವಮಗ್ನಿಹೋತ್ರಂ ಜುಹೋತಿ" ( ? ) "ಯಾವಜ್ಜೀವಂ ದರ್ಶಪೂರ್ಣಮಾಸಾಭ್ಯಾಂ ಯಜೇತ ( ? ) ಇತ್ಯಾದ್ಯಾಶ್ಚ । ತಂ ಯಜ್ಞಪಾತ್ರೈರ್ದಹನ್ತಿ" ( ? ) ಇತಿ ಚ । ಋಣತ್ರಯಶ್ರುತೇಶ್ಚ । ತತ್ರ ಪಾರಿವ್ರಾಜ್ಯಾದಿಶಾಸ್ತ್ರಂ "ವ್ಯುತ್ಥಾಯಾಥಭಿಕ್ಷಾಚರ್ಯಂ ಚರನ್ತಿ" (ಬೃ. ೩-೫-೧.) ಇತ್ಯಾತ್ಮಜ್ಞಾನಸ್ತುತಿಪರೋಽರ್ಥವಾದೋಽನಧಿಕೃತಾರ್ಥೋ ವಾ ॥

(ಭಾಷ್ಯಾರ್ಥ)

"ವಿದ್ಯೆಯನ್ನೂ ಅವಿದ್ಯೆಯನ್ನೂ ಎರಡನ್ನೂ ಒಟ್ಟಿಗೆ ಯಾವನು ಉಪಾಸನೆ ಮಾಡುತ್ತಾನೋ (ಅವನು) ಅವಿದ್ಯೆಯಿಂದ ಮೃತ್ಯುವನ್ನು ದಾಟಿ ವಿದ್ಯೆಯಿಂದ ಅಮೃತವನ್ನು ಪಡೆದುಕೊಳ್ಳುತ್ತಾನೆ" (ಈ. ೧೧.) "ಕರ್ಮಗಳನ್ನು ಮಾಡಿಕೊಂಡೇ ಇಲ್ಲಿ ನೂರು ವರ್ಷಗಳು ಬದುಕಿರಲೆಳಸಬೇಕು" (ಈ. ೨) ಎಂದು[1] **ವಾಜಿಗಳ** (ಶ್ರುತಿಯಲ್ಲಿದೆ.) ನೂರು ವರ್ಷಕ್ಕಿಂತ ಹೆಚ್ಚಾಗಿ ಮರ್ತ್ಯರಿಗೆ ಆಯಸ್ಸು ಇರುವದೂ ಇಲ್ಲ; ಹಾಗಿದ್ದರೆ ಕರ್ಮವನ್ನು ಬಿಟ್ಟು (ಸಾಧಕನು) ಆತ್ಮನನ್ನು ಉಪಾಸನೆಮಾಡಬಹುದಾಗಿತ್ತು. "ಪುರುಷನ ಆಯುಸ್ಸಿನ ದಿನಗಳು ಅಷ್ಟೇ ಸಾವಿರವಾಗಿರುತ್ತವೆ."[2]

---

1. ಈ ಶ್ರುತಿಗಳು ಸಮುಚ್ಚಯಪರವೆಂದು ಪೂರ್ವಪಕ್ಷಿಯ ಭಾವ.

2 ಬೃಹತೀಸಹಸ್ರಕ್ಕೆ ೩೬,೦೦. ಅಕ್ಷರಗಳಿರುತ್ತವೆ; ನೂರು ವರ್ಷಕ್ಕೆ ಎಂದರೆ ಪುರುಷನ ಆಯುಸ್ಸಿಗೆ ಅಷ್ಟೇದಿನಗಳಾಗುತ್ತವೆ. ಅದ್ದರಿಂದ ಅಷ್ಟು ವ್ಯಂಜನಗಳನ್ನು ಅಷ್ಟು ರಾತ್ರಿಗಳೆಂದೂ ಸ್ವರಗಳನ್ನು ಹಗಲುಗಳೆಂದೂ ಚಿಂತಿಸಬೇಕು. ಆದರಿಂದ ಪ್ರಾಣನನ್ನು ಪಡೆಯುತ್ತಾನೆ. (ಐ. ಆ. ೨-೨-೪) ಆದರಲ್ಲಿರುವ ಜೀವಾಕ್ಷರವಾದ ಅಕಾರದಿಂದ ಮಹಾವ್ರತವೆಂಬ ಜೀವಾಹಸ್ಸನ್ನು ಪಡೆಯುತ್ತಾನೆ. (ಐ.ಆ. ೨-೩-೮) ಎಂದು ಹಿಂದೆ ಹೇಳಿದೆ. ನೂರೇವರ್ಷ ಆಯುಸ್ಸು; ಅಷ್ಟೂ ಕರ್ಮದಿಂದ ಕೂಡಿಕೊಂಡೇ ಇರುತ್ತದೆ_ಎಂಬುದಕ್ಕೆ ಇದು ಪ್ರಮಾಣ ಎಂದು ಭಾವ.

ಎಂದು (ಹಿಂದಿನ ಆರಣ್ಯಕದಲ್ಲಿಯೂ ಐ.ಆ. ೨೨-೪೮) ತೋರಿಸಿದ್ದಾಗಿದೆ. ಆಯುಸ್ಸಿನ ನೂರು ವರ್ಷವೂ ಕರ್ಮದಿಂದಲೇ ವ್ಯಾಪ್ತವಾಗಿರುತ್ತದೆ. "ಕರ್ಮಗಳನ್ನು ಮಾಡಿಕೊಂಡೇ" (ಜೀವಿಸಲೆಳಸಬೇಕು. ಈ. ೨) ಮುಂತಾದ ಮಂತ್ರವನ್ನು (ಉದಾಹರಿಸಿ) ತೋರಿಸಿಯೂ ಇರುತ್ತೇವೆ. "ಬದುಕಿರುವವರೆಗೂ ಅಗ್ನಿಹೋತ್ರವನ್ನು ಮಾಡುತ್ತಿರಬೇಕು.) ( ? ) ಬದುಕಿರುವವರೆಗೂ ದರ್ಶಪೂರ್ಣಮಾಸಗಳಿಂದ ಯಾಗಮಾಡಬೇಕು." ( ? ) ಮುಂತಾದ (ಶ್ರುತಿಗಳೂ ಇವೆ.) "ಅವನನ್ನು ಯಜ್ಞಪಾತ್ರೆಗಳೊಡನೆ ಸುಡಬೇಕು." ( ? ) ಎಂಬ (ವಚನವೂ ಇದೆ.) ಋಣತ್ರಯವನ್ನು ಹೇಳುವ ಶ್ರುತಿಯೂ ಇದೆ.[1] ಆದ್ದರಿಂದ (ಏಷಣೆಗಳನ್ನು) ಬಿಟ್ಟಿದ್ದು ಬಳಿಕ ಭಿಕ್ಷಾಟನೆಯನ್ನು ಮಾಡುತ್ತಾರೆ." (ಬೃ. ೩-೫-೧) ಎಂಬುದು ಆತ್ಮಜ್ಞಾನವನ್ನು ಹೊಗಳುವದರಲ್ಲಿ ತಾತ್ಪರ್ಯವುಳ್ಳ **ಅರ್ಥವಾದವು**[2]; ಅಥವಾ (ಕರ್ಮಕ್ಕೆ) ಅಧಿಕಾರಿಗಳಲ್ಲದವರಿಗಾಗಿ (ಹೇಳಿದ್ದು).[3]

## ಸಿದ್ಧಾಂತ: (ಅ) ಜ್ಞಾನಿಗೆ ಕರ್ಮದಿಂದ ಆಗಬೇಕಾದದ್ದಿಲ್ಲ

(ಭಾಷ್ಯ)

೮. ನ। ಪರಮಾರ್ಥಾತ್ಮ[4] ವಿಜ್ಞಾನೇ ಫಲಾದರ್ಶನೇ ಕ್ರಿಯಾನುಪಪತ್ತೇಃ। ಯದುಕ್ತಂ "ಕರ್ಮಣಿ ಏವ ಚಾತ್ಮವಿಜ್ಞಾನಂ ಕರ್ಮಸಮ್ಬನ್ಧಿ ಚ" ಇತ್ಯಾದಿ, ತನ್ನ, "ಪರಂ ಹ್ಯಾಪ್ತಕಾಮಂ ಸರ್ವಸಂಸಾರದೋಷವರ್ಜಿತಂ ಬ್ರಹ್ಮಾಹಮಸ್ಮಿ" ಇತ್ಯಾತ್ಮತ್ವೇನ ವಿಜ್ಞಾತೇ[5] ಕೃತೇನ ಕರ್ತವ್ಯೇನ ವಾ ಪ್ರಯೋಜನಮ್ ಆತ್ಮನೋಽಪಶ್ಯತಃ ಫಲಾದರ್ಶನೇ ಕ್ರಿಯಾದಿ ನೋಪಪದ್ಯತೇ ॥

(ಭಾಷ್ಯಾರ್ಥ)

(ಇದು) ಸರಿಯಲ್ಲ. ಏಕೆಂದರೆ ಪರಮಾರ್ಥವಾಗಿರುವ ಆತ್ಮನನ್ನು ಅರಿತರೆ ಫಲವೇ ಕಾಣುವದಿಲ್ಲವಾದ್ದರಿಂದ ಕರ್ಮವೆಂಬುದು ಹೊಂದುವದಿಲ್ಲ. "ಕರ್ಮಣೇ

---

1 ತೈ. ಸಂ. ೬-೩ ರಲ್ಲಿ ಹುಟ್ಟಿದವರಿಗೆಲ್ಲ ಋಣತ್ರಯವಿದೆ ಎಂದು ಹೇಳಿದೆ; ಋಣತ್ರಯವನ್ನು ತೀರಿಸುವದಕ್ಕೆ ಕರ್ಮವನ್ನು ಮಾಡಬೇಕು.

2. ಕರ್ಮವನ್ನು ಬಿಟ್ಟಾದರೂ ಜ್ಞಾನವನ್ನು ಸಂಪಾದಿಸಬೇಕು.–ಎಂದು ಜ್ಞಾನವನ್ನು ಹೊಗಳಿದೆ, ಕರ್ಮವನ್ನು ಬಿಡಬೇಕೆಂದೇನೂ ವಿಧಿಸಿಲ್ಲ ಎಂದು ಭಾವ.

3. ಕರ್ಮವನ್ನು ಮಾಡಲಾರದ ಕುರುಡರು, ಹೆಳವರು ಮುಂತಾದವರಿಗಾಗಿ; ತಂ. ವಾ. ೧-೩-೨ ಪು. ೧೯೨ ನೋಡಿ.

4. ವಾ॥ ಪಾಠ. 5. ವಾ॥ ಪಾಠ.

ಆತ್ಮಜ್ಞಾನವು (ಅದು) ಕರ್ಮಕ್ಕೆ ಸಂಬಂಧಪಟ್ಟಿದೆ'' ಎಂದು ಮುಂತಾಗಿ (ಪೂರ್ವಪಕ್ಷಿಯು) ಹೇಳಿದ್ದನಷ್ಟೆ; ಅದು ಸರಿಯಲ್ಲ. ಏಕೆಂದರೆ ಆಪ್ತಕಾಮವಾಗಿರುವ ಯಾವ ಸಂಸಾರದೋಷವೂ ಇಲ್ಲದ ಹೆಚ್ಚಿನ ಬ್ರಹ್ಮವೇ ನಾನು ಎಂದು (ಅದನ್ನು) ತನ್ನ ಆತ್ಮನೇ ಎಂದು ಅರಿತುಕೊಂಡರೆ (ಹಿಂದೆ) ಮಾಡಿದ್ದ ಅಥವಾ ಮುಂದೆ ಮಾಡಬೇಕಾಗಿರುವ (ಕರ್ಮದಿಂದ) ತನಗೆ (ಆಗಬೇಕಾಗಿರುವ) ಪ್ರಯೋಜನವೇನೂ ಕಾಣದ್ದರಿಂದ ಫಲವೇ ಕಾಣುವದಿಲ್ಲವಾದ್ದರಿಂದ[1] ಕರ್ಮವೆಂಬುದು ಹೊಂದುವದಿಲ್ಲ.

## (ಆ) ಜ್ಞಾನಿಗೆ ಶ್ರುತಿಯ ಅಪ್ಪಣೆಯೆಂಬುದೂ ಇಲ್ಲ

(ಭಾಷ್ಯ)

೯. ಫಲಾದರ್ಶನೇಽಪಿ ನಿಯುಕ್ತತ್ವಾತ್ ಕರೋತಿ–ಇತಿ ಚೇತ್ । ನ, ನಿಯೋಗಾವಿಷಯಾತ್ಮದರ್ಶನಾತ್ । ಇಷ್ಟಯೋಗಮನಿಷ್ಟವಿಯೋಗಂ ಚಾತ್ಮನಃ ಪ್ರಯೋಜನಂ ಪಶ್ಯನ್ ತದುಪಾಯಾರ್ಥೀ ಯೋ ಭವತಿ ಸ ನಿಯೋಗಸ್ಯ ವಿಷಯೋ ದೃಷ್ಟೋ ಲೋಕೇ, ನ ತು ತದ್ವಿಪರೀತನಿಯೋಗಾವಿಷಯಬ್ರಹ್ಮಾತ್ಮತ್ವದರ್ಶೀ। ಬ್ರಹ್ಮಾತ್ಮತ್ವದರ್ಶ್ಯಪಿ ಸಂಶ್ಚೇನ್ನಿಯುಜ್ಯೇತ ನಿಯೋಗಾವಿಷಯೋಽಪಿ ಸನ್ ನ ಕಶ್ಚಿನ್ನ ನಿಯುಕ್ತ ಇತಿ ಸರ್ವಂ ಕರ್ಮ ಸರ್ವೇಣ ಸರ್ವದಾ ಕರ್ತವ್ಯಂ ಪ್ರಾಪ್ನೋತಿ। ತಚ್ಚಾನಿಷ್ಟಮ್ ॥

(ಭಾಷ್ಯಾರ್ಥ)

(ಶಂಕೆ):—ಫಲವನ್ನು ಕಾಣದಿದ್ದರೂ (ಶ್ರುತಿಯು) ಅಪ್ಪಣೆಮಾಡಿರುವದರಿಂದ[2] (ಅವನು ಕರ್ಮವನ್ನು) ಮಾಡಬಹುದಲ್ಲ!

(ಪರಿಹಾರ):—ಹಾಗಲ್ಲ. ಏಕೆಂದರೆ (ಅವನು) ಅಪ್ಪಣೆಗೆ ವಿಷಯನಲ್ಲದ ಆತ್ಮನನ್ನು ಕಂಡುಕೊಂಡಿರುತ್ತಾನೆ. ಇಷ್ಟವಾದದ್ದು ಬಂದು ಸೇರುವದು, ಅನಿಷ್ಟವಾದದ್ದು ತೊಲಗುವದು–ಇವು (ಗಳೆರಡೂ) ತನಗೆ (ಆಗಬೇಕಾದ) ಪ್ರಯೋಜನವೆಂಬುದನ್ನು ಕಂಡು ಅದಕ್ಕೆ ಯಾವನು ಉಪಾಯವನ್ನು ಬಯಸುತ್ತಿರುವನೋ ಅವನು ಅಪ್ಪಣೆಗೆ ವಿಷಯನಾಗಿರುವದು ಲೋಕದಲ್ಲಿ ಕಂಡಿರುತ್ತದೆ. ಆದರೆ ಅದಕ್ಕೆ ವಿರುದ್ಧವಾಗಿರುವ ಅಪ್ಪಣೆಗೆ ವಿಷಯವಲ್ಲದ ಬ್ರಹ್ಮವೇ ತಾನೆಂದು ಕಂಡುಕೊಂಡ

---

1, ಕ್ರಿಯಾಕಾರಕಫಲಗಳಿಲ್ಲದ ಬ್ರಹ್ಮವೇ ತಾನು ಎಂಬ ಜ್ಞಾನದಲ್ಲಿ ಫಲಜ್ಞಾನವಿರುವದಿಲ್ಲ. ಫಲಶೂನ್ಯವಾದ ಕರ್ಮವನ್ನು ಸಾಮಾನ್ಯರೂ ಮಾಡಲೆಳಸುವದಿಲ್ಲ—ಎಂದು ಭಾವ.

2. ಶ್ರುತಿಯಲ್ಲಿರುವ ವಿಧಿವಾಕ್ಯಗಳು ಹೀಗೆ ಮಾಡಬೇಕು ಎಂದು ಅಧಿಕಾರಿಗಳಿಗೆ ಅಪ್ಪಣೆಯನ್ನು ಮಾಡುತ್ತವೆ—ಎಂದು ನಿಯೋಗವಾದಿಗಳಾದ ಮೀಮಾಂಸಕರ ಅಭಿಪ್ರಾಯವಿತ್ತು.

ವನು (ಹಾಗೆ ವಿಷಯು) ನಾಗಲಾರನು. ಬ್ರಹ್ಮವೇ ತಾನೆಂದು ಕಂಡುಕೊಂಡವನು ಕೂಡ (ತಾನು) ಅಪ್ಪಣೆಗೆ ವಿಷಯನಲ್ಲದಿದ್ದರೂ[1] ಅಪ್ಪಣೆಗೆ ಒಳಗಾಗಬಹುದಾದರೆ ಯಾರೊಬ್ಬರೂ ಅಪ್ಪಣೆಗೆ ಒಳಗಾಗದೆ ಇಲ್ಲವೆಂದಾಗಿ ಎಲ್ಲಾ ಕರ್ಮವನ್ನೂ ಎಲ್ಲರೂ ಯಾವಾಗಲೂ ಮಾಡಬೇಕಾಗಿ ಬರುತ್ತದೆ.[2] ಅದು (ಯಾರಿಗೂ) ಇಷ್ಟವಲ್ಲ.

(ಭಾಷ್ಯ)

೧೦. ನ ಚ ಸ ನಿಯೋಕ್ತುಮ್ ಶಕ್ಯತೇ ಕೇನಚಿತ್। ಆಮ್ನಾಯಸ್ಯಾಪಿ ತತ್ಪ್ರಭವತ್ವಾತ್। ನ ಹಿ ಸ್ವವಿಜ್ಞಾನೋತ್ಥೇನ ವಚಸಾ ಸ್ವಯಂ ನಿಯುಜ್ಯತೇ। ನಾಪಿ ಬಹುವಿತ್ ಸ್ವಾಮೀ ಅವಿವೇಕಿನಾ ಭೃತ್ಯೇನ। ಆಮ್ನಾಯಸ್ಯ ನಿತ್ಯತ್ವೇ ಸತಿ ಸ್ವಾತನ್ತ್ರ್ಯಾತ್ ಸರ್ವಾನ್ ಪ್ರತಿ ನಿಯೋಕ್ತೃತ್ವಸಾಮರ್ಥ್ಯಮ್ ಇತಿ ಚೇತ್। ನ ಉಕ್ತದೋಷಾತ್। ತಥಾಪಿ ಸರ್ವೇಣ ಸರ್ವದಾ ಸರ್ವಮ್ ಅವಿಶಿಷ್ಟಂ ಕರ್ಮ ಕರ್ತವ್ಯಮ್ ಇತ್ಯುಕ್ತೋ ದೋಷೋ ಅಪರಿಹಾರ್ಯ ಏವ॥

(ಭಾಷ್ಯಾರ್ಥ)

ಅವನಿಗೆ ಅಪ್ಪಣೆಮಾಡುವದಕ್ಕೆ ಯಾರಿಂದಲೂ ಆಗಲೂ ಆರದು. **ಏಕೆಂದರೆ ವೇದವುಕೂಡ ಅವನಿಂದಲೇ ಉಂಟಾಗುತ್ತದೆ.**[3] ತನ್ನ ಜ್ಞಾನದಿಂದ ಉಂಟಾಗಿರುವ ಮಾತಿಗೆ ತಾನೇ ಕಟ್ಟುಬೀಳುವದೆಂಬುದಿಲ್ಲವಷ್ಟೆ. ಮತ್ತು ಬಹಳವಾಗಿ ತಿಳಿದಿರುವ ಒಡೆಯನು ವಿವೇಕಿಯಲ್ಲದ ಆಳಿನ (ಅಪ್ಪಣೆಗೆ) ಕಟ್ಟುಬೀಳಲಾರನಷ್ಟೆ?

(ಶಂಕೆ):—**ವೇದವು ನಿತ್ಯವಾಗಿರುವದರಿಂದ ಸ್ವತಂತ್ರವಾಗಿರುವುದರಿಂದ**[4] ಯಾರನ್ನಾದರೂ ಕಟ್ಟುಮಾಡುವ ಶಕ್ತಿಯು ಅದಕ್ಕಿರಬಹುದು.

(ಪರಿಹಾರ):—ಇದು ಸರಿಯಲ್ಲ. ಏಕೆಂದರೆ (ಹಿಂದೆ) ಹೇಳಿದ ದೋಷವು

---

1. ಫಲದ ಇಚ್ಛೆಯಿಲ್ಲದ್ದರಿಂದ ಅವನು ಕರ್ಮದಲ್ಲಿ ತೊಡಗುವದಿಲ್ಲ; ಆದ್ದರಿಂದ ಅವನು ಶ್ರುತಿಯ ಅಪ್ಪಣೆಗೆ ವಿಷಯನಲ್ಲ.

2. ಗೃಹಸ್ಥನಿಗೆ ವಿಧಿಸಿದ್ದನ್ನು ಬ್ರಹ್ಮಚಾರಿಯೂ ಮಾಡಬೇಕೆಂದಾಗುವದು, ಬ್ರಾಹ್ಮಣನಿಗೆ ವಿಧಿಸಿದ್ದನ್ನು ಕ್ಷತ್ರಿಯನೂ ಮಾಡಬೇಕೆಂದಾಗುವದು ಇದನ್ನು ನಿಯೋಗವಾದಿಯೂ ಒಪ್ಪುವದಿಲ್ಲ.

3. ವೇದವು ಪರಮಾತ್ಮನ ಉಸಿರು ಎಂದು (ಬೃ. ೨-೪-೧೦) ಶ್ರುತಿಯಲ್ಲಿದೆ. ಪರಮಾತ್ಮನೇ ತಾನೆಂದು ಅರಿತುಕೊಂಡವನು ವೇದಕ್ಕೆ ಹೇಗೆ ಕಿಂಕರನಾದಾನು ?-ಎಂದು ಭಾವ.

4. ವೇದವು ಈಶ್ವರೋಕ್ತವೆಂದು ನೈಯಾಯಿಕರು ಹೇಳುತ್ತಾರೆ; ಅವರ ಒಪ್ಪಿಗೆಯಂತೆ ಪೂರ್ವಪಕ್ಷದಲ್ಲಿ ದೋಷವನ್ನು ಹೇಳಿದ್ದಾಯಿತು. ಆದರೆ ವೇದವು ನಿತ್ಯವು, ಅಪೌರುಷೇಯವು-ಎಂಬ ಮೀಮಾಂಸಕರ ಪಕ್ಷವನ್ನು ಒಪ್ಪುವವರಿಗೆ ದೋಷವೆಲ್ಲಿಯದು ?-ಎಂದು ಪೂರ್ವಪಕ್ಷಿಯ ಭಾವ.

ಬರುತ್ತದೆ. ಹಾಗಾದರೂ [1] ಪ್ರತಿಯೊಬ್ಬನೂ ಯಾವಾಗಲೂ ಎಲ್ಲಾ ಕರ್ಮವನ್ನೂ ಸಮವಾಗಿ ಮಾಡಬೇಕಾಗುತ್ತದೆ-ಎಂದು ಹಿಂದೆ ಹೇಳಿದ ದೋಷವನ್ನು ಪರಿಹರಿಸುವುದಕ್ಕೆ ಆಗುವದೇ ಇಲ್ಲ.

## (ಇ) ಶಾಸ್ತ್ರವು ವಿರುದ್ಧಾರ್ಥವನ್ನು ಉಪದೇಶಿಸಲಾರದು

(ಭಾಷ್ಯ)

೧೧. ತದಪಿ ಶಾಸ್ತ್ರೇಣೈವ ವಿಧೀಯತೇ ಇತಿ ಚೇತ್ । ಯಥಾ ಕರ್ಮಕರ್ತವ್ಯತಾ ಶಾಸ್ತ್ರೇಣ ಕೃತಾ ತಥಾ ತದಪ್ಯಾತ್ಮಜ್ಞಾನಂ ತಸ್ಯೈವ ಕರ್ಮಿಣಃ ಶಾಸ್ತ್ರೇಣ ವಿಧೀಯತೇ ಇತಿ ಚೇತ್ । ನ । ವಿರುದ್ಧಾರ್ಥಬೋಧಕತ್ವಾನುಪಪತ್ತೇಃ । ನ ಹ್ಯೇಕಸ್ಮಿನ್ ಕೃತಾಕೃತಾಸಮ್ಬನ್ಧಿತ್ವಂ ತದ್ವಿಪರೀತತ್ವಂ ಚ ಬೋಧಯಿತುಂ ಶಕ್ಯಮ್ । ಶೀತೋಷ್ಣತಾಮಿವಾಗ್ನೇಃ । ನ ಚ ಇಷ್ಟಯೋಗಚಿಕೀರ್ಷಾ ಆತ್ಮನೋಽನಿಷ್ಟವಿಯೋಗಚಿಕೀರ್ಷಾ ಚ ಶಾಸ್ತ್ರಕೃತಾ । ಸರ್ವಪ್ರಾಣಿನಾಂ ತದ್ದರ್ಶನಾತ್ । ಶಾಸ್ತ್ರಕೃತಂ ಚೇತ್ ತದುಭಯಂ ಗೋಪಾಲಾದೀನಾಂ ನ ದೃಶ್ಯೇತ । ಅಶಾಸ್ತ್ರಜ್ಞತ್ವಾತ್ ತೇಷಾಮ್ । ಯದ್ಧಿ ಸ್ವತೋಽಪ್ರಾಪ್ತಂ ತಚ್ಛಾಸ್ತ್ರೇಣ ಬೋಧಯಿತವ್ಯಮ್ । ತಚ್ಚೇತ್ ಕೃತಕರ್ತವ್ಯತಾವಿರೋಧ್ಯಾತ್ಮಜ್ಞಾನಂ ಶಾಸ್ತ್ರೇಣ ಕೃತಂ ಕಥಂ ತದ್ವಿರುದ್ಧಾಂ ಕರ್ತವ್ಯತಾಂ ಪುನರುತ್ಪಾದಯೇತ್ ಶೀತತಾಮಿವಾಗ್ನೌ ತಮ ಇವ ಚ ಭಾನೌ ?

(ಭಾಷ್ಯಾರ್ಥ)

(ಶಂಕೆ) :—ಅದನ್ನೂ ಶಾಸ್ತ್ರವೇ ವಿಧಿಸಿರುತ್ತದೆಯಲ್ಲ! ಹೇಗೆ ಕರ್ಮವನ್ನು ಮಾಡಬೇಕೆಂದು ಶಾಸ್ತ್ರವು ಹೇಳುತ್ತದೆಯೋ ಹಾಗೆಯೇ ಆ ಆತ್ಮಜ್ಞಾನವನ್ನೂ ಅದೇ ಕರ್ಮಿಗೆ ಶಾಸ್ತ್ರವು ವಿಧಿಸಿರುತ್ತದೆ.

(ಪರಿಹಾರ) :—ಹಾಗಲ್ಲ. ವಿರುದ್ಧಾರ್ಥವನ್ನು (ಅದು) ತಿಳಿಸುತ್ತದೆ ಎಂಬುದು (ಎಂದಿಗೂ) ಹೊಂದಲಾರದು [2]. ಒಬ್ಬನಿಗೇ ಮಾಡಿದ ಮತ್ತು ಮಾಡದಿರುವ [3] ಕರ್ಮ

---

1. ವೇದವು ಫಲವನ್ನು ಕೊಡುವ ಉಪಾಯವನ್ನು ಬೋಧಿಸುತ್ತದೆಯೇ ಹೊರತು ಯಾರನ್ನೂ ಹೀಗೆ ಮಾಡೆಂದು ಕಟ್ಟುಮಾಡುವದಿಲ್ಲ. ಅದು ಕಟ್ಟುಮಾಡುವದೆಂದು ಒಪ್ಪಿದರೂ ಪೂರ್ವಪಕ್ಷದಲ್ಲಿ ದೋಷವು ಇದೆ ಎಂದು ಭಾವ.

2. ವಿರುದ್ಧವಾದದ್ದನ್ನು ಶಾಸ್ತ್ರವು ಬೋಧಿಸಿದರೆ ಅಪ್ರಮಾಣವಾಗುತ್ತದೆ. ಆದ್ದರಿಂದ ಪೂರ್ವಪಕ್ಷಿಯು ಹೇಳಿದ್ದು ಶಾಸ್ತ್ರಾರ್ಥವಲ್ಲ. ಗೀ. ೧೮-೬೬ '' ನ ಹಿ ಶ್ರುತಿಶತಮಪಿ '' ಎಂಬ ವಾಕ್ಯವನ್ನು ನೋಡಿರಿ.

3. ಮುಂದೆ ಮಾಡಬೇಕಾಗಿರುವ.

ಗಳ ಸಂಬಂಧಿತ್ವವನ್ನೂ ಅದಕ್ಕೆ ವಿರುದ್ಧವಾದ ಸ್ವರೂಪವನ್ನೂ[1]- ಬೆಂಕಿಯು ತಣ್ಣಗೂ ಇದೆ, ಬೆಚ್ಚಗೂ ಇದೆ–ಎಂಬಂತೆ ಬೋಧಿಸುವದು (ಎಂದಿಗೂ) ಆಗಲಾರದು. ಇದೂ ಅಲ್ಲದೆ ಇಷ್ಟವಾದದ್ದನ್ನು ದೊರಕಿಸಿಕೊಳ್ಳಬೇಕೆಂಬ ಇಚ್ಛೆಯೂ ಅನಿಷ್ಟವಾದದ್ದನ್ನು ತೊಲಗಿಸಿಕೊಳ್ಳಬೇಕೆಂಬ ಇಚ್ಛೆಯೂ ಶಾಸ್ತ್ರದಿಂದ ಆಗಿರುವದಿಲ್ಲ; ಏಕೆಂದರೆ ಅದು ಸರ್ವಪ್ರಾಣಿಗಳಲ್ಲಿಯೂ ಕಂಡುಬರುತ್ತದೆ. ಶಾಸ್ತ್ರದಿಂದಲೇ ಆಗಿದ್ದಿದ್ದರೆ[2] ಅವೆರಡೂ ದನಕಾಯುವವರೇ ಮೊದಲಾದವರಲ್ಲಿಯೂ ಕಾಣಬಾರದಾಗಿತ್ತು, ಏಕೆಂದರೆ ಅವರು ಶಾಸ್ತ್ರವನ್ನು ಅರಿತವರಲ್ಲ. **ಯಾವದು ತಾನೇ ಆಗುವದಿಲ್ಲವೋ ಅದನ್ನು ಶಾಸ್ತ್ರವು ತಿಳಿಸಿಕೊಡಬೇಕು**[3]. ಮಾಡಿದ ಮತ್ತು ಮಾಡಬೇಕಾಗಿರುವ (ಕರ್ಮದ ಸಂಬಂಧಕ್ಕೆ) ವಿರೋಧಿಯಾದ ಅಂಥ ಆತ್ಮಜ್ಞಾನವು ಶಾಸ್ತ್ರದಿಂದ ಉಪದಿಷ್ಟವಾಗಿರುವದಾದರೆ ಅದಕ್ಕೆ ವಿರುದ್ಧವಾದ ಮಾಡಬೇಕಾದ ಕರ್ಮವಿದೆಯೆಂಬ ಬುದ್ಧಿಯನ್ನು) ಮತ್ತೆ (ಶಾಸ್ತ್ರವು) ಹೇಗೆ ತಾನೆ ಉಂಟುಮಾಡೀತು? (ಹಾಗೆ ಮಾಡುವದು) ಬೆಂಕಿಯಲ್ಲಿ ತಂಪಿನ (ಬುದ್ಧಿಯನ್ನೂ) ಸೂರ್ಯನಲ್ಲಿ ಕತ್ತಲೆಯೆಂಬ (ಬುದ್ಧಿಯನ್ನೂ ಉಂಟುಮಾಡು) ವಂತೆ (ಆಗುವದಿಲ್ಲವೆ)?

## (ಈ) ಶಾಸ್ತ್ರವು ಅಕರ್ತ್ರಾತ್ಮಜ್ಞಾನವನ್ನು ಹೇಳುವದಿಲ್ಲವೆಂಬುದು ಸರಿಯಲ್ಲ.

(ಭಾಷ್ಯ)

೧೨. ನ ಬೋಧಯತ್ಯೇವೇತಿ ಚೇತ್ । ನ । "ಸ ಮ ಆತ್ಮೇತಿ ವಿದ್ಯಾತ್" (ಐ. ಆ. ೩-೨-೪) ಇತಿ "ಪ್ರಜ್ಞಾನಂ ಬ್ರಹ್ಮ" (೩-೧, ಐ. ಆ. ೨-೬-೧) ಇತಿ ಚೋಪಸಂಹಾರಾತ್ । "ತದಾತ್ಮಾನಮೇವಾವೇತ್" (ಬೃ. ೧-೪-೧೦) "ತತ್ತ್ವಮಸಿ" (ಛಾ. ೬-೮-೭) ಇತ್ಯೇವಮಾದಿವಾಕ್ಯಾನಾಂ ತತ್ಪರತ್ವಾತ್ ಉತ್ಪನ್ನಸ್ಯ ಚ ಬ್ರಹ್ಮಾತ್ಮವಿಜ್ಞಾನಸ್ಯ ಅಬಾಧ್ಯಮಾನತ್ವಾತ್ ನಾನುತ್ಪನ್ನಂ ಭ್ರಾನ್ತಂ ವಾ ಇತಿ ಶಕ್ಯಂ ವಕ್ತುಮ್ ॥

---

1. ಅಕರ್ತೃಸ್ವರೂಪವನ್ನೂ.

2. ಶಾಸ್ತ್ರವು ಕರ್ಮವನ್ನು ಮಾಡಲೇಬೇಕೆಂದು ಬೋಧಿಸುವದಿಲ್ಲ; ಫಲದಲ್ಲಿ ಇಚ್ಛೆಯಿರುವವರಿಗೆ ಫಲಕ್ಕೆ ಉಪಾಯವಾದ ಕರ್ಮವನ್ನು ಬೋಧಿಸುತ್ತದೆ. ಇಚ್ಛೆಯು ಸ್ವಾಭಾವಿಕವಾಗಿಯೇ ಇದೆ. ಆದ್ದರಿಂದ ಶಾಸ್ತ್ರವು ಕರ್ಮವನ್ನು ಹೇಳುವದರಿಂದ ಕರ್ತೃತ್ವವು ಸತ್ಯವಾಗಿರಬೇಕೆಂದು ವಾದಿಸುವದು ಸರಿಯಲ್ಲ.

3. ತಾನೇ ತಿಳಿದಿರುವದನ್ನು ಅಥವಾ ಒದಗಿರುವದನ್ನು ಶಾಸ್ತ್ರವು ತಿಳಿಸಬೇಕಾದದ್ದಿಲ್ಲ. ಛಾ. ಭಾ. ೨-೨೩-೧ "ತಚ್ಚ ನಿಮಿತ್ತಂ ನ ಶಾಸ್ತ್ರಕೃತಮ್" ಎಂಬ ವಾಕ್ಯವನ್ನೂ ಬೃ. ಭಾ. ೩-೩-೧ ಅವತರಣಿಕೆ "ನ ಚ ಪ್ರಮಾಣಾನ್ತರವಿರುದ್ಧಾರ್ಥವಿಷಯೇ" ಎಂಬ ವಾಕ್ಯವನ್ನೂ ನೋಡಿರಿ.

(ಭಾಷಾರ್ಥ)

(ಆಕ್ಷೇಪ) :—ಶಾಸ್ತ್ರವು (ಆತ್ಮಜ್ಞಾನವನ್ನು) ಉಪದೇಶಿಸುವದೇ ಇಲ್ಲವಲ್ಲ ! [1]

(ಪರಿಹಾರ) :—ಹಾಗಲ್ಲ. ಏಕೆಂದರೆ "ಅವನು ನನ್ನ ಆತ್ಮನೆಂದು ತಿಳಿಯಬೇಕು." (ಕೌ-೩-೪), "ಪ್ರಜ್ಞಾನವು ಬ್ರಹ್ಮವು" (ಐ-೧, ಐ. ಆ. ೨-೬-೧) ಎಂದು ಉಪಸಂಹಾರಮಾಡಿರುತ್ತದೆ. "ಅದು ತನ್ನನ್ನೇ (ನಾನು) ಬ್ರಹ್ಮವೆಂದು ತಿಳಿದುಕೊಂಡಿತು" (ಬೃ. ೧-೪-೧೦), "ಅದು ನೀನಾಗಿರುವೆ" (ಛಾ. ೬-೮-೭) ಎಂಬೀ ಮುಂತಾದ ವಾಕ್ಯಗಳು ಅದನ್ನು ತಾತ್ಪರ್ಯದಿಂದ (ತಿಳಿಸುತ್ತವೆ) ಯಾದ್ದರಿಂದಲೂ ಹುಟ್ಟಿದ ಬ್ರಹ್ಮಾತ್ಮಜ್ಞಾನವು ಬಾಧಿತವಾಗುವದಿಲ್ಲವಾದ್ದರಿಂದಲೂ (ಆ ಜ್ಞಾನವು) ಹುಟ್ಟುವದಿಲ್ಲವೆಂದಾಗಲಿ, ಅದು ತಪ್ಪು ತಿಳಿವಳಿಕೆಯೆಂದಾಗಲಿ ಹೇಳುವುದಕ್ಕೆ ಆಗಲಾರದು. [2]

## ಜ್ಞಾನಿಯ ಕರ್ಮತ್ಯಾಗವು ಪ್ರಯೋಜನವನ್ನು ಬಯಸುವದಿಲ್ಲ

(ಭಾಷ್ಯ)

೧೩. ತ್ಯಾಗೇಽಪಿ ಪ್ರಯೋಜನಾಭಾವಸ್ಯ ತುಲ್ಯತ್ವಮ್ ಇತಿ ಚೇತ್ । "ನಾ ಕೃತೇನೇಹ ಕಶ್ಚನ" (ಗೀ. ೩-೧೮) ಇತಿ ಸ್ಮೃತೇಃ । ಯ ಆಹು ರ್ವಿದಿತ್ವಾ ಬ್ರಹ್ಮ ವ್ಯುತ್ಥಾನಮೇವ ಕುರ್ಯಾತ್ ಇತಿ । ತೇಷಾಮಪ್ಯೇಷ ಸಮಾನೋ ದೋಷಃ ಪ್ರಯೋಜನಾಭಾವ ಇತಿ ಚೇತ್ । ನ । ಅಕ್ರಿಯಾಮಾತ್ರತ್ವಾದ್ವ್ಯುತ್ಥಾನಸ್ಯ । ಅವಿದ್ಯಾನಿಮಿತ್ತೋ ಹಿ ಪ್ರಯೋಜನಸ್ಯ ಭಾವಃ, ನ ವಸ್ತುಧರ್ಮಃ । ಸರ್ವಪ್ರಾಣಿನಾಂ ತದ್ದರ್ಶನಾತ್ । ಪ್ರಯೋಜನತೃಷ್ಣಯಾ ಚ ಪ್ರೇರ್ಯಮಾಣಸ್ಯ ವಾಙ್ಮನಃಕಾಯೈಃ ಪ್ರವೃತ್ತಿದರ್ಶನಾತ್ । "ಸೋಽಕಾಮಯತ ಜಾಯಾ ಮೇ ಸ್ಯಾತ್" (ಬೃ.೧-೪-೧೭) ಇತ್ಯಾದಿನಾ ಪುತ್ರವಿತ್ತಾದಿಪಾಙ್ಕ್ತಲಕ್ಷಣಂ ಕಾಮ್ಯಮೇವೇತಿ 'ಉಭೇ ಹ್ಯೇತೇ ಸಾಧ್ಯಸಾಧನಲಕ್ಷಣೇ ಏಷಣೇ ಏವ' ಇತಿ **ವಾಜಸನೇಯಿಬ್ರಾಹ್ಮಣೇಽ**ವಧಾರಣಾತ್ । ಅವಿದ್ಯಾಕಾಮದೋಷನಿಮಿತ್ತಾಯಾ ವಾಙ್ಮನಃಕಾಯಪ್ರವೃತ್ತೇಃ ಪಾಙ್ಕ್ತಲಕ್ಷಣಾಯಾಃ ವಿದುಷೋಽವಿದ್ಯಾದಿದೋಷಾಭಾವಾದನುಪಪತ್ತೇಃ ಕ್ರಿಯಾಭಾವಮಾ

---

1. ಶಾಸ್ತ್ರವು ಅಕರ್ತೃವಾದ ಬ್ರಹ್ಮವೇ ಆತ್ಮನೆಂದು ಜ್ಞಾನವನ್ನುಂಟುಮಾಡುವದಿಲ್ಲ. ಕರ್ಮಸಂಬಂಧಿಯಾದ ಆತ್ಮನ ಉಪಾಸನೆಯನ್ನು ಮಾತ್ರ ಬೋಧಿಸುತ್ತದೆ ಎಂದು ಭಾವ.

2. ಬ್ರಹ್ಮವು ನೀನು ಎಂಬ ವಾಕ್ಯದಿಂದ ಜ್ಞಾನವುಂಟಾಗದಿದ್ದರೆ ಅಥವಾ ಹುಟ್ಟಿದರೂ ಬಾಧಿತವಾಗುವಂತಿದ್ದರೆ ಶಾಸ್ತ್ರವು ಅಪ್ರಮಾಣವಾಗುತ್ತಿತ್ತು. ಆದರೆ ಹಾಗೇನೂ ಇಲ್ಲ. ಗೀ. ಭಾ. ೨-೨೧, ಸೂ. ಭಾ. ೨-೧-೧೪ ಇವುಗಳಲ್ಲಿ ಆತ್ಮಜ್ಞಾನದ ವಿಷಯದ ವಿಚಾರವನ್ನು ನೋಡಿರಿ.

ತ್ರಮ್ ವ್ಯುತ್ಥಾನಮ್, ನ ತು ಯಾಗಾದಿವದನುಷ್ಠೇಯರೂಪಂ ಭಾವಾತ್ಮಕಮ್। ತಚ್ಚ ವಿದ್ಯಾವತ್ಪುರುಷಧರ್ಮಃ ಇತಿ ನ ಪ್ರಯೋಜನಮನ್ವೇಷ್ಟವ್ಯಮ್। ನ ಹಿ ತಮಸಿ ಪ್ರವಿಷ್ಟಸ್ಯ ಉದಿತ ಆಲೋಕೇ ಯದ್ ಗರ್ತಕಣ್ಟಕಾದ್ಯಪತನಮ್ ತತ್‌ಕಿಂ-ಪ್ರಯೋಜನಮ್ ಇತಿ ಪ್ರಶ್ನಾರ್ಹಮ್ ॥

(ಭಾಷ್ಯಾರ್ಥ)

(ಆಕ್ಷೇಪ) :—ತ್ಯಾಗಕ್ಕೂ ಪ್ರಯೋಜನವಿಲ್ಲವೆಂಬುದು ಸಮಾನವಾಗಿರುತ್ತದೆ. "(ಅವನಿಗೆ) ಮಾಡದೆ ಇರುವದರಿಂದ ಯಾವ ಪ್ರಯೋಜನವೂ ಇರುವುದಿಲ್ಲ." (ಗೀ. ೩-೧೮) ಎಂದು ಸ್ಮೃತಿಯಿರುವದರಿಂದ "ಬ್ರಹ್ಮವನ್ನು ಅರಿತುಕೊಂಡ ಬಳಿಕ ಸಂನ್ಯಾಸವನ್ನೇ ಮಾಡಬೇಕು ಎಂದು ಯಾರು ಹೇಳುತ್ತಿರುವರೋ ಆ (ವಾದಿಗಳಿಗೂ) ಪ್ರಯೋಜನವಿಲ್ಲವೆಂಬ ಈ ದೋಷವು ಸಮಾನವಾಗಿರುತ್ತದೆ.[1]

(ಸಮಾಧಾನ) :—ಹಾಗಲ್ಲ. ಏಕೆಂದರೆ ಸಂನ್ಯಾಸವೆಂದರೆ ಕರ್ಮವಿಲ್ಲದಿರುವದು ಮಾತ್ರವಾಗಿದೆ. ಪ್ರಯೋಜನವಿರುವದೆಂಬುದು ಅವಿದ್ಯೆಯ ನಿಮಿತ್ತದಿಂದ ಆಗಿರುವದೇ ಹೊರತು (ನಿಜವಾಗಿ) ವಸ್ತುವಿಗೆ ಸೇರಿದ ಧರ್ಮವಲ್ಲ. ಏಕೆಂದರೆ ಅದು ಸರ್ವ ಪ್ರಾಣಿಗಳಲ್ಲಿಯೂ ಕಂಡುಬರುತ್ತದೆ.[2] ಪ್ರಯೋಜನದ ಬಯಕೆಯಿಂದ ಪ್ರೇರಿತನಾಗಿರುವವನೇ ವಾಕ್ಕು, ಮನಸ್ಸು, ಕಾಯ–ಇವುಗಳಿಂದ (ಕೆಲಸದಲ್ಲಿ) ತೊಡಗುವದು ಕಂಡುಬರುತ್ತದೆ. "ಅವನು ನನಗೆ ಹೆಂಡತಿಯಾಗಬೇಕು ಎಂದು ಬಯಸಿದನು" ಬೃ. ೧-೪-೧೭) ಎಂದು ಮುಂತಾಗಿರುವ **ವಾಜಸನೇಯಿಬ್ರಾಹ್ಮಣದಲ್ಲಿ** "ಈ ಸಾಧ್ಯಸಾಧನಗಳೆಂಬ ಎರಡೂ ಏಷಣೆಗಳೇ"[3] (ಬೃ. ೩-೫-೧) ಎಂದು

1. ಕರ್ಮವನ್ನು ತ್ಯಾಗಮಾಡುವದೇ ಅಲ್ಲವೆ, ಸಂನ್ಯಾಸವು ? ಆ ತ್ಯಾಗಕ್ಕೆ ಪ್ರಯೋಜನವಿರಬೇಕು. ಇಲ್ಲದಿದ್ದರೆ ಯಾರೂ ಕರ್ಮತ್ಯಾಗವನ್ನು ಮಾಡಲಾರರು. ಬ್ರಹ್ಮಜ್ಞಾನವಾದ ಮೇಲೆ ಕರ್ಮಾನುಷ್ಠಾನದಿಂದ ಆಗಬೇಕಾದ ಪ್ರಯೋಜನವಿಲ್ಲವೆಂಬುದು ದೋಷವಾದರೆ ಆಗ ಕರ್ಮತ್ಯಾಗದಿಂದ ಆಗಬೇಕಾದ ಪ್ರಯೋಜನವೂ ಇಲ್ಲದ್ದರಿಂದ ಅದೂ ದೋಷವೇ ಆಗುವದು ಎಂದು ಪೂರ್ವಪಕ್ಷಿಯ ಭಾವ.

2. ತದ್ದರ್ಶನಾತ್ ಎಂಬ ಪಾಠವನ್ನನುಸರಿಸಿ ಕನ್ನಡಿಸಿದೆ. ವಿಚಾರವಿವೇಕವಿಲ್ಲದ ಪಶುಗಳೂ ಒಂದೊಂದು ಪ್ರಯೋಜನಕ್ಕಾಗಿ ಪ್ರವರ್ತಿಸುವಂತೆ ವಿವೇಕಿಗಳೂ ಪ್ರವರ್ತಿಸುವದರಿಂದ ಪ್ರಯೋಜನವು ಅವಿದ್ಯಾಕೃತವೆಂದು ನಿಶ್ಚಿತವಾಗುತ್ತದೆ ಎಂದರ್ಥ. ಇಚ್ಛೆಯು ದನಕಾಯುವವರಲ್ಲಿಯೂ ಇರುವದರಿಂದ ಅದು ಶಾಸ್ತ್ರಕೃತವಲ್ಲವೆಂದು ಹಿಂದೆ ಹೇಳಿದ್ದನ್ನು ಇದಕ್ಕೆ ಹೋಲಿಸಬಹುದು. "ತದದರ್ಶನಾತ್" ಎಂಬ ಪಾಠವನ್ನು ಕಲ್ಪಿಸಿಕೊಂಡು (ಆ॥) ವ್ಯಾಖ್ಯಾನಕಾರರು ಪ್ರಯೋಜನವು ವಸ್ತುಧರ್ಮವಾದರೆ ವಿಜ್ಞಾನಿಗಳು, ಅಜ್ಞಾನಿಗಳು, ಸುಪ್ತರು, ಮೂರ್ಛಿತರು—ಮುಂತಾದವರೆಲ್ಲರಿಗೂ ಇರಬೇಕಾಗಿತ್ತು ಎಂದು ಅರ್ಥವನ್ನು ತೆಗೆದಿದ್ದಾರೆ.

3. ಸಾಧ್ಯಸಾಧನಗಳೆಂಬ ಮಾತು ಮೂಲದಲ್ಲಿಲ್ಲ; ಉಭೇ ಎಂಬುದರ ಅರ್ಥವಿದು.

ಪುತ್ರ, ವಿತ್ತ-ಮುಂತಾದ ಸಾಙ್ಗ್ರಸ್ವರೂಪವಾದದ್ದೆಲ್ಲವೂ[1] ಕಾಮವೇ ಎಂದು ಶ್ರುತಿ ಹೇಳಿರುತ್ತದೆ. ಅವಿದ್ಯೆ, ಕಾಮ—ಎಂಬ ದೋಷಗಳ ನಿಮಿತ್ತದಿಂದ ಆಗುವ ಸಾಙ್ಗ್ರಲಕ್ಷಣವಾದ ವಾಙ್ಮನಃಕಾಯಗಳ ಪ್ರವೃತ್ತಿಯು ಅವಿದ್ಯೆಯೇ ಮುಂತಾದ ದೋಷಗಳಿಲ್ಲದ್ದರಿಂದ ಜ್ಞಾನಿಗೆ ಹೊಂದುವದಿಲ್ಲವಾದ್ದರಿಂದ ಸಂನ್ಯಾಸವೆಂಬುದು ಕ್ರಿಯೆಯ ಅಭಾವಮಾತ್ರವಾಗಿರುತ್ತದೆಯೇ ಹೊರತು ಯಾಗಾದಿಗಳಂತೆ ಮಾಡತಕ್ಕ (ಕರ್ಮ) ರೂಪವಾದದ್ದಲ್ಲ, ಭಾವರೂಪವಾದದ್ದಲ್ಲ. ಮತ್ತು ಇದು ಜ್ಞಾನವುಳ್ಳ ಪುರುಷನ ಧರ್ಮವೇ ಆಗಿರುವದರಿಂದ (ಇದಕ್ಕೆ) ಪ್ರಯೋಜನವನ್ನು ಹುಡುಕಬೇಕಾದದ್ದಿರುವದಿಲ್ಲ. ಕತ್ತಲೆಯಲ್ಲಿ ಹೊಕ್ಕಿದ್ದವನು ಬೆಳಕು ಕಾಣಿಸಿಕೊಳ್ಳಲು ಗುಂಡಿ, ಕೆಸರು, ಮುಳ್ಳು-ಮುಂತಾದವುಗಳಲ್ಲಿ ಬೀಳದೆ ಇರುವನಲ್ಲ, ಅದಕ್ಕೆ ಪ್ರಯೋಜನವೇನು ?-ಎಂದು ಕೇಳುವದಕ್ಕಾಗುವದಿಲ್ಲವಷ್ಟೆ ?

## (ಉ) ಜ್ಞಾನಿಯು ಗೃಹಸ್ಥನಾಗಿಯೇ ಇರಲಿ ಎಂಬ ನಿಯಮವು ಸರಿಯಲ್ಲ

(ಭಾಷ್ಯ)

. ೧೪. ವ್ಯುತ್ಥಾನಂ ತರ್ಹಿ ಅರ್ಥಪ್ರಾಪ್ತತ್ವಾನ್ನ ಚೋದನಾರ್ಹಮಿತಿ । ಗಾರ್ಹಸ್ಥ್ಯೇ ಚೇತ್ ಪರಬ್ರಹ್ಮವಿಜ್ಞಾನಂ ಜಾತಂ ತತ್ರೈವಾಸ್ತ್ವಕುರ್ವತ ಆಸನಮ್ ನ ತತೋಽನ್ಯತ್ರ ಗಮನಮ್ ಇತಿ ಚೇತ್ । ನ ಕಾಮಪ್ರಯುಕ್ತತ್ವಾದ್ಗಾರ್ಹಸ್ಥ್ಯಸ್ಯ । "ಏತಾವಾನ್ ವೈ ಕಾಮಃ" (ಬೃ. ೧-೪-೧೭), "ಉಭೇಹ್ಯೇತೇ ಏಷಣೇ ಏವ" (ಬೃ ೩-೫-೧) ಇತ್ಯವಧಾರಣಾತ್ । ಕಾಮನಿಮಿತ್ತಪುತ್ರವಿತ್ತಾದಿಸಮ್ಬನ್ಧನಿಯಮಾಭಾವಮಾತ್ರಮ್, ನ ಹಿ ತತೋಽನ್ಯತ್ರ ಗಮನಂ ವ್ಯುತ್ಥಾನಮುಚ್ಯತೇ । ಅತೋ ನ ಗಾರ್ಹಸ್ಥ್ಯ ಏವಾಕುರ್ವತ ಆಸನಮ್ ಉತ್ಪನ್ನವಿದ್ಯಸ್ಯ । ಏತೇನ ಗುರುಶುಶ್ರೂಷಾತಪಸೋರಪ್ಯಪ್ರತಿಪತ್ತಿರ್ವಿದುಷಃ ಸಿದ್ಧಾ ॥

(ಭಾಷ್ಯಾರ್ಥ)

(ಆಕ್ಷೇಪ) :—ಹಾಗಾದರೆ ಸಂನ್ಯಾಸವೆಂಬುದು ತಾನೇ[2] ಒದಗುವದರಿಂದ (ಅದನ್ನು) ವಿಧಿಸಬೇಕಾದದ್ದಿಲ್ಲ. ಗಾರ್ಹಸ್ಥ್ಯದಲ್ಲಿ ಪರಬ್ರಹ್ಮಜ್ಞಾನವು ಉಂಟಾದರೆ

---

1. ಪತ್ನಿ, ಯಜಮಾನ, ಪುತ್ರ, ದೈವವಿತ್ತ, ಮಾನುಷವಿತ್ತ—ಇವೈದೂ ಕರ್ಮಕ್ಕೆ ಬೇಕಾಗಿರುವ ಸಾಙ್ಗ್ರವು.

2. ಸಂನ್ಯಾಸವೆಂಬುದು ಒಂದು ಆಶ್ರಮವಲ್ಲದೆ ಬರಿಯ ಏಷಣಾತ್ಯಾಗವಾಗಿದ್ದರೆ ಗೃಹಸ್ಥನೂ ಏಷಣಾತ್ಯಾಗವನ್ನು ಮಾಡಬಹುದಲ್ಲ! ಆ ತ್ಯಾಗವನ್ನು ವಿಧಿಸುವದೇತಕ್ಕೆ ?

ಅಲ್ಲಿಯೇ ಕರ್ಮಗಳನ್ನು ಬಿಟ್ಟು ಇದ್ದುಕೊಂಡಿರಲಿ, ಅಲ್ಲಿಂದ ಮತ್ತೆಲ್ಲಿಗೂ[1] ಹೋಗ ಬೇಕಾದದ್ದಿಲ್ಲ.

(ಸಮಾಧಾನ) :—ಹಾಗಲ್ಲ. ಏಕೆಂದರೆ ಗಾರ್ಹಸ್ಥ್ಯವೆಂಬುದು ಕಾಮವೆಂಬ ನಿಮಿತ್ತದಿಂದ ಉಂಟಾಗಿರುತ್ತದೆ. "ಕಾಮವೆಂದರೆ ಇಷ್ಟೇ" (ಬೃ. ೧-೪-೧೭) "ಇವೆರಡೂ ಏಷಣೆಗಳೇ" (ಬೃ. ೩-೫-೧) ಎಂದು (ಶ್ರುತಿಯಲ್ಲಿ) ಒತ್ತಿ ಹೇಳಿರುತ್ತದೆ. ಕಾಮವೆಂಬ ನಿಮಿತ್ತದಿಂದ ಆಗುವ ಮಕ್ಕಳು, ವಿತ್ತ–ಮುಂತಾದವುಗಳ ಸಂಬಂಧವು ನಿಯಮವಾಗಿ ಇರದೆ ಇರುವದೇ ಸಂನ್ಯಾಸವೇ ಹೊರತು ಅಲ್ಲಿಂದ ಮತ್ತೆಲ್ಲಿಗಾದರೂ ಹೋಗುವದಲ್ಲ.[2] ಆದ್ದರಿಂದ ಜ್ಞಾನವುಂಟಾದವನು ಗೃಹಸ್ಥಾಶ್ರಮದಲ್ಲಿಯೇ (ಯಾವ ಕರ್ಮವನ್ನೂ) ಮಾಡದೆ ಇರಬೇಕೆಂಬ (ನಿಯಮವು ಏರ್ಪಡು) ವದಿಲ್ಲ. ಇದರಿಂದ ಗುರುಶುಶ್ರೂಷೆ, ತಪಸ್ಸು[3]—ಇವುಗಳುಕೂಡ ಜ್ಞಾನಿಗೆ ಇಲ್ಲವೆಂದು ಸಿದ್ಧವಾಯಿತು.

(ಭಾಷ್ಯ)

೧೫. ಅತ್ರ ಕೇಚಿದ್ಗೃಹಸ್ಥಾಃ ಭಿಕ್ಷಾಟನಾದಿಭಯಾತ್ ಪರಿಭವಾಚ್ಚ ತ್ರಸ್ಯಮಾನಾಃ ಸೂಕ್ಷ್ಮದೃಷ್ಟಿತಾಂ ದರ್ಶಯನ್ತ ಉತ್ತರಮಾಹುಃ । ಭಿಕ್ಷೋರಪಿ ಭಿಕ್ಷಾಟನಾದಿನಿಯಮದರ್ಶನಾತ್, ದೇಹಧಾರಣಾಮಾತ್ರಾರ್ಥಿನೋ ಗೃಹಸ್ಥಸ್ಯಾಪಿ ಸಾಧ್ಯಸಾಧನೈಷಣೋಭಯವಿನಿರ್ಮುಕ್ತಸ್ಯ ದೇಹಮಾತ್ರಧಾರಣಾರ್ಥಮ್ ಅಶನಾಚ್ಛಾದನಮಾತ್ರಮುಪಜೀವತೋ ಗೃಹ ಏವಾಸ್ತ್ವಾಸನಮ್ ಇತಿ । ನ । ಸ್ವಗೃಹವಿಶೇಷಪರಿಗ್ರಹನಿಯಮಸ್ಯ ಕಾಮಪ್ರಯುಕ್ತತ್ವಾತ್ ಇತ್ಯುಕ್ತೋತ್ತರಮೇತತ್ । ಸ್ವಗೃಹವಿಶೇಷಪರಿಗ್ರಹಾಭಾವೇ ಚ ಶರೀರಧಾರಣಮಾತ್ರಪ್ರಯುಕ್ತಾಶನಾಚ್ಛಾದನಾರ್ಥಿನಃ ಸ್ವಪರಿಗ್ರಹವಿಶೇಷಾಭಾವೇ ಅರ್ಥಾದ್ಭಿಕ್ಷುತ್ವಮೇವ ॥

---

1. ಆಶ್ರಮಾಂತರಕ್ಕೆ. ಮತ್ತೊಂದು ಆಶ್ರಮಕ್ಕೆ ಹೋಗುವದು ಸಂನ್ಯಾಸಕ್ಕೆ ಅವಶ್ಯವೆಂದು ಸಿದ್ಧಾಂತಿಯು ಹೇಳಬಹುದೆಂದು ಪೂರ್ವಪಕ್ಷಿ ಇಟ್ಟುಕೊಂಡಿರುತ್ತಾನೆ.

2. ಏಷಣೆಯಿಲ್ಲದವನಿಗೆ ಮನೆಯಲ್ಲಿಯೇ ಇರಬೇಕೆಂಬ ನಿಯಮವು ಹೊಂದುವದಿಲ್ಲ; ಮತ್ತೊಂದು ಆಶ್ರಮಕ್ಕೆ ಹೋಗಬೇಕೆಂಬ ನಿಯಮವೂ ಅವನಿಗೆ ಇಲ್ಲವಾದರೂ ಮನೆಯೇ ಬೇಕೆಂಬುದು ಕಾಮನಿಮಿತ್ತವಾಗಿರುವದರಿಂದ ಜ್ಞಾನಿಗೆ ಆಶ್ರಮಾಂತರವೇ ಸಹಜವಾಗುತ್ತದೆ. ಗೀ. ಭಾ. ೪-೨೦, ೨೧.

3. ಗುರುಶುಶ್ರೂಷೆ ಎಂದರೆ ಬ್ರಹ್ಮಚರ್ಯಾಶ್ರಮ, ತಪಸ್ಸೆಂದರೆ ವಾನಪ್ರಸ್ಥಾಶ್ರಮ ಛಾ. ಭಾ. ೨-೨೩-೧ ನೋಡಿ. ಜ್ಞಾನಿಯು ಈ ಆಶ್ರಮಗಳಲ್ಲಿಯೇ ಇರಲಿ ಎಂಬ ಪೂರ್ವಪಕ್ಷಕ್ಕೂ ಇದೇ ಉತ್ತರವೆಂದು ಭಾವ. ಅಜ್ಞಸಂನ್ಯಾಸಿಗೆ ಗುರುಶುಶ್ರೂಷೆ, ತಪಸ್ಸು–ಇವುಗಳುಂಟಾದರೂ ಜ್ಞಾನಿಗೆ ಇವೂ ಬೇಕಿಲ್ಲ; ಅವೂ ಅವಿದ್ಯಾರೂಪವೇ ಎಂಬುದನ್ನು ಮುಂದೆ ೨೬ ರಲ್ಲಿ ಹೇಳಲಾಗುವದು.

(ಭಾಷ್ಯಾರ್ಥ)

ಇಲ್ಲಿ ಕೆಲವರು ಗೃಹಸ್ಥರು ಭಿಕ್ಷಾಟನೆಯೇ ಮುಂತಾದ್ದರ ಅಂಜಿಕೆಯಿಂದ (ಜನರ) ತಿರಸ್ಕಾರಕ್ಕೆ ಅಂಜುವವರೂ ಆಗಿ (ತಮ್ಮ) ಸೂಕ್ಷ್ಮದೃಷ್ಟಿಯನ್ನು ತೋರಿಸುತ್ತಾ "ಸಂನ್ಯಾಸಿಗೂ ಭಿಕ್ಷಾಟನೆಯೇ ಮುಂತಾದ[1] ನಿಯಮಗಳಿರುವದು ಕಂಡುಬರುವದರಿಂದ ದೇಹವನ್ನು ಮಾತ್ರ ಧಾರಣೆಮಾಡಬೇಕೆಂಬುದಿಷ್ಟೇ ಇಚ್ಛೆಯುಳ್ಳ ಗೃಹಸ್ಥನುಕೂಡ ಸಾಧ್ಯ, ಸಾಧನ—ಎಂಬ ಏಷಣೆಗಳೆರಡನ್ನೂ ಬಿಟ್ಟು ದೇಹವನ್ನು ಮಾತ್ರ ಧರಿಸಿಕೊಂಡಿರುವದಕ್ಕಾಗಿ ಅನ್ನಬಟ್ಟೆಗಳನ್ನುಪಯೋಗಿಸಿಕೊಂಡು ಜೀವಿಸುತ್ತಾ ಮನೆಯಲ್ಲಿಯೇ ಇದ್ದುಕೊಂಡಿರಲಿ" ಎಂದು ಉತ್ತರವನ್ನು ಹೇಳುತ್ತಾರೆ. (ಆದರೆ ಅದು) ಸರಿಯಲ್ಲ. ತನ್ನದೇ ಆಗಿರುವ ಒಂದಾನೊಂದು ಮನೆಯನ್ನು ಸ್ವೀಕರಿಸುವದೆಂಬ ನಿಯಮವು ಕಾಮದಿಂದ ಆಗಿರುತ್ತದೆ ಎಂದು ಇದಕ್ಕೆ (ಆಗಲೆ) ಉತ್ತರವನ್ನು ಹೇಳಿದ್ದಾಗಿರುತ್ತದೆ. ತನ್ನದೇ ಆಗಿರುವ ಒಂದಾನೊಂದು ಮನೆಯನ್ನು ಸ್ವೀಕರಿಸದೆ ಇದ್ದರೆ ಶರೀರವನ್ನು ಧರಿಸಿಕೊಂಡಿರುವುದಕ್ಕೆ ಬೇಕಾಗುವಷ್ಟುಮಟ್ಟಿಗೆ ಅನ್ನಬಟ್ಟೆಗಳನ್ನು ಇಚ್ಛಿಸುವವನಿಗೆ ತನ್ನದೆಂಬುದೊಂದು ಗೊತ್ತಾಗಿ ಯಾವದೂ ಇಲ್ಲದ್ದರಿಂದ[2] (ಅವನು) ಭಿಕ್ಷುಕನೇ ಆಗಬೇಕೆಂದಾಗುವದು.[3]

(ಭಾಷ್ಯ)

೧೬. ಶರೀರಧಾರಣಾರ್ಥಾಯಾಂ ಭಿಕ್ಷಾಟನಾದಿಪ್ರವೃತ್ತೌ ಯಥಾ ನಿಯಮೋ ಭಿಕ್ಷೋಃ ಶೌಚಾದೌ ಚ, ತಥಾ ಗೃಹಿಣೋಽಪಿ ವಿದುಷೋಽಕಾಮಿನೋಽಸ್ತು ನಿತ್ಯಕರ್ಮಸು ನಿಯಮೇನ ಪ್ರವೃತ್ತಿಃ, ಯಾವಜ್ಜೀವಾದಿಶ್ರುತಿನಿಯುಕ್ತತ್ವಾತ್ಪ್ರತ್ಯವಾಯಪರಿಹಾರಾಯ ಇತ್ಯೇತನ್ನಿಯೋಗಾವಿಷಯತ್ವೇನ ವಿದುಷಃ ಪ್ರತ್ಯುಕ್ತಮ್, ಅಶಕ್ಯನಿಯೋಜ್ಯತ್ವಾಚ್ಚ ಇತಿ । ಯಾವಜ್ಜೀವಾದಿನಿತ್ಯಚೋದನಾನರ್ಥಕ್ಯಮ್ ಇತಿ ಚೇತ್ । ನ । ಅವಿದ್ವದ್ವಿಷಯತ್ವೇನಾರ್ಥವತ್ತ್ವಾತ್ ॥

---

1. ಭಿಕ್ಷಾಟನ, ಜಪ, ಧ್ಯಾನ, ಸ್ನಾನ, ಶೌಚ, ಸುರಾರ್ಚನೆ—ಮುಂತಾದ ಸಾಧನಗಳನ್ನೂ ಸ್ಮೃತಿಗಳನ್ನೂ ಸಂನ್ಯಾಸಿಗೆ ವಿಧಿಸಿದೆ.

2. ತನ್ನದೆಂಬ ಅಭಿಮಾನವಿದ್ದರೆ ಏಷಣೆಗಳನ್ನು ಬಿಟ್ಟಿಲ್ಲವೆಂದಾಗುತ್ತದೆ; ಏಷಣೆಗಳನ್ನು ಬಿಟ್ಟಿದ್ದರೆ ತನ್ನದೆಂಬ ಅಭಿಮಾನವಿರುವದಿಲ್ಲವಾದ್ದರಿಂದ ಅವನಿಗೆ ಒಂದು ಮನೆಯೆಂಬ ನಿಯಮವಿರಲಾರದು, ಎಂದರೆ ಅವನು ಗೃಹಸ್ಥನಾಗಿರಲಾರನು. "ಸ್ವಪರಿಗ್ರಹವಿಶೇಷಭಾವೇ" ಎಂಬುದನ್ನು ವಿಶೇಷಾಭಾವೇ ಎಂದು ತಿದ್ದಿಕೊಂಡಿದೆ.

3. ಆಗ ಅವನು ಅನ್ನಬಟ್ಟೆಗಳನ್ನು ಭಿಕ್ಷೆಯಿಂದಲೇ ಪಡೆಯಬೇಕೆಂದಾಗುವದು. ಯಾವದಾವದರೊಂದು ಕಾರಣದಿಂದ ಅವನು ಸಂನ್ಯಾಸಾಶ್ರಮವನ್ನು ಸ್ವೀಕರಿಸದೆ ಇದ್ದರೂ ಅವನು ಕರ್ಮಿಯಾದ ಗೃಹಸ್ಥನೆಂದು ಭಾವಿಸಬಾರದೆಂದು ಭಾವ. ಗೀ. ಭಾ. ೪-೨೦ ರ ಅವತರಣಿಕೆಯನ್ನು ನೋಡಿ.

(ಭಾಷ್ಯಾರ್ಥ)

ಶರೀರವನ್ನು ಧರಿಸಿಕೊಂಡಿರುವದಕ್ಕೆ ಬೇಕಾದ ಭಿಕ್ಷಾಟನೆಯೇ ಮುಂತಾದವುಗಳಲ್ಲಿ ತೊಡಗುವದರಲ್ಲಿ ಹೇಗೆ ಭಿಕ್ಷುವಿಗೆ ನಿಯಮವಿರುವದೋ ಶೌಚವೇ ಮುಂತಾದವುಗಳಲ್ಲಿಯೂ (ಹೇಗೆ ನಿಯಮವಿರುವದೋ)[1] ಹಾಗೆಯೇ ಕಾಮವಿಲ್ಲದ ಜ್ಞಾನಿಯಾದ ಗೃಹಸ್ಥನಿಗೂ "ಬದುಕಿರುವವರೆಗೂ" (ಕರ್ಮವನ್ನು ಮಾಡಬೇಕೆಂಬುದೇ) ಮುಂತಾದ ಶ್ರುತಿಯ ಅಪ್ಪಣೆಯಿರುವದರಿಂದ ಪ್ರತ್ಯವಾಯವನ್ನು ಪರಿಹರಿಸಿಕೊಳ್ಳುವದಕ್ಕಾಗಿ ನಿಯಮದಿಂದ (ಕರ್ಮದಲ್ಲಿ) ಪ್ರವೃತ್ತಿಯುಂಟಾಗಲಿ-ಎಂಬೀ (ವಾದಕ್ಕೆ) ಜ್ಞಾನಿಯು (ಶ್ರುತಿಯ) ಅಪ್ಪಣೆಗೆ ವಿಷಯನಲ್ಲವಾದ್ದರಿಂದಲೂ (ಅವನಿಗೆ) ಅಪ್ಪಣೆ ಮಾಡುವದು ಆಗುವಂತಿಲ್ಲವಾದ್ದರಿಂದಲೂ[2] (ಈ ಪಕ್ಷವು ಸರಿಯಲ್ಲ ಎಂದು) ಹಿಂದೆಯೇ (೯) ಉತ್ತರವನ್ನು ಹೇಳಿದ್ದಾಗಿರುತ್ತದೆ.

(ಆಕ್ಷೇಪ) :—ಹಾಗಾದರೆ "ಬದುಕಿರುವವರೆಗೂ (ಅಗ್ನಿಹೋತ್ರವನ್ನು ಮಾಡಬೇಕು)" ಮುಂತಾದ ಶ್ರುತಿಯಲ್ಲಿ ನಿತ್ಯ (ಕರ್ಮವನ್ನು) ವಿಧಿಸಿರುವದು ವ್ಯರ್ಥವಾಗುತ್ತದೆ[3].

(ಸಮಾಧಾನ) :—ಹಾಗಲ್ಲ. ಏಕೆಂದರೆ ಅಜ್ಞಾನಿಯ ವಿಷಯದಲ್ಲಿ (ಈ ವಿಧಿಯು) ಸಾರ್ಥಕವಾಗುತ್ತದೆ.

(ಭಾಷ್ಯ)

೧೭. ಯತ್ತು ಭಿಕ್ಷೋಃ ಶರೀರಧಾರಣಮಾತ್ರಪ್ರವೃತ್ತಸ್ಯ ಪ್ರವೃತ್ತೇರ್ನಿಯತತ್ವಮ್ ತತ್ ಪ್ರವೃತ್ತೇರ್ನಪ್ರಯೋಜಕಮ್ । ಆಚಮನಪ್ರವೃತ್ತಸ್ಯ ಪಿಪಾಸಾಪಗಮವತ್ ನಾನ್ಯಪ್ರಯೋಜನಾರ್ಥತ್ವಮುವಗಮ್ಯತೇ । ನ ಚಾಗ್ನಿಹೋತ್ರಾದೀನಾಂ ತದ್ವದರ್ಥಪ್ರಾಪ್ತಪ್ರವೃತ್ತಿನಿಯತತ್ವೋಪಪತ್ತಿಃ । ಅರ್ಥಪ್ರಾಪ್ತಪ್ರವೃತ್ತಿನಿಯಮೋಽಪಿ ಪ್ರಯೋಜನಾಭಾವೇಽನುಪಪನ್ನ ಏವೇತಿ ಚೇತ್ । ನ । ತನ್ನಿಯಮಸ್ಯ ಪೂರ್ವ

---

1. ಏಳು ಮನೆಗಳಲ್ಲಿ ಮಾತ್ರ ಭಿಕ್ಷೆ ಮಾಡಬೇಕು, ಗೃಹಸ್ಥನ ನಾಲ್ಕರಷ್ಟುಸಲ ಕೈಕಾಲಿಗೆ ಮಣ್ಣುಹಚ್ಚಿ ಶುಚಿಮಾಡಿಕೊಳ್ಳಬೇಕು_ಎಂದು ಮುಂತಾಗಿ ಸಂನ್ಯಾಸಿಗೆ ನಿಯಮವಿದೆ.

2. ಜ್ಞಾನಿಯಾದವನಿಗೆ ಶ್ರುತಿಯು ಅಪ್ಪಣೆಮಾಡುವಹಾಗಿಲ್ಲವಾದ್ದರಿಂದ ಅವನ ಭಿಕ್ಷಾಟನಶೌಚಾದಿನಿಯಮವು ವಿಧಿಯಿಂದಾದದ್ದಲ್ಲ; ಆದ್ದರಿಂದ ಅದನ್ನು ದೃಷ್ಟಾಂತವಾಗಿ ತೆಗೆದುಕೊಂಡು ಗೃಹಸ್ಥನಾಗಿರಲಿ ಎಂಬ ನಿಯಮವನ್ನು ಏರ್ಪಡಿಸುವದಕ್ಕೆ ಬರುವದಿಲ್ಲ_ಎಂದು ಭಾವ. ಜ್ಞಾನಿಗೆ ಪ್ರತ್ಯವಾಯವೂ ಬರುವಂತಿಲ್ಲ. ಛಾ. ಭಾ. ೨-೨೩-೧, ಬೃ. ಭಾ ೪-೪-೬.

3. ಶ್ರುತಿಯು ಬೇರೆಯ ರೀತಿಯಿಂದ ಹೊಂದುವದಿಲ್ಲವೆಂಬ ಶ್ರುತಾರ್ಥಾಪತ್ತಿ ಪ್ರಮಾಣದಿಂದ ಜ್ಞಾನಿಯೂ ಕರ್ಮವನ್ನು ಮಾಡಬೇಕೆಂದು ಭಾವ.

ಪ್ರವೃತ್ತಿಸಿದ್ಧತ್ವಾತ್ ತದತಿಕ್ರಮೇ ಯತ್ನಗೌರವಾತ್ । ಅರ್ಥಪ್ರಾಪ್ತಸ್ಯ ವ್ಯುತ್ಥಾನಸ್ಯ ಪುನರ್ವಚನಾದ್ವಿದುಷಃ ಕರ್ತವ್ಯತ್ವೋಪಪತ್ತಿಃ ॥

(ಭಾಷಾರ್ಥ)

ಆದರೆ ಶರೀರಧಾರಣೆಯಲ್ಲಿ ಮಾತ್ರವೇ ತೊಡಗಿರುವ ಸಂನ್ಯಾಸಿಯ ಪ್ರವೃತ್ತಿಯು ನಿಯಮದಿಂದ ನಡೆಯುವದು (ಕಂಡುಬರುತ್ತದೆಯಲ್ಲ, ಅದು) ಪ್ರವೃತ್ತಿಗೆ ಕಾರಣವಲ್ಲ[1]. ಆಚಮನದಲ್ಲಿ ತೊಡಗಿರುವವನಿಗೆ ನೀರಡಿಕೆಯು ಹೋಗುವದು ಹೇಗೋ ಹಾಗೆ ಅದು ಮತ್ತೊಂದು ಪ್ರಯೋಜನಕ್ಕಾಗಿ ಅಲ್ಲ[2] ಎಂದು ನಿಶ್ಚಯವಾಗುತ್ತದೆ.[3] ಆದರೆ ಅಗ್ನಿಹೋತ್ರವೇ ಮುಂತಾದವು ಇದರಂತೆ ತನ್ನಷ್ಟಕ್ಕೆ ತಾನೇ ಪ್ರವೃತ್ತಿನಿಯಮವಾಗಿರುವದೆಂದು ಹೇಳುವದಕ್ಕೆ ಬರುವದಿಲ್ಲ.[4]

(ಆಕ್ಷೇಪ): —ತಾನೇ ಆಗಿರುವ ಪ್ರವೃತ್ತಿನಿಯಮವಾದರೂ (ಅದಕ್ಕೊಂದು) ಪ್ರಯೋಜನವಿಲ್ಲದಿದ್ದರೆ (ನಿಯಮವಾಗಿ ಸಾಗುವದು) ಹೊಂದುವದಿಲ್ಲವಲ್ಲ! [5]

(ಸಮಾಧಾನ) :—ಹಾಗಲ್ಲ. ಏಕೆಂದರೆ ಆ ನಿಯಮವು ಹಿಂದೆ ಮಾಡಿದ ಪ್ರವೃತ್ತಿಯಿಂದಲೇ[6] ಏರ್ಪಟ್ಟಿರುತ್ತದೆ. ಅದನ್ನು ಮೀರುವದಕ್ಕೆ ಹೆಚ್ಚಿನ ಯತ್ನವು ಬೇಕಾಗುತ್ತದೆ. ಸಂನ್ಯಾಸವು ತಾನೇ ಪ್ರಾಪ್ತವಾಗಿದ್ದರೂ ಮತ್ತೂ (ಶ್ರುತಿಯಲ್ಲಿ) ಹೇಳಿರುವದರಿಂದ[7] ಜ್ಞಾನಿಯು ಅದನ್ನು ಮಾಡಬೇಕೆಂಬುದು ಹೊಂದುತ್ತದೆ.

---

1. ಭಿಕ್ಷಾಟನಾದಿನಿಯಮದಿಂದ ಪ್ರೇರಿತನಾಗಿ ಸಂನ್ಯಾಸಿಯು ಭಿಕ್ಷೆಗೆ ಹೋಗುವದಿಲ್ಲ.

2. ಆಚಮನದಿಂದ ನೀರಡಿಕೆಯು ನಿಯತವಾಗಿ ಹೋಗುತ್ತದೆಯಾದರೂ ನೀರಡಿಕೆ ಹೋಗಲೆಂದೇನೂ ಆಚಮನಮಾಡುವದಿಲ್ಲ, ಪಾವಿತ್ರ್ಯಕ್ಕಾಗಿ ಮಾಡುತ್ತಾರೆ. ಒಂದು ಉದ್ದೇಶದಿಂದ ಮಾಡುವ ಕರ್ಮಕ್ಕೆ ಮತ್ತೊಂದು ಪ್ರಯೋಜನವು ಕಂಡರೂ ಅದಕ್ಕಾಗಿ ಕರ್ಮವನ್ನು ಮಾಡುತ್ತಾರೆನ್ನಬಾರದು ಎಂದು ಭಾವ.

3. ಹಸಿವನ್ನಡಗಿಸುವದಕ್ಕೇ ಭಿಕ್ಷಾಟನೆಯನ್ನು ಸಂನ್ಯಾಸಿಯು ಮಾಡುತ್ತಾನೆಂದು ಗೊತ್ತಾಗಿರುವಾಗ ವಿಧಿಯಿಂದ ಪ್ರೇರಿತನಾಗಿ ತೊಡಗುತ್ತಾನೆಂದು ತಿಳಿಯುವದಕ್ಕೆ ಕಾರಣವಿಲ್ಲ.

4. ಹಸಿವಿದ್ದವನು ಭಿಕ್ಷವನ್ನು ಬೇಡುವಂತೆ ಸ್ವಾಭಾವಿಕವಾದ ದೋಷದಿಂದ ಅಗ್ನಿಹೋತ್ರಾದಿಗಳನ್ನು ಮಾಡುವದಿಲ್ಲ; ವಿಧಿಚೋದಿತರಾಗಿಯೇ ಮಾಡುತ್ತಾರೆ.

5. ಸಪ್ತಾಗಾರಭಿಕ್ಷವೇ ಮುಂತಾದ ನಿಯಮವೇಕೆ ? ಎಂದು ಪ್ರಶ್ನೆ.

6. ಜ್ಞಾನವುಂಟಾಗುವಮುಂಚೆ ಶಾಸ್ತ್ರವಿಹಿತವಾದ ನಿಯಮವನ್ನು ಅನುಸರಿಸಿದ್ದು ಈಗಲೂ ಇದ್ದುಕೊಂಡಿದೆ. ಆ ನಿಯಮವನ್ನು ಮುರಿಯುವದಕ್ಕೆ ಪ್ರಯತ್ನವು ಬೇಕಾದ್ದರಿಂದಲೂ ಮುರಿಯುವದರಿಂದ ಯಾವ ಪ್ರಯೋಜನವೂ ಇಲ್ಲದ್ದರಿಂದಲೂ ಮೊದಲಿನಂತೆಯೇ ಜ್ಞಾನಿಯು ನಿಯಮದಿಂದ ಪ್ರವರ್ತಿಸುತ್ತಾನೆ ಎಂದರ್ಥ.

7. ಬೃ. ಭಾ. ೩-೫-೧ ರಲ್ಲಿರುವ ಸಂನ್ಯಾಸದ ಚರ್ಚೆಯನ್ನು ನೋಡಿರಿ. ಸಂನ್ಯಾಸವನ್ನು ಪ್ರತಿಪತ್ತಿಕರ್ಮವೆಂದು ಅಲ್ಲಿ ಹೇಳಿರುತ್ತದೆ.

## (ಊ) ಜ್ಞಾನಿಯಲ್ಲದ ಮುಮುಕ್ಷುವಿಗೂ ಸಂನ್ಯಾಸವುಂಟು

(ಭಾಷ್ಯ)

೧೮. ಅವಿದುಷಾಪಿ ಮುಮುಕ್ಷುಣಾ ಪಾರಿವ್ರಾಜ್ಯಂ ಕರ್ತವ್ಯಮೇವ । ತಥಾ ಚ "ಶಾನ್ತೋ ದಾನ್ತಃ" (ಬೃ. ೪-೪-೨೩) ಇತ್ಯಾದಿವಚನಂ ಪ್ರಮಾಣಮ್ । ಶಮ ದಮಾದೀನಾಂ ಚಾತ್ಮದರ್ಶನಸಾಧನಾನಾಮ್ ಅನ್ಯಾಶ್ರಮೇಷ್ವನುಪಪತ್ತೇಃ । "ಅತ್ಯಾಶ್ರಮಿಭ್ಯಃ ಪರಮಂ ಪವಿತ್ರಂ ಪ್ರೋವಾಚ ಸಮ್ಯಗೃಷಿಸಙ್ಘಜುಷ್ಟಮ್" (ಶ್ವೇ. ೬-೨೧) ಇತಿ ಚ ಶ್ವೇತಾಶ್ವತರೇ ವಿಜ್ಞಾಯತೇ । "ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ವಮಾನಶುಃ" (ಕೈ. ೩, ತೈ. ನಾ. ೫) ಇತಿ ಚ ಕೈವಲ್ಯಶ್ರುತಿಃ । "ಜ್ಞಾತ್ವಾ ನೈಷ್ಕರ್ಮ್ಯಮಾಚರೇತ್" ( ? ) ಇತಿ ಚ ಸ್ಮೃತೇಃ । "ಬ್ರಹ್ಮಾಶ್ರಮಪದೇ ವಸೇತ್" ( ? ) ಇತಿ ಚ ಬ್ರಹ್ಮಚರ್ಯಾದಿ ವಿದ್ಯಾಸಾಧನಾನಾಂ ಚ ಸಾಕಲ್ಯೇನ ಅತ್ಯಾಶ್ರಮಿಷೂಪಪತ್ತೇರ್ಗಾರ್ಹಸ್ಥ್ಯೇ ಅಸಮ್ಭವಾತ್ । ನ ಚಾಸಮ್ಪನ್ನಂ ಸಾಧನಂ ಕಸ್ಯಚಿದರ್ಥಸ್ಯ ಸಾಧನಾಯ ಅಲಮ್ ॥

(ಭಾಷ್ಯಾರ್ಥ)

ಅಜ್ಞಾನಿಯಾದ ಮುಮುಕ್ಷುವುಕೂಡ ಸಂನ್ಯಾಸವನ್ನು ಮಾಡಲೇಬೇಕು. ಆ ವಿಷಯಕ್ಕೆ "ಶಾಂತನೂ ದಾಂತನೂ" (ಆಗಿ .......ತನ್ನಲ್ಲಿಯೇ ಆತ್ಮನನ್ನು ಕಂಡುಕೊಳ್ಳಬೇಕು. ಬೃ. ೪-೪-೨೩) ಎಂದು ಮುಂತಾಗಿರುವ ವಚನವು ಪ್ರಮಾಣವು. ಆತ್ಮನನ್ನು ಕಂಡುಕೊಳ್ಳುವದಕ್ಕೆ ಸಾಧನವಾಗಿರುವ ಶಮ, ದಮ-ಮುಂತಾದವುಗಳು ಬೇರೆಯ ಆಶ್ರಮಗಳಲ್ಲಿ ಇರಲಾರವು.[1] "ಋಷಿಸಂಘವು ಆಶ್ರಯಿಸಿರತಕ್ಕ ಪರಮ ಪವಿತ್ರವಾದ (ಈ ತತ್ತ್ವವನ್ನು ಶ್ವೇತಾಶ್ವತರನು) ಅತ್ಯಾಶ್ರಮಿಗಳಿಗೆ[2] ಹೇಳಿದನು" (ಶ್ವೇ. ೬-೨೧) ಶ್ವೇತಾಶ್ವತರೋಪನಿಷತ್ತಿನಲ್ಲಿಯೂ (ಹೇಳಿರುವದು) ತಿಳಿದುಬರುತ್ತದೆ. "ಕರ್ಮದಿಂದಲ್ಲ, ಪ್ರಜೆಯಿಂದಲ್ಲ, ಧನದಿಂದಲ್ಲ, ತ್ಯಾಗದಿಂದಲೇ ಕೆಲವರು ಅಮೃತತ್ವವನ್ನು ಹೊಂದಿರುವರು" (ಕೈ. ೩, ತೈ. ನಾ. ೫) ಎಂದು **ಕೈವಲ್ಯ ಶ್ರುತಿಯು**[3] (ಇರುವದು). "ತಿಳಿದು ನೈಷ್ಕರ್ಮ್ಯವನ್ನು ಮಾಡಬೇಕು" ( ? )

---

1. ಗೀ. ಭಾ. ೬-೩ನ್ನೂ ಗೀ. ೬ನೆಯ ಅಧ್ಯಾಯದ ಭಾಷ್ಯಾವತರಣಿಕೆಯನ್ನೂ ನೋಡಿರಿ.

2. ಆಶ್ರಮಗಳನ್ನು ಮೀರಿರುವ ಸಂನ್ಯಾಸಿಗಳಿಗೆ.

3. ಕೈವಲ್ಯೋಪನಿಷತ್ತನ್ನು ಆಚಾರ್ಯರು ಪ್ರಸ್ಥಾನತ್ರಯಭಾಷ್ಯದಲ್ಲಿ ಉದಾಹರಿಸಿರುವದು ತೀರ ಕಡಿಮೆ, ಇಲ್ಲವೇ ಇಲ್ಲವೆಂದರೂ ಸಲ್ಲುವದು. ಆದ್ದರಿಂದ ಕೈವಲ್ಯ ಶ್ರುತಿಯೆಂದರೆ ಮೋಕ್ಷವನ್ನು ಹೇಳುವ ಶ್ರುತಿಯೆಂದೂ ಅರ್ಥಮಾಡಿಕೊಳ್ಳಬಹುದು. "ಇತಿ ಚ ಶ್ರುತೇಃ" ಎಂದೂ ಇಲ್ಲಿ ಪಾಠಾಂತರವಿದೆ. ಈ ವಾಕ್ಯವು ತೈ. ನಾರಾಯಣದಲ್ಲಿಯೂ ಕಂಡುಬರುತ್ತದೆ. ಈ ಶ್ರುತಿಯಲ್ಲಿ ತ್ಯಾಗದಿಂದ ಅಮೃತತ್ವವು ಪ್ರಾಪ್ತವಾಗುತ್ತದೆ ಎಂದು ಹೇಳಿರುವದರಿಂದ ಸಂನ್ಯಾಸವನ್ನು ಮುಮುಕ್ಷುಗಳಿಗೆ ಸಾಧನವೆಂದು ಹೇಳಿದಂತೆ ಆಯಿತು ಎಂದು ಭಾವ.

ಎಂದೂ "ಬ್ರಹ್ಮಾಶ್ರಮಪದದಲ್ಲಿ ವಾಸಮಾಡಬೇಕು" ( ? ) ಎಂದೂ ಸ್ಮೃತಿಯಲ್ಲಿದೆ. ಬ್ರಹ್ಮಚರ್ಯವೇ ಮುಂತಾದ ಜ್ಞಾನಸಾಧನಗಳು ಸಂಪೂರ್ಣವಾಗಿ ಅತ್ಯಾಶ್ರಮಿಗಳಲ್ಲಿ (ಮಾತ್ರ) ಇರಬಹುದಾಗಿದೆ, ಗೃಹಸ್ಥಾಶ್ರಮದಲ್ಲಿ ಇರುವಹಾಗಿಲ್ಲ. ಆದ್ದರಿಂದಲೂ (ಮುಮುಕ್ಷುವಿಗೆ ಸಂನ್ಯಾಸವು ಯುಕ್ತ). ಸಾಧನವು ಅಸಂಪೂರ್ಣವಾದರೆ ಯಾವದೊಂದು ಪ್ರಯೋಜನವನ್ನೂ ಸಾಧಿಸುವದಕ್ಕೆ ತಕ್ಕದ್ದಾಗಲಾರದು.[1]

## (ಎ) ಜ್ಞಾನಕರ್ಮಸಮುಚ್ಚಯಕ್ಕೆ ಮುಕ್ತಿಯು ಫಲವಲ್ಲ

(ಭಾಷ್ಯ)

೧೯. ಯದ್ವಿಜ್ಞಾನೋಪಯೋಗೀನಿ ಚ ಗಾರ್ಹಸ್ಥ್ಯಾಶ್ರಮಕರ್ಮಾಣಿ ತೇಷಾಂ ಪರಂ ಫಲಮುಪಸಂಹೃತಂ ದೇವತಾಪ್ಯಯಲಕ್ಷಣಂ ಸಂಸಾರವಿಷಯಮೇವ । ಯದಿ ಕರ್ಮಿಣ ಏವ ಪರಮಾತ್ಮವಿಜ್ಞಾನಮಭವಿಷ್ಯತ್ ಸಂಸಾರವಿಷಯಸ್ಯೈವ ಫಲಸ್ಯೋಪಸಂಹಾರೋ ನೋಪಾಪತ್ಸ್ಯತ । ಅಙ್ಗಫಲಂ ತದಿತಿ ಚೇತ್ । ನ । ತದ್ವಿರೋಧ್ಯಾತ್ಮವಸ್ತುವಿಷಯತ್ವಾದಾತ್ಮವಿದ್ಯಾಯಾಃ । ನಿರಾಕೃತಸರ್ವನಾಮರೂಪಕರ್ಮಪರಮಾರ್ಥಾತ್ಮವಸ್ತುವಿಷಯಮ್ ಆತ್ಮಜ್ಞಾನಮ್ ಅಮೃತತ್ವಸಾಧನಮ್ । ಗುಣಫಲಸಮ್ಬನ್ಧೇ ಹಿ ನಿರಾಕೃತಸರ್ವವಿಶೇಷಾತ್ಮವಸ್ತುವಿಷಯತ್ವಂ ಜ್ಞಾನಸ್ಯ ನ ಪ್ರಾಪ್ನೋತಿ । ತಚ್ಚಾನಿಷ್ಟಮ್ । "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್" (ಬೃ. ೪-೫-೧೫) ಇತ್ಯಧಿಕೃತ್ಯ ಕ್ರಿಯಾಕಾರಕಫಲಾದಿಸರ್ವವ್ಯವಹಾರನಿರಾಕರಣಾತ್ ವಿದುಷಃ । ತದ್ವಿಪರೀತಸ್ಯ ಅವಿದುಷಃ "ಯತ್ರ ಹಿ ದ್ವೈತಮಿವ ಭವತಿ" (ಬೃ. ೪-೫-೧೫) ಇತ್ಯುಕ್ತ್ವಾ ಕ್ರಿಯಾಕಾರಕಫಲರೂಪಸ್ಯ ಸಂಸಾರಸ್ಯ ದರ್ಶಿತತ್ವಾಚ್ಚ **ವಾಜಸನೇಯಿಬ್ರಾಹ್ಮಣೇ** । ತಥಾ ಇಹಾಪಿ ದೇವತಾಪ್ಯಯಂ ಸಂಸಾರವಿಷಯಂ ಯತ್ ಫಲಮ್ ಅಶನಾಯಾದಿಮದ್ವಸ್ತ್ವಾತ್ಮಕಮ್, ತದುಪಸಂಹೃತ್ಯ ಕೇವಲಂ ಸರ್ವಾತ್ಮಕವಸ್ತುವಿಷಯಮ್ ಜ್ಞಾನಮ್ ಅಮೃತತ್ವಾಯ ವಕ್ಷ್ಯಾಮಿ–ಇತಿ ಪ್ರವರ್ತತೇ ॥

(ಭಾಷ್ಯಾರ್ಥ)

ಜ್ಞಾನಕ್ಕೆ ಸಂಬಂಧಪಟ್ಟ[2] ಗೃಹಸ್ಥಾಶ್ರಮದ ಕರ್ಮಗಳಿವೆಯಷ್ಟೆ, ಅವುಗಳ

1. ಆದ್ದರಿಂದ ಯುಕ್ತಿಯಿಂದಲೂ ಸಂನ್ಯಾಸವು ಕರ್ತವ್ಯವೆಂದಾಯಿತು–ಎಂದು ಭಾವ.

2. ಇಲ್ಲಿ ಮೂಲಗ್ರಂಥದಲ್ಲಿ ಏನೋ ಹೆಚ್ಚುಕಡಿಮೆಯಾಗಿರುವಂತೆ ತೋರುತ್ತದೆ. 'ಯದ್ವಿಜ್ಞಾನೋಪಯೋಗೀನಿ' ಎಂದರೆ 'ಯಾವ ಜ್ಞಾನಕ್ಕೆ ಉಪಯೋಗವಾಗುವ' ಎಂದು ಅರ್ಥವಾಗುತ್ತದೆ. "ಯಾನಿ ವಿಜ್ಞಾನಯೋಗೀನಿ" ಎಂದು ಪಾಠವಿದ್ದರೆ ಪ್ರಕೃತಕ್ಕೆ ಸರಿಯಾಗಿ ಹೊಂದುತ್ತದೆ.

ಕಟ್ಟಕಡೆಯ ಫಲವೆಂದು (ಹಿಂದೆ)[1] ಉಪಸಂಹಾರವಾಗಿರುವ **ದೇವತಾಪ್ಯಯವೆಂ** ಬುದು[2] ಸಂಸಾರವಿಷಯವೇ ಆಗಿರುತ್ತದೆ. ಕರ್ಮಿಗೇ ಪರಮಾತ್ಮಜ್ಞಾನವನ್ನು (ಹೇಳಿದೆ)ಯೆಂದಾಗಿದ್ದರೆ ಸಂಸಾರವಿಷಯವಾಗಿರುವ ಫಲವನ್ನೇ ಉಪಸಂಹಾರ ಮಾಡಿರುವದು ಹೊಂದುತ್ತಿರಲಿಲ್ಲ. ಅದು ಅಂಗಫಲವು[3] ಎಂಬುದು ಸರಿಯಲ್ಲ. ಏಕೆಂದರೆ ಆತ್ಮಜ್ಞಾನವು ಅದಕ್ಕೆ ವಿರುದ್ಧವಾದ ಆತ್ಮವಸ್ತುವನ್ನು ತಿಳಿಸುತ್ತದೆ. ಯಾವ ನಾಮರೂಪಕರ್ಮಗಳೂ ಇಲ್ಲದ ಪರಮಾರ್ಥವಾದ ಆತ್ಮವಸ್ತುವನ್ನು ತಿಳಿಸುವ ಜ್ಞಾನವು ಅಮೃತತ್ವಕ್ಕೆ ಸಾಧನವು. ಜ್ಞಾನಕ್ಕೂ ಗೌಣಫಲಕ್ಕೂ ಸಂಬಂಧವಿದೆಯೆಂದಾದರೆ (ಅದು) ಯಾವ ವಿಶೇಷವೂ ಇಲ್ಲದ ಆತ್ಮವಸ್ತುವನ್ನು ಹೇಳುವದೆಂಬುದು ಹೊಂದುವದಿಲ್ಲ.[4] ಆದರೆ ಅದು[5] ಇಷ್ಟವಲ್ಲ. ಏಕೆಂದರೆ **ವಾಜಸನೇಯಿ ಬ್ರಾಹ್ಮಣದಲ್ಲಿ** "ಆದರೆ ಎಲ್ಲಿ ಇವನಿಗೆ ಸರ್ವವೂ ಆತ್ಮನೇ ಆಗಿರುವದೋ" (ಬೃ. ೪-೫-೧೫) ಎಂದು ಪ್ರಾರಂಭಿಸಿ ಜ್ಞಾನಿಗೆ ಕ್ರಿಯೆ, ಕಾರಕ, ಫಲ-ಮುಂತಾದ ಎಲ್ಲಾ ವ್ಯವಹಾರವನ್ನೂ ಅಲ್ಲಗಳೆದಿರುತ್ತದೆ. ಮತ್ತು ಅದಕ್ಕೆ ವಿರುದ್ಧವಾಗಿರುವ ಅಜ್ಞಾನಿಗೆ "ಎಲ್ಲಿ ದ್ವೈತವಿದ್ದಂತಿರುವದೋ ಅಲ್ಲಿ ಒಬ್ಬನು ಮತ್ತೊಬ್ಬನನ್ನು ಕಾಣುವನು" (ಬೃ. ೪-೫-೧೫) ಎಂದು ಕ್ರಿಯಾಕಾರಕಫಲರೂಪವಾಗಿರುವ ಸಂಸಾರವನ್ನು ಹೇಳಿರುತ್ತದೆ. ಅದರಂತೆ ಇಲ್ಲಿಯೂ[6] ಸಂಸಾರವಿಷಯವಾದ, ಹಸಿವು ಮುಂತಾದವುಗಳಿರುವ ವಸ್ತುವಿನ ರೂಪನಾದ,[7] ದೇವತಾಪ್ಯಯವೆಂಬ ಫಲವಿದೆಯಲ್ಲ, ಅದನ್ನು

---

1. ಐ. ಅ. ೨-೨-೪ರಲ್ಲಿ.

2. "ಸಂಭೂಯ ದೇವತಾ ಅಪ್ಯೇತಿ" ಎಂಬ ದೇವತಾಪ್ರಾಪ್ತಿಫಲವು. ದೇವತೆಗಳೆಲ್ಲ ಸಂಸಾರದಲ್ಲಿ ಬಿದ್ದರೆಂದು ಉಪನಿಷತ್ತಿನಲ್ಲಿ ಹೇಳಿರುತ್ತದೆ.

3. ಅಗ್ನಿಯೇ ಮುಂತಾದ ದೇವತೆಗಳನ್ನು ಉಪಾಸನೆಮಾಡಿದ್ದರ ಫಲವನ್ನು ಅಲ್ಲಿ ಹೇಳಿರುತ್ತದೆ; ದೇವತಾಸಮಷ್ಟಿರೂಪನಾದ ಪ್ರಾಣನೆಂಬ ಪರಮಾತ್ಮನ ಜ್ಞಾನವನ್ನು ಮುಕ್ತಿಗಾಗಿ ಇಲ್ಲಿ ಹೇಳಿದೆ ಎಂದು ಪೂರ್ವಪಕ್ಷಿಯ ಭಾವ.

4. ಸವಿಶೇಷವಸ್ತುಜ್ಞಾನವೂ ನಿರ್ವಿಶೇಷವಸ್ತುಜ್ಞಾನವೂ ಒಂದೇ ಆಗಲಾರದೆಂದು ಭಾವ.

5. ಆತ್ಮಜ್ಞಾನವು ನಿರ್ವಿಶೇಷವಸ್ತುವನ್ನು ತಿಳಿಸುವದಿಲ್ಲವೆಂಬುದು.

6. ಎಲ್ಲಾ ಉಪನಿಷತ್ತುಗಳಲ್ಲಿಯೂ ಅಜ್ಞಾನದೃಷ್ಟಿಯಿಂದ ಸಂಸಾರವಿಷಯವಾದ ಸವಿಶೇಷವಸ್ತುವನ್ನೂ ಜ್ಞಾನದೃಷ್ಟಿಯಿಂದ ನಿರ್ವಿಶೇಷವಸ್ತುವನ್ನೂ ಬೋಧಿಸುತ್ತದೆ.

7. ದೇವತೆಗಳಿಗೆ ಹಸಿವು ಮುಂತಾದವುಗಳುಂಟೆಂದು ಉಪನಿಷತ್ತಿನಲ್ಲಿ ಹೇಳಿರುವದರಿಂದ ದೇವತಾಪ್ಯಯವು ಅಜ್ಞಾನಕೃತಸಂಸಾರವಿಷಯವೇ ಆಯಿತು.

ಉಪಸಂಹಾರಮಾಡಿ ಬರಿಯ[1] ಸರ್ವಾತ್ಮಕವಸ್ತುವನ್ನು ತಿಳಿಸುವ ಜ್ಞಾನವನ್ನು ಅಮೃತತ್ವಕ್ಕಾಗಿ ಹೇಳೋಣವೆಂದು (ಶ್ರುತಿಯು) ಹೊರಟಿರುತ್ತದೆ.

## (ಎ) ಋಣತ್ರಯಶ್ರುತಿಯ ಗತಿ

(ಭಾಷ್ಯ)

೨೦. ಋಣಪ್ರತಿಬನ್ಧಶ್ಚಾವಿದುಷ ಏವ ಮನುಷ್ಯಪಿತೃದೇವಲೋಕಪ್ರಾಪ್ತಿಂ ಪ್ರತಿ, ನ ವಿದುಷಃ । ಸೋಽಯಂ ಮನುಷ್ಯಲೋಕಃ ಪುತ್ರೇಣೈವ" (ಬೃ. ೧-೫-೧೬) ಇತ್ಯಾದಿಲೋಕತ್ರಯಸಾಧನನಿಯಮಶ್ರುತೇಃ । ವಿದುಷಶ್ಚ ಋಣಪ್ರತಿಬನ್ಧಾಭಾವೋ ದರ್ಶಿತ ಆತ್ಮಲೋಕಾರ್ಥಿನಃ "ಕಿಂ ಪ್ರಜಯಾ ಕರಿಷ್ಯಾಮಃ" (ಬೃ. ೪-೪-೨೨) ಇತ್ಯಾದಿನಾ । ತಥಾ "ಏತದ್ಧ ಸ್ಮ ವೈ ತದ್ವಿದ್ವಾಂಸ ಆಹುರ್ಋಷಯಃ ಕಾವಷೇಯಾಃ" (೩-೨-೬) ಇತ್ಯಾದಿ । "ಏತದ್ಧ ಸ್ಮ ವೈ ತ[2]ತ್ಪೂರ್ವೇ ವಿದ್ವಾಂಸೋಽಗ್ನಿಹೋತ್ರಂ ಜುಹವಾಂ ಚಕ್ರುಃ" (ಕೌ. ೨-೫) ಇತಿ ಚ ಕೌಷೀತಕಿನಾಮ್ ॥

(ಭಾಷ್ಯಾರ್ಥ)

ಋಣಗಳ ಅಡ್ಡಿ ಎಂಬುದು ಮನುಷ್ಯಲೋಕ, ಪಿತೃಲೋಕ, ದೇವಲೋಕ–ಇವುಗಳ ಪ್ರಾಪ್ತಿ. ಇದು ಅಜ್ಞಾನಿಗೇ ಹೊರತು ಜ್ಞಾನಿಗೆ ಅಲ್ಲ. "ಆ ಈ ಮನುಷ್ಯ ಲೋಕವು ಮಗನಿಂದಲೇ (ಗೆಲ್ಲತಕ್ಕದ್ದು)'' (ಬೃ. ೧-೫-೧೬) ಎಂದು ಮುಂತಾಗಿ (ಈ) ಮೂರು ಲೋಕಗಳಿಗೇ (ಇವು) ಸಾಧನವೆಂದು ಗೊತ್ತುಪಡಿಸಿರುವ ಶ್ರುತಿಯು ಇದಕ್ಕೆ ಪ್ರಮಾಣವು.[3] ಆತ್ಮನೆಂಬ[4] ಲೋಕವನ್ನು ಬಯಸುವ ಜ್ಞಾನಿಗೆ ಋಣಗಳ ಅಡ್ಡಿಯಿಲ್ಲವೆಂಬುದನ್ನು "ಪ್ರಜೆಯಿಂದ ನಾವು ಏನು ಮಾಡಬೇಕಾಗಿದೆ?" (ಬೃ. ೪-೪-೨೨) ಮುಂತಾದ ವಾಕ್ಯದಿಂದ ತೋರಿಸಿಕೊಟ್ಟಿರುತ್ತದೆ. ಮತ್ತು ಇದನ್ನರಿತ

---

1. ಕೇವಲಾತ್ಮವಸ್ತುವನ್ನು ಉಪನಿಷತ್ತು ಹೇಳುವದೆಂದು ಒಪ್ಪಿದರೂ ಅದರ ಜ್ಞಾನವು ಕರ್ಮಿಗೇ ಎಂದು ಪೂರ್ವಪಕ್ಷಿಯು ಹೇಳಿದ್ದನಷ್ಟೆ. ನಿರ್ವಿಶೇಷಸವಿಶೇಷಭೇದ ದಿಂದ ಆತ್ಮಜ್ಞಾನವು ಎರಡು ಬಗೆಯೆಂದೂ ನಿರ್ವಿಶೇಷಾತ್ಮಜ್ಞಾನವು ಕರ್ಮಕ್ಕೆ ಸಂಬಂಧ ಪಟ್ಟದ್ದಲ್ಲ, ಸಂನ್ಯಾಸಿಗೇ ಹೇಳಿದ್ದು–ಎಂದೂ ಸಿದ್ಧಾಂತಿಯು ತೋರಿಸಿಕೊಟ್ಟಿರುತ್ತಾನೆ.

2. ತತ್ ಎಂಬುದು ಇಲ್ಲದ ಪಾಠಾಂತರವೂ ಉಂಟು.

3. ಪಿತೃಋಣವೇ ಮುಂತಾದ ಮೂರು ಋಣಗಳನ್ನು ತೀರಿಸಿದರೆ ಮಾತ್ರ ಮನುಷ್ಯ ಲೋಕವೇ ಮುಂತಾದವುಗಳಲ್ಲಿ ಭೋಗವು ಪ್ರಾಪ್ತವಾಗುತ್ತದೆ ಎಂಬುದು ಶ್ರುತಿಯ ಅಭಿಪ್ರಾಯವೆಂದು ಭಾವ. ಈ ಲೋಕಕಾಮಿಗಳಿಗೆ ಸಂನ್ಯಾಸಾಧಿಕಾರವಿಲ್ಲ. ಬೃ. ಭಾ. ೪-೪-೨೨. ಋಣವು ಅಜ್ಞರಿಗೆ ಮಾತ್ರ ಎಂಬುದಕ್ಕೆ ಬೃ. ಭಾ. ೧-೪-೧೦ ನೋಡಿ.

4. ಆತ್ಮನೇ ಎಲ್ಲಾ ಲೋಕವೂ ಆಗಿರುತ್ತಾನೆ, ತನಗಿಂತ ಬೇರೆಯಾಗಿ ಪಡೆಯ ಬೇಕಾಗಿರುವ ಲೋಕವಿಲ್ಲ ಎಂಬವನಿಗೆ ಯಾವ ಸಾಧನವೂ ಬೇಡ. ಏಕೆಂದರೆ ಆತ್ಮನು ನಿತ್ಯಪ್ರಾಪ್ತನಾಗಿರುತ್ತಾನೆ. ಬೃ. ೪-೪-೨೨.

**ಕಾವಷೇಯರು** ಋಷಿಗಳು ಹೇಳುವದೇನೆಂದರೆ (ನಾವು ಏತಕ್ಕಾಗಿ ಅಧ್ಯಯನಮಾಡ ಬೇಕಾಗಿದೆ? (೩-೨.೬) ಎಂದು ಮುಂತಾಗಿಯೂ (ಶ್ರುತಿಯಲ್ಲಿ ಹೇಳಿರುತ್ತದೆ.) "ಇದನ್ನರಿತದ್ದರಿಂದಲೇ ಹಿಂದಿನ ಜ್ಞಾನಿಗಳು ಈ ಅಗ್ನಿಹೋತ್ರವನ್ನೇ ಹೋಮಮಾಡುತ್ತಿದ್ದರು (ಕೌ. ೨-೫)[1] ಎಂದು ಕೌಷೀತಕಿಗಳ ಶ್ರುತಿಯಲ್ಲಿರುತ್ತದೆ.

(ಭಾಷ್ಯ)

೨೧. ಅವಿದುಷಸ್ತರ್ಹಿ ಋಣಾನಪಾಕರಣೇ ಪಾರಿವ್ರಾಜ್ಯಾನುಪಪತ್ತಿಃ ಇತಿ ಚೇತ್ । ನ । ಪ್ರಾಗ್ಗಾರ್ಹಸ್ಥ್ಯಪ್ರತಿಪತ್ತೇರೃಣಿತ್ವಾಸಮ್ಭವಾತ್ । ಅಧಿಕಾರಾನಾರೂಢೋಽಪಿ ಋಣೀ ಚೇತ್ ಸ್ಯಾತ್ ಸರ್ವಸ್ಯ ಋಣಿತ್ವಮ್ ಇತ್ಯನಿಷ್ಟಂ ಪ್ರಸಜ್ಯೇತ । ಪ್ರತಿಪನ್ನಗಾರ್ಹಸ್ಥ್ಯಸ್ಯಾಪಿ "ಗೃಹಾದ್ವನೀ ಭೂತ್ವಾ ಪ್ರವ್ರಜೇತ್ । ಯದಿ ವೇತರಥಾ ಬ್ರಹ್ಮಚರ್ಯಾದೇವ ಪ್ರವ್ರಜೇತ್ । ಗೃಹಾದ್ವಾ ವನಾದ್ವಾ" (ಜಾ. ೪) ಇತ್ಯಾತ್ಮದರ್ಶನಸಾಧನೋಪಾಯತ್ವೇನ ಇಷ್ಯತ ಏವ ಪಾರಿವ್ರಾಜ್ಯಮ್ ॥

(ಭಾಷ್ಯಾರ್ಥ)

(ಆಕ್ಷೇಪ) :—ಹಾಗಾದರೆ ಜ್ಞಾನಿಯಲ್ಲದವನು ಋಣಗಳನ್ನು ತೀರಿಸಿಕೊಳ್ಳದೆ ಇದ್ದರೆ (ಅವನಿಗೆ) ಸಂನ್ಯಾಸವು ಸರಿಯಾಗುವದಿಲ್ಲವಷ್ಟೆ?

(ಪರಿಹಾರ) :—ಇಲ್ಲ. ಏಕೆಂದರೆ ಗೃಹಸ್ಥಾಶ್ರಮವನ್ನು ಪಡೆಯುವದಕ್ಕೆ ಮೊದಲು ಅವನು ಋಣಿಯಾಗಿರಲಾರನು. (ಕರ್ಮಕ್ಕೆ) ಅಧಿಕಾರವನ್ನು ಹೊಂದದೆ ಇರುವವನೂ ಋಣಿಯಾದರೆ ಪ್ರತಿಯೊಬ್ಬನೂ[2] ಋಣಿಯೇ ಎಂಬ ಅನಿಷ್ಟವು ಬಂದೊದಗುವದು. ಗೃಹಸ್ಥಾಶ್ರಮವನ್ನು ಪಡೆದುಕೊಂಡಿರುವವನುಕೂಡ "ಮನೆಯಿಂದ ಹೊರಟು[3] ವಾನಪ್ರಸ್ಥನಾಗಿ ಸಂನ್ಯಾಸಿಯಾಗಬೇಕು. ಅಥವಾ ಮತ್ತೊಂದು

---

1. ಪ್ರಾಣದಲ್ಲಿ ವಾಕ್ಕು, ವಾಕ್ಕಿನಲ್ಲಿ ಪ್ರಾಣ—ಇವನ್ನು ಹೋಮಮಾಡುವ ಸಂತತವಾದ ಅಗ್ನಿಹೋತ್ರವನ್ನೇ ಮಾಡುತ್ತಿದ್ದರು. "ನ ಜುಹವಾಂ ಚಕ್ರುಃ" ಎಂದು ನಕಾರಯುಕ್ತಪಾಠವು ಅಚ್ಚಿನ ಪುಸ್ತಕಗಳಲ್ಲಿ ತಪ್ಪಾಗಿ ಬಿದ್ದಿದೆ. ಅಂತವಂತವಾದ ಫಲವುಳ್ಳ ಅಗ್ನಿಹೋತ್ರವನ್ನು ಅವರು ಮಾಡುತ್ತಿರಲಿಲ್ಲ ಎಂಬುದು ಆರ್ಥಿಕಾರ್ಥವು, ಅಕ್ಷರಾರ್ಥವಲ್ಲ.

2. ಬ್ರಹ್ಮಚಾರಿ, ಸಂನ್ಯಾಸಿ—ಇವರೇ ಅಲ್ಲದೆ ವರ್ಣಾಶ್ರಮಕ್ಕೆ ಕಟ್ಟುಬೀಳದವರು ಕೂಡ ಋಣಿಗಳು ಎಂದಾಗುತ್ತದೆ. ಅಜ್ಞಾನಿಗಳಿಗೂ ಸಂನ್ಯಾಸವುಂಟೆಂಬ ಬಗ್ಗೆ ಬೃ. ಭಾ. ೪-೫-೧೫ ನೋಡಿ.

3. ಈಗ ಅಚ್ಚಾಗಿರುವ ಕೆಲವು ಪುಸ್ತಕಗಳಲ್ಲಿ "ಗೃಹಾದ್ವನೀಭೂತ್ವಾ" ಎಂಬುದರ ಬದಲು "ಗೃಹೀಭೂತ್ವಾ ವನೀ ಭವೇತ್, ವನೀಭೂತ್ವಾ ಪ್ರವ್ರಜೇತ್" ಎಂದಿದೆ. ಬ್ರ. ಸೂ. ೩-೪-೨೦ರ ಭಾಷ್ಯದಲ್ಲಿ ಆ ಪಾಠವನ್ನೇ ಉದಾಹರಿಸಿರುವದರಿಂದ ಈ ಪಾಠವನ್ನು ಲೇಖಕರು ಬರೆದುಕೊಂಡಿರುವಂತೆ ತೋರುತ್ತದೆ. ಗೃಹಸ್ಥಾಶ್ರಮದಿಂದ ವಾನಪ್ರಸ್ಥಾಶ್ರಮವನ್ನು ಪಡೆದಾಗಲಿ ನೇರಾಗಿಯೇ ಆಗಲಿ ಸಂನ್ಯಾಸಾಶ್ರಮವನ್ನು ಹೊಂದಬೇಕು—ಎಂದು ಶ್ರುತಿಯಲ್ಲಿರುವದರಿಂದ ವಿರಕ್ತನಾದವನಿಗೆ ಋಣತ್ರಯದ ಹಂಗಿಲ್ಲದೆ ಸಂನ್ಯಾಸಿಯಾಗುವ ಅಧಿಕಾರವಿದೆ ಎಂದಾಯಿತೆಂದು ಭಾವ.

ರೀತಿಯಿಂದಲೂ (ಆಗಬಹುದು), ಎಂದರೆ ಬ್ರಹ್ಮಚರ್ಯದಿಂದಲೇ ಸಂನ್ಯಾಸಿಯಾಗಬೇಕು ; ಮನೆಯಿಂದಲಾಗಲಿ ವನದಿಂದಲಾಗಲಿ ಹೊರಟು ಸಂನ್ಯಾಸಿಯಾಗಬೇಕು." (ಜಾ. ೪) ಎಂಧು ಆತ್ಮದರ್ಶನದ ಸಾಧನಕ್ಕೆ ಉಪಾಯವಾಗಿ[1] ಸಂನ್ಯಾಸವು ಬೇಕೇ ಆಗಿರುತ್ತದೆ.

## ಯಾವಜ್ಜೀವಾದಿಶ್ರುತಿಯ ಗತಿ

(ಭಾಷ್ಯ)

೨೨. ಯಾವಜ್ಜೀವಾದಿಶ್ರುತೀನಾಮ್ ಅವಿದ್ವದಮುಮುಕ್ಷುವಿಷಯೇ ಕೃತಾರ್ಥತಾ । ಛಾನ್ದೋಗ್ಯೇ ಚ ಕೇಷಾಂಚಿತ್ ದ್ವಾದಶರಾತ್ರಮ್ ಅಗ್ನಿಹೋತ್ರಂ ಹುತ್ವಾ ತತ ಊರ್ಧ್ವಂ ಪರಿತ್ಯಾಗಃ ಶ್ರೂಯತೇ ॥

(ಭಾಷ್ಯಾರ್ಥ)

"ಬದುಕಿರುವವರೆಗೂ (ಅಗ್ನಿಹೋತ್ರವನ್ನು ಮಾಡಬೇಕು)" ಎಂದು ಮುಂತಾಗಿರುವ[2] ಶ್ರುತಿಗಳು ಅಜ್ಞಾನಿಗಳೂ ಅಮುಮುಕ್ಷುಗಳೂ ಆಗಿರುವವರ ವಿಷಯದಲ್ಲಿ ಸಾರ್ಥಕವಾಗಿರುತ್ತವೆ. ಛಾಂದೋಗ್ಯದಲ್ಲಿ ಕೆಲವು (ಶಾಖೆಯವರಿಗೆ) ಹನ್ನೆರಡು ರಾತ್ರಿಗಳವರೆಗೆ ಅಗ್ನಿಹೋತ್ರವನ್ನು ಹೋಮಮಾಡಿ ಅಲ್ಲಿಂದ ಮುಂದಕ್ಕೆ ಬಿಟ್ಟುಬಿಡಬೇಕು[3] ಎಂದು ಹೇಳಿರುತ್ತದೆ.

## (೬) ಸಂನ್ಯಾಸವು ಅನಧಿಕಾರಿಗಳಿಗೆ ಎಂಬುದು ಸರಿಯಲ್ಲ

(ಭಾಷ್ಯ)

೨೩. ಯತ್ತು ಅನಧಿಕೃತಾನಾಂ ಪಾರಿವ್ರಾಜ್ಯಮ್ ಇತಿ । ತನ್ನ । ತೇಷಾಂ ಪೃಥಗೇವ "ಉತ್ಸನ್ನಾಗ್ನಿರನಗ್ನಿಕೋ ವಾ" (ಜಾ. ೪) ಇತ್ಯಾದಿಶ್ರವಣಾತ್ । ಸರ್ವಸ್ಮೃತಿಷು ಚ ಅವಿಶೇಷೇಣ ಆಶ್ರಮವಿಕಲ್ಪಃ ಪ್ರಸಿದ್ಧಃ, ಸಮುಚ್ಚಯಶ್ಚ ॥

(ಭಾಷ್ಯಾರ್ಥ)

ಕರ್ಮಕ್ಕೆ ಅಧಿಕಾರವಿಲ್ಲದಿರುವವರಿಗೇ ಸಂನ್ಯಾಸವು ಎಂದು (ಪೂರ್ವಪಕ್ಷಿಯು) ಹೇಳಿದ್ದನಷ್ಟೆ, ಅದು ಸರಿಯಲ್ಲ. ಏಕೆಂದರೆ ಆ (ಅನಧಿಕಾರಿಗಳ ವಿಷಯದಲ್ಲಿ) "ಅಗ್ನಿಯನ್ನು ಕಳೆದುಕೊಂಡವನು, ಅಥವಾ ಅಗ್ನಿಯನ್ನು ಇಡದೆ ಇರುವವನು"

---

1. ಪರಿಪಕ್ವವಾದ ಆತ್ಮಜ್ಞಾನವುಂಟಾಗುವದಕ್ಕೆ ಸಂನ್ಯಾಸವು ಉಪಾಯವು. ಬೃ. ಭಾ. ೪-೪-೭, ಗೀ. ಭಾ. ೧೮-೫೫, ಸೂ. ಭಾ. ೩-೪-೨೦.

2. "ಯಜ್ಞಪಾತ್ರಗಳೊಡನೆ ಅವನನ್ನು ಸುಡಬೇಕು" ಮುಂತಾದ.

3. ಇದು ಉಪನಿಷತ್ತಿನಲ್ಲಿಲ್ಲ. ವ್ಯಾಖ್ಯಾನದಲ್ಲಿ "ತ್ರಯೋದಶರಾತ್ರಮಹತವಾಸಾಃ ಯಜಮಾನಃ ಸ್ವಯಮಗ್ನಿಹೋತ್ರಂ ಜುಹುಯಾದಪ್ರವಸನ್ನ ತತ್ರೈವ ಸೋಮೇನ ಪಶುನಾ ವೇಷ್ಟ್ವಾಽಗ್ನೀನುತ್ಸೃಜತಿ" ಎಂಬ ವಾಕ್ಯವನ್ನು ಉದಾಹರಿಸಿದೆ. ಅದು ಬ್ರಾಹ್ಮಣದಲ್ಲಿದೆಯೋ ಏನೋ. ಈ ವಾಕ್ಯದಲ್ಲಿ 'ಅಪ್ರವಸನ್ನ' ಎಂಬಲ್ಲಿ ನಕಾರವು ಹೆಚ್ಚೆಂದು ತೋರುತ್ತದೆ.

(ಜಾ. ೪) ಎಂದು ಮುಂತಾಗಿ ಬೇರೆಯಾಗಿಯೇ ಶ್ರುತಿಯಿರುತ್ತದೆ. ಮತ್ತು ಎಲ್ಲಾ ಸ್ಮೃತಿಗಳಲ್ಲಿಯೂ ಆಶ್ರಮವಿಕಲ್ಪವನ್ನೂ[1] (ಆಶ್ರಮ) ಸಮುಚ್ಚಯವನ್ನೂ[2] ಎಲ್ಲರಿಗೂ[3] ಹೇಳಿರುತ್ತದೆ.

## (೬) ಜ್ಞಾನಿಗೆ ಸಂನ್ಯಾಸವೊಂದೇ ಹೊಂದುತ್ತದೆ

(ಭಾಷ್ಯ)

೨೪. ಯತ್ತು ವಿದುಷೋಽರ್ಥಪ್ರಾಪ್ತಂ ವ್ಯುತ್ಥಾನಮಿತ್ಯಶಾಸ್ತ್ರಾರ್ಥತ್ವೇ ಗೃಹೇ ವನೇ ವಾ ತಿಷ್ಠತೋ ನ ವಿಶೇಷಃ ಇತಿ । ತದಸತ್ । ವ್ಯುತ್ಥಾನಸ್ಯೈವ ಅರ್ಥಪ್ರಾಪ್ತತ್ವಾತ್ ನಾನ್ಯತ್ರಾವಸ್ಥಾನಂ ಸ್ಯಾತ್ । ಅನ್ಯತ್ರಾವಸ್ಥಾನಸ್ಯ ಕಾಮಕರ್ಮಪ್ರಯುಕ್ತತ್ವಂ ಹ್ಯವೋಚಾಮ, ತದಭಾವಮಾತ್ರಂ ವ್ಯುತ್ಥಾನಮ್ ಇತಿ ಚ ॥

(ಭಾಷ್ಯಾರ್ಥ)

ಜ್ಞಾನಿಗೆ ಸಂನ್ಯಾಸವೆಂಬುದು ತಾನೇ ಒದಗುವದರಿಂದ (ಅದು) ಶಾಸ್ತ್ರಾರ್ಥವಾಗಲಿಲ್ಲವಾಗಿ[4] (ಅವನು) ಮನೆಯಲ್ಲಿದ್ದರೂ ಅರಣ್ಯದಲ್ಲಿದ್ದರೂ[5] (ಅದರಲ್ಲಿ) ಹೆಚ್ಚು ಕಡಿಮೆಯಾಗಲಾರದು–ಎಂದು (ಪೂರ್ವಪಕ್ಷಿ) ಹೇಳಿದ್ದನಷ್ಟೆ. ಅದು ಸರಿಯಲ್ಲ. ಏಕೆಂದರೆ ಸಂನ್ಯಾಸವೇ[6] ಒದಗುವದರಿಂದ ಮತ್ತೊಂದು ಕಡೆಯಲ್ಲಿ[7] ಇರುವದೆಂಬುದು ಆಗಲಾರದು. ಮತ್ತೊಂದು ಕಡೆಯಲ್ಲಿರುವದೆಂಬುದು ಕಾಮ (ಕರ್ಮ)[8]ವೆಂಬ ನಿಮಿತ್ತದಿಂದಾದದ್ದು ಎಂದು ಹಿಂದೆ (೧೪) ಹೇಳಿರುತ್ತೇವೆ. ಆ (ಕಾಮ) ವಿಲ್ಲದಿರುವದೇ ಸಂನ್ಯಾಸವೆಂದೂ (ಅಲ್ಲಿ) ಹೇಳಿರುತ್ತದೆ.

---

1. ಸಂನ್ಯಾಸವನ್ನು ಯಾವ ಆಶ್ರಮದಿಂದಲಾದರೂ ತೆಗೆದುಕೊಳ್ಳಬಹುದೆಂಬುದು ವಿಕಲ್ಪ.
2. ಆಶ್ರಮಗಳನ್ನು ಒಂದೊಂದಾಗಿಯೇ ತೆಗೆದುಕೊಳ್ಳಬೇಕೆಂಬುದು ಸಮುಚ್ಚಯ.
3. ಕರ್ಮಕ್ಕೆ ಅಧಿಕಾರಿಗಳಲ್ಲದವರಿಗೂ ಅಧಿಕಾರಿಗಳಾದವರಿಗೂ (ಆ. ಧ. ೨-೯-೨೧-೨, ೫); ಗೌ. ಧ. ೧-೩-೧; ಮನು. ೬-೮೮ ಮುಂತಾದ ಸ್ಮೃತಿಗಳಲ್ಲಿ ವಿರಕ್ತರಿಗೆ ಸಂನ್ಯಾಸವನ್ನು ಹೇಳಿದೆ.
4. ಶಬ್ದದ ಅರ್ಥದಿಂದ ಹೊರಡುವ ಅರ್ಥವು ಶಾಸ್ತ್ರಾರ್ಥವಲ್ಲ, ಶಬ್ದದ ನೇರಾದ ಅರ್ಥವೇ ಶಾಸ್ತ್ರಾರ್ಥ ಎಂದು ಮೀಮಾಂಸಕರೆನ್ನುವರು.
5. ಗೃಹಸ್ಥನಾಗಿದ್ದರೂ ಸಂನ್ಯಾಸಿಯಾಗಿದ್ದರೂ. ಈ ಪೂರ್ವಪಕ್ಷವನ್ನು ೧೪ರಲ್ಲಿ ಮಾಡಿ ಪರಿಹಾರವನ್ನು ಹೇಳಿತ್ತು. ಉಪಸಂಹಾರಕ್ಕಾಗಿ ಅದನ್ನೂ ಇಲ್ಲಿ ಹೇಳಿಕೊಂಡಿರುತ್ತದೆ.
6. ಕಾಮವಿಲ್ಲದವನಿಗೆ ಗಾರ್ಹಸ್ಥ್ಯವಾಗಲಿ ಆಶ್ರಮಾಂತರವಾಗಲಿ ಹೊಂದುವದಿಲ್ಲ, ವಿಧಿಯಿಲ್ಲದಿದ್ದರೂ ಸಂನ್ಯಾಸವೇ ಹೊಂದುತ್ತದೆ–ಎಂಬ ಪರಿಹಾರದ ಅನುವಾದವಿದು.
7. ಇನ್ನೊಂದು ಆಶ್ರಮದಲ್ಲಿ.
8. ಕರ್ಮವೆಂಬ ಮಾತು ಇಲ್ಲಿ ಅನವಶ್ಯ. ಹಿಂದೆ ಇದನ್ನು ಹೇಳಿಯೂ ಇಲ್ಲ.

(ಭಾಷ್ಯ)

೨೫. ಯಥಾಕಾಮಿತ್ವಂ ತು ವಿದುಷೋಽತ್ಯನ್ತಮ್ ಅಪ್ರಾಪ್ತಮ್ । ಅತ್ಯನ್ತಮೂಢವಿಷಯತ್ವೇನಾವಗಮಾತ್ । ತಥಾ ಶಾಸ್ತ್ರಚೋದಿತಮಪಿ ಕರ್ಮ ಆತ್ಮವಿದೋಽಪ್ರಾಪ್ತಂ ಗುರುಭಾರತಯಾ ಅವಗಮ್ಯತೇ । ಕಿಮುತ ಅತ್ಯನ್ತಾವಿವೇಕನಿಮಿತ್ತಂ ಯಥಾಕಾಮಿತ್ವಮ್ । ನಹ್ಯುನ್ಮಾದತಿಮಿರದೃಷ್ಟ್ಯುಪಲಬ್ಧಂ ವಸ್ತು ತದಪಗಮೇಽಪಿ ತಥೈವ ಸ್ಯಾತ್ । ಉನ್ಮಾದತಿಮಿರದೃಷ್ಟಿನಿಮಿತ್ತತ್ವಾದೇವ ತಸ್ಯ । ತಸ್ಮಾತ್ ಆತ್ಮವಿದೋ ವ್ಯುತ್ಥಾನವ್ಯತಿರೇಕೇಣ ನ ಯಥಾಕಾಮಿತ್ವಮ್ । ನ ಚಾನ್ಯತ್ ಕರ್ತವ್ಯಮ್ ಇತ್ಯೇತ್ ಸಿದ್ಧಮ್ ॥

(ಭಾಷ್ಯಾರ್ಥ)

ಜ್ಞಾನಿಯು ಇಚ್ಛೆಬಂದಂತೆ ನಡೆಯಬಹುದು ಎಂಬುದಂತೂ ತೀರ ಹೊಂದುವದಿಲ್ಲ. ಏಕೆಂದರೆ (ಹಾಗೆ ನಡೆಯುವದೆಂಬುದು) ಅತ್ಯಂತ ಮೂಢನ ವಿಷಯವೆಂದು ನಿಶ್ಚಯವಾಗಿರುತ್ತದೆ. ಹಾಗೆ[1] ಶಾಸ್ತ್ರದಲ್ಲಿ ವಿಧಿಸಿರುವ ಕರ್ಮವು (ಕೂಡ) ಆತ್ಮಜ್ಞಾನಿಗೆ ಬಲು ಭಾರವೆಂದು ನಿಶ್ಚಯವಾಗಿಬಿಟ್ಟಿರುತ್ತದೆ. ಹೀಗಿರುವಲ್ಲಿ ತೀರ ಅವಿವೇಕದ ನಿಮಿತ್ತದಿಂದ (ಆಗುವ)[2] ಸ್ವೇಚ್ಛಾವಿಹಾರದ ವಿಷಯದಲ್ಲಿ ಹೇಳತಕ್ಕದ್ದೇನಿದೆ? ಸನ್ನಿ, ಕಣ್ಣುಪರೆ–ಇವುಗಳಿರುವಾಗ ಕಾಣುವ ವಸ್ತು ಅವು ಹೋದರೂ ಹಾಗೆಯೇ ಇರಲಾರದು ; ಏಕೆಂದರೆ ಅದಕ್ಕೆ ಸನ್ನಿ, ಕಣ್ಣುಪರೆ–ಇವೇ ನಿಮಿತ್ತವಾಗಿರುತ್ತವೆ. ಆದ್ದರಿಂದ ಆತ್ಮಜ್ಞಾನಿಗೆ ಸಂನ್ಯಾಸವೊಂದನ್ನು ಬಿಟ್ಟು ಸ್ವೇಚ್ಛೆಯಿಂದ ನಡೆಯುವದಾಗಲಾರದು, ಮತ್ತೇನಾದರೂ ಕರ್ತವ್ಯವೂ ಇರಲಾರದು ಎಂಬುದು ಸಿದ್ಧವಾಯಿತು.

## (ಔ) ಶ್ರುತಿಗೆ ಜ್ಞಾನಕರ್ಮಸಮುಚ್ಚಯವಾದದಲ್ಲಿ ತಾತ್ಪರ್ಯವಿಲ್ಲ

(ಭಾಷ್ಯ)

೨೬. ಯತ್ತು "ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋಭಯಗ್ಂ ಸಹ । (ಈ. ಮಾ. ೧೪) ಇತಿ । ನ ತತ್ರ ವಿದ್ಯಾವತೋ ವಿದ್ಯಯಾ ಸಹ ಅವಿದ್ಯಾಪಿ ವರ್ತತೇ ಇತ್ಯಯಮರ್ಥಃ । ಕಸ್ತರ್ಹಿ? ಏಕಸ್ಮಿನ್ ಪುರುಷೇ ಏಕದೈವ ನ ಸಹ

---

1. ಮಾಡದೆ ಇದ್ದರೆ ಪ್ರತ್ಯವಾಯ ಬರುವಂತೆ, ನಿತ್ಯವಾಗಿ.

2. ದೇಹಾದಿಗಳೇ ತಾನೆಂಬ ಅವಿವೇಕರೂಪವಾದ ಅಧ್ಯಾಸದಿಂದಲೇ ಸ್ವೇಚ್ಛಾವಿಹಾರವುಂಟಾಗುತ್ತದೆ. ದೇಹಕ್ಕಿಂತ ಬೇರೆಯಾದ ಕರ್ತೃವೆಂಬ ಅರಿವೂ ಅಜ್ಞಾನವೆಂದೆಣಿಸಿರುವ ಜ್ಞಾನಿಗೆ ದೇಹವೇ ತಾನೆಂಬ ಅರಿವು ಹೇಗೆ ಇದ್ದೀತು ?–ಎಂದು ಭಾವ.

ಸಮ್ಬುಧ್ಯೇಯಾತಾಮ್ ಇತ್ಯರ್ಥಃ । ಯಥಾ ಶುಕ್ತಿಕಾಯಾಂ ರಜತಶುಕ್ತಿಕಾಜ್ಞಾನೇ ಏಕಸ್ಯ ಪುರುಷಸ್ಯ । "ದೂರಮೇತೇ ವಿಪರೀತೇ ವಿಷೂಚೀ ಅವಿದ್ಯಾ ಯಾ ಚ ವಿದ್ಯೇತಿ ಜ್ಞಾತಾ" (ಕ. ೧-೨-೪) ಇತಿ ಹಿ ಕಾಠಕೇ । ತಸ್ಮಾತ್ ನ ವಿದ್ಯಾಯಾಂ ಸತ್ಯಾಮ್ ಅವಿದ್ಯಾಸಮ್ಭವೋಽಸ್ತಿ । "ತಪಸಾ ಬ್ರಹ್ಮ ವಿಜಿಜ್ಞಾಸಸ್ವ" (ತೈ. ೩-೨) ಇತ್ಯಾದಿಶ್ರುತೇಃ, ತಪಆದಿ ವಿದ್ಯೋತ್ಪತ್ತಿಸಾಧನಂ ಗುರೂಪದಸನಾದಿ ಚ ಕರ್ಮ ಅವಿದ್ಯಾತ್ಮಕತ್ವಾತ್ 'ಅವಿದ್ಯಾ' ಉಚ್ಯತೇ । ತೇನ ವಿದ್ಯಾಮ್ ಉತ್ಪಾದ್ಯ ಮೃತ್ಯುಂ ಕಾಮಮ್ ಅತಿತರತಿ । ತತೋ ನಿಷ್ಕಾಮಸ್ತ್ಯಕ್ತೈಷಣೋ ಬ್ರಹ್ಮವಿದ್ಯಯಾ ಅಮೃತತ್ವಮಶ್ನುತೇ ಇತ್ಯೇತಮರ್ಥಂ ದರ್ಶಯನ್ ಆಹ "ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಮೃತಮಶ್ನುತೇ" (ಈ. ಮಂ. ೧೪) ಇತಿ ॥

(ಭಾಷ್ಯಾರ್ಥ)

"ವಿದ್ಯೆಯನ್ನೂ ಅವಿದ್ಯೆಯನ್ನೂ ಎರಡನ್ನೂ ಒಟ್ಟಿಗೆ ಯಾವನು ಉಪಾಸನೆ ಮಾಡುವನೋ" (ಈ. ಮಾ. ೧೪) ಎಂಬ (ಶ್ರುತಿಯಿದೆಯೆಂದು ಪೂರ್ವಪಕ್ಷಿಯು) ಹೇಳಿದ್ದನಷ್ಟೆ; ಆದಕ್ಕೆ ಜ್ಞಾನಿಗೆ ಜ್ಞಾನದೊಡನೆ ಅಜ್ಞಾನವೂ ಇರುತ್ತದೆ ಎಂಬೀ ಅರ್ಥವಿಲ್ಲ. ಮತ್ತೇನೆಂದರೆ ಒಬ್ಬನೇ ಮನುಷ್ಯನಿಗೆ ಕಪ್ಪೆಯಚಿಪ್ಪಿನಲ್ಲಿ ಬೆಳ್ಳಿ, ಕಪ್ಪೆಯಚಿಪ್ಪು ಎಂಬ ಜ್ಞಾನಗಳೆರಡೂ (ಒಂದೇ ಕಾಲಕ್ಕೆ) ಹೇಗೆ (ಇರಲಾರವೋ) ಹಾಗೆ ಒಬ್ಬನೇ ಪುರುಷನಲ್ಲಿ ಒಂದೇ ಕಾಲದಲ್ಲಿ ಜೊತೆಯಲ್ಲಿ ಸೇರಿಕೊಂಡಿರಲಾರವು ಎಂದರ್ಥ. "(ಯಾವದು) ಅವಿದ್ಯೆಯೆಂದೂ ಯಾವದು ವಿದ್ಯೆಯೆಂದೂ ತಿಳಿಯು ಬರುವದೋ-ಈ ಎರಡೂ (ಒಂದಕ್ಕೊಂದು) ದೂರ, ಬೇರೆಬೇರೆಯ ಕಡೆಗೆ ಹೋಗುವವಾಗಿರುತ್ತವೆ." (ಕ. ೧-೨-೪) ಎಂದಲ್ಲವೆ, ಕಾಠಕದಲ್ಲಿದೆ? ಆದ್ದರಿಂದ ವಿದ್ಯೆಯಿರುವಾಗ ಅವಿದ್ಯೆಯಿರುವ ಸಂಭವವಿಲ್ಲ.[1] "ತಪಸ್ಸಿನಿಂದ ಬ್ರಹ್ಮವನ್ನು ತಿಳಿಯುವದಕ್ಕೆ ಇಚ್ಛಿಸು" (ತೈ. ೩-೨) ಎಂದು ಮುಂತಾಗಿರುವ[2] ಶ್ರುತಿಪ್ರಮಾಣದಿಂದ ತಪಸ್ಸೇ ಮುಂತಾದ ಜ್ಞಾನೋತ್ಪತ್ತಿಗೆ (ಕಾರಣವಾಗಿರುವ) ಸಾಧನವೂ ಗುರುವಿನ ಶುಶ್ರೂಷೆಯೇ ಮುಂತಾದ ಕರ್ಮವೂ[3] ಅವಿದ್ಯೆಯಿಂದ ಕಲ್ಪಿತವಾಗಿರುವದ

1. ಜ್ಞಾನಿಗೆ ಅವಿದ್ಯೆಯಿರಲೇ ಆರದೆಂಬುದನ್ನು ಈ. ಭಾ. ೧೮, ಬೃ.ಭಾ. ೧-೪-೧೦ ಸ್ಪಷ್ಟಪಡಿಸಿದೆ.

2. "ಗುರುವನ್ನೇ ಹೊಂದಬೇಕು" (ಮುಂ. ೧-೨-೧೨) ಮುಂತಾದ.

3. ಸತ್ಯ, ಬ್ರಹ್ಮಚರ್ಯ_ಮುಂತಾದ.

ರಿಂದ[1] ‘ ಅವಿದ್ಯೆ ’ ಎನಿಸುತ್ತದೆ. ಆದರಿಂದ ವಿವೇಕವನ್ನುಂಟುಮಾಡಿಕೊಂಡು[2] ಮೃತ್ಯುವನ್ನು ಎಂದರೆ ಕಾಮವನ್ನು ದಾಟುತ್ತಾನೆ. ಆಮೇಲೆ ಏಷಣೆಗಳನ್ನೆಲ್ಲ ಬಿಟ್ಟು ನಿಷ್ಕಾಮನಾಗಿ ಬ್ರಹ್ಮವಿದ್ಯೆಯಿಂದ ಅಮೃತತ್ವವನ್ನು ಪಡೆಯುತ್ತಾನೆ. ಹೀಗೆಂಬ ಅಭಿಪ್ರಾಯವನ್ನು ತಿಳಿಸುವದಕ್ಕಾಗಿ[3] (ಮಂತ್ರವು) “ ಅವಿದ್ಯೆಯಿಂದ ಮೃತ್ಯುವನ್ನು ದಾಟಿ, ವಿದ್ಯೆಯಿಂದ ಅಮೃತವನ್ನು ಪಡೆಯುತ್ತಾನೆ.’’ (ಈ. ಮಾ. ೧೪) ಎಂದು ಹೇಳುತ್ತದೆ.

## ಕೇವಲ ಜ್ಞಾನದ ಉಪಸಂಹಾರ

(ಭಾಷ್ಯ)

೨೭. ಯತ್ತು ಪುರುಷಾಯುಃ ಸರ್ವಂ ಕರ್ಮಣ್ಯೈವ ವ್ಯಾಪ್ತಂ “ ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಗ್ಂ ಸಮಾಃ ” (ಈ. ೨) ಇತಿ, ತದವಿದ್ವದ್ವಿಷಯತ್ವೇನ[3] ಪರಿಹೃತಮ್ । ಇತರಥಾ ಅಸಮ್ಭವಾತ್ । ಯತ್ತು ವಕ್ಷ್ಯಮಾಣಮಪಿ ಪೂರ್ವೋಕ್ತತುಲ್ಯತ್ವಾತ್ ಕರ್ಮಣಾವಿರುದ್ಧಮಾತ್ಮಜ್ಞಾನಮಿತಿ । ತತ್ ಸವಿಶೇಷನಿರ್ವಿಶೇಷಾತ್ಮವಿಷಯತಯಾ[4] ಪ್ರತ್ಯುಕ್ತಮ್ । ಉತ್ತರತ್ರ ವ್ಯಾಖ್ಯಾನೇ ಚ ದರ್ಶಯಿಷ್ಯಾಮಃ । ಅತಃ ಕೇವಲನಿಷ್ಕ್ರಿಯಬ್ರಹ್ಮಾತ್ಮೈಕತ್ವವಿದ್ಯಾಪ್ರದರ್ಶನಾರ್ಥಮುತ್ತರೋ ಗ್ರನ್ಥ ಆರಭ್ಯತೇ ॥

(ಭಾಷ್ಯಾರ್ಥ)

“ ಕರ್ಮಗಳನ್ನು ಮಾಡಿಕೊಂಡೇ ಇಲ್ಲಿ ನೂರು ವರ್ಷಗಳು ಬದುಕಿರಲೆಳಸಬೇಕು ” (ಈ. ೧) ಎಂದು ಮನುಷ್ಯನ ಆಯುಸ್ಸೆಲ್ಲ ಕರ್ಮದಿಂದಲೇ ವ್ಯಾಪ್ತವಾಗಿ

---

1. ತಾನು ಕರ್ತೃ, ಜ್ಞಾತೃ–ಎಂಬ ಅಧ್ಯಾಸದಿಂದೊಡಗೂಡಿದವನಿಗೆ ಮಾತ್ರ ಇರುವದರಿಂದ.

2. ಕರ್ಮದಿಂದ ವಿಷಯದೋಷವನ್ನು ಕಾಣುವ ವಿವೇಕವುಂಟಾಗಿ ಕಾಮರೂಪವಾದ ಮೃತ್ಯು ತೊಲಗುತ್ತದೆ–ಎಂಬುದೇ ಇಲ್ಲಿ ಭಾಷ್ಯಾಭಿಪ್ರಾಯವಾದ್ದರಿಂದ ‘ ವಿದ್ಯಾಮುತ್ಪಾದ್ಯ ’ ಎಂದರೆ ವಿವೇಕವನ್ನುಂಟುಮಾಡಿಕೊಂಡು ಎಂದರ್ಥವನ್ನು ಮಾಡುವದೇ ಯುಕ್ತ.

3. “ ವಿದ್ಯಾಂಚ ’’ ಎಂಬ ಶ್ರುತಿಗೆ ಈಶ ೧೧, ಮಾಂಡೂಕ್ಯಕಾರಿಕೆ ೩-೨೫ ಇವುಗಳ ಭಾಷ್ಯದಲ್ಲಿ ಕೊಟ್ಟಿರುವ ವ್ಯಾಖ್ಯಾನವನ್ನು ಇದರೊಡನೆ ಹೋಲಿಸಿರಿ.

4. ಇದು ವಾ॥ ಪಾಠ.

ಬಿಟ್ಟಿರುತ್ತದೆ–ಎಂದು (ಪೂರ್ವಪಕ್ಷಿಯು ೭ರಲ್ಲಿ) ಹೇಳಿದ್ದನಷ್ಟೆ, ಅದು ಅಜ್ಞಾನಿಯ ವಿಷಯವೆಂದು[1] ಹಿಂದೆ (೨೨) ಪರಿಹಾರಮಾಡಿದ್ದಾಗಿದೆ. ಹಾಗಿಲ್ಲದಿದ್ದರೆ ಅದು ಹೊಂದುವ ಹಾಗಿಲ್ಲವಾದ್ದರಿಂದ[2] (ನಮ್ಮ ಅಭಿಪ್ರಾಯವೇ ಸರಿ). ಮುಂದೆ ಬರುವ (ಗ್ರಂಥವೂ) ಹಿಂದೆ ಹೇಳಿದ್ದಕ್ಕೆ ಸಮಾನವಾಗಿರುವದರಿಂದ ಆತ್ಮಜ್ಞಾನವು ಕರ್ಮಕ್ಕೆ ವಿರುದ್ಧವಲ್ಲ ಎಂದು (ಪೂರ್ವಪಕ್ಷಿ ೫ರಲ್ಲಿ) ಹೇಳಿದ್ದನಷ್ಟೆ, ಅದಕ್ಕೆ (ಹಿಂದಿನ ಗ್ರಂಥವು) ಸವಿಶೇಷಾತ್ಮನ ವಿಷಯವಾಗಿಯೂ (ಮುಂದಿನದು) ನಿರ್ವಿಶೇಷಾತ್ಮನ ವಿಷಯವಾಗಿಯೂ ಇದೆ ಎಂದು (೧೯ರಲ್ಲಿ) ಉತ್ತರವನ್ನು ಹೇಳಿದ್ದಾಗಿರುತ್ತದೆ. ಮುಂದೆ (ಉಪನಿಷತ್ತಿನ) ವ್ಯಾಖ್ಯಾನದಲ್ಲಿಯೂ ಇದನ್ನು ತೋರಿಸಿಕೊಡುವೆವು.

ಆದ್ದರಿಂದ ಕ್ರಿಯಾಸಂಬಂಧವಿಲ್ಲದ ಬ್ರಹ್ಮಾತ್ಮನು ಒಬ್ಬನೇ ಎಂಬ ಜ್ಞಾನವನ್ನು ತಿಳಿಸುವದಕ್ಕಾಗಿಯೇ ಮುಂದಿನ ಗ್ರಂಥವನ್ನು ಆರಂಭಿಸಿರುತ್ತದೆ (ಎಂಬುದೇ ಸಿದ್ಧಾಂತವು).



1. ಆತ್ಮಜ್ಞಾನವಿಲ್ಲದ ಮುಮುಕ್ಷುವೂ ಅಲ್ಲದವನ ವಿಷಯವಾದದ್ದೆಂದು.
2. ಜ್ಞಾನಿಗೂ ಕರ್ಮವುಂಟೆಂಬುದು ಹೊಂದುವಹಾಗಿಲ್ಲವಾದ್ದರಿಂದ.

# ಒಂದನೆಯ ಅಧ್ಯಾಯ—ಒಂದನೆಯ ಖಂಡ

## (ಲೋಕಲೋಕಪಾಲಕರುಗಳ ಸೃಷ್ಟಿ)

**ಓಂ ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ ।**
**ನಾನ್ಯತ್ಕಿಂಚನ ಮಿಷತ್ । ಸ ಈಕ್ಷತ ಲೋಕಾನ್ನು ಸೃಜಾ ಇತಿ ॥೧॥**

೧. ಓಂ. ಇದು ಮೊದಲು ಆತ್ಮನೊಬ್ಬನೇ ಆಗಿತ್ತು. ಅಲುಗಾಡುವ ಮತ್ತೆ ಬೇರೆ ಯಾವದೂ ಇರಲಿಲ್ಲ. ಅವನು "ಲೋಕಗಳನ್ನು ಸೃಷ್ಟಿಮಾಡುವೆನು" ಎಂದು ಆಲೋಚಿಸಿದನು.

### ವ್ಯಾಕೃತಾವ್ಯಾಕೃತಗಳ ತಾರತಮ್ಯ

(ಭಾಷ್ಯ)

೨೮. ಆತ್ಮಾ ಆಪ್ನೋತೇರತ್ತೇರತತೇ ರ್ವಾ ಪರಃ ಸರ್ವಜ್ಞಃ ಸರ್ವಶಕ್ತಿಃ, ಅಶನಾಯಾದಿಸರ್ವಸಂಸಾರಧರ್ಮವರ್ಜಿತೋ ನಿತ್ಯಶುದ್ಧಬುದ್ಧಮುಕ್ತಸ್ವಭಾವೋಽಜೋಽಜರೋಽಮರೋಽಮೃತೋಽಭಯೋಽದ್ವಯಃ । ವೈ । ಇದಮ್ ಯದುಕ್ತಂ ನಾಮರೂಪಕರ್ಮಭೇದಭಿನ್ನಂ ಜಗತ್ । ಆತ್ಮೈವೈಕಃ ಅಗ್ರೇ ಜಗತಃ ಸೃಷ್ಟೇಃ ಪ್ರಾಕ್ ಆಸೀತ್ । ಕಿಂ ನೇದಾನೀಂ ಸ ಏವೈಕಃ ? ನ । ಕಥಂ ತರ್ಹಿ "ಆಸೀತ್" ಇತಿ ? ಉಚ್ಯತೇ । ಯದ್ಯಪಿ ಇದಾನೀಂ ಸ ಏವೈಕಃ ತಥಾಪ್ಯಸ್ತಿ ವಿಶೇಷಃ । ಪ್ರಾಗುತ್ಪತ್ತೇಃ ಅವ್ಯಾಕೃತನಾಮರೂಪಭೇದಮ್ ಆತ್ಮಭೂತಮ್ ಆತ್ಮೈಕಶಬ್ದಪ್ರತ್ಯಯಗೋಚರಂ ಜಗತ್ । ಇದಾನೀಂ ವ್ಯಾಕೃತನಾಮರೂಪಭೇದತ್ವಾತ್ ಅನೇಕಶಬ್ದಪ್ರತ್ಯಯಗೋಚರಮ್ ಆತ್ಮೈಕಶಬ್ದಪ್ರತ್ಯಯಗೋಚರಂ ಚ ಇತಿ ವಿಶೇಷಃ ॥ ಯಥಾ ಸಲಿಲಾತ್ ಪೃಥಕ್ ಫೇನನಾಮರೂಪವ್ಯಾಕರಣಾತ್ ಪ್ರಾಕ್ ಸಲಿಲೈಕಶಬ್ದಪ್ರತ್ಯಯಗೋಚರಮೇವ ಫೇನಮ್ । ಯದಾ ಸಲಿಲಾತ್ ಪೃಥಙ್ ನಾಮರೂಪಭೇದೇನ ವ್ಯಾಕೃತಂ ಭವತಿ ತದಾ 'ಸಲಿಲಂ' 'ಫೇನಂ ಚ' ಇತ್ಯನೇಕಶಬ್ದಪ್ರತ್ಯಯಭಾಕ್ ಸಲಿಲಮೇವ ಇತಿ ಚೈಕಶಬ್ದಪ್ರತ್ಯಯಭಾಕ್ ಚ ಫೇನಂ ಭವತಿ ತದ್ವತ್ ॥

**(ಭಾಷ್ಯಾರ್ಥ)**

(ಆತ್ಮನೆಂಬ ಮಾತು) ಆಪ್ (ವ್ಯಾಪಿಸು), ಅದ್ (ತಿನ್ನು), ಅಥವಾ ಅತ್

(ಸತತವಾಗಿ ಹೋಗಿರು) ಎಂಬ (ಧಾತುಗಳಿಂದ[1] ಬಂದಿರುವದರಿಂದ) **ಆತ್ಮನು** ಎಂದರೆ ಸರ್ವಜ್ಞನೂ ಸರ್ವಶಕ್ತಿಯುಳ್ಳವನೂ ಹಸಿವು ಮುಂತಾದ ಯಾವ ಸಂಸಾರ ಧರ್ಮವೂ ಇಲ್ಲದವನೂ ನಿತ್ಯಶುದ್ಧಬುದ್ಧಮುಕ್ತವಾದ ಸ್ವಭಾವದವನೂ ಹುಟ್ಟಿಲ್ಲದವನೂ ಮುಪ್ಪಿಲ್ಲದವನೂ ಸಾವಿಲ್ಲದವನೂ ನಾಶವಾಗದ ಸ್ವಭಾವದವನೂ ಅಂಜಿಕೆಯಿಲ್ಲದವನೂ ತನಗೆರಡನೆಯದಿಲ್ಲದವನೂ[2] ಆದ ಪರಮಾತ್ಮನು. **ವೈ** (=ಏ) **ಇದು** ಎಂದರೆ ನಾಮ, ರೂಪ, ಕರ್ಮ-ಎಂಬ ಭೇದಗಳಿಂದ ವಿಂಗಡಿಸಿಕೊಂಡಿರುವ, ಹಿಂದೆ ಹೇಳಿದ[3] ಜಗತ್ತು; **ಮೊದಲು** ಎಂದರೆ ಜಗತ್ತು ಸೃಷ್ಟಿಯಾಗುವಮುಂಚೆ **ಆತ್ಮನೇ, (ಆತ್ಮ)ನೊಬ್ಬನೇ, ಆಗಿತ್ತು.**

(ಪ್ರಶ್ನೆ):—ಈಗ ಅವನೊಬ್ಬನೇ ಅಲ್ಲವೋ ?

(ಉತ್ತರ):—(ಹಾಗೇನೂ) ಅಲ್ಲ.

(ಆಕ್ಷೇಪ) :—ಹಾಗಾದರೆ ' ಆಗಿತ್ತು ' ಎಂದು (ಹೇಳಿರುವದು) ಹೇಗೆ ?

(ಪರಿಹಾರ) :—ಹೇಳುತ್ತೇವೆ, (ಕೇಳಿರಿ), ಈಗ(ಲೂ) ಅವನೊಬ್ಬನೇ ಆದರೂ (ಇಲ್ಲಿ) ಒಂದು ವಿಶೇಷವಿದೆ. ಜಗತ್ತು ಹುಟ್ಟುವದಕ್ಕೆ ಮುಂಚೆ ನಾಮರೂಪಗಳೆಂಬ ಭೇದವು ವಿಂಗಡವಾಗಿಲ್ಲದೆ ಆತ್ಮನೇ[4] ಆಗಿ ' ಆತ್ಮನು ' ಎಂಬ ಒಂದೇ ಶಬ್ದಕ್ಕೂ (ಒಂದೇ) ಪ್ರತ್ಯಯಕ್ಕೂ ವಿಷಯವಾಗಿರುತ್ತದೆ ; ಈಗ ನಾಮಗಳು, ರೂಪಗಳು-ಎಂಬ ಭೇದವು ವಿಂಗಡವಾಗಿರುವದರಿಂದ ಅನೇಕ ಶಬ್ದಗಳಿಗೂ ಪ್ರತ್ಯಯಗಳಿಗೂ ಗೋಚರವಾಗಿರುತ್ತದೆ,[5] ಆತ್ಮನೆಂಬ ಒಂದೇ ಶಬ್ದಕ್ಕೂ ಪ್ರತ್ಯಯಕ್ಕೂ ಗೋಚರ

---

1. ಕಠ ಭಾ. ೨-೧-೧ರಲ್ಲಿ ಉದಾಹರಿಸಿರುವ ಶ್ಲೋಕವನ್ನು ನೋಡಿರಿ.

2. ಮುಂ. ೧-೧-೯, ಶ್ವೇ. ೬-೮, ಬೃ. ೩-೫-೧, ಕ. ೧-೨-೧೮, ಬೃ. ೪-೪-೨೫, ಛಾ. ೬-೨-೧ ಮುಂತಾದ ಶ್ರುತಿಗಳಲ್ಲಿ ಹೇಳಿರುವ ಪರಮಾತ್ಮನನ್ನೇ ಇಲ್ಲಿ ಆತ್ಮನೆಂದು ಕರೆದಿದೆ ಎಂದು ಭಾವ.

3. ಹಿಂದೆ ಐ. ಆ. ೨-೧-೩ರಲ್ಲಿ ಹೇಳಿರುವ ಜಗತ್ತು ಎಂದರ್ಥ. ನಾಮರೂಪಕರ್ಮರೂಪವಾದ ಜಗತ್ತು ಎಂದು ಹಿಂದಿನ ಗ್ರಂಥಭಾಗದಲ್ಲಿಯೂ ಹೇಳಿಲ್ಲ. " ಯದುಕ್ತಮ್ ' ಎಂಬುವರ ಬದಲು ' ಯದುತ ' ಎಂಬ ಪಾಠವನ್ನು ಕಲ್ಪಿಸಿ ಎಲ್ಲರಿಗೂ ಪ್ರತ್ಯಕ್ಷವೇ ಆಗಿರುವ ಎಂಬ ಅರ್ಥವನ್ನು (ಆ॥) ವ್ಯಾಖ್ಯಾನಕಾರರು ತೆಗೆದಿರುತ್ತಾರೆ.

4. ಆತ್ಮನಿಗಿಂತ ಬೇರೆಯಾಗಿ ಕಾಣುವ ಬೇರೆಯ ನಾಮರೂಪಗಳಿಲ್ಲದೆ.

5. ಅವಿದ್ಯಾದೃಷ್ಟಿಯಿಂದ. ನಾಮರೂಪಗಳು ಅವಿದ್ಯಾಕಲ್ಪಿತವೆಂದು ಬೃ. ಭಾ. ೩-೫-೧, ಸೂ. ೨-೧-೧೪, ೧-೪-೨೨, ೨-೨-೨, ೨-೩-೪೬, ೪-೩-೧೧, ಮಾ. ಕಾ. ಭಾ. ೧-೬, ಪ್ರ. ಭಾ. ೬-೩ ಮುಂತಾದ ಕಡೆಗಳಲ್ಲಿ ಹೇಳಿದೆ.

ವಾಗಿರುತ್ತದೆ.[1] ಇದೇ (ಈಗಿರುವ) ವಿಶೇಷವು. ಹೇಗೆ ನೀರಿಗಿಂತ ಬೇರೆಯಾಗಿ ನೊರೆಯೆಂಬ ನಾಮರೂಪಗಳು ವಿಂಗಡವಾಗುವದಕ್ಕಿಂತ ಮುಂಚೆ ನೊರೆಯು 'ನೀರು' ಎಂಬ ಒಂದೇ ಶಬ್ದಕ್ಕೂ (ಒಂದೇ) ಪ್ರತ್ಯಯಕ್ಕೂ ಗೋಚರವಾಗಿಯೇ ಇರುವದೋ, ಯಾವಾಗ ನೀರಿಗಿಂತ ಬೇರೆಯಾಗಿ (ನೊರೆಯೆಂಬ) ನಾಮರೂಪಗಳಿಂದ ವಿಂಗಡವಾಗಿರುವದೋ ಆಗ ನೊರೆಯು 'ನೀರು' ಮತ್ತು 'ನೊರೆ' ಎಂದು ಅನೇಕ ಶಬ್ದಪ್ರತ್ಯಯಗಳನ್ನು ಪಡೆಯತಕ್ಕದ್ದೂ ನೀರೇ ಎಂದು ಒಂದೇ ಶಬ್ದವನ್ನೂ (ಒಂದೇ) ಪ್ರತ್ಯಯವನ್ನೂ ಪಡೆಯತಕ್ಕದ್ದೂ ಆಗಿರುವದೋ, ಅದರಂತೆಯೇ (ಇದು).[2]

## ಅದ್ವಿತೀಯನಾದ ಆತ್ಮನಿಂದ ಸೃಷ್ಟಿ

(ಭಾಷ್ಯ)

೨೯. ನ ಅನ್ಯತ್ ಕಿಞ್ಚನ ನ ಕಿಞ್ಚಿದಪಿ ಮಿಷತ್ ನಿಮಿಷತ್ ವ್ಯಾಪಾರವತ್ ಇತರದ್ವಾ । ಯಥಾ ಸಾಙ್ಖ್ಯಾನಾಮ್ ಅನಾತ್ಮಪಕ್ಷಪಾತಿ ಸ್ವತನ್ತ್ರಂ ಪ್ರಧಾನಮ್, ಯಥಾ ಚ ಕಾಣಾದಾನಾಮಣವಃ । ನ ತದ್ವದಿಹ ಅನ್ಯದಾತ್ಮನಃ ಕಿಞ್ಚಿದಪಿ ವಸ್ತು ವಿದ್ಯತೇ । ಕಿಂ ತರ್ಹಿ, ಆತ್ಮೈವೈಕ ಆಸೀತ್ । ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

(ಮಿಷತ್ =) ಕಣ್ಣು ಪಿಳಕಿಸುವ, ಅಲುಗಾಡುವ ಅಥವಾ ಬೇರೆಯಾದ[3] ಮತ್ತಿನ್ನೊಂದು ಯಾವದೂ ಇರಲಿಲ್ಲ. ಹೇಗೆ **ಸಾಂಖ್ಯರ** (ಮತದಲ್ಲಿ) ಅನಾತ್ಮಪಕ್ಷಕ್ಕೆ ಸೇರಿರುವ ಸ್ವತಂತ್ರವಾದ[4] ಪ್ರಧಾನವು (ಇರುವದೋ) ಮತ್ತು **ಕಾಣಾದರ** (ಮತದಲ್ಲಿ) ಅಣುಗಳು[5] ಇರುವವೋ ಹಾಗೆ ಇಲ್ಲಿ ಆತ್ಮನಿಗಿಂತ ಬೇರೆಯಾದ ಯಾವ

1. ಪರಮಾರ್ಥದೃಷ್ಟಿಯಿಂದ.

2. ನೀರುನೊರೆಗಳ ದೃಷ್ಟಾಂತವು ಛಾ. ೬-೧೪-೧, ಬೃ. ೧-೪-೭, ಬೃ. ೩-೫-೧ ಈ ಭಾಷ್ಯಗಳಲ್ಲಿದೆ. ನಾಮರೂಪಗಳು ಪರಮಾರ್ಥವಾಗಿ ಆತ್ಮನಿಗಿಂತ ಬೇರೆಯಲ್ಲ, ಆತ್ಮನು ಅವಕ್ಕಿಂತ ಬೇರೆ ಎಂಬುದನ್ನು ತಿಳಿಸುವದೂ ಆತ್ಮನು ಅದ್ವಿತೀಯನೆಂದು ತಿಳಿಸುವುದೂ ದೃಷ್ಟಾಂತದ ಗುರಿ.

3. ಚೇತನವಾಗಲಿ, ಅಚೇತನವಾಗಲಿ, ಆತ್ಮನಿಗಿಂತ ಬೇರೆಯಾಗಿ ಯಾವದೂ ಇರುವದಿಲ್ಲ.

4. ಪ್ರಧಾನವು ತಾನೇ ಜಗತ್ತಾಗಿ ಪರಿಣಮಿಸುವದೆಂದು ಸಾಂಖ್ಯರು ಹೇಳುವರು.

5. ಈಶ್ವರನು ನಿಮಿತ್ತಕಾರಣವೆಂದೂ ಪರಮಾಣುಗಳು ಉಪಾದಾನಕಾರಣವೆಂದೂ ವೈಶೇಷಿಕರು ಹೇಳುವರು.

ದೊಂದೂ ಇರುವದಿಲ್ಲ;[1] ಮತ್ತೇನೆಂದರೆ ಆತ್ಮನೊಬ್ಬನೇ ಇದ್ದನು ಎಂದು ಅಭಿಪ್ರಾಯ.

## ಅದ್ವಿತೀಯನಾದ ಆತ್ಮನ ಆಲೋಚನೆ

(ಭಾಷ್ಯ)

೩೦. ಸಃ ಸರ್ವಜ್ಞಸ್ವಾಭಾವ್ಯಾತ್ ಆತ್ಮಾ ಏಕ ಏವ[2] ಸರ್ ಈಕ್ಷತ[3] । ನನು ಪ್ರಾಗುತ್ಪತ್ತೇರಕಾರ್ಯಕರಣತ್ವಾತ್ ಕಥಮೀಕ್ಷಿತವಾನ್ ? ನಾಯಂ ದೋಷಃ । ಸರ್ವಜ್ಞಸ್ವಾಭಾವ್ಯಾತ್ । ತಥಾ ಚ ಮನ್ತ್ರವರ್ಣಃ "ಅಪಾಣಿಪಾದೋ ಜವನೋ ಗೃಹೀತಾ" (ಶ್ವೇ. ೩-೧೯) ಇತ್ಯಾದಿಃ । ಕೇನಾಭಿಪ್ರಾಯೇಣೇತಿ ? ಆಹ, ಲೋಕಾನ್ ಅಮ್ಭಃಪ್ರಭೃತೀನ್ ಪ್ರಾಣಿಕರ್ಮಫಲೋಪಭೋಗಸ್ಥಾನಭೂತಾನ್ ನು ಸೃಜೈ ಸೃಜೇಽಹಮ್ ಇತಿ ॥

(ಭಾಷ್ಯಾರ್ಥ)

ಸರ್ವಜ್ಞಸ್ವಭಾವದವನಾದ್ದರಿಂದ ಅವನು ಎಂದರೆ (ಆ) ಆತ್ಮನು ಒಬ್ಬನೇ ಇದ್ದುಕೊಂಡು (ಆಲೋಚಿಸಿ) ನೋಡಿದನು.[4]

(ಆಕ್ಷೇಪ) :—ಸೃಷ್ಟಿಗೆ ಪೂರ್ವದಲ್ಲಿ ಶರೀರವಾಗಲಿ ಇಂದ್ರಿಯಗಳಾಗಲಿ ಇರದೆ ಇರುವಲ್ಲಿ ಹೇಗೆ ನೋಡಿದನು ?

(ಪರಿಹಾರ) :—ಇದರಲ್ಲೇನೂ ತಪ್ಪಿಲ್ಲ. ಏಕೆಂದರೆ ಅವನು ಸರ್ವಜ್ಞ ಸ್ವಭಾವ ದವನು. ಆದ್ದರಿಂದಲೇ "ಕೈಕಾಲುಗಳಿಲ್ಲದೆ ವೇಗವಾಗಿ (ನಡೆಯುತ್ತಾನೆ), ಹಿಡಿದು

---

1. ಅವ್ಯಾಕೃತವಾದ ನಾಮರೂಪಬೀಜವು ಸ್ವತಂತ್ರವಾಗಿ ಪ್ರಧಾನದಂತೆ ಅಥವಾ ಅಣುಗಳಂತೆ ಬೇರೆಯಾಗಿರುವದಿಲ್ಲ; ಅದು ಅವಿದ್ಯಾಕೃತವೂ ಆಗಿರುತ್ತದೆ. ಸೂ. ಭಾ. ೧-೪-೩ನ್ನು ನೋಡಿರಿ.

2. ವಾ॥ ಪಾಠ.

3. "ಲೋಕಾನ್ನು ಸೃಜಾ ಇತಿ'' ಎಂಬ ಆ॥ ಕಾ॥ ಪಾಠವು ಹೆಚ್ಚೆಂದು ವಾ॥ ಗಿ॥ ಪಾಠವನ್ನು ಇಟ್ಟುಕೊಂಡಿದೆ.

4. ಆಲೋಚಿಸಿನೋಡಿದನು ಎಂದು ಶ್ರುತಿಯಲ್ಲಿರುವದರಿಂದ ಅವೈದಿಕವಾದ ಪ್ರಧಾನವಾಗಲಿ ಅಣುಗಳಾಗಲಿ ಜಗತ್ಕಾರಣವಲ್ಲ ಎಂದು ಬ್ರ. ಸೂ. ೧-೧-೫ರಲ್ಲಿ ತೀರ್ಮಾನ ವಾಗಿದೆ.

ಕೊಳ್ಳುತ್ತಾನೆ. (ಶ್ವೇ. ೩-೧೯) ಎಂದು ಮುಂತಾದ ಮಂತ್ರವರ್ಣವು (ಹೇಳುತ್ತದೆ)[1]

ಯಾವ ಅಭಿಪ್ರಾಯದಿಂದ (ಆಲೋಚಿಸಿನೋಡಿದನು)? ಎಂಬುದನ್ನು (ಶ್ರುತಿಯು) ಹೇಳುತ್ತದೆ: ಲೋಕಗಳನ್ನು (ಮುಂದೆ ಹೇಳುವ) ಅಂಭಸ್ಸು, ಮುಂತಾದ ಪ್ರಾಣಿಗಳು ಕರ್ಮದ ಫಲವನ್ನು ಉಪಭೋಗಿಸುವ ಸ್ಥಾನಗಳನ್ನು ನಾನು ಸೃಷ್ಟಿಸುವೆನು (ಸೃಜೈ=ಸೃಜೇ) ಎಂದು (ಆಲೋಚಿಸಿನೋಡಿದನು).

**ಸ ಇಮಾಲ್ಲೋಕಾನಸೃಜತ । ಅಮ್ಭೋ ಮರೀಚೀರ್ಮರಮಾಪೋಽದೋಽಮ್ಭಃ ಪರೇಣ ದಿವಂ ದ್ಯೌಃ ಪ್ರತಿಷ್ಠಾನ್ತರಿಕ್ಷಂ ಮರೀಚಯಃ । ಪೃಥಿವೀ ಮರೋ ಯಾ ಅಧಸ್ತಾತ್ ತಾ ಆಪಃ ॥ ೨ ॥**

೨. ಅವನು ಈ ಲೋಕಗಳನ್ನು ಸೃಷ್ಟಿಸಿದನು: ಅಂಭಸ್ಸು, ಮರೀಚಿ, ಮರ, ಅಪ್ಪು. ದ್ಯುಲೋಕದ ಆಚೆಗಿರುವ ಅದು ಅಂಭಸ್ಸು; ದ್ಯುಲೋಕವು ಅದಕ್ಕೆ ಒತ್ತು; ಅಂತರಿಕ್ಷವೇ ಮರೀಚಿ; ಪೃಥಿವಿಯೇ ಮರವು; ಕೆಳಗೆ ಯಾವದು (ಇದೆಯೋ) ಅದು ಅಪ್ಪು.

## ಲೋಕಗಳನ್ನು ಸೃಷ್ಟಿಸಿದ್ದು

(ಭಾಷ್ಯ)

೩೧. ಏವಮ್ ಈಕ್ಷಿತ್ವಾ ಆಲೋಚ್ಯ ಸಃ ಆತ್ಮಾ ಇಮಾನ್ ಲೋಕಾನ್ ಅಸೃಜತ ಸೃಷ್ಟವಾನ್ । ಯಥಾ ಇಹ ಬುದ್ಧಿಮಾನ್ ತಕ್ಷಾದಿಃ "ಏವಂಪ್ರಕಾರಾನ್ ಪ್ರಾಸಾದಾದೀನ್ ಸೃಜೇ" ಇತಿ ಈಕ್ಷಿತ್ವಾ ಈಕ್ಷಾನನ್ತರಂ ಪ್ರಾಸಾದಾದೀನ್ ಸೃಜತಿ ತದ್ವತ್ । ನನು ಸೋಪಾದಾನಸ್ತಕ್ಷಾದಿಃ ಪ್ರಾಸಾದಾದೀನ್ ಸೃಜತೀತಿ ಯುಕ್ತಮ್ । ನಿರುಪಾದಾ

1. ಪ್ರಧಾನಕ್ಕೆ ಸತ್ತ್ವಗುಣದ ಮೂಲಕವಾಗಿ ಸರ್ವಜ್ಞತ್ವವು ಹೊಂದುತ್ತದೆ; ಶರೀರೇಂದ್ರಿಯಗಳಿಲ್ಲದ ನಿರವಯವವಾದ ಬ್ರಹ್ಮಕ್ಕೆ ಸರ್ವಜ್ಞತ್ವವು ಹೇಗೆ?—ಎಂದು ಆಕ್ಷೇಪಿಸಿ ಜ್ಞಾನಸ್ವರೂಪವೇ ಆಗಿರುವದರಿಂದ ಆತ್ಮನಿಗೆ ಸರ್ವಜ್ಞತ್ವವು ಹೊಂದುತ್ತದೆ ಎಂಬ ಉತ್ತರವನ್ನು ಸೂ. ಭಾ. ೧ ೧-೫ರಲ್ಲಿ ಕೊಟ್ಟಿದೆ. ವ್ಯಾಖ್ಯಾನಕಾರರು (೧) ಪ್ರಾಣಿಕರ್ಮದಿಂದ ಉಂಟಾಗುವ ಅವಿದ್ಯಾವೃತ್ತಿಯಲ್ಲಿ (??) ಪ್ರತಿಬಿಂಬಿಸುವದೇ ಈಕ್ಷಣವು; (೨) ಅಭಿವ್ಯಕ್ತಿಯಾಗುವ ಮುಂಚೆ ಅನಭಿವ್ಯಕ್ತನಾಮರೂಪಾವಚ್ಛಿನ್ನಚೈತನ್ಯವು ಔನ್ಮುಖ್ಯದಿಂದ ಕಾದಾಚಿತ್ಕವಾದ ಈಕ್ಷಣವೆನಿಸುತ್ತದೆ. (೩) ಈಕ್ಷಣದಲ್ಲಿ ಶ್ರುತಿಗೆ ತಾತ್ಪರ್ಯವಿಲ್ಲ, ಕಾರಣವು ಜಡವಲ್ಲವೆಂದು ತಿಳಿಸುವದೇ ವಾಕ್ಯದ ತಾತ್ಪರ್ಯ—ಎಂಬ ಮೂರು ಮತಗಳನ್ನು ಬರೆದಿರುತ್ತಾರೆ.

ನಸ್ತು ಆತ್ಮಾ ಕಥಂ ಲೋಕಾನ್ ಸೃಜತೀತಿ? ನೈಷ ದೋಷಃ। ಸಲಿಲಫೇನಸ್ಥಾನಿಯೇ ಆತ್ಮಭೂತೇ ನಾಮರೂಪೇ ಅವ್ಯಾಕೃತೇ ಆತ್ಮೈಕಶಬ್ದವಾಚ್ಯೇ ವ್ಯಾಕೃತಫೇನಸ್ಥಾನೀಯಸ್ಯ ಜಗತಃ ಉಪಾದಾನಭೂತೇ ಸಮ್ಭವತಃ। ತಸ್ಮಾತ್ ಆತ್ಮಭೂತನಾಮರೂಪೋಪಾದಾನಃ[1] ಸನ್ ಸರ್ವಜ್ಞೋ ಜಗನ್ನಿರ್ಮಿಮೀತೇ ಇತ್ಯವಿರುದ್ಧಮ್ । ಅಥವಾ ಯಥಾ ವಿಜ್ಞಾನವಾನ್ ಮಾಯಾವೀ ನಿರುಪಾದಾನಃ ಆತ್ಮಾನಮೇವ ಆತ್ಮಾನ್ತರತ್ವೇನ ಆಕಾಶೇನ ಗಚ್ಛನ್ತಮಿವ ನಿರ್ಮಿಮೀತೇ ತಥಾ ಸರ್ವಜ್ಞೋ ದೇವಃ ಸರ್ವಶಕ್ತಿರ್ಮಹಾಮಾಯಃ ಆತ್ಮಾನಮೇವ ಆತ್ಮಾನ್ತರತ್ವೇನ ಜಗದ್ರೂಪೇಣ ನಿರ್ಮಿಮೀತೇ ಇತಿ ಯುಕ್ತತರಮ್ । ಏವಂ ಚ ಸತಿ ಕಾರ್ಯಕಾರಣೋಭಯಾಸದ್ವಾದ್ಯಾದಿ (?) ಪಕ್ಷಾಶ್ಚ ನ ಪ್ರಸಜ್ಜನ್ತೇ ಸುನಿರಾಕೃತಾಶ್ಚ ಭವನ್ತಿ ॥

(ಭಾಷ್ಯಾರ್ಥ)

ಹೀಗೆ ನೋಡಿ ಆಲೋಚಿಸಿಕೊಂಡು ಅವನು ಎಂದರೆ(ಆ) ಆತ್ಮನು ಈ ಲೋಕಗಳನ್ನು ಸೃಷ್ಟಿಸಿದವನಾದನು. ಈ ಲೋಕದಲ್ಲಿ ಹೇಗೆ ಬುದ್ಧಿವಂತನಾದ ಬಡಗಿಯೇ ಮುಂತಾದ (ಕೆಲಸಗಾರನು) "ಈ ರೀತಿಯ ಉಪ್ಪರಿಗೆ ಮುಂತಾದವನ್ನು ಸೃಷ್ಟಿಸುವೆನು" ಎಂದು ನೋಡಿ (ಆಲೋಚಿಸಿ)ಕೊಂಡು (ಹಾಗೆ) ಆಲೋಚನೆ(ಯನ್ನು ಮಾಡಿದ)ಬಳಿಕ ಉಪ್ಪರಿಗೆಯೇ ಮುಂತಾದವನ್ನು ಸೃಷ್ಟಿಸುತ್ತಾನೋ ಹಾಗೆ (ಸೃಷ್ಟಿಸಿದನು).

(ಆಕ್ಷೇಪ) :—ಬಡಗಿಯೇ ಮೊದಲಾದ ಕೆಲಸಗಾರನು ಉಪಾದಾನವಸ್ತುವಿನಿಂದ ಕೂಡಿರುವದರಿಂದ ಉಪ್ಪರಿಗೆಯೇ ಮುಂತಾದವನ್ನು ಸೃಷ್ಟಿಸುತ್ತಾನೆ ಎಂಬುದು ಯುಕ್ತವು. ಆದರೆ (ಯಾವ) ಉಪಾದಾನವೂ ಇಲ್ಲದ ಆತ್ಮನು ಹೇಗೆ ಲೋಕಗಳನ್ನು ಸೃಷ್ಟಿಸುತ್ತಾನೆ?

(ಪರಿಹಾರ) :—ಇದೇನೂ ತಪ್ಪಲ್ಲ. ನೀರಿನ ನೊರೆಯಂತಿರುವ, ಆತ್ಮನೇ ಆಗಿರುವ, ಆತ್ಮನೆಂಬ ಒಂದೇ ಮಾತಿನಿಂದ ಕರೆಯಿಸಿಕೊಳ್ಳುವ, ಅವ್ಯಾಕೃತನಾಮರೂಪಗಳು ಬಿಡಿಯಾಗಿ ತೋರುವ ನೊರೆಯಂತಿರುವ ಜಗತ್ತಿಗೆ ಉಪಾದಾನವಾಗಿರಬಹುದಾಗಿದೆ. ಆದ್ದರಿಂದ ನಾಮರೂಪಗಳೆಂಬ ಉಪಾದಾನ(ವಸ್ತು)ವುಳ್ಳವನಾಗಿ[2]

---

1. ನಾಮರೂಪೋಪಾದಾನಭೂತಃ ಸನ್ ಎಂಬ ಪಾಠಕ್ಕಿಂತ ಈ ಪಾಠವೇ ಉತ್ತಮ.

2. ನಾಮರೂಪಗಳು ಪ್ರಲಯದಲ್ಲಿ ಆತ್ಮನಾಗಿರುತ್ತವೆ, ಆಮೇಲೆ ವ್ಯಾಕೃತನಾಮರೂಪಗಳಾಗುತ್ತವೆ. ಆದ್ದರಿಂದ ಆತ್ಮನೆಂಬ ಅವ್ಯಾಕೃತನಾಮರೂಪವೇ ಉಪಾದಾನವು. ಬಡಗಿಗೆ ಬೇಕಾಗಿರುವಂತೆ ಆತ್ಮನಿಗೆ ಬೇರೊಂದು ಉಪಾದಾನವಿರಬೇಕಾದದ್ದಿಲ್ಲ.

ಸರ್ವಜ್ಞನಾದ (ಆತ್ಮನು) ಜಗತ್ತನ್ನು ಸೃಷ್ಟಿಸುತ್ತಾನೆ ಎಂಬುದು ವಿರುದ್ಧವಲ್ಲ. **ಅಥವಾ ಹೇಗೆ ಜಾಣನಾದ ಮಾಯಾವಿಯು ಯಾವ ಉಪಾದಾನವೂ ಇಲ್ಲದೆ[1] ತನ್ನನ್ನೇ ಆಕಾಶದಲ್ಲಿ ನಡೆಯುತ್ತಿರುವ ಮತ್ತೊಬ್ಬನಂತೆ ನಿರ್ಮಿಸಿ ಕೊಳ್ಳುತ್ತಾನೋ[2] ಅದರಂತೆ ಸರ್ವಜ್ಞನಾದ ಎಲ್ಲಾ ಶಕ್ತಿಗಳೂ ಇರುವ ಮಹಾಮಾಯಾವಿಯಾದ[3] ದೇವನು ತನ್ನನ್ನೇ ಮತ್ತೊಂದು ರೂಪದ ಜಗತ್ತಿನ ರೂಪದಿಂದ ನಿರ್ಮಿಸಿಕೊಳ್ಳುತ್ತಾನೆ ಎಂಬುದು ಇನ್ನೂ ಯುಕ್ತವಾಗಿರುತ್ತದೆ.** ಮತ್ತು ಹೀಗಾದ (ಪಕ್ಷದಲ್ಲಿ) ಕಾರ್ಯ, ಕಾರಣ–ಈ (ಎರಡೂ) ಅಸತ್ತೆಂಬ ವಾದಿಗಳು[4] ಮುಂತಾದವರ(?)ಪಕ್ಷಗಳೂ ಬಂದೊದಗುವದಿಲ್ಲ, (ಅವನ್ನು) ಸುಲಭವಾಗಿ ನಿರಾಕರಿಸಿದಂತೆಯೂ ಆಗಿಬಿಡುತ್ತದೆ.

(ಭಾಷ್ಯ)

೩.೨. ಕಾನ್ ಲೋಕಾನ್ ಅಸೃಜತೇತಿ ? ಆಹ–" ಅಮ್ಭೋ ಮರೀಚೀರ್ಮರಮ್ ಆಪಃ " ಇತಿ । ಆಕಾಶಾದಿಕ್ರಮೇಣ ಅಣ್ಡಮುತ್ಪಾದ್ಯ ಅಮ್ಭಃಪ್ರಭೃತೀನ್ ಲೋಕಾನ್ ಅಸೃಜತ । ತತ್ರ ಅಮ್ಭಃಪ್ರಭೃತೀನ್ ಸ್ವಯಮೇವ ವ್ಯಾಚಷ್ಟೇ ಶ್ರುತಿಃ । ಅದಃ ತತ್ ಅಮ್ಭಃಶಬ್ದವಾಚ್ಯೋ ಲೋಕಃ । ಪರೇಣ ದಿವಂ ದ್ಯುಲೋಕಾತ್ ಪರಸ್ತಾತ್ । ಸೋಽಮ್ಭಃಶಬ್ದವಾಚ್ಯಃ । ಅಮ್ಭೋಭರಣಾತ್ । ದ್ಯೌಃ ಪ್ರತಿಷ್ಠಾ ಆಶ್ರಯಃ, ತಸ್ಯಾ

---

1. ವ್ಯಾಕೃತಾವ್ಯಾಕೃತನಾಮರೂಪಗಳು ಪರಮಾರ್ಥವೆಂದಾಗಲಿ ಬ್ರಹ್ಮವು ನಿಜವಾಗಿಯೂ ಜಗತ್ತಾಗಿ ಪರಿಣಮಿಸುತ್ತದೆಯೆಂದಾಗಲಿ ತಿಳಿದುಕೊಳ್ಳಬಾರದೆಂದು ಈ ಪಕ್ಷವನ್ನು ಬರೆದಿರುತ್ತದೆ. ಸೂ. ಭಾ. ೨-೧-೨೭, ೨-೧-೩೩ ನೋಡಿ.

2. ಮಾಯಾವಿಯ ದೃಷ್ಟಾಂತವನ್ನು ಮಾಂ. ಕಾ. ಭಾ. ೭, ಸೂ. ಭಾ. ೧-೧-೧೭ ಇವುಗಳಲ್ಲಿ ಕೊಟ್ಟಿದೆ.

3. ಅಲ್ಪಜ್ಞನಾದ ಅಲ್ಪಶಕ್ತಿಯುಳ್ಳ ಲೋಕದ ಮಾಯಾವಿಯು ನಿರುಪಾದಾನ ಸೃಷ್ಟಿಯನ್ನು ಮಾಡಬಲ್ಲನಾದರೆ ಸರ್ವಜ್ಞನಾದ ಸರ್ವಶಕ್ತಿಯಾದ ಬ್ರಹ್ಮಾದಿಗಳನ್ನೂ ಮೋಹಿಸಬಲ್ಲ ಮಹಾಮಾಯಾವಿಯಾದ ದೇವನು ಸೃಷ್ಟಿಸಲಾರನೆ ?–ಎಂಬ ಭಾವ.

4. " ಕಾರ್ಯಕಾರಣೋಭಯಾಸದ್ವಾದಿಪಕ್ಷಾಶ್ಚ " ಎಂದಿದ್ದರೆ ಸಾಕಾಗಿರುತ್ತದೆ. ಕಾರಣವಿಲ್ಲದೆ ಸ್ವಭಾವದಿಂದಲೇ ಕಾರ್ಯವುಂಟಾಗುವದೆಂಬವರ ಮತ, ಕಾರಣದಲ್ಲಿಲ್ಲದ ಅಸತ್ಕಾರ್ಯವು ಹೊಸದಾಗಿ ಉಂಟಾಗುವದು ಎಂಬ ವೈಶೇಷಿಕರ ಮತ, ಕಾರ್ಯವೂ ಕಾರಣವೂ ಎರಡೂ ಅಸತ್ತೇ ಎಂಬ ಶೂನ್ಯವಾದಿಗಳ ಮತ–ಈ ಮೂರನ್ನೂ ನಿರಾಕರಿಸಿದಂತೆ ಆಯಿತು ಎಂದು ಭಾವ. ಕಾರಣವೂ ಕಾರ್ಯವೂ ಬ್ರಹ್ಮವೇ ಎಂಬುದು ಸಿದ್ಧಾಂತ. " ಅಸದ್ವಾದ್ಯಾದಿ " ಎಂಬ ಪಾಠದಲ್ಲಿ ಆದಿ ಎಂಬುದಕ್ಕೆ ಪರಿಣಾಮವಾದಿ ಎಂಬರ್ಥವನ್ನು ವ್ಯಾಖ್ಯಾನಕಾರರು ಕೊಟ್ಟಿರುತ್ತಾರೆ.

ಮ್ಭಸೋ ಲೋಕಸ್ಯ । ದ್ಯುಲೋಕಾತ್ ಅಧಸ್ತಾತ್ ಅನ್ತರಿಕ್ಷಂ ಯತ್ ತನ್ಮರೀಚಯಃ । ಏಕೋಽಪಿ ಅನೇಕಸ್ಥಾನಭೇದತ್ವಾತ್ ಬಹುವಚನಭಾಕ್ ‘ ಮರೀಚಯಃ ’ ಇತಿ । ಮರೀಚಿಭಿರ್ವಾ ರಶ್ಮಿಭಿಃ ಸಮ್ಬನ್ಧಾತ್ । ಪೃಥಿವೀ ಮರಃ । ಮ್ರಿಯನ್ತೇ ಅಸ್ಮಿನ್ ಭೂತಾನಿ ಇತಿ । ಯಾ ಅಧಸ್ತಾತ್ ಪೃಥಿವ್ಯಾಃ ತಾ ‘ ಆಪಃ ’ ಉಚ್ಯನ್ತೇ ಆಪ್ನೋತೇರ್ಲೋಕಾಃ । ಯದ್ಯಪಿ ಪಞ್ಚಭೂತಾತ್ಮಕತ್ವಂ ಲೋಕಾನಾಮ್ ತಥಾಪಿ ಅಬ್ಬಾಹುಲ್ಯಾತ್ ಅಬ್ನಾಮಭಿರೇವ ‘ ಅಮ್ಭಃ ’, ‘ ಮರೀಚೀ ’, ‘ ಮರಮ್ ’ ‘ ಆಪಃ ’ ಇತ್ಯುಚ್ಯನ್ತೇ ॥

(ಭಾಷ್ಯಾರ್ಥ)

(ಯಾವ) ಯಾವ ಲೋಕಗಳನ್ನು ಸೃಷ್ಟಿಮಾಡಿದನು ? ಎಂಬುದನ್ನು (ಶ್ರುತಿಯು) ಹೇಳುತ್ತದೆ. “ ಅಂಭಸ್ಸು, ಮರೀಚಿ, ಮರ, ಅಪ್ಪು.” ಆಕಾಶವೇ ಮುಂತಾದ ಕ್ರಮದಿಂದ[1] **ಅಂಡವನ್ನು**[2] **ಸೃಷ್ಟಿಸಿ** ಅಂಭಸ್ಸೇ ಮುಂತಾದ ಲೋಕಗಳನ್ನು ಸೃಷ್ಟಿಸಿದನು.

ಇಲ್ಲಿ ಅಂಭಸ್ಸು ಮುಂತಾದವುಗಳ (ಅರ್ಥ)ವನ್ನು ಶ್ರುತಿಯು ತಾನೇ ವಿವರಿಸುತ್ತದೆ. ಅದು ಎಂದರೆ ಆ (ಕಾಣುವದು) “ ಪರೇಣ ದಿವಂ ” ಎಂದರೆ ದ್ಯುಲೋಕಕ್ಕೆ ಆಚೆ. ಅದು **ಅಂಭಸ್ಸೆಂಬ** ಮಾತಿನಿಂದ ಹೇಳಲ್ಪಡುತ್ತದೆ ; ಏಕೆಂದರೆ (ಅದು) ನೀರನ್ನು ಕೂಡಿಟ್ಟಿರುತ್ತದೆ[3]. ಆ ಅಂಭಸ್ಸೆಂಬ ಲೋಕಕ್ಕೆ ದ್ಯುಲೋಕವು ಒತ್ತು ಎಂದರೆ ಆಸರೆ. ದ್ಯುಲೋಕಕ್ಕಿಂತ ಕೆಳಗೆ ಇರುವ ಅಂತರಿಕ್ಷವಿದೆಯಷ್ಟೆ. ಅದೇ **ಮರೀಚಿ** (ಲೋಕವು). (ಈ ಲೋಕವು) ಒಂದೇ ಆದರೂ ಬೇರೆಬೇರೆಯ ಸ್ಥಾನಗಳಿರುವದರಿಂದ “ ಮರೀಚಯಃ ” ಎಂದು (ಈ ಶಬ್ದಕ್ಕೆ) ಬಹುವಚನ[4] (ವನ್ನು

---

1. “ ಲೋಕಗಳನ್ನು ಸೃಷ್ಟಿಸಿದನು ” ಎಂದದ್ದರಿಂದ ಶುದ್ಧಾತ್ಮನಿಗಿಂತ ವ್ಯತಿರಿಕ್ತನಾದ ಪ್ರಾಣನೇ ಇಲ್ಲಿ ಹೇಳಲ್ಪಟ್ಟಿರಬಹುದು ಎಂದು ಪೂರ್ವಪಕ್ಷಿಯು ಹೇಳಿಯಾನೆಂದು ‘ ಆಕಾಶಾದಿಕ್ರಮದಿಂದ ’ ಎಂದು ಹೇಳಿರುತ್ತದೆ. ಆತ್ಮನೊಬ್ಬನೇ ಇದ್ದನು ಎಂದು ಅವಧಾರಣೆ ಮಾಡಿರುವದರಿಂದಲೂ ಮುಂದೆ ಜೀವರೂಪದಿಂದ ಪ್ರವೇಶವನ್ನು ಹೇಳಿರುವದರಿಂದಲೂ ಇಲ್ಲಿ ಪರಮಾತ್ಮನನ್ನೇ ತೆಗೆದುಕೊಳ್ಳಬೇಕಾಯಿತು ಎಂದು ಬ್ರ. ಸೂ. ೩-೩-೧೬, ೧೭ರಲ್ಲಿ ನಿರ್ಣಯಿಸಿದೆ. ಒಂದು ಶ್ರುತಿಯಲ್ಲಿ ಹೇಳಿರುವ ವಿಷಯವನ್ನು ಇನ್ನೊಂದು ಶ್ರುತಿಗೂ ಅದೇ ಸಂದರ್ಭಕ್ಕೆ ಕೂಡಿಸಿಕೊಳ್ಳಬೇಕು ಎಂಬ ನ್ಯಾಯವನ್ನು ಇಲ್ಲಿ ಅನುಸರಿಸುತ್ತದೆ.

2. ಇದನ್ನು ಛಾ. ೩-೧೯ರಲ್ಲಿ ವರ್ಣಿಸಿರುತ್ತದೆ.

3. ಮಳೆಗೆ ಬೇಕಾದ ನೀರನ್ನು ಅದು ಕೂಡಿಟ್ಟಿರುತ್ತದೆ.

4. “ ಆಪಃ ” ಎಂಬುದೂ ಬಹುವಚನವಾದರೂ ಅದು ಸಂಸ್ಕೃತದಲ್ಲಿ ನಿತ್ಯಬಹುವಚನವಾದ್ದರಿಂದ ಅದರ ವಿಷಯದಲ್ಲಿ ಹೇಳಬೇಕಾದದ್ದು ಇರುವದಿಲ್ಲ.

ಮೂಲದಲ್ಲಿ ಉಪಯೋಗಿಸಿದೆ). ಅಥವಾ ಮರೀಚಿಗಳೊಡನೆ ಎಂದರೆ ರಶ್ಮಿಗಳೊಡನೆ ಸಂಬಂಧವಿರುವದರಿಂದ (ಇದಕ್ಕೆ ಮರೀಚಯಃ ಎಂಬ ಬಹುವಚನದ ಹೆಸರು ಬಂದಿರುತ್ತದೆ). ಪೃಥಿವಿಯೇ **ಮರವು**; ಏಕೆಂದರೆ ಇಲ್ಲಿ ಪ್ರಾಣಿಗಳು ಮೃತರಾಗುತ್ತಾರೆ. (ಆ ಪೃಥಿವಿಯ) ಕೆಳಗೆ ಯಾವದು ಇದೆಯೋ ಅದು ಅಪ್ಪು ಎನಿಸಿಕೊಂಡಿರುವ ಲೋಕವು. 'ಆಪ್' (ಪಡೆ) ಎಂಬ ಧಾತುವಿನಿಂದ (ಅಪ್ಪು ಎಂಬ ಶಬ್ದವು ಹುಟ್ಟಿರುತ್ತದೆ).[1]

ಲೋಕಗಳು ಐದು ಭೂತಗಳಿಂದಲೂ ಆಗಿರುವವಾದರೂ, ನೀರು ಬಹಳವಾಗಿರುವದರಿಂದ[2] ಅಂಭಸ್ಸು, ಮರೀಚಿ, ಮರ, ಅಪ್ಪು–ಎಂದು ನೀರಿನ ಹೆಸರುಗಳಿಂದಲೇ ಕರೆಯಿಸಿಕೊಂಡಿರುತ್ತವೆ.

**ಸ ಈಕ್ಷತೇಮೇ ನು ಲೋಕಾ ಲೋಕಪಾಲಾನ್ನು ಸೃಜಾ ಇತಿ ।**
**ಸೋಽದ್ಭ್ಯ ಏವ ಪುರುಷಂ ಸಮುದ್ಧೃತ್ಯಾಮೂರ್ಛಯತ್ ॥ ೩ ॥**

೩. ಅವನು "ಇವೇ ಅಲ್ಲವೆ, ಲೋಕಗಳು? (ಇನ್ನು) ಲೋಕಪಾಲಕರನ್ನು ಸೃಷ್ಟಿಸುವೆನು" ಎಂದು (ಆಲೋಚನೆ ಮಾಡಿ) ನೋಡಿದನು. ಅವನು ಅಪ್ಪಿನಿಂದಲೇ ಪುರುಷನನ್ನು ಮೇಲಕ್ಕೆತ್ತಿ **ಒಟ್ಟುಗೂಡಿಸಿದನು.**

## ಲೋಕಪಾಲಕರ ಸೃಷ್ಟಿಗಾಗಿ ವಿರಾಟ್ಪುರುಷನ ಸೃಷ್ಟಿ

(ಭಾಷ್ಯ)

೩೩. ಸರ್ವಪ್ರಾಣಿಕರ್ಮಫಲೋಪಾದಾನಾಧಿಷ್ಠಾನಭೂತಾ ಚತುರೋ

---

1. ಕೆಳಗಿನ ಭೂಲೋಕವನ್ನು ಪಡೆಯುವವರು ಈ ಲೋಕಕ್ಕೆ ಹೋಗುತ್ತಾರಾದ್ದರಿಂದ ಇದಕ್ಕೆ ಅಪ್ಪು ಎಂದು ಹೆಸರು.

2. "ನೀರು ಬಹಳವಾಗಿರುವದರಿಂದ" ಎಂಬುದು ಎಲ್ಲಾ ಲೋಕಗಳ ಹೆಸರಿಗೂ ಹೊಂದುವಹಾಗಿಲ್ಲ. ಹೀಗೆಯೇ "ನೀರಿನ ಹೆಸರಿನಿಂದಲೇ" ಎಂಬುದೂ ಎಲ್ಲಕ್ಕೂ ಹೊಂದುವದಿಲ್ಲ. ಆದ್ದರಿಂದ ಇವು ಉಪಲಕ್ಷಣವೆಂದು ಭಾವಿಸಬೇಕು; ಎಂದರೆ ನೀರು ಬಹಳವಾಗಿರುವದರಿಂದ 'ಅಂಭಸ್ಸು', ಕಿರಣಗಳು ಬಹಳವಾಗಿರುವದರಿಂದ ಮರೀಚಿ, ಮರಣವು ಬಹಳವಾಗಿರುವದರಿಂದ 'ಮರ', ಬಹು ಜನರು ಈ ಲೋಕವನ್ನೇ ಪಡೆಯುವದರಿಂದ ಅಪ್ಪು–ಎಂದು ಆಯಾ ಬಾಹುಲ್ಯದಿಂದ ಆಯಾ ಹೆಸರು ಆಯಾ ಲೋಕಕ್ಕೆ ಬಂದಿರುತ್ತದೆ ಎಂದು ಅರ್ಥವನ್ನು ಮಾಡಬೇಕು. 'ಅಂಭಸ್ಸು' ಎಂಬ ಹೆಸರಿಗೆ ಅಪ್ಪೆಂಬ ಒಂದೇ ಭೂತದಿಂದ ಆಗಿರುವ ಲೋಕವೆಂದೇನೂ ಅರ್ಥವಲ್ಲ, ಎಲ್ಲಾ ಲೋಕಗಳೂ ಪಾಂಚಭೌತಿಕವೇ ಎಂದು ಭಾಷ್ಯವಾಕ್ಯದ ತಾತ್ಪರ್ಯ.

ಲೋಕಾನ್ ಸೃಷ್ಟ್ವಾ ಸಃ ಈಶ್ವರಃ ಪುನರೇವ ಈಕ್ಷತ । ಇಮೇ ನು ತು [1] ಅಮ್ಭಃ ಪ್ರಭೃತಯಃ । ತಸ್ಮಾತ್ ಏಷಾಂ ರಕ್ಷಣಾರ್ಥಂ ಲೋಕಪಾಲಾನ್ ಪಾಲಯಿತೄನ್ ನು ಸೃಜೈ ಸೃಜೇಽಹಮ್ ಇತಿ ॥

(ಭಾಷ್ಯಾರ್ಥ)

ಸರ್ವ ಪ್ರಾಣಿಗಳೂ ಕರ್ಮಫಲವನ್ನು ಹೊಂದುವದಕ್ಕೆ ಆಶ್ರಯವಾಗಿರುವ ನಾಲ್ಕು ಲೋಕಗಳನ್ನು[2] ಸೃಷ್ಟಿಸಿ ಆ ಈಶ್ವರನು ಮತ್ತೂ (ಆಲೋಚಿಸಿ) ನೋಡಿದನು. ಈ ಅಂಭಸ್ಸು ಮುಂತಾದ ನಾನು ಸೃಷ್ಟಿಸಿರುವ ಲೋಕಗಳಾದರೋ ಕಾಪಾಡುವವರಿಲ್ಲದೆ ನಾಶವಾದಾವು! ಆದ್ದರಿಂದ ಇವುಗಳನ್ನು ಕಾಪಾಡುವದಕ್ಕಾಗಿ ಲೋಕಪಾಲಕರನ್ನು, [3] (ಈ) ಲೋಕಗಳನ್ನು ಕಾಪಾಡುವವರನ್ನು (ಸೃಜೈ= )ನಾನು ಸೃಷ್ಟಿಮಾಡುವೆನು ಎಂದು (ಆಲೋಚಿಸಿದನು).

(ಭಾಷ್ಯ)

೩೪. ಏವಮೀಕ್ಷಿತ್ವಾ ಸಃ ಅದ್ಭ್ಯ ಏವ ಅಪ್ಪ್ರಧಾನೇಭ್ಯ ಏವ ಪಞ್ಚಭೂತೇಭ್ಯಃ, ಯೇಭ್ಯೋಽಮ್ಭಃ ಪ್ರಭೃತೀನ್ ಸೃಷ್ಟವಾನ್ ತೇಭ್ಯ ಏವ ಇತ್ಯರ್ಥಃ । ಪುರುಷಂ ಪುರುಷಾಕಾರಂ ಶಿರಃಪಾಣ್ಯಾದಿಮನ್ತಂ ಸಮುದ್ಧೃತ್ಯ ಅದ್ಭ್ಯಃ ಸಮುಪಾದಾಯ ಮೃತ್ಪಿಣ್ಡಮಿವ ಕುಲಾಲಃ ಪೃಥಿವ್ಯಾ ಅಮೂರ್ಛಯತ್ ಮೂರ್ಛಿತವಾನ್ ಸಮ್ಪಿಣ್ಡಿತವಾನ್ ಸ್ವಾವಯವಸಂಯೋಜನೇನ ಇತ್ಯರ್ಥಃ ॥

(ಭಾಷ್ಯಾರ್ಥ)

ಹೀಗೆ (ಆಲೋಚಿಸಿ) ನೋಡಿಕೊಂಡು ಅವನು ಅಪ್ಪಿನಿಂದಲೇ ಎಂದರೆ ಅಪ್ಪು ಮುಖ್ಯವಾಗಿರುವ ಪಂಚಭೂತಗಳಿಂದಲೇ[4] ಯಾವ ಭೂತಗಳಿಂದ ಅಂಭಸ್ಸು ಮುಂತಾದ ಲೋಕಗಳನ್ನು ಸೃಷ್ಟಿಸಿದ್ದನೋ ಅವುಗಳಿಂದಲೇ ಎಂದರ್ಥ. **ಪುರುಷ**

---

1. ವಾ॥ ಪಾಠ.

2. ಜೀವರು ಮಾಡುವ ಕರ್ಮಗಳು, ಅವುಗಳ ಕಾರಕಗಳು—ಇವುಗಳಂತೆ ಫಲವನ್ನು ಅನುಭವಿಸುವದಕ್ಕೆ ಆಶ್ರಯವಾಗಿರುವ ಲೋಕಗಳೂ ಆತ್ಮನಿಂದಲೇ ಆಗಿರುತ್ತವೆ; ಅವು ಆತ್ಮನಿಗಿಂತ ಬೇರೆ ಇಲ್ಲ.

3. ಲೋಕಪಾಲಕರುಗಳ ಸೃಷ್ಟಿಯಲ್ಲಿ ಸ್ಥೂಲಸೂಕ್ಷ್ಮಶರೀರಗಳ ಮತ್ತು ಇಂದ್ರಿಯಗಳ ಸೃಷ್ಟಿಯೂ ಅಡಕವಾಗಿದೆ. ಇವೆಲ್ಲವೂ ಆತ್ಮನಿಂದಲೇ ಸೃಷ್ಟವಾಗಿರುವದರಿಂದ ಆತ್ಮನಿಗಿಂತ ಬೇರೆಯಿಲ್ಲ. ಆತ್ಮನೊಬ್ಬನೇ ಪರಮಾರ್ಥ ಎಂಬುದರ ವಿವರಣೆಗೇ ಸೃಷ್ಟಿಯನ್ನು ಹೇಳಿದೆ. ಇದನ್ನು ಮುಂದೆ ಭಾಷ್ಯದಲ್ಲಿ ತಿಳಿಸಲಾಗುವದು.

4. ಅಪ್ಪೆಂದರೆ ಇಲ್ಲಿ ಪಂಚಭೂತಗಳೇ. ಛಾ. ಭಾ. ೫-೩-೩, ಸೂ. ಭಾ. ೩-೧-೨ನ್ನು ನೋಡಿ.

**ನನ್ನು**[1] ಎಂದರೆ ತಲೆ, ಕೈ–ಮುಂತಾದವುಗಳುಳ್ಳ ಪುರುಷಾಕಾರವನ್ನು, ಮೇಲಕ್ಕೆತ್ತಿ ನೀರಿನಿಂದ ತೆಗೆದುಕೊಂಡು, ಕುಂಬಾರನು ನೆಲದಿಂದ ಮಣ್ಣುಮುದ್ದೆಯನ್ನು (ಎತ್ತಿ ಕೊಳ್ಳುವಂತೆ ಎತ್ತಿ ತೆಗೆದುಕೊಂಡು) ಒಟ್ಟುಗೂಡಿಸಿದನು ಎಂದರೆ ಒಟ್ಟುಮಾಡಿದನು, ಆದರ ಅವಯವಗಳನ್ನು ಜೋಡಿಸಿ ದುಂಡುಮಾಡಿದನು ಎಂದರ್ಥ. ॥ ೩ ॥

**ತಮಭ್ಯತಪತ್ ತಸ್ಯಾಭಿತಪ್ತಸ್ಯ ಮುಖಂ ನಿರಭಿದ್ಯತ ಯಥಾಣ್ಡಮ್ । ಮುಖಾದ್ವಾಗ್ವಾಚೋಽಗ್ನಿರ್ನಾಸಿಕೇ ನಿರಭಿದ್ಯೇತಾಂ ನಾಸಿಕಾಭ್ಯಾಂ ಪ್ರಾಣಃ ಪ್ರಾಣಾದ್ವಾಯುರಕ್ಷಿಣೀ ನಿರಭಿದ್ಯೇತಾಮಕ್ಷೀ[3]ಭ್ಯಾಂ ಚಕ್ಷುಶ್ಚ ಕ್ಷುಷ ಆದಿತ್ಯಃ ಕರ್ಣೌ ನಿರಭಿದ್ಯೇತಾಂ ಕರ್ಣಾಭ್ಯಾಂ ಶ್ರೋತ್ರಂ ಶ್ರೋತ್ರಾ ದ್ದಿಶಸ್ತ್ವಙ್ನಿರಭಿದ್ಯತ ತ್ವಚೋ ಲೋಮಾನಿ ಲೋಮಭ್ಯ ಓಷಧಿವನಸ್ಪ ತಯೋ ಹೃದಯಂ ನಿರಭಿದ್ಯತ ಹೃದಯಾನ್ಮನೋ ಮನಸಶ್ಚನ್ದ್ರಮಾ ನಾಭಿರ್ನಿರಭಿದ್ಯತ ನಾಭ್ಯಾ ಅಪಾನೋಽಪಾನಾನ್ಮೃತ್ಯುಃ ಶಿಶ್ನಂ ನಿರಭಿ ದ್ಯತ ಶಿಶ್ನಾದ್ರೇತೋ ರೇತಸ ಆಪಃ ॥೪॥**

೪. ಅದನ್ನು ಕುರಿತು ತಪಸ್ಸುಮಾಡಿದನು. ಹೀಗೆ ತಪ್ತವಾದ ಅದಕ್ಕೆ ಅಂಡದಂತೆ ಮುಖವು ಒಡೆದುಕೊಂಡಿತು; ಮುಖದಿಂದ ವಾಕ್ಕು, ವಾಕ್ಕಿನಿಂದ ಅಗ್ನಿ. ನಾಸಿಕಗಳು ಒಡೆದುಕೊಂಡವು; ನಾಸಿಕಗಳಿಂದ ಪ್ರಾಣವು, ಪ್ರಾಣದಿಂದ ವಾಯು. ಕಣ್ಣುಗಳು ಒಡೆದುಕೊಂಡವು; ಕಣ್ಣುಗ ಳಿಂದ ಚಕ್ಷುಸ್ಸು, ಚಕ್ಷುಸ್ಸಿನಿಂದ ಆದಿತ್ಯನು. ಕಿವಿಗಳು ಒಡೆದುಕೊಂಡವು; ಕಿವಿಗಳಿಂದ ಶ್ರೋತ್ರವು, ಶ್ರೋತ್ರದಿಂದ ದಿಕ್ಕುಗಳು. ಚರ್ಮವು ಒಡೆದು ಕೊಂಡಿತು; ಚರ್ಮದಿಂದ ಲೋಮಗಳು, ಲೋಮಗಳಿಂದ ಮರಗಿಡಗಳು. ಹೃದಯವು ಒಡೆದುಕೊಂಡಿತು, ಹೃದಯದಿಂದ ಮನಸ್ಸು, ಮನಸ್ಸಿನಿಂದ ಚಂದ್ರನು. ಹೊಕ್ಕುಳು ಒಡೆದುಕೊಂಡಿತು, ಹೊಕ್ಕುಳಿನಿಂದ ಅಪಾನವು,

---

1. ಇದೇ ವಿರಾಟ್ಪುರುಷನ ಶರೀರವು. ಪುರುಷಪ್ರಕಾರವಮ್ ಎಂಬ ಪಾಠಾಂತರಕ್ಕೂ ಪುರುಷನಂತಿರುವ (ಆಕಾರವನ್ನು) ಎಂದೇ ಅರ್ಥ.

3. ‘ ಅಕ್ಷಿಭ್ಯಾಂ ’ ಎಂದು ವಾ॥ ಪಾಠ.

ಅಪಾನದಿಂದ ಮೃತ್ಯು. ಶಿಶ್ನವು ಒಡೆದುಕೊಂಡಿತು. ಶಿಶ್ನದಿಂದ ರೇತಸ್ಸು, ರೇತಸ್ಸಿನಿಂದ ಅಪ್ಪು.

## ವಿರಾಟ್ಪುರುಷನಿಂದ ದೇವತೆಗಳ ಉತ್ಪತ್ತಿ

(ಭಾಷ್ಯ)

೩೫. ತಂ ಪಿಣ್ಡಂ ಪುರುಷವಿಧಮ್ ಉದ್ದಿಶ್ಯ ಅಭ್ಯತಪತ್ । ತದಭಿಧ್ಯಾನಂ ಸಂಕಲ್ಪಂ ಕೃತವಾನ್ ಇತ್ಯರ್ಥಃ । "ಯಸ್ಯ ಜ್ಞಾನಮಯಂ ತಪಃ" (ಮುಂ. ೧-೧-೯) ಇತ್ಯಾದಿಶ್ರುತೇಃ । ತಸ್ಯ ಅಭಿತಪ್ತಸ್ಯ ಈಶ್ವರಸಙ್ಕಲ್ಪೇನ ತಪಸಾ ಅಭಿತಪ್ತಸ್ಯ ಪಿಣ್ಡಸ್ಯ ಮುಖಂ ನಿರಭಿದ್ಯತ ಮುಖಾಕಾರಂ ಸುಷಿರಮ್ ಅಜಾಯತ । ಯಥಾ ಪಕ್ಷಿಣಃ ಅಣ್ಡಂ ನಿರ್ಭಿದ್ಯತೇ ಏವಮ್ । ತಸ್ಮಾಚ್ಚ ನಿರ್ಭಿನ್ನಾತ್ ಮುಖಾತ್ ವಾಕ್ ಕರಣಮ್ ಇನ್ದ್ರಿಯಮ್ ನಿರವರ್ತತ । ತದಧಿಷ್ಠಾತಾ ಅಗ್ನಿಃ ತತೋ ವಾಚಃ ಲೋಕಪಾಲಃ । ತಥಾ ನಾಸಿಕೇ ನಿರಭಿದ್ಯೇತಾಮ್ । ನಾಸಿಕಾಭ್ಯಾಂ ಪ್ರಾಣಃ । ಪ್ರಾಣಾದ್ವಾಯುಃ । ಇತಿ ಸರ್ವತ್ರ ಅಧಿಷ್ಠಾನಂ ಕರಣಂ ದೇವತಾ ಚ ತ್ರಯಂ ಕ್ರಮೇಣ ನಿರ್ಭಿನ್ನಮಿತಿ । ಅಕ್ಷಿಣೀ, ಕರ್ಣೌ, ತ್ವಕ್ । ಹೃದಯಮ್ ಅನ್ತಃಕರಣಾಧಿಷ್ಠಾನಮ್ । ಮನಃ ಅನ್ತಃಕರಣಮ್ । ನಾಭಿಃ ಸರ್ವಪ್ರಾಣಬನ್ಧನಸ್ಥಾನಮ್ । ಅಪಾನಸಂಯುಕ್ತತ್ವಾತ್ [1] ಅಪಾನ ಇತಿ ಪಾಯ್ವಿನ್ದ್ರಿಯಮುಚ್ಯತೇ । ತಸ್ಯ ಅಧಿಷ್ಠಾತ್ರೀ ದೇವತಾ ಮೃತ್ಯುಃ । ಯಥಾ ಅನ್ಯತ್ರ ತಥಾ ಶಿಶ್ನಂ ನಿರಭಿದ್ಯತ ಪ್ರಜನನೇನ್ದ್ರಿಯಸ್ಥಾನಮ್ । ಇನ್ದ್ರಿಯಂ ರೇತಃ ರೇತೋವಿಸರ್ಗಾರ್ಥತ್ವಾತ್ ಸಹ ರೇತಸಾ ಉಚ್ಯತೇ । ರೇತಸ ಆಪಃ ಇತಿ ॥

(ಭಾಷ್ಯಾರ್ಥ)

ಆ ಪುರುಷಾಕಾರವಾದ [2] ಮುದ್ದೆಯನ್ನು ಕುರಿತು (ಅವನು) ತಪಸ್ಸುಮಾಡಿದನು; ಅದರ ಧ್ಯಾನವನ್ನು ಎಂದರೆ ಸಂಕಲ್ಪವನ್ನು ಮಾಡಿದನು ಎಂದರ್ಥ. "ಯಾವನ ತಪಸ್ಸು ಜ್ಞಾನಮಯವಾಗಿರುವದೋ" (ಮು. ೧-೧-೯) ಎಂಬ ಶ್ರುತಿಯು (ಇದಕ್ಕೆ ಪ್ರಮಾಣವು).[3]

---

1. "ತಸ್ಮಾತ್ ಅಪಾನಸಂಯುಕ್ತಾತ್ !" ಎಂಬ ಪಾಠದಲ್ಲಿ 'ತಸ್ಮಾತ್' ಹೆಚ್ಚು.

2. ಬೃ. ಭಾ. ೧-೪-೧ರಲ್ಲಿ 'ಪುರುಷವಿಧಃ' ಎಂಬುದರ ಅರ್ಥವನ್ನು ನೋಡಿರಿ.

3. ಈಶ್ವರನು ಜಗತ್ತನ್ನು ಸೃಷ್ಟಿಸುವದಕ್ಕೆ ಶಾರೀರತಪಸ್ಸನ್ನು ಮಾಡುವದಿಲ್ಲವೆಂಬುದಕ್ಕೆ ಇದು ಪ್ರಮಾಣವು. ಸಂಕಲ್ಪಮಾತ್ರದಿಂದ ಆತನು ಸೃಷ್ಟಿಸುತ್ತಾನೆ.

ಹಾಗೆ ತಪ್ತವಾದ ಅದಕ್ಕೆ ಈಶ್ವರನ ಸಂಕಲ್ಪವೆಂಬ ತಪಸ್ಸಿನಿಂದ ಬಿಸಿಯಾದ ಆ ಮುದ್ದೆಗೆ ಮುಖವು ಒಡೆದುಕೊಂಡಿತು, ಮುಖದ ಆಕಾರದ ಬಿಲವು ಆಯಿತು. ಹಕ್ಕಿಯ ಮೊಟ್ಟೆಯು ಹೇಗೆ ಒಡೆದುಕೊಳ್ಳುವದೋ ಹಾಗೆ (ಒಡೆದುಕೊಂಡಿತು). ಹಾಗೆ ಒಡೆದುಕೊಂಡ ಮುಖದಿಂದ ವಾಕ್ಕೆಂಬ ಕರಣವಾದ ಇಂದ್ರಿಯವು[1] ಉಂಟಾಯಿತು; ಆ ವಾಕ್ಕಿನಿಂದ ಅದನ್ನು ಆಳುವ ಅಗ್ನಿ ಎಂಬ ಲೋಕಪಾಲನಾದ ಅಗ್ನಿಯು (ಹುಟ್ಟಿದನು). ಹೀಗೆಯೇ ಮೂಗಿನ ಸೊಳ್ಳೆಗಳು ಒಡೆದುಕೊಂಡವು; ಮೂಗಿನ ಸೊಳ್ಳೆಗಳಿಂದ ಪ್ರಾಣವು, ಪ್ರಾಣದಿಂದ ವಾಯು.[2] ಹೀಗೆ ಎಲ್ಲಾ ಕಡೆಯಲ್ಲಿಯೂ ಅಧಿಷ್ಠಾನ, ಕರಣ, ದೇವತೆ–ಈ ಮೂರೂ ಕ್ರಮವಾಗಿ ಒಡೆದುಕೊಂಡವು (ಎಂದು ಅರ್ಥಮಾಡಬೇಕು). ಕಣ್ಣುಗಳು, ಕಿವಿಗಳು, ಚರ್ಮ; ಹೃದಯವೆಂಬುದು ಅಂತಃಕರಣದ ಅಧಿಷ್ಠಾನವು, ಮನಸ್ಸೆಂದರೆ ಅಂತಃಕರಣವು.[3] ಹೊಕ್ಕುಳು ಎಂಬುದು ಎಲ್ಲಾ ಪ್ರಾಣಗಳನ್ನೂ ಬಂಧಿಸುವ ಸ್ಥಾನವು. (ಆ ಹೊಕ್ಕುಳಿನಿಂದ ಅಪಾನವು ಹುಟ್ಟುತ್ತದೆ)[4] ಅಪಾನದಿಂದೊಡಗೂಡಿರುವದರಿಂದ ಪಾಯ್ವಿಂದ್ರಿಯವು ಅಪಾನವೆನಿಸುವದು. ಅದಕ್ಕೆ ಅಧಿಷ್ಠಾತೃವಾದ[5] ದೇವತೆಯು ಮೃತ್ಯು. ಮಿಕ್ಕ ಸಂದರ್ಭಗಳಲ್ಲಿ ಹೇಗೋ ಹಾಗೆ ಜನನೇಂದ್ರಿಯಕ್ಕೆ ಸ್ಥಾನವಾದ ಶಿಶ್ನವು ಒಡೆದುಕೊಂಡಿತು. ರೇತಸ್ಸೆಂಬುದು ಇಂದ್ರಿಯವು; ರೇತಸ್ಸನ್ನು ಬಿಡುವದಕ್ಕೆ

---

1. ವಾಕ್ಕೇ ಮುಂತಾದ ಕರಣಗಳು ಅಪಂಚೀಕೃತವಾದ ಭೂತಗಳಿಂದ ಹುಟ್ಟುತ್ತವೆ, ಮುಖಾದಿಗೋಲಕಗಳಿಂದ ಹುಟ್ಟುವದಿಲ್ಲ; ಆದರೂ ಮುಖವೇ ಮುಂತಾದವುಗಳಲ್ಲಿ ಅವು ಅಭಿವ್ಯಕ್ತವಾಗುತ್ತವೆಯಾದ್ದರಿಂದ ಮುಖದಿಂದ ವಾಕ್ಕು ಹುಟ್ಟಿತು ಎಂದು ಹೇಳಿದೆ ಎಂದು (ಆ||) ವ್ಯಾಖ್ಯಾನಕಾರರು ಬರೆದಿರುತ್ತಾರೆ. ಆತ್ಮನಿಂದ ಹುಟ್ಟಿದ ವಿರಾಟ್ಪುರುಷನ ದೇಹದಿಂದಲೇ ಎಲ್ಲಾ ಕರಣಗಳೂ ಹುಟ್ಟಿದವಾದ್ದರಿಂದ ಆತ್ಮನನ್ನು ಬಿಟ್ಟು ಯಾವದೂ ಇಲ್ಲ ಎಂಬುದು ಇಲ್ಲಿ ಪ್ರಕೃತವಾಗಿದೆ. ಸೃಷ್ಟಿ ವಿಚಾರದಲ್ಲಿ ಸ್ವಲ್ಪ ಹೆಚ್ಚುಕಡಿಮೆಯಿದ್ದರೂ ಸಿದ್ಧಾಂತಕ್ಕೆ ಬಾಧಕವಿಲ್ಲ.

2. ವಾಯುದೇವತೆ.

3. ಹೃದಯವೆಂಬುದು ಸ್ಥಾನ, ಮನಸ್ಸೆಂಬುದು ಕರಣ; ಇಂದ್ರಿಯಸ್ಥಾನಗಳನ್ನು ಈಚಿನ ವೇದಾಂತಿಗಳು ಗೋಲಕಗಳೆಂದು ಕರೆಯುತ್ತಾರೆ.

4. "ತಸ್ಮಾತ್ ಅಪಾನಃ" ಎಂದಾದರೂ ಪಾಠವಿರಬೇಕು; ಇಲ್ಲದಿದ್ದರೆ 'ತಸ್ಮಾತ್' ಬಿಟ್ಟುಬಿಡಬಹುದು.

5. ಅದನ್ನು ಆಳುವ.

ಉಪಯೋಗವಾಗುವದರಿಂದ ರೇತಸ್ಸಿನೊಡನೆ (ಅದನ್ನು 'ರೇತಸ್ಸು' ಎಂದು ಕರೆದಿದೆ. [1]) ರೇತಸ್ಸಿನಿಂದ ಅಪ್ಪು (ಉಂಟಾಯಿತು).[2]

---

# ಒಂದನೆಯ ಅಧ್ಯಾಯ—ಎರಡನೆಯ ಖಂಡ

## (ದೇವತೆಗಳಿಗೆ ಸಂಸಾರಬಂಧ)

---

**ತಾ ಏತಾ ದೇವತಾಃ ಸೃಷ್ಟಾ ಅಸ್ಮಿನ್ ಮಹತ್ಯರ್ಣವೇ ಪ್ರಾಪತನ್ । ತಮಶನಾಪಿಪಾಸಾಭ್ಯಾಮನ್ವವಾರ್ಜತ್ । ತಾ ಏನಮಬ್ರುವನ್ನಾಯತನಂ ನಃ ಪ್ರಜಾನೀಹಿ ಯಸ್ಮಿನ್ ಪ್ರತಿಷ್ಠಿತಾ ಅನ್ನಮದಾಮೇತಿ ॥ ೧ ॥**

೧. ಆ ಈ ಸೃಷ್ಟರಾದ ದೇವತೆಗಳು ಈ ದೊಡ್ಡ ಸಾಗರದಲ್ಲಿ ಬಿದ್ದರು. ಅವನನ್ನು ಹಸಿವುತೃಷೆಗಳಿಂದ ಕೂಡಿಸಿದನು. ಅವರು ಇವನನ್ನು "ಎಲ್ಲಿ ಇದ್ದುಕೊಂಡು (ನಾವು) ಅನ್ನವನ್ನು ತಿನ್ನಬಹುದೋ (ಅಂಥ) ಸ್ಥಳವನ್ನು ಆಲೋಚಿಸು" ಎಂದರು.

### ಸಂಸಾರದ ವರ್ಣನೆ

(ಭಾಷ್ಯ)

೩೬. ತಾ ಏತಾ ಅಗ್ನ್ಯಾದಯೋ ದೇವತಾಃ ಲೋಕಪಾಲತ್ವೇನ ಸಙ್ಕಲ್ಪ್ಯ ಸೃಷ್ಟಾ ಈಶ್ವರೇಣ, ಅಸ್ಮಿನ್ (ಸಂಸಾರಾ)ರ್ಣವೇ ಸಂಸಾರಸಮುದ್ರೇ ಮಹತಿ ಅವಿದ್ಯಾಕಾಮಕರ್ಮಪ್ರಭವದುಃಖೋದಕೇ, ತೀವ್ರರೋಗಜರಾಮೃತ್ಯುಮಹಾಗ್ರಾಹೇ, ಅನಾದೌ, ಅನನ್ತೇ, ಅಪಾರೇ, ನಿರಾಲಮ್ಬೇ, ವಿಷಯೇನ್ದ್ರಿಯಜೀವಿತಸುಖಲವ

---

1. ಇಂದ್ರಿಯಸೃಷ್ಟಿಯನ್ನು ಹೇಳಬೇಕಾಗಿರುವಲ್ಲಿ ರೇತಸ್ಸೆಂದಿರುವದರಿಂದ ಲಕ್ಷಣಾರ್ಥವನ್ನು ಕಲ್ಪಿಸಬೇಕು ಎಂದು ಭಾವ.

2. ಈ ಮಂತ್ರದಲ್ಲಿರುವ ವಾಕ್ಯಗಳ ಅರ್ಥವು ಸ್ಪಷ್ಟವೆಂಬ ಕಾರಣದಿಂದ ಭಾಷ್ಯದಲ್ಲಿ ಪ್ರತಿಯೊಂದು ಪದಕ್ಕೂ ಅರ್ಥವನ್ನು ಕೊಟ್ಟಿಲ್ಲ.

ಲಕ್ಷಣವಿಶ್ರಾಮೇ, ಪಞ್ಚೇನ್ದ್ರಿಯಾರ್ಥತೃಷ್ಣಾಮಾರುತವಿಕ್ಷೋಭೋತ್ಥಿತಾನರ್ಥಶತಮಹೋರ್ಮೌ, ಮಹಾರೌರವಾದ್ಯನೇಕನಿರಯಗತಹಾಹೇತ್ಯಾದಿಕೂಜಿತಾಕ್ರೋಶನೋದ್ಭೂತಮಹಾರವೇ, ಸತ್ಯಾರ್ಜವದಾನದಯಾಹಿಂಸಾಶಮದಮಧೃತ್ಯಾದ್ಯಾತ್ಮಗುಣಪಾಥೇಯಪೂರ್ಣಜ್ಞಾನೋಡುಪೇ ಸತ್ಸಙ್ಗಸರ್ವತ್ಯಾಗಮಾರ್ಗೇ ಮೋಕ್ಷತೀರೇ ಏತಸ್ಮಿನ್ ಮಹತಿ ಅರ್ಣವೇ ಪ್ರಾಪತನ್ ಪತಿತವತ್ಯಃ ||

(ಭಾಷ್ಯಾರ್ಥ)

ಲೋಕಪಾಲಕರಾಗಲೆಂದು ಸಂಕಲ್ಪಿಸಿ ಈಶ್ವರನಿಂದ ಸೃಷ್ಟರಾದ ಆ ಈ[1] ಅಗ್ನಿಯೇ ಮೊದಲಾದ[2] ದೇವತೆಗಳು ಈ ಅರ್ಣವದಲ್ಲಿ ಎಂದರೆ ಸಂಸಾರವೆಂಬ[2] ಕಡಲಿನಲ್ಲಿ ದೊಡ್ಡ (ಸಾಗರದಲ್ಲಿ) ಎಂದರೆ ಅವಿದ್ಯೆ, ಕಾಮ, ಕರ್ಮ–ಇವುಗಳಿಂದುಂಟಾಗಿರುವ ದುಃಖವೆಂಬ ನೀರುಳ್ಳದ್ದಾಗಿಯೂ ತಡೆಯಲಾರದ ಬೇನೆಗಳು, ಮುಪ್ಪು, ಸಾವು–ಎಂಬ ದೊಡ್ಡ ಮೊಸಳೆಗಳಿಂದ ಕೂಡಿದ್ದಾಗಿಯೂ, ಮೊದಲಿಲ್ಲದೆ ಕೊನೆಯಿಲ್ಲದೆ[4] ಪಾರವಿಲ್ಲದೆ ಇರುವದಾಗಿಯೂ, ಆಶ್ರಯವಿಲ್ಲದ್ದಾಗಿಯೂ[5] ವಿಷಯೇಂದ್ರಿಯಗಳಿಂದುಂಟಾಗುವ ಒಂದಿಷ್ಟು[6] ಸುಖವೆಂಬ ವಿಶ್ರಾಂತಿಗಳುಳ್ಳದ್ದಾಗಿಯೂ, ಐದು ಇಂದ್ರಿಯಾರ್ಥಗಳ ಬಯಕೆಯೆಂಬ ಬಿರುಗಾಳಿಯ ಹೊಡೆತದಿಂದ ಎದ್ದ ಅನರ್ಥಗ

---

1. 'ಆ' ಎಂದರೆ ಈ ಆರಣ್ಯಕದ ಎರಡನೆಯ ಅಧ್ಯಾಯದಲ್ಲಿ "ಸಂಭೂಯ ದೇವತಾ ಅಪ್ಯೇತಿ" (ಐ. ಆ. ೨-೨-೪) ಎಂದು ಹೇಳಿದ್ದವರು; 'ಈ' ಎಂದರೆ ಲೋಕಪಾಲಕರಾಗಲಿ ಎಂದು ಈಶ್ವರನು ಸೃಷ್ಟಿಸಿದನೆಂದು ಈಗ ವರ್ಣಿಸಿರುವವರು.

2. ಅಗ್ನಿ, ವಾಯು, ಆದಿತ್ಯ, ದಿಗ್ದೇವತೆಗಳು, ಓಷಧಿ ವನಸ್ಪತಿದೇವತೆಗಳು, ಚಂದ್ರ, ಮೃತ್ಯು, ಅಬ್ದೇವತೆಗಳು–ಇವರೆಲ್ಲ ವಿರಾಟ್ಪುರುಷನಿಂದ ಉಂಟಾದರೆಂದು ಹಿಂದಿನ ಖಂಡದಲ್ಲಿ ಹೇಳಿರುತ್ತದೆ.

3. 'ಸಂಸಾರಾರ್ಣವೇ' ಎಂಬ ಪಾಠದಲ್ಲಿ ಸಂಸಾರವೆಂಬ ಮಾತು ಹೆಚ್ಚು, 'ಅರ್ಣವೇ ಸಂಸಾರಸಮುದ್ರೇ' ಎಂದಿದ್ದರೆ ಸಾಕು.

4. ಕಾಲದಲ್ಲಿ ಪ್ರಾರಂಭವಾಗುವದಲ್ಲ, ಕೊನೆಗಾಣುವದೂ ಅಲ್ಲ; ಬ್ರ. ಸೂ. ೨-೧-೩೬; ಜ್ಞಾನದಿಂದ ಮಾತ್ರವೇ ಇದರ ನಾಶವೆಂದು ಭಾವ.

5. ಮಳಲ ಹಗೇವಿನಂತೆ ಎಷ್ಟು ಹುಡುಕಿದರೂ ಇದರ ಕೆಳಗೆ ಗಟ್ಟಿಯಾದ ಆಶ್ರಯವು ಸಿಕ್ಕುವದಿಲ್ಲ. ಇದೂ ಅಜ್ಞಾನದ ದೃಷ್ಟಿಯಿಂದಲೇ; ಏಕೆಂದರೆ ಸರಿಯಾಗಿ ನೋಡಿದರೆ ಬ್ರಹ್ಮವೇ ಇದಕ್ಕೆ ಆಶ್ರಯವಾಗಿರುತ್ತದೆ.

6. ಇಂದ್ರಿಯ ಮತ್ತು ವಿಷಯಗಳ ಸಂಬಂಧದಿಂದ ಉಂಟಾಗುವ ಸುಖವು ಸ್ವಲ್ಪ ಹೊತ್ತು ಮಾತ್ರವೇ ಇದ್ದು ದುಃಖದಲ್ಲಿ ಕೊನೆಗಾಣುವದು.

ಳೆಂಬ ನೂರಾರು ಹೆದ್ದೆರೆಗಳುಳ್ಳದ್ದಾಗಿಯೂ, ಮಹಾರೌರವವೇ[1] ಮುಂತಾದ ನರಕಗಳಲ್ಲಿರುವ ಹಾಹಾ!–ಮುಂತಾದ ಕೂಗುಗಳಿಂದಲೂ ಬೈಗುಳಿಂದಲೂ ಉಂಟಾದ ದೊಡ್ಡ ಗದ್ದಲವುಳ್ಳದ್ದಾಗಿಯೂ, ಸತ್ಯ, ಆರ್ಜವ, ದಾನ, ದಯೆ, ಅಹಿಂಸೆ, ಶಮ, ದಮ, ಧೃತಿ–ಮುಂತಾದ **ಆತ್ಮಗುಣಗಳೆಂಬ**[2] (ದಾರಿಯ) ಬುತ್ತಿಯಿಂದ ತುಂಬಿರುವ ಜ್ಞಾನವೆಂಬ ದೋಣಿಯುಳ್ಳದ್ದಾಗಿಯೂ, ಸತ್ಸಂಗ, ಸರ್ವತ್ಯಾಗ–ಎಂಬ ಮಾರ್ಗಗಳುಳ್ಳದ್ದಾಗಿಯೂ ಮೋಕ್ಷವೆಂಬ ದಡವುಳ್ಳದ್ದಾಗಿಯೂ ಇರುವ ಈ ದೊಡ್ಡ ಅರ್ಣವದಲ್ಲಿ ಬಿದ್ದರು, ಬಿದ್ದವರಾದರು!

## ದೇವತಾಪ್ರಾಪ್ತಿಯಿಂದಲೂ ಮುಕ್ತಿಯಿಲ್ಲ

(ಭಾಷ್ಯ)

೩೭. ತಸ್ಮಾತ್ ಅಗ್ನ್ಯಾದಿದೇವತಾಪ್ಯಯಲಕ್ಷಣಾಪಿ ಯಾ ಗತಿರ್ವ್ಯಾಖ್ಯಾತಾ ಜ್ಞಾನಕರ್ಮಸಮುಚ್ಚಯಾನುಷ್ಠಾನಫಲಭೂತಾ ಸಾಪಿ ನಾಲಂ ಸಂಸಾರದುಃಖೋಪಶಮಾಯ ಇತ್ಯಯಂ ವಿವಕ್ಷಿತೋಽರ್ಥೋಽತ್ರ। ಯತ ಏವಮ್ ತಸ್ಮಾತ್ ಏವಂ ವಿದಿತ್ವಾ ಪರಂ ಬ್ರಹ್ಮ ಆತ್ಮಾ ಆತ್ಮನಃ ಸರ್ವಭೂತಾನಾಂ ಚ ಯೋ ವಕ್ಷ್ಯಮಾಣವಿಶೇಷಣಃ ಪ್ರಕೃತಶ್ಚ ಜಗದುತ್ಪತ್ತಿಸ್ಥಿತಿಸಂಹಾರಹೇತುತ್ವೇನ ಸ ಸರ್ವಸಂಸಾರದುಃಖೋಪಶಮನಾಯ ವೇದಿತವ್ಯಃ। ತಸ್ಮಾತ್ "ಏಷ ಪನ್ಥಾ ಏತತ್ ಕರ್ಮೈತತ್ ಸತ್ಯಮ್" (೨-೧-೧) ಯದೇತತ್ ಪರಬ್ರಹ್ಮಾತ್ಮಜ್ಞಾನಮ್। "ನಾನ್ಯಃ ಪನ್ಥಾ ವಿದ್ಯತೇಽಯನಾಯ" (ಶ್ವೇ. ೩-೮ ಅಥವಾ ೬-೧೫) ಇತಿ ಮನ್ತ್ರವರ್ಣಾತ್ ॥

(ಭಾಷ್ಯಾರ್ಥ)

ಆದ್ದರಿಂದ **ಅಗ್ನಿಯೇ ಮೊದಲಾದ ದೇವತೆಗಳಲ್ಲಿ ಒಂದಾಗುವದೆಂಬ ಜ್ಞಾನಕರ್ಮಗಳೆರಡನ್ನೂ ಕೂಡಿಸಿಕೊಂಡು ಅನುಷ್ಠಾನಮಾಡುವದರ ಫಲವೆಂದು ಹಿಂದೆ (೨-೨-೪) ಯಾವ ಗತಿಯನ್ನು ತಿಳಿಸಲಾಯಿತೋ ಅದೂ ಸಂಸಾರದುಃಖವನ್ನು ನಾಶಗೊಳಿಸುವದಕ್ಕೆ ಸಾಲದು**[3] ಎಂಬುದು ಇಲ್ಲಿ ವಿವ

---

1. ವಿ. ಪು. ೫-೬ ಮುಂತಾದ ಕಡೆಗಳಲ್ಲಿ ಈ ನರಕಗಳ ವರ್ಣನೆ ಇದೆ.

2. ಗೌತಮಸ್ಮೃತಿ (೧-೯-೨೪)ಯಲ್ಲಿ ಹೇಳಿರುವ ದಯೆ, ಕ್ಷಾಂತಿ, ಅನಸೂಯತೆ, ಶೌಚ, ಅನಾಯಾಸ, ಮಂಗಲ, ಅಕಾರ್ಪಣ್ಯ, ಅಸ್ಪೃಹತೆ-ಎಂಬ ಎಂಟು ಗುಣಗಳನ್ನೇ ಅಲ್ಲದೆ ಅಮಾನಿತ್ವಾದಿಜ್ಞಾನಸಾಧನಗಳನ್ನೆಲ್ಲ ಈ ಮಾತಿನ ಅರ್ಥದಲ್ಲಿ ಅಡಕಮಾಡಬೇಕೆಂದು ಭಾವ.

3. ಉಪಾಸನೆಯೇ ಅಲ್ಲದೆ ಕರ್ಮಕ್ಕೆ ಸಂಬಂಧಪಡದೆ ಇರುವ ಆತ್ಮಜ್ಞಾನವೂ ಬೇಕು.

ಕ್ಷಿತವಾದ ವಿಷಯವು (ಎಂಬುದು ಸ್ಪಷ್ಟವಾಯಿತು). ಹೀಗಿರುವದರಿಂದ (ಇದನ್ನು) ಹೀಗೆಂದು ಅರಿತುಕೊಂಡು ತನಗೂ ಸರ್ವ ಭೂತಗಳಿಗೂ ಆತ್ಮನಾಗಿ ಮುಂದೆ[1] ಹೇಳುವ ವಿಶೇಷಣಗಳಿಂದ ಕೂಡಿದವನೂ ಜಗತ್ತಿನ ಉತ್ಪತ್ತಿ, ಸ್ಥಿತಿ, ಸಂಹಾರ– ಇವುಗಳಿಗೆ ಕಾರಣನೆಂದು ಪ್ರಕೃತನಾಗಿರುವವನೂ[2] ಆದ ಪರಬ್ರಹ್ಮವನ್ನು ಸಂಸಾರದ ದುಃಖವೆಲ್ಲ ನಾಶವಾಗುವದಕ್ಕಾಗಿ ಅರಿತುಕೊಳ್ಳಬೇಕು. ಆದ್ದರಿಂದ ಈ ಪರಬ್ರಹ್ಮ ವಿಜ್ಞಾನವೆಂಬ[3] ಇದೇ ಹಾದಿ, ಇದೇ ಕರ್ಮ, ಇದೇ ಸತ್ಯವು"[4] (೨-೧-೧). ಏಕೆಂದರೆ "(ಮುಕ್ತಿಯನ್ನು) ಪಡೆಯುವದಕ್ಕೆ ಬೇರೆ ಹಾದಿಯಿರುವದಿಲ್ಲ''. (ಶ್ವೇ. ೩-೮ ಅಥವಾ ೬-೧೫) ಎಂದು ಮಂತ್ರವರ್ಣವು ಹೇಳುತ್ತದೆ.

## ದೇವತೆಗಳಿಗೆ ಹಸಿವುಬಾಯಾರಿಕೆಗಳ ಕಾಟ

(ಭಾಷ್ಯ)

೩೮. ತಂ ಸ್ಥಾನಕರಣದೇವತೋತ್ಪತ್ತಿಬೀಜಭೂತಂ ಪುರುಷಂ ಪ್ರಥಮೋತ್ಪಾದಿತಂ ಪಿಣ್ಡಮಾತ್ಮಾನಮ್ ಅಶನಾಯಾಪಿಪಾಸಾಭ್ಯಾಮ್ ಅನ್ವವಾರ್ಜತ್ ಅನುಗಮಿತವಾನ್ ಸಂಯೋಜಿತವಾನ್ ಇತ್ಯರ್ಥಃ । ತಸ್ಯ ಕಾರಣಭೂತಸ್ಯ ಅಶನಾಯಾದಿದೋಷವತ್ತ್ವಾತ್ ತತ್ಕಾರ್ಯಭೂತಾನಾಮಪಿ ದೇವತಾನಾಮ್ ಅಶನಾಯಾದಿಮತ್ತ್ವಮ್ । ತಾಃ ತತಃ ಅಶನಾಯಾಪಿಪಾಸಾಭ್ಯಾಂ ಪೀಡ್ಯಮಾನಾಃ ಏವಂ ಪಿತಾಮಹಂ ಸ್ರಷ್ಟಾರಮ್ ಅಬ್ರುವನ್ ಉಕ್ತವತ್ಯಃ । ಆಯತನಮ್ ಅಧಿಷ್ಠಾನಂ ನಃ ಅಸ್ಮಭ್ಯಂ ಪ್ರಜಾನೀಹಿ ವಿಧತ್ಸ್ವ । ಯಸ್ಮಿನ್ ಆಯತನೇ ಪ್ರತಿಷ್ಠಿತಾಃ ಸಮರ್ಥಾಃ ಸತ್ಯಃ ಅನ್ನಮ್ ಅದಾಮ ಭಕ್ಷಯಾಮ ಇತಿ ॥

---

1. ಈ ಉಪನಿಷತ್ತಿನ ಮೂರನೆಯ ಅಧ್ಯಾಯದ ಒಂದನೆಯ ಖಂಡದಲ್ಲಿ.

2. ಉಪಕ್ರಮದಲ್ಲಿ ಆತ್ಮನೊಬ್ಬನೇ ಇದ್ದನು ಎಂದೂ ಅವನಿಂದಲೇ ಎಲ್ಲವೂ ಆಯಿತೆಂದೂ ಹೇಳಿರುವದರಿಂದ ಆತ್ಮನು ಎಲ್ಲಕ್ಕೂ ಆತ್ಮನು ಎಂದಂತೆ ಆಯಿತು. ಉಪಸಂಹಾರದಲ್ಲಿಯೂ ಅದೇ ವಿಷಯವಿದೆ.

3. ಉಪಾಸನೆಯಲ್ಲ, ಕರ್ಮವೂ ಅಲ್ಲ, ಬ್ರಹ್ಮವೇ ಆತ್ಮನೆಂಬ ಜ್ಞಾನವು.

4. ಆ ಅಧ್ಯಾಯದಲ್ಲಿ ಕರ್ಮಸಂಬದ್ಧವಾದ ಸಗುಣಬ್ರಹ್ಮದ ಉಪಾಸನೆಯನ್ನು ಹೇಳಿದ್ದರೂ ಆ ಬ್ರಹ್ಮದ ವಿಜ್ಞಾನವು ಸಂಸಾರದಿಂದ ಬಿಡುಗಡೆಮಾಡಲಾರದೆಂದು ಇಲ್ಲಿ ಗೊತ್ತಾಗುವದರಿಂದ "ಆತ್ಮಾವಾ" ಎಂದು ಪ್ರಾರಂಭಿಸಿರುವ ಬ್ರಹ್ಮಾತ್ಮಜ್ಞಾನವನ್ನು ಹೊಗಳುವದಕ್ಕೇ ಆ ವಾಕ್ಯವು ಬಂದಿದೆ ಎಂದು ತಿಳಿಯಬೇಕು ಎಂದು ಭಾವ.

(ಭಾಷ್ಯಾರ್ಥ)

ಆವನನ್ನು ಎಂದರೆ ಸ್ಥಾನಗಳು,[1] ಕರಣಗಳು, ದೇವತೆಗಳು—ಇವು ಹುಟ್ಟು ವದಕ್ಕೆ ಕಾರಣನಾದ ಆ ಮೊದಲು ಉಂಟುಮಾಡಿದ[2] ಪುರುಷನನ್ನು ಮುದ್ದೆಯ ರೂಪ ನಾದ ಆತ್ಮನನ್ನು[3] ಹಸಿವುತೃಷೆಗಳಿಂದ ಕೂಡಿಸಿದನು. ಅನ್ವವಾರ್ಜತ್ ಎಂದರೆ ಹಿಂಬಾಲಿಸುವಂತೆ ಮಾಡಿದನು, (ಅವುಗಳೊಡನೆ) ಸೇರಿಸಿದನು ಎಂದರ್ಥ. ಆ ಕಾರಣನಾದ (ಮೂಲಪಿಂಡಾತ್ಮನು) ಹಸಿವು ಮುಂತಾದ ದೋಷವುಳ್ಳವನಾದ್ದರಿಂದ ಅವನ ಕಾರ್ಯವಾದ ದೇವತೆಗಳು ಕೂಡ[4] ಹಸಿವು ಮುಂತಾದವುಗಳುಳ್ಳವರಾದರು.

ಅವರು ಆಗ ಹಸಿವುಬಾಯಾರಿಕೆಗಳಿಂದ ಸಂಕಟಪಡುತ್ತಾ ಸೃಷ್ಟಿಕರ್ತನಾದ ಈ ಅಜ್ಜನನ್ನು[5] ಕುರಿತು ಯಾವ ಆಯತನದಲ್ಲಿದ್ದುಕೊಂಡು (ನಾವು) ಸಮರ್ಥರಾಗಿ ಅನ್ನವನ್ನು ತಿನ್ನಬಹುದೋ ಭಕ್ಷಿಸಬಹುದೋ (ಅಂಥ) ಆಯತನವನ್ನು ಎಂದರೆ ಆಶ್ರಯವನ್ನು[6] ನಮ್ಮಗಳಿಗೆ ಆಲೋಚಿಸು ಎಂದರೆ ಗೊತ್ತುಮಾಡು" ಎಂದರು.

## ದೇವತೆಗಳಿಗೆ ತಕ್ಕ ಅಧಿಷ್ಠಾನ

(ಭಾಷ್ಯ)

೩೯. ಏವಮುಕ್ತ ಈಶ್ವರಃ—

(ಭಾಷ್ಯಾರ್ಥ)

(ಅವರು) ಹೀಗೆನ್ನಲು ಈಶ್ವರನು—

**ತಾಭ್ಯೋ ಗಾಮಾನಯತ್ ತಾ ಅಬ್ರುವನ್ ನ ವೈ ನೋಽಯಮಲಮಿತಿ। ತಾಭ್ಯೋಽಶ್ವಮಾನಯತ್ ತಾ ಅಬ್ರುವನ್ ನ ವೈ ನೋಽಯಮಲ ಮಿತಿ ॥ ೨ ॥**

---

1. ಇಂದ್ರಿಯಗೋಲಕಗಳು.

2. ಪ್ರಥಮಶರೀರಿಯಾದ.

3. ವಿರಾಟ್ಪುರುಷನನ್ನು.

4. ವಿರಾಟ್ಪುರುಷನು ಮಿಕ್ಕ ಜೀವರಿಗೆಲ್ಲ ಕಾರಣನಾಗಿರುವದರಿಂದ ಅವನ ಸ್ವಭಾವ ದೋಷವು ಇವರಲ್ಲಿಯೂ ಕಾಣುತ್ತದೆ ಎಂದರ್ಥ ಬೃ. ಭಾ. ೧-೪-೧.

5. ವಿರಾಟ್ಪುರುಷನು ದೇವತೆಗಳಿಗೆ ತಂದೆ; ಅವನಿಗೂ ಈಶ್ವರನು ತಂದೆ.

6. ಶರೀರವನ್ನು. ವಿರಾಟ್ಪುರುಷನ ಶರೀರವು ಒಟ್ಟು ಶರೀರವು; ದೇವತೆಗಳಿಗೆ ಅಲ್ಲಿ ಬೇರೆಬೇರೆಯ ಸ್ಥಾನವಿಲ್ಲ. ಆ ಪುರುಷನು ದೇವತೆಗಳ ಸಮಷ್ಟಿ, ಒಟ್ಟು.

೨. ಅವರಿಗೆ ಗೋವನ್ನು ತಂದನು, ಅವರು "ಇದು ನಮಗೆ ಸಾಲದೇ ಸಾಲದು" ಎಂದರು. ಅವರಿಗೆ ಅಶ್ವವನ್ನು ತಂದನು, ಅವರು "ಇದು ನಮಗೆ ಸಾಲದೇ ಸಾಲದು" ಎಂದರು.

(ಭಾಷ್ಯ)

೪೦. ತಾಭ್ಯಃ ದೇವತಾಭ್ಯಃ ಗಾಂ ಗವಾಕೃತಿವಿಶಿಷ್ಟಂ ಪಿಣ್ಡಂ ತಾಭ್ಯ ಏವಾದ್ಭ್ಯಃ ಪೂರ್ವವತ್ ಪಿಣ್ಡಂ ಸಮುದ್ಧೃತ್ಯ ಮೂರ್ಛಯಿತ್ವಾ ಆನಯತ್ ದರ್ಶಿತವಾ । ತಾಃ ಪುನಃ ಗವಾಕೃತಿಂ ದೃಷ್ಟ್ವಾ ಅಬ್ರುವ । ನ ವೈ ನಃ ಅಸ್ಮದರ್ಥಮ್ ಅಧಿಷ್ಠಾಯ ಅನ್ನಮತ್ತುಮ್ ಅಯಂ ಪಿಣ್ಡಃ ಅಲಂ ನ ವೈ । ಅಲಂ ಪರ್ಯಾಪ್ತಃ । ಅತ್ತುಂ ನ ಯೋಗ್ಯಃ ಇತ್ಯರ್ಥಃ । ಗವಿ ಪ್ರತ್ಯಾಖ್ಯಾತೇ ತಥೈವ ತಾಭ್ಯಃ ಅಶ್ವಮ್ ಆನಯತ್ । ತಾ ಅಬ್ರುವ । ನ ವೈ ನೋಽಯಮಲಮಿತಿ । ಪೂರ್ವವತ್ ॥

(ಭಾಷ್ಯಾರ್ಥ)

ಆ ದೇವತೆಗಳಿಗೆ ಗೋವನ್ನು ಎಂದರೆ ಗೋವಿನ ಆಕಾರದ ಮುದ್ದೆಯನ್ನು, ಮೊದಲಿನಂತೆ ಅದೇ ಅಪ್ಪಿನಿಂದ[1] ಎತ್ತಿ ಒಟ್ಟುಗೂಡಿಸಿ ತಂದನು,[2] (ತಂದು) ತೋರಿಸಿದನು. ಆದರೆ ಅವರು ಗೋವಿನ ಆಕೃತಿಯನ್ನು ಕಂಡು ಇಂತೆಂದರು: ಈ ಮುದ್ದೆಯು[3] ನಮಗೆ ಇದ್ದುಕೊಂಡು ಅನ್ನವನ್ನು ತಿನ್ನುವದಕ್ಕೆ ಸಾಲದೇ ಸಾಲದು. (ನ) ಅಲಮ್ ಸಾಲದು ಎಂದರೆ ತಿನ್ನುವದಕ್ಕೆ ಸಾಕಷ್ಟು (ಅಲ್ಲ) ಎಂದರ್ಥ. ಗೋವನ್ನು (ಅವರು) ಬೇಡವೆನ್ನಲು ಅವರಿಗೆ ಅಶ್ವವನ್ನು ತಂದನು. ಅವರು "ಇದು ನಮಗೆ ಸಾಲದೇ ಸಾಲದು" ಎಂದರು. ಇದನ್ನು ಮೊದಲಿನ (ವಾಕ್ಯ)ದಂತೆಯೇ (ಅರ್ಥವನ್ನು ಮಾಡಿಕೊಳ್ಳಬೇಕು).[4]

---

1. ಅಪ್ಪೆಂದರೆ ಹಿಂದೆ ವಿವರಿಸಿರುವಂತೆ ಪಂಚಭೂತಗಳೇ. ವಿರಾಟ್ಪುರುಷನಿಂದ ಹಿಡಿದು ಎಲ್ಲಾ ಪ್ರಾಣಿಗಳ ಶರೀರಗಳೂ ಐದು ಭೂತಗಳಿಂದಾಗಿರುವವು.

2. "ಆನೀಯ ತದ್‌ದರ್ಶಿತವಾನ್" ಎಂಬ ಪಾಠವಿದ್ದರೆ ಸರಳವಾಗಿ ಅನ್ವಯವಾಗುತ್ತದೆ.

3. ಅಯಮ್ ಎಂಬ ಮೂಲದ ಪುಲ್ಲಿಂಗವಿಶೇಷಣವನ್ನು ಭಾಷ್ಯಕಾರರು ಪಿಣ್ಡಃ ಎಂಬ ಪುಲ್ಲಿಂಗಕ್ಕೆ ವಿಶೇಷಣವಾಗಿ ತೆಗೆದುಕೊಂಡಿರುತ್ತಾರೆ ಗೋವಿಗೆ ವಿಶೇಷಣವನ್ನು ಮಾಡಿದರೆ 'ಮೊದಲು ಎತ್ತನ್ನು ತಂದನು' ಎಂದು ಅರ್ಥವನ್ನು ಮಾಡಬೇಕಾಗುತ್ತದೆ.

4. 'ದೇವತೆಗಳು ಮೊದಲಿನಂತೆ ಕುದುರೆಯೂ ಸಾಲದೆಂದರು' ಎಂದೂ ಅರ್ಥ ಮಾಡಬಹುದು.

**ತಾಭ್ಯಃ ಪುರುಷಮಾನಯತ್ ತಾ ಅಬ್ರುವನ್ ಸುಕೃತಂ ಬತೇತಿ । ಪುರುಷೋ ವಾವ ಸುಕೃತಮ್ । ತಾ ಅಬ್ರವೀದ್ಯಥಾಯತನಂ ಪ್ರವಿಶತೇತಿ ॥ ೩ ॥**

೩. ಅವರಿಗೆ ಪುರುಷನನ್ನು ತಂದನು. ಅವರು "ಸುಕೃತವಾಯಿತು, ಭಲೆ!" ಎಂದರು. ಪುರುಷನೇ ಸುಕೃತವು. ಅವರನ್ನು "ಆಯತನಕ್ಕೆ ತಕ್ಕಂತೆ ಪ್ರವೇಶಿಸಿರಿ!" ಎಂದನು.

(ಭಾಷ್ಯ)

೪೧. ಸರ್ವಪ್ರತ್ಯಾಖ್ಯಾನೇ ತಾಭ್ಯಃ ಪುರುಷಮ್ ಆನಯತ್ ಸ್ವಯೋನಿಭೂತಮ್ । ತಾಃ ಸ್ವಯೋನಿಂ[1] ಪುರುಷಂ ದೃಷ್ಟ್ವಾ ಅಖಿನ್ನಾಃ ಸತ್ಯಃ ಸುಕೃತಂ ಶೋಭನಂ ಕೃತಮ್ ಇದಮಧಿಷ್ಠಾನಂ ಬತ ಇತ್ಯಬ್ರುವನ್ । ತಸ್ಮಾತ್ ಪುರುಷೋ ವಾವ ಪುರುಷ ಏವ ಸುಕೃತಮ್ । ಸರ್ವಪುಣ್ಯಕರ್ಮಹೇತುತ್ವಾತ್ । ಸ್ವಯಂ ವಾ ಸ್ವೇನೈವ ಆತ್ಮನಾ ಸ್ವಮಾಯಾಭಿಃ ಕೃತತ್ವಾತ್ ಸುಕೃತಮುಚ್ಯತೇ ।

(ಭಾಷ್ಯಾರ್ಥ)

ಎಲ್ಲವನ್ನೂ ಬೇಡವೆನ್ನಲಾಗಿ ಅವರಿಗೆ ತಮ್ಮ ಕಾರಣನಾದ ಪುರುಷನನ್ನು (ಎತ್ತಿ) ತಂದನು. ಅವರು ತಮ್ಮ ಕಾರಣನಾದ[2] ಪುರುಷನನ್ನು ಕಂಡು ಹರ್ಷದಿಂದ ಕೂಡಿದವರಾಗಿ[3] "ಸುಕೃತವಾಯಿತು, ಈ ಆಶ್ರಯವು ಉತ್ತಮವಾಗಿ ಆಗಿರುತ್ತದೆ. ಭಲೆ!" ಎಂದರು. ಆದ್ದರಿಂದ ಪುರುಷನೇ ಸುಕೃತವು. ಏಕೆಂದರೆ ಅವನು ಎಲ್ಲಾ ಪುಣ್ಯಕರ್ಮ (ಸುಕೃತ)ಗಳಿಗೂ[4] ಕಾರಣನಾಗಿರುತ್ತಾನೆ; ಅಥವಾ ತಾನೇ

---

1. ವಾ॥ ಪಾಠ.

2. ದೇವತೆಗಳಿಗೆ ವಿರಾಟ್ಪುರುಷನು ಕಾರಣನು; ಮನುಷ್ಯನು ಆ ಪುರುಷನ ಆಕಾರದಲ್ಲಿರುವದರಿಂದ ಇವನನ್ನೂ ಪುರುಷನೆಂದು ಕರೆದಿದೆ.

3. ಎಲ್ಲಾ ದೇವತೆಗಳಿಗೂ ಅಧಿಷ್ಠಾನವಾಗಿರುವ ಎಲ್ಲಾ ಅವಯವಗಳೂ ಮನುಷ್ಯನಲ್ಲಿರುತ್ತವೆ; ಸಕಲ ಶಾಸ್ತ್ರೀಯಕರ್ಮಗಳಿಗೂ ಮನುಷ್ಯನೇ ಅಧಿಕಾರಿ. ಆದ್ದರಿಂದ ದೇವತೆಗಳಿಗೆ ಮನುಷ್ಯದೇಹವನ್ನು ಕಂಡು ಹರ್ಷವಾಯಿತು.

4. ಸುಕೃತಗಳನ್ನು ಮಾಡುವದಕ್ಕೆ ಕಾರಣವಾಗಿರುವದರಿಂದ ಮನುಷ್ಯದೇಹವು 'ಸುಕೃತ'ವೆನಿಸುತ್ತದೆ ಎಂದರ್ಥ.

ತನ್ನಿಂದಲೇ (ಸ್ವ) ಆತ್ಮನು ತನ್ನ ಮಾಯೆಗಳಿಂದ ಮಾಡಲ್ಪಡುವ (ಕೃತನಾಗಿರುವ) ದರಿಂದ ಅವನು ಸುಕೃತನೆನಿಸಿರುತ್ತಾನೆ.[1]

(ಭಾಷ್ಯ)

೪೨. ತಾ ದೇವತಾಃ ಈಶ್ವರಃ ಅಬ್ರವೀತ್ "ಇಷ್ಟಮ್ ಆಸಾಮ್ ಇದಮಧಿಷ್ಠಾನಮ್" ಇತಿ ಮತ್ವಾ । ಸರ್ವೇ ಹಿ ಸ್ವಯೋನಿಷು ರಮನ್ತೇ । ಅತಃ ಯಥಾಯತನಂ ಯಸ್ಯ ಯತ್ ವದನಾದಿಕ್ರಿಯಾಯೋಗ್ಯಮ್ ಆಯತನಮ್ ತತ್ ಪ್ರವಿಶತ ಇತಿ ||

(ಭಾಷ್ಯಾರ್ಥ)

ಆ ದೇವತೆಗಳನ್ನು ಕುರಿತು ಈಶ್ವರನು "ಈ ಅಧಿಷ್ಠಾನವು ಇವರಿಗೆ ಇಷ್ಟವಾಗಿದೆ" ಎಂದು ತಿಳಿದುಕೊಂಡು ಇಂತೆಂದನು. ಏಕೆಂದರೆ ಎಲ್ಲರೂ ತಮ್ಮ ತಮ್ಮ ಕಾರಣಗಳಲ್ಲಿ[2] ಪ್ರೀತಿಯಿಟ್ಟಿರುತ್ತಾರೆ. ಆದ್ದರಿಂದ "ಸ್ಥಾನಕ್ಕೆ ತಕ್ಕಂತೆ ಎಂದರೆ ಯಾರಿಗೆ ಯಾವದು ಮಾತಾಡುವದೇ ಮುಂತಾದ[3] ಕೆಲಸಕ್ಕೆ ತಕ್ಕ ಸ್ಥಾನವಾಗಿರುವದೋ ಆದನ್ನು ಪ್ರವೇಶಿಸಿರಿ" ಎಂದನು. || ೩ ||

**ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶದ್ವಾಯುಃ ಪ್ರಾಣೋ ಭೂತ್ವಾ**
**ನಾಸಿಕೇ ಪ್ರಾವಿಶದಾದಿತ್ಯಶ್ಚಕ್ಷುರ್ಭೂತ್ವಾಕ್ಷಿಣೀ ಪ್ರಾವಿಶದ್ದಿಶಃ**
**ಶ್ರೋತ್ರಂ ಭೂತ್ವಾ ಕರ್ಣೌ ಪ್ರಾವಿಶನ್ನೋಷಧಿವನಸ್ಪತಯೋ**
**ಲೋಮಾನಿ ಭೂತ್ವಾ ತ್ವಚಂ ಪ್ರಾವಿಶಂಶ್ಚಂದ್ರಮಾ ಮನೋ**
**ಭೂತ್ವಾ ಹೃದಯಂ ಪ್ರಾವಿಶನ್ಮೃತ್ಯುರಪಾನೋ ಭೂತ್ವಾ**
**ನಾಭಿಂ ಪ್ರಾವಿಶದಾಪೋ ರೇತೋ ಭೂತ್ವಾ ಶಿಶ್ನಂ ಪ್ರಾವಿಶನ್** || ೪ ||

೪. ಅಗ್ನಿಯು ವಾಕ್ಕಾಗಿ ಮುಖವನ್ನು ಹೊಕ್ಕನು. ವಾಯುವು ಪ್ರಾಣ (ಘ್ರಾಣೇಂದ್ರಿಯ)ವಾಗಿ ಮೂಗಿನ ಸೊಳ್ಳೆಗಳನ್ನು ಹೊಕ್ಕನು. ಆದಿ

---

1. ಬೃ. ೨-೫-೧೯ರಲ್ಲಿ ಹೇಳಿರುವಂತೆ ಆತ್ಮನು ತನ್ನನ್ನೇ ತನ್ನಿಂದಲೇ ರೂಪಾಂತರಗೊಳಿಸಿಕೊಂಡಿರುತ್ತಾನೆ. ಆದ್ದರಿಂದ ಮನುಷ್ಯನು ಸುಕೃತ; ಆತ್ಮಕೃತನಾದ ಆತ್ಮನೇ ಆದ್ದರಿಂದ ಸುಕೃತನು. ತೈ. ೨-೭ ನೋಡಿರಿ.

2. ತಾವು ಏತರಿಂದ ಹುಟ್ಟಿರುತ್ತಾರೋ ಅದರಲ್ಲಿ ಅವರಿಗೆ ಪ್ರೀತಿ. ಆಯಾ ಜಾತಿಯ ಪ್ರಾಣಿಗಳು ಆಯಾ ಜಾತಿಯ ಪ್ರಾಣಿಗಳನ್ನೇ ಪ್ರೀತಿಸುವದಕ್ಕೆ ಇದೇ ಕಾರಣ.

3. ಮುಂದಿನ ಮಂತ್ರದಲ್ಲಿ ಹೇಳಿರುವ ಇಂದ್ರಿಯ ಕಾರ್ಯಗಳನ್ನು ನೆರವೇರಿಸುವದಕ್ಕೆ.

ತ್ಯನು ಚಕ್ಷುರಿಂದ್ರಿಯವಾಗಿ ಕಣ್ಣುಗಳನ್ನು ಹೊಕ್ಕನು. ದಿಗ್ದೇವತೆಗಳು ಶ್ರೋತ್ರವಾಗಿ ಕಿವಿಗಳನ್ನು ಹೊಕ್ಕರು. ಓಷಧಿವನಸ್ಪತಿದೇವತೆಗಳು ಕೂದಲುಗಳಾಗಿ ಚರ್ಮವನ್ನು ಹೊಕ್ಕರು. ಚಂದ್ರನು ಮನಸ್ಸಾಗಿ ಹೃದಯವನ್ನು ಹೊಕ್ಕನು. ಮೃತ್ಯುವು ಅಪಾನವಾಗಿ ನಾಭಿಯನ್ನು ಹೊಕ್ಕನು. ಅಬ್ದೇವತೆಗಳು ರೇತಸ್ಸಾಗಿ ಶಿಶ್ನವನ್ನು ಹೊಕ್ಕರು.

(ಭಾಷ್ಯ)

೪೩. ತಥಾಸ್ತು ಇತಿ ಅನುಜ್ಞಾಂ ಪ್ರತಿಲಭ್ಯ ಈಶ್ವರಸ್ಯ, ನಗರ್ಯಾಮಿವ ಬಲಾಧಿಕೃತಾದಯಃ, ಅಗ್ನಿಃ ವಾಗಭಿಮಾನಿನೀ ವಾಗೇವ ಭೂತ್ವಾ ಸ್ವಾಂ ಯೋನಿಂ ಮುಖಂ ಪ್ರಾವಿಶತ್ । ತಥಾ ಉಕ್ತಾರ್ಥಮ್ ಅನ್ಯತ್ । ವಾಯುರ್ನಾಸಿಕೇ, ಆದಿತ್ಯೋಽಕ್ಷಿಣೀ, ದಿಶಃ ಕರ್ಣೌ, ಓಷಧಿವನಸ್ಪತಯಸ್ತ್ವಚಮ್, ಚಂದ್ರಮಾ ಹೃದಯಮ್, ಮೃತ್ಯುರ್ನಾಭಿಮ್, ಆಪಃ ಶಿಶ್ನಂ ಪ್ರಾವಿಶನ್ ॥

(ಭಾಷ್ಯಾರ್ಥ)

"ಹಾಗೆಯೇ ಆಗಲಿ" ಎಂದು ಈಶ್ವರನ ಅನುಮತಿಯನ್ನು ಪಡೆದುಕೊಂಡು[1] ಸೇನಾಧಿಪತಿಯೇ ಮುಂತಾದವರು ನಗರಿಯನ್ನು ಹೊಗುವಂತೆ ಅಗ್ನಿಯು ಎಂದರೆ ವಾಕ್ಕಿಗೆ ಅಭಿಮಾನಿಯಾದ (ದೇವತೆಯು) ವಾಕ್ಕೇ[2] ಆಗಿ ತನ್ನ ಕಾರ್ಯವಾದ ಮುಖವನ್ನು ಹೊಕ್ಕನು. ಮಿಕ್ಕದ್ದನ್ನು ಹೀಗೆಯೇ ಅರ್ಥವನ್ನು ಮಾಡಿಕೊಳ್ಳಬೇಕು. ವಾಯುವು ಮೂಗಿನ ಸೊಳ್ಳೆಗಳನ್ನೂ ಆದಿತ್ಯನು ಕಣ್ಣುಗಳನ್ನೂ ದಿಕ್ಕುಗಳು ಕಿವಿಗಳನ್ನೂ ಓಷಧಿವನಸ್ಪತಿಗಳು ಚರ್ಮವನ್ನೂ ಚಂದ್ರನು ಹೃದಯವನ್ನೂ ಮೃತ್ಯುವು ಹೊಕ್ಕುಳನ್ನೂ ಅಪ್ಪು ಶಿಶ್ನವನ್ನೂ ಹೊಕ್ಕರು.

---

1. ಒಡೆಯನಾದ ಅರಸನ ಅನುಮತಿಯನ್ನು ಪಡೆದ ಸೇನಾಪತಿಯೇ ಮುಂತಾದವರಂತೆ ಎಂದೂ ಅನ್ವಯಿಸಬಹುದು; ಈಶ್ವರನೆಂಬ ಮಾತು ಪರಮೇಶ್ವರನಿಗೂ ಒಡೆಯನಿಗೂ ಸಮಾನವಾಗಿ ಹೊಂದುತ್ತದೆ.

2. ವಾಗಧಿಷ್ಠಾತೃವಾಗಿ ವಾಕ್ಕಿನ ಪ್ರವೃತ್ತಿಗೆ ಕಾರಣವಾಗಿರುವದನ್ನೇ ವಾಕ್ಕೇ ಆದನೆಂದು ಹೇಳಿದೆ. ಸೂ, ಭಾ. ೨-೪-೧೪.

## ದೇವತೆಗಳಿಗೂ ಹಸಿವುಬಾಯಾರಿಕೆಗಳಿಗೂ ನಿತ್ಯಸಂಬಂಧ

(ಭಾಷ್ಯ)

೪೪. ಏವಂ ಲಬ್ಧಾಧಿಷ್ಠಾನಾಸು ದೇವತಾಸು ನಿರಧಿಷ್ಠಾನೇ ಸತ್ಯೌ—

(ಭಾಷ್ಯಾರ್ಥ)

ಹೀಗೆ ದೇವತೆಗಳಿಗೆ (ಬೇರೆಬೇರೆಯ) ಸ್ಥಾನಗಳು ಸಿಕ್ಕಲು (ಯಾವ) ಸ್ಥಾನವೂ ಇಲ್ಲದವರಾಗಿ—

**ತಮಶನಾಯಾ[1] ಪಿಪಾಸೇ ಅಬ್ರೂತಾಮಾವಾಭ್ಯಾಮಭಿಪ್ರಜಾನೀಹೀತಿ। ತೇ ಅಬ್ರವೀದೇತಾಸ್ವೇವ ವಾಂ ದೇವತಾಸ್ವಾಭಜಾಮ್ಯೇತಾಸು ಭಾಗಿನ್ಯೌ ಕರೋಮೀತಿ । ತಸ್ಮಾದ್ಯಸ್ಯೈ ಕಸ್ಯೈ ಚ ದೇವತಾಯೈ ಹವಿರ್ಗೃಹ್ಯತೇ ಭಾಗಿನ್ಯಾವೇವಾಸ್ಯಾಮಶನಾಯಾಪಿಪಾಸೇ ಭವತಃ ॥ ೫ ॥**

೫. ಅವನನ್ನು ಕುರಿತು ಹಸಿವುಬಾಯಾರಿಕೆಗಳು "ನಮಗೆ (ಒಂದು ಸ್ಥಾನವನ್ನು) ಆಲೋಚಿಸು'' ಎಂದವು. ಅವರನ್ನು ಕುರಿತು "ಇದೇ ದೇವತೆಗಳಲ್ಲಿ ನಿಮ್ಮನ್ನು ಸೇರಿಸುತ್ತೇನೆ. ಇವರಲ್ಲಿ ಭಾಗವುಳ್ಳವರನ್ನಾಗಿ ಮಾಡುತ್ತೇನೆ" ಎಂದನು. ಆದ್ದರಿಂದ ಯಾವ ದೇವತೆಗೆ ಹವಿಸ್ಸನ್ನು (ಕೊಡುವದಕ್ಕೆ) ತೆಗೆದುಕೊಂಡರೂ ಆ (ದೇವತೆ)ಯಲ್ಲಿ ಹಸಿವುಬಾಯಾರಿಕೆಗಳು ಭಾಗವುಳ್ಳವೇ ಆಗಿರುತ್ತವೆ.

(ಭಾಷ್ಯ)

೪೫. ಅಶನಾಯಾಪಿಪಾಸೇ ತಮ್ ಈಶ್ವರಮ್ ಅಬ್ರೂತಾಮ್ ಉಕ್ತವತ್ಯೌ ಆವಾಭ್ಯಾಮ್ ಅಧಿಷ್ಠಾನಮ್ ಅಭಿಪ್ರಜಾನೀಹಿ ಚಿನ್ತಯ ವಿಧತ್ಸ್ವ ಇತ್ಯರ್ಥಃ । ಸ ಈಶ್ವರಃ ಏವಮುಕ್ತಃ ತೇ ಅಶನಾಯಾಪಿಪಾಸೇ ಅಬ್ರವೀತ್ । ನ ಹಿ ಯುವಯೋಃ ಭಾವರೂಪತ್ವಾತ್ ಚೇತನಾವದ್ವಸ್ತ್ವನಾಶ್ರಿತ್ಯ ಅನ್ನಾತ್ತೃತ್ವಂ ಸಂಭವತಿ । ತಸ್ಮಾತ್ ಏತಾಸ್ವೇವ ಅಗ್ನ್ಯಾದ್ಯಾಸು ವಾಂ ಯುವಾಂ ದೇವತಾಸು ಅಧ್ಯಾತ್ಮಾದಿ ದೇವತಾಸು ಆಭಜಾಮಿ ವೃತ್ತಿಸಂವಿಭಾಗೇನ ಅನುಗೃಹ್ಣಾಮಿ । ಏತಾಸು ಭಾಗಿನ್ಯೌ ಯದ್ದೇವತ್ಯೋ ಯೋ ಭಾಗಃ ಹವಿರಾದಿಲಕ್ಷಣಃ ಸ್ಯಾತ್ ತಸ್ಯಾಸ್ತೇನೈವ ಭಾಗೇನ

---

1. ಮಂತ್ರದಲ್ಲಿಯೂ ಭಾಷ್ಯದಲ್ಲಿಯೂ ಅಶನಾಯಾ ಎಂಬುದಕ್ಕೆ ಅಶನಾ ಎಂಬ ಪಾಠವೂ ಕೆಲವು ಪುಸ್ತಕಗಳಲ್ಲಿ ಕಂಡುಬರುತ್ತದೆ.

ಭಾಗಿನ್ಯೌ ಭಾಗವತ್ಯೌ ವಾಂ ಕರೋಮಿ ಇತಿ । ಸೃಷ್ಟ್ಯಾದೌ ಈಶ್ವರಃ ಏವಂ ವ್ಯದಧಾದ್ ಯಸ್ಮಾತ್ ತಸ್ಮಾತ್ ಇದಾನೀಮಪಿ ಯಸ್ಯೈ ಕಸ್ಯೈಚ ದೇವತಾಯೈ ದೇವತಾಯಾ ಅರ್ಥಾಯ ಹವಿಃ ಗೃಹ್ಯತೇ ಚರುಪುರೋಡಾಶಾದಿಲಕ್ಷಣಮ್ । ಭಾಗಿನ್ಯಾವೇವ ಭಾಗವತ್ಯಾವೇವ ಅಸ್ಯಾಂ ದೇವತಾಯಾಮ್ ಅಶನಾಯಾಪಿಪಾಸೇ ಭವತಃ ॥

(ಭಾಷ್ಯಾರ್ಥ)

ಹಸಿವುಬಾಯಾರಿಕೆಗಳು [1] ಆ ಈಶ್ವರನನ್ನು ಕುರಿತು ಇಂತೆಂದವು, ಹೀಗೆಂದು ಹೇಳಿದವು : "ನಮ್ಮಿಬ್ಬರಿಗೂ ಒಂದು ಸ್ಥಾನವನ್ನು ಆಲೋಚಿಸು, ಚಿಂತಿಸುವವನಾಗು" (ಒಂದು ಸ್ಥಾನವನ್ನು) ಗೊತ್ತುಪಡಿಸು ಎಂದರ್ಥ. ಆ ಈಶ್ವರನು (ಅವರಿಬ್ಬರೂ) ಹೀಗೆನ್ನಲಾಗಿ ಆ ಹಸಿವುಬಾಯಾರಿಕೆಗಳನ್ನು ಕುರಿತು ಇಂತೆಂದನು. "ನೀವು ಧರ್ಮ (ಭಾವ) ಸ್ವರೂಪರಾಗಿರುವದರಿಂದ [2] ಚೈತನ್ಯವುಳ್ಳ ವಸ್ತುಗಳನ್ನು ಆಶ್ರಯಿಸದೆ ಅನ್ನವನ್ನು (ಸ್ವತಂತ್ರವಾಗಿ) ತಿನ್ನುವದೆಂಬುದು (ನಿಮ್ಮಿಂದ) ಆಗಲಾರದು. ಆದ್ದರಿಂದ ಈ ಅಗ್ನಿಯೇ ಮುಂತಾದ ದೇವತೆಗಳಲ್ಲಿ ನಿಮ್ಮಿಬ್ಬರನ್ನು ಇದೇ ಅಧ್ಯಾತ್ಮ, ಆಧಿದೈವತ (ರೂಪವಾಗಿರುವ ಅಗ್ನ್ಯಾದಿ) ದೇವತೆಗಳಲ್ಲಿಯೇ [3] ಸೇರಿಸುತ್ತೇನೆ, (ನಿಮ್ಮ) ವ್ಯಾಪಾರವನ್ನು ಅವರಲ್ಲಿ ಹಂಚಿ ನಿಮಗೆ ಅನುಗ್ರಹಿಸುತ್ತೇನೆ. ಇವರಲ್ಲಿ ಭಾಗವುಳ್ಳವರನ್ನಾಗಿ, ಯಾವ ಹವಿಸ್ಸೇ ಮುಂತಾದ ಭಾಗವು ಯಾವ ದೇವತೆಗಾಗಿರುವದೋ ಆ (ದೇವತೆಯ) ಆ ಭಾಗವೇ ನಿಮ್ಮ ಭಾಗವೂ ಆಗಿರುವಂತೆ, ಭಾಗವುಳ್ಳವರಾಗಿರುವಂತೆ ನಿಮ್ಮಿಬ್ಬರನ್ನೂ ಮಾಡುತ್ತೇನೆ." ಸೃಷ್ಟಿಯ ಆದಿಯಲ್ಲಿ ಈಶ್ವರನು ಹೀಗೆಂದು ವಿಧಾನಮಾಡಿದನಷ್ಟೆ; ಆ ಕಾರಣದಿಂದ ಈಗಲೂ ಯಾವ ದೇವತೆಗೆಂದು, ದೇವತೆಯ ಉಪಯೋಗಕ್ಕೆಂದು, ಚರು, ಪುರೋಡಾಶ–ಮುಂತಾದ ಹವಿಸ್ಸನ್ನು [4] (ಕೊಡುವದಕ್ಕೆ) ತೆಗೆದುಕೊಂಡರೂ ಆ(ಯಾ) ದೇವತೆಯಲ್ಲಿ ಹಸಿವುಬಾಯಾರಿಕೆಗಳು ಭಾಗವುಳ್ಳವೇ ಆಗಿರುತ್ತವೆ. ॥ ೫ ॥

---

1. ಇವೂ ದೇವತೆಗಳೇ.

2. ಹಸಿವೆಂಬ ಧರ್ಮವು ಹಸಿವುಳ್ಳ ಧರ್ಮಿಯಲ್ಲಿಯೇ ಕಾಣಬಹುದೇಹೊರತು ಸ್ವತಂತ್ರವಾಗಿರಲಾರದು ; ಬಾಯಾರಿಕೆಯೂ ಹೀಗೆಯೇ.

3. ಈ ದೇವತೆಗಳು ಅಧ್ಯಾತ್ಮವಾಗಿ ಮನುಷ್ಯನೇ ಮುಂತಾದ ಜೀವರಲ್ಲಿರುತ್ತಾರೆ, ಆಧಿದೈವತವಾಗಿ ವಿರಾಟ್ಪುರುಷನಲ್ಲಿರುತ್ತಾರೆ. ಇಬ್ಬರಿಗೂ ಹಸಿವುಬಾಯಾರಿಕೆಗಳುಂಟು.

4. ಅಧಿದೇವತೆಗಳಿಗೆ ಹವಿಸ್ಸು, ವಾಗಿಂದ್ರಿಯವೇ ಮುಂತಾದವುಗಳನ್ನು ಅವಲಂಬಿಸಿಕೊಂಡಿರುವವರಿಗೆ ಆಹಾರವು–ಎಂದರ್ಥ. ಇಲ್ಲಿ 'ಹವಿಸ್ಸು' ಎಂಬುದು ಎರಡನ್ನೂ ತಿಳಿಸುವ ಉಪಲಕ್ಷಣವು.

# ಒಂದನೆಯ ಅಧ್ಯಾಯ—ಮೂರನೆಯ ಖಂಡ

## (ಅನ್ನದ ಸೃಷ್ಟಿ, ಸೃಷ್ಟಿಯಲ್ಲಿ ಆತ್ಮನ ಪ್ರವೇಶ)

**ಸ ಈಕ್ಷತೇಮೇ ನು ಲೋಕಾಶ್ಚ ಲೋಕಪಾಲಾಶ್ಚಾನ್ನಮೇಭ್ಯಃ ಸೃಜಾ ಇತಿ ॥ ೧ ॥**

೧. ಆತನು "ಇವೇ ಅಲ್ಲವೆ, ಲೋಕಗಳು ಮತ್ತು ಲೋಕಪಾಲಕರು? ಇವರಿಗಾಗಿ ಅನ್ನವನ್ನು ಸೃಷ್ಟಿಮಾಡುವೆನು" ಎಂದು ಆಲೋಚನೆ ಮಾಡಿಕೊಂಡನು.

### ದೇವತೆಗಳಿಗಾಗಿ ಅನ್ನವನ್ನು ಸೃಷ್ಟಿಸಿದ್ದು

(ಭಾಷ್ಯ)

೪೬. ಸಃ ಏವಮೀಶ್ವರಃ ಈಕ್ಷತ । ಕಥಮ್ ? ಇಮೇ ನು ಲೋಕಾಶ್ಚ ಲೋಕಪಾಲಾಶ್ಚ ಮಯಾ ಸೃಷ್ಟಾಃ ಅಶನಾಯಾಪಿಪಾಸಾಭ್ಯಾಂ ಚ ಸಂಯೋಜಿತಾಃ । ಅತೋ ನೈಷಾಂ ಸ್ಥಿತಿರನ್ನಮನ್ತರೇಣ । ತಸ್ಮಾತ್ ಅನ್ನಮ್ ಏಭ್ಯಃ ಲೋಕಪಾಲೇಭ್ಯಃ ಸೃಜೈ ಸೃಜೇ ಇತಿ । ಏವಂ ಹಿ ಲೋಕೇ ಈಶ್ವರಾಣಾಮ್ ಅನುಗ್ರಹೇ ನಿಗ್ರಹೇ ಚ ಸ್ವಾತನ್ತ್ರ್ಯಂ ದೃಷ್ಟಂ ಸ್ವೇಷು । ತದ್ವತ್ ಮಹೇಶ್ವರಸ್ಯಾಪಿ ಸರ್ವೇಶ್ವರತ್ವಾತ್ ಸರ್ವಾನ್ ಪ್ರತಿ ನಿಗ್ರಹೇ ಅನುಗ್ರಹೇ ಚ ಸ್ವಾತನ್ತ್ರ್ಯಮೇವ ॥

(ಭಾಷ್ಯಾರ್ಥ)

ಆ ಈಶ್ವರನು ಹೀಗೆಂದು ಆಲೋಚಿಸಿದನು. ಹೇಗೆಂದರೆ: ಇವೇ ಅಲ್ಲವೆ, ನಾನು ಸೃಷ್ಟಿಮಾಡಿದ ಲೋಕಗಳು ಮತ್ತು ಲೋಕಪಾಲಕರು? (ಇವರನ್ನು) ಹಸಿವು[1] ಬಾಯಾರಿಕೆಗಳಿಂದ ಕೂಡಿಸಿಬ್ಬಿರುತ್ತೇನೆ; ಆದ್ದರಿಂದ ಅನ್ನವಿಲ್ಲದೆ ಇವರು ಇರಲಾರರು. ಆದ್ದರಿಂದ ಈ ಲೋಕಪಾಲಕರಿಗೆ ಅನ್ನವನ್ನು ಸೃಷ್ಟಿಸುವೆನು. ಹೀಗೆತಾನೆ ಒಡೆಯರಾಗಿರುವವರು ತಮ್ಮ (ಸೇವಕರಿಗೆ) ಅನುಗ್ರಹಮಾಡುವದರಲ್ಲಿಯೂ ದಂಡನೆಮಾಡು

1. ಹಸಿವುಬಾಯಾರಿಕೆಗಳು—ಎಂದರೆ ತೃಷ್ಣೆ ಕಾಮ—ಇವುಗಳೇ ಎಂದು ಟೀಕೆಯಲ್ಲಿದೆ. ಅಗಲೂ ತೃಷ್ಣಾಕಾಮುಗಳ ಅಭಿಮಾನಿಗಳಾದ ದೇವತೆಗಳೆಂದೇ ಅಭಿಪ್ರಾಯ.

ವದರಲ್ಲಿಯೂ ಸ್ವತಂತ್ರರಾಗಿರುವದು ಲೋಕದಲ್ಲಿ ಕಂಡುಬಂದಿದೆ? [1] ಇದರಂತೆಯೇ ಮಹೇಶ್ವರನೂ ಎಲ್ಲರಿಗೂ ಒಡೆಯನಾಗಿರುವದರಿಂದ ಎಲ್ಲರ ವಿಷಯದಲ್ಲಿಯೂ ದಂಡನೆ, ಅನುಗ್ರಹ-ಇವುಗಳನ್ನು ಮಾಡುವಲ್ಲಿ (ಆತನಿಗೆ) ಸ್ವಾತಂತ್ರ್ಯವೇ [2] ||೧||

**ಸೋಽಪೋಽಭ್ಯತಪತ್ ತಾಭ್ಯೋಽಭಿತಪ್ತಾಭ್ಯೋ ಮೂರ್ತಿರಜಾಯತ । ಯಾ ವೈ ಸಾ ಮೂರ್ತಿರಜಾಯತಾನ್ನಂ ವೈ ತತ್ ||೨||**

೨. ಅವನು ಅಪ್ಪನ್ನು ಕುರಿತು ತಪಸ್ಸುಮಾಡಿದನು. (ಹಾಗೆ) ಅಭಿತಪ್ತವಾದ ಅದರಿಂದ (ಒಂದು) ಮೂರ್ತಿಯುಂಟಾಯಿತು. ಯಾವ ಆ ಮೂರ್ತಿಯುಂಟಾಯಿತಲ್ಲ, ಅದೇ ಅನ್ನವು.

(ಭಾಷ್ಯ)

೪೭. ಸಃ ಈಶ್ವರಃ ಅನ್ನಂ ಸಿಸೃಕ್ಷುಃ ತಾ ಏವ ಪೂರ್ವೋಕ್ತಾಃ ಅಪಃ ಉದ್ದಿಶ್ಯ ಅಭ್ಯತಪತ್ । ತಾಭ್ಯಃ ಅಭಿತಪ್ತಾಭ್ಯಃ ಉಪಾದಾನಭೂತಾಭ್ಯಃ ಮೂರ್ತಿಃ ಘನರೂಪಂ ಧಾರಣಸಮರ್ಥಂ ಚರಾಚರಲಕ್ಷಣಮ್ ಅಜಾಯತ ಉತ್ಪನ್ನಮ್ । ಅನ್ನಂ ವೈ ತತ್ ಮೂರ್ತಿರೂಪಂ ಯಾ ವೈ ಸಾ ಮೂರ್ತಿಃ ಅಜಾಯತ ||

(ಭಾಷ್ಯಾರ್ಥ)

ಆ ಈಶ್ವರನು ಅನ್ನವನ್ನು ಸೃಷ್ಟಿಸುವ ಇಚ್ಛೆಯುಳ್ಳವನಾಗಿ ಹಿಂದೆ ಹೇಳಿದ ಅದೇ ಅಪ್ಪನ್ನು [3] ಕುರಿತು ತಪಸ್ಸುಮಾಡಿದನು. (ಹಾಗೆ) ಅಭಿತಪ್ತವಾದ ಉಪಾದಾನಕಾರಣವಾದ [4] ಅದರಿಂದ ಒಂದು ಮೂರ್ತಿಯು ಎಂದರೆ (ಪ್ರಾಣಿಗಳನ್ನು ಜೀವಸಹಿತ) ನಿಲ್ಲಿಸಬಲ್ಲ [5] ಸ್ಥಾವರಜಂಗಮರೂಪವಾದ ಮೂರ್ತಿಯು ಎಂದರೆ ಗಟ್ಟಿಯ ಸ್ವರೂಪವು ಉಂಟಾಯಿತು. ಯಾವ ಆ ಮೂರ್ತಿಯುಂಟಾಯಿತಲ್ಲ, ಅದೇ ಅನ್ನವು. ||೨||

---

1. ಲೋಕಪ್ರಸಿದ್ಧವಾದ ದೃಷ್ಟಾಂತದಿಂದ ಶ್ರುತಿಯು ಈಶ್ವರನ ಸ್ವಾತಂತ್ರ್ಯವನ್ನು ತಿಳಿಸುತ್ತದೆ ಎಂದು ಭಾವ.

2. ಪರಮೇಶ್ವರನು ಸ್ವತಂತ್ರನಾದ್ದರಿಂದ ಮತ್ತೊಬ್ಬರು ಕೇಳಿಕೊಳ್ಳದೆಯೇ ದೇವತೆಗಳ ಅನುಗ್ರಹಕ್ಕಾಗಿ ತಾನೇ ಅನ್ನವನ್ನು ಸೃಷ್ಟಿಸಿದನು—ಎಂದು ಭಾವ.

3. ಪಂಚಭೂತಗಳ ರಾಶಿಯನ್ನು.

4. ಆಹಾರವೆಲ್ಲ ಭೂತಗಳ ವಿಕಾರವೇ.

5. ಸ್ಥಾವರಜಂಗಮಪ್ರಾಣಿಗಳು ಅನ್ನದ ಬಲದಿಂದಲೇ ಜೀವಿಸಿರಬೇಕು.

**ತದೇನತ್ ಸೃಷ್ಟಂ ಪರಾಜತ್ಯಜಿಘಾಂಸತ್ ತದ್ವಾಚಾಜಿಘೃಕ್ಷತ್ ತನ್ನಾಶಕ್ನೋದ್ವಾಚಾ ಗ್ರಹೀತುಂ ಸ ಯದ್ಧೈನದ್ವಾಚಾಗ್ರಹೈಷ್ಯದ ಭಿವ್ಯಾಹೃತ್ಯ ಹೈವಾನ್ನಮತ್ರಪ್ಸ್ಯತ್ ॥ ೩ ॥ ತತ್ಪ್ರಾಣೇನಾಜಿಘೃಕ್ಷತ್ ತನ್ನಾಶಕ್ನೋತ್ ಪ್ರಾಣೇನ ಗೃಹೀತುಮ್ । ಸ ಯದ್ಧೈನತ್ ಪ್ರಾಣೇನಾಗ್ರಹೈಷ್ಯದಭಿಪ್ರಾಣ್ಯ ಹೈವಾನ್ನಮತ್ರಪ್ಸ್ಯತ್ ॥ ೪ ॥ ತಚ್ಚಕ್ಷುಷಾಜಿಘೃಕ್ಷತ್ ತನ್ನಾಶಕ್ನೋಚ್ಚಕ್ಷುಷಾ ಗ್ರಹೀತುಮ್ । ಸ ಯದ್ಧೈನಚ್ಚಕ್ಷುಷಾಗ್ರಹೈಷ್ಯದ್ದೃಷ್ಟ್ವಾ ಹೈವಾನ್ನಮತ್ರಪ್ಸ್ಯತ್ ॥ ೫ ॥ ತಚ್ಛ್ರೋತ್ರೇಣಾಜಿಘೃಕ್ಷತ್ ತನ್ನಾಶಕ್ನೋಚ್ಛ್ರೋತ್ರೇಣ ಗೃಹೀತುಮ್ । ಸ ಯದ್ಧೈನಚ್ಛ್ರೋತ್ರೇಣಾಗ್ರಹೈಷ್ಯಚ್ಛ್ರುತ್ವಾ ಹೈವಾನ್ನಮತ್ರಪ್ಸ್ಯತ್ ॥ ೬ ॥ ತತ್ತ್ವಚಾಜಿಘೃಕ್ಷತ್ ತನ್ನಾಶಕ್ನೋತ್ತ್ವಚಾ ಗ್ರಹೀತುಮ್ ಸ ಯದ್ಧೈನತ್ ತ್ವಚಾಗ್ರಹೈಷ್ಯತ್ ಸ್ಪೃಷ್ಟ್ವಾ ಹೈನ್ನವಾ ಮತ್ರಪ್ಸ್ಯತ್ ॥ ೭ ॥ ತನ್ಮನಸಾಜಿಘೃಕ್ಷತ್ ತನ್ನಾಶಕ್ನೋನ್ಮನಸಾಗ್ರಹೀತುಮ್ । ಸ ಯದ್ಧೈನನ್ಮನಸಾಗ್ರಹೈಷ್ಯದ್ಧ್ಯಾತ್ವಾ ಹೈವಾನ್ನಮತ್ರಪ್ಸ್ಯತ್ ॥೮॥ ತಚ್ಛಿಶ್ನೇನಾಜಿಘೃಕ್ಷತ್ ತನ್ನಾಶಕ್ನೋಚ್ಛಿಶ್ನೇನ ಗ್ರಹೀತುಮ್ । ಸ ಯದ್ಧೈನಚ್ಛಿಶ್ನೇನಾಗ್ರಹೈಷ್ಯದ್ವಿಸೃಜ್ಯ ಹೈವಾನ್ನಮತ್ರಪ್ಸ್ಯತ್ ॥ ೯ ॥**

೩–೯. ಇದು ಸೃಷ್ಟಿಯಾಗಿ ಅತ್ತಲಾಗಿ ದಾಟಿ ಹೋಗುವದಕ್ಕೆಳಸಿತು. ಅದನ್ನು ವಾಕ್ಕಿನಿಂದ ಹಿಡಿಯುವದಕ್ಕೆಳಸಿದನು, ಅದನ್ನು ವಾಕ್ಕಿನಿಂದ ಹಿಡಿದುಕೊಳ್ಳುವದಕ್ಕೆ ಶಕ್ತನಾಗಲಿಲ್ಲ. ಅವನು ಅದನ್ನು ವಾಕ್ಕಿನಿಂದ ಹಿಡಿದುಕೊಂಡಿದ್ದರೆ ಅನ್ನದ ಮಾತನಾಡಿಯೇ ತೃಪ್ತನಾಗಬಹುದಾಗಿತ್ತು. ಅದನ್ನು ಘ್ರಾಣದಿಂದ ಹಿಡಿಯುವದಕ್ಕೆಳಸಿದನು, ಅದನ್ನು ಘ್ರಾಣದಿಂದ ಹಿಡಿದುಕೊಳ್ಳುವದಕ್ಕೆ ಶಕ್ತನಾಗಲಿಲ್ಲ ಅವನು ಅದನ್ನು ಘ್ರಾಣದಿಂದ ಹಿಡಿದುಕೊಂಡಿದ್ದರೆ ಅನ್ನವನ್ನು ಮೂಸುವದರಿಂದಲೇ ತೃಪ್ತನಾಗಬಹುದಾಗಿತ್ತು. ಅದನ್ನು ಚಕ್ಷುವಿನಿಂದ ಹಿಡಿಯುವದಕ್ಕೆಳಸಿದನು, ಅದನ್ನು ಚಕ್ಷುವಿನಿಂದ ಹಿಡಿದುಕೊಳ್ಳುವದಕ್ಕೆ ಶಕ್ತನಾಗಲಿಲ್ಲ. ಅವನು ಅದನ್ನು ಚಕ್ಷುವಿನಿಂದ ಹಿಡಿದುಕೊಂಡಿದ್ದರೆ ಅನ್ನವನ್ನು ನೋಡುವದರಿಂದಲೇ ತೃಪ್ತನಾಗಬಹುದಾಗಿತ್ತು. ಅದನ್ನು ಶ್ರೋತ್ರದಿಂದ ಹಿಡಿಯುವದಕ್ಕೆಳಸಿದನು, ಅದನ್ನು ಶ್ರೋತ್ರದಿಂದ ಹಿಡಿದುಕೊಳ್ಳುವದಕ್ಕೆ ಶಕ್ತನಾಗಲಿಲ್ಲ. ಅವನು

ಅದನ್ನು ಶ್ರೋತ್ರದಿಂದ ಹಿಡಿದುಕೊಂಡಿದ್ದರೆ ಅನ್ನದ ವಿಷಯವನ್ನು ಕೇಳುವದರಿಂದಲೇ ತೃಪ್ತನಾಗಬಹುದಾಗಿತ್ತು. ಅದನ್ನು ತ್ವಕ್ಕಿನಿಂದ ಹಿಡಿದುಕೊಳ್ಳುವದಕ್ಕೆಳಸಿದನು, ಅದನ್ನು ತ್ವಕ್ಕಿನಿಂದ ಹಿಡಿಯುವದಕ್ಕೆ ಶಕ್ತನಾಗಲಿಲ್ಲ. ಅವನು ಅದನ್ನು ತ್ವಕ್ಕಿನಿಂದ ಹಿಡಿದುಕೊಂಡಿದ್ದರೆ ಅನ್ನವನ್ನು ಮುಟ್ಟುವದರಿಂದಲೇ ತೃಪ್ತನಾಗಬಹುದಾಗಿತ್ತು. ಅದನ್ನು ಮನಸ್ಸಿನಿಂದ ಹಿಡಿಯುವದಕ್ಕೆಳಸಿದನು, ಅದನ್ನು ಮನಸ್ಸಿನಿಂದ ಹಿಡಿದುಕೊಳ್ಳುವದಕ್ಕೆ ಶಕ್ತನಾಗಲಿಲ್ಲ. ಅವನು ಅದನ್ನು ಮನಸ್ಸಿನಿಂದ ಹಿಡಿದುಕೊಂಡಿದ್ದರೆ ಅನ್ನವನ್ನು ಚಿಂತಿಸುವದರಿಂದಲೇ ತೃಪ್ತನಾಗಬಹುದಾಗಿತ್ತು. ಅದನ್ನು ಶಿಶ್ನದಿಂದ ಹಿಡಿದುಕೊಳ್ಳುವದಕ್ಕೆಳಸಿದನು, ಅದನ್ನು ಶಿಶ್ನದಿಂದ ಹಿಡಿದುಕೊಳ್ಳುವದಕ್ಕೆ ಶಕ್ತನಾಗಲಿಲ್ಲ. ಅವನು ಅದನ್ನು ಶಿಶ್ನದಿಂದ ಹಿಡಿದುಕೊಂಡಿದ್ದರೆ ಅನ್ನವನ್ನು ಹೊರಕ್ಕೆ ಬಿಡುವದರಿಂದಲೇ ತೃಪ್ತನಾಗಬಹುದಾಗಿತ್ತು.

## ಅನ್ನದ ಓಟ, ಅದನ್ನು ಹಿಡಿಯುವ ಪ್ರಯತ್ನ

(ಭಾಷ್ಯ)

೪೮. ತದೇನತ್ ಅನ್ನಂ ಲೋಕಪಾಲಾನಾಮ[1]ರ್ಥೇ ಅಭಿಮುಖೇ ಸೃಷ್ಟಂ ಸತ್[2] ಯಥಾ ಮೂಷಕಾದಿರ್ಮಾರ್ಜಾರಾದಿಗೋಚರೇ ಸನ್ "ಮಮ ಮೃತ್ಯುರನ್ನಾದಃ" ಇತಿ ಮತ್ವಾ ಪರಾಕ್ ಅಞ್ಚತೀತಿ ಪರಾಙ್ಸತ್ ಅತ್ತ್ರ್ಯಾನ್ ಅತೀತ್ಯ ಅಜಿಘಾಂಸತ್ ಅತಿಗನ್ತುಮೈಚ್ಛತ್ ಪಲಾಯಿತುಂ ಪ್ರಾರಭತ ಇತ್ಯರ್ಥಃ। ತಮ್[3] ಅನ್ನಾಭಿಪ್ರಾಯಂ ಮತ್ವಾ ಲೋಕಲೋಕಪಾಲಸಙ್ಘಾತಃ ಕಾರ್ಯಕರಣಲಕ್ಷಣಃ ಪಿಣ್ಡಃ ಪ್ರಥಮಜತ್ವಾತ್ ಅನ್ಯಾಂಶ್ಚಾನ್ನಾದಾನ್ ಅಪಶ್ಯನ್, ತತ್ ಅನ್ನಂ ವಾಚಾ

---

1. "ಲೋಕಲೋಕಪಾಲಾನಾಮ್" ಎಂಬ ಪಾಠಕ್ಕಿಂತ ಇದು ಉತ್ತಮ. "ಲೋಕಪಾಲಾನ್ನಾರ್ಥ್ಯಭಿಮುಖೇ" ಎಂಬ ವಾ॥ ಪಾಠಕ್ಕೆ ಲೋಕಪಾಲಕರೆಂಬ ಅನ್ನಾರ್ಥಿಗಳ ಮುಂದೆ ಎಂದು ಅರ್ಥ.

2. 'ತತ್' ಎಂಬುದು "ಸತ್" ಎಂಬುದಕ್ಕೆ ಬದಲು ಬರೆದವರ ತಪ್ಪಿನಿಂದ ಬಿದ್ದಿರಬೇಕು.

3. 'ತಮ್' ಎಂಬುದು ವಾ॥ ಪಾಠ.

ವದನವ್ಯಾಪಾರೇಣ ಅಜಿಘೃಕ್ಷತ್ ಗೃಹೀತುಮೈಚ್ಛತ್ । ತತ್ ಅನ್ನಂ ನ ಅಶಕ್ನೋತ್ ನ ಸಮರ್ಥೋಽಭವತ್ ವಾಚಾ ವದನಕ್ರಿಯಯಾ ಗ್ರಹೀತುಮ್ ಉಪಾದಾತುಮ್ । ಸಃ ಪ್ರಥಮಜಃ ಶರೀರೀ ಯತ್ ಯದಿ ಹ ಏನತ್ ವಾಚಾ ಅಗ್ರಹೈಷ್ಯತ್ ಗೃಹೀತವಾನ್ ಸ್ಯಾತ್ ಅನ್ನಮ್, ಸರ್ವೋಽಪಿ ಲೋಕಃ ತತ್ಕಾರ್ಯಭೂತತ್ವಾತ್ ಅಭಿವ್ಯಾಹೃತ್ಯ ಹೈವ ಅನ್ನಮ್ ಅತ್ರಪ್ಸ್ಯತ್ ತೃಪ್ತೋಽಭವಿಷ್ಯತ್ । ನ ಚೈತದಸ್ತಿ । ಅತೋ ನಾಶಕ್ನೋತ್ ವಾಚಾ ಗ್ರಹೀತುಮ್ ಇತ್ಯವಗಚ್ಛಾಮಃ ಪೂರ್ವಜೋಽಪಿ ॥

(ಭಾಷ್ಯಾರ್ಥ)

ಆ ಈ ಅನ್ನವು ಲೋಕಪಾಲಕರಿಗಾಗಿ (ಅವರ) ಮುಂದೆ ಸೃಷ್ಟವಾಯಿತಲ್ಲ, ಅದು, ಇಲಿಯೇ ಮುಂತಾದದ್ದು ಬೆಕ್ಕು ಮುಂತಾದದ್ದರ (ಕಣ್ಣ) ಮುಂದೆ ಇರುವಾಗ ಹೇಗೋ ಹಾಗೆ, "(ಇದು) ನನ್ನ ಮೃತ್ಯುವಾದ ಅನ್ನಾದನು" ಎಂದು ಭಾವಿಸಿ ಅತ್ತಲಾಗಿ–ಪರಾಙ್ ಎಂಬ ಮೂಲಕ್ಕೆ ಆಚೆಗೆ (ಪರಾಕ್) ಸರಿಯುವದು (ಅಞ್ಚತಿ ಎಂದರ್ಥ.— ತನ್ನನ್ನು ತಿನ್ನುವವರನ್ನು ದಾಟಿ (ಅತ್ತ) ಹೋಗುವದಕ್ಕೆಳಸಿತು, ಓಡಿಹೋಗುವದಕ್ಕೆ ಮೊದಲುಮಾಡಿತು ಎಂದರ್ಥ. ಆ ಅನ್ನದ ಅಭಿಪ್ರಾಯವನ್ನು ಕಂಡ ಆ (ಲೋಕ) ಲೋಕಪಾಲಕರು[1] ಒಟ್ಟು ಸೇರಿದ ದೇಹೇಂದ್ರಿಯಗಳ ಸ್ವರೂಪವಾದ[2] ಪಿಂಡಾತ್ಮನು[3] ಮೊದಲು ಹುಟ್ಟಿದವನಾದ್ದರಿಂದ[4] ತನಗಿಂತ ಬೇರೆ ಅನ್ನವನ್ನು ತಿನ್ನುವವರನ್ನು ಯಾರನ್ನೂ ಕಾಣದೆ[5] ಆ ಅನ್ನವನ್ನು ವಾಕ್ಕಿನಿಂದ ಎಂದರೆ ಮಾತನಾಡುವದೆಂಬ ಕೆಲಸದಿಂದ ಹಿಡಿಯುವದಕ್ಕೆಳಸಿದನು. ಅದನ್ನು ವಾಕ್ಕಿನಿಂದ ಹಿಡಿದುಕೊಳ್ಳುವದಕ್ಕೆ ತೆಗೆದುಕೊಳ್ಳುವದಕ್ಕೆ ಶಕ್ತನಾಗಲಿಲ್ಲ, ಸಮರ್ಥನಾಗಲಿಲ್ಲ.

---

1. ಲೋಕಪಾಲಕರು ಎಂದಿಷ್ಟೇ ಸಾಕು; ಏಕೆಂದರೆ ಲೋಕಪಾಲಕರನ್ನು ವಿರಾಟ್ಪುರುಷನಿಂದ ಸೃಷ್ಟಿಮಾಡಿದ್ದನ್ನೇ ಈ ಹಿಂದೆ ಹೇಳಿರುವದು.

2. ಲೋಕಪಾಲರೆಂದರೆ ಬರಿಯ ಚೇತನಸ್ವರೂಪವಲ್ಲ; ಅವರವರ ದೇಹೇಂದ್ರಿಯಗಳ ಅಪೇಕ್ಷೆಯಿಂದಲೇ ಅವರನ್ನು ಆಯಾ ದೇವತೆಗಳೆಂದು ಎಣಿಸಿದೆ ಎಂದು ಭಾವ. ಒಬ್ಬ ಆತ್ಮನೇ ಉಪಾಧಿವಿಶೇಷದಿಂದ ವಿರಾಟ್ಪುರುಷ, ದೇವತೆಗಳು, ಮನುಷ್ಯಾದಿಗಳು ಎಂದು ವಿವಿಧವಾಗಿ ತೋರುತ್ತಿರುವನೆಂಬುದನ್ನು ಈ ವಿಶೇಷಣವು ಸೂಚಿಸುತ್ತದೆ. 'ಕಾರ್ಯಕಾರಣ' ಎಂದು ಅಚ್ಚಾಗಿರುವದು 'ಕಾರ್ಯಕರಣ'ವೆಂಬರ್ಥದಲ್ಲಿ; ಅಥವಾ ಬರೆದವರ ತಪ್ಪಿನಿಂದ ಹೀಗೆ ಬಿದ್ದಿದೆ.

3. ವಿರಾಟ್ಪುರುಷನು.

4. "ಸ ವೈ ಶರೀರೀ ಪ್ರಥಮಃ" ಎಂಬ ಸ್ಮೃತಿಯ ಸೂಚನೆ.

5. ಮತ್ತೊಬ್ಬರು ತಿನ್ನುವದನ್ನು ಕಾಣದ್ದರಿಂದ ಬೇರೆಬೇರೆಯ ಪ್ರಯತ್ನಗಳಿಂದ ಅನ್ನಗ್ರಹಣಕ್ರಮವನ್ನು ಅರಿಯಬೇಕಾಯಿತು.

ಆ ಮೊದಲು ಹುಟ್ಟಿದ ಶರೀರಿಯು ಅದನ್ನು ಎಂದರೆ (ಆ ಅನ್ನವನ್ನು ವಾಕ್ಕಿನಿಂದ (ಯತ್ = ಯದಿ) ಹಿಡಿದುಕೊಂಡಿದ್ದರೆ ಹಿಡಿದುಕೊಂಡವನಾಗಿದ್ದಿದ್ದರೆ ಪ್ರತಿಯೊಬ್ಬ ಮನುಷ್ಯನೂ ಅವನ ಕಾರ್ಯವಾಗಿರುವದರಿಂದ[1] ಅನ್ನದ ಮಾತನಾಡಿಯೇ ತೃಪ್ತನಾಗಬಹುದಾಗಿತ್ತು, ತೃಪ್ತನಾಗಿರುತ್ತಿದ್ದನು. ಆದರೆ ಹೀಗಿಲ್ಲ. ಆದ್ದರಿಂದ ಮೊದಲು ಹುಟ್ಟಿದ (ವಿರಾಟ್ಪುರುಷನು) ಕೂಡ ವಾಕ್ಕಿನಿಂದ ಹಿಡಿದುಕೊಳ್ಳುವದಕ್ಕೆ ಶಕ್ತನಾಗಲಿಲ್ಲ ಎಂದು ನಿರ್ಣಯಿಸಬೇಕಾಗಿದೆ.

(ಭಾಷ್ಯ)

೪೯. ಸಮಾನಮ್ ಉತ್ತರಮ್ । 'ತತ್ ಪ್ರಾಣೇನ', 'ತಚ್ಚಕ್ಷುಷಾ', 'ತಚ್ಛ್ರೋತ್ರೇಣ', 'ತತ್ ತ್ವಚಾ', 'ತಚ್ಛಿಶ್ನೇನ' । ತೇನ ತೇನ ಕರಣವ್ಯಾಪಾರೇಣ ಅನ್ನಂ ಗ್ರಹೀತುಮಶಕ್ನುವನ್ ಪಶ್ಚಾತ್—

(ಭಾಷ್ಯಾರ್ಥ)

ಮುಂದಿನ ಗ್ರಂಥವನ್ನು ಹೀಗೆಯೇ (ವಿವರಿಸಬೇಕು). 'ಅದನ್ನು ಘ್ರಾಣದಿಂದ', 'ಅದನ್ನು ಚಕ್ಷುವಿನಿಂದ', 'ಅದನ್ನು ಶ್ರೋತ್ರದಿಂದ', 'ಅದನ್ನು ತ್ವಕ್ಕಿನಿಂದ', 'ಅದನ್ನು ಮನಸ್ಸಿನಿಂದ', 'ಅದನ್ನು ಶಿಶ್ನದಿಂದ'–(ಹೀಗೆ) ಆಯಾ ಕರಣದ ವ್ಯಾಪಾರದಿಂದ (ಆ) ಅನ್ನವನ್ನು ಹಿಡಿದುಕೊಳ್ಳುವದಕ್ಕಾಗದೆ ಕೊನೆಗೆ—

**ತದಪಾನೇನಾಜಿಘೃಕ್ಷತ್ ತದಾವಯತ್ । ಸೈಷೋಽನ್ನಸ್ಯ ಗ್ರಹೋ ಯದ್ವಾಯುರನ್ನಾಯುರ್ವಾ ಏಷ ಯದ್ವಾಯುಃ ॥ ೧೦ ॥**

೧೦. ಅದನ್ನು ಅಪಾನದಿಂದ ಹಿಡಿಯುವದಕ್ಕೆಳಸಿದನು; ಅದನ್ನು ಒಳಕ್ಕೆಳೆದುಕೊಂಡನು. ಆ ಈ ವಾಯುವೆಂಬುದು ಅನ್ನದ ಗ್ರಹವು. ಈ ವಾಯುವೆಂಬುದು ಅನ್ನಾಯುವೇ.

---

1. ವ್ಯಷ್ಟಿಜೀವರೆಲ್ಲ ಸಮಷ್ಟಿಯಾದ ವಿರಾಟ್ಪುರುಷನ ಕಾರ್ಯ. ಕಾರಣದ ಧರ್ಮವು ಕಾರ್ಯದಲ್ಲಿ ಕಾಣಬೇಕಾದ್ದರಿಂದ ಕಾರಣನಾದ ವಿರಾಟ್ಪುರುಷನು ಮಾತಿನಿಂದಲೇ ತೃಪ್ತನಾಗಿದ್ದಿದ್ದರೆ ಅವನ ಕಾರ್ಯರೂಪವಾದ ಈಗಿನ ಜನರೂ ಹಾಗೆಯೇ ತೃಪ್ತರಾಗಬೇಕಾಗಿತ್ತು. ಹಿಂದೆ ೩ಲರಲ್ಲಿ ಹಸಿವು ಮುಂತಾದ ದೋಷಗಳ ವಿಷಯಕ್ಕೆ ಹೇಳಿರುವದನ್ನು ನೋಡಿರಿ.

# ಅನ್ನವನ್ನು ಹಿಡಿದುಕೊಂಡದ್ದು

(ಭಾಷ್ಯ)

೫೦. ಅಪಾನೇನ ವಾಯುನಾ ಮುಖಚ್ಛಿದ್ರೇಣ ತತ್ ಅನ್ನಮ್ ಅಜಿಘೃಕ್ಷತ್ ತತ್ ಆವಯತ್ ತತ್ ಅನ್ನಮ್ ಏವಂ ಜಗ್ರಾಹ ಅಶಿತವಾ೯ । ತೇನ ಸ ಏಷಃ ಅಪಾನವಾಯುಃ ಅನ್ನಸ್ಯ ಗ್ರಹಃ ಅನ್ನಗ್ರಾಹಕ ಇತ್ಯೇತತ್ ಯದ್ ವಾಯುಃ ಯೋ ವಾಯುಃ । ಅನ್ನಾಯುಃ ಅನ್ನಬನ್ಧನಃ ಅನ್ನಜೀವನಃ ವೈ ಪ್ರಸಿದ್ಧಮ್ ಸ ಏಷ ಯೋ ವಾಯುಃ ॥

(ಭಾಷ್ಯಾರ್ಥ)

ಅಪಾನದಿಂದ ಎಂದರೆ (ಅಪಾನ) ವಾಯು(ವಿನ ಸಹಾಯ)ದಿಂದ ಬಾಯಿಯ ಬಿಲದ (ಮಾರ್ಗ)ವಾಗಿ ಆ ಅನ್ನವನ್ನು ಹಿಡಿಯುವದಕ್ಕೆಳಸಿದನು; ಅದನ್ನು ಒಳಕ್ಕೆಳೆದುಕೊಂಡನು [1] ಎಂದರೆ ಆ ಅನ್ನವನ್ನು ಹೀಗೆ ಹಿಡಿದುಕೊಂಡನು, ತಿಂದನು. ಆದ್ದರಿಂದ ಆ ಈ ಅಪಾನವಾಯುವು ಅನ್ನದ ಗ್ರಹವು ಎಂದರೆ ಅನ್ನವನ್ನು ಹಿಡಿಯತಕ್ಕದ್ದು. [2] ಆ ಈ ವಾಯುವೆಂಬುದು ಅನ್ನಾಯುವೇ; ಎಂದರೆ ಅನ್ನಕ್ಕೆ ಕಟ್ಟುಬಿದ್ದು [3] ಅನ್ನದಿಂದಲೇ ಬದುಕಿರತಕ್ಕದ್ದು ಎಂದು ಪ್ರಸಿದ್ಧವಾಗಿರುತ್ತದೆ. [4]

**ಸ ಈಕ್ಷತ ಕಥಂ ನ್ವಿದಂ ಮದೃತೇ ಸ್ಯಾದಿತಿ ।**
**ಸ ಈಕ್ಷತ ಕತರೇಣ ಪ್ರಪದ್ಯಾ ಇತಿ । ಸ ಈಕ್ಷತ**
**ಯದಿ ವಾಚಾಭಿವ್ಯಾಹೃತಂ ಯದಿ ಪ್ರಾಣೇನಾಭಿಪ್ರಾಣಿತಂ**
**ಯದಿ ಚಕ್ಷುಷಾ ದೃಷ್ಟಂ ಯದಿ ಶ್ರೋತ್ರೇಣ ಶ್ರುತಂ**
**ಯದಿ ತ್ವಚಾ ಸ್ಪೃಷ್ಟಂ ಯದಿ ಮನಸಾ ಧ್ಯಾತಂ**
**ಯದ್ಯಪಾನೇನಾಭ್ಯಪಾನಿತಂ ಯದಿ ಶಿಶ್ನೇನ ವಿಸೃಷ್ಟ**
**ಮಥ ಕೋಽಹಮಿತಿ ॥ ೧೧ ॥**

---

1. ವಾಕ್ಕು ಮುಂತಾದ ಇಂದ್ರಿಯವ್ಯಾಪಾರಗಳಿಂದ ವಕ್ತೃ, ಘ್ರಾತೃ ಮುಂತಾದ ಹೆಸರುಗಳು ಆತ್ಮನಿಗೆ ಬರುವಂತೆ ಪ್ರಾಣದ ಅಪಾನವೃತ್ತಿಯಿಂದ ಆಹಾರವನ್ನು ತೆಗೆದುಕೊಳ್ಳುವನೆಂಬ ವ್ಯವಹಾರವಾಗಿದೆ ಎಂದೂ ಹಸಿವುನೀರಡಿಕೆಗಳು ಪ್ರಾಣವೆಂಬ ಉಪಾಧಿಯಿಂದಾಗಿವೆ ಎಂದೂ ಹೇಳಿದಂತೆ ಆಯಿತು.

2. ಯಸ್ಮಾತ್ ಆವಯತ್ ತಸ್ಮಾತ್ ವಾಯುಃ ಎಂದು ವಾಯು ಶಬ್ದಕ್ಕೆ "ವೇ" (ನೇಯು) ಎಂಬ ಧಾತುವಿನಿಂದ ವ್ಯುತ್ಪತ್ತಿಯನ್ನು ಕಲ್ಪಿಸಿದಂತೆ ಆಯಿತು.

3. "ಅನ್ನಂ ದಾಮ" (ಬೃ. ೨-೨-೧) ಎಂಬ ಶ್ರುತಿಯ ಸೂಚನೆ.

4. ಪ್ರಾಣವಿರುವವರೆಗೆ ಆಯುಸ್ಸಿರುತ್ತದೆ (ಕೌ. ೩-೨); ಅನ್ನವಿರುವವರೆಗೆ ಪ್ರಾಣವಿರುತ್ತದೆ. ಆದ್ದರಿಂದ ವಾಯುವು ಅನ್ನಾಯು.

೧೧. ಅವನು "ಇದು ನಾನಿಲ್ಲದೆ ಹೇಗೆತಾನೆ ಇದ್ದೀತು?'' ಎಂದು ಆಲೋಚಿಸಿದನು. ಅವನು "ನಾನು ಯಾವದರಿಂದ ಪಡೆದುಕೊಳ್ಳಲಿ?'' ಎಂದು ಆಲೋಚಿಸಿದನು. ಅವನು "ವಾಕ್ಕಿನಿಂದ ಮಾತಾಡೋಣವಾದರೆ, ಘ್ರಾಣದಿಂದ ಮೂಸೋಣವಾದರೆ, ಚಕ್ಷುವಿನಿಂದ ನೋಡೋಣವಾದರೆ, ಶ್ರೋತ್ರದಿಂದ ಕೇಳೋಣವಾದರೆ, ತ್ವಕ್ಕಿನಿಂದ ಮುಟ್ಟೋಣವಾದರೆ, ಮನಸ್ಸಿನಿಂದ ಚಿಂತನಮಾಡೋಣವಾದರೆ, ಅಪಾನದಿಂದ ಒಳಕ್ಕೆ (ಆಹಾರ ವನ್ನು) ತೆಗೆದುಕೊಳ್ಳೋಣವಾದರೆ, ಶಿಶ್ನದಿಂದ (ಹೊರಕ್ಕೆ) ಬಿಡೋಣ ವಾದರೆ, ಆಗ ನಾನು ಯಾರು?'' ಎಂದು ಆಲೋಚಿಸಿದನು.

## ಸೃಷ್ಟಿಯಲ್ಲಿ ಪ್ರವೇಶಿಸಬೇಕೆಂದು ಆತ್ಮನು ಯೋಚಿಸಿದ್ದು

(ಭಾಷ್ಯ)

೫೧. ಸ ಏವಂ ಲೋಕಲೋಕಪಾಲಸಙ್ಘಾತಸ್ಥಿತಿಮ್ ಅನ್ನನಿಮಿತ್ತಾಂ ಕೃತ್ವಾ ಪುರಪೌರತತ್ಪಾಲಯಿತೃಸ್ಥಿತಿಸಮಾಮ್, ಸ್ವಾಮೀವ ಈಕ್ಷತ । ಕಥಂ ನು ಕೇನ ಪ್ರಕಾರೇಣ ಇತಿ ವಿತರ್ಕಯನ್ ಇದಂ ಮದೃತೇ ಮಾಮ್ ಅನ್ತರೇಣ ಪುರ ಸ್ವಾಮಿನಮ್, ಯದಿದಂ ಕಾರ್ಯಕರಣಸಙ್ಘಾತಕಾರ್ಯಂ[1] ವಕ್ಷ್ಯಮಾಣಂ ಕಥಂ ನು ಖಲು ಮಾಮ್ ಅನ್ತರೇಣ ಸ್ಯಾತ್ ಪರಾರ್ಥಂ ಸತ್ । ಯದಿ ವಾಚಾಭಿವ್ಯಾ ಹೃತಮ್ ಇತ್ಯಾದಿ । ಕೇವಲಮೇವ ವಾಗ್ವ್ಯವಹರಣಾದಿ ತತ್ ನಿರರ್ಥಕಂ ನ ಕಥಂ ಚನ ಭವೇತ್ ಬಲಿಸ್ತುತ್ಯಾದೀವ ಪೌರವನ್ದ್ಯಾದಿಭಿಃ ಪ್ರಯುಜ್ಯಮಾನಂ ಸ್ವಾಮ್ಯರ್ಥಂ ಸತ್ ಸ್ವಾಮಿನಮನ್ತರೇಣ ಅಸತ್ಯೇವ ಸ್ವಾಮಿನಿ ತದ್ವತ್ (?) ತಸ್ಮಾತ್ ಮಯಾ ಪರೇಣ ಸ್ವಾಮಿನಾ ಅಧಿಷ್ಠಾತ್ರಾ ಕೃತಾಕೃತಫಲಸಾಕ್ಷಿಭೂತೇನ ಭೋಕ್ತ್ರಾ ಭವಿ ತವ್ಯಮ್, ಪುರಸ್ಯೇವ ರಾಜ್ಞಾ ॥

(ಭಾಷ್ಯಾರ್ಥ)

ಅವನು ಈ ರೀತಿಯಲ್ಲಿ ಲೋಕಗಳು, ಲೋಕಪಾಲಕರ ಸಂಘಾತ-ಇವುಗಳಿಗೆ ಪುರ, ಪುರನಿವಾಸಿಗಳು, ಅವರನ್ನು ಕಾಪಾಡುವವರು (ಇವರೆಲ್ಲರ)ಸ್ಥಿತಿಯನ್ನು (ಅವರ ಒಡೆಯನು ಏರ್ಪಡಿಸುವಂತೆ ಅನ್ನನಿಮಿತ್ತದಿಂದ ಸ್ಥಿತಿಯನ್ನು ಏರ್ಪಡಿಸಿ (ಹೀಗೆಂದು) ಆಲೋಚಿಸಿದನು: "ಹೇಗೆತಾನೆ, ಯಾವ ಪ್ರಕಾರದಿಂದ, ಇದು ನಾನಿಲ್ಲದೆ ಪುರ

---

1. "ಸಙ್ಘಾತಂ ಕಾರ್ಯಂ ಎಂಬ ಆ॥ ಪಾಠಕ್ಕಿಂತ ಈ ವಾ॥ ಪಾಠವೇ ಮೇಲು.

ಸ್ವಾಮಿಯಾದ ನನ್ನನ್ನು ಬಿಟ್ಟು ಹೇಗೆ ಇದ್ದೀತು?" ಎಂದು ವಿಚಾರಮಾಡಿ, "(ಈ) ಮುಂದೆ ಹೇಳುವ ಕಾರ್ಯಕರಣಸಂಘಾತದ ಕೆಲಸವೆಂಬುದಿದೆಯಲ್ಲ, ಇದು **ಪರಾರ್ಥವಾಗಿದ್ದುಕೊಂಡಿರುವದರಿಂದ** ನನ್ನನ್ನು ಬಿಟ್ಟು ಹೇಗೆತಾನೆ ಇದ್ದೀತು?"[1] ಎಂದು ಆಲೋಚಿಸಿದನು. "ಯದಿ ವಾಚಾಭಿವ್ಯಾಹೃತಮ್" ಮುಂತಾದದ್ದರ (ಅಭಿಪ್ರಾಯವೇನೆಂದರೆ) ಬರಿಯ ವಾಗ್ವ್ಯವಹಾರವೇ ಮುಂತಾದದ್ದು[2] ಪಟ್ಟಣದವರೂ ಹೊಗಳುಭಟ್ಟರೇ ಮೊದಲಾದವರೂ ಒಪ್ಪಿಸತಕ್ಕ ಕಾಣಿಕೆ, ಹೊಗಳಿಕೆ ಮುಂತಾದದ್ದು (ಆ) ಒಡೆಯನಿಲ್ಲದೆಯೇ ಇರುವಾಗ (ಮಾಡಿದ್ದು) ಹೇಗೆ (ನಿರರ್ಥಕವಾಗಿರುವದರಿಂದ ತಾನೇ ಇರಲಾರದೋ) ಅದರಂತೆ (ಈ ವ್ಯವಹಾರವೇ ಮುಂತಾದದ್ದು) ಒಡೆಯನಿಗಾಗಿರುವದರಿಂದ ಒಡೆಯನಿಲ್ಲದೆ ನಿರರ್ಥಕವಾಗುವದರಿಂದ ಎಂದಿಗೂ ತಾನೇ ಇದ್ದುಕೊಂಡಿರಲಾರದು.[3] ಆದ್ದರಿಂದ ಪುರಕ್ಕೆ ಅರಸು ಹೇಗೋ ಹಾಗೆ ನಾನು (ಇದಕ್ಕಿಂತ) ಬೇರೆಯವನೂ ಒಡೆಯನೂ ಆಳುವವನೂ ಮಾಡಿದ ಮತ್ತು ಮಾಡದೆ ಇರುವ (ಕರ್ಮ) ಫಲಕ್ಕೆ ಸಾಕ್ಷಿಯಾದ ಭೋಕ್ತನೂ[4] ಆಗಿರಬೇಕು.

(ಭಾಷ್ಯ)

೫೨. ಯದಿ ನಾಮ ಏತತ್ ಸಂಹತಕಾರ್ಯಸ್ಯ ಪರಾರ್ಥತ್ವಂ ಪರಮ್ ಅರ್ಥಿನಂ ಮಾಂ ಚೇತನಮ್ ಅನ್ತರೇಣ ಭವೇತ್ ಪುರಪೌರಕಾರ್ಯಮಿವ ತತ್ಸ್ವಾಮಿನಮ್ ಅಥ ಕೋಽಹಮ್? ಕಿಂಸ್ವರೂಪಃ ಕಸ್ಯ ವಾ ಸ್ವಾಮೀ?

---

1. ಈ ವಾಕ್ಯವು ಮೂಲದಲ್ಲಿ ಏನೋ ಮಾರ್ಪಟ್ಟಿರುವಂತೆ ತೋರುತ್ತದೆ. ಹೀಗೆ ಹೊಂದಿಸಿಕೊಳ್ಳಬೇಕು: "ಈಕ್ಷತ ಕಥಂ ನು ಕೇನ ಪ್ರಕಾರೇಣ ಇತಿ ವಿತರ್ಕಯನ್" ಈ ವಾಕ್ಯದಲ್ಲಿ "ನು" ಎಂಬುವರ ಅರ್ಥವನ್ನು ಹೇಳಿದೆ. "ಇದಂ ಮದೃತೇ ಮಾಮನ್ತರೇಣ ಪುರಸ್ವಾಮಿನಮ್—ಯದಿದಂ ಕಾರ್ಯಕರಣಸಙ್ಘಾತಕಾರ್ಯಂ ವಕ್ಷ್ಯಮಾಣಮ್ ಕಥಂ ನು ಖಲು ಮಾಮನ್ತರೇಣ ಸ್ಯಾತ್ ಪರಾರ್ಥಂ ಸತ್?॥ ಈ ವಾಕ್ಯದಲ್ಲಿ "ಇದಂ ಕಥಂ ಸ್ಯಾತ್" ಎಂಬುದರ ಅರ್ಥವಿದೆ. ಸಂಹತವಾದದ್ದು ಪರಾರ್ಥ, ಮತ್ತೊಬ್ಬರಿಗಾಗಿರುತ್ತದೆ; ಆದ್ದರಿಂದ ಕಾರ್ಯಕರಣವ್ಯಾಪಾರವು ಯಾರಿಗೋಸ್ಕರವೋ ಅವನೇ ಆತ್ಮ—ಎಂದು ಭಾವ.

2. ಇದು ವಾಗ್ವ್ಯವಹಾರವೇ ಮುಂತಾದದ್ದರ ಸಿದ್ಧಿಯನ್ನು ತಿಳಿಸುವ ವಾಕ್ಯವೆಂದು ವ್ಯಾಖ್ಯಾನಕಾರರು ಭಾವಿಸಿರುತ್ತಾರೆ; ಆತ್ಮಸಿದ್ಧಿಯನ್ನು ತಿಳಿಸುವ ವಾಕ್ಯವೆಂದು ನಮಗೆ ತೋರುತ್ತದೆ.

3. ಯಾವನಿಗೋಸ್ಕರವೋ ಅವನಿಲ್ಲದೆ ಸ್ವತಂತ್ರವಾಗಿರಲಾರದು.

4. ಸಾಕ್ಷಿತ್ವವೇ ಭೋಕ್ತೃತ್ವವು; ನಿಜವಾಗಿ ಭೋಕ್ತೃತ್ವವಿದೆ ಎಂಬುದು ಅಜ್ಞಾನದ ಫಲ.

ಯದ್ಯಹಂ ಕಾರ್ಯಕರಣಸಙ್ಘಾತಮ್ ಅನುಪ್ರವಿಶ್ಯ ವಾಗಾದ್ಯಭಿವ್ಯಾಹೃತಾದಿ ಫಲಂ ನೋಪಲಭೇಯ ರಾಜೇವ ಪುರಮಾವಿಶ್ಯ ಅಧಿಕೃತಪುರುಷಕೃತಾಕೃತಾದಿಲಕ್ಷಣಮ್, ನ ಕಶ್ಚಿತ್ ಮಾಮ್ "ಅಯಂ ಸಃ, ಏವಂರೂಪಶ್ಚ" ಇತ್ಯಧಿಗಚ್ಛೇತ್ ವಿಚಾರಯೇತ್ । ವಿಪರ್ಯಯೇ ತು "ಯೋಽಯಂ ವಾಗಾದ್ಯಭಿವ್ಯಾಹೃತಾದಿ ಇದಮ್ ಇತಿ ವೇದ, ಸ ಸಃ ವೇದನರೂಪಶ್ಚ" ಇತ್ಯಧಿಗನ್ತವ್ಯೋಽಹಂ ಸ್ಯಾಮ್ । ಯದರ್ಥಮಿದಂ ಸಂಹತಾನಾಂ ವಾಗಾದೀನಾಮ್ ಅಭಿವ್ಯಾಹೃತಾದಿ ಯಥಾ ಸ್ತಮ್ಭಕುಡ್ಯಾದೀನಾಂ ಪ್ರಾಸಾದಾದಿಸಂಹತಾನಾಂ ಸ್ವಾವಯವೈರಸಂಹತಪರಾರ್ಥತ್ವಮ್, ತದ್ವತ್ ಇತಿ ॥

(ಭಾಷ್ಯಾರ್ಥ)

ಒಂದುವೇಳೆ ಈ ಒಟ್ಟುಗೂಡಿದ ಕಾರ್ಯವು ಮತ್ತೊಬ್ಬರಿಗಾಗಿದ್ದರೂ[1] ಇದಕ್ಕಿಂತ ಬೇರೆಯಾದ ಅರ್ಥಿಯಾದ[2] ಚೇತನನಾದ ನಾನಿಲ್ಲದೆಯೇ ಪುರದ ಮತ್ತು ಪುರನಿವಾಸಿಗಳ ಕಾರ್ಯವು (ಅವರ) ಒಡೆಯನಿಲ್ಲದೆಯೇ[3] (ಆಗುವಂತೆ)–ಆಗುವದಾದರೆ ಆಗ ನಾನು ಯಾರು? ಎಂದರೆ ನನ್ನ ಸ್ವರೂಪವೇನು? ಅಥವಾ ನಾನು ಯಾರಿಗೆ ಒಡೆಯನು? ನಾನು ಕಾರ್ಯಕರಣಸಂಘಾತವನ್ನು ಒಳಹೊಕ್ಕು ವಾಕ್ಕೇ ಮುಂತಾದವುಗಳ ಮಾತನಾಡುವದೇ ಮುಂತಾದದ್ದರ ಫಲವನ್ನು, ಅರಸನು ಪುರವನ್ನು ಹೊಕ್ಕು ಅಧಿಕಾರಿಜನರು ಮಾಡಿದ್ದರ ಅಥವಾ ಮಾಡದೆ ಇದ್ದದ್ದರ (ಫಲವನ್ನು ಅನುಭವಿಸುವಂತೆ), ಅರಿತುಕೊಳ್ಳದೆ ಇದ್ದರೆ, (ಆಗ) ಯಾರೊಬ್ಬನೂ "ಇವನು ಇದಾನೆ, ಮತ್ತು ಇಂಥ ಸ್ವರೂಪದವನು" ಎಂದು ತಿಳಿದುಕೊಳ್ಳಲಾರನು, ವಿಚಾರ ಮಾಡಲಾರನು.[4] ಆದರೆ ಇದಕ್ಕೆ ವಿರುದ್ಧವಾಗಿ (ನಾನು ಒಳಹೊಕ್ಕು ಎಲ್ಲವನ್ನೂ

---

1. "ಸಂಹತಕಾರ್ಯಂ ಪರಾರ್ಥಮ್" ಎಂದು ಇದ್ದರೆ ಹೇಗೋ ಹಾಗೆ ಕನ್ನಡಿಸಿದೆ.

2. ಅರ್ಥಿಯಾದವನು ಚೇತನನು, ಪರಾರ್ಥವಾದ ಜಡವಸ್ತುವಿನ ಭೋಗವು ಚೇತನನಾದ ಭೋಕ್ತೃವಿಗಾಗಿರುತ್ತದೆ, ಆ ಜಡವಸ್ತುವಿಗೇ ಅಲ್ಲ. ಉಪದೇಶಸಾಹಸ್ರಿ ಗದ್ಯ ಅವಗತಿಪ್ರಕರಣದಲ್ಲಿ 'ನ ಹಿ ಚನ್ದನಕಣ್ಟಕಕೃತೇ ಸುಖದುಃಖೇ ಚನ್ದನಕಣ್ಟಕಾರ್ಥೇ" ಎಂಬ ವಾಕ್ಯವನ್ನು ನೋಡಿ.

3. ಯಾರೊಬ್ಬರಿಗೋಸ್ಕರವೂ ಅಲ್ಲದೆ.

4. "ವಿಚಾರಯೇತ್" ಎಂಬ ಮಾತು ಮೂಲದಲ್ಲಿಲ್ಲದಿದ್ದರೂ ಸಾಗುತ್ತದೆ. ಆತ್ಮನು ವಾಗಾದಿಗಳ ಮೂಲಕ ಹೊರಗಿನ ಪ್ರಪಂಚವನ್ನು ಅರಿಯುವದರಿಂದ ಅರಿಯುವಾತನಾದ ಆತ್ಮನು ಇದಾನೆ, ಆವನು ಅರಿವಿನ ಸ್ವರೂಪದವನು ಎಂದು ತಿಳಿಯುವದಕ್ಕೆ ಅವಕಾಶವಾಗುತ್ತದೆ ಎಂದರ್ಥ.

ಅರಿತುಕೊಂಡರೆ[1]) "ವಾಕ್ಕೇ ಮುಂತಾದವುಗಳು ಮಾತಾಡುವದೇ ಮುಂತಾದದ್ದನ್ನು 'ಇದು' ಎಂದು ಯಾವ ಇವನು ಅರಿಯುತ್ತಿರುವನೋ ಅವನು ಇದಾನೆ, ಜ್ಞಾನರೂಪನಾಗಿಯೂ ಇರುತ್ತಾನೆ"[2] ಎಂದು ನನ್ನನ್ನು ಅರಿತುಕೊಳ್ಳಬಹುದಾದೀತು. ಇದಕ್ಕಾಗಿಯೇ ಒಟ್ಟುಗೂಡಿಕೊಂಡಿರುವ ಈ ವಾಕ್ಕೇ ಮುಂತಾದವುಗಳ ಮಾತಾಡುವದೇ ಮುಂತಾದದ್ದು (ಇರುವದು); ಹೇಗೆ ಕಂಬ, ಗೋಡೆ-ಮುಂತಾದವು ಉಪ್ಪರಿಗೆಯೇ ಮುಂತಾದವುಗಳೊಡನೆ ಒಟ್ಟುಗೂಡಿರುವದರಿಂದ ತಮ್ಮ ಅವಯವಗಳೊಡನೆ ಕೂಡಿಕೊಳ್ಳದೆ ಇರುವ ಮತ್ತೊಬ್ಬನಿಗಾಗಿಯೇ ಇರುವವೋ ಅದರಂತೆ.[3]

## ಆತ್ಮನು ಶರೀರವನ್ನು ಪ್ರವೇಶಿಸಿದ್ದು

(ಭಾಷ್ಯ)

೫೩. ಏವಮ್ ಈಕ್ಷಿತ್ವಾ ಅತಃ "ಕತರೇಣ ಪ್ರಪದ್ಯಾ ಇತಿ" ಪ್ರಪದಂ ಚ ಮೂರ್ಧಾ ಚ ಅಸ್ಯ ಸಙ್ಘಾತಸ್ಯ ಪ್ರವೇಶಮಾರ್ಗೌ । ಅನಯೋಃ ಕತರೇಣ ಮಾರ್ಗೇಣ ಇದಂ ಕಾರ್ಯಕರಣಸಙ್ಘಾತಲಕ್ಷಣಂ ಪುರಂ ಪ್ರಪದ್ಯೈ ಪ್ರಪದ್ಯೇಯ ಇತಿ ॥

(ಭಾಷ್ಯಾರ್ಥ)

ಹೀಗೆಂದು ಆಲೋಚಿಸಿಕೊಂದು "ಆದ್ದರಿಂದ (ಎರಡರಲ್ಲಿ) ಯಾವದರಿಂದ (ಇದನ್ನು) ಪಡೆದುಕೊಳ್ಳಲಿ? ಮುಂಗಾಲು, ನೆತ್ತಿ-ಈ ಎರಡೂ ಪ್ರವೇಶಕ್ಕೆ ದಾರಿಗಳು; ಇವೆರಡರಲ್ಲಿ ಯಾವ ದಾರಿಯಿಂದ ಕಾರ್ಯಕರಣಸಙ್ಘಾತರೂಪವಾದ ಪುರವನ್ನು ಪಡೆದುಕೊಳ್ಳಲಿ, ಎಂದರೆ ಸೇರಲಿ? ಎಂದು (ಅವನು ಆಲೋಚಿಸಿದನು).[4]॥೧೧॥

---

1. "ಯಾವನು ಇದನ್ನು ಮಾಡುವೆನು ಎಂದು ಅರಿಯುವನೋ ಅವನು ಆತ್ಮನು, ಮಾತನಾಡುವದಕ್ಕೆ ವಾಕ್ಕು ಕರಣವು" ಎಂದು ಮುಂತಾಗಿರುವ (ಛಾ. ೮-೧೨-೪) ಶ್ರುತಿಯನ್ನು ಸೂಚಿಸಿದೆ.

2. ಅರಿಯುವ ಕರ್ತನಿಲ್ಲದೆ ಅರಿವೆಂಬ ಕ್ರಿಯೆ ನಡೆಯಲಾರದು; ಆದ್ದರಿಂದ ಆತ್ಮನು ಇದಾನೆ. ಅವನಲ್ಲಿ ಅರಿವು ಇಲ್ಲದಿದ್ದರೆ ಅವನು ಏನನ್ನೂ ಅರಿತುಕೊಳ್ಳಲಾರನು; ಆದ್ದರಿಂದ ಅವನು ಅರಿವಿನ ಸ್ವಭಾವದವನು-ಎಂದು ಊಹಿಸುವದಕ್ಕೆ ವಕ್ತೃತ್ವಾದಿಗಳು ಸಾಧಕ.

3. ಗೋಡೆ, ಕಂಬ-ಮುಂತಾದವು ತಮತಮಗಾಗಿ ಇಲ್ಲ, ಒಂದಕ್ಕಾಗಿ ಮತ್ತೊಂದೂ ಇಲ್ಲ; ಹಾಗೆಯೇ ವಾಗಾದಿಗಳು ಎಂದರ್ಥ.

4. ಕತರೇಣ ಎಂಬುದರ ಮೊದಲು 'ಸ ಈಕ್ಷತ' ಎಂಬ ಮಾತುಗಳು ಮೂಲದಲ್ಲಿವೆ; ಇವುಗಳು ಏಕೋ ಭಾಷ್ಯದಲ್ಲಿ ಬಿಟ್ಟುಹೋಗಿವೆ. "ಸ ಈಕ್ಷತ ಕತರೇಣ ಪ್ರಪದ್ಯಾ" ಎಂಬ ವಾಕ್ಯವು ಪಾಠಕ್ರಮದಿಂದ ಎರಡನೆಯದಾದರೂ ಅರ್ಥಕ್ರಮದಲ್ಲಿ ಮೂರನೆಯದಾದ್ದರಿಂದ ಭಾಷ್ಯಕಾರರು ಆ ಕ್ರಮದಲ್ಲಿಯೇ ವಿವರಿಸಿರುತ್ತಾರೆ.

**ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತ। ಸೈಷಾ ವಿದೃತಿರ್ನಾಮ ದ್ವಾಸ್ತದೇತನ್ನಾನ್ದನಮ್। ತಸ್ಯ ತ್ರಯ ಆವಸಥಾಸ್ತ್ರಯಃ ಸ್ವಪ್ನಾಃ। ಅಯಮಾವಸಥೋಽಯಮಾವಸಥೋಽಯಮಾವಸಥ ಇತಿ ॥ ೧೨ ॥**

೧೨. ಆತನು ಇದೇ ಬೈತಲೆಯನ್ನು ಸೀಳಿಕೊಂಡು ಈ ದ್ವಾರದಿಂದ ಸೇರಿದನು. ಆ ಇದು ವಿದೃತಿ ಎಂಬ ಹೆಸರಿನ ದ್ವಾರವು; ಆ ಇದು ನಾಂದನವು. ಅವನಿಗೆ ಮೂರು ವಸತಿಗಳು, ಮೂರು ಸ್ವಪ್ನಗಳು. ಇದು (ಒಂದು) ವಸತಿ, ಇದು (ಒಂದು) ವಸತಿ, ಇದು (ಒಂದು) ವಸತಿ.

(ಭಾಷ್ಯ)

೫೪. ಏವಮ್ ಈಕ್ಷಿತ್ವಾ ನ ತಾವತ್ ಮದ್ಭೃತ್ಯಸ್ಯ ಪ್ರಾಣಸ್ಯ ಮಮ ಸರ್ವಾರ್ಥಾಧಿಕೃತಸ್ಯ ಪ್ರವೇಶಮಾರ್ಗೇಣ ಪ್ರಪದಾಭ್ಯಾಮ್ ಅಧಃ ಪ್ರಪದ್ಯೇ। ಕಿಂ ತರ್ಹಿ ಪಾರಿಶೇಷ್ಯಾತ್ ಅಸ್ಯ ಮೂರ್ಧಾನಂ ವಿದಾರ್ಯ ಪ್ರಪದ್ಯೇ ಇತಿ ಲೋಕ ಇವ ಈಕ್ಷಿತಕಾರೀ ಯಃ ಸ್ರಷ್ಟಾ ಈಶ್ವರಃ ಸ ಏತಮೇವ ಮೂರ್ಧಸೀಮಾನಂ ಕೇಶವಿಭಾಗಾವಸಾನಂ ವಿದಾರ್ಯ ಛಿದ್ರಂ ಕೃತ್ವಾ ಏತಯಾ ದ್ವಾರಾ ಮಾರ್ಗೇಣ ಇಮಂ ಕಾರ್ಯಕರಣಸಙ್ಘಾತಂ ಪ್ರಾಪದ್ಯತ ಪ್ರವಿವೇಶ ॥

(ಭಾಷ್ಯಾರ್ಥ)

ಹೀಗೆ ಆಲೋಚಿಸಿಕೊಂಡು "ನನ್ನ ಭೃತ್ಯನಾಗಿ ನನಗೆ ಬೇಕಾದ ಕೆಲಸಗಳಿಗೆಲ್ಲ ಅಧಿಕಾರಿಯಾಗಿರುವ **ಪ್ರಾಣನು** ಹೊಕ್ಕ ಮಾರ್ಗದಿಂದ ಎಂದರೆ ಕೆಳಗಡೆಯಿಂದ ಮುಂಗಾಲುಗಳ ಮೂಲಕವಾಗಿ[1] ನಾನು ಸೇರುವದಿಲ್ಲ. ಮತ್ತೆ ಹೇಗೆಂದರೆ ಉಳಿದಿರುವ ಈ (ಶರೀರದ) ನೆತ್ತಿಯನ್ನು ಸೀಳಿಕೊಂಡು ಸೇರೋಣ" ಎಂದು ವಿಚಾರಪೂರ್ವಕವಾಗಿ ಕೆಲಸಮಾಡುವ ಜನರಂತೆ ಆ ಸ್ರಷ್ಟೃವಾದ ಈಶ್ವರನು ಈ ತಲೆಯ ಬೈತಲೆಯನ್ನು, ಕೂದಲನ್ನು (ಬಾಚಿ) ವಿಂಗಡಿಸುವ ಸ್ಥಳವನ್ನು, ಸೀಳಿ ರಂಧ್ರವನ್ನು ಮಾಡಿಕೊಂಡು ಈ ಮಾರ್ಗದಿಂದ ಈ ಕಾರ್ಯಕರಣಸಙ್ಘಾತವೆಂಬ ಲೋಕವನ್ನು ಸೇರಿದನು, ಒಳಹೊಕ್ಕನು.

(ಭಾಷ್ಯ)

೫೫. ಸೇಯಂ ಹಿ ಪ್ರಸಿದ್ಧಾ ದ್ವಾಃ। ಮೂರ್ಧ್ನಿ ತೈಲಾದಿಧಾರಣಕಾಲೇ ಅನ್ತಸ್ತದ್ರಸಾದಿಸಂವೇದನಾತ್। ಸೈಷಾ ವಿದೃತಿಃ ವಿದಾರಿತತ್ವಾದ್ವಿದೃತಿಃ ನಾಮ

---

1. ಪ್ರಾಣನು ಮುಂಗಾಲುಗಳ ಮೂಲಕವಾಗಿ ದೇಹವನ್ನು ಹೊಕ್ಕನೆಂದು ಐ. ಆ. ೨-೧-೪ ರಲ್ಲಿ ಹೇಳಿದೆ. ಕ್ರಿಯಾಶಕ್ತಿಪ್ರಧಾನನಾದ್ದರಿಂದ ಅವನು ಭೃತ್ಯನು ಎಂದಿದೆ.

ಪ್ರಸಿದ್ಧಾ ದ್ವಾಃ । ಇತರಾಣಿ ತು ಶ್ರೋತ್ರಾದಿದ್ವಾರಾಣಿ ಭೃತ್ಯಾದಿಸ್ಥಾನೀಯ ಸಾಧಾರಣಮಾರ್ಗತ್ವಾತ್ ನ ಸಮೃದ್ಧೀನಿ ನಾನನ್ದಹೇತೂನಿ । ಇದಂ ತು ದ್ವಾರಂ ಪರಮೇಶ್ವರಸ್ಯೈವ ಕೇವಲಸ್ಯ ಇತಿ ತದೇತತ್ ನಾನ್ದನಮ್ ನನ್ದನಮೇವ ನಾನ್ದನಮಿತಿ ದೈರ್ಘ್ಯಂ ಛಾನ್ದಸಮ್। ನನ್ದತ್ಯನೇನ ದ್ವಾರೇಣ ಗತ್ವಾ ಪರಸ್ಮಿನ್ ಬ್ರಹ್ಮಣೀತಿ ॥

(ಭಾಷ್ಯಾರ್ಥ)

ಈ ದ್ವಾರವು ಎಲ್ಲರಿಗೂ ಗೊತ್ತಿರತಕ್ಕದ್ದೇ. ಏಕೆಂದರೆ ನೆತ್ತಿಯಮೇಲೆ ಎಣ್ಣೆಯೇ ಮುಂತಾದದ್ದನ್ನು ಇಟ್ಟಕಾಲದಲ್ಲಿ ಅದರ (ತಂಪು ಮುಂತಾದ) ರಸದ (ಗುಣವು) ಇಲ್ಲಿ ತಿಳಿಯಬರುತ್ತದೆ. ಆ ಇದು ವಿದೃತಿ–ಸೀಳಿಕೊಂಡದ್ದರಿಂದ [1] (ವಿದೃತಿ)–ಎಂದು ಪ್ರಸಿದ್ಧವಾದ ದ್ವಾರವು. ಮಿಕ್ಕ ಶ್ರೋತ್ರವೇ ಮುಂತಾದವು ಭೃತ್ಯರೇ–ಮುಂತಾದವರಂತಿರುವ (ದೇವತೆಗಳಿಗೂ) ಸಾಧಾರಣವಾಗಿರುವ [2] ಮಾರ್ಗಗಳಾಗಿರುವದರಿಂದ ಸಮೃದ್ಧವಾಗಿರುವದಿಲ್ಲ, ಆನಂದಕ್ಕೆ ಕಾರಣವಾಗಿರುವದಿಲ್ಲ. ಆದರೆ ಇದು ಪರಮೇಶ್ವರನೊಬ್ಬನಿಗೇ (ದಾರಿ)ಯಾಗಿರುವದರಿಂದ ನಾಂದನವು, ನಂದನವೇ (ಆಗಿರುತ್ತದೆ). "ನಾನ್ದನಮ್" ಎಂಬಲ್ಲಿ ದೀರ್ಘವನ್ನುಪಯೋಗಿಸಿರುವದು ವೈದಿಕಪ್ರಯೋಗವು. ಈ ದ್ವಾರದಿಂದ ಹೋದವನು ಪರಬ್ರಹ್ಮದಲ್ಲಿ [3] ಆನಂದಿಸುತ್ತಾನೆ; ಆದ್ದರಿಂದ (ಇದಕ್ಕೆ 'ನಾಂದನ' ಎಂದು ಹೆಸರು).

## ಆತ್ಮನ ಮೂರು ವಸತಿಗಳು

(ಭಾಷ್ಯ)

೫೬. ತಸ್ಯ ಏವಂ ಸೃಷ್ಟ್ವಾ ಪ್ರವಿಷ್ಟಸ್ಯ ಅನೇನ ಜೀವೇನಾತ್ಮನಾ ರಾಜ್ಞ ಇವ ಪುರಮ್ ತ್ರಯ ಆವಸಥಾಃ । ಜಾಗರಿತಕಾಲೇ ಇನ್ದ್ರಿಯಸ್ಥಾನಂ ದಕ್ಷಿಣಂ ಚಕ್ಷುಃ, ಸ್ವಪ್ನಕಾಲೇ ಅನ್ತರ್ಮನಃ, ಸುಷುಪ್ತಿಕಾಲೇ ಹೃದಯಾಕಾಶಃ ಇತ್ಯೇತೇ ।

---

1. ದೃ ಎಂಬ ಧಾತುವಿಗೆ ಸೀಳು ಎಂದರ್ಥ; ಪರಮೇಶ್ವರನು ನೆತ್ತಿಯನ್ನು ಸೀಳಿಕೊಂಡು ಒಳಕ್ಕೆ ಬಂದದ್ದರಿಂದ ಈ ಮಾರ್ಗಕ್ಕೆ 'ವಿದೃತಿ' ಎಂದು ಹೆಸರು.

2. ಎಲ್ಲರೂ ಓಡಾಡುವ.

3. ಉಪಾಸಕರು ಮರಣಕಾಲದಲ್ಲಿ ಸುಷುಮ್ನಾನಾಡಿಯ ಮೂಲಕವಾಗಿ ನೆತ್ತಿಯನ್ನು ಒಡೆದುಕೊಂಡು ಬ್ರಹ್ಮಲೋಕಕ್ಕೆ ಹೋಗುವರೆಂದು ಶ್ರುತಿಪ್ರಸಿದ್ಧಿ. ಈ ಮಾರ್ಗದಿಂದ ಪರಬ್ರಹ್ಮವನ್ನೂ ಜ್ಞಾನದಿಂದ ಪಡೆಯಬಹುದು. ಅದಕ್ಕೆ ಕ್ರಮಮುಕ್ತಿ ಎಂದು ಹೆಸರು. ಛಾ. ಭಾ. ೮-೬-೬; ಕ. ಭಾ. ೨-೩-೧೬; ಸೂ. ಭಾ. ೪-೩-೧೦, ೪-೩-೧೪ ಇವನ್ನು ನೋಡಿರಿ.

ವಕ್ಷ್ಯಮಾಣಾ ವಾ ತ್ರಯ ಆವಸಥಾಃ ಪಿತೃಶರೀರಮ್, ಮಾತೃಗರ್ಭಾಶಯಃ, ಸ್ವಂ ಚ ಶರೀರಮ್ ಇತಿ । ತ್ರಯಃ ಸ್ವಪ್ನಾಃ ಜಾಗ್ರತ್ಸ್ವಪ್ನಸುಷುಪ್ತ್ಯಾಖ್ಯಾಃ । ನನು ಜಾಗರಿತಂ ಪ್ರಬೋಧರೂಪತ್ವಾತ್ ನ ಸ್ವಪ್ನಃ । ನೈವಮ್, ಸ್ವಪ್ನ ಏವ । ಕಥಮ್ ? ಪರಮಾರ್ಥಸ್ವಾತ್ಮಪ್ರಬೋಧಾಭಾವಾತ್, ಸ್ವಪ್ನವತ್ ಅಸದ್ವಸ್ತುದರ್ಶನಾಚ್ಚ । ಅಯಮೇವ ಆವಸಥಃ ಚಕ್ಷುರ್ದಕ್ಷಿಣಂ ಪ್ರಥಮಃ, ಮನೋಽನ್ತರಂ ದ್ವಿತೀಯಃ, ಹೃದಯಾಕಾಶಸ್ತೃತೀಯಃ । "ಅಯಮಾವಸಥಃ" ಇತಿ ಉಕ್ತಾನುಕೀರ್ತನಮೇವ । ತೇಷು ಹಿ ಅಯಮ್ ಆವಸಥೇಷು ಪರ್ಯಾಯೇಣ ಆತ್ಮಭಾವೇನ ವರ್ತಮಾನಃ, ಅವಿದ್ಯಯಾ ದೀರ್ಘಕಾಲಂ ಗಾಢಂ ಪ್ರಸುಪ್ತಃ ಸ್ವಾಭಾವಿಕ್ಯಾ ನ ಪ್ರಬುಧ್ಯತೇ ಅನೇಕಶತಸಹಸ್ರಾನರ್ಥಸನ್ನಿಪಾತಜದುಃಖಮುದ್ಗರಾಭಿಘಾತಾನುಭವೈರಪಿ ॥

(ಭಾಷ್ಯಾರ್ಥ)

ಈ ರೀತಿಯಲ್ಲಿ (ಜಗತ್ತನ್ನು) ಸೃಷ್ಟಿಸಿ, ಪುರವನ್ನು (ಹೊಕ್ಕ) ರಾಜನಂತೆ ಈ ಜೀವರೂಪದಿಂದ[1] ಹೊಕ್ಕಿರುವ (ಆತ್ಮನಿಗೆ) ಮೂರು ವಸತಿಗಳು: ಎಚ್ಚರದ ಕಾಲದಲ್ಲಿ ಇಂದ್ರಿಯಸ್ಥಾನವಾದ ಬಲಗಣ್ಣು,[2] ಕನಸಿನ ಕಾಲದಲ್ಲಿ ಒಳಗಿನ ಮನಸ್ಸು, ತನಿನಿದ್ರೆಯ ಕಾಲದಲ್ಲಿ ಹೃದಯಾಕಾಶವು[3] ಎಂಬಿವು. ಅಥವಾ ಮುಂದೆ[4] ಹೇಳುವ ತಂದೆಯ ಶರೀರ, ತಾಯಿಯ ಶರೀರ ಮತ್ತು ತನ್ನ ಶರೀರ–ಎಂಬ ಮೂರು ವಸತಿಗಳು. ಮೂರು ಸ್ವಪ್ನಗಳು ಎಂದರೆ ಎಚ್ಚರ, ಕನಸು, ತನಿನಿದ್ರೆ–ಎಂಬ ಹೆಸರಿನವು.

(ಆಕ್ಷೇಪ) :—ಎಚ್ಚರವು ಅರಿವಿನ ರೂಪವಾಗಿರುವದರಿಂದ[5] ಕನಸಲ್ಲವಲ್ಲ !

(ಸಮಾಧಾನ) :—ಹಾಗಲ್ಲ, (ಅದೂ) ಕನಸೇ.

(ಪ್ರಶ್ನೆ) :—(ಅದು) ಹೇಗೆ ?

---

1. ಛಾ. ೬-೩-೨ರ ಸೂಚನೆ.

2. ಛಾಂದೋಗ್ಯವೇ ಮುಂತಾದ ಶ್ರುತಿಗಳಲ್ಲಿ ಬಲಗಣ್ಣಿನಲ್ಲಿ ಜೀವನು ಇರುತ್ತಾನೆಂದು ಹೇಳಿರುತ್ತದೆ. ಇಂದ್ರಿಯಗಳ ಮೂಲಕ ವಿಷಯಗಳನ್ನು ಅನುಭವಿಸುವನು ಎಂದು ಅದಕ್ಕೆ ಅಭಿಪ್ರಾಯ. ಮಾ. ಕಾ. ಭಾ. ೧-೨ನ್ನು ನೋಡಿರಿ.

3. ಹೃದಯಾಕಾಶವು ಪರಮಾತ್ಮಸ್ವರೂಪವೇ ಆದರೂ ಅಜ್ಞಾನದಿಂದ ಸುಷುಪ್ತಿಯಾಗಿ ತೋರುತ್ತದೆ. ಛಾ. ಭಾ. ೩-೧೨-೯, ಮಾ. ಕಾ. ಭಾ. ೧-೨. ಹೃದಯಾಕಾಶವೆಂದರೆ ಭೂತಾಕಾಶವೇ ಎಂಬ (ಆ॥) ವ್ಯಾಖ್ಯಾನವು ಸಮಂಜಸವಾಗಿ ಕಾಣುವದಿಲ್ಲ.

4. ಎರಡನೆಯ ಅಧ್ಯಾಯದಲ್ಲಿ.

5. ಸುಷುಪ್ತಿಯಲ್ಲಿಯೂ ಕನಸಿನಲ್ಲಿಯೂ ಮರವೆ ಇದೆ, ಆದ್ದರಿಂದ ಆವೆರಡೂ 'ಸ್ವಪ್ನ' (ನಿದ್ರೆ) ಎಂದು ಹೇಳಬಹುದು ; ಎಚ್ಚರವನ್ನು ಸ್ವಪ್ನವೆನ್ನಬಹುದೆ ?

(ಉತ್ತರ) :—(ಹೇಗೆಂದರೆ ಅಲ್ಲಿ) ಪರಮಾರ್ಥವಾಗಿರುವ ತನ್ನ ಆತ್ಮನ ಅರಿವು ಇರುವದಿಲ್ಲ, ಮತ್ತು ಕನಸಿನಂತೆ (ಅಲ್ಲಿಯೂ) ಹುಸಿತೋರಿಕೆಯ ವಸ್ತುವನ್ನೇ ಕಾಣುತ್ತಿರುತ್ತಾನೆ.[1]

ಇದೇ ವಸತಿಯು ಎಂದರೆ ಬಲಗಣ್ಣು ಮೊದಲನೆಯದು ; ಒಳಗಿನ ಮನಸ್ಸು ಎರಡನೆಯದು ; ಹೃದಯಾಕಾಶವೇ ಮೂರನೆಯದು. "ಇದೇ ವಸತಿಯು" ಎಂಬುದು ಹಿಂದೆ ಹೇಳಿದ್ದನ್ನು ಅನುವಾದಮಾಡಿರುವದೇ (ಹೊರತು ಹೊಸದಾಗಿ ಏನನ್ನೂ ಹೇಳಿಲ್ಲ).[2] ಏಕೆಂದರೆ ಈ ವಸತಿಗಳಲ್ಲಿಯೇ ಈ (ಆತ್ಮನು) ಒಂದಾಗುತ್ತಲೂ ಒಂದರಲ್ಲಿ[3] ಸ್ವಾಭಾವಿಕವಾದ[4] ಅವಿದ್ಯೆಯಿಂದ ಇವೇ ತಾನೆಂಬ ಭಾವನೆಯಿಂದ ಇರುತ್ತಾ, ದೀರ್ಘಕಾಲದಿಂದ ಬಲವಾಗಿ ನಿದ್ರಿಸುತ್ತಾ,[5] ಅನೇಕ ಶತಸಹಸ್ರ ಅನರ್ಥಗಳು ಸೇರಿ ಉಂಟಾಗುವ ದುಃಖಗಳೆಂಬ ಚಮ್ಮಟಿಗೆಯ ಹೊಡೆತದ ಅನುಭವಗಳಿಂದಲೂ ಎಚ್ಚರಗೊಳ್ಳದೆ ಇರುತ್ತಾನೆ.

## ಬ್ರಹ್ಮಸಾಕ್ಷಾತ್ಕಾರ

**ಸ ಜಾತೋ ಭೂತಾನ್ಯಭಿವ್ಯೈಖ್ಯತ್ ಕಿಮಿಹಾನ್ಯಂ**
**ವಾವದಿಷದಿತಿ । ಸ ಏತಮೇವ ಪುರುಷಂ**
**ಬ್ರಹ್ಮತತಮಮಪಶ್ಯದಿದಮದರ್ಶಮಿತೀ೩ಂ ॥ ೧೩ ॥**

೧೩. ಅವನು ಹುಟ್ಟಿ ಭೂತಗಳನ್ನು ವಿಂಗಡಿಸಿ ಹೇಳಿದನು, "ಇಲ್ಲಿ

---

1. ಮಾ. ಭಾ. ೫ನ್ನು ನೋಡಿ. ತತ್ತ್ವವನ್ನು ತಿಳಿಯದಿರುವದೂ, ಅವಸ್ಥಾರಹಿತನಾದ ಆತ್ಮನಲ್ಲಿ ಅವಸ್ಥೆಯನ್ನು ಕಾಣುವದೂ ಮೂರವಸ್ಥೆಗಳಿಗೂ ಸಮಾನವಾಗಿದೆ.

2. ಜೀವನಿಗೆ ಹೊರಗೆ ಯಾವದಾದರೊಂದು ವಸತಿಯಿದೆ ಎಂಬ ಭ್ರಾಂತಿಯನ್ನು ತೊಲಗಿಸುವದಕ್ಕಾಗಿ ಒಂದರಕೆಳಗೊಂದು ಇರುವ ಚಕ್ಷುಸ್ಸೇ ಮುಂತಾದವುಗಳನ್ನು ಬೆಟ್ಟುಟ್ಟು "ಇದು ಒಂದು ವಸತಿ" ಎಂದು ತೋರಿಸಿರುತ್ತದೆ ಎಂದು ವ್ಯಾಖ್ಯಾನಕಾರನು ಬರೆದಿರುತ್ತಾನೆ. ಮೂರು ವಸತಿಗಳು ಎಂದು ಹಿಂದೆ ಹೇಳಿದ್ದನ್ನೇ "ಇದೊಂದು ವಸತಿ" ಎಂಬ ಮಾತಿನಿಂದ ಹೇಳಿದೆ ; ಇವು ಮೂರೂ ಹುಸಿತೋರಿಕೆಗಳೇ ಎಂದು ಶ್ರುತಿಯಲ್ಲಿ ಪ್ರತಿಪಾದಿಸಿದೆ ಎಂಬುದೇ ಭಾಷ್ಯದ ಅಭಿಪ್ರಾಯವೆಂಬುದು ಸ್ಪಷ್ಟ.

3. ತಿಳಿವಳಿಕೆಯ ಕ್ರಮದಲ್ಲಿ ಒಂದಾಗುತ್ತಲೊಂದು ; ಕಾಲಕ್ರಮದಲ್ಲಲ್ಲ. ಮಾ. ಭಾ. ೧.

4. ಅವಿಚಾರಸ್ವಭಾವದಿಂದ ಇದ್ದುಕೊಂಡಿರುವ.

5. ಅನಾದಿಯಿಂದ ನಿದ್ರಿಸುತ್ತಾ, ಮಾ. ಕಾ. ಭಾ. ೧-೧೬.

ಯಾವದು ಬೇರೆ ಎಂದು ಹೇಳಲಿ!" ಎಂದು. ಅವನು ಇದೇ ಪುರುಷನಾದ ಬ್ರಹ್ಮವನ್ನು ಎಲ್ಲೆಲ್ಲಿಯೂ ವ್ಯಾಪಿಸಿರುವದಾಗಿ "ಆಹಾ! ಇದನ್ನು ಕಂಡೆನು!" ಎಂದು ಕಂಡುಕೊಂಡನು.

(ಭಾಷ್ಯ)

೫೭. ಸ ಜಾತಃ ಶರೀರೇ ಪ್ರವಿಷ್ಟೋ ಜೀವಾತ್ಮನಾ ಭೂತಾನಿ ಅಭಿವ್ಯಖ್ಯತ್ ವ್ಯಾಕರೋತ್ । ಸ ಕದಾಚಿತ್ ಪರಮಕಾರುಣಿಕೇನ ಆಚಾರ್ಯೇಣ ಆತ್ಮಜ್ಞಾನಪ್ರಬೋಧಕೃಚ್ಛಬ್ದಕಾರ್ಯಾಂ[1] ವೇದಾನ್ತಮಹಾಭೇರ್ಯಾಂ ತತ್ಕರ್ಣಮೂಲೇ ತಾಡ್ಯಮಾನಾಯಾಮ್ ಏತಮೇವ ಸೃಷ್ಟ್ಯಾದಿಕರ್ತೃತ್ವೇನ ಪ್ರಕೃತಂ ಪುರುಷಂ ಪುರಿಶಯಾನಮ್ ಆತ್ಮಾನಂ ಬ್ರಹ್ಮ ಬೃಹತ್ ತತಮಂ ತಕಾರೇಣೈಕೇನ ಲುಪ್ತೇನ ತತತಮಂ ವ್ಯಾಪ್ತತಮಂ ಪರಿಪೂರ್ಣಮ್ ಆಕಾಶವತ್ ಅಪಶ್ಯತ್ ಪ್ರತ್ಯಬುಧ್ಯತ । ಕಥಮ್? ಇದಂ ಬ್ರಹ್ಮ ಮಮ ಆತ್ಮನಃ ಸ್ವರೂಪಮ್ ಅದರ್ಶಂ ದೃಷ್ಟವಾನಸ್ಮಿ । ಅಹೋ ಇತಿ ವಿಚಾರಣಾರ್ಥಾ ಪ್ಲುತಿಃ ॥

(ಭಾಷ್ಯಾರ್ಥ)

ಅವನು ಹುಟ್ಟಿ ಎಂದರೆ ಜೀವರೂಪದಿಂದ ಶರೀರದಲ್ಲಿ ಹೊಕ್ಕು[2] ಭೂತಗಳನ್ನು[3] ವಿಂಗಡಿಸಿ ಹೇಳಿದನು. (ಆಯಾ ನಾಮರೂಪಗಳನ್ನು) ಬಿಡಿಸಿ ತಿಳಿಸಿದನು.[4] (ಇಲ್ಲಿ ಯಾವದು ಬೇರೆ ಎಂದು ಹೇಳಲಿ? ಎಂದು ಆಲೋಚಿಸಿಕೊಂಡನು.[5]) ಅವನು ಒಂದಾನೊಂದು ಕಾಲದಲ್ಲಿ ಪರಮಕಾರುಣಿಕನಾದ ಆಚಾರ್ಯನು ಆತ್ಮಜ್ಞಾನ

---

1. (ವೇ॥ ವಿ॥) ಪಾಠ.

2. ಆತ್ಮನಿಗೆ ಶರೀರವುಂಟಾಗುವದೇ ಹುಟ್ಟು. ಸೂ. ಭಾ. ೨-೩-೧೬.

3. ಪಂಚಭೂತಗಳಿಂದಾದ ದೇಹಗಳನ್ನು.

4. ಅಭಿವ್ಯೈಖ್ಯತ್ ಎಂಬುದು ಯಾವ ಧಾತುವಿನ ಯಾವ ರೂಪವೆಂಬುದು ಸಂಶಯಗ್ರಸ್ತವಾಗಿದೆ. ವ್ಯಾಕರೋತ್ ಎಂಬ ಭಾಷ್ಯಕ್ಕೆ ಎರಡು ಅರ್ಥಗಳನ್ನು ವ್ಯಾಖ್ಯಾನದಲ್ಲಿ ಕೊಟ್ಟಿದೆ; ಎರಡನೆಯದೇ ಸರಿ ಎಂದು ತೋರುತ್ತದೆ.

5. ಈ ಭಾಷ್ಯವಾಕ್ಯದ ಮೂಲವು ಬರೆದವರ ಕೈತಪ್ಪಿನಿಂದಲೋ ಏನೊ, ಏಕೋ ಬಿಟ್ಟುಹೋಗಿದೆ. "ವಾವದಿಷತ್" ಎಂಬ ಮಾತಿಗೆ ವ್ಯಾಖ್ಯಾನಕಾರರು ಕೊಟ್ಟಿರುವ ಎರಡು ಅರ್ಥಗಳಲ್ಲಿ 'ವದಿಷ್ಯಾಮಿ' (ಹೇಳುವೆನು) ಎಂಬ ಅರ್ಥವನ್ನೇ ನಾವು ಇಟ್ಟುಕೊಂಡಿರುತ್ತೇವೆ. ಆತ್ಮವಸ್ತುವಿಗಿಂತ ಬೇರೆ ಎಂದು ಯಾವದನ್ನೂ ಹೇಳುವಂತಿಲ್ಲ ಎಂಬ ಅರ್ಥವು ಇದರಿಂದ ದೊರಡುತ್ತದೆ. ಇದಕ್ಕೆ ಮುಂದಿನ ಭಾಷ್ಯವೂ ಹೊಂದಿಕೊಳ್ಳುತ್ತದೆ.

ವನ್ನುಂಟುಮಾಡುವಂಥ ಶಬ್ದವನ್ನು ಮಾಡುವ ವೇದಾಂತಮಹಾಭೇರಿಯನ್ನು[1] ಅವನ ಕಿವಿಯ ಬುಡದಲ್ಲಿ ಹೊಡೆಯಲಾಗಿ[2] ಈತನನ್ನೇ ಎಂದರೆ ಸೃಷ್ಟಿಯೇ ಮುಂತಾದದ್ದರ ಕರ್ತೃವೆಂದು ಪ್ರಕೃತನಾಗಿರುವ[3] ಪುರುಷನನ್ನೇ–ಪುರದಲ್ಲಿ ಮಲಗಿರುವ ಆತ್ಮನನ್ನೇ–ಬ್ರಹ್ಮವೆಂದು ಬಲುದೊಡ್ಡದೆಂದು ; 'ತತಮಮ್' ಎಂಬಲ್ಲಿ ಒಂದು ತಕಾರವು ಲೋಪವಾಗಿರುವದರಿಂದ ತತತಮಮ್ ಎಂದರೆ ಎಲ್ಲೆಲ್ಲಿಯೂ ವ್ಯಾಪಿಸಿರುವದೆಂದು, ಆಕಾಶದಂತೆ ಪರಿಪೂರ್ಣವಾಗಿರುವದೆಂದು ಕಂಡುಕೊಂಡನು, ಅರಿತುಕೊಂಡನು.[4] ಹೇಗೆ? ಎಂದರೆ, "ಈ ಬ್ರಹ್ಮವನ್ನು ನನ್ನ ಆತ್ಮಸ್ವರೂಪವನ್ನು ಕಂಡೆನು, ಕಂಡುಕೊಂಡಿರುತ್ತೇನೆ" (ಎಂದು). (ಇತೀ ೩ ಎಂಬಲ್ಲಿ) ಪ್ಲುತವು (ಬಂದಿರುವದು) ಆಹಾ ! ಎಂದು ವಿಚಾರಣಾರ್ಥವನ್ನು ತಿಳಿಸುವದಕ್ಕೆ.[5]

---

1. "ವೇದಾನ್ತಮಹಾವಾಕ್ಯಭೇರ್ಯಾವ್" ಎಂಬ ಪಾಠವನ್ನಿಟ್ಟುಕೊಂಡು ತತ್ತ್ವಮಸಿ ಮುಂತಾದ ಮಹಾವಾಕ್ಯಗಳೆಂಬ ಭೇರಿಯನ್ನು ಎಂದು ವ್ಯಾಖ್ಯಾನಕಾರರು ಅರ್ಥ ಮಾಡಿರುತ್ತಾರೆ. ಆದರೆ ಈ ವಾಕ್ಯಗಳನ್ನು 'ಮಹಾವಾಕ್ಯ'ಗಳೆಂದು ಕರೆದಿರುವದು ಪ್ರಸ್ಥಾನತ್ರಯಭಾಷ್ಯದಲ್ಲಿ ಮತ್ತೆಲ್ಲಿಯೂ ಕಂಡುಬರುವದಿಲ್ಲ "ಮಹಾಭೇರ್ಯಾವ್" ಎಂಬ ಪಾಠವು ಪ್ರಕೃತಕ್ಕೆ ಸಾಕೂ ಆಗಿದೆ.

2. ಸದ್ಗುರುವಿನ ವಚನದಿಂದಲೇ ಆತ್ಮಸಾಕ್ಷಾತ್ಕಾರವಾಗಿಬಿಡುತ್ತದೆ ; ಅದಕ್ಕಾಗಿ ಅಭ್ಯಾಸವೇ ಮುಂತಾದ ಬೇರೆಯ ಪ್ರಯತ್ನವು ಬೇಕಿಲ್ಲ ಎಂದು ಭಾವ. ಉಪದೇಶಸಾಹಸ್ರಿ ೧೮ನೆಯ ಪ್ರಕರಣವನ್ನು ನೋಡಿರಿ.

3. ಲೋಕಲೋಕಪಾಲಕರನ್ನು ಸೃಷ್ಟಿಸಿ, ದೇವತೆಗಳಿಗೆ ಹಸಿವುಬಾಯಾರಿಕೆಗಳನ್ನು ಗಂಟುಹಾಕಿ ಶರೀರದೊಳಗೆ ಹೊಕ್ಕಿರುವನೆಂದು ಈ ಪ್ರಕರಣದಲ್ಲಿ ಹೇಳಿರುವ.

4. "ಪ್ರತ್ಯಬುಧ್ಯತ ಅಪಶ್ಯತ್" ಎಂದೇ ಮುದ್ರಿತಪುಸ್ತಕಗಳಲ್ಲಿದೆ. ಆದರೆ 'ಅಪಶ್ಯತ್ ಪ್ರತ್ಯಬುಧ್ಯತ' ಎಂದೇ ಇರಬೇಕು ; ಏಕೆಂದರೆ ಮೊದಲನೆಯ ಮಾತು ಉಪನಿಷತ್ತಿನಲ್ಲಿದೆ, ಎರಡನೆಯದು ಅದರ ವ್ಯಾಖ್ಯಾನವಾಗಿದೆ.

5. "ವಿಚಾರ್ಯಮಾಣಾನಾವ್" (ಪಾ. ೮-೨-೯೭) ವಿಚಾರಮಾಡುವ ವಾಕ್ಯಗಳ ಕೊನೆಯ ಸ್ವರಕ್ಕೆ ಪ್ಲುತವಾಗುತ್ತದೆ. "ಪೂರ್ವಂ ಭಾಷಾಯಾಮ್ (ಪಾ. ೮-೨-೯೮) ಆದರೆ ಸಾಮಾನ್ಯಸಂಸ್ಕೃತಭಾಷೆಯಲ್ಲಿ ಮೊದಲನೆಯ ವಾಕ್ಯದ ಸ್ವರಕ್ಕೆ ಪ್ಲುತವು ಬರುತ್ತದೆ ಎಂದು ವ್ಯಾಕರಣಸೂತ್ರದಲ್ಲಿದೆ. ಮುದ್ರಿತಪುಸ್ತಕಗಳಲ್ಲಿರುವ "ಪ್ಲುತಿಃ ಪೂರ್ವಮ್" ಎಂಬ ಪಾಠದಲ್ಲಿ ಪೂರ್ವಮ್ ಎಂಬ ಮಾತು ಹೆಚ್ಚು ; (ವೇ॥ ವಿ॥) ಪಾಠದಲ್ಲಿ ಈ ಮಾತು ಇಲ್ಲ. ವಿಚಾರಪೂರ್ವಕವಾಗಿ "ಈ ಆತ್ಮನೇ ಬ್ರಹ್ಮವು" ಎಂದು ತಿಳಿದುಕೊಂಡನು ಎಂಬುದು ಭಾಷ್ಯದ ಅಭಿಪ್ರಾಯವೆಂತ ತೋರುತ್ತದೆ.

**ತಸ್ಮಾದಿದನ್ದ್ರೋ ನಾಮೇದನ್ದ್ರೋ ಹ ವೈ ನಾಮ**
**ತಮಿದನ್ದ್ರಂ ಸನ್ತಮಿನ್ದ್ರ ಇತ್ಯಾಚಕ್ಷತೇ ಪರೋಕ್ಷೇಣ ।**
**ಪರೋಕ್ಷಪ್ರಿಯಾ ಇವ ಹಿ ದೇವಾಃ ॥ ೧೪ ॥**

೧೪. ಆದ್ದರಿಂದ ಇದಂದ್ರನೆಂದು ಪ್ರಸಿದ್ಧನಾದನು. ಇದಂದ್ರನೆಂದಲ್ಲವೆ, ಪ್ರಸಿದ್ಧನು? ಇದಂದ್ರನಾದ ಆತನನ್ನು ಇಂದ್ರನೆಂದು ಪರೋಕ್ಷವಾಗಿ ಕರೆಯುತ್ತಾರೆ. ಏಕೆಂದರೆ ದೇವತೆಗಳು ಪರೋಕ್ಷಪ್ರಿಯರೇ, ದೇವತೆಗಳು ಪರೋಕ್ಷಪ್ರಿಯರೇ.

(ಭಾಷ್ಯ)

೫೮. ಯಸ್ಮಾತ್ "ಇದಮ್" ಇತ್ಯೇವಂ ಯತ್ ಸಾಕ್ಷಾದಪರೋಕ್ಷಾದ್ ಬ್ರಹ್ಮ ಸರ್ವಾನ್ತರಮ್ ಅಪಶ್ಯತ್ ಅಪರೋಕ್ಷೇಣ ತಸ್ಮಾತ್ ಇದಂ ಪಶ್ಯತಿ ಇತಿ ಇದನ್ದ್ರೋ ನಾಮ ಪರಮಾತ್ಮಾ । ಇದನ್ದ್ರೋ ಹ ವೈ ನಾಮ ಪ್ರಸಿದ್ಧೋ ಲೋಕೇ ಈಶ್ವರಃ । ತಮ್ ಏವಮ್ ಇದನ್ದ್ರಂ ಸನ್ತಮ್ ಇನ್ದ್ರಃ ಇತಿ ಪರೋಕ್ಷೇಣ ಪರೋಕ್ಷಾಭಿಧಾನೇವ ಆಚಕ್ಷತೇ ಬ್ರಹ್ಮವಿದಃ ಸಂವ್ಯವಹಾರಾರ್ಥಮ್ । ಪೂಜ್ಯತಮತ್ವಾತ್ ಪ್ರತ್ಯಕ್ಷನಾಮಗ್ರಹಣಭಯಾತ್ । ತಥಾ ಹಿ ಪರೋಕ್ಷಪ್ರಿಯಾಃ ಪರೋಕ್ಷನಾಮಗ್ರಹಣಪ್ರಿಯಾಃ ಇವ ಹಿ ಏವ ಹಿ ಯಸ್ಮಾತ್ ದೇವಾಃ । ಕಿಮುತ ಸರ್ವದೇವಾನಾಮಪಿ ದೇವೋ ಮಹೇಶ್ವರಃ । ದ್ವಿರ್ವಚನಂ ಪ್ರಕೃತಾಧ್ಯಾಯಪರಿಸಮಾಪ್ತ್ಯರ್ಥಮ್ ॥

(ಭಾಷ್ಯಾರ್ಥ)

ಹೀಗೆ "ಇದು" ಎಂದೀ ಪರಿಯಲ್ಲಿ ನೇರಾಗಿ ಅಪರೋಕ್ಷವಾಗಿ ಎಲ್ಲಕ್ಕೂ ಒಳಗಿರುವ[1] ಬ್ರಹ್ಮವನ್ನು ಅಪರೋಕ್ಷವಾಗಿ ಕಂಡುಕೊಂಡನಲ್ಲವೆ? ಆದ್ದರಿಂದ 'ಇದನ್ನು ಕಾಣುತ್ತಾನೆ' ಎಂಬ (ವ್ಯುತ್ಪತ್ತಿಯಿಂದ) ಪರಮಾತ್ಮನು ಇದಂದ್ರ ಎನಿಸಿಕೊಂಡನು. ಇದಂದ್ರನೆಂದಲ್ಲವೆ, ಲೋಕದಲ್ಲಿ[2] ಈಶ್ವರನು ಪ್ರಸಿದ್ಧನಾಗಿರುತ್ತಾನೆ? ಹೀಗೆ ಇದಂದ್ರನಾಗಿರುವ ಆತನನ್ನು ಬ್ರಹ್ಮಜ್ಞಾನಿಗಳು ಆತನು ಅತ್ಯಂತ ಪೂಜ್ಯನಾಗಿರುವದರಿಂದ[3] ಪ್ರತ್ಯಕ್ಷನಾಮವನ್ನು ಎತ್ತುವದಕ್ಕೆ ಅಂಜಿ ವ್ಯವಹಾರಕ್ಕಾಗಿ

---

1. ಬೃ. ೩-೪-೨ರ ಸೂಚನೆ.
2. ಬ್ರಹ್ಮಜ್ಞಾನಿಗಳಲ್ಲಿ ಎಂದರ್ಥ. ಸಾಮಾನ್ಯರಲ್ಲಿ ಈ ಪ್ರಸಿದ್ಧಿಯಿಲ್ಲ
3 ಪೂಜ್ಯರಾದವರನ್ನು 'ಶಾಸ್ತ್ರಿಗಳು', 'ದೀಕ್ಷಿತರು', 'ರಾಯರು', ಎಂದು ಮುಂತಾಗಿ ಕರೆಯುತ್ತಾರೆ; 'ರಾಮಶಾಸ್ತ್ರಿಗಳು', 'ಕೃಷ್ಣದೀಕ್ಷಿತರು', 'ಗೋವಿಂದರಾಯರು' ಎಂದು ಪ್ರತ್ಯಕ್ಷನಾಮಗಳಿಂದ ಕರೆಯುವದು ಧಾರ್ಷ್ಟ್ಯವೆಂದು ಜನರು ಬಗೆಯುತ್ತಾರೆ. ಅದರಂತೆಯೇ ಇಲ್ಲಿ 'ಇದಂದ್ರ' ಎಂಬ ಪ್ರತ್ಯಕ್ಷನಾಮವನ್ನು 'ಇಂದ್ರ' ಎಂಬ ಪರೋಕ್ಷನಾಮವಾಗಿ ಮಾರ್ಪಡಿಸಿಕೊಂಡು ವ್ಯವಹರಿಸುತ್ತಾರೆ ಎಂದರ್ಥ.

‘ ಇಂದ್ರ ’ನೆಂದು ಪರೋಕ್ಷವಾಗಿ ಪರೋಕ್ಷವಾದ ಹೆಸರಿನಿಂದ ಕರೆಯುತ್ತಾರೆ. ಇದೇ ಸರಿ. ಏಕೆಂದರೆ ದೇವತೆಗಳು ಪರೋಕ್ಷಪ್ರಿಯರೇ, ಪರೋಕ್ಷವಾಗಿ ನಾಮಗ್ರಹಣ ಮಾಡುವದನ್ನು ಮೆಚ್ಚುವವರೇ ಆಗಿರುತ್ತಾರೆ. ಇನ್ನು ಸರ್ವದೇವತೆಗಳಿಗೂ ದೇವನಾಗಿರುವ ಮಹೇಶ್ವರನು (ಪರೋಕ್ಷಪ್ರಿಯನೆಂದು) ಹೇಳತಕ್ಕದ್ದೇನಿದೆ? ಇಲ್ಲಿ “ ಪರೋಕ್ಷಪ್ರಿಯಾ ಇವ ಹಿ ದೇವಾಃ ” ಎಂದು ಎರಡು ಸಲ ಹೇಳಿರುವದು ಪ್ರಕೃತವಾದ (ಈ) ಅಧ್ಯಾಯವು ಮುಗಿಯಿತೆಂದು (ತಿಳಿಸುವದಕ್ಕೆ).



# ಒಂದನೆಯ ಅಧ್ಯಾಯದ ತಾತ್ಪರ್ಯ ವಿಷಯದ ಚರ್ಚೆ

## ಸೃಷ್ಟಿಪ್ರವೇಶಶ್ರುತಿಗೆ ಏಕಾತ್ಮಜ್ಞಾನದಲ್ಲಿ ತಾತ್ಪರ್ಯ

(ಭಾಷ್ಯ)

೫೯. ಅಸ್ಮಿನ್ ಚತುರ್ಥೇ ಅಧ್ಯಾಯೇ ಏಷ ವಾಕ್ಯಾರ್ಥಃ–ಜಗದುತ್ಪತ್ತಿಸ್ಥಿತಿಪ್ರಲಯಕೃತ್, ಅಸಂಸಾರೀ, ಸರ್ವಜ್ಞಃ, ಸರ್ವಶಕ್ತಿಃ, ಸರ್ವವಿತ್, ಸರ್ವಮಿದಮ್ ಜಗತ್ ಸ್ವತೋ ನ್ಯತ್ ವಸ್ತ್ವನ್ತರಮ್ ಅನುಪಾದಾಯ್ಯೈವ ಆಕಾಶಾದಿಕ್ರಮೇಣ ಸೃಷ್ಟ್ವಾ ಸ್ವಾತ್ಮಪ್ರಬೋಧಾರ್ಥಂ ಸರ್ವಾಣಿ ಚ ಪ್ರಾಣಾದಿಮಚ್ಛರೀರಾಣಿ ಸ್ವಯಂ ಪ್ರವಿವೇಶ। ಪ್ರವಿಶ್ಯ ಚ ಸ್ವಮ್ ಆತ್ಮಾನಂ ಯಥಾಭೂತಮ್ "ಇದಂ ಬ್ರಹ್ಮಾಸ್ಮಿ" ಇತಿ ಸಾಕ್ಷಾತ್ ಪ್ರತ್ಯಬುಧ್ಯತ । ತಸ್ಮಾತ್ ಸ ಏವ ಸರ್ವಶರೀರೇಷ್ವೇಕ ಏವಾತ್ಮಾ ನಾನ್ಯ ಇತಿ ಅನ್ಯೋಽಪಿ "ಸ ಮ ಆತ್ಮಾ"(ಐ.ಆ.೩-೨-೪), "ಬ್ರಹ್ಮಾಸ್ಮಿ" (ಬೃ. ೧-೪-೧೦) ಇತ್ಯೇವಂ ವಿದ್ಯಾತ್ ಇತಿ। "ಆತ್ಮಾ ವಾ ಇದಮೇಕ ಏವಾಗ್ರ ಆಸೀತ್" (೧-೧), "ಬ್ರಹ್ಮತತಮಮ್" (೧-೩) ಇತಿ ಚೋಕ್ತಮ್। ಅನ್ಯತ್ರ ಚ ||

(ಭಾಷ್ಯಾರ್ಥ)

ಈ ನಾಲ್ಕನೆಯ [1] ಅಧ್ಯಾಯದಲ್ಲಿ (ಒಟ್ಟು) ವಾಕ್ಯಾರ್ಥವಿದು: ಜಗತ್ತಿನ ಸೃಷ್ಟಿ, ಸ್ಥಿತಿ, ಪ್ರಲಯ—ಇವುಗಳನ್ನು ಮಾಡುವ, ಸಂಸಾರಿಯಲ್ಲದ [2], ಸರ್ವಜ್ಞನೂ ಸರ್ವಶಕ್ತಿಗಳುಳ್ಳವನೂ ಎಲ್ಲವನ್ನೂ ಅರಿಯುವಾತನೂ [3] ಆದ ಪರಮಾತ್ಮನು ಈ ಜಗತ್ತೆಲ್ಲವನ್ನೂ ತನಗಿಂತ ಬೇರೆಯಾದ ಮತ್ತೊಂದು ವಸ್ತುವನ್ನು ಉಪಾದಾನವಾಗಿ ತೆಗೆದುಕೊಳ್ಳದೆಯೇ ಆಕಾಶಾದಿಕ್ರಮದಿಂದ [4] ಸೃಷ್ಟಿಸಿ ತನ್ನ ಸ್ವರೂಪವನ್ನು ತಿಳಿಯು

---

1. ಉಪನಿಷತ್ತಿನ ಒಂದನೆಯ ಅಧ್ಯಾಯವು ಆರಣ್ಯಕಕ್ರಮದಿಂದ ನಾಲ್ಕನೆಯದು.

2 ವಿರಾಟ್ಪುರುಷನಿಗೆ ಹಸಿವುನೀರಡಿಕೆಗಳನ್ನು ಅಂಟಿಸಿದನು ಎಂದು ಹೇಳಿರುವುದರಿಂದ ಆತ್ಮನು ಸಂಸಾರದ ಸೋಂಕಿಲ್ಲದವನು ಎಂದಂತೆ ಆಯಿತು.

3. ಮುಂ. ೨-೨-೬.

4 ತೈ. ೨-೧ ರಲ್ಲಿ ಹೇಳಿರುವ ಕ್ರಮವನ್ನು ಇಲ್ಲಿಗೂ ಹೊಂದಿಸಿಕೊಳ್ಳಬೇಕು.

ವುದಕ್ಕೋಸ್ಕರ[1] ಪ್ರಾಣವೇ ಮುಂತಾದವುಗಳನ್ನುಳ್ಳ[2] (ಎಲ್ಲಾ) ಶರೀರಗಳನ್ನೂ ತಾನೇ ಹೊಕ್ಕನು. ಮತ್ತು ಹೊಕ್ಕ ಮೇಲೆ ಯಥಾರ್ಥವಾದ ತನ್ನ ಸ್ವರೂಪವನ್ನೇ ಈ ಬ್ರಹ್ಮವೇ ಆಗಿರುತ್ತೇನೆ" ಎಂದು ನೇರವಾಗಿ ತಿಳಿದುಕೊಂಡನು. ಆದ್ದರಿಂದ ಎಲ್ಲಾ ಶರೀರಗಳಲ್ಲಿಯೂ[3] ಆತನೊಬ್ಬನೇ ಆತ್ಮನೇ ಹೊರತು ಮತ್ತೊಬ್ಬನಿಲ್ಲವಾದ್ದ ರಿಂದ ಇನ್ನೊಬ್ಬರೂ "ಅವನು ನನ್ನ ಆತ್ಮನೇ'' (೩-೨-೪)[4], "(ನಾನು) ಬ್ರಹ್ಮ ವಾಗಿರುತ್ತೇನೆ'' (ಬೃ. ೧-೪-೧೦) ಎಂದು ತಿಳಿಯಬೇಕು. "ಇದು ಮೊದಲು ಆತ್ಮನೊಬ್ಬನೇ ಆಗಿತ್ತು"(೧-೧),"ಬ್ರಹ್ಮವನ್ನು ಎಲ್ಲೆಲ್ಲಿಯೂ ಹಬ್ಬಿಕೊಂಡಿರುವದಾಗಿ (ಕಂಡುಕೊಂಡನು)'' (೧-೩) ಎಂದೂ (ಹಿಂದೆ) ಹೇಳಿರುತ್ತದೆ.[5] ಬೇರೆಯ ಕಡೆಯಲ್ಲಿಯೂ (ಹೀಗೆಯೇ ಹೇಳಿರುತ್ತದೆ).

## ಪ್ರವೇಶಶ್ರುತಿಯು ಅರ್ಥವಾದವು

(ಭಾಷ್ಯ)

೬೦. ಸರ್ವಗತಸ್ಯ ಸರ್ವಾತ್ಮನೋ ವಾಲಾಗ್ರಮಾತ್ರಮಪಿ ಅಪ್ರವಿಷ್ಟಂ ನಾಸ್ತಿ ಇತಿ ಕಥಂ ಸೀಮಾನಂ ವಿದಾರ್ಯ ಪ್ರಾಪದ್ಯತ ಪಿಪಿಲಿಕೇವ ಸುಷಿರಮ್? ನನು ಅತ್ಯಲ್ಪಮಿದಂ ಚೋದ್ಯಮ್ । ಬಹು ಚಾತ್ರ ಚೋದಯಿತವ್ಯಮ್ । ಅಕರಣಃ ಸನ್ ಈಕ್ಷತ, ಅನುಪಾದಾಯ ಕಿಂಚಿತ್ ಲೋಕಾನ್ ಅಸೃಜತ, ಅದ್ಭ್ಯಃ ಪುರುಷಂ ಸಮು ದ್ಧೃತ್ಯ ಅಮೂರ್ಛಯತ್, ತಸ್ಯ ಅಭಿಧ್ಯಾನಾತ್ ಮುಖಾದಿ ನಿರ್ಭಿನ್ನಮ್ ಮುಖಾದಿ

---

1. '' ಸ್ವಾತ್ಮಪ್ರಬೋಧನಾರ್ಥಮ್ '' (ತನ್ನ ಸ್ವರೂಪವನ್ನು ತಿಳಿಯಿಸುವದಕ್ಕೋಸ್ಕರ) ಎಂಬ ಪಾಠಕ್ಕಿಂತ ಈಗ ನಾವು ಒಪ್ಪಿರುವ ಪಾಠವೇ ಮೇಲು. ಏಕೆಂದರೆ ಪರಮಾತ್ಮನು ಅಜ್ಞಾನದಿಂದ ಜೀವನಾಗಿ ಕಾಣುತ್ತಿದ್ದು ಜ್ಞಾನದಿಂದ ತನ್ನ ಸ್ವರೂಪವನ್ನು ತಿಳಿದುಕೊಳ್ಳುತ್ತಾ ನೆಂಬ ಅರ್ಥವು ಇಲ್ಲಿ ವಿವಕ್ಷಿತವಾಗಿದೆ.

2. ಪ್ರಾಣಕರಣಗಳಿಂದೊಡಗೂಡಿದ.

3. ಇಂಥದ್ದೊಂದು ಶರೀರವನ್ನು ಹೊಕ್ಕನು ಎಂದು ಶ್ರುತಿಯಲ್ಲಿ ಹೇಳಿಲ್ಲವಾದ್ದರಿಂದ ಎಲ್ಲಾ ಶರೀರಗಳಲ್ಲಿಯೂ ಹೊಕ್ಕಿರುತ್ತಾನೆಂದು ತಿಳಿಯಬೇಕು.

4. '' ಸ ಮ ಆತ್ಮೇತಿ ವಿದ್ಯಾತ್ '' ಎಂಬ (೩-೨-೪) ಸಂಹಿತೋಪನಿಷತ್ತಿನ ವಾಕ್ಯದ ಅರ್ಥವಿದು. ಇದರ ಅರ್ಥವನ್ನು ಮುಂದೆ ವಿವರಿಸಲಾಗುವುದು. ' ಸಮಃ '' ಎಂದರೆ ಎಲ್ಲಾ ಭೂತಗಳಲ್ಲಿಯೂ ಒಬ್ಬನೇ ಎಂದು ವ್ಯಾಖ್ಯಾನದಲ್ಲಿ ಕೊಟ್ಟಿರುವ ಅರ್ಥವು ಅಪ್ರಕೃತ.

5. ಉಪಕ್ರಮೋಪಸಂಹಾರಗಳಿಂದ ಆತ್ಮೈಕತ್ವವೇ ವಿವಕ್ಷಿತವೆಂದು ನಿರ್ಣಯ ವಾಗಿದೆ.

ಭ್ಯಶ್ಚ ಅಗ್ನ್ಯಾದಯೋ ಲೋಕಪಾಲಾಃ । ತೇಷಾಂ ಚ ಅಶನಾಯಾಪಿಪಾಸಾದಿಸಂಯೋಜನಮ್, ತದಾಯತನಪ್ರಾರ್ಥನಮ್, ತದರ್ಥಂ ಗವಾದಿಪ್ರದರ್ಶನಮ್, ತೇಷಾಂ ಯಥಾಯತನಪ್ರವೇಶನಮ್, ಸೃಷ್ಟಸ್ಯ ಅನ್ನಸ್ಯ ಪಲಾಯನಮ್, ವಾಗಾದಿಭಿಸ್ತಜ್ಜಿಘೃಕ್ಷಾ-ಇತ್ಯೇತತ್ ಸರ್ವಂ ಸೀಮಾವಿದಾರಣಪ್ರವೇಶಸಮಮೇವ ॥

(ಭಾಷ್ಯಾರ್ಥ)

(ಆಕ್ಷೇಪ) :—ಸರ್ವಗತನೂ ಸರ್ವಾತ್ಮನೂ ಆಗಿರುವ (ಪರಮಾತ್ಮನು) ಪ್ರವೇಶಮಾಡದೆ ಇರುವ (ಸ್ಥಲವು) ಕೂದಲೆಳೆಯ ತುದಿಯಷ್ಟೂ ಇಲ್ಲದಿರಲಾಗಿ ಇರುವೆಯು ರಂಧ್ರವನ್ನು (ಕೊರೆದುಕೊಂಡು ಹೋಗು)ವಂತೆ ಬೈತಲೆಯನ್ನು ಸೀಳಿಕೊಂಡು ಒಳಹೊಕ್ಕನು ಎಂದದ್ದು (೧-೩) ಹೇಗೆ (ಸರಿ) ?

(ಪರಿಹಾರ) :—ಈ ಆಕ್ಷೇಪವು ಅತ್ಯಲ್ಪವಾದದ್ದು. ಇಲ್ಲಿ (ಇನ್ನೂ) ಬಹಳವಾಗಿ ಆಕ್ಷೇಪಗಳನ್ನು ಮಾಡಬಹುದಾಗಿರುತ್ತದೆ. ಕರಣವಿಲ್ಲದೆ (ಆಲೋಚನೆ ಮಾಡಿ) ನೋಡಿದನು ; ಯಾವದೊಂದನ್ನೂ ಉಪಾದಾನವಾಗಿಟ್ಟುಕೊಳ್ಳದೆ ಲೋಕಗಳನ್ನು ಸೃಷ್ಟಿಸಿದನು ; ಅಪ್ಪಿನಿಂದ ಪುರುಷನನ್ನು ಎತ್ತಿ ರೂಪುಗೊಳಿಸಿದನು ; ಆ (ಪುರುಷನ) ಧ್ಯಾನವನ್ನು ಮಾಡಿದ್ದರಿಂದ ಮುಖವೇ ಮುಂತಾದದ್ದು ಒಡೆದು ತೋರಿಕೊಂಡಿತು ; ಮುಖವೇ ಮುಂತಾದವುಗಳಿಂದ ಅಗ್ನಿಯೇ ಮೊದಲಾದ ಲೋಕಪಾಲಕರೂ (ಉಂಟಾದರು). ಮತ್ತು ಆ (ದೇವತೆಗಳಿಗೆ) ಹಸಿವುಬಾಯಾರಿಕೆಗಳನ್ನು ಜೋಡಿಸಿದ್ದು, ಅವರು (ಇರುವದಕ್ಕೆ) ಸ್ಥಲವನ್ನು ಕೇಳಿಕೊಂಡದ್ದು, ಅವರಿಗಾಗಿ ಗೋವು ಮುಂತಾದವುಗಳನ್ನು ತೋರಿಸಿದ್ದು, ಅವರು ತಮ್ಮ ತಮ್ಮ ಸ್ಥಾನಗಳನ್ನು ಸೇರಿಕೊಂಡದ್ದು, ಸೃಷ್ಟಿಸಿದ ಅನ್ನವು ಓಡಿದ್ದು, ವಾಕ್ಕೇ ಮುಂತಾದವುಗಳಿಂದ ಅದನ್ನು ಹಿಡಿದುಕೊಳ್ಳಲೆಳಸಿದ್ದು-ಇದೆಲ್ಲವೂ ಬೈತಲೆಯನ್ನು ಸೀಳಿಕೊಂಡು ಒಳಹೊಕ್ಕದ್ದಕ್ಕೆ ಸಮವಾಗಿಯೇ ಇರುತ್ತದೆ.

(ಭಾಷ್ಯ)

೬೧. ಅಸ್ತು ತರ್ಹಿ ಸರ್ವಮೇವೇದಮ್ ಅನುಪಪನ್ನಮ್ । ನ । ಅತ್ರ ಆತ್ಮಾವಬೋಧಾರ್ಥಮಾತ್ರಸ್ಯ ವಿವಕ್ಷಿತತ್ವಾತ್ ಸರ್ವೋಽಯಮ್ ಅರ್ಥವಾದಃ ಇತ್ಯದೋಷಃ । ಮಾಯಾವಿವದ್ವಾ ಮಹಾಮಾಯಾವೀ ದೇವಃ ಸರ್ವಜ್ಞಃ ಸರ್ವಶಕ್ತಿಃ ಸರ್ವಮೇತತ್ ಚಕಾರ । ಸುಖಾವಬೋಧಪ್ರತಿಪತ್ತ್ಯರ್ಥಂ ಲೋಕವದಾಖ್ಯಾಯಿಕಾಪ್ರಪಞ್ಚಃ ಇತಿ ಯುಕ್ತತರಃ ಪಕ್ಷಃ । ನ ಹಿ ಸೃಷ್ಟ್ಯಾಖ್ಯಾಯಿಕಾದಿಪರಿ

ಜ್ಞಾನಾತ್ ಕಿಂಚಿತ್ ಫಲಮ್ ಇಷ್ಯತೇ । ಐಕಾತ್ಮ್ಯಸ್ವರೂಪಪರಿಜ್ಞಾನಾತ್ ತು ಅಮೃತತ್ವಂ ಫಲಂ ಸರ್ವೋಪನಿಷತ್ಪ್ರಸಿದ್ಧಮ್ । ಸ್ಮೃತಿಷು ಚ ಗೀತಾದ್ಯಾಸು 'ಸಮಂ ಸರ್ವೇಷು ಭೂತೇಷು ತಿಷ್ಠನ್ತಂ ಪರಮೇಶ್ವರಮ್" (ಗೀ. ೧೩-೨೭) ಇತ್ಯಾದಿ ॥

(ಭಾಷ್ಯಾರ್ಥ)

(ಆಕ್ಷೇಪ):—ಹಾಗಾದರೆ ಇದೆಲ್ಲವೂ ಹೊಂದುವದಿಲ್ಲವೆಂದೇ ಆಗಲಿ !

(ಪರಿಹಾರ):—ಹಾಗಲ್ಲ, ಏಕೆಂದರೆ ಇಲ್ಲಿ ಆತ್ಮಜ್ಞಾನವೊಂದನ್ನೇ ಹೇಳುವದು ಉದ್ದೇಶವಾಗಿರುತ್ತದೆ. ಆದ್ದರಿಂದ ಇದೆಲ್ಲವೂ **ಅರ್ಥವಾದವು.**[1] ಆದ್ದರಿಂದ (ಇಲ್ಲಿ) ಯಾವ ದೋಷವೂ ಇಲ್ಲ. ಅಥವಾ ಮಹಾಮಾಯಾವಿಯೂ ಸರ್ವಜ್ಞನೂ ಸರ್ವಶಕ್ತನೂ ಆದ ದೇವನು (ಲೌಕಿಕ) ಮಾಯಾವಿಯಂತೆ[2] ಇದೆಲ್ಲವನ್ನೂ ಮಾಡಿದನು. ಸುಖವಾಗಿ ಜ್ಞಾನವು ಪ್ರಾಪ್ತವಾಗಲೆಂದು ಸಾಮಾನ್ಯ ಜನರಂತೆ (ಶ್ರುತಿಯಲ್ಲಿ) ಕಥೆಯನ್ನು ವಿಸ್ತರಿಸಿರುತ್ತದೆ[3] ಎಂಬುದು ಇನ್ನೂ ಯುಕ್ತವಾದ[4]

---

1. "ಪ್ರಜಾಪತಿಯು ತನ್ನ ವಪೆಯನ್ನು ಕಿತ್ತು ಹೋಮವನ್ನು ಮಾಡಿದನು" ಎಂಬುದೇ ಮುಂತಾದ ವಾಕ್ಯಗಳು ವೇದದಲ್ಲಿ ವಿಧಿಸಿರುವ ಯಾಗವನ್ನು ಹೊಗಳುವಂತೆ ಇಲ್ಲಿಯೂ ಆತ್ಮಜ್ಞಾನವನ್ನು ಹೊಗಳುವದಕ್ಕೆ ಕಥೆ ಬಂದಿರುತ್ತದೆ; ಕಥೆಯಲ್ಲಿ ತಾತ್ಪರ್ಯವಿಲ್ಲದ್ದರಿಂದ ಅದು ಯುಕ್ತಿವಿರುದ್ಧವಾಗಿದ್ದರೂ ದೋಷವಿಲ್ಲ ಎಂದು ಭಾವ.

2. ಮಾಯೆಯಲ್ಲಿ ಯುಕ್ತಿವಿರುದ್ಧವಾದದ್ದೂ ತೋರಬಹುದು; ಆದ್ದರಿಂದ ಪರಮಾತ್ಮನು ನಿಜವಾಗಿಯೂ ಹೀಗೆ ಮಾಡಿದನು ಎಂದಾದರೂ ಇಟ್ಟುಕೊಳ್ಳಬಹುದು ಎಂದು ಭಾವ. ಮೊದಲು ಹೇಳಿದ್ದು **ಗುಣವಾದವು.** ಈಗ ಹೇಳಿರುವದು **ಭೂತಾರ್ಥವಾದವು** ಎಂದರೆ ನಿಜವಾಗಿ ನಡೆದ ಸೃಷ್ಟಿಯನ್ನೇ ಹೇಳಿ ಆತ್ಮೈಕ್ಯಜ್ಞಾನವನ್ನು ಹೊಗಳುವ ಅರ್ಥವಾದವು.

3. "ಆಖ್ಯಾಯಿಕಾದಿಪ್ರಪಞ್ಚಃ" ಎಂಬಲ್ಲಿ 'ಆದಿ' ಎಂಬ ಮಾತು ಹೆಚ್ಚೆಂದು ಅದನ್ನು ಬಿಟ್ಟುಬಿಟ್ಟಿದೆ. ವಿಷಯವು ಚೆನ್ನಾಗಿ ಮನದಟ್ಟಾಗಲೆಂದು ಕಥೆಯಮೂಲಕವಾಗಿ ಜನರು ಬೋಧಿಸುವದುಂಟು. ಅದರಂತೆ ಶ್ರುತಿಯೂ ಕಥೆಯನ್ನು ಹೇಳಿ ತತ್ತ್ವವನ್ನು ತಿಳಿಸಿರುತ್ತದೆ. 'ಸುಖಾವಬೋಧನ' ಎಂಬ ಪಾಠವನ್ನವಲಂಬಿಸಿ ಚೆನ್ನಾಗಿ ತಿಳಿದುಕೊಳ್ಳುವದಕ್ಕೂ ತಿಳಿಸುವದಕ್ಕೂ ಎಂಬ ಅರ್ಥವನ್ನು ವ್ಯಾಖ್ಯಾನಕಾರರು ತೆಗೆದಿರುತ್ತಾರೆ. ಸೃಷ್ಟಿಯ ಕಥೆಯಿಂದ ಜ್ಞಾನವನ್ನುಂಟುಮಾಡಿಕೊಡುವದೇ ಉದ್ದೇಶವಾಗಿರುವದರಿಂದ ಮಾಯಿಕವಾದ ಸೃಷ್ಟಿಯನ್ನು ಪ್ರಮಾಣವಾದ ಶ್ರುತಿಯು ಹೇಗೆ ಹೇಳೀತು ? ಎಂಬ ಆಕ್ಷೇಪವು ಸರಿಯಲ್ಲ.

4. ಸೃಷ್ಟಿಯು ಆಗಿಯೇ ಇಲ್ಲ ಎಂಬುದಕ್ಕಿಂತ ಅದು ಮಾಯಿಕ ಎಂಬುದೇ ಹೆಚ್ಚು ಯುಕ್ತ.

ಪಕ್ಷವು. ಏಕೆಂದರೆ ಸೃಷ್ಟಿಯ ಕಥೆಯೇ ಮುಂತಾದದ್ದರ ತಿಳಿವಳಿಕೆಯಿಂದ ಯಾವ ದಾದರೊಂದು ಫಲವಾಗುವದೆಂದು (ಶ್ರುತಿಗೆ) ಇಷ್ಟವಾಗಿರುವದಿಲ್ಲ. ಆದರೆ ಒಬ್ಬನೇ ಆತ್ಮನೆಂಬ ಸ್ವರೂಪಜ್ಞಾನದಿಂದ ಅಮೃತತ್ವವೇ ಫಲವೆಂಬುದು ಎಲ್ಲಾ ಉಪನಿಷತ್ತುಗಳಲ್ಲಿಯೂ ಪ್ರಸಿದ್ಧವಾಗಿರುತ್ತದೆ.[1] ಗೀತೆಯೇ ಮುಂತಾದ ಸ್ಮೃತಿಗಳಲ್ಲಿಯೂ "ಸರ್ವಭೂತಗಳಲ್ಲಿಯೂ ಇರುವ ಸಮನಾದ ಪರಮೇಶ್ವರನನ್ನು (ಕಾಣುವವನೇ ಸರಿಯಾಗಿ ತಿಳಿದವನು)" (ಗೀ. ೧೩-೨೭) ಎಂದು ಮುಂತಾಗಿ[2] (ಹೇಳಿರುವದು ಪ್ರಸಿದ್ಧವಾಗಿರುತ್ತದೆ).

## ಏಕಾತ್ಮಜ್ಞಾನವು ಪ್ರಮಾಣವಿರುದ್ಧವೆಂಬ ಆಕ್ಷೇಪ

(ಭಾಷ್ಯ)

೬೨. ನನು ತ್ರಯ ಆತ್ಮಾನಃ। ಭೋಕ್ತಾ ಕರ್ತಾ ಸಂಸಾರೀ ಜೀವ ಏಕಃ ಸರ್ವಲೋಕಶಾಸ್ತ್ರಪ್ರಸಿದ್ಧಃ। ಅನೇಕಪ್ರಾಣಿಕರ್ಮಫಲೋಪಭೋಗಯೋಗ್ಯಾನೇಕಾಧಿಷ್ಠಾನವಲ್ಲೋಕದೇಹನಿರ್ಮಾಣೇನ ಲಿಙ್ಗೇನ ಯಥಾಶಾಸ್ತ್ರಪ್ರದರ್ಶಿತೇನ ಪುರಪ್ರಾಸಾದಾದಿನಿರ್ಮಾಣಲಿಙ್ಗೇನ ತದ್ವಿಷಯಕೌಶಲಜ್ಞಾನವಾರ್ತತ್ಕರ್ತಾ ತಕ್ಷಾದಿರಿವೇಶ್ವರಃ ಸರ್ವಜ್ಞೋ ಜಗತಃ ಕರ್ತಾ ದ್ವಿತೀಯಶ್ಚೇತನ ಆತ್ಮಾ ಅವಗಮ್ಯತೇ। "ಯತೋ ವಾಚೋ ನಿವರ್ತನ್ತೇ" (ತೈ. ೨-೯), "ನೇತಿ ನೇತಿ" (ಬೃ. ೩-೯-೨೬) ಇತ್ಯಾದಿಶಾಸ್ತ್ರಪ್ರಸಿದ್ಧ ಔಪನಿಷದಃ ಪುರುಷಸ್ತೃತೀಯಃ। ಏವಮ್ ಏತೇ ತ್ರಯ ಆತ್ಮಾನೋಽನ್ಯೋನ್ಯವಿಲಕ್ಷಣಾಃ। ತತ್ರ ಕಥಮ್ ಏಕ ಏವಾತ್ಮಾ ಅದ್ವಿತೀಯಃ ಅಸಂಸಾರೀ ಇತಿ ಜ್ಞಾತುಂ ಶಕ್ಯತೇ?

(ಭಾಷ್ಯಾರ್ಥ)

(ಪೂರ್ವಪಕ್ಷಿ):—ಮೂವರಲ್ಲವೆ, ಆತ್ಮರು? ಭೋಕ್ತೃವೂ ಕರ್ತೃವೂ ಸಂಸಾರಿಯೂ ಆದ ಜೀವನು ಒಬ್ಬನು; ಅನೇಕ ಪ್ರಾಣಿಗಳ ಕರ್ಮಗಳ ಫಲವನ್ನು

---

1 ಶ್ರುತಿಯಲ್ಲಿ ಸೃಷ್ಟಿಯನ್ನೂ ಮತ್ತು ಕೆಲವು ಕಥೆಗಳನ್ನೂ ಹೇಳಿರುವದು ಆತ್ಮಜ್ಞಾನಕ್ಕಾಗಿಯೇ ಹೊರತು ಬೇರೊಂದು ಫಲಕ್ಕಲ್ಲ. ಸೂ. ಭಾ. ೧-೪-೧೪, ೪-೩-೧೪, ೩-೪-೨೪ ಇವನ್ನು ನೋಡಿರಿ.

2. "ಇತ್ಯಾದಿನಾ" ಎಂಬುದಕ್ಕಿಂತ "ಇತ್ಯಾದಿ" ಎಂಬ (ವೇ॥ ವಿ॥) ಪಾಠವು ಉತ್ತಮ. "ಇತ್ಯಾದಿಷು" ಎಂದಿದ್ದರೆ ಮತ್ತೂ ಚೆನ್ನಾಗಿ ಅನ್ವಯವಾಗುತ್ತಿತ್ತು. ಈ ಗೀತೆಯ ಶ್ಲೋಕದ ಮುಂದಿನ ಶ್ಲೋಕದಲ್ಲಿ ಜ್ಞಾನಿಗೆ ಪರಗತಿಯುಂಟಾಗುವದೆಂದು ಹೇಳಿದೆ. ಆದ್ದರಿಂದ ಜ್ಞಾನಕ್ಕೆ ಫಲವುಂಟೆಂದು ಶ್ರುತಿಸ್ಮೃತಿಸಿದ್ಧವಾಗಿದೆ. ಫಲವನ್ನು ಹೇಳುವ ಜ್ಞಾನವಾಕ್ಯಕ್ಕೆ ಫಲವಿಲ್ಲದ ಸೃಷ್ಟ್ಯಾದಿವಾಕ್ಯವು ಅಂಗವೆನ್ನುವದೇ ಯುಕ್ತ.

ಅನುಭವಿಸುವದಕ್ಕೆ ತಕ್ಕ ಸ್ಥಾನಗಳುಳ್ಳ ಲೋಕಗಳನ್ನೂ ದೇಹಗಳನ್ನೂ ನಿರ್ಮಾಣ ಮಾಡಿರುವನೆಂದು ಶಾಸ್ತ್ರದಲ್ಲಿ ತೋರಿಸಿರುವ ಹೆಗ್ಗುರುತಿನಿಂದ–ಕೋಟೆ, ಉಪ್ಪರಿಗೆಯ ಮನೆ–ಮುಂತಾದವುಗಳನ್ನು ನಿರ್ಮಿಸಿರುವನೆಂಬ ಹೆಗ್ಗುರುತಿನಿಂದ ಅದರ ವಿಷಯದ ಕೌಶಲವೂ ಜ್ಞಾನವೂ ಉಳ್ಳವನಾಗಿ ಅವನ್ನು ಮಾಡಿರುವ ಬಡಗಿಯೇ ಮೊದಲಾದವರನ್ನು (ಊಹಿಸು)ವಂತೆ ಸರ್ವಜ್ಞನೂ ಜಗತ್ತಿನ ಕರ್ತನೂ ಆದ ಈಶ್ವರನೆಂಬ ಎರಡನೆಯ ಚೇತನನಾದ ಆತ್ಮನನ್ನು ನಿಶ್ಚಯಿಸಬೇಕಾಗಿರುತ್ತದೆ.[2] "ಯಾವನಿಂದ ವಾಕ್ಕುಗಳು ಹಿಂತಿರುಗುವವೋ" (ತೈ. ೨-೯), "ಇದಲ್ಲ, ಇದಲ್ಲ" (ಬೃ. ೩-೯-೨೬) ಮುಂತಾದ ಶಾಸ್ತ್ರಪ್ರಸಿದ್ಧನಾದ **ಔಪನಿಷದ ಪುರುಷನು** ಮೂರನೆಯವನು. ಹೀಗೆ ಒಬ್ಬರಿಗಿಂತ ಒಬ್ಬರು ವಿಲಕ್ಷಣರಾಗಿರುವ[3] ಈ ಮೂವರು ಆತ್ಮರು (ಇರುತ್ತಾರೆ). ಹೀಗಿರುವಲ್ಲಿ ಆತ್ಮನು ಒಬ್ಬನೇ (ಅವನು) ತನಗೆರಡನೆಯದಿಲ್ಲದವನು, ಅಸಂಸಾರಿಯು ಎಂದು ತಿಳಿದುಕೊಳ್ಳುವದು ಹೇಗೆ ಆದೀತು?

## ಸಿದ್ಧಾಂತ: ಆತ್ಮನು ಪ್ರತ್ಯಕ್ಷಕ್ಕಾಗಲಿ ಅನುಮಾನಕ್ಕಾಗಲಿ ವಿಷಯನಲ್ಲ

(ಭಾಷ್ಯ)

೬೩. ತತ್ರ ಜೀವ ಏವ ತಾವತ್ ಕಥಂ ಜ್ಞಾಯತೇ? ನನ್ವೇವಂ ಜ್ಞಾಯತೇ ಶ್ರೋತಾ ಮನ್ತಾ ದ್ರಷ್ಟಾ ಆದೇಷ್ಟಾ ಆಘೋಷ್ಟಾ ವಿಜ್ಞಾತಾ ಪ್ರಜ್ಞಾತಾ ಇತಿ। ನನು ವಿಪ್ರತಿಷಿದ್ಧಂ ಜ್ಞಾಯತೇ ಯಃ ಶ್ರವಣಾದಿಕರ್ತೃತ್ವೇನ ಅಮತೋ ಮನ್ತಾ, ಅವಿಜ್ಞಾತೋ ವಿಜ್ಞಾತಾ, ಇತಿ ಚ। ತಥಾ "ನ ಮತೇರ್ಮನ್ತಾರಂ ಮನ್ವೀಥಾ ನ ವಿಜ್ಞಾತೇರ್ವಿಜ್ಞಾತಾರಂ ವಿಜಾನೀಯಾಃ" (ಬೃ. ೩-೪-೨)

---

1. ಹೊಗೆ ಎಂಬ ಹೆಗ್ಗುರುತಿನಿಂದ ಬೆಂಕಿಯನ್ನು ಊಹಿಸಿ ನಿಶ್ಚಯಿಸುವಂತೆ ಜಗತ್ತೆಂಬ ಗುರುತಿನಿಂದ ಈಶ್ವರನನ್ನು ಊಹಿಸಬೇಕು.

2. ಜೀವನು ಪ್ರತ್ಯಕ್ಷಗೋಚರನೆಂದೂ ಈಶ್ವರನು ಶಾಸ್ತ್ರೋಕ್ತವಾದ ಜಗತ್ಕಾರಣತ್ವಲಿಂಗದಿಂದ ಊಹಿಸುವ ಅನುಮಾನಕ್ಕೆ ವಿಷಯನೆಂದೂ ಪೂರ್ವಪಕ್ಷಿಯ ಭಾವ.

3. ಒಬ್ಬನೇ ಮೂರು ರೂಪದಲ್ಲಿರುವನೆಂದು ಸಿದ್ಧಾಂತಿಯು ಹೇಳಬಹುದು; ಆದರೆ ಅತ್ಯಂತ ವಿಲಕ್ಷಣವಾದ ಮೂರು ರೂಪಗಳು ಒಬ್ಬ ಆತ್ಮನಿಗೆ ಹೇಗೆ ಇದ್ದಾವು?–ಎಂದು ಪೂರ್ವಪಕ್ಷಿಯ ಆಕ್ಷೇಪ. ಜಗತ್ತಿನ ಸೃಷ್ಟಿ, ಸೃಷ್ಟಿಸಿದ ಶರೀರಗಳಲ್ಲಿ ಆತ್ಮನ ಪ್ರವೇಶ, ಆಮೇಲೆ ಬ್ರಹ್ಮದ ಸಾಕ್ಷಾತ್ಕಾರ-ಇವುಗಳನ್ನು ಹೇಳಿರುವದು ಆತ್ಮೈಕ್ಯಜ್ಞಾನಕ್ಕಾಗಿ ಎಂದು ಸಿದ್ಧಾಂತಿಯು ಹೇಳಿದ್ದಕ್ಕೆ ಪೂರ್ವಪಕ್ಷಿಯು ಪ್ರತ್ಯಕ್ಷ, ಅನುಮಾನ, ಶಾಸ್ತ್ರ—ಈ ಮೂರು ಪ್ರಮಾಣಗಳಿಗೂ ಆತ್ಮೈಕ್ಯವೆಂಬುದು ವಿರುದ್ಧವಾಗಿದೆ ಎಂಬ ಆಕ್ಷೇಪವನ್ನು ಒಡ್ಡಿರುತ್ತಾನೆ.

ಇತ್ಯಾದಿ ಚ । ಸತ್ಯಂ ವಿಪ್ರತಿಷಿದ್ಧಮ್ ಯದಿ ಪ್ರತ್ಯಕ್ಷೇಣ ಜ್ಞಾಯೇತ ಸುಖಾದಿವತ್ । ಪ್ರತ್ಯಕ್ಷಜ್ಞಾನಂ ಚ ನಿವಾರ್ಯತೇ "ನ ಮತೇರ್ಮನ್ತಾರಮ್ (ಬೃ. ೩-೪-೨) ಇತ್ಯಾದಿನಾ । ಜ್ಞಾಯತೇ ತು ಶ್ರವಣಾದಿಲಿಙ್ಗೇನ । ತತ್ರ ಕುತೋ ವಿಪ್ರತಿಷೇಧಃ ? ನನು ಶ್ರವಣಾದಿಲಿಙ್ಗೇನಾಪಿ ಕಥಂ ಜ್ಞಾಯತೇ ? ಯಾವತಾ ಯದಾ ಶೃಣೋತ್ಯಾತ್ಮಾ ಶ್ರೋತವ್ಯಂ ಶಬ್ದಮ್ ತದಾ ತಸ್ಯ ಶ್ರವಣಕ್ರಿಯಯೈವ ವರ್ತಮಾನತ್ವಾತ್ ಮನನವಿಜ್ಞಾನಕ್ರಿಯೇ ನ ಸಮ್ಭವತ ಆತ್ಮನಿ ಪರತ್ರ ವಾ ! ತಥಾ ಅನ್ಯತ್ರಾಪಿ ಮನನಾದಿಕ್ರಿಯಾಸು । ಶ್ರವಣಾದಿಕ್ರಿಯಾಶ್ಚ ಸ್ವವಿಷಯೇಷ್ವೇವ । ನ ಹಿ ಮನ್ತವ್ಯಾದನ್ಯತ್ರ ಮನ್ತುರ್ಮನನಕ್ರಿಯಾ ಸಂಭವತಿ ॥

(ಭಾಷ್ಯಾರ್ಥ)

(ಸಿದ್ಧಾಂತಿ) :—ಇವರಲ್ಲಿ ಮೊದಲು ಜೀವನನ್ನು ತಿಳಿದುಕೊಳ್ಳುವದು(ತಾನೆ) ಹೇಗೆ ?[1]

(ಪೂರ್ವಪಕ್ಷಿ) ;—ಕೇಳುವವನು, ಯೋಚಿಸುವವನು, ನೋಡುವವನು, ಹೇಳುವವನು, ಕೂಗುವವನು, ನಿಶ್ಚಯಿಸುವವನು, ಅರಿತುಕೊಳ್ಳುವವನು—ಎಂದೀ ಪರಿಯಲ್ಲಿ ತಿಳಿದುಕೊಳ್ಳಬಹುದಲ್ಲ ![2]

(ಸಿದ್ಧಾಂತಿ) :—ಯಾವನು ಶ್ರವಣಾದಿಗಳ ಕರ್ತೃವೆಂದು ತಿಳಿಯಲ್ಪಡುತ್ತಾನೋ (ಅವನು) " ಮನನಮಾಡಲ್ಪಡದಿರುವ ಮಂತೃ ನಿಶ್ಚಯಿಸಲ್ಪಡದಿರುವ ವಿಜ್ಞಾತೃ"[3] ಎಂಬುದು ವಿರುದ್ಧವಲ್ಲವೆ? ಇದರಂತೆ "ಮತಿಯು ಮಂತೃವನ್ನು ಮನನಮಾಡಲಾರೆ, ವಿಜ್ಞಾನದ ವಿಜ್ಞಾತೃವನ್ನು ನಿಶ್ಚಯಿಸಲಾರೆ" ಎಂಬ (ಬೃ. ೩-೪-೨) ಶ್ರುತಿಯೂ ಇದೆಯಲ್ಲ ![4]

1 ಜೀವಾತ್ಮನೇ ಮೊದಲು ಯಾವ ಪ್ರಮಾಣಕ್ಕೂ ಗೋಚರನಲ್ಲ; ಮೂವರು ಆತ್ಮರು ಎಂಬುದನ್ನು ಹೇಗೆ ನಿಶ್ಚಯಿಸುವದು ?-ಎಂದು ಸಿದ್ಧಾಂತಿಯ ಶಂಕೆ.

2. "ಶ್ರೋತಾ ಮನ್ತಾ ದ್ರಷ್ಟಾಽದೇಷ್ಟಾ ಘೋಷ್ಟಾ ವಿಜ್ಞಾತಾ ಪ್ರಜ್ಞಾತಾ ಸರ್ವೇಷಾಂ ಭೂತಾನಾಮನ್ತರಪುರುಷಃ ಸ ಮ ಆತ್ಮೇತಿ ವಿದ್ಯಾತ್" ಎಂದು (ಐ ಆ ೩-೨-೪) ಶ್ರುತಿಯಲ್ಲಿ ಹೇಳಿರುವದು ಪ್ರತ್ಯಕ್ಷವಾಗಿ ತಿಳಿಯಬರುವ ಜೀವನ ವಿಷಯವೆಂದು ಪೂರ್ವಪಕ್ಷಿಯ ಭಾವ.

3. "ಸ ಯೋಽತೋಽಶ್ರುತೋಽಗತೋಽಮತೋಽನತೋಽದೃಷ್ಟೋಽವಿಜ್ಞಾತೋಽನಾದಿಷ್ಟಃ" ಎಂಬ ಐ. ಆ. (೩-೨-೪)ರ ಸೂಚನೆ.

4. ಜೀವಾತ್ಮನನ್ನು ಅರಿಯಬಹುದೆಂಬುದು "ಅಶ್ರುತೋಽಮತೋ" ಮುಂತಾದ ಐತರೇಯಶ್ರುತಿಗೂ "ನ ಮತೇಃ" ಮುಂತಾದ ಬೃಹದಾರಣ್ಯಕಶ್ರುತಿಗೂ ವಿರುದ್ಧ. ಹೀಗಿರುವಲ್ಲಿ ಜೀವನನ್ನು ಅರಿಯುತ್ತೇವೆ ಎನ್ನುವದು ಸರಿಯಲ್ಲವೆಂದು ಭಾವ.

(ಪೂರ್ವಪಕ್ಷಿ) :—ನಿಜ. ಸುಖಾದಿಗಳನ್ನು ಅರಿಯುವಂತೆ [1] ಪ್ರತ್ಯಕ್ಷವಾಗಿ (ಆತ್ಮನು) ಅರಿಯಲ್ಪಡುವ(ನೆಂ)ದಾಗಿದ್ದರೆ (ಶ್ರುತಿಗೆ) ವಿರುದ್ಧವಾಗುತ್ತಿತ್ತು. "ಮತಿಯ ಮಂತೃವನ್ನು" ಎಂಬ (ಬೃಹದಾರಣ್ಯಕಶ್ರುತಿಯಲ್ಲಿ) ಪ್ರತ್ಯಕ್ಷಜ್ಞಾನವನ್ನೇ ನಿಷೇಧಿಸಿರುತ್ತದೆ. (ಜೀವನಾ)ದರೋ ಶ್ರವಣಾದಿಲಿಂಗಗಳಿಂದ [2] ಅರಿಯಲ್ಪಡುತ್ತಾನೆ. ಇಲ್ಲಿ ವಿರೋಧವೆಲ್ಲಿಂದ ಬಂತು ?

(ಸಿದ್ಧಾಂತಿ) :—ಶ್ರವಣವೇ ಮುಂತಾದ ಲಿಂಗಗಳಿಂದಲಾದರೂ ಹೇಗೆ ಅರಿಯಲ್ಪಡುತ್ತಾನೆ ? (ಅರಿಯುವದಕ್ಕೆ ಆಗುವದಿಲ್ಲ). ಏಕೆಂದರೆ ಯಾವಾಗ ಆತ್ಮನು ಕೇಳಬೇಕಾದ ಶಬ್ದವನ್ನು ಕೇಳುತ್ತಿರುವನೋ ಆಗ ಅವನು ಶ್ರವಣಕ್ರಿಯೆಯೊಂದಿಗೇ ಇರುತ್ತಿರುವದರಿಂದ ಅವನಿಗೆ ತನ್ನ ವಿಷಯದಲ್ಲಾಗಲಿ ಮತ್ತೊಬ್ಬನ ವಿಷಯದಲ್ಲಾಗಲಿ ಮನನ, ವಿಜ್ಞಾನ ಎಂಬ ಕ್ರಿಯೆಗಳು [3] ಆಗುವಹಾಗಿಲ್ಲ. ಮನನವೇ ಮುಂತಾದ ಬೇರೆಯ ಕ್ರಿಯೆಗಳ ವಿಷಯದಲ್ಲಿಯೂ ಹೀಗೆಯೇ.[4] ಇಲ್ಲಿ ಶ್ರವಣವೇ ಮುಂತಾದ ಕ್ರಿಯೆಗಳು (ತಮ್ಮ) ತಮ್ಮ ವಿಷಯಗಳಲ್ಲಿಯೇ [5] (ಆಗು

1. ತಾರ್ಕಿಕರ ಮತದಲ್ಲಿ ಸುಖವೇ ಮುಂತಾದವು ಮಾನಸಪ್ರತ್ಯಕ್ಷಕ್ಕೆ ವಿಷಯವಾಗಿವೆ. ಹಾಗೆ ಆತ್ಮನು ಪ್ರತ್ಯಕ್ಷಗಮ್ಯನೆಂದು ನಾವು ಹೇಳುವದಿಲ್ಲ ಎಂದು ಪೂರ್ವಪಕ್ಷಿಯ ಅಭಿಪ್ರಾಯ.

2. ಯಾವನು ಕೇಳುತ್ತಾನೋ ಅವನು ಜೀವನು ಎಂದು ಕೇಳುವದೆಂಬ ಲಿಂಗದಿಂದ ಆತ್ಮನನ್ನು ಅನುಮಾನಪ್ರಮಾಣದಿಂದ ಅರಿಯಬಹುದು ಎಂದಭಿಪ್ರಾಯ.

3. ಶ್ರವಣಕ್ರಿಯೆಯಿರುವವನಿಗೆ ಮನನಕ್ರಿಯೆಯೂ ಅದೇ ಕಾಲದಲ್ಲಿರಲಾರದು ಆದ್ದರಿಂದ "ನಾನು ಶ್ರವಣಮಾಡುತ್ತಿರುವದರಿಂದ ಶ್ರವಣಕರ್ತೃವಾದ ಆತ್ಮನು ಎಂಬ ಅನುಮಾನರೂಪವಾದ ಮನನವು ಆಗುವಹಾಗಿಲ್ಲ. ಶ್ರವಣಕ್ರಿಯೆಯಿರುವಾಗ ಮತ್ತೊಬ್ಬನ ವಿಷಯದ ಅನುಮಾನವು ಆಗಲಾರದು ಎಂಬುದಕ್ಕೂ ಇದೇ ಕಾರಣ. ಶ್ರವಣವಿರುವಾಗ ಮತ್ತೊಂದು ಕ್ರಿಯೆ ಇರುವದಿಲ್ಲವಾದ್ದರಿಂದ ಆತ್ಮನ ಅನುಮಾನಕ್ಕೆ ಅವಕಾಶವೆಲ್ಲಿ ?–ಎಂಬುವೇ ಇಲ್ಲಿ ಸಿದ್ಧಾಂತಿಯ ಅಭಿಪ್ರಾಯ. ಇಲ್ಲಿ ಮನನ, ವಿಜ್ಞಾನ ಎಂಬ ಶಬ್ದಗಳು ಅನುಮಾನವಾಚಕಗಳು ಎಂದು ವ್ಯಾಖ್ಯಾನವಲ್ಲಿದೆ ; ಅವಕ್ಕೆ ಭಾಷ್ಯದ ಬೆಂಬಲವಿರುವಂತೆ ತೋರುವದಿಲ್ಲ

4. ಮನನವನ್ನು ಮಾಡುತ್ತಿರುವಾಗ ಮತ್ತೊಬ್ಬನ ಶ್ರವಣದ ವಿಷಯದ ಅರಿವೇ ಆಗುವಹಾಗಿಲ್ಲ ; ತನ್ನ ಶ್ರವಣಕ್ರಿಯೆಯಂತೂ ಇರುವದೇ ಇಲ್ಲ.

5. ಶ್ರವಣವು ಶಬ್ದದ ವಿಷಯವಾಗಿ, ಶ್ರೋತೃವಿನ ವಿಷಯದಲ್ಲಲ್ಲ ; ಮನನವು ಮಂತವ್ಯದ ವಿಷಯವಾಗಿ, ಮಂತೃವಿನ ವಿಷಯದಲ್ಲಲ್ಲ. ವ್ಯಾಖ್ಯಾನಕಾರನು ಶ್ರವಣಾದಿಕಾಲಗಳಲ್ಲಿ ಅವುಗಳ ವಿಷಯಕ್ಕೆ ಮನನವು ಹೇಗೆ ಆಗಲಾರದೋ ಹಾಗೆಯೇ ಮನನಕಾಲಕ್ಕೆ ಅವರ ವಿಷಯದಲ್ಲಿ ಮತ್ತೊಂದು ಮನನವೂ ಆಗಲಾರದು ಎಂದು ವಿವರಿಸಿರುತ್ತಾನೆ. ಲಿಂಗವು ಕರಣವಲ್ಲ, ಲಿಂಗಜ್ಞಾನವೇ ಅನುಮಾನಕ್ಕೆ ಕರಣವು ಎಂಬ ಪೂರ್ವಪಕ್ಷವನ್ನು ತೆಗೆದು ಶ್ರವಣಾದಿ ಲಿಂಗಜ್ಞಾನವೂ ಆಯಾ ವೃತ್ತಿಸಂಬಂಧವಾದ ಸಾಕ್ಷಿಯೇ ಆದ್ದರಿಂದ ಅದರ ಸತ್ತೆಯೂ ಅನುಮಾನಕಾಲಕ್ಕೆ ಇರಬೇಕು ಎಂಬ ಸಮಾಧಾನವನ್ನು ಕೊಟ್ಟಿರುತ್ತಾನೆ. ಆದರೆ ಪೂರ್ವಪಕ್ಷಿಯು ಸಾಕ್ಷಿಯನ್ನು ಒಪ್ಪಿಲ್ಲ, ಒಪ್ಪಿದರೆ ಪ್ರಕೃತವಿವಾದವೇ ಹುಟ್ಟುವದಿಲ್ಲ. ಆದ್ದರಿಂದ ಈ ವ್ಯಾಖ್ಯಾನಕ್ಕೆ ಅವಕಾಶವಿಲ್ಲ.

ತ್ತವೆ). ಯಾವದನ್ನು ಮನನಮಾಡಬೇಕೋ ಅದನ್ನು ಬಿಟ್ಟು ಮನನಮಾಡು ವವನಿಗೆ ಬೇರೊಂದರ (ವಿಷಯ)ದಲ್ಲಿ ಮನನಕ್ರಿಯೆಯು ಆಗುವಹಾಗಿಲ್ಲವಷ್ಟೆ ?

(ಭಾಷ್ಯ)

೬೪. ನನು ಮನಸಃ ಸರ್ವಮೇವ ಮನ್ತವ್ಯಮ್ । ಸತ್ಯಮೇವಮ್ । ತಥಾಪಿ ಸರ್ವಮಪಿ ಮನ್ತವ್ಯಂ ಮನ್ತಾರಮನ್ತರೇಣ ನ ಮನ್ತುಂ ಶಕ್ಯಮ್ । ಯದ್ಯೇವಂ ಕಿಂ ಸ್ಯಾತ್ ? ಇದಮತ್ರ ಸ್ಯಾತ್ । ಸರ್ವಸ್ಯ ಯೋಽಯಂ ಮನ್ತಾ ಸ ಮನ್ತೈವ ಇತಿ ನ ಸ ಮನ್ತವ್ಯಃ ಸ್ಯಾತ್ । ನ ಚ ದ್ವಿತೀಯೋ ಮನ್ತುರ್ಮನ್ತಾ ಅಸ್ತಿ । ಯದಾ ಸ ಆತ್ಮನೈವ ಮನ್ತವ್ಯಃ, ತದಾ ಯೇನ ಚ ಮನ್ತವ್ಯ ಆತ್ಮಾ ಆತ್ಮನಾ, ಯಶ್ಚ ಮನ್ತವ್ಯ ಆತ್ಮಾ ತೌ ದ್ವೌ ಪ್ರಸಜ್ಯೇಯಾತಾಮ್ । ಏಕ ಏವ ವಾ ಆತ್ಮಾ ದ್ವಿಧಾ ಮನ್ತೃಮನ್ತವ್ಯತ್ವೇನ ದ್ವಿಶಕಲೀಭವೇತ್ ವಂಶಾದಿವತ್ । ಉಭಯಥಾಪಿ ಅನುಪಪತ್ತಿರೇವ । ಯಥಾ ಪ್ರದೀಪಯೋಃ ಪ್ರಕಾಶ್ಯಪ್ರಕಾಶಕತ್ವಾನುಪಪತ್ತಿಃ ಸಮತ್ವಾತ್, ತದ್ವತ್ । ನ ಚ ಮನ್ತುರ್ಮನ್ತವ್ಯೇ ಮನನವ್ಯಾಪಾರ ಶೂನ್ಯಃ ಕಾಲೋಽಸ್ತ್ಯಾತ್ಮಮನನಾಯ । ಯದಾಪಿ ಲಿಙ್ಗೇನ ಆತ್ಮಾನಂ ಮನುತೇ ಮನ್ತಾ ತದಾಪಿ ಪೂರ್ವವದೇವ ಲಿಙ್ಗೇನ ಮನ್ತವ್ಯ ಆತ್ಮಾ (ಯಃ) ಯಶ್ಚ ತಸ್ಯ ಮನ್ತಾ ತೌ ದ್ವೌ ಪ್ರಸಜ್ಯೇಯಾತಾಮ್ । ಏಕ ಏವ ವಾ ದ್ವಿಧಾ ಇತಿ ಪೂರ್ವೋಕ್ತೋ ದೋಷಃ ॥

(ಭಾಷ್ಯಾರ್ಥ)

(ಪೂರ್ವಪಕ್ಷಿ) :—ಮನಸ್ಸಿಗೆ ಎಲ್ಲವೂ ಮಂತವ್ಯವೇ ಅಲ್ಲವೆ ?

(ಸಿದ್ಧಾಂತಿ) :—ನಿಜ, ಹಾಗೆಯೇ ಸರಿ. ಆದರೂ ಯಾವ ಮಂತವ್ಯವನ್ನೇ ಆಗಲಿ ಮಂತೃವಿಲ್ಲದೆ ಮನನಮಾಡುವದಕ್ಕೆ ಆಗಲಾರದು.[1]

(ಪೂರ್ವಪಕ್ಷಿ) :—ಹಾಗೇ ಆದರೆ ಏನಾಗುವದು ?

(ಸಿದ್ಧಾಂತಿ) :—ಇಲ್ಲಿ ಇದಾಗುವದು ; ಎಲ್ಲವನ್ನೂ ಮನನಮಾಡುವವನಿದಾನಲ್ಲ, ಅವನು (ಬರಿಯ) ಮಂತೃವೇ ಆಗಿರುವದರಿಂದ ಮಂತವ್ಯನಾಗಲಾರನು.

---

1. ಆತ್ಮನು ಮನೋವ್ಯಾಪಾರಕ್ಕೆ ವಿಷಯನಾಗಲೇಬೇಕು, ಮನಸ್ಸಿಗೆ ವಿಷಯವಾಗದೆ ಇರುವ ವಸ್ತುವೇ ಇಲ್ಲ ಎಂಬುದು ಪೂರ್ವಪಕ್ಷಿಯ ಅಭಿಪ್ರಾಯ. ಮಾನಸಪ್ರತ್ಯಕ್ಷಕ್ಕಾಗಲಿ ಮನನಲಿಂಗದಿಂದಾಗುವ ಅನುಮಾನಕ್ಕಾಗಲಿ ಆತ್ಮನು ವಿಷಯನಲ್ಲ ಎಂಬುದು ಸಿದ್ಧಾಂತಿಯ ಅಭಿಪ್ರಾಯ. ಇದನ್ನು ಮುಂದೆ ವಿವರಿಸಲಾಗುವದು.

(ಅ) ಮಂತೃವನ್ನು ಮನನಮಾಡುವ ಮತ್ತೊಬ್ಬ ಮಂತೃವೂ ಇರುವದಿಲ್ಲ. ಯಾವ ಪಕ್ಷದಲ್ಲಿ ಅವನು ತಾನೇ ತನ್ನನ್ನು) ಮನನಮಾಡುವ(ನೆಂದು ಇಟ್ಟುಕೊಳ್ಳುವೆವೋ) ಆಗ ಯಾವ (ಆತ್ಮನು)[1] ಮಂತವ್ಯನಾಗಿರುವನೋ, ಅವರು ಇಬ್ಬರು (ಬೇರೆಬೇರೆ ಆತ್ಮರು) ಎಂದಾಗುವದು. ಅಥವಾ[2] ಒಬ್ಬನೇ ಆತ್ಮನು ಮಂತೃವೆಂದೂ ಮಂತವ್ಯನೆಂದೂ ಬಿದಿರು ಮುಂತಾದವುಗಳಂತೆ ಎರಡು ಸೀಳಾಗಬೇಕಾಗುವದು. (ಈ) ಎರಡು ಪಕ್ಷಗಳೂ ಹೊಂದುವದೇ ಇಲ್ಲ. ಹೇಗೆ ಎರಡು ದೀಪಗಳು (ಒಂದಕ್ಕೊಂದು) ಸಮವಾಗಿರುವದರಿಂದ (ಒಂದು) ಬೆಳಗುವದು, ಮತ್ತೊಂದು ಬೆಳಗಲ್ಪಡುವದು–ಎಂಬುದು ಹೊಂದಲಾರದೋ ಅದರಂತೆ(ಇದೂ ಹೊಂದುವದಿಲ್ಲ)[3]. ಮಂತೃವಾದವನು ತನ್ನನ್ನು ಮನನಮಾಡಿಕೊಳ್ಳುವದಕ್ಕೆ ಮಂತವ್ಯ (ವಿಷಯ)ವನ್ನು ಮನನಮಾಡದ್ದೆ ಇರುವ ಕಾಲವೇ (ಉಳಿ)ದಿರುವದಿಲ್ಲ. ಇನ್ನು ಯಾವ ಪಕ್ಷದಲ್ಲಿ ಮಂತೃವು ತನ್ನನ್ನು ಲಿಂಗದಿಂದ (ಊಹಿಸಿ) ಮನನಮಾಡುವನೆಂದು ಇಟ್ಟುಕೊಳ್ಳುವೆವೋ ಆಗಲೂ[4] ಹಿಂದೆ ಹೇಳಿದಂತೆಯೇ (ಯಾವ)[5] ಆತ್ಮನು ಲಿಂಗದಿಂದ ಮಂತವ್ಯನಾಗಿರುವನೋ ಮತ್ತು ಯಾವ (ಆತ್ಮನು) ಅವನನ್ನು ಮನನಮಾಡುವನೋ ಅವರು ಇಬ್ಬರು (ಬೇರೆಬೇರೆ) ಎಂದಾಗುವದು ; ಅಥವಾ ಒಬ್ಬನೇ ಎರಡು (ಸೀಳಾ)ಗುವನು ಎಂದು ಮೊದಲು ಹೇಳಿದ ದೋಷವು (ಬರುವದು).

## ಆತ್ಮನ ಶ್ರೋತೃತ್ವಾದಿಧರ್ಮಗಳ ವಿಷಯಕ್ಕೆ ಶಂಕೆ

(ಭಾಷ್ಯ)

೬೫. ನ ಪ್ರತ್ಯಕ್ಷೇಣ ನಾಪಿ ಅನುಮಾನೇನ ಜ್ಞಾಯತೇ ಚೇತ್ ಕಥಮ್ ಉಚ್ಯತೇ "ಸ ಮ ಆತ್ಮೇತಿ ವಿದ್ಯಾತ್" (ಐ. ಆ. ೩-೨-೪) ಇತಿ, ಕಥಂ ವಾ

---

1. ಈ ಮಾತು ಇಲ್ಲದಿದ್ದರೂ ಸಾಗುತ್ತದೆ.

2. "ವಾ" ಎಂಬ ಮಾತು ಕೆಲವು ಪುಸ್ತಕಗಳಲ್ಲಿಲ್ಲ ; ಆದರೆ ಅದು ಅವಶ್ಯವಾಗಿದೆ.

3. ಆತ್ಮನು ಆತ್ಮನನ್ನು ಅರಿಯುವನು ಎಂಬಲ್ಲಿ ದೀಪಗಳು ಒಂದನ್ನೊಂದು ಬೆಳಗುವವು ಎಂಬಂತೆ ವಿಷಯವಿಷಯಿಭಾವವನ್ನು ಕಲ್ಪಿಸುವದು ವ್ಯರ್ಥ, ದೃಷ್ಟವಿರುದ್ಧ. ದೀಪದೃಷ್ಟಾಂತವನ್ನು ಉಪ. ಸಾ. ಗದ್ಯ ೨ ನೆಯ ಪ್ರಕರಣದಲ್ಲಿ ನೋಡಿ.

4. ತನ್ನನ್ನು ತಾನೇ ವಿಷಯೀಕರಿಸುವದೆಂಬುದು ಅಸಾಧ್ಯ ; ಆದರೂ ಅದನ್ನೂ ಒಪ್ಪಿದರೂ.

5. ಮೂಲಭಾಷ್ಯದಲ್ಲಿ "ಯಃ" ಎಂಬ ಮಾತು ಬರೆದವರ ಕೈತಪ್ಪಿನಿಂದ ಬಿಟ್ಟು ಹೋಗಿದೆ.

"ಶ್ರೋತಾ ಮನ್ತಾ" (ಐ. ಆ. ೩-೨-೪) ಇತ್ಯಾದಿ? ನನು ಶ್ರೋತೃತ್ವಾದಿಧರ್ಮವಾ೯ ಆತ್ಮಾ ಅಶ್ರೋತೃತ್ವಾದಿ ಚ ಪ್ರಸಿದ್ಧಮ್ ಆತ್ಮನಃ। ಕಿಮತ್ರ ವಿಷಮಂ ಪಶ್ಯಸಿ? ಯದ್ಯಪಿ ತವ ನ ವಿಷಮಮ್, ತಥಾಪಿ ಮಮ ತು ವಿಷಮಂ ಪ್ರತಿಭಾತಿ। ಕಥಮ್? ಯದಾ ಅಸೌ ಶ್ರೋತಾ ತದಾ ನ ಮನ್ತಾ, ಯದಾ ಮನ್ತಾ ತದಾ ನ ಶ್ರೋತಾ। ತತ್ರ ಏವಂ ಪಕ್ಷೇ ಶ್ರೋತಾ ಮನ್ತಾ ಪಕ್ಷೇ ನ ಶ್ರೋತಾ ನಾಪಿ ಮನ್ತಾ। ತಥಾ ಅನ್ಯತ್ರಾಪಿ। ಯದ್ಯೇವಮ್ ತದಾ ಶ್ರೋತೃತ್ವಾದಿಧರ್ಮವಾ೯ ಆತ್ಮಾ ಅಶ್ರೋತೃತ್ವಾದಿಧರ್ಮವಾ೯ ವಾ ಇತಿ ಸಂಶಯಸ್ಥಾನೇ ಕಥಂ ತವ ನ ವೈಷಮ್ಯಮ್? ಯದಾ ದೇವದತ್ತೋ ಗಚ್ಛತಿ ತದಾ ನ ಸ್ಥಾತಾ, ಗನ್ತೈವ। ಯದಾ ತಿಷ್ಠತಿ ತದಾ ನ ಗನ್ತಾ ಸ್ಥಾತೈವ। ತದಾ ಅಸ್ಯ ಪಕ್ಷೇ ಏವ ಗನ್ತೃತ್ವಂ ಸ್ಥಾತೃತ್ವಂ ಚ, ನ ನಿತ್ಯಂ ಗನ್ತೃತ್ವಂ ಸ್ಥಾತೃತ್ವಂ ವಾ ತದ್ವತ್ ॥

(ಭಾಷ್ಯಾರ್ಥ)

(ಪೂರ್ವಪಕ್ಷಿ): —ಪ್ರತ್ಯಕ್ಷದಿಂದ (ಅರಿಯುವಂತಿಲ್ಲ), ಅನುಮಾನದಿಂದಲೂ ಅರಿಯುವಂತಿಲ್ಲ ಎಂದಾದರೆ "ಅವನು ನನ್ನ ಆತ್ಮನು ಎಂದು ತಿಳಿಯಬೇಕು" (ಐ. ಆ. ೩-೨-೪) ಎಂದು (ಶ್ರುತಿಯಲ್ಲಿರುವದು) ಹೇಗೆ ಸರಿ? (ಅವನು) "ಶ್ರೋತೃ, ಮಂತೃ" (ಐ. ಆ. ೩-೨-೪) ಎಂದು ಮುಂತಾಗಿ (ಹೇಳಿರುವ)ದಾದರೂ ಹೇಗೆ (ಸರಿ)?[1]

(ಸಿದ್ಧಾಂತಿ) :—ಆತ್ಮನು ಶ್ರೋತೃತ್ವವೇ ಮುಂತಾದ ಧರ್ಮಗಳುಳ್ಳವನು, ಅಶ್ರೋತೃತ್ವಾದಿಗಳೂ ಆತ್ಮನ (ಧರ್ಮಗಳೆಂದು) ಪ್ರಸಿದ್ಧವಾಗಿವೆ. ಇಲ್ಲಿ ನಿನಗೆ ಏನು ಹೆಚ್ಚುಕಡಿಮೆ ತೋರುತ್ತದೆ[2]?

(ಪೂರ್ವಪಕ್ಷಿ) : —ನಿನಗೇನೋ ಹೆಚ್ಚುಕಡಿಮೆಯಿಲ್ಲ(ದಿರಬಹುದು). ನನಗೆ ಮಾತ್ರ ಹೆಚ್ಚುಕಡಿಮೆಯಾಗಿಯೇ ತೋರುತ್ತದೆ. ಹೇಗೆಂದರೆ, ಈ (ಆತ್ಮನು) ಯಾವಾಗ ಶ್ರೋತೃವಾಗಿರುತ್ತಾನೋ ಆಗ ಮಂತೃ(ವಾಗಿರುವ)ದಿಲ್ಲ, ಯಾವಾಗ

---

1 ಅವಿಷಯನಾಗಿರುವ ಆತ್ಮನನ್ನು ನನ್ನ ಸ್ವರೂಪವು ಎಂದಾಗಲಿ, ಶ್ರೋತೃ, ಮಂತೃ—ಎಂದಾಗಲಿ ಅರಿಯುವದು ಹೇಗೆ ಆದೀತು? ಆಗದಿದ್ದರೆ ಈ ಎರಡು ಶ್ರುತಿವಾಕ್ಯಗಳಿಗೆ ಏನು ಗತಿ?—ಎಂದು ಆಕ್ಷೇಪ. ಇಲ್ಲಿ ವ್ಯಾಖ್ಯಾನಕಾರನು ಎರಡು ಪಾಠಗಳನ್ನು ಕಲ್ಪಿಸಿರುತ್ತಾನೆ; ಎರಡನೆಯ ಪಕ್ಷಕ್ಕೆ ಆಧಾರವಿಲ್ಲವೆಂದು ನಮಗೆ ತೋರುತ್ತದೆ.

2. ಶ್ರುತಿಪ್ರಮಾಣದಿಂದ ಎರಡೂ ಸರಿ ಎಂದು ಏತಕ್ಕೆ ಒಪ್ಪಬಾರದು? ಎಂದು ಪ್ರಶ್ನೆ.

ಮಂತೃವಾಗಿರುತ್ತಾನೋ ಆಗ ಶ್ರೋತೃವಾಗಿರುವದಿಲ್ಲ. ಹೀಗಿರುವದರಿಂದ (ಒಂದು) ಪಕ್ಷದಲ್ಲಿ (ಅವನು) ಶ್ರೋತೃವೆಂದೂ ಮಂತೃವೆಂದೂ (ಇನ್ನೊಂದು) ಪಕ್ಷದಲ್ಲಿ ಶ್ರೋತೃವೂ ಅಲ್ಲ, ಮಂತೃವೂ ಅಲ್ಲ ಎಂದೂ ಆಯಿತು. ಮಿಕ್ಕ (ಕ್ರಿಯೆಗಳ ವಿಷಯ)ದಲ್ಲಿಯೂ ಹೀಗೆಯೇ.[1] ಹೀಗಿರುವಲ್ಲಿ ಆತ್ಮನು ಶ್ರೋತೃತ್ವಾದಿಧರ್ಮಗಳುಳ್ಳವನೊ, ಅಶ್ರೋತೃತ್ವಾದಿಧರ್ಮಗಳುಳ್ಳವನೊ ?—ಎಂದು ಸಂಶಯಕ್ಕೆಡೆಯಿರುತ್ತದೆಯಾಗಿ ನಿನಗೆ ಹೆಚ್ಚುಕಡಿಮೆ ಏಕೆ ತೋರಲಿಲ್ಲ ?[2] ದೇವದತ್ತನು ಯಾವಾಗ ನಡೆಯುತ್ತಿರುವನೋ ಆಗ ಅವನು ನಿಂತಿರುವವನಲ್ಲ, ನಡೆಯುವವನೇ ; ಯಾವಾಗ ನಿಂತಿರುತ್ತಾನೋ ಆಗ ನಡೆಯುವವನಲ್ಲ, ನಿಂತಿರುವವನೇ. ಆಗ ಅವನಿಗೆ (ಒಂದೊಂದು) ಪಕ್ಷದಲ್ಲಿಯೇ ಗಂತೃತ್ವವೂ ಸ್ಥಾತೃತ್ವವೂ (ಇರುವವೇ ಹೊರತು) ನಿತ್ಯವಾಗಿ ಗಂತೃತ್ವವಾಗಲಿ ಸ್ಥಾತೃತ್ವವಾಗಲಿ ಇರುವದಿಲ್ಲ (ಅಲ್ಲವೆ) ? ಅದರಂತೆಯೇ ಇದು.

## ಆತ್ಮನಿಗೆ ಶ್ರೋತೃತ್ವಾದಿಗಳು ಆಗಾಗ್ಗೆ ಉಂಟಾಗುವ ಧರ್ಮಗಳಲ್ಲ

(ಭಾಷ್ಯ)

೬೬. ಅತ್ರ ಕಾಣಾದಾದಯಃ ಪಶ್ಯನ್ತಿ । ಪಕ್ಷಪ್ರಾಪ್ತೇನ್ನೈವ ಶ್ರೋತೃತ್ವಾದಿನಾ ಆತ್ಮಾ ಉಚ್ಯತೇ ಶ್ರೋತಾ ಮನ್ತಾ ಇತ್ಯಾದಿ । ಸಂಯೋಗಜತ್ವಮ್ ಅಯೌಗಪದ್ಯಂ ಚ ಜ್ಞಾನಸ್ಯ ಹಿ ಆಚಕ್ಷತೇ । ದರ್ಶಯನ್ತಿ ಚ "ಅನ್ಯತ್ರ ಮನಾ ಅಭೂವಂ ನಾದರ್ಶಮ್" (ಬೃ. ೧-೫-೩) ಇತ್ಯಾದಿ । "ಯುಗಪಜ್ಜ್ಞಾನಾನುತ್ಪತ್ತಿರ್ಮನಸೋ ಲಿಙ್ಗಮ್" (ನ್ಯಾ. ಸೂ. ೧:೧-೧೬) ಇತಿ ಚ ನ್ಯಾಯಮ್[3] ||

1. ಆ ಕ್ರಿಯೆಗಳು ಯಾವವೂ ಆತ್ಮನಲ್ಲಿ ನಿತ್ಯವಾಗಿರುವದಿಲ್ಲ.

2. ಆದ್ದರಿಂದ ಆತ್ಮನು ಶ್ರೋತೃವೆಂದಾದರೂ ನಿಶ್ಚಯವಾಗಬೇಕು. ಅಶ್ರೋತೃವೆಂದಾದರೂ ನಿಶ್ಚಯವಾಗಬೇಕು. ಶ್ರುತಿಯುಕೂಡ ವಿರುದ್ಧವಾಗಿರುವ ಎರಡೂ ಆತ್ಮನ ಧರ್ಮಗಳೆಂದು ಹೇಳಲಾರದು_ಎಂದು ಭಾವ.

3. ನ್ಯಾಯ್ಯಮ್ ಎಂಬ ಪಾಠಕ್ಕಿಂತ ನ್ಯಾಯಮ್ ಎಂಬುದೇ ಮೇಲು. ಏಕೆಂದರೆ ಇಲ್ಲಿ ಯುಕ್ತಿಯನ್ನೇ ಕಾಣಾದಾದಿಗಳು ತೋರಿಸುತ್ತಾರೆ ಎಂದಿದೆ. ಮನಸ್ಸೆಂಬುದು ಬೇರೆ ಇಲ್ಲದಿದ್ದರೆ ಇಂದ್ರಿಯಗಳಿಗೆ ವಿಷಯಸಂಯೋಗವಾದ ಮಾತ್ರದಿಂದ ಎಲ್ಲಾ ಜ್ಞಾನಗಳೂ ಒಟ್ಟಿಗೆ ಆಗಬಹುದಾಗಿತ್ತು. ಆದರೆ ಈಗ ಮನಸ್ಸಂಯೋಗವಾದ ಇಂದ್ರಿಯದ ಜ್ಞಾನವು ಮಾತ್ರ ಆಗುತ್ತದೆ_ಎಂಬುದು ಅವರ ಯುಕ್ತಿ.

(ಭಾಷ್ಯಾರ್ಥ)

ಈ ವಿಷಯದಲ್ಲಿ **ಕಾಣಾದರೇ** ಮುಂತಾದವರು[1] ಅಭಿಪ್ರಾಯಪಡುವದೇನೆಂದರೆ ಪಾಕ್ಷಿಕವಾಗಿ ಉಂಟಾಗುವ ಶ್ರೋತೃತ್ವವೇ ಮುಂತಾದದ್ದರಿಂದಲೇ ಆತ್ಮನು "ಶ್ರೋತೃ, ಮಂತೃ" ಎಂದು ಮುಂತಾಗಿ ಕರೆಯಿಸಿಕೊಳ್ಳುತ್ತಾನೆ. ಜ್ಞಾನವು ಸಂಯೋಗದಿಂದ ಉಂಟಾಗುವದೆಂದೂ[2] (ಅನೇಕ ಜ್ಞಾನಗಳು) ಒಟ್ಟಿಗೆ ಇರುವದಿಲ್ಲವೆಂದೂ[3] (ಅವರು) ಹೇಳುತ್ತಾರೆ. "ನನ್ನ ಮನಸ್ಸು ಬೇರೆಯ ಕಡೆಯಲ್ಲಿತ್ತು, (ಆದ್ದರಿಂದ) ನೋಡಲಿಲ್ಲ" (ಬೃ. ೧-೫-೩) ಮುಂತಾದ (ಶ್ರುತಿ)ಯನ್ನೂ "ಒಂದೇ ಸಲಕ್ಕೆ ಜ್ಞಾನಗಳು ಉಂಟಾಗದೆ ಇರುವದು ಮನಸ್ಸಿ(ದೆ ಎಂಬುದಕ್ಕೆ) ಗುರುತು" (ನ್ಯಾ. ಸೂ. ೧-೧-೧೬) ಎಂಬ ನ್ಯಾಯವನ್ನೂ (ಅವರು ಪ್ರಮಾಣವಾಗಿ) ತೋರಿಸುತ್ತಾರೆ.

(ಭಾಷ್ಯ)

೬೭. ಭವತ್ವೇವಮ್, ಕಿಂ ತವ ನಷ್ಟಂ ಯದ್ಯೇವಂ ಸ್ಯಾತ್? ಅಸ್ತ್ವೇವಂ ತವೇಷ್ಟಂ ಚೇತ್ । ಶ್ರುತ್ಯರ್ಥಸ್ತು ನ ಭವತಿ । ಕಿಂ ನ "ಶ್ರೋತಾ ಮನ್ತಾ" ಇತ್ಯಾದಿ ಶ್ರುತ್ಯರ್ಥಃ? ನ । "ನ ಶ್ರೋತಾ ನ ಮನ್ತಾ" ಇತ್ಯಾದಿವಚನಾತ್ । ನನು ಪಾಕ್ಷಿಕತ್ವೇನ ಪ್ರತ್ಯುಕ್ತಂ (ತ್ವಯಾ?) ನ ನಿತ್ಯಮೇವ ಶ್ರೋತೃತ್ವಾದ್ಯಭ್ಯುಪಗಮಾತ್ । "ನ ಹಿ ಶ್ರೋತುಃ ಶ್ರುತೇರ್ವಿಪರಿಲೋಪೋ ವಿದ್ಯತೇ" (ಬೃ. ೪-೩-೨೭) ಇತ್ಯಾದಿ ಶ್ರುತೇಃ ॥

(ಭಾಷ್ಯಾರ್ಥ)

(ಪೂರ್ವಪಕ್ಷಿ) :—ಹೀಗೆಯೇ ಆಗಲಿ; ಹೀಗಾದರೆ ನಿನಗೇನು ನಷ್ಟ?

(ಸಿದ್ಧಾಂತಿ) :—ನಿನಗೆ ಬೇಕಾಗಿದ್ದರೆ ಹೀಗೆಯೇ ಆಗಲಿ. ಆದರೆ (ಅದು) ಶ್ರುತಿಯ ಅರ್ಥವಾಗಲಾರದು.

(ಪೂರ್ವಪಕ್ಷಿ) :—(ಆತ್ಮನು) ಶ್ರೋತೃವು, ಮಂತೃವು ಎಂದು ಮುಂತಾಗಿ (ಹೇಳುವದು) ಶ್ರುತ್ಯರ್ಥವಲ್ಲವೇನು?[4]

---

1. ವೈಶೇಷಿಕರಲ್ಲದೆ ನೈಯಾಯಿಕರೂ ಈ ಅಭಿಪ್ರಾಯವುಳ್ಳವರು.
2. ವೈ. ಸೂ. ೩-೨-೧, ನ್ಯಾ. ಸೂ. ೧-೧೪.
3. ವೈ. ಸೂ. ೩-೨-೩ರಲ್ಲಿಯೂ ಈ ಅಭಿಪ್ರಾಯವಿದೆ.
4. ಶ್ರುತಿಯಲ್ಲಿ ಹಾಗೆಂದು ಹೇಳಿದೆಯಲ್ಲ!—ಎಂದು ಭಾವ.

(ಸಿದ್ಧಾಂತ):— ಹಾಗಲ್ಲ. (ಅವನು) ಶ್ರೋತೃವಲ್ಲ, ಮಂತೃವಲ್ಲ–ಎಂದೂ ವಚನವಿದೆ.[1]

(ಪೂರ್ವಪಕ್ಷಿ):—(ಒಂದು) ಪಕ್ಷದಲ್ಲಿ (ಶ್ರೋತೃವು........) ಎಂದು ಉತ್ತರ ಹೇಳಿದ್ದಾಗಿದೆಯಲ್ಲ![2]

(ಸಿದ್ಧಾಂತಿ):—ಹಾಗಲ್ಲ, ಏಕೆಂದರೆ ಶ್ರೋತೃತ್ವವೇ ಮುಂತಾದದ್ದು ನಿತ್ಯವಾಗಿದೆ[3] ಎಂದು (ನಾವು) ಅಂಗೀಕರಿಸುತ್ತೇವೆ. "ಶ್ರೋತೃವಿನ ಶ್ರುತಿಗೆ ಲೋಪವೇ ಇಲ್ಲ" (ಬೃ. ೪-೩-೨೭) ಎಂಬ ಶ್ರುತಿ[4] ಇದಕ್ಕೆ ಪ್ರಮಾಣವು.

## ದೃಷ್ಟ್ಯಾದಿಗಳು ಎರಡು ವಿಧ

(ಭಾಷ್ಯ)

೬೮. ಏವಂ ತರ್ಹಿ ನಿತ್ಯಮೇವ ಶ್ರೋತೃತ್ವಾದ್ಯಭ್ಯುಪಗಮೇ ಪ್ರತ್ಯಕ್ಷವಿರುದ್ಧಾ ಯುಗಪಜ್ಜ್ಞಾನೋತ್ಪತ್ತಿಃ ಅಜ್ಞಾನಾಭಾವಶ್ಚ ಆತ್ಮನಃ ಕಲ್ಪಿತಃ ಸ್ಯಾತ್ । ತಚ್ಚ ಅನಿಷ್ಟಮ್ ಇತಿ । ನೋಭಯದೋಷೋಪಪತ್ತಿಃ । ಆತ್ಮನಃ ಶ್ರುತ್ಯಾದಿ ಶ್ರೋತೃತ್ವಾದಿಧರ್ಮವತ್ತ್ವಶ್ರುತೇಃ । ಅನಿತ್ಯಾನಾಂ ಮೂರ್ತಾನಾಂ ಚ ಚಕ್ಷುರಾದೀನಾಂ ದೃಷ್ಟ್ಯಾದಿ ಅನಿತ್ಯಮೇವ ಸಂಯೋಗವಿಯೋಗಧರ್ಮಿಣಾಮ್ । ಯಥಾ ಅಗ್ನೇರ್ಜ್ವಲನಂ ತೃಣಾದಿಸಂಯೋಗಜತ್ವಾತ್, ತದ್ವತ್ । ನ ತು ನಿತ್ಯಸ್ಯ ಅಮೂರ್ತಸ್ಯ ಅಸಂಯೋಗವಿಭಾಗಿಧರ್ಮಿಣಃ ಸಂಯೋಗಜದೃಷ್ಟ್ಯಾದ್ಯನಿತ್ಯಧರ್ಮವತ್ತ್ವಂ ಸಮ್ಭವತಿ । ತಥಾ ಚ ಶ್ರುತಿಃ "ನ ಹಿ ದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೇ" (ಬೃ. ೪-೩-೨೩) ಇತ್ಯಾದ್ಯಾ ॥

(ಭಾಷ್ಯಾರ್ಥ)

(ಪೂರ್ವಪಕ್ಷಿ):— ಹಾಗಾದರೆ (ಆತ್ಮನಿಗೆ) ಯಾವಾಗಲೂ ಶ್ರೋತೃತ್ವವೇ ಮುಂತಾದದ್ದು ಇರುವದೆಂದು ಒಪ್ಪಿದರೆ ಜ್ಞಾನಗಳು ಒಮ್ಮೆಗೇ ಹುಟ್ಟುವವೆಂದೂ

---

1. ಬೃ. ೪-೩-೨೩ರಿಂದ ೩೦ರ ವರೆಗಿನ ಮಂತ್ರಗಳನ್ನು ನೋಡಿರಿ.

2. ಇಲ್ಲಿ 'ತ್ವಯಾ' ಎಂಬ ಮಾತು ಬೇಕಿರುವದಿಲ್ಲ; ಅದು ಹೊಂದುವದೂ ಇಲ್ಲ. ಏಕೆಂದರೆ ಶ್ರೋತೃತ್ವವು ಪಾಕ್ಷಿಕವೆಂದು ಹೇಳಿರುವವನು ಪೂರ್ವಪಕ್ಷಿ, ಸಿದ್ಧಾಂತಿಯಲ್ಲ. ಕಾಣಾದರೇ ಮುಂತಾದವರು ಹೇಳಿದ ಸಿದ್ಧಾಂತವನ್ನು ಒಪ್ಪಿ ಪೂರ್ವಪಕ್ಷಿಯ ಈ ಅಭಿಪ್ರಾಯವನ್ನು ಮುಂದೊಡ್ಡಿರುತ್ತಾನೆ. ವ್ಯಾಖ್ಯಾನಕಾರನು 'ತ್ವಯಾ' ಎಂಬ ಪಾಠವನ್ನು ಇಟ್ಟುಕೊಂಡೇ ಹೊಂದಿಸುವದಕ್ಕೆ ಪ್ರಯತ್ನಪಟ್ಟಿರುತ್ತಾನೆ; ಆದರೆ ಆ ಪ್ರಯತ್ನವು ಸಫಲವಾಗಿಲ್ಲ.

3. ಶ್ರೋತೃವಿನ ಸ್ವರೂಪವಾದ ಶ್ರುತಿಗೆ ಲೋಪವಿಲ್ಲ ಎಂದು ಅರ್ಥ

4. ಇದೇ ಆತ್ಮನ ಸ್ವರೂಪವಾಗಿರುವ ಜ್ಞಾನವು. ಇದು ಮುಂದೆ ಸ್ಪಷ್ಟವಾಗುವದು.

ಆತ್ಮನಿಗೆ ಅಜ್ಞಾನವೇ ಇಲ್ಲವೆಂದೂ ಪ್ರತ್ಯಕ್ಷಕ್ಕೆ ವಿರುದ್ಧವಾಗಿ ಕಲ್ಪಿಸಿದಂತೆ ಆಗುತ್ತದೆ. ಆದರೆ (ಇದು) ಒಪ್ಪಿಗೆಯಾಗುವಹಾಗಿಲ್ಲವಲ್ಲ!

(ಸಿದ್ಧಾಂತಿ) :---(ಈ) ಎರಡು ದೋಷಗಳೂ ಆಗುವದಿಲ್ಲ. ಏಕೆಂದರೆ ಆತ್ಮನಿಗೆ ಶ್ರುತ್ಯಾದಿಗಳ ಶ್ರೋತೃತ್ವವೇ ಮುಂತಾದ ಧರ್ಮಗಳಿರುವವೆಂದು **ಶ್ರುತಿ**[1] ಹೇಳುಹೇಳುತ್ತದೆ. ಅನಿತ್ಯವೂ ಮೂರ್ತವೂ ಆಗಿರುವ ಚಕ್ಷುರಾದಿಗಳ ದೃಷ್ಟ್ಯಾದಿಗಳು ಅನಿತ್ಯವೇ (ಆಗಿರುತ್ತವೆ), ಏಕೆಂದರೆ (ಅವುಗಳಿಗೆ) ಸಂಯೋಗವಿಯೋಗಗಳೆಂಬ ಧರ್ಮಗಳಿರುತ್ತವೆ. ಬೆಂಕಿಯು ಉರಿಯುವದೆಂಬುದು ಕಡ್ಡಿಯೇ ಮುಂತಾದವುಗಳ ಸಂಯೋಗದಿಂದ ಉಂಟಾಗುವದರಿಂದ ಹೇಗೆ (ಅನಿತ್ಯವೋ ಹಾಗೆಯೇ ಅವು). ಆದರೆ ನಿತ್ಯನೂ ಅಮೂರ್ತನೂ ಸಂಯೋಗವಿಯೋಗಧರ್ಮಗಳಿಲ್ಲದವನೂ ಆಗಿರುವ (ಆತ್ಮನಿಗೆ) ಸಂಯೋಗದಿಂದಾಗುವ ದೃಷ್ಟಿಯೇ ಮುಂತಾದ ಅನಿತ್ಯಧರ್ಮಗಳಿರುವವೆಂಬುದು ಹೊಂದುವದಿಲ್ಲ. ಆದ್ದರಿಂದಲೇ ಶ್ರುತಿಯು "ದ್ರಷ್ಟೃವಿನ ದೃಷ್ಟಿಗೆ ಲೋಪವೆಂಬುದು ಇಲ್ಲವೇ ಇಲ್ಲ" (ಬೃ. ೪-೩-೨೩) ಎಂದು ಮುಂತಾಗಿ ಹೇಳುತ್ತದೆ.

(ಭಾಷ್ಯ)

೬೯. ಏವಂ ತರ್ಹಿ ದ್ವೇ ದೃಷ್ಟೀ ಚಕ್ಷುಷೋಽನಿತ್ಯಾ ದೃಷ್ಟಿಃ ನಿತ್ಯಾ ಚಾತ್ಮನಃ । ತಥಾ ಚ ದ್ವೇ ಶ್ರುತೀ ಶ್ರೋತ್ರಸ್ಯಾನಿತ್ಯಾ ನಿತ್ಯಾ ಚಾತ್ಮಸ್ವರೂಪಸ್ಯ। ತಥಾ ದ್ವೇ ಮತೀ ವಿಜ್ಞಾತೀ ಬ್ಯಾಹ್ಯಾಬಾಹ್ಯೇ । ಏವಂ ಹ್ಯೇವ । ತಥಾ ಚೇಯಂ ಶ್ರುತಿರುಪಪನ್ನಾ ಭವತಿ "ದೃಷ್ಟೇರ್ದ್ರಷ್ಟಾ", "ಶ್ರುತೇಃ ಶ್ರೋತಾ" ಇತ್ಯಾದ್ಯಾ । ಲೋಕೇಽಪಿ ಪ್ರಸಿದ್ಧಂ ಚಕ್ಷುಷಸ್ತಿಮಿರಾಗಮಾಪಾಯಯೋಃ "ನಷ್ಟಾ ದೃಷ್ಟಿಃ "ಜಾತಾ ದೃಷ್ಟಿಃ" ಇತಿ ಚಕ್ಷುರ್ದೃಷ್ಟೇರನಿತ್ಯತ್ವಮ್ । ತಥಾ ಚ ಶ್ರುತಿಮತ್ಯಾದೀನಾಮ್ । ಆತ್ಮದೃಷ್ಟ್ಯಾದೀನಾಂ ಚ ನಿತ್ಯತ್ವಂ ಪ್ರಸಿದ್ಧಮೇವ ಲೋಕೇ । ವದತಿ ಹಿ ಉದ್ಧೃತಚಕ್ಷುಃ "ಸ್ವಪ್ನೇ ಅದ್ಯ ಮಯಾ ಭ್ರಾತಾ ದೃಷ್ಟಃ" ಇತಿ । ತಥಾ ಅವಗತಬಾಧಿರ್ಯಃ "ಸ್ವಪ್ನೇ ಶ್ರುತೋ ಮನ್ತ್ರೋಽದ್ಯ" ಇತ್ಯಾದಿ । ಯದಿ ಚಕ್ಷುಃಸಂಯೋಗಜೈವ ಆತ್ಮನೋಽನಿತ್ಯಾ ದೃಷ್ಟಿಃ ತನ್ನಾಶೇ ನಶ್ಯೇತ್, ತದಾ ಉದ್ಧೃತಚಕ್ಷುಃ ಸ್ವಪ್ನೇ ನೀಲಪೀತಾದಿ ನ ಪಶ್ಯೇತ್ । ನ ಹಿ ದ್ರಷ್ಟುರ್ದೃಷ್ಟೇಃ" (ಬೃ. ೪-೩-೨೩) ಇತ್ಯಾದ್ಯಾ ಚ ಶ್ರುತಿಃ ಅನುಪಪನ್ನಾ ಸ್ಯಾತ್ । "ತಚ್ಚಕ್ಷುಃ ಪುರುಷೇ ಯೇನ ಸ್ವಪ್ನೇ ಪಶ್ಯತಿ" (?) ಇತ್ಯಾದ್ಯಾ ಚ ಶ್ರುತಿಃ ॥

(ಭಾಷ್ಯಾರ್ಥ)

(ಪೂರ್ವಪಕ್ಷಿ) :—ಹಾಗಾದರೆ ಚಕ್ಷುರಿಂದ್ರಿಯದ ಅನಿತ್ಯವಾದ ದೃಷ್ಟಿ

---

1. ಬೃ. ೩-೪-೨.

(ಯೊಂದು), ಆತ್ಮನ ನಿತ್ಯವಾದ (ದೃಷ್ಟಿಯೊಂದು)–ಎಂದು ಎರಡು ದೃಷ್ಟಿಗಳು (ಎಂದಾಗುತ್ತದೆ). ಹೀಗೆಯೇ ಶ್ರೋತ್ರದ ಅನಿತ್ಯವಾದ (ಶ್ರುತಿಯೊಂದು), ಆತ್ಮ ಸ್ವರೂಪದ (ಶ್ರುತಿಯೊಂದು)–ಎಂದು ಎರಡು ಶ್ರುತಿಗಳು (ಎಂದಾಗುತ್ತದೆ). ಇದ ರಂತೆ ಹೊರಗಿನದು, ಹೊರಗಿನದಲ್ಲದ್ದು ಎಂದು ಎರಡು ಮತಿಗಳು, ಎರಡು ವಿಜ್ಞಾನ ಗಳು (ಎಂದಾಗುತ್ತದೆಯಲ್ಲ) !

(ಸಿದ್ಧಾಂತಿ) :—ಹಾಗೆಯೇ ಸರಿ. ಹೀಗಾದರೇ "ದೃಷ್ಟಿಯ ದ್ರಷ್ಟೃ", "ಶ್ರುತಿಯ ಶ್ರೋತೃ" (ಬೃ. ೩-೪-೨) ಮುಂತಾದ ಈ ಶ್ರುತಿಯು ಹೊಂದುತ್ತದೆ. ಲೋಕದಲ್ಲಿಯೂ ಕಣ್ಣಿಗೆ ಪರೆಯು ಬಂದು ಹೋಗುವಾಗ "ದೃಷ್ಟಿ ಹೋಯಿತು", "ದೃಷ್ಟಿ ಬಂತು" ಎಂದು (ವ್ಯವಹಾರವುಂಟಾಗುವದರಿಂದ) ಚಕ್ಷುವಿನ ದೃಷ್ಟಿಯು ಅನಿತ್ಯವೆಂಬುದು ಪ್ರಸಿದ್ಧ(ವಾಗಿರುತ್ತದೆ). ಹೀಗೆಯೇ ಶ್ರುತಿ, ಮತಿ–ಮುಂತಾದವು ಗಳೂ (ಅನಿತ್ಯವೆಂಬುದು ಪ್ರಸಿದ್ಧವಾಗಿರುತ್ತದೆ) ಆತ್ಮನ ದೃಷ್ಟಿಯೇ ಮುಂತಾದವು ನಿತ್ಯವೆಂಬುದೂ ಲೋಕದಲ್ಲಿ ಪ್ರಸಿದ್ಧವೇ (ಆಗಿರುತ್ತದೆ)[1] ಹೇಗೆಂದರೆ ಕಣ್ಣು ಕೀಳಿಸಿ ಕೊಂಡವನು "ಇಂದು ಕನಸಿನಲ್ಲಿ ನಾನು (ನನ್ನ) ಒಡಹುಟ್ಟಿದವನನ್ನು ಕಂಡೆನು" ಎಂದು ಹೇಳುತ್ತಾನಲ್ಲವೆ? ಇದರಂತೆ ಕಿವುಡನೆಂದು (ನಮಗೆಲ್ಲರಿಗೂ) ಗೊತ್ತಾಗಿರು ವವನು "ಕನಸಿನಲ್ಲಿ ಇಂದು ಮಂತ್ರವನ್ನು ಕೇಳಿದೆನು" ಎಂದು ಮುಂತಾಗಿ[2] ಹೇಳುತ್ತಾನೆ. ಆತ್ಮನ ದೃಷ್ಟಿಯು ಚಕ್ಷುರಿಂದ್ರಿಯದ ಸಂಯೋಗದಿಂದಲೇ ಉಂಟಾ ಗಿದ್ದು ಅನಿತ್ಯವಾಗಿರುವದರಿಂದ ಆ (ಸಂಯೋಗವು) ನಾಶವಾಗುತ್ತಲೂ ನಾಶವಾಗುವ ದಾಗಿದ್ದರೆ ಆಗ ಕಣ್ಣು ಕೀಳಿಸಿಕೊಂಡವನು ಕನಸಿನಲ್ಲಿ ಕಪ್ಪು, ಹಳದಿ–ಮುಂತಾದ ದ್ದನ್ನು ಕಾಣುವದಕ್ಕೆ ಆಗುತ್ತಿರಲಿಲ್ಲ; "ದ್ರಷ್ಟೃವಿನ ದೃಷ್ಟಿಗೆ (ಲೋಪವಿಲ್ಲ)" ಎಂದು ಮುಂತಾಗಿರುವ ಶ್ರುತಿಯೂ ಹೊಂದುತ್ತಿರಲಿಲ್ಲ. ಮತ್ತು "ಯಾವದರಿಂದ ಕನಸಿ ನಲ್ಲಿ (ವಿಷಯಗಳನ್ನು) ಕಾಣುತ್ತಾನೋ ಅದೇ ಪುರುಷನಲ್ಲಿರುವ ಚಕ್ಷುವು" (?) ಮುಂತಾದ[3] ಶ್ರುತಿಯೂ (ಹೊಂದುತ್ತಿರಲಿಲ್ಲ).

---

1. ಆತ್ಮನ ದೃಷ್ಟಿಯು ನಿತ್ಯ ಎಂದು ಲೋಕದಲ್ಲಿ ಪ್ರಸಿದ್ಧವಾಗಿಲ್ಲದಿದ್ದರೂ ಮುಂದೆ ಹೇಳುವ ಅನುಭವಬಲದಿಂದ ಅದು ನಿತ್ಯವೆಂದು ಏರ್ಪಡುತ್ತದೆಯಾದ್ದರಿಂದ ಇದು ಲೋಕ ದಲ್ಲಿ ಪ್ರಸಿದ್ಧವೆಂದಿದೆ ಎಂದು ತಿಳಿಯಬೇಕು.

2. ಇಲ್ಲಿ "ಇತಿ । ಇತ್ಯಾದಿ" ಎಂಬ ಪಾಠವಿದ್ದರೆ 'ಇಂಥ ಗಂಧವನ್ನು ಮೂಸಿ ದೆನು,' 'ಇಂಥ ರುಚಿಯನ್ನು ಸವಿದೆನು'–ಮುಂತಾಗಿ ಆಯಾ ಇಂದ್ರಿಯದ ಸಾಮರ್ಥ್ಯವಿಲ್ಲದವರು ಹೇಳುತ್ತಾರೆ ಎಂಬ ಅರ್ಥಸ್ವಾರಸ್ಯವು ಹೊರಡುತ್ತದೆ.

3. "ಮುಂತಾದ" ಎಂದರೆ ಇದೇ ಶ್ರುತಿಯಲ್ಲಿರುವ ಇತರ ವಾಕ್ಯಗಳನ್ನೂ ಗ್ರಹಿಸ ಬೇಕೆಂದು ಅರ್ಥ. ಎಂದರೆ "ಕನಸಿನಲ್ಲಿ ಏತರಿಂದ ಕೇಳುತ್ತಾರೋ ಅದೇ ನಿಜವಾಹ

(ಭಾಷ್ಯ)

೭೦. ನಿತ್ಯಾ ಆತ್ಮನೋ ದೃಷ್ಟಿರ್ಬಾಹ್ಯಾನಿತ್ಯದೃಷ್ಟೇರ್ಗ್ರಾಹಿಕಾ । ಬಾಹ್ಯ ದೃಷ್ಟೇಶ್ಚ ಉಪಜನಾಪಾಯಾದ್ಯನಿತ್ಯಧರ್ಮವತ್ತ್ವಾತ್ ತದ್ಗ್ರಾಹಿಕಾಯಾ ಆತ್ಮ ದೃಷ್ಟೇಸ್ತದ್ವದವಭಾಸತ್ವಮ್ ಅನಿತ್ಯತ್ವಾದಿ[1] (?) ಭ್ರಾನ್ತಿನಿಮಿತ್ತಂ ಲೋಕಸ್ಯ ಇತಿ ಯುಕ್ತಮ್ । ಯಥಾ ಭ್ರಮಣಾದಿಧರ್ಮವದಲಾತಾದಿವಸ್ತುವಿಷಯದೃಷ್ಟಿರಪಿ ಭ್ರಮತೀವ, ತದ್ವತ್ । ತಥಾ ಚ ಶ್ರುತಿಃ "ಧ್ಯಾಯತೀವ ಲೇಲಾಯತೀವ" (ಬೃ. ೪-೩-೭) ಇತಿ । ತಸ್ಮಾತ್ ಆತ್ಮದೃಷ್ಟೇರ್ನಿತ್ಯತ್ವಾತ್ ನ ಯೌಗಪದ್ಯಮ್ ಅಯೌಗ ಪದ್ಯಂ ವಾ ಅಸ್ತಿ ॥

(ಭಾಷ್ಯಾರ್ಥ)

ಆತ್ಮನ ನಿತ್ಯವಾದ ದೃಷ್ಟಿಯು ಹೊರಗಿನ ಅನಿತ್ಯದೃಷ್ಟಿಯನ್ನು ಗ್ರಹಿಸುತ್ತದೆ. ಹೊರಗಿನ ದೃಷ್ಟಿಯು ಹುಟ್ಟುವದು, ನಾಶವಾಗುವದು–ಮುಂತಾದ ಅನಿತ್ಯಧರ್ಮ ಗಳುಳ್ಳದ್ದಾದ್ದರಿಂದ ಅದನ್ನು ಗ್ರಹಿಸುವ ಆತ್ಮನ ದೃಷ್ಟಿಯು ಅದರಂತೆ ತೋರುತ್ತಿರು ವದೇ ಅದು ಅನಿತ್ಯವು ಎಂದು ಮುಂತಾಗಿ (?) ಜನರು ಭ್ರಾಂತಿಪಡುವದಕ್ಕೆ ಕಾರಣವಾಗಿರುತ್ತದೆ ಎಂಬುದೇ ಸರಿ. ತಿರುಗುವದೇ ಮುಂತಾದ ಧರ್ಮಗಳುಳ್ಳ ಕೊಳ್ಳಿಯನ್ನು ನೋಡುವ ದೃಷ್ಟಿಯೂ ತಿರುಗುವಂತೆ (ಕಾಣುವದಿಲ್ಲವೆ)? ಅದ ರಂತೆಯೇ ಇದು. ಆದ್ದರಿಂದಲೇ ಶ್ರುತಿಯು "ಧ್ಯಾನಮಾಡುತ್ತಿರುವಂತೆ, ಚಲಿಸು ತ್ತಿರುವಂತೆ" (ಇರುತ್ತಾನೆ ಬೃ. ೪-೩-೭) ಎಂದು (ಹೇಳುತ್ತದೆ). ಆದ್ದರಿಂದ ಆತ್ಮ ದೃಷ್ಟಿಯು ನಿತ್ಯವಾಗಿರುವದರಿಂದ[2] ಜ್ಞಾನಗಳು ಒಟ್ಟಿಗೆ ಆಗುವದೆಂಬುದಾಗಲಿ ಒಟ್ಟಿಗೆ ಆಗದೆ ಇರುವದೆಂಬುದಾಗಲಿ (ಇಲ್ಲವೇ) ಇಲ್ಲ.

## ಆತ್ಮನ ವಿಷಯದ ತಪ್ಪುತಿಳಿವಳಿಕೆಗಳಿಗೆ ಕಾರಣ

(ಭಾಷ್ಯ)

೭೧. ಬಾಹ್ಯಾನಿತ್ಯದೃಷ್ಟ್ಯುಪಾಧಿವಶಾತ್ತು ಲೋಕಸ್ಯ, ತಾರ್ಕಿಕಾಣಾಂ ಚ

---

ಶ್ರೋತ್ರವು" ಎಂದು ಮುಂತಾಗಿರುವ ವಾಕ್ಯಗಳೆಂದು ತಿಳಿಯಬೇಕು. ಈ ಶ್ರುತಿ ಯಾವ ದೆಂಬುದು ತಿಳಿಯದು. ಕೇನೋಪನಿಷತ್ತಿನ ಭಾಷ್ಯದಲ್ಲಿ ಇದರ ಒಂದು ವಾಕ್ಯವನ್ನು ಉದಾ ಹರಿಸಿದೆ. ಉಪದೇಶಸಾಹಸ್ರಿ ಪದ್ಯ (೧೭-೧೪,೧೫)ರಲ್ಲಿಯೂ ಈ ಶ್ರುತಿಯನ್ನು ಉದಾಹರಿ ಸಿರುತ್ತದೆ.

1. ಇಲ್ಲಿ ಮೂಲದಲ್ಲಿ 'ಅನಿತ್ಯತ್ವಾದಿ' ಎಂಬಲ್ಲಿ 'ಆದಿ' ಎಂಬ ಮಾತು ಹೆಚ್ಚಾ ಗಿದೆ.

2. ಜ್ಞಾನವು ನಿತ್ಯವಾಗಿ ಕಾಲವನ್ನುಕೂಡ ಅರಿಯುತ್ತಿರುತ್ತದೆ.

ಆಗಮಸಮ್ಪ್ರದಾಯವರ್ಜಿತತ್ವಾತ್ 'ಅನಿತ್ಯಾ ಆತ್ಮನೋ ದೃಷ್ಟಿಃ' ಇತಿ ಭ್ರಾನ್ತಿರುಪಪನ್ನೈವ। ಜೀವೇಶ್ವರಪರಮಾತ್ಮಭೇದಕಲ್ಪನಾ ಚ ಏತನ್ನಿಮಿತ್ತೈವ। ತಥಾ ಅಸ್ತಿ ನಾಸ್ತೀತ್ಯಾದ್ಯಾಶ್ಚ ಯಾವನ್ತೋ ವಾಙ್ಮನಸಯೋರ್ಭೇದಾಃ ಯತ್ರೈಕಂ ಭವನ್ತಿ ತದ್ವಿಷಯಾಯಾಃ ನಿತ್ಯಾಯಾ ದೃಷ್ಟೇರ್ನಿರ್ವಿಶೇಷಾಯಾಃ। ಅಸ್ತಿ ನಾಸ್ತಿ, ಏಕಂ ನಾನಾ, ಗುಣವತ್ ಅಗುಣಮ್, ಜಾನಾತಿ ನ ಜಾನಾತಿ, ಕ್ರಿಯಾವತ್ ಅಕ್ರಿಯಮ್, ಫಲವತ್ ಅಫಲಮ್, ಸಬೀಜಂ ನಿರ್ಬೀಜಮ್, ಸುಖಂ ದುಃಖಮ್, ಮಧ್ಯಮ್ ಅಮಧ್ಯಮ್, ಶೂನ್ಯಮ್ ಅಶೂನ್ಯಮ್, ಪರೋಽಹಮ್ ಅನ್ಯಃ–ಇತಿ ವಾ ಸರ್ವವಾಕ್ಪ್ರತ್ಯಯಾಗೋಚರೇ ಸ್ವರೂಪೇ ಯೋ ವಿಕಲ್ಪಯಿತುಮಿಚ್ಛತಿ, ಸ ನೂನಂ ಖಮಪಿ ಚರ್ಮವದ್ ವೇಷ್ಟಯಿತುಮಿಚ್ಛತಿ, ಸೋಪಾನಮಿವ ಚ ಪದ್ಭ್ಯಾಮ್ ಆರೋಢುಮ್! ಜಲೇ ಖೇ ಚ ಮೀನಾನಾಂ ವಯಸಾಂ ಚ ಪದಂ ದಿದೃಕ್ಷತೇ। "ನೇತಿ ನೇತಿ" (ಬೃ. ೨-೩-೬), "ಯತೋ ವಾಚೋ ನಿವರ್ತನ್ತೇ" (ತೈ. ೨-೪) ಇತ್ಯಾದಿಶ್ರುತಿಭ್ಯಃ, "ಕೋ ಅದ್ಧಾ ವೇದ" (ಋ. ೧೦-೧೨೯-೬) ಇತ್ಯಾದಿ ಮನ್ತ್ರವರ್ಣಾತ್॥

(ಭಾಷ್ಯಾರ್ಥ)

ಆದರೆ ಹೊರಗಿನ ಅನಿತ್ಯವಾದ ದೃಷ್ಟಿಯೆಂಬ ಉಪಾಧಿಯ ವಶದಿಂದ[1] ಸಾಮಾನ್ಯಜನರೂ **ಆಗಮಸಂಪ್ರದಾಯ**ವಿಲ್ಲದ್ದರಿಂದ[2] ತಾರ್ಕಿಕರೂ[3] ಆತ್ಮನ ದೃಷ್ಟಿಯು ಅನಿತ್ಯವೆಂದು ಭ್ರಾಂತರಾಗಿರುವದು ಯುಕ್ತವೇ ಆಗಿದೆ. ಜೀವ, ಈಶ್ವರ, ಪರಮಾತ್ಮ–ಎಂಬ ಭೇದವನ್ನು ಕಲ್ಪಿಸಿರುವದಕ್ಕೂ[4] ಇದೇ ನಿಮಿತ್ತವಾಗಿದೆ. ಇದರಂತೆ ವಾಕ್ಕು, ಮನಸ್ಸು–ಇವೆರಡರಲ್ಲಿ ಎಷ್ಟು ಭೇದಗಳಿರುವವೋ ಅವೆಲ್ಲವೂ ಎಲ್ಲಿ ಒಂದೇ ಆಗಿಬಿಡುವವೋ[5] ಆ ವಿಷಯದ[6] ನಿರ್ವಿಶೇಷವಾದ ನಿತ್ಯದೃಷ್ಟಿಯ

1. ಉಪಾಧಿಯ ಕಣ್ಣಿಂದಲೇ ನೋಡುತ್ತಿರುವದರಿಂದ.

2. ಶ್ರುತ್ಯರ್ಥವನ್ನು ತಿಳಿದ ಆಚಾರ್ಯರ ಉಪದೇಶವಿಲ್ಲದ್ದರಿಂದ.

3. ವೈಶೇಷಿಕರೇ ಮುಂತಾದವರು; ವೇದಾಂತವಾಕ್ಯವೊಂದೇ ಆತ್ಮನ ಸ್ವರೂಪವನ್ನು ತಿಳಿಯಪಡಿಸುವ ಪ್ರಮಾಣವೆಂದು ಒಪ್ಪದ ಸ್ವತಂತ್ರತರ್ಕವಾದಿಗಳು.

4. ಈಶ್ವರನಿಗಿಂತ ಬೇರೆಯಾಗಿ ಪರಮಾತ್ಮನನ್ನು ತಾರ್ಕಿಕರು ಒಪ್ಪುವದಿಲ್ಲವಾದರೂ ಕೆಲವರು ವೇದಾಂತಿಗಳು ಒಪ್ಪಿದ್ದರು. ಪ್ರಕೃತ ಪೂರ್ವಪಕ್ಷದಲ್ಲಿ ಈ ಅಂಗೀಕಾರವಿದೆ. ಜೀವರ ಪರಸ್ಪರಭೇದ, ಜೀವೇಶ್ವರಭೇದ, ಜೀವೇಶ್ವರರಿಗೂ ಪರಮಾತ್ಮನಿಗೂ ಭೇದ–ಈ ಮೂರೂ ಸಂಪ್ರದಾಯವಿರುದ್ಧವಾದ ವಾದಗಳೆಂದು ಭಾವ.

5. ವಾಙ್ಮನಸ್ಸುಗಳ ಭೇದಗಳು ನಿಜವಾಗಿ ಆತ್ಮನೇ. "ಸರ್ವೇ ವೇದಾ ಯತ್ರೈಕಂ ಭವನ್ತಿ" (ತೈ. ಆ. ೩-೨೦) ಎಂಬ ಶ್ರುತಿಯ ಅಭಿಪ್ರಾಯ.

6. ಆ ಆತ್ಮನಲ್ಲಿರುವ.

ಸಂಬಂಧವಾಗಿ 'ಇದೆ' 'ಇಲ್ಲ' ಎಂದು ಮುಂತಾಗಿ (ಮಾಡುವ) ಕಲ್ಪನೆಗಳೂ (ಈ ನಿಮಿತ್ತದಿಂದಲೇ) ಆಗಿರುವವು.[1] ಇದೆ, ಇಲ್ಲ; ಒಂದು, ಅನೇಕ; ಗುಣವುಳ್ಳದ್ದು, ಗುಣವಿಲ್ಲದ್ದು; ಅರಿಯುತ್ತದೆ, ಅರಿಯುವದಿಲ್ಲ; ಕ್ರಿಯೆಯುಳ್ಳದ್ದು, ಕ್ರಿಯೆಯಿಲ್ಲದ್ದು; ಫಲವುಳ್ಳದ್ದು, ಫಲವಿಲ್ಲದ್ದು; ಬೀಜವುಳ್ಳದ್ದು, ಬೀಜವಿಲ್ಲದ್ದು;[2] ಸುಖರೂಪವಾದದ್ದು, ದುಃಖರೂಪವಾದದ್ದು; ಮಧ್ಯವಾಗಿದೆ, ಮಧ್ಯವಲ್ಲ;[3] ಶೂನ್ಯವು, ಶೂನ್ಯವಲ್ಲ; ಅಥವಾ ಪರಮಾತ್ಮನು ನಾನೇ, (ನನಗಿಂತ) ಬೇರೆ[4]–ಎಂದು ಯಾವ ಮಾತಿಗೂ ಪ್ರತ್ಯಯಕ್ಕೂ ವಿಷಯವಲ್ಲದ ಸ್ವರೂಪದಲ್ಲಿ ಯಾವನು ವಿಕಲ್ಪ ಮಾಡಲೆಳಸುತ್ತಾನೋ[5] ಅವನು ನಿಜವಾಗಿಯೂ ಆಕಾಶವನ್ನು ಚರ್ಮದಂತೆ ಸುತ್ತುವದಕ್ಕೂ ಸೋಪಾನದಂತೆ ಹೆಜ್ಜೆಗಳಿಂದ ಹತ್ತುವದಕ್ಕೂ ಬಯಸಿದವನಾಗುತ್ತಾನೆ; ನೀರಿನಲ್ಲಿ ಮೀನುಗಳ ಮತ್ತು ಆಕಾಶದಲ್ಲಿ ಹಕ್ಕಿಗಳ ಹೆಜ್ಜೆಯ ಗುರುತನ್ನು ಕಾಣಲಿಚ್ಛಿಸಿದವನಾಗುತ್ತಾನೆ.[6] ಏಕೆಂದರೆ "ಇದಲ್ಲ, ಇದಲ್ಲ" (ಬೃ. ೨-೩-೬), "ಯಾವದರಿಂದ ಮಾತುಗಳು ಹಿಂತಿರುಗುತ್ತವೆಯೋ...." (ತೈ. ೨-೪) ಮುಂತಾದ ಶ್ರುತಿಗಳಿರುತ್ತವೆ, "ಯಾವನು ತಾನೆ (ಇದನ್ನು) ಸ್ಪಷ್ಟವಾಗಿ ಅರಿತುಕೊಂಡಾನು?" (ಋ. ೧೦-೧೨೯-೬) ಮುಂತಾದ ಮಂತ್ರವರ್ಣವಿರುತ್ತದೆ.[7]

## ಆತ್ಮನನ್ನು ಅರಿತುಕೊಳ್ಳುವ ಬಗೆ

### (ಭಾಷ್ಯ)

೬೨. ಕಥಂ ತರ್ಹಿ ತಸ್ಯ "ಸ ಮ ಆತ್ಮಾ" ಇತಿ ವೇದನಮ್? ಬ್ರೂಹಿ ಕೇನ ಪ್ರಕಾರೇಣ ತಮ್ ಅಹಂ "ಸ ಮ ಆತ್ಮಾ" ಇತಿ ವಿದ್ಯಾಮ್। ಅತ್ರ ಆಖ್ಯಾಯಿಕಾಮ್ ಆಚಕ್ಷತೇ। ಕಶ್ಚಿತ್ ಕಿಲ ಮನುಷ್ಯೋ ಮುಗ್ಧಃ ಕೈಶ್ಚಿದುಕ್ತಃ ಕಸ್ಮಿಂಶ್ಚಿದಪರಾಧೇ ಸತಿ "ಧಿಕ್ ತ್ವಾಮ್, ನಾಸಿ ಮನುಷ್ಯಃ" ಇತಿ। ಸ ಮುಗ್ಧ

1. ಉಪಾಧಿವಶರಾಗಿ ನೋಡುವದರಿಂದಲೇ ಆಗಿರುವವು.
2. ಬೀಜವೆಂದರೆ ಧರ್ಮಾಧರ್ಮಗಳು, ಫಲವೆಂದರೆ ಶರೀರ.
3. "ಮಧ್ಯವೆಂದರೆ ಮಧ್ಯಮಪರಿಣಾಮವುಳ್ಳದ್ದು" (ಆ||).
4. "ಇದು ನನಗಿಂತ ಬೇರೆ, ನಾನು ಇದಕ್ಕಿಂತ ಬೇರೆ" ಎಂದು (ಆ||) ವ್ಯಾಖ್ಯಾನ.
5. ವಿವಿಧವಾಗಿ ಕಲ್ಪಿಸುವದಕ್ಕೆ ಪ್ರಯತ್ನಿಸುತ್ತಾನೋ.
6. ನಿರ್ವಿಕಲ್ಪ ವಸ್ತುವಿನಲ್ಲಿ ಯಾವ ಕಲ್ಪನೆಯೂ ಆಗುವಹಾಗಿಲ್ಲ ಎಂದು ಭಾವ.
7. ಈ ಮಂತ್ರದಲ್ಲಿ ಆತ್ಮವಸ್ತುವನ್ನು ಹೀಗೆಂದು ನಿರ್ಣಯಿಸುವದು ಅಸಾಧ್ಯ ಎಂಬ ಅಭಿಪ್ರಾಯವಿದೆ.

ತಯಾ ಆತ್ಮನೋ ಮನುಷ್ಯತ್ವಂ ಪ್ರತ್ಯಾಯಯಿತುಂ ಕಂಚಿತ್ ಉಪೇತ್ಯ ಆಹ– ' ಬ್ರವೀತು ಭವಾನ್ ಕೋ ಹಮಸ್ಮಿ" ಇತಿ । ಸ ತಸ್ಯ ಮುಗ್ಧತಾಂ ಜ್ಞಾತ್ವಾ ಆಹ "ಕ್ರಮೇಣ ಬೋಧಯಿಷ್ಯಾಮಿ'' ಇತಿ । ಸ್ಥಾವರಾದ್ಯಾತ್ಮಭಾವಮ್ ಅಪೋಹ್ಯ "ನ ತ್ವಮ್ ಅಮನುಷ್ಯಃ'' ಇತ್ಯುಕ್ತ್ವಾ ಉಪರರಾಮ । ಸ ತಂ ಮುಗ್ಧಃ ಪ್ರತ್ಯಾಹ–" ಭವಾನ್ ಮಾಂ ಬೋಧಯಿತುಂ ಪ್ರವೃತ್ತಸ್ತೂಷ್ಣೀಂ ಬಭೂವ । ಕಿಂ ನ ಬೋಧಯತಿ ?" ಇತಿ । ತಾದೃಗೇತತ್ ಭವತೋ ವಚನಮ್ । "ನಾಸಿ ಅಮನುಷ್ಯಃ'' ಇತ್ಯುಕ್ತೇ ಪಿ ಮನುಷ್ಯತ್ವಮ್ ಆತ್ಮನೋ ನ ಪ್ರತಿಪದ್ಯತೇ ಯಃ, ಸ ಕಥಂ " ಮನುಷ್ಯೋಽಸಿ" ಇತ್ಯುಕ್ತೋಽಪಿ ಮನುಷ್ಯತ್ವಮ್ ಆತ್ಮನಃ ಪ್ರತಿಪದ್ಯೇತ ? '' ತಸ್ಮಾತ್ ಯಥಾಶಾಸ್ತ್ರೋಪದೇಶ ಏವ ಆತ್ಮಾವಬೋಧವಿಧಿಃ, ನಾನ್ಯಃ । ನ ಹಿ ಅಗ್ನೇರ್ದಾಹ್ಯಂ ತೃಣಾದಿ ಅನ್ಯೇನ ಕೇನಚಿತ್ ದಗ್ಧುಂ ಶಕ್ಯಮ್ । ಅತ ಏವ ಶಾಸ್ತ್ರಮ್ ಆತ್ಮಸ್ವರೂಪಂ ಬೋಧಯಿತುಂ ಪ್ರವೃತ್ತಂ ಸತ್ ಅಮನುಷ್ಯತ್ವಪ್ರತಿಷೇಧೇನೇವ " ನೇತಿ ನೇತಿ '' (ಬೃ. ೨-೦-೬) ಇತ್ಯುಕ್ತ್ವಾ ಉಪರರಾಮ । ತಥಾ "ಅನನ್ತರಮಬಾಹ್ಯಮ್........ಅಯಮಾತ್ಮಾ ಬ್ರಹ್ಮ ಸರ್ವಾನುಭೂರಿತ್ಯನುಶಾಸನಮ್" (ಬೃ. ೨-೫-೧೯), " ತತ್ತ್ವಮಸಿ '' (ಛಾ. ೬-೮-೭), " ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ ಕೇನ ಕಂ ಪಶ್ಯೇತ್ '' (ಬೃ. ೪-೫-೧೫) ಇತ್ಯೇವಮಾದ್ಯಪಿ ಚ ॥

(ಆಕ್ಷೇಪ) :—ಹಾಗಾದರೆ '' ಅವನು ನನ್ನ ಆತ್ಮನು ಎಂದು ತಿಳಿದುಕೊಳ್ಳುವ ಬಗೆ ಹೇಗೆ? " ಅವನು ನನ್ನ ಆತ್ಮನು '' ಎಂದು ಆ (ಆತ್ಮನನ್ನು) ನಾನು ಯಾವ ಪ್ರಕಾರದಿಂದ[1] ತಿಳಿದುಕೊಳ್ಳಲಿ ? ಹೇಳು.

(ಪರಿಹಾರ) :—ಈ ವಿಷಯದಲ್ಲಿ (ಒಂದು) **ಕಥೆಯನ್ನು** ಹೇಳುತ್ತಾರೆ. ಯಾವನೋ (ಒಬ್ಬ) ಮೂಢನಾದ ಮನುಷ್ಯನು ಯಾವದೋ (ಒಂದು) ತಪ್ಪನ್ನು ಮಾಡಲಾಗಿ '' ಛೀ ನಿನ್ನ ! (ನೀನು) ಮನುಷ್ಯನಲ್ಲ" ಎಂದು ಯಾರೋ ಅಂದರಂತೆ, ಅವನು ಮೂಢನಾದ್ದರಿಂದ ತಾನು ಮನುಷ್ಯನೇ ಎಂಬುದನ್ನು ಗೊತ್ತುಪಡಿಸಿಕೊಳ್ಳುವದಕ್ಕಾಗಿ ಯಾವನೋ (ಒಬ್ಬನ) ಬಳಿಗೆ ಹೋಗಿ ' ನಾನು ಯಾರೆಂಬುದನ್ನು ನೀನು ಹೇಳು '' ಎಂದನು. ಆತನು ಅವನು ಮೂಢನೆಂಬುದನ್ನು ತಿಳಿದುಕೊಂಡು '' ಕ್ರಮಕ್ರಮವಾಗಿ ನಿನಗೆ ತಿಳಿಯಹೇಳುವೆನು '' ಎಂದನು. ಸ್ಥಾವರ

1. ಯಾವ ಪ್ರಕಾರದಿಂದ ತಿಳಿದುಕೊಂಡರೂ ಆತ್ಮನಲ್ಲಿ ಒಂದು ವಿಕಲ್ಪವನ್ನು ಮಾಡಿದಂತೆಯೇ ಆಗುವದು ; ಆದರೆ ಯಾವ ವಿಕಲ್ಪವನ್ನು ಮಾಡಿದರೂ ಆತ್ಮಸ್ವರೂಪವನ್ನು ತಿಳಿದಂತೆ ಆಗಲಿಲ್ಲ ಎನ್ನುವೆಯಲ್ಲ !_ಎಂದು ಆಕ್ಷೇಪಕನ ಆಶಯ.

(ಪ್ರಾಣಿ)ಗಳೇ ಮುಂತಾಗಿ (ಯಾವದೂ) ನೀನಲ್ಲ ಎಂದ ಬಳಿಕ, "ನೀನು ಅ ಮನುಷ್ಯನಲ್ಲ" ಎಂದು ಹೇಳಿ ಸುಮ್ಮನಾದನು. ಆತನನ್ನು ಆ ಮೂಢನು "ನೀನು ನನಗೆ ತಿಳಿವಳಿಕೆಯನ್ನುಂಟುಮಾಡುವದಕ್ಕೆ ಹೊರಟವನು ಸುಮ್ಮನಾಗಿಬಿಟ್ಟೆಯಲ್ಲ? ಏತಕ್ಕೆ ತಿಳಿಸುವದಿಲ್ಲ?" ಎಂದು ಕೇಳಿದನಂತೆ! ಇಗೊ, ನಿನ್ನ ಈ ಮಾತೂ ಅದರಂತೆಯೇ ಇರುತ್ತದೆ. "ನೀನು ಅಮನುಷ್ಯನಲ್ಲ" ಎಂದರೂ ತಾನು ಮನುಷ್ಯನೆಂದು ತಿಳಿಯಲಾರದವನು "ನೀನು ಮನುಷ್ಯನು" ಎಂದು ಹೇಳಿದರೆತಾನೆ ಹೇಗೆ ತಾನು ಮನುಷ್ಯನೆಂದು ತಿಳಿದುಕೊಂಡಾನು?[1]

ಆದ್ದರಿಂದ ಶಾಸ್ತ್ರದಲ್ಲಿ ಹೇಗೆ ತಿಳಿಸಿಕೊಟ್ಟಿದೆಯೋ ಹಾಗೆಯೇ[2] ಆತ್ಮನನ್ನು ತಿಳಿದುಕೊಳ್ಳಬೇಕೇ ಹೊರತು (ಇದಕ್ಕೆ) ಬೇರೆಯ ಪ್ರಕಾರವೂ ಇಲ್ಲ ಬೆಂಕಿಯು ಮಾತ್ರ ಸುಡಬಲ್ಲ (ಪದಾರ್ಥವನ್ನು) ಮತ್ತೆ ಯಾವದೂ ಸುಡಲಾರದಷ್ಟೆ.[3] ಆದ್ದರಿಂದಲೇ ಶಾಸ್ತ್ರವು ಆತ್ಮಸ್ವರೂಪವನ್ನು ತಿಳಿಯಿಸುವದಕ್ಕೆ ಹೊರಟದ್ದಾಗಿ 'ಅ ಮನುಷ್ಯನಲ್ಲ' ಎಂದಂತೆ "ಇದಲ್ಲ, ಇದಲ್ಲ" ಎಂದು (ಬೃ. ೨-೩-೬) ಸುಮ್ಮನಾಯಿತು. ಹೀಗೆಯೇ ಒಳಗಿಲ್ಲದ್ದೂ, ಹೊರಗಿಲ್ಲದ್ದೂ (ಆದ) ಬ್ರಹ್ಮವು ಸರ್ವವನ್ನೂ ಅನುಭವಿಸುವ ಈ ಆತ್ಮನು ಎಂಬುದೇ[4] ಉಪದೇಶವು" (ಬೃ. ೨-೫-೧೯), "ಅದೇ ನೀನು"(ಛಾ. ೬-೮-೭), "ಆದರೆ ಎಲ್ಲಿ ಇವನಿಗೆ ಎಲ್ಲವೂ ಆತ್ಮನೇ ಆಗಿರುವದೋ ಅಲ್ಲಿ ಏತರಿಂದ ಯಾರನ್ನು ನೋಡಿಯಾನು?" (ಬೃ. ೪-೫-೧೫) ಎಂದು ಮುಂತಾಗಿಯೂ ಹೇಳಿತು.

---

1. ನಿಷೇಧಮುಖವನ್ನು ಬಿಟ್ಟು ವಿಧಿಮುಖವಾಗಿ ಉಪದೇಶಿಸುವದರಲ್ಲಿ ಹೆಚ್ಚುಗಾರಿಕೆ ಏನು?

2. ಅನಾತ್ಮಾಧ್ಯಾರೋಪವನ್ನು ಅಲ್ಲಗಳೆಯುವದರಿಂದಲೇ.

3. ಇದರಂತೆ ಶಾಸ್ತ್ರವು ತಿಳಿಸಬಲ್ಲ ಆತ್ಮನನ್ನು ಮತ್ತೆ ಯಾವ ಪ್ರಮಾಣವೂ ತಿಳಿಸಲಾರದು.

4. ನಿಷೇಧರೂಪದಿಂದ ತಿಳಿಸಿದ ಬ್ರಹ್ಮವೇ ಆತ್ಮಸ್ವರೂಪವು. ಅದನ್ನು ಬೇರೆ ರೀತಿಯಿಂದ ತಿಳಿಸುವದಕ್ಕಾಗದು.

5. ಈ ವಾಕ್ಯದಲ್ಲಿ ನೀನು ಎಂಬ ಸಂಸಾರಿಸ್ವರೂಪವನ್ನು ಅಲ್ಲಗಳೆದೇ ನಿರ್ವಿಶೇಷವಾದ ಬ್ರಹ್ಮಸ್ವರೂಪವನ್ನು ತಿಳಿಸಿದೆ ಎಂದು ಭಾವ. ಮಾಂ. ಭಾ. ೭ ನೋಡಿ.

# ಎರಡನೆಯ ಅಧ್ಯಾಯ

## (ಜೀವನ ಬಂಧಮೋಕ್ಷಗಳು)

### ಮುಂದಿನ ಗ್ರಂಥದ ಅವತರಣಿಕೆ

(ಭಾಷ್ಯ)

೭೩. ಯಾವದಯಮ್ ಏವಂ ಯಥೋಕ್ತಂ ಇಮಮ್ ಆತ್ಮಾನಂ ನ ವೇತ್ತಿ, ತಾವತ್ ಅಯಂ ಬಾಹ್ಯಾನಿತ್ಯದೃಷ್ಟಿಲಕ್ಷಣಮ್ ಉಪಾಧಿಮಾತ್ಮತ್ವೇನ ಉಪೇತ್ಯ ಅವಿದ್ಯಯಾ ಉಪಾಧಿಧರ್ಮಾನ್ ಆತ್ಮನೋ ಮನ್ಯಮಾನಃ ಬ್ರಹ್ಮಾದಿಸ್ತಮ್ಬ ಪರ್ಯನ್ತೇಷು ದೇವತಿರ್ಯಙ್ನರಸ್ಥಾನೇಷು ಪುನಃ ಪುನರಾವರ್ತಮಾನಃ ಅವಿದ್ಯಾ ಕಾಮಕರ್ಮವಶಾತ್ ಸಂಸರತಿ । ಸ ಏವಂ ಸಂಸರನ್ ಉಪಾತ್ತದೇಹೇನ್ದ್ರಿಯ ಸಙ್ಘಾತಂ ತ್ಯಜತಿ । ತ್ಯಕ್ತ್ವಾ ಅನ್ಯಮ್ ಉಪಾದತ್ತೇ । ಪುನಃ ಪುನರೇವಮೇವ ನದೀಸ್ರೋತೋವತ್ ಜನ್ಮಮರಣಪ್ರಬನ್ಧಾವಿಚ್ಛೇದೇನ ವರ್ತಮಾನಃ ಕಾಭಿರವ ಸ್ಥಾಭಿರ್ವರ್ತತೇ ? ಇತ್ಯೇತಮ್ ಅರ್ಥಂ ದರ್ಶಯನ್ತೀ ಆಹ ಶ್ರುತಿರ್ವೈರಾಗ್ಯ ಹೇತೋಃ—

(ಭಾಷ್ಯಾರ್ಥ)

ಎಲ್ಲಿಯವರೆಗೆ ಈ (ಜೀವನು) ಈ ರೀತಿಯಲ್ಲಿ ಮೇಲೆ ಹೇಳಿದ ಈ ಆತ್ಮನನ್ನು ಅರಿತುಕೊಳ್ಳದೆ ಇರುವನೋ ಅಲ್ಲಿಯವರೆಗೆ ಇವನು ಹೊರಗಿನ ಅನಿತ್ಯದೃಷ್ಟಿಯೆಂಬ ಉಪಾಧಿಯನ್ನು ತಾನೆಂದಿಟ್ಟುಕೊಂಡು[1] ತಪ್ಪು ತಿಳಿವಳಿಕೆಯಿಂದ ಉಪಾಧಿಯ ಧರ್ಮ ಗಳೇ ತನ್ನವೆಂದು ಭಾವಿಸಿಕೊಳ್ಳುತ್ತಾ ಬ್ರಹ್ಮನು ಮೊದಲುಮಾಡಿ ಸ್ಥಾವರದವರೆಗಿನ ದೇವತೆಗಳು, ಪ್ರಾಣಿಗಳು, ಮನುಷ್ಯರು[2]-ಎಂಬ ಸ್ಥಾನಗಳಲ್ಲಿ ಮತ್ತೆ ಮತ್ತೆ ಬರುತ್ತಾ ಅವಿದ್ಯೆ, ಕಾಮ, ಕರ್ಮ—ಇವುಗಳಿಗೆ ವಶನಾಗಿ ತೊಳಲುತ್ತಿರುವನು. ಅವನು ಹೀಗೆ ತೊಳಲುತ್ತಾ (ಮೊದಲು) ಹೊಂದಿದ್ದ ದೇಹೇಂದ್ರಿಯಗಳ ಗುಂಪನ್ನು

---

1. ಅನಿತ್ಯದೃಷ್ಟಿಯೆಂಬ ವೃತ್ತಿಯುಳ್ಳ ಅಂತಃಕರಣಾದಿಗಳಲ್ಲಿ ನಾನು ನನ್ನದೆಂಬ ಅಭಿಮಾನವನ್ನು ತಳೆದು.

2. "ದೇವತಿರ್ಯಙ್ನರಯ" ಎಂಬ ಪಾಠಕ್ಕೆ ದೇವತೆಗಳು, ಪ್ರಾಣಿಗಳು, ಮತ್ತು ನರಕ_ಎಂಬ ಸ್ಥಾನಗಳಲ್ಲಿ ಎಂದರ್ಥ. "ದೇವತಿರ್ಯಗಾದಿ" (ದೇವತೆಗಳು, ಪ್ರಾಣಿಗಳು ಮುಂತಾದ ಸ್ಥಾನಗಳಲ್ಲಿ) ಎಂಬ ಪಾಠವೂ ಉಂಟು.

ಬಿಡುತ್ತಾನೆ; ಬಿಟ್ಟ ಮತ್ತೊಂದನ್ನು ತೆಗೆದುಕೊಳ್ಳುತ್ತಾನೆ. ಮತ್ತೆ ಮತ್ತೆ ಹೀಗೆಯೇ ನದಿಯ ಪ್ರವಾಹದಂತೆ ಹುಟ್ಟುಹೊಂದುಗಳ ಸಾಲಿಗೆ ವಿಚ್ಛಿತ್ತಿಯಿಲ್ಲದೆ ಇದ್ದುಕೊಂಡು ಯಾವ ಅವಸ್ಥೆಗಳಿಂದಿರುತ್ತಾನೆ?–ಎಂಬೀ ಅರ್ಥವನ್ನು ತೋರಿಸಿ ವೈರಾಗ್ಯವಾಗಲೆಂಬ ಕಾರಣದಿಂದ[1] (ಶ್ರುತಿ) ಹೀಗೆಂದು ಹೇಳುತ್ತಿದೆ—

**ಪುರುಷೇ ಹ ವಾ ಅಯಮಾದಿತೋ ಗರ್ಭೋ ಭವತಿ
ಯದೇತದ್ರೇತ�ः । ತದೇತತ್ಸರ್ವೇಭ್ಯೋಽಙ್ಗೇಭ್ಯಸ್ತೇಜः
ಸಮ್ಭೂತಮಾತ್ಮನ್ಯೇವಾತ್ಮಾನಂ ಬಿಭರ್ತಿ ತದ್ಯದಾ ಸ್ತ್ರಿಯಾಂ
ಸಿಞ್ಚತ್ಯಥೈನಜ್ಜನಯತಿ ತದಸ್ಯ ಪ್ರಥಮಂ ಜನ್ಮ ॥ ೧ ॥**

೧. ಮೊದಲು ಪುರುಷನಲ್ಲಿಯೇ ಇವನು ಈ ರೇತಸ್ಸಿದೆಯಲ್ಲ, (ಆ ರೂಪವಾಗಿ) ಗರ್ಭವಾಗುತ್ತಾನೆ, ಆ ಇದು ಎಲ್ಲಾ ಅಂಗಗಳಿಂದ ತೇಜಸ್ಸಾಗಿ ಉಂಟಾಗಿರುತ್ತದೆ. ತನ್ನನ್ನು ತನ್ನಲ್ಲಿಯೇ ಧರಿಸಿಕೊಂಡಿರುತ್ತಾನೆ. ಅದನ್ನು ಯಾವಾಗ ಸ್ತ್ರೀಯಲ್ಲಿ ಚಿಮುಕಿಸುತ್ತಾನೋ ಆಗ ಇದನ್ನು ಉಂಟು ಮಾಡುತ್ತಾನೆ. ಅದು ಇವನಿಗೆ ಮೊದಲನೆಯ ಜನ್ಮವು.

## ಪುರುಷನ ಮೊದಲನೆಯ ಜನ್ಮ

(ಭಾಷ್ಯ)

೭೮. ಅಯಮೇವ ಅವಿದ್ಯಾಕಾಮಕರ್ಮಾಭಿಮಾನವಾನ್ ಯಜ್ಞಾದಿ ಕರ್ಮ ಕೃತ್ವಾ ಅಸ್ಮಾಲ್ಲೋಕಾತ್ ಧೂಮಾದಿಕ್ರಮೇಣ ಚನ್ದ್ರಮಸಂ ಪ್ರಾಪ್ಯ ಕ್ಷೀಣಕರ್ಮಾ ವೃಷ್ಟ್ಯಾದಿಕ್ರಮೇಣ ಇಮಂ ಲೋಕಂ ಪ್ರಾಪ್ಯ ಅನ್ನಭೂತಃ ಪುರುಷಾಗ್ನೌ ಹುತಃ । ತಸ್ಮಿನ್ ಪುರುಷೇ ಹ ವೈ ಅಯಂ ಸಂಸಾರೀ ರಸಾದಿಕ್ರಮೇಣ ಆದಿತಃ ಪ್ರಥಮತೋ ರೇತೋರೂಪೇಣ ಗರ್ಭೋ ಭವತಿ ಇತ್ಯೇತದಾಹ–ಯದೇತತ್ ಪುರುಷೇ ರೇತಃ ತೇನ ರೂಪೇಣ ಇತಿ । ತಚ್ಚ ಏತತ್ ರೇತಃ ಅನ್ನಮಯಸ್ಯ ಪಿಣ್ಡಸ್ಯ ಸರ್ವೇಭ್ಯಃ ಅಙ್ಗೇಭ್ಯಃ ಅವಯವೇಭ್ಯಃ ರಸಾದಿಲಕ್ಷಣೇಭ್ಯಃ ತೇಜಃ ಸಾರರೂಪಂ ಶರೀರಸ್ಯ ಸಂಭೂತಂ ಪರಿನಿಷ್ಪನ್ನಂ ತತ್ ಪುರುಷಸ್ಯ ಆತ್ಮಭೂತತ್ವಾತ್ ಆತ್ಮಾ । ತಮ್ ಆತ್ಮಾನಂ ರೇತೋ

---

1. ಸಂಸಾರವನ್ನು ವರ್ಣಿಸಿರುವದು ಅದು ಸತ್ಯವೆಂದು ತಿಳಿಸುವದಕ್ಕಲ್ಲ; ಸಂಸಾರದಲ್ಲಿ ವಿರಕ್ತಿಯುಂಟಾಗಿ ಜೀವನು ಆತ್ಮಜ್ಞಾನವನ್ನು ಸಂಪಾದಿಸಿಕೊಳ್ಳಲೆಂಬ ಉದ್ದೇಶದಿಂದಲೇ. ಸೂ. ಭಾ. ೩-೧-೧ ನೋಡಿರಿ.

ರೂಪೇಣ ಗರ್ಭೀಭೂತಂ ಆತ್ಮನ್ಯೇವ ಸ್ವಶರೀರೇ ಏವ ಆತ್ಮಾನಂ ಬಿಭರ್ತಿ ಧಾರ ಯತಿ । ತತ್ ರೇತಃ ಯದಾ ಯಸ್ಮಿನ್ ಕಾಲೇ ಭಾರ್ಯಾಯಾಂ ಋತುಮತೀ ತಸ್ಯಾಂ ಯೋಷಾಗ್ನೌ ಸ್ತ್ರಿಯಾಂ ಸಿಞ್ಚತಿ ಉಪಗಚ್ಛನ್ । ಅಥ ತದಾ ಏನತ್ ಏತದ್ರೇತಃ ಆತ್ಮನೋ ಗರ್ಭರೂಪಂ ಜನಯತಿ ಪಿತಾ । ತತ್ ಅಸ್ಯ ಪುರುಷಸ್ಯ ಸ್ಥಾನಾತ್ ನಿರ್ಗ ಮನಂ ರೇತಃಸೇಕಕಾಲೇ ರೇತೋರೂಪೇಣ ಅಸ್ಯ ಸಂಸಾರಿಣಃ ಪ್ರಥಮಂ ಜನ್ಮ ಪ್ರಥಮಾವಸ್ಥಾಭಿವ್ಯಕ್ತಿಃ । ತದೇತದುಕ್ತಂ ಪುರಸ್ತಾತ್ "ಅಸಾವಾತ್ಮಾ ಅಮು ಮಾತ್ಮಾನಮ್" (ಐ. ಆ. ೨-೩-೭) ಇತ್ಯಾದಿನಾ ॥

(ಭಾಷ್ಯಾರ್ಥ)

ಈ (ಆತ್ಮನೇ)[1] ಅವಿದ್ಯೆ, ಕಾಮ, ಕರ್ಮ– ಇವುಗಳ ಅಭಿಮಾನವುಳ್ಳವನಾಗಿ[2] ಯಜ್ಞವೇ ಮುಂತಾದ ಕರ್ಮವನ್ನು ಮಾಡಿ ಈ ಲೋಕದಿಂದ ಧೂಮಾದಿಕ್ರಮದಿಂದ ಚಂದ್ರನನ್ನು ಸೇರಿ, ಕರ್ಮವು ಸವೆಯುತ್ತಲೂ ವೃಷ್ಟಿಯೇ ಮುಂತಾದ ಕ್ರಮದಿಂದ ಈ ಲೋಕವನ್ನು ಮುಟ್ಟಿ, ಅನ್ನವಾಗಿ ಪುರುಷನೆಂಬ ಅಗ್ನಿಯಲ್ಲಿ ಹೋಮವಾಗು ತ್ತಾನೆ.[3] ಆ ಪುರುಷನಲ್ಲಿಯೇ ಈ ಸಂಸಾರಿಯು ರಸವೇ ಮುಂತಾದ ಕ್ರಮದಿಂದ[4] ಮೊದಲು ಒಂದನೆಯದಾಗಿ[5] ರೇತಸ್ಸಿನರೂಪದಿಂದ ಗರ್ಭವಾಗುತ್ತಾನೆ ಎಂದು "ಪುರುಷನಲ್ಲಿ ಈ ರೇತಸ್ಸುಂಟಲ್ಲ, ಆ ರೂಪದಿಂದ (ಹುಟ್ಟುತ್ತಾನೆ)" ಎಂಬ ವಾಕ್ಯವು ಹೇಳುತ್ತದೆ. ಮತ್ತು ಈ ರೇತಸ್ಸು ಅನ್ನಮಯವಾದ ಶರೀರದ ಎಲ್ಲಾ ಅಂಗಗಳಿಂದ ಎಂದರೆ ರಸವೇ ಮುಂತಾದ ರೂಪದ ಅವಯವಗಳಿಂದ[6] ತೇಜಸ್ಸಾಗಿ ಎಂದರೆ ಶರೀರದ ಸಾರವಾಗಿ ಉಂಟಾಗಿರುತ್ತದೆ, ಏರ್ಪಟ್ಟಿರುತ್ತದೆ. ಅದು ಪುರುಷನ

---

1. ತಲೆಯನ್ನು ಸೀಳಿಕೊಂಡು ಒಳಹೊಕ್ಕ ಆತ್ಮನೇ ಅವಿದ್ಯೆಯಿಂದ ಸಂಸಾರಿಯಾಗಿ ತೋರುತ್ತಿರುವನು.

2. ಅವಿದ್ಯಾಕಾಮಕರ್ಮಗಳ ಸಂಬಂಧವು ಆತ್ಮನಿಗೆ ನಿಜವಾಗಿ ಇಲ್ಲ; ಅಭಿಮಾನ ದಿಂದಲೇ ಅವು ಅವನ ಧರ್ಮಗಳಾಗಿ ತೋರುತ್ತವೆ.

3. ಛಾ. ೫ನೆಯ ಅಧ್ಯಾಯದಲ್ಲಿ ವರ್ಣಿಸಿರುವ ಪಂಚಾಗ್ನಿವಿದ್ಯೆಯ ಸಾರವಿದು. ಹಿಂದೆ ಐ.ಆ. ೨-೧-೩ರಲ್ಲಿ ವರ್ಣಿಸಿರುವ ರೇತಃಸೃಷ್ಟಿಯನ್ನೂ ಮಂತ್ರದಲ್ಲಿ ಸೂಚಿಸಿರಬಹುದು.

4. ರಸ, ರಕ್ತ, ಮಾಂಸ, ಮೇದಸ್ಸು, ಅಸ್ಥಿ, ಮಜ್ಜಾ—ಹೀಗೆ ಒಂದರಿಂದೊಂದು ಧಾತುವಾಗಿ ಮಜ್ಜೆಯಿಂದ ರೇತಸ್ಸಾಗುತ್ತದೆ.

5. ಸ್ತ್ರೀಯರಲ್ಲಾಗುವ ಗರ್ಭಕ್ಕಿಂತ ಮೊದಲನೆಯದಾಗಿ.

6. ಧಾತುಗಳಿಂದ.

ಆತ್ಮನೇ ಆಗಿಬಿಟ್ಟಿರುವದರಿಂದ[1] (ಅವನ) ಆತ್ಮನು. ಆ ರೇತೋರೂಪದಿಂದ ಗರ್ಭವಾಗಿರುವ[2] ತನ್ನನ್ನು[3] ತನ್ನಲ್ಲಿಯೇ ಎಂದರೆ ಶರೀರದಲ್ಲಿಯೇ ಬಿಭರ್ತಿ ಧರಿಸಿಕೊಂಡಿರುತ್ತಾನೆ. ಆ ರೇತಸ್ಸನ್ನು ಯಾವಾಗ ಹೆಂಡತಿಯು ಋತುಮತಿಯಾಗುತ್ತಾಳೋ ಆಗ (ಅವಳ) ಸಂಭೋಗವನ್ನು ಮಾಡಿ ಯೋಷಾಗ್ನಿರೂಪವಾದ[4] ಸ್ತ್ರೀಯಲ್ಲಿ ಯಾವಾಗ ಚಿಮುಕಿಸುತ್ತಾನೋ ಆಗ ಆ ಕಾಲದಲ್ಲಿ ಇದನ್ನು ಎಂದರೆ ತನ್ನ ಗರ್ಭವಾಗಿರುವ ಈ ರೇತಸ್ಸನ್ನು ತಂದೆಯು ಹುಟ್ಟಿಸುತ್ತಾನೆ.[5] ಈ ಪುರುಷನೆಂಬ ಸ್ಥಾನದಿಂದ ರೇತಸ್ಸನ್ನು ಚಿಮುಕಿಸುವ ಕಾಲದಲ್ಲಿ ರೇತಸ್ಸಿನ ರೂಪದಿಂದ ಹೊರಟುಬರುವದೆಂಬ ಅದು ಈ ಸಂಸಾರಿಗೆ ಮೊದಲನೆಯ ಜನ್ಮವು, ಮೊದಲನೆಯ ಅವಸ್ಥೆಯು ತೋರಿಕೊಳ್ಳುವದು. ಇದನ್ನು ಹಿಂದೆ (ಐ. ಆ ೩-೩-೭) ರಲ್ಲಿ "ಆ ಆತ್ಮನು ಈ ಆತ್ಮನನ್ನು (ಈ ಆತ್ಮನಿಗೆ ಕೊಡುತ್ತಾನೆ)" ಎಂದು ಮುಂತಾಗಿ ಹೇಳಿರುತ್ತದೆ.[6]

## ಪುರುಷನ ಎರಡನೆಯ ಜನ್ಮ

**ತತ್ ಸ್ತ್ರಿಯಾ ಆತ್ಮಭೂಯಂ ಗಚ್ಛತಿ ಯಥಾ ಸ್ವಮಙ್ಗಂ ತಥಾ । ತಸ್ಮಾದೇನಾಂ ನ ಹಿನಸ್ತಿ ಸಾಸ್ಯೈ ತಮಾತ್ಮಾನಮತ್ರ ಗತಂ ಭಾವಯತಿ॥ ೨ ॥**

---

1. ಅವನ ಶರೀರದೊಡನೆ ಒಂದಾಗಿ ಸೇರಿಕೊಂಡುಬಿಟ್ಟಿರುವದರಿಂದ.

2. ಈ ಉಪನಿಷದ್ಭಾಗದಲ್ಲಿ ಗರ್ಭದ ವರ್ಣನೆಯಿದೆಯಷ್ಟೆ. ಇದನ್ನು ಗರ್ಭಿಣಿಯರು ಕೇಳಬಾರದೆಂದು ತಿಳಿಸುವ "ಅಪಕ್ರಾಮನ್ತು ಗರ್ಭಿಣ್ಯಃ" ಎಂಬ ವಾಕ್ಯವು ಒಂದನೆಯ ಮಂತ್ರದ ಮೊದಲಿನಲ್ಲಿದೆ; ಅಧ್ಯಾಯದ ಕೊನೆಯಲ್ಲಿ "ಯಥಾಸ್ಥಾನಂ ಗರ್ಭಿಣ್ಯಃ" ಎಂಬ ವಾಕ್ಯದಲ್ಲಿದೆ. ಭಾಷ್ಯಕಾರರು ಈ ವಾಕ್ಯಗಳಿಗೆ ವ್ಯಾಖ್ಯಾನವನ್ನು ಬರೆದಿಲ್ಲವಾದ್ದರಿಂದ ಇವು ಸಂಪ್ರದಾಯಾಗತವೈದಿಕಭಾಗಕ್ಕೆ ಸೇರಿದವೆ ?_ಎಂಬುದನ್ನು ವಿದ್ವಾಂಸರು ಪರಿಶೀಲಿಸಬೇಕಾಗಿದೆ.

3. ಭಾಷ್ಯದಲ್ಲಿ ಆತ್ಮಾನಮ್ ಎಂಬ ಮಾತು ಎರಡನೆಯಸಲ ಬಂದಿರುವದು ಶಬ್ದಸಂಬಂಧವನ್ನು ಸೂಚಿಸುವದಕ್ಕೆ.

4. ಛಾ. ೫-೭-೧ರ ಸೂಚನೆ.

5. ಹೊರಪಡಿಸುತ್ತಾನೆ.

6. ಆ ಆತ್ಮನು (ಪುರುಷದೇಹವು), ಈ ಆತ್ಮನನ್ನು (ತನ್ನ ದೇಹದ ಭಾಗವನ್ನು), ಈ ಆತ್ಮನಿಗೆ (ಸ್ತ್ರೀ ದೇಹಕ್ಕೆ). ಈ ಮಂತ್ರದಲ್ಲಿ ಪುರುಷನನ್ನೂ ಗರ್ಭವನ್ನೂ ಆತ್ಮನೆಂದೇ ಕರೆದಿದೆ. ರೇತಸ್ಸು ಪುರುಷನ ಶರೀರವೇ ಆಗುವದರಿಂದ ಅವನಿಗೆ ತೊಂದರೆಯನ್ನು ಮಾಡುವದಿಲ್ಲ_ಎಂಬುದನ್ನು ಆತ್ಮ ಎಂಬ ಮಾತು ಸೂಚಿಸುತ್ತದೆ. ಹೀಗೇ ಅದು ಸ್ತ್ರೀಗೂ ತೊಂದರೆಯನ್ನುಂಟುಮಾಡುವದಿಲ್ಲ. ಮುಂದಿನ ಮಂತ್ರವನ್ನು ನೋಡಿ.

೨. ಅದು ಹೆಂಡತಿಯ ಆತ್ಮಭಾವವನ್ನು ಆಕೆಯ ಅಂಗವು ಹೇಗೋ ಹಾಗೆ ಹೊಂದಿಕೊಳ್ಳುತ್ತದೆ. ಆದ್ದರಿಂದ ಇವಳನ್ನು ಹಿಂಸಿಸುವದಿಲ್ಲ. ಆಕೆಯು ಇಲ್ಲಿಗೆ ಬಂದು ಸೇರಿದ ಇವನ ಈ ಆತ್ಮನನ್ನು ಭಾವಿಸುತ್ತಾಳೆ.

(ಭಾಷ್ಯ)

೭೫. ತತ್ ರೇತಃ ಯಸ್ಯಾಂ ಸ್ತ್ರೀಯಾಂ ಸಕ್ತಂ ಸತ್[1] ತಸ್ಯಾ ಆತ್ಮಭೂಯಮ್ ಆತ್ಮಾವ್ಯತಿರೇಕತಾಂ ಯಥಾ ಪಿತುಃ ಏವಮ್, ಗಚ್ಛತಿ ಪ್ರಾಪ್ನೋತಿ ಯಥಾ ಸ್ವಮ್ ಅಙ್ಗಂ ಸ್ತನಾದಿ ತದ್ವದೇವ । ತಸ್ಮಾತ್ ಹೇತೋಃ ಏನಾಂ ಮಾತರಂ ಸ ಗರ್ಭಃ ನ ಹಿನಸ್ತಿ ಪಿಟಕಾದಿವತ್ । ಯಸ್ಮಾತ್ ಸ್ತನಾದಿಸ್ವಾಙ್ಗವತ್ ಆತ್ಮಭೂಯಂಗತಮ್, ತಸ್ಮಾತ್ ನ ಹಿನಸ್ತಿ ನ ಬಾಧತೇ ಇತ್ಯರ್ಥಃ । ಸಾ ಅನ್ತರ್ವತ್ನೀ ಏತಮ್ ಅಸ್ಯ ಭರ್ತುಃ ಆತ್ಮಾನಮ್ ಅತ್ರ ಆತ್ಮನ ಉದರೇ ಗತಂ ಪ್ರವಿಷ್ಟಂ ಬುದ್ಧ್ವಾ ಭಾವಯತಿ ವರ್ಧಯತಿ ಪರಿಪಾಲಯತಿ ಗರ್ಭವಿರುದ್ಧಾಶನಾದಿಪರಿಹಾರಮ್ ಅನುಕೂಲಾಶನಾದ್ಯುಪಯೋಗಂ ಚ ಕುರ್ವತೀ ॥

(ಭಾಷ್ಯಾರ್ಥ)

ಆ ರೇತಸ್ಸು ಆ ಸ್ತ್ರೀಯಲ್ಲಿ ಚಿಮುಕಿಸಲ್ಪಟ್ಟದ್ದಾಗಿ ಆಕೆಯ ಆತ್ಮಭಾವವನ್ನು ಎಂದರೆ ತಂದೆಯ ಶರೀರಕ್ಕಿಂತ ಬೇರೆಯಲ್ಲದೆ ಹೇಗಾಗಿತ್ತೋ (ಹಾಗೆಯೇ ಆಕೆಯ) ಶರೀರಸ್ವರೂಪವನ್ನು 'ಗಚ್ಛತಿ' ಹೊಂದುತ್ತದೆ. ಆಕೆಯ ಸ್ತನವೇ ಮುಂತಾದ ಅಂಗವು ಹೇಗೋ ಹಾಗೆಯೇ (ಶರೀರಸ್ವಭಾವವನ್ನು ಹೊಂದಿಕೊಳ್ಳುತ್ತದೆ). ಆದ ಕಾರಣದಿಂದ ಈ ತಾಯಿಯನ್ನು ಆ ಗರ್ಭವು ಕುರುವೇ ಮುಂತಾದದ್ದರಂತೆ ಆಕೆಗೆ ನೋವನ್ನುಂಟುಮಾಡುವದಿಲ್ಲ. ಸ್ತನವೇ ಮುಂತಾದ ತನ್ನ ಅಂಗದಂತೆ ಆಕೆಯ ಆತ್ಮವೇ ಆಗಿಬಿಟ್ಟಿರುವದಲ್ಲವೆ, ಆ ಕಾರಣದಿಂದ ನೋವನ್ನುಂಟುಮಾಡುವದಿಲ್ಲ, ಸಂಕಟಗೊಳಿಸುವದಿಲ್ಲ ಎಂದರ್ಥ. ಆ ಗರ್ಭಿಣಿಯು ಇದನ್ನು ಎಂದರೆ ಈ ಗಂಡನ ಆತ್ಮವನ್ನು, ಇಲ್ಲ ಎಂದರೆ ತನ್ನ ಉದರದಲ್ಲಿ ಸೇರಿತು ಹೊಕ್ಕಿತು ಎಂದು ತಿಳಿದುಕೊಂಡು ಭಾವಿಸುತ್ತಾಳೆ ಎಂದರೆ ಬೆಳೆಯಿಸುತ್ತಾಳೆ; ಗರ್ಭಕ್ಕೆ ಆಗದ ಊಟವೇ ಮುಂತಾದದ್ದನ್ನು ಬಿಡುವದು, ಅನುಕೂಲವಾದ ಊಟವೇ ಮುಂತಾದದ್ದನ್ನು ಉಪಯೋಗಿಸುವದು-ಇವುಗಳನ್ನು ಮಾಡುತ್ತಾ (ಅದನ್ನು) ಕಾಪಾಡುತ್ತಾಳೆ. ॥ ೨ ॥

---

1. "ಯಸ್ಯಾಂ" ಎಂಬುದರ ಬದಲು "ತಸ್ಯಾಂ" ಎಂದೋ ಸತ್ ಎಂಬುದರ ಬದಲು ಆಸೀತ್ ಎಂದೋ ಪಾಠವಿದ್ದರೆ ಸರಳವಾಗಿ ಅನ್ವಯವಾಗುತ್ತದೆ.

**ಸಾ ಭಾವಯಿತ್ರೀ ಭಾವಯಿತವ್ಯಾ ಭವತಿ । ತಂ ಸ್ತ್ರೀ ಗರ್ಭಂ ಬಿಭರ್ತಿ ಸೋಽಗ್ರ ಏವ ಕುಮಾರಂ ಜನ್ಮನೋಽಗ್ರೇಽಧಿಭಾವಯತಿ । ಸ ಯತ್ಕುಮಾರಂ ಜನ್ಮನೋಽಗ್ರೇಽಧಿಭಾವಯತ್ಯಾತ್ಮಾನಮೇವ ತದ್ ಭಾವಯತ್ಯೇತೇಷಾಂ ಲೋಕಾನಾಂ ಸನ್ತತ್ಯಾ ಏವಂ ಸನ್ತತಾ ಹೀಮೇ ಲೋಕಾಸ್ತದಸ್ಯ ದ್ವಿತೀಯಂ ಜನ್ಮ ॥ ೩ ॥**

೩. ಆ ಭಾವನೆಮಾಡುವಾಕೆಯನ್ನು ಭಾವನೆಮಾಡಬೇಕಾಗುವದು. ಹೆಂಡತಿಯು ಆ ಗರ್ಭವನ್ನು ಇಟ್ಟುಕೊಂಡಿರುತ್ತಾಳೆ. ಅವನು ಕುಮಾರನನ್ನು ಹುಟ್ಟಿನ ಮೊದಲೇ ಮುಂದಕ್ಕೆ ಭಾವನೆಮಾಡುತ್ತಾನೆ. ಅವನು ಕುಮಾರನನ್ನು ಹುಟ್ಟಿನ ಮೊದಲೇ ಮುಂದಕ್ಕೆ ಭಾವಿಸುವನಷ್ಟೆ, ಅದು ತನ್ನನ್ನೇ ಭಾವನೆಮಾಡಿಕೊಳ್ಳುತ್ತಾನೆ. (ಇದು) ಈ ಲೋಕಗಳ ಸಂತತಿಗಾಗಿ. ಈ ಲೋಕಗಳು ಹೀಗೆ ಸಂತತವಾಗಿರುತ್ತವೆಯಲ್ಲವೆ? ಅದು ಇವನ ಎರಡನೆಯ ಜನ್ಮವು.

(ಭಾಷ್ಯ)

೭೬. ಸಾ ಭಾವಯಿತ್ರೀ ವರ್ಧಯಿತ್ರೀ ಭರ್ತುರಾತ್ಮನೋ ಗರ್ಭಭೂತಸ್ಯ ಭಾವಯಿತವ್ಯಾ ವರ್ಧಯಿತವ್ಯಾ ಚ ಭರ್ತ್ರಾ ಭವತಿ । ನ ಹಿ ಉಪಕಾರಪ್ರತ್ಯುಪಕಾರಮನ್ತರೇಣ ಲೋಕೇ ಕಸ್ಯಚಿತ್ ಸಂಬನ್ಧ ಉಪಪದ್ಯತೇ । ತಂ ಗರ್ಭಂ ಸ್ತ್ರೀ ಯಥೋಕ್ತೇನ ಗರ್ಭಧಾರಣವಿಧಾನೇನ ಬಿಭರ್ತಿ ಧಾರಯತಿ ಅಗ್ರೇ ಪ್ರಾಗ್ ಜನ್ಮನಃ । ಸಃ ಪಿತಾ ಅಗ್ರೇ ಏವ ಪೂರ್ವಮೇವ ಜಾತಮಾತ್ರಂ ಕುಮಾರಂ ಜನ್ಮನಃ ಅಧಿ ಊರ್ಧ್ವಂ ಜನ್ಮನಃ ಜಾತಂ ಕುಮಾರಂ ಜಾತಕರ್ಮಾದಿನಾ ಪಿತಾ ಭಾವಯತಿ । ಸಃ ಪಿತಾ (ಯತ್ ಯಸ್ಮಾತ್ ?) ಕುಮಾರಂ ಜನ್ಮನಃ ಅಧಿ ಊರ್ಧ್ವಮ್ ಅಗ್ರೇ ಜಾತಮಾತ್ರಮೇವ ಜಾತಕರ್ಮಾದಿನಾ ಯದ್ ಭಾವಯತಿ ತತ್ ಆತ್ಮಾನಮೇವ ಭಾವಯತಿ । ಪಿತುರಾತ್ಮೈವ ಹಿ ಪುತ್ರರೂಪೇಣ ಜಾಯತೇ । ತಥಾಹ್ಯುಕ್ತಮ್ "ಪತಿರ್ಜಾಯಾಂ ಪ್ರವಿಶತಿ" (ಐ. ಬ್ರಾ. ?) ಇತ್ಯಾದಿ । ತತ್ ಕಿಮರ್ಥಮ್ ಆತ್ಮಾನಂ ಪುತ್ರರೂಪೇಣ ಜನಯಿತ್ವಾ ಭಾವಯತಿ ಇತಿ? ಉಚ್ಯತೇ । ಏಷಾಂ ಲೋಕಾನಾಂ ಸನ್ತತ್ಯೈ ಅವಿಚ್ಛೇದಾಯ ಇತ್ಯರ್ಥಃ । ವಿಚ್ಛಿದ್ಯೇರನ್ ಹಿ ಇಮೇ ಲೋಕಾಃ ಪುತ್ರೋತ್ಪಾದನಾದಿ ಯದಿ ನ ಕುರ್ಯುಃ ಕೇಚನ । ಏವಂ ಪುತ್ರೋತ್ಪಾದನಾದಿಕರ್ಮಾವಿಚ್ಛೇದೇನೈವ ಸನ್ತತಾಃ ಪ್ರಬನ್ಧರೂಪೇಣ ವರ್ತನ್ತೇ ಹಿ ಯಸ್ಮಾತ್ ಇಮೇ ಲೋಕಾಃ ತಸ್ಮಾತ್ ತದವಿಚ್ಛೇದಾಯ ತತ್ ಕರ್ತವ್ಯಮ್ ನ ಮೋಕ್ಷಾಯ ಇತ್ಯರ್ಥಃ । ತತ್ ಅಸ್ಯ ಸಂಸಾರಿಣಃ ಕುಮಾರರೂಪೇಣ ಮಾತುರುದರಾತ್ ನಿರ್ಗಮನಮ್ ತತ್ ರೇತೋರೂಪಾಪೇಕ್ಷಯಾ ದ್ವಿತೀಯಂ ಜನ್ಮ ದ್ವಿತೀಯಾವಸ್ಥಾಭಿವ್ಯಕ್ತಿಃ ॥

(ಭಾಷ್ಯಾರ್ಥ)

(ತನ್ನ) ಗರ್ಭವಾಗಿರುವ ಗಂಡನ ಆತ್ಮವನ್ನು ಭಾವನೆಮಾಡುತ್ತಿರುವ, ಬೆಳೆಯಿಸುತ್ತಿರುವ ಆಕೆಯನ್ನು ಗಂಡನು ಭಾವನೆಮಾಡಬೇಕಾಗುವದು, ಬೆಳೆಯಿಸಬೇಕಾಗುವದು.[1] ಏಕೆಂದರೆ ಉಪಕಾರ, ಪ್ರತ್ಯುಪಕಾರ–ಇವಿಲ್ಲದೆ ಲೋಕದಲ್ಲಿ ಯಾರಿಗೂ ಯಾರ ಸಂಬಂಧವೂ ಇರಲೇ ಆರದು. ಆ ಗರ್ಭವನ್ನು ಸ್ತ್ರೀಯು ಮೇಲೆ ಹೇಳಿದ ಗರ್ಭಧಾರಣಕ್ರಮದಿಂದ ಮೊದಲು,[2] ಹುಟ್ಟುವ ಮುಂಚೆ ಇಟ್ಟುಕೊಂಡಿರುತ್ತಾಳೆ, ಧರಿಸಿರುತ್ತಾಳೆ. ಆ ತಂದೆಯು ಮೊದಲೇ ಮುಂಚೆಯೇ ಎಂದರೆ ಹುಟ್ಟಿದಕೂಡಲೆ ಮಗನನ್ನು ಹುಟ್ಟಿದಂದಿನಿಂದ 'ಅಧಿ' ಮುಂದಕ್ಕೆ ಹುಟ್ಟಿದ ಆ ಮಗನನ್ನು ಜಾತಕರ್ಮವೇ ಮುಂತಾದವುಗಳಿಂದ ತಂದೆಯು[3] ಸಾಕುತ್ತಾನೆ. ಆ ತಂದೆಯು ಮಗನನ್ನು ಹುಟ್ಟಿದಂದಿನಿಂದ ಮುಂದಕ್ಕೆ, ಹುಟ್ಟಿದಮಾತ್ರದಿಂದಲೇ, ಜಾತಕರ್ಮಾದಿಗಳಿಂದ ಸಾಕುತ್ತಾನಲ್ಲವೆ?[4] ಅದು ತನ್ನನ್ನೇ ಸಾಕಿಕೊಂಡಂತೆ. ಏಕೆಂದರೆ ತಂದೆಯ ಆತ್ಮವೇ ಪುತ್ರರೂಪದಿಂದ ಹುಟ್ಟಿರುತ್ತದೆ. "ಗಂಡನು ಹೆಂಡತಿಯಲ್ಲಿ ಪ್ರವೇಶಮಾಡುತ್ತಾನೆ" (ಐ. ಬ್ರಾ. ?)[5] ಎಂದಲ್ಲವೆ, ವೇದದಲ್ಲಿ ಹೇಳಿರುತ್ತದೆ?

(ಪ್ರಶ್ನೆ):—ಹೀಗೆ ತನ್ನನ್ನೇ ಪುತ್ರರೂಪದಿಂದ ಹುಟ್ಟಿಸಿಕೊಂಡು (ಅವನು) ಏತಕ್ಕೆ ಭಾವಿಸುತ್ತಾನೆ?

(ಉತ್ತರ):—ಹೇಳುತ್ತೇವೆ, (ಕೇಳಿ), ಈ ಲೋಕಗಳ ಸಂತತಿಗಾಗಿ, ಎಂದರೆ ಕಡಿವಡೆಯದೆ ಮುಂದೆ ಸಾಗುವದಕ್ಕಾಗಿ ಎಂದರ್ಥ. (ಯಾರೂ) ಪುತ್ರೋತ್ಪಾದ

---

1. 'ರಕ್ಷಯಿತವ್ಯಾ ಭವತಿ' ಎಂಬ ಪಾಠವನ್ನು 'ಕಾಪಾಡಬೇಕಾಗುವದು' ಎಂದು ಕನ್ನಡಿಸಬೇಕು.

2. ಭಾಷ್ಯದ ರೀತಿಯಿಂದ ಉಪನಿಷತ್ತಿನ ಒಂದು 'ಅಗ್ರೇ' ಎಂಬ ಮಾತು ಹೆಂಡತಿಗೆ ಸೇರಿದ್ದು; ಇನ್ನೊಂದು ಗಂಡನು ಮಗು ಹುಟ್ಟಿದಮೇಲೆ ಮೊದಲಿನಿಂದಲೂ ಅದನ್ನು ಸಾಕುತ್ತಾನೆಂದು ತಿಳಿಸುವದಕ್ಕೆ ಬಂದಿದೆ. ಆದರೆ ವ್ಯಾಖ್ಯಾನದಲ್ಲಿ ಹುಟ್ಟುವದಕ್ಕೆ ಮೊದಲು ಸೀಮಂತಾದಿಗಳಿಂದ, ಹುಟ್ಟುವಾಗ ಜಲಪ್ರೋಕ್ಷಣಾದಿಗಳಿಂದ, ಬಳಿಕ ಜಾತಕರ್ಮಾದಿಗಳಿಂದ ಎಂದು ಅಗ್ರೇ, ಅಗ್ರೇ, ಅಧಿ–ಎಂಬ ಮಾತುಗಳ ಸ್ವಾರಸ್ಯವನ್ನು ವಿವರಿಸಿದೆ.

3. "ಮಗನನ್ನು ತಂದೆಯು" ಎಂಬ ಮಾತುಗಳು ಭಾಷ್ಯದಲ್ಲಿ ಎರಡುಸಲ ಬಂದಿರುತ್ತವೆ. ಅದು ಶಬ್ದಸಂಬಂಧವನ್ನು ತಿಳಿಸುವದಕ್ಕೆಂದು ತಿಳಿಯಬೇಕು.

4. "ಯತ್ ಯಸ್ಮಾತ್" ಎಂಬ ಭಾಷ್ಯವು ಬೇಕಿಲ್ಲ; ಯತ್-ತತ್ ಎಂಬುದಿಷ್ಟೇ ಸಾಕು.

5. ಇದು ಐ. ಬ್ರಾ ವಾಕ್ಯವೆಂದು ಮನು. ೯-೮ರ ವ್ಯಾಖ್ಯಾನದಲ್ಲಿದೆ. ಗಂಡನು ಗರ್ಭರೂಪದಿಂದ ಹೆಂಡತಿಯಲ್ಲಿ ಹುಟ್ಟುತ್ತಾನಾದ್ದರಿಂದ ಹೆಂಡತಿಗೆ ಜಾಯೆ ಎಂದು ಹೆಸರು.

ನವೇ ಮುಂತಾದದ್ದನ್ನು ಮಾಡದೆ ಇದ್ದರೆ ಈ ಲೋಕಗಳೇ ಕಡಿವಡೆದುಹೋದಾವು, ಅಲ್ಲವೆ? ಹೀಗೆ ಪುತ್ರರನ್ನು ಹಡೆಯುವದೇ ಮುಂತಾದ ಕರ್ಮಗಳನ್ನು (ಜನರು) ತಪ್ಪದೆ ಮಾಡುತ್ತಿರುವದರಿಂದಲೇ ಈ ಲೋಕಗಳು ಸಾಲಾಗಿ ನಡೆದುಕೊಂಡು ಬರುತ್ತಿವೆಯಾದಕಾರಣ ಅವುಗಳು ಕಡಿವಡೆಯದೆ ಇರುವದಕ್ಕಾಗಿ ಆ (ಕರ್ಮಗಳನ್ನು) ಮಾಡಬೇಕು, ಮೋಕ್ಷಕ್ಕಲ್ಲ.[1]

ಅದು, ಎಂದರೆ ತಾಯಿಯ ಹೊಟ್ಟೆಯಿಂದ ಹೊರಕ್ಕೆ ಮಗನ ರೂಪದಿಂದ ಬರುವದು, ಇವನಿಗೆ ಎಂದರೆ (ಈ) ಸಂಸಾರಿಗೆ ರೇತೋರೂಪಕ್ಕೆ ಹೋಲಿಸಿದರೆ ಎರಡನೆಯ ಜನ್ಮವು, ಎಂದರೆ ಎರಡನೆಯ ಅವಸ್ಥೆಯು ತೋರಿಕೊಳ್ಳುವದು.

## ಪುರುಷನ ಮೂರನೆಯ ಜನ್ಮ

**ಸೋಽಸ್ಯಾಯಮಾತ್ಮಾ ಪುಣ್ಯೇಭ್ಯಃ ಕರ್ಮಭ್ಯಃ ಪ್ರತಿಧೀಯತೇ ಅಥಾಸ್ಯಾಯಮಿತರ ಆತ್ಮಾ ಕೃತಕೃತ್ಯೋ ವಯೋಗತಃ ಪ್ರೈತಿ ಸ ಇತಃ ಪ್ರಯನ್ನೇವ ಪುನರ್ಜಾಯತೇ ತದಸ್ಯ ತೃತೀಯಂ ಜನ್ಮ ॥ ೪ ॥**

೪. ಇವನ ಆ ಈ ಆತ್ಮನು ಪುಣ್ಯಕರ್ಮಗಳಿಗೆ ಪ್ರತಿನಿಧಿಯಾಗಿರುತ್ತಾನೆ. ಇನ್ನು ಇವನ ಈ ಇನ್ನೊಬ್ಬ ಆತ್ಮನು ಕೃತಕೃತ್ಯನಾಗಿ ವಯಸ್ಸು ಕಳೆಯಲು ಹೊರಟುಹೋಗುತ್ತಾನೆ. ಅವನು ಇಲ್ಲಿಂದ ಹೊರಟವನೇ ಮತ್ತೆ ಹುಟ್ಟುತ್ತಾನೆ. ಅದು ಇವನ ಮೂರನೆಯ ಜನ್ಮವು.

(ಭಾಷ್ಯ)

೭೩. ಅಸ್ಯ ಪಿತುಃ ಸೋಽಯಂ ಪುತ್ರಾತ್ಮಾ ಪುಣ್ಯೇಭ್ಯಃ ಶಾಸ್ತ್ರೋಕ್ತೇಭ್ಯಃ ಕರ್ಮಭ್ಯಃ ಕರ್ಮನಿಷ್ಪಾದನಾರ್ಥಂ ಪ್ರತಿಧೀಯತೇ ಪಿತುಃ ಸ್ಥಾನೇ, ಪಿತ್ರಾ ಯತ್ ಕರ್ತವ್ಯಂ ತತ್ಕರಣಾಯ ಪ್ರತಿನಿಧೀಯತೇ ಇತ್ಯರ್ಥಃ । ತಥಾ ಚ ಸಂಪ್ರತ್ತಿವಿದ್ಯಾಯಾಂ ವಾಜಸನೇಯಕೇ ಪಿತ್ರಾ ಅನುಶಿಷ್ಟಃ "ಅಹಂ ಬ್ರಹ್ಮ, ಅಹಂ ಯಜ್ಞಃ" (ಬೃ. ೧-೫-೧೭) ಇತ್ಯಾದಿ ಪ್ರತಿಪದ್ಯತೇ ಇತಿ । ಅಥ ಅನನ್ತರಂ ಪುತ್ರೇ

---

1. ಪುರುಷನು ತನ್ನ ಶರೀರಾತ್ಮವು ಬೇರೆಬೇರೆಯ ರೂಪದಿಂದ ತಪ್ಪದೆ ಈ ಲೋಕದಲ್ಲಿದ್ದುಕೊಂಡಿರಬೇಕೆಂದು ಬಯಸುತ್ತಾನೆ. ಪುತ್ರಪೌತ್ರಸಂತತಿಯಿಂದಲೇ ಮನುಷ್ಯಲೋಕವನ್ನು ವಶಪಡಿಸಿಕೊಳ್ಳಬೇಕೆಂಬ ಹವಣಿಕೆಯಿಂದ ಹೀಗೆ ಮಾಡುತ್ತಾನೆ. ಈ ಸಂತಾನದಿಂದ ಮೋಕ್ಷವಾಗುವದಿಲ್ಲ ಎಂದು ಹೇಳಿರುವದು ವೈರಾಗ್ಯದಿಂದ ಜ್ಞಾನವನ್ನು ಸಂಪಾದಿಸಿಕೊಳ್ಳಬೇಕೆಂದು ತಿಳಿಸುವದಕ್ಕೆ.

ನಿವೇಶ್ಯ ಆತ್ಮನೋ ಭಾರಮ್ ಅಸ್ಯ ಪುತ್ರಸ್ಯ ಇತರಃ ಅಯಂ ಯಃ ಪಿತ್ರಾತ್ಮಾ ಕೃತ ಕೃತ್ಯಃ ಕರ್ತವ್ಯಾತ್ ಋಣತ್ರಯಾತ್ ವಿಮುಕ್ತಃ ಕೃತಕರ್ತವ್ಯ ಇತ್ಯರ್ಥಃ। ವಯೋಗತಃ ಗತವಯಾಃ ಜೀರ್ಣಃ ಸ್ ಪ್ರೈತಿ ಮ್ರಿಯತೇ। ಸಃ ಇತಃ ಅಸ್ಮಾತ್ ಪ್ರಯನ್ನೇವ ಶರೀರಂ ಪರಿತ್ಯಜನ್ನೇವ ತೃಣಜಲೂಕಾದಿವತ್ ದೇಹಾನ್ತರಮ್ ಉಪಾ ದದಾನಃ ಕರ್ಮಚಿತಮ್ ಪುನರ್ಜಾಯತೇ। ತತ್ ಅಸ್ಯ ಮೃತ್ವಾ ಪ್ರತಿಪತ್ತವ್ಯಂ ಯತ್ ತತ್ ತೃತೀಯಂ ಜನ್ಮ ॥

(ಭಾಷ್ಯಾರ್ಥ)

ಈ ತಂದೆಯು ಆ ಈ ಪುತ್ರರೂಪನಾದ ಆತ್ಮನು ಪುಣ್ಯವಾದ ಕರ್ಮಗಳಿಗಾಗಿ ಎಂದರೆ ಶಾಸ್ತ್ರೋಕ್ತವಾದ (ಕರ್ಮಗಳಿಗಾಗಿ) ಕರ್ಮಗಳನ್ನು ಮಾಡುವದಕ್ಕಾಗಿ ತಂದೆಯ ಸ್ಥಾನದಲ್ಲಿ 'ಪ್ರತಿಧೀಯತೇ' (ಪ್ರತಿನಿಧಿಯಾಗಿ ಮಾಡಲ್ಪಡುವನು.) ತಂದೆಯು ಯಾವದನ್ನು ಮಾಡಬೇಕೋ ಅದನ್ನು ಮಾಡುವದಕ್ಕೆ ಪ್ರತಿನಿಧಿಯಾಗಿ ಏರ್ಪಡುವನು ಎಂದರ್ಥ. ಆದ್ದರಿಂದಲೇ ವಾಜಸನೇಯಕದಲ್ಲಿ ಸಂಪ್ರತ್ತಿವಿದ್ಯೆ ಯನ್ನು[1] (ತಿಳಿಸುವ ಪ್ರಕರಣದಲ್ಲಿ) ತಂದೆಯ ಉಪದೇಶವನ್ನು ಪಡೆದು (ಮಗನು) "ನಾನು ಬ್ರಹ್ಮವು, ನಾನು ಯಜ್ಞವು" (ಬೃ. ೧-೫-೧೭) ಎಂದು ಮುಂತಾಗಿ ಒಪ್ಪಿ ಕೊಳ್ಳುತ್ತಾನೆ ಎಂದು (ಹೇಳಿದೆ). ಇನ್ನು (ಇದಾದ) ಬಳಿಕ ತನ್ನ ಭಾರವನ್ನು ಮಗನಮೇಲಿಟ್ಟು ಇವನ ಎಂದರೆ ಮಗನ ತಂದೆಯ ರೂಪದಲ್ಲಿರುವನಲ್ಲ, ಈ ಇನ್ನೊಬ್ಬ ಆತ್ಮನು ಕೃತಕೃತ್ಯನಾಗಿ ಎಂದರೆ ಮಾಡಬೇಕಾದ ಋಣತ್ರಯದ[2] ಬಿಡು ಗಡೆಹೊಂದಿ, ಮಾಡತಕ್ಕದ್ದನ್ನೆಲ್ಲ ಮಾಡಿದವನಾಗಿ ಎಂದರ್ಥ. ವಯೋಗತನಾಗಿ ಎಂದರೆ ಆಯುಸ್ಸು ಕಳೆಯಲು ಮುದುಕನಾಗಿ ಹೊರಟುಹೋಗುತ್ತಾನೆ, ಎಂದರೆ ಸಾಯುತ್ತಾನೆ. ಅವನು ಇಲ್ಲಿಂದ ಈ (ಲೋಕ)ದಿಂದ ಹೊರಟುಹೋದವನೇ, ಶರೀರವನ್ನು ಬಿಟ್ಟವನೇ, ಹುಲ್ಲಿಗೆ ಅಂಟಿರುವ ಹಸುರು ಹುಳುವೇ ಮುಂತಾದದ್ದರಂತೆ[3]

---

1. ತಂದೆಯು ಮಾಡದೆ ಉಳಿದಿರುವ ಕರ್ಮಗಳನ್ನು ಮಾಡುವ ಅಧಿಕಾರವನ್ನು ಮಗನಿಗೆ ಒಪ್ಪಿಸುವ ಕರ್ಮ

2. ಋಣತ್ರಯವನ್ನು ತೀರಿಸಿದರೆ ಮಾಡಬೇಕಾದದ್ದನ್ನೆಲ್ಲ ಮಾಡಿದಂತೆ.

3. ಬೃ. ೪-೪-೩ರ ಸೂಚನೆ. ಜಿಗಣೆಯ ಜಾತಿಯ ಹುಳುವು ಒಂದು ಎಲೆಯಿಂದ ಇನ್ನೊಂದು ಎಲೆಗೆ ಹೋಗುವಂತೆ ಜೀವನು ಹೋಗುತ್ತಾನೆ ಎಂಬುದು ದೃಷ್ಟಾಂತದಲ್ಲಿ ತೋರುತ್ತದೆ. ಆದರೆ ಕರ್ಮಕ್ಕನುಗುಣವಾದ ಫಲವನ್ನು ಲೋಕಾಂತರದಲ್ಲಿ ಅನುಭವ ಮಾಡಿದಬಳಿಕ ಮತ್ತೊಂದು ಜನ್ಮವನ್ನು ಪಡೆಯುವನೆಂದೇ ಅರ್ಥಮಾಡಬೇಕು ಸೂ. ಭಾ. ೩-೧-೧.

ಮತ್ತೊಂದು ಕರ್ಮದಿಂದಾದ ಶರೀರವನ್ನು ಪಡೆದು ಮತ್ತೆ ಹುಟ್ಟುತ್ತಾನೆ. ಅದು ಎಂದರೆ ಸತ್ತು ಪಡೆದುಕೊಳ್ಳುತ್ತಾನಲ್ಲ, ಅದು ಇವನಿಗೆ ಮೂರನೆಯ ಜನ್ಮವು.

(ಭಾಷ್ಯ)

೭೮. ನನು ಸಂಸರತಃ ಪಿತುಃ ಸಕಾಶಾತ್ ರೇತೋರೂಪೇಣ ಪ್ರಥಮಂ ಜನ್ಮ । ತಸ್ಯೈವ ಕುಮಾರರೂಪೇಣ ಮಾತುರ್ದ್ವಿತೀಯಂ ಜನ್ಮೋಕ್ತಮ್ । ತಸ್ಯೈವ ತೃತೀಯೇ ಜನ್ಮನಿ ವಕ್ತವ್ಯೇ ಪ್ರಯತಃ ತಸ್ಯ ಪಿತುರ್ಯಜ್ಜನ್ಮ ತತ್ ತೃತೀಯಮ್ ಇತಿ ಕಥಮುಚ್ಯತೇ ? ನೈಷ ದೋಷಃ । ಪಿತಾಪುತ್ರಯೋರೈಕಾತ್ಮ್ಯಸ್ಯ ವಿವಕ್ಷಿತತ್ವಾತ್ । ಸೋಽಪಿ ಪುತ್ರಃ ಸ್ವಪುತ್ರೇ ಭಾರಂ ನಿಧಾಯ ಇತಃ ಪ್ರಯನ್ನೇವ ಪುನರ್ಜಾಯತೇ ಯಥಾ ಪಿತಾ । ತತ್ ಅನ್ಯತ್ರೋಕ್ತಮ್ ಇತರತ್ರಾಪಿ ಉಕ್ತಮೇವ ಭವತಿ ಇತಿ ಮನ್ಯತೇ ಶ್ರುತಿಃ । ಪಿತಾಪುತ್ರಯೋರೇಕತ್ವಾತ್ ॥

(ಭಾಷ್ಯಾರ್ಥ)

(ಆಕ್ಷೇಪ) :—ಸಂಸಾರದಲ್ಲಿ ತೊಳಲುತ್ತಿರುವ (ಜೀವನಿಗೆ) ರೇತಸ್ಸಿನ ರೂಪದಿಂದ ತಂದೆಯಿಂದ (ಹೊರಕ್ಕೆ ಬರುವದು) ಮೊದಲನೆಯ ಜನ್ಮವು; ಅವನಿಗೇ ತಾಯಿಯ (ಉದರದಿಂದ) ಕುಮಾರನಾಗಿ (ಹೊರಬೀಳುವದು) ಎರಡನೆಯ ಜನ್ಮವು ಎಂದು ಹೇಳಲಾಯಿತು. ಅವನಿಗೇ ಮೂರನೆಯ ಜನ್ಮವನ್ನು ಹೇಳಬೇಕಾಗಿರುವಲ್ಲಿ ಸತ್ತ ಅವನ ತಂದೆಯ ಜನ್ಮವೆಂಬುದೇ ಮೂರನೆಯದು ಎಂದು ಹೇಳಿದ್ದು ಹೇಗೆ?

(ಪರಿಹಾರ) :—ಇದರಲ್ಲೇನೂ ತಪ್ಪಿಲ್ಲ. ಏಕೆಂದರೆ ತಂದೆಮಕ್ಕಳಿಬ್ಬರೂ ಒಬ್ಬನೇ ಆತ್ಮನೆಂದು ತಿಳಿಸುವದು (ಶ್ರುತಿಯ) ಉದ್ದೇಶವಾಗಿರುತ್ತದೆ. ಆ ಮಗನೂ ತನ್ನ ಮಗನಮೇಲೆ ಬಾರವನ್ನಿಳುಹಿ ಇಲ್ಲಿಂದ ಹೊರಟುಹೋದವನೇ ತಂದೆಯಂತೆ ಮತ್ತೆ ಹುಟ್ಟುತ್ತಾನೆ. ಆದ್ದರಿಂದ ಒಬ್ಬನಿಗೆ ಹೇಳಿದ್ದು ಇನ್ನೊಬ್ಬನಿಗೂ ಹೇಳಿದಂತೆಯೇ ಆಯಿತು ಎಂದು ಶ್ರುತಿಯ ಅಭಿಪ್ರಾಯವಿದೆ ಏಕೆಂದರೆ ತಂದೆಮಕ್ಕಳಿಬ್ಬರೂ ಒಬ್ಬನೇ (ಆತ್ಮನಾಗಿರುತ್ತಾರೆ).

## ವಾಮದೇವನ ಸಾಕ್ಷಾತ್ಕಾರ

(ಭಾಷ್ಯ)

೭೯. ಏವಂ ಸಂಸರನ್ ಅವಸ್ಥಾಭಿವ್ಯಕ್ತಿತ್ರಯೇಣ ಜನ್ಮಮರಣಪ್ರಬನ್ಧಾರೂಢಃ ಸರ್ವೋ ಲೋಕಃ ಸಂಸಾರಸಮುದ್ರೇ ನಿಪತಿತಃ ಕಥಂಚಿತ್ ಯಥಾ ಶ್ರುತ್ಯುಕ್ತಮ್ ಆತ್ಮಾನಂ ವಿಜಾನಾತಿ ಯಸ್ಯಾಂ ಕಸ್ಯಾಂಚಿತ್ ಅವಸ್ಥಾಯಾಮ್ ತದೈವ ಮುಕ್ತಸರ್ವಸಂಸಾರಬನ್ಧನಃ ಕೃತಕೃತ್ಯೋಭವತಿ–ಇತ್ಯೇತದ್ ವಸ್ತು ತತ್ ಋಷಿಣಾ ಮನ್ತ್ರೇಣಾಪಿ ಉಕ್ತಮ್ ಇತ್ಯಾಹ ॥

(ಭಾಷ್ಯಾರ್ಥ)

ಹೀಗೆ ಮೂರು ಅವಸ್ಥೆಗಳು ತೋರಿಕೊಳ್ಳುವದರಿಂದ ಸಂಸಾರದಲ್ಲಿ ತೊಳ ಲುತ್ತಾ ಹುಟ್ಟುಸಾವುಗಳ ಸಾಲನ್ನೇರಿರುವ ಪ್ರತಿಯೊಬ್ಬನೂ ಸಂಸಾರಸಮುದ್ರ ದಲ್ಲಿ ಬಿದ್ದಿರುವವನಾಗಿ ಹೇಗೋ ಶ್ರುತಿಯಲ್ಲಿ ಹೇಳಿರುವ ಆತ್ಮನನ್ನು ಯಾವಾಗ ಯಾವ ಅವಸ್ಥೆಯಲ್ಲಿಯೇ ಆಗಲಿ ತಿಳಿದುಕೊಳ್ಳುವನೋ ಆಗಲೇ ಎಲ್ಲಾ ಬಗೆಯ ಸಂಸಾರದ ಕಟ್ಟನ್ನೂ ಬಿಡಿಸಿಕೊಂಡು ಕೃತಕೃತ್ಯನಾಗುತ್ತಾನೆ. ಇದು ಹೀಗೆಂಬ ವಿಷಯವು ಋಷಿಯಿಂದ ಮಂತ್ರದಿಂದಲೂ[1] ಉಕ್ತವಾಗಿದೆ ಎಂದು (ಶ್ರುತಿ) ಹೇಳು ತ್ತದೆ:

**ತದುಕ್ತಮೃಷಿಣಾ—**

**ಗರ್ಭೇ ನು ಸನ್ನನ್ವೇಷಾಮವೇದಮಹಂ ದೇವಾನಾಂ ಜನಿಮಾನಿ ವಿಶ್ವಾ । ಶತಂ ಮಾ ಪುರ ಆಯಸೀರರಕ್ಷನ್ನಧಃ ಶ್ಯೇನೋ ಜವಸಾ ನಿರದೀಯಮಿತಿ । ಗರ್ಭ ಏವೈತಚ್ಛಯಾನೋ ವಾಮದೇವ ಏವ ಮುವಾಚ ॥ ೫ ॥**

೫. ಇದು ಋಷಿಯಿಂದ ಉಕ್ತವಾಗಿದೆ: ಗರ್ಭದಲ್ಲಿಯೇ ಇದ್ದು ಕೊಂಡೇ ಅಲ್ಲವೆ, ಈ ದೇವತೆಗಳ ಜನ್ಮಗಳೆಲ್ಲವನ್ನೂ ತಿಳಿದುಕೊಂಡೆನು? ನೂರು ಕಬ್ಬಿಣದ ಪುರಗಳು ನನ್ನನ್ನು ರಕ್ಷಿಸಿಕೊಂಡಿದ್ದವು. ಈಗ ಗಿಡಗ ನಂತೆ ವೇಗದಿಂದ ಹೊರಕ್ಕೆ ಬಂದಿರುತ್ತೇನೆ. ಗರ್ಭದಲ್ಲಿಯೇ ಇದ್ದು ಕೊಂಡೇ ವಾಮದೇವನು ಹೀಗೆಂದು ಇದನ್ನು ಹೇಳಿದನು.

(ಭಾಷ್ಯ)

ಗರ್ಭೇ ನು ಮಾತೃಗರ್ಭಾಶಯೇ ಏವ ಸನ್ । ನು ಇತಿ ವಿತರ್ಕೇ । ಅನೇಕ ಜನ್ಮಾನ್ತರಭಾವನಾಪರಿಪಾಕವಶಾತ್ ಏಷಾಂ ದೇವಾನಾಂ ವಾಗಗ್ನ್ಯಾದೀನಾಂ ಜನಿ ಮಾನಿ ಜನ್ಮಾನಿ ವಿಶ್ವಾ ವಿಶ್ವಾನಿ ಸರ್ವಾಣಿ ಅನ್ವವೇದಮ್ ಅಹಮ್ ಅಹೋ ಅನು ಬುದ್ಧವಾನ್ ಅಸ್ಮಿ ಇತ್ಯರ್ಥಃ । ಶತಮ್ ಅನೇಕಂ ಬಹ್ವ್ಯಃ ಮಾ ಮಾಂ ಪುರಃ ಆಯಸೀಃ ಆಯಸ್ಯಃ ಲೋಹಮಯ್ಯ ಇವ ಅಭೇದ್ಯಾನಿ ಶರೀರಾಣಿ ಇತ್ಯಭಿಪ್ರಾಯಃ । ಅರಕ್ಷನ್ ರಕ್ಷಿತವತ್ಯಃ ಸಂಸಾರಪಾಶನಿರ್ಗಮನಾತ್ ಅಧೋಽಥ (?) ಶ್ಯೇನ ಇವ ಜಾಲಂ ಭಿತ್ತ್ವಾ ಜವಸಾ ಆತ್ಮಜ್ಞಾನಕೃತಸಾಮರ್ಥ್ಯೇನ ನಿರದೀಯಂ ನಿರ್ಗತೋಽಸ್ಮಿ ಅಹೋ ಗರ್ಭೇ ಏವ ಶಯಾನೋ ವಾಮದೇವಃ ಋಷಿಃ ಏವಮ್ ಉವಾಚ ಏತತ್ ॥

1. ಋ. ೪-೨೭-೧.

(ಭಾಷ್ಯಾರ್ಥ)

ಗರ್ಭದಲ್ಲಿಯೇ, ತಾಯಿಯ ಗರ್ಭಾಶಯದಲ್ಲಿ ಇದ್ದುಕೊಂಡೇ ಅಲ್ಲವೆ,—(ಗರ್ಭೇ ನು ಎಂಬಲ್ಲಿ) ನು ಎಂಬುದು (ಅಲ್ಲವೆ? ಎಂದು) ವಿತರ್ಕವನ್ನು ಹೇಳುತ್ತದೆ ಹಲವು ಜನ್ಮಾಂತರಗಳಲ್ಲಿ ಭಾವನೆಯು ಪರಿಪಕ್ವವಾದ್ದರಿಂದ[1] ಈ ವಾಕ್ಕು, ಅಗ್ನಿ ಮುಂತಾದ ದೇವತೆಗಳ ಜನಿಮಾನಿ ವಿಶ್ವಾ = ವಿಶ್ವಾನಿ ಜನ್ಮಾನಿ ಜನ್ಮಗಳನ್ನೆಲ್ಲ[2] ನಾನು ತಿಳಿದುಕೊಂಡೆನು, ಆಹಾ! ಅರಿತುಕೊಂಡುಬಿಟ್ಟಿರುವೆನು ಎಂದರ್ಥ. ನೂರು ಎಂದರೆ ಅನೇಕ. ಕಬ್ಬಿಣದ—ಆಯಸೀಃ = ಆಯಸ್ಯಃ—ಎಂದರೆ ಕಬ್ಬಿಣದಿಂದ ಮಾಡಿದವುಗಳಂತೆ ಅಭೇದ್ಯವಾಗಿದ್ದ ಬಹುಪುರಗಳು ಶರೀರಗಳು ಎಂದು ಅಭಿಪ್ರಾಯ; ಸಂಸಾರದ ಬಲೆಯಿಂದ ತಪ್ಪಿಸಿಕೊಂಡು ಹೊರಕ್ಕೆ ಬಾರದಂತೆ (ಅನೇಕ ಶರೀರಗಳು) ನನ್ನನ್ನು ರಕ್ಷಿಸಿಕೊಂಡಿದ್ದವು, ತಡೆದಿಟ್ಟುಕೊಂಡಿದ್ದವು. ಅಧಃ[3] (?) ಈಗ ಗಿಡುಗನು ಬಲೆಯನ್ನು ಕಿತ್ತುಕೊಂಡು (ಬರುವಂತೆ) ವೇಗದಿಂದ ಎಂದರೆ ಆತ್ಮಜ್ಞಾನದಿಂದಾದ ಬಲದಿಂದ ಹೊರಕ್ಕೆ ಬಂದಿರುತ್ತೇನೆ, ಈಚೆಗೆ ಬಂದಿರುತ್ತೇನೆ. ಆಹಾ! ಗರ್ಭದಲ್ಲಿಯೇ ಮಲಗಿಕೊಂಡು ವಾಮದೇವ ಋಷಿಯು ಈ (ವಾಕ್ಯವನ್ನು) ಹೀಗೆ ನುಡಿದನು!

## ವಾಮದೇವನಿಗೆ ಮುಕ್ತಿ

**ಸ ಏವಂ ವಿದ್ವಾನಸ್ಮಾಚ್ಛರೀರಭೇದಾದೂರ್ಧ್ವ ಉತ್ಕ್ರಮ್ಯಾಮುಷ್ಮಿನ್ ಸ್ವರ್ಗೇ ಲೋಕೇ ಸರ್ವಾನ್ ಕಾಮಾನಾಪ್ತ್ವಾಮೃತಃ ಸಮಭವತ್ ಸಮಭವತ್ ॥ ೬ ॥**

---

1. ವಿಚಾರವು ಪಕ್ವವಾದ ಹೊರತು ಜ್ಞಾನವಿಲ್ಲ; ಮಾಡಿದ ವಿಚಾರ ಎಂದಿಗೂ ವ್ಯರ್ಥವಾಗುವುದಿಲ್ಲ, ಜನ್ಮಾಂತರದಲ್ಲಿಯಾದರೂ ಅದರಿಂದ ಜ್ಞಾನವಾಗುತ್ತದೆ.

2. ಅಗ್ನ್ಯಾದಿಗಳು ವಾಕ್ಕು ಮುಂತಾದ ರೂಪದಿಂದ ಶರೀರದಲ್ಲಿ ಸೇರಿಕೊಂಡಿರುವರೆಂದು ಹೇಳಿರುವದು ಶರೀರಧಾರಣೆಯು ಅಜ್ಞಾನದಿಂದ ಆಗಿರುತ್ತದೆ ಎಂದೂ ಆತ್ಮನು ನಿಜವಾಗಿ ಅಸಂಗನೆಂದೂ ತಿಳಿಸುವದಕ್ಕೆ. ಇದನ್ನು ವಾಮದೇವನು ತಿಳಿದುಕೊಂಡನು.

3. ಮುದ್ರಿತ ಪುಸ್ತಕಗಳಲ್ಲಿ 'ಅಧಃ' ಎಂದಿದೆ. ಭಾಷ್ಯದ ಪಙ್ಕ್ತಿಯಲ್ಲಿ "ಅಥೋಽಥ" "ಅಥೋಽಧ" ಎಂಬ ಎರಡು ಪಾಠಗಳಿವೆ. ನಿಜವಾದ ಪಾಠವು ಯಾವದೆಂಬುದು ಗೊತ್ತಾಗುವದಿಲ್ಲ. ಮುಂದಿನ ಮಂತ್ರದಲ್ಲಿ ಊರ್ಧ್ವ ಎಂಬ ಮಾತಿನ ಭಾಷ್ಯವನ್ನು ನೋಡಿ. ಆದರೆ ಋಗ್ವೇದದ ಮಂತ್ರದಲ್ಲಿ ಅಥ ಎಂಬೇ ಇದೆಯಾದ್ದರಿಂದ ಅಥ ಎಂಬುದಕ್ಕೆ ಅಥ ಈಗ ಎಂಬರ್ಥವನ್ನು ಭಾಷ್ಯದಲ್ಲಿ ಕೊಟ್ಟಿದೆಯೆಂದು ಊಹಿಸಬಹುದು.

೬. ಅವನು ಹೀಗೆ ಅರಿತುಕೊಂಡು ಈ ಶರೀರವು ಭೇದವಾಗಲು ಮೇಲಾಗಿ ಮೇಲಕ್ಕೇರಿ ಆ ಸ್ವರ್ಗಲೋಕದಲ್ಲಿ ಸರ್ವ ಕಾಮಗಳನ್ನೂ ಹೊಂದಿ ಅಮೃತನಾದನು, ಆದನು.

(ಭಾಷ್ಯ)

೮೧. ಸಃ ವಾಮದೇವಋಷಿಃ ಯಥೋಕ್ತಮ್ ಆತ್ಮಾನಮ್ ಏವಂ ವಿದ್ವಾನ್ ಅಸ್ಮಾತ್ ಶರೀರಭೇದಾತ್ ಶರೀರಸ್ಯ ಅವಿದ್ಯಾಪರಿಕಲ್ಪಿತಸ್ಯ ಆಯಸವದನಿರ್ಭೇದ್ಯಸ್ಯ ಜನನಮರಣಾದ್ಯನೇಕಾನರ್ಥಶತಾವಿಷ್ಟಶರೀರಪ್ರಬನ್ಧಸ್ಯ ಪರಮಾತ್ಮಜ್ಞಾನಾಮೃತೋಪಯೋಗಜನಿತವೀರ್ಯಕೃತಭೇದಾತ್ ಶರೀರೋತ್ಪತ್ತಿಬೀಜಾವಿದ್ಯಾದಿನಿಮಿತ್ತೋಪಮರ್ದಹೇತೋಃ ಶರೀರವಿನಾಶಾತ್ ಇತ್ಯರ್ಥಃ । ಊರ್ಧ್ವಃ ಪರಮಾತ್ಮಭೂತಃ ಸನ್ ಅಧೋಭಾವಾತ್ ಸಂಸಾರಾತ್ ಉತ್ಕ್ರಮ್ಯ ಜ್ಞಾನಾವದ್ಯೋತಿತಾಮಲಸರ್ವಾತ್ಮಭಾವಮಾಪನ್ನಃ ಸನ್ ಅಮುಷ್ಮಿನ್ ಯಥೋಕ್ತೇ ಅಜರೇ, ಅಮರೇ, ಅಮೃತೇ, ಅಭಯೇ, ಸರ್ವಜ್ಞೇ, ಅಪೂರ್ವೇ, ಅನಪರೇ, ಅನನ್ತರೇ, ಅಬಾಹ್ಯೇ, ಪ್ರಜ್ಞಾನಾಮೃತೈಕರಸೇ, ಪ್ರದೀಪವತ್ ನಿರ್ವಾಣಮ್ ಅತ್ಯಗಮತ್ (?) । ಸ್ವರ್ಗೇ ಲೋಕೇ ಸ್ವಸ್ಮಿನ್ ಆತ್ಮನಿ ಸ್ವೇ ಸ್ವರೂಪೇ ಅಮೃತಃ ಸಮಭವತ್ ಆತ್ಮಜ್ಞಾನೇನ ಪೂರ್ವಮ್ ಆಪ್ತಕಾಮತಯಾ ಜೀವನ್ನೇವ ಸರ್ವಾನ್ ಕಾಮಾನ್ ಆಪ್ತ್ವಾ ಇತ್ಯರ್ಥಃ । ದ್ವಿರ್ವಚನಂ ಸಫಲಸ್ಯ ಸೋದಾಹರಣಸ್ಯ ಆತ್ಮಜ್ಞಾನಸ್ಯ ಪರಿಸಮಾಪ್ತಿಪ್ರದರ್ಶನಾರ್ಥಮ್ ॥

(ಭಾಷ್ಯಾರ್ಥ)

ಅವನು ಎಂದರೆ (ಆ) ವಾಮದೇವ ಋಷಿಯು (ಇದುವರೆಗೆ) ಹೇಳಿರುವ[1] ಆತ್ಮನನ್ನು ಈ ರೀತಿಯಲ್ಲಿ ಅರಿತುಕೊಂಡು[2] ಈ ಶರೀರವು ಭೇದವಾಗಲು ಎಂದರೆ ಅವಿದ್ಯೆಯಿಂದ ಕಲ್ಪಿತವಾಗಿ ಕಬ್ಬಿಣದಿಂದಾದ ಪದಾರ್ಥದಂತೆ **ನಾಶಪಡಿಸದವುಗಳಾಗಿ ಹುಟ್ಟು, ಸಾವು-ಮುಂತಾದ ಅನೇಕ ನೂರಾರು ಅನರ್ಥಗಳಿಂದೊಡಗೂಡಿದ ಶರೀರಗಳ ಸಾಲು ಪರಮಾತ್ಮಜ್ಞಾನವೆಂಬ ಅಮೃತವನ್ನು ಉಪಯೋಗಿಸಿದ್ದರಿಂದುಂಟಾದ ಸಾಮರ್ಥ್ಯದಿಂದ ನಾಶವಾಗಲು** ಶರೀರವು

1. ಜಗತ್ತೆಲ್ಲವನ್ನೂ ಸೃಷ್ಟಿಸಿ ಬೈತಲೆಯನ್ನು ಸೀಳಿಕೊಂಡು ಶರೀರವನ್ನು ಹೊಕ್ಕು ಸಂಸಾರದಲ್ಲಿ ತೊಳಲುತ್ತಿದ್ದು ಗುರುವಾಕ್ಯದಿಂದ ತಾನು ಅಸಂಗನಾದ ಅದ್ವಿತೀಯಾತ್ಮನೆಂದು ತಿಳಿದುಕೊಂಡನು ಎಂದು ವರ್ಣಿಸಿರುವ.

2. ಶರೀರಾದಿಗಳಿಗಿಂತ ಬೇರೆಯಾದ ಅದ್ವಿತೀಯಾತ್ಮನೇ ನಾನು ಎಂದು ಅರಿತುಕೊಂಡು.

ಉಂಟಾಗುವದಕ್ಕೆ ಬೀಜವಾಗಿದ್ದ ಅವಿದ್ಯೆ ಎಂಬ ನಿಮಿತ್ತವು[1] ನಾಶವಾದ ಕಾರಣ ಶರೀರವು ನಾಶವಾಗಲಾಗಿ ಎಂದರ್ಥ. ಮೇಲಾಗಿ ಎಂದರೆ ಪರಮಾತ್ಮಸ್ವರೂಪನಾಗಿ ಕೆಳಗಿನ ಭಾವವಾದ[2] ಸಂಸಾರದಿಂದ ಮೇಲಕ್ಕೇರಿ ಜ್ಞಾನದಿಂದ ಬೆಳಗಲ್ಪಟ್ಟ ನಿರ್ಮಲವಾದ ಸರ್ವಾತ್ಮಭಾವವನ್ನು ಹೊಂದಿದವನಾಗಿ ಆ ಮೇಲೆ ಹೇಳಿದ ಮುಪ್ಪಿಲ್ಲದ, ಸಾವಿಲ್ಲದ, ನಾಶವಾಗದ ಸ್ವಭಾವದ, ಅಂಜಿಕೆಯಿಲ್ಲದ[3], ಸರ್ವಜ್ಞವಾದ[4], ಕಾರಣವಿಲ್ಲದ, ಕಾರ್ಯವಿಲ್ಲದ, ಒಳಗಿಲ್ಲದ, ಹೊರಗಿಲ್ಲದ[5], ಅರಿವಿನ ಅಮೃತವೆಂಬ ಒಂದೇ ರಸವಾಗಿರುವ[6] **ಸ್ವರ್ಗಲೋಕದಲ್ಲಿ** ಎಂದರೆ ತನ್ನ ಆತ್ಮನಾಗಿರುವ ತನ್ನ ಸ್ವರೂಪದಲ್ಲಿ ಅಮೃತನಾದನು, ದೊಡ್ಡ ದೀಪದಂತೆ ನಿರ್ವಾಣವನ್ನು ಹೊಂದಿದನು.[7] ಆತ್ಮಜ್ಞಾನದಿಂದ ಮೊದಲೇ ಆಪ್ತಕಾಮನಾಗಿ ಬದುಕಿರುವಾಗಲೇ ಕಾಮುಗಳೆಲ್ಲವನ್ನೂ ಹೊಂದಿ (ಅಮೃತನಾದನು)[8] ಎಂದರ್ಥ. ('ಸಮಭವತ್' ಎಂದು) ಎರಡು ಸಲ ಹೇಳಿರುವದು ಫಲಸಮೇತವಾಗಿ ಉದಾಹರಣೆಯೊಡನೆ ಹೇಳಿರುವ ಆತ್ಮಜ್ಞಾನ[9] (ವಿಚಾರವು) ಮುಗಿಯಿತೆಂದು ತಿಳಿಸುವುದಕ್ಕೆ.



1. ಅವಿದ್ಯೆಯು, ತಪ್ಪುತಿಳಿವಳಿಕೆಯು, ಶರೀರವುಂಟಾಗುವದಕ್ಕೆ ನಿಮಿತ್ತವು; ನಿಜವಾಗಿ ಶರೀರವಿರುವದಿಲ್ಲ.

2. ಊರ್ಧ್ವ ಎಂಬುದು ಪರಮಾತ್ಮಭಾವವು, ಅಧಃ ಎಂಬುದು ಸಂಸಾರಭಾವವು ಎಂದದ್ದರಿಂದ ಹಿಂದಿನ ಮಂತ್ರದ ಭಾಷ್ಯದಲ್ಲಿ "ಅಧೋಽಧಃ" ಎಂಬ ಪಾಠಕ್ಕೂ ಬೆಂಬಲವು ಬರುವಂತೆ ತೋರುತ್ತದೆ. ಆದರೆ ಅಲ್ಲಿ ಕೊಟ್ಟಿರುವ ಟಿಪ್ಪಣಿಯನ್ನು ನೋಡಿರಿ.

3. ಬೃ. ೪-೪-೨೫. 4. ಮುಂ. ೧-೧-೯.

5. ಬೃ. ೨-೫-೧೯. 6. ಬೃ. ೨-೪-೧೨.

7. "ಪ್ರದೀಪವನ್ನಿರ್ವಾಣಮತ್ಯ (ಧ್ಯ ?) ಗಮತ್", "ಪೂರ್ವಮಾಪ್ತಕಾಮತಯಾ" ಎಂಬ ಮಾತುಗಳು ಮೂಲಭಾಷ್ಯದಲ್ಲಿದ್ದವೆ? ಎಂಬುದು ಸಂಶಯಾಸ್ಪದ. ಏಕೆಂದರೆ ಮೂಲದ ಆನುಕ್ರಮದಲ್ಲಿ ಶಬ್ದಗಳನ್ನಿಟ್ಟುಕೊಂಡು ಅರ್ಥವನ್ನು ಬರೆಯುವದೇ ಭಾಷ್ಯಕಾರರ ಶೈಲಿ. (ವಾ॥) ಪಾಠದಲ್ಲಿ "ಪ್ರದೀಪವತ್......" ಎಂಬುದಿಲ್ಲ.

8. ಈಗ ಭಾಷ್ಯವಿರುವಂತೆ ಜೀವನ್ಮುಕ್ತಿಯಲ್ಲಿ ಕಾಮಾವಾಪ್ತಿ, ಆ ಬಳಿಕ ವಿದೇಹಮುಕ್ತಿ ಎಂಬ ಅರ್ಥವು ಹೊರಡುತ್ತದೆ. ಆದರೆ ಮು. ಭಾ. ೩-೨-೬ ನೋಡಿ.

9. ಅದ್ವಿತೀಯನೆಂಬ ತಿಳಿವಳಿಕೆಯೇ ಜ್ಞಾನ, ಅಮೃತತ್ವಪ್ರಾಪ್ತಿಯೇ ಫಲ, ವಾಮದೇವನ ಅನುಭವವು ಉದಾಹರಣೆ.

# ಮೂರನೆಯ ಅಧ್ಯಾಯ

## (ಪರಬ್ರಹ್ಮಸ್ವರೂಪನಿರ್ಧಾರಣ, ಫಲೋಪಸಂಹಾರ)

### ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೮೧. ಬ್ರಹ್ಮವಿದ್ಯಾಸಾಧನಕೃತಸರ್ವಾತ್ಮಭಾವಫಲಾವಾಪ್ತಿಂ ವಾಮದೇವಾದ್ಯಾಚಾರ್ಯಪರಮ್ಪರಯಾ ಶ್ರುತ್ಯಾ ಅವದ್ಯೋತ್ಯಮಾನಾಂ ಬ್ರಹ್ಮವಿತ್ಪರಿಷದಿ ಅತ್ಯನ್ತಪ್ರಸಿದ್ಧಾಮ್ ಉಪಲಭಮಾನಾ ಮುಮುಕ್ಷವೋ ಬ್ರಾಹ್ಮಣಾ ಅಧುನಾತನಾ ಬ್ರಹ್ಮಜಿಜ್ಞಾಸವಃ ಅನಿತ್ಯಾತ್ ಸಾಧ್ಯಸಾಧನಲಕ್ಷಣಾತ್ ಸಂಸಾರಾತ್ ಆ ಜೀವಭಾವಾತ್ ವ್ಯಾವಿವೃತ್ಸವೋ ವಿಚಾರಯನ್ತಃ ಅನ್ಯೋನ್ಯಂ ಪೃಚ್ಛನ್ತಿ । ಕಥಮ್ ?

(ಭಾಷ್ಯಾರ್ಥ)

ಬ್ರಹ್ಮವಿದ್ಯೆ ಎಂಬ ಸಾಧನದಿಂದ ಸರ್ವಾತ್ಮಭಾವವೆಂಬ ಫಲವು ಪ್ರಾಪ್ತಿ[1] ಯಾಗುವದೆಂಬುದು **ವಾಮದೇವನೇ** ಮೊದಲಾದ ಆಚಾರ್ಯಪರಂಪರೆಯಿಂದ ಶ್ರುತಿಯಿಂದ ಪ್ರಕಾಶಿತವಾಗಿರುವದು[2] ಬ್ರಹ್ಮವನ್ನರಿತವರ ಗುಂಪಿನಲ್ಲಿ ಅತ್ಯಂತ ಪ್ರಸಿದ್ಧವಾಗಿರುವದನ್ನು ಕಂಡು[3] ಈಗಿನ ಮುಮುಕ್ಷುಗಳೂ ಬ್ರಾಹ್ಮಣರೂ[4] ಆದ ಬ್ರಹ್ಮಜಿಜ್ಞಾಸುಗಳು ಸಾಧ್ಯಸಾಧನರೂಪವಾದ, ಅನಿತ್ಯವಾದ, ಜೀವಭಾವದವರೆ

---

1. ಸರ್ವಾತ್ಮಭಾವವು ನಿತ್ಯಪ್ರಾಪ್ತವಾಗಿದ್ದರೂ ಜ್ಞಾನದಿಂದ ಹೊಸದಾಗಿ ದೊರೆತಂತೆ ಆಗುವದರಿಂದ ಅದನ್ನು ಫಲವೆಂದೂ ಜ್ಞಾನವನ್ನು ಸಾಧನವೆಂದೂ ಉಪಚಾರಕ್ಕೆ ಕರೆದಿದೆ.

2. ವಾಮದೇವನೇ ಮೊದಲಾದ ಆಚಾರ್ಯರನ್ನು ಉದಾಹರಿಸಿ ಶ್ರುತಿಯು ಇದನ್ನು ತಿಳಿಸುತ್ತದೆ. ಬೃ. ಭಾ. ೧-೪-೧೦.

3. ಶ್ರುತ್ಯರ್ಥವು ಇದೇ ಎಂಬುದು ಅನುಭವಿಗಳಾದ ಜ್ಞಾನಿಗಳ ಗುಂಪಿನಲ್ಲಿ ಪ್ರಸಿದ್ಧವಾಗಿರುತ್ತದೆ.

4. ಬ್ರಾಹ್ಮಣರು ಜ್ಞಾನಕ್ಕೆ ವಿಶೇಷಾಧಿಕಾರಿಗಳು; ಅವರ ವರ್ಣಕ್ಕೆ ಜ್ಞಾನವೇ ಮುಖ್ಯವಾಗಿ ಹೇಳಿದೆ.

ಗಿರುವ[1] ಸಂಸಾರದಿಂದ ತಪ್ಪಿಸಿಕೊಳ್ಳುವ ಇಚ್ಛೆಯಿಂದ ವಿಚಾರಮಾಡುವವರಾಗಿ ಒಬ್ಬರನ್ನೊಬ್ಬರು ಕೇಳುತ್ತಿದಾರೆ. ಹೇಗೆಂದರೆ[2] :—

**ಕೋಽಯಮಾತ್ಮೇತಿ ವಯಮುಪಾಸ್ಮಹೇ ಕತರಃ ಸ ಆತ್ಮಾ । ಯೇನ ವಾ ಪಶ್ಯತಿ[3] ಯೇನ ವಾ ಶೃಣೋತಿ ಯೇನ ವಾ ಗನ್ಧಾನಾಜಿ ಘ್ರತಿ ಯೇನ ವಾ ವಾಚಂ ವ್ಯಾಕರೋತಿ ಯೇನ ವಾ ಸ್ವಾದು ಚಾಸ್ವಾದು ಚ ವಿಜಾನಾತಿ ॥ ೧ ॥**

೧. ಈ ಆತ್ಮನು ಯಾರೆಂದು ನಾವು ಉಪಾಸನೆಮಾಡೋಣ? ಆ ಆತ್ಮನು (ಇಬ್ಬರಲ್ಲಿ) ಯಾವನು? ಏತರಿಂದ ನೋಡುತ್ತಾನೋ, ಏತರಿಂದ ಕೇಳುತ್ತಾನೋ, ಏತರಿಂದ ವಾಸನೆಯನ್ನು ಮೂಸುತ್ತಾನೋ, ಏತರಿಂದ ಮಾತುಗಳನ್ನು ಬಿಡಿಸಿ ಆಡುತ್ತಾನೋ, ಏತರಿಂದ ಸವಿಯಾದದ್ದು ಸವಿಯಲ್ಲದ್ದು ಎಂಬುದನ್ನು ಅರಿಯುತ್ತಾನೋ

## ಆತ್ಮಸ್ವರೂಪದ ವಿಷಯಕ್ಕೆ ಸಂಶಯ

(ಭಾಷ್ಯ)

೮೨. ಯಮ್ ಆತ್ಮಾನಮ್ 'ಅಯಮ್ ಆತ್ಮಾ' ಇತಿ ಸಾಕ್ಷಾತ್ ವಯಮ್ ಉಪಾಸ್ಮಹೇ ಕಃ ಸ ಆತ್ಮಾ? ಇತಿ । ಯಂ ಚಾತ್ಮಾನಮ್ 'ಅಯಮ್ ಆತ್ಮಾ' ಇತಿ ಸಾಕ್ಷಾತ್ ಉಪಾಸೀನೋ ವಾಮದೇವಃ ಅಮೃತಃ ಸಮಭವತ್, ತಮೇವ ವಯಮಪಿ ಉಪಾಸ್ಮಹೇ । ಕೋ ನು ಖಲು ಸ ಆತ್ಮಾ? ಇತಿ । ಏವಂ ಜಿಜ್ಞಾಸಾಪೂರ್ವಮ್ ಅನ್ಯೋನ್ಯಂ ಪೃಚ್ಛತಾಮ್ ಅತಿಕ್ರಾನ್ತವಿಶೇಷವಿಷಯಶ್ರುತಿ ಸಂಸ್ಕಾರಜನಿತಾ ಸ್ಮೃತಿರಜಾಯತ । "ತಂ ಪ್ರಪದಾಭ್ಯಾಂ ಪ್ರಾಪದ್ಯತ ಬ್ರಹ್ಮೇಮಂ

1. "ಆ ಜೀವಭಾವಾತ್" ಎಂಬ ವಿಶೇಷಣವು ಭಾಷ್ಯದಲ್ಲಿ ಮತ್ತೆಲ್ಲಿಯೂ ಕಾಣುವದಿಲ್ಲ. । ಜೀವತ್ವವು ಹೋದರೇ ಸಂಸಾರವು ಪೂರ್ತಿಯಾಗಿ ತೊಲಗಿದಂತೆ ಎಂದು ಅಭಿಪ್ರಾಯವಿರಬಹುದು. ಮು.ಭಾ. ೩-೨-೧ರಲ್ಲಿ "ಅಜವಂ ಜವೀಭಾವನಮ್" ಎಂದಿರುವದನ್ನು ಇದಕ್ಕೆ ಹೋಲಿಸಿ.

2. ಕೋಽಯಮಾತ್ಮೇತಿ ಕಥಮ್? (ಆ॥) ಪಾಠದಲ್ಲಿ "ಕೋಽಯಮಾತ್ಮೇತಿ" ಎಂಬುದು "ಕಥಮ್" ಎಂಬ ಮಾತಿನ ಮುಂದೆ ಇರಬೇಕು. ವಾ॥ ಪಾಠದಲ್ಲಿ ಇದಿಲ್ಲವೇ ಇಲ್ಲ.

3. "ಯೇನ ವಾ ರೂಪಂ ಪಶ್ಯತಿ, ಯೇನ ವಾ ಶಬ್ದಂ ಶೃಣೋತಿ" ಎಂಬ ಪಾಠದಲ್ಲಿ "ರೂಪಮ್" "ಶಬ್ದಮ್" ಎಂಬ ಮಾತುಗಳು ಭಾಷ್ಯದ ಬಲದಿಂದ ಬರೆದವರು ಸೇರಿಸಿಕೊಂಡವುಗಳಂತೆ ತೋರುತ್ತದೆ.

ಪುರುಷಮ್" (ಐ. ಆ. ೨-೧-೪)। "ಸ ಏತಮೇವ ಸೀಮಾನಂ ವಿದಾರ್ಯ ಏತಯಾ ದ್ವಾರಾ ಪ್ರಾಪದ್ಯತ" (೧-೩) ಏತಮೇವ ಪುರುಷಮ್। ಅತ್ರ ದ್ವೇ ಬ್ರಹ್ಮಣೀ ಇತರೇತರಪ್ರಾತಿಕೂಲ್ಯೇನ ಪ್ರತಿಪನ್ನೇ ಇತಿ (?) ತೇ ಚಾಸ್ಯ ಪಿಣ್ಡಸ್ಯ ಆತ್ಮಭೂತೇ। ತಯೋರನ್ಯತರ ಆತ್ಮಾ ಉಪಾಸ್ಯೋ ಭವಿತುಮರ್ಹತಿ। "ಯೋಽತ್ರ ಉಪಾಸ್ಯಃ ಕತರಃ ಸ ಆತ್ಮಾ?" ಇತಿ ವಿಶೇಷನಿರ್ಧಾರಣಾರ್ಥಂ ಪುನರನ್ಯೋನ್ಯಂ ಪಪ್ರಚ್ಛುರ್ವಿಚಾರಯನ್ತಃ ॥

(ಭಾಷ್ಯಾರ್ಥ)

ಯಾವ ಆತ್ಮನನ್ನು ನಾವು 'ಇವನು ಆತ್ಮನು' ಎಂದು ನೇರಾಗಿ ಅರಿತು ಕೊಳ್ಳಬೇಕೋ ಆ ಆತ್ಮನು ಯಾರು? ಮತ್ತು ಯಾವ ಆತ್ಮನನ್ನು 'ಇವನು ಆತ್ಮನು' ಎಂದು ನೇರಾಗಿ ಅರಿತು **ವಾಮದೇವನು** ಅಮೃತನಾದನೋ[1] **ಅವನನ್ನೇ** ನಾವೂ ಅರಿತುಕೊಳ್ಳಬೇಕು.[2] ಆ ಆತ್ಮನು ಯಾವನಿರಬಹುದು? ಹೀಗೆ ತಿಳಿಯ ಬೇಕೆಂಬ ಇಚ್ಛೆಯಿಂದ ಕೂಡಿ ಒಬ್ಬರನ್ನೊಬ್ಬರು ಕೇಳುತ್ತಿರುವಲ್ಲಿ ಹಿಂದಿನ (ಇಬ್ಬರು) ವಿಶೇಷ (ಆತ್ಮರುಗಳ) ವಿಷಯವಾದ ಶ್ರುತಿಯನ್ನು (ಕೇಳಿದ್ದರ) ಸಂಸ್ಕಾರದಿಂದುಂ ಟಾದ ನೆನಪು (ಅವರಿಗೆ) ಉಂಟಾಯಿತು. "ಆ ಈ ಪುರುಷನನ್ನು[3] ಬ್ರಹ್ಮವು ಮುಂಗಾಲುಗಳ ಮೂಲಕವಾಗಿ ಹೊಕ್ಕಿತು" (ಐ. ಆ. ೨-೧-೪), "ಅವನು ಈ ನೆತ್ತಿಯನ್ನೇ ಸೀಳಿಕೊಂಡು ಈ ದ್ವಾರದಿಂದ" ಈ ಪುರುಷನನ್ನೇ[4] "ಹೊಕ್ಕನು" (೧-೩) ಇಲ್ಲಿ ಒಂದಕ್ಕೊಂದು ಪ್ರತಿಕೂಲವಾಗಿ[5] **ಎರಡು ಬ್ರಹ್ಮಗಳು** ತಿಳಿಯು

---

1. ನಮ್ಮ ಆತ್ಮನೆಂದು ನಾವು ಅರಿತುಕೊಳ್ಳಬೇಕು ಎಂದು ಶ್ರುತಿಯಲ್ಲಿ ಹೇಳಿರುವ ಆತ್ಮನು ಯಾರು? ವಾಮದೇವನು ಅರಿತುಕೊಂಡು ಮುಕ್ತನಾದನಲ್ಲ, ಆ ಆತ್ಮನು ಯಾರು? ಎಂದರ್ಥ. ಇವೆರಡೂ "ಕೋಽಯಮಾತ್ಮಾ" ಎಂಬ ವಾಕ್ಯದ ಅರ್ಥಗಳೇ.

2. ಉಪಾಸ್ಮಹೇ ಮುಂತಾದ ವಾಕ್ಯಗಳಿಗೆ ಉಪಾಸನೆಮಾಡಬೇಕು ಎಂಬುದು ಮುಂತಾಗಿ ಅರ್ಥವಲ್ಲ; ಅರಿತುಕೊಳ್ಳಬೇಕು ಎಂದು ಮುಂತಾಗಿಯೇ ಅರ್ಥ ಎಂಬುದು ಪ್ರಕರಣದಿಂದ ಗೊತ್ತಾಗುತ್ತದೆ. ಜ್ಞಾನ, ಉಪಾಸನ-ಎಂಬ ಶಬ್ದಗಳನ್ನು ಪರ್ಯಾಯವಾಗಿ ಶ್ರುತಿಯಲ್ಲಿ ಪ್ರಯೋಗಿಸಿರುತ್ತದೆ; ಸಂದರ್ಭದಿಂದ ಅರ್ಥವಿಶೇಷವನ್ನು ಗೊತ್ತುಪಡಿಸ ಬೇಕಾಗುವದು.

3. ಶರೀರವನ್ನು.

4. "ಏತಮೇವ ಪುರುಷಂ ದ್ವೇ ಬ್ರಹ್ಮಣೀ ಇತರೇತರಪ್ರಾತಿಕೂಲ್ಯೇನ ಪ್ರತಿಪನ್ನೇ" ಈ ಶರೀರವನ್ನೇ ಎರಡು ಬ್ರಹ್ಮಗಳು ಒಂದಕ್ಕೊಂದು ವಿರುದ್ಧವಾದ ಗತಿಯಿಂದ ಹೊಕ್ಕಿರು ವವು ಎಂದೂ ಅನ್ವಯಿಸಿಕೊಂಡು ಕನ್ನಡಿಸಬಹುದು. (ವಾ॥) ಪಾಠದಲ್ಲಿ 'ಅತ್ರ' ಇಲ್ಲ.

5. ಆ॥ ಪಾಠದಂತೆ ಕನ್ನಡಿಸಿದೆ. ಮುಂಗಾಲಿನಿಂದ ಹೊಕ್ಕಿರುವದು, ತಲೆಯ ಮೂಲಕ ಹೊಕ್ಕಿರುವದು; ಸೋಪಾಧಿಕವಾಗಿರುವದು, ನಿರುಪಾಧಿಕವಾಗಿರುವದು-ಹೀಗೆ ಪ್ರಾಣನೂ ಆತ್ಮನೂ ಒಬ್ಬರಿಗೊಬ್ಬರು ಪ್ರತಿಕೂಲರಾಗಿರುತ್ತಾರೆ.

ಬಂದಿರುತ್ತವೆ. ಮತ್ತು ಅವೆರಡೂ ಈ ಶರೀರದ ಆತ್ಮಗಳಾಗಿರುತ್ತವೆ. ಅವೆರಡರಲ್ಲಿ ಒಂದನ್ನು ಆತ್ಮನೆಂದು ಅರಿಯುವದು ಯುಕ್ತವಾದದ್ದು.[6] ಇಲ್ಲಿ ಅರಿತುಕೊಳ್ಳ ಬೇಕಾಗಿರುವ ಆ ಆತ್ಮನು (ಇಬ್ಬರಲ್ಲಿ) ಯಾವನು ?–ಎಂದು ಇಂಥ (ಆತ್ಮ)ನೆಂದು ಗೊತ್ತುಪಡಿಸುವದಕ್ಕಾಗಿ ವಿಚಾರಮಾಡುವವರಾಗಿ ಒಬ್ಬರನ್ನೊಬ್ಬರು ಕೇಳಿದರು.

## ಆತ್ಮಸ್ವರೂಪದ ನಿಶ್ಚಯ

(ಭಾಷ್ಯ)

೮೩. ಪುನಸ್ತೇಷಾಂ ವಿಚಾರಯತಾಂ ವಿಶೇಷವಿಚಾರಣಾಸ್ಪದವಿಷಯಾ ಮತಿ ರಭೂತ್ । ಕಥಮ್ ? ದ್ವೇ ವಸ್ತುನೀ ಅಸ್ಮಿನ್ ಪಿಣ್ಡೇ ಉಪಲಭ್ಯೇತೇ ಅನೇಕಭೇದ ಭಿನ್ನೇನ ಕರಣೇನ ಯೇನ ಉಪಲಭ್ಯತೇ, ಯಶ್ಚೈಕ ಉಪಲಭತೇ ಕರಣಾನ್ತ ರೋಪಲಬ್ಧವಿಷಯಸ್ಮೃತಿಪ್ರತಿಸನ್ಧಾನಾತ್ । ತತ್ರ ನ ತಾವತ್ ಯೇನ ಉಪ ಲಭತೇ ಸ ಆತ್ಮಾ ಭವಿತುಮರ್ಹತಿ । ಕೇನ ಪುನರುಪಲಭತೇ ಇತಿ? ಉಚ್ಯತೇ । ಯೇನ ವಾ ಚಕ್ಷುರ್ಭೂತೇನ ರೂಪಂ ಪಶ್ಯತಿ, ಯೇನ ವಾ ಶೃಣೋತಿ ಶ್ರೋತ್ರ ಭೂತೇನ ಶಬ್ದಮ್, ಯೇನ ವಾ ಘ್ರಾಣಭೂತೇನ ಗನ್ಧಾನ್ ಆಜಿಘ್ರತಿ । ಯೇನ ವಾ ವಾಕ್ಕರಣಭೂತೇನ ವಾಚಂ ನಾಮಾತ್ಮಿಕಾಂ ವ್ಯಾಕರೋತಿ 'ಗೌಃ', 'ಅಶ್ವಃ' ಇತ್ಯೇವಮಾದ್ಯಾಮ್, 'ಸಾಧು' 'ಅಸಾಧು' ಇತಿ ಚ । ಯೇನ ವಾ ಜಿಹ್ವಾ ಭೂತೇನ ಸ್ವಾದು ಚ ಅಸ್ವಾದು ಚ ವಿಜಾನಾತಿ ಇತಿ ॥

(ಭಾಷ್ಯಾರ್ಥ)

ಹೀಗೆ ವಿಚಾರಮಾಡುತ್ತಿರಲು ಅವರಿಗೆ ಮತ್ತೆ ವಿಶೇಷವಾಗಿ ವಿಚಾರಣೆಗೆ ಆಶ್ರಯವಾದ (ಪ್ರಾಣ, ಆತ್ಮ) ಇವರ ವಿಷಯಕ್ಕೆ (ಹೀಗೆಂದು ವಿಶೇಷವಾದ) ಅಭಿ ಪ್ರಾಯವುಂಟಾಯಿತು. ಹೇಗೆಂದರೆ, ಈ ಶರೀರದಲ್ಲಿ ಎರಡು ವಸ್ತುಗಳು ಕಾಣ ಬರುತ್ತವೆ. ಅನೇಕ ವಿಧವಾಗಿ ಬೇರ್ಪಡುತ್ತಾ ಯಾವದು ಅರಿಯುವದಕ್ಕೆ ಕರಣ ವಾಗಿರುವದೋ[1] (ಅದೊಂದು), ಮತ್ತು ಬೇರೊಂದು ಕರಣದಿಂದ ಅರಿತ ವಿಷಯ ವನ್ನು ನೆನಸಿಕೊಳ್ಳುವದು, ಇದೇ ಅದೆಂದು ಗುರುತಿಸುವದು–ಹೀಗೆ ಯಾವನೊಬ್ಬನೇ

---

1. ಏಕೆಂದರೆ ಒಂದು ಶರೀರಕ್ಕೆ ಇಬ್ಬರು ಆತ್ಮರೆಂಬುದು ಹೊಂದುವದಿಲ್ಲ; ವಿರುದ್ಧ ಸ್ವಭಾವದವರಿಬ್ಬರೂ ಒಂದೇ ಶರೀರದ ಆತ್ಮರು ಎಂಬುದಂತೂ ತೀರ ಹೊಂದದ ಮಾತು.

2. ಶ್ರುತಿಯಲ್ಲಿ ಇಂಥದ್ದೇ ನಿಜವಾದ ಆತ್ಮನು ಎಂದು ಬಿಡಿಸಿ ಹೇಳಿಲ್ಲವಾದರೂ 'ಯೇನ' ಎಂಬ ಮಾತು ಕರಣವನ್ನು ತಿಳಿಸುವದರಿಂದ ಅದು ಆತ್ಮನಲ್ಲವೆಂದು ತಿಳಿಸಿ ದಂತೆಯೇ ಆಯಿತು ಎಂದು ಭಾವ.

ಅರಿಯುತ್ತಿರುವನೋ[1] (ಅವನೊಬ್ಬನು). ಇವೆರಡರಲ್ಲಿ ಯಾವದರಿಂದ ಅರಿಯುತ್ತಾರೋ ಅದಂತೂ ಆತ್ಮನಾಗಲಾರದು.

(ಪ್ರಶ್ನೆ) :—ಹಾಗಾದರೆ ಯಾವದರಿಂದ ಅರಿಯುತ್ತಾರೆ?

(ಉತ್ತರ) :—ಹೇಳುತ್ತೇವೆ, (ಕೇಳಿ). (ತಾನು) ಚಕ್ಷು(ರಿಂದ್ರಿಯ)ವಾದ ಯಾವದರಿಂದ[2] ರೂಪವನ್ನು ಕಾಣುತ್ತಾನೋ, ಶ್ರೋತ್ರವಾದ ಯಾವದರಿಂದ ಸದ್ದನ್ನು ಕೇಳುತ್ತಾನೋ, ಘ್ರಾಣವಾದ ಯಾವದರಿಂದ ವಾಸನೆಗಳನ್ನು ಮೂಸುತ್ತಾನೋ, ವಾಗಿಂದ್ರಿಯವಾದ ಯಾವದರಿಂದ 'ಎತ್ತು' 'ಕುದುರೆ'–ಎಂದು ಮಾತನ್ನು ಬಿಡಿಸಿ ಆಡುತ್ತಾನೋ, ಇದು ಸರಿಯಾದ (ಶಬ್ದ) ಇದು ತಪ್ಪು (ಶಬ್ದ) ಎಂದು (ಯಾವದರಿಂದ ಅರಿಯುತ್ತಾನೋ) ಅಥವಾ ಜಿಹ್ವೆಯಾದ ಯಾವದರಿಂದ ಸವಿಯಾಗಿರುವದನ್ನೂ ಸವಿಯಲ್ಲದ್ದನ್ನೂ ಅರಿತುಕೊಳ್ಳುತ್ತಾನೋ (ಅದರಿಂದ).

## ಅರಿಯುವಾಗ ಮಾರ್ಪಡುವ ಕರಣ

**ಯದೇತದ್ ಹೃದಯಂ ಮನಶ್ಚೈತತ್ । ಸಂಜ್ಞಾನಮಾಜ್ಞಾನಂ ವಿಜ್ಞಾನಂ ಪ್ರಜ್ಞಾನಂ ಮೇಧಾ ದೃಷ್ಟಿರ್ಧೃತಿರ್ಮತಿರ್ಮನೀಷಾ ಜೂತಿಃ ಸ್ಮೃತಿಃ ಸಙ್ಕಲ್ಪಃ ಕ್ರತುರಸುಃ ಕಾಮೋ ವಶ ಇತಿ । ಸರ್ವಾಣ್ಯೇವೈತಾನಿ ಪ್ರಜ್ಞಾನಸ್ಯ ನಾಮಧೇಯಾನಿ ಭವನ್ತಿ ॥ ೨ ॥**

೨. ಅದೇ ಈ ಹೃದಯವು ಮತ್ತು ಈ ಮನಸ್ಸು. ಸಂಜ್ಞಾನ, ಆಜ್ಞಾನ, ವಿಜ್ಞಾನ, ಪ್ರಜ್ಞಾನ, ಮೇಧಾ, ದೃಷ್ಟಿ, ಧೃತಿ, ಮತಿ, ಮನೀಷಾ, ಜೂತಿ, ಸ್ಮೃತಿ, ಸಙ್ಕಲ್ಪ, ಕ್ರತು, ಅಸು, ಕಾಮ, ವಶ– ಈ ಪ್ರಕಾರದ ಇವೆಲ್ಲವೂ ಪ್ರಜ್ಞಾನದ ಹೆಸರುಗಳಾಗಿರುತ್ತವೆ.

(ಭಾಷ್ಯ)

೮೪. ಕಿಂ ಪುನಸ್ತದೇಕಮ್ ಅನೇಕಧಾ ಭಿನ್ನಂ ಕರಣಮ್ ಇತಿ? ಉಚ್ಯತೇ। ಯದುಕ್ತಂ ಪುರಸ್ತಾತ್ "ಪ್ರಜಾನಾಂ ರೇತೋ ಹೃದಯಂ ಹೃದಯಸ್ಯ ರೇತೋ ಮನಃ" (ಐ. ಆ. ೨-೧-೩), "ಮನಸಾ ಸೃಷ್ಟಾ ಆಪಶ್ಚ ವರುಣಶ್ಚ" (ಐ. ಆ. ೨-೧-೭), "ಹೃದಯಾನ್ಮನೋ ಮನಸಶ್ಚನ್ದ್ರಮಾಃ" (೧-೧) ತದೇವ ಏತದ್

1. ಅಂತಃಕರಣವು ವಿಷಯವನ್ನು ಅರಿಯುವದಕ್ಕೆ ಮಾರ್ಪಡಬೇಕು, ಆತ್ಮನು ಮಾರ್ಪಡಬೇಕಾದ ಆವಶ್ಯಕತೆ ಇಲ್ಲ.

2. ಅಂತಃಕರಣವೇ ಬೇರೆಬೇರೆಯ ಕರಣವಾಗಿ ಎಲ್ಲವನ್ನೂ ಅರಿಯುತ್ತಿರುವದೆಂದು ಭಾವ.

ಹೃದಯಂ ಮನಶ್ಚ । **ಏಕಮೇತದ್ ಅನೇಕಧಾ । ಏತೇನ ಅನ್ತಃಕರಣೇನ ಏಕೇನ ಚಕ್ಷುರ್ಭೂತೇನ** ರೂಪಂ ಪಶ್ಯತಿ, ಶ್ರೋತ್ರಭೂತೇನ ಶೃಣೋತಿ, ಘ್ರಾಣಭೂತೇನ ಜಿಘ್ರತಿ, ವಾಗ್ಭೂತೇನ ವದತಿ, ಜಿಹ್ವಾಭೂತೇನ ರಸಯತಿ, ಸ್ವೇನೈವ ವಿಕಲ್ಪನಾ ರೂಪೇಣ ಮನಸಾ ವಿಕಲ್ಪಯತಿ ಹೃದಯರೂಪೇಣ ಅಧ್ಯವಸ್ಯತಿ । ತಸ್ಮಾತ್ ಸರ್ವ ಕರಣವಿಷಯವ್ಯಾಪಾರಕಮ್ ಏಕಮಿದಂ ಕರಣಂ ಸರ್ವೋಪಲಬ್ಧ್ಯರ್ಥಮ್ ಉಪ ಲಬ್ಧುಃ । ತಥಾ ಚ **ಕೌಷೀತಕಿನಾಮ್** "ಪ್ರಜ್ಞಯಾ ವಾಚಂ ಸಮಾರುಹ್ಯ ವಾಚಾ ಸರ್ವಾಣಿ ನಾಮಾನ್ಯಾಪ್ನೋತಿ" (ಕೌ. ೩-೬) ಇತ್ಯಾದಿ । **ವಾಜಸನೇಯಕೇ ಚ** "ಮನಸಾ ಹ್ಯೇವ ಪಶ್ಯತಿ ಮನಸಾ ಶೃಣೋತಿ" (ಬೃ. ೧-೫-೩), "ಹೃದಯೇನ ಹಿ ರೂಪಾಣಿ ವಿಜಾನಾತಿ" (ಬೃ. ೩-೯-೨೦) ಇತ್ಯಾದಿ । ತಸ್ಮಾತ್ ಹೃದಯಮನೋ(?) ವಾಚ್ಯಸ್ಯ ಸರ್ವೋಪಲಬ್ಧಿಕರಣತ್ವಂ ಪ್ರಸಿದ್ಧಮ್ ॥

(ಭಾಷ್ಯಾರ್ಥ)

(ಪ್ರಶ್ನೆ):—ಹೀಗೆ (ತಾನು) ಒಂದೇ ಆಗಿದ್ದು ಬೇರೆ ಬೇರೆಯಾಗುತ್ತಿರುವ ಕರಣವಾವದೂ ಯಾವದು?

(ಉತ್ತರ) :—ಹೇಳುತ್ತೇವೆ. ಹಿಂದೆ "ಪ್ರಜೆಗಳ ರೇತಸ್ಸು ಹೃದಯವು, ಹೃದಯದ ರೇತಸ್ಸು ಮನಸ್ಸು" (ಐ. ಆ. ೨-೧-೩). "(ಅವನ) ಮನಸ್ಸಿನಿಂದ ನೀರೂ ವರುಣನೂ ಸೃಷ್ಟರಾಗಿರುತ್ತಾರೆ" (ಐ. ಆ. ೨-೧-೭), "ಹೃದಯದಿಂದ ಮನಸ್ಸೂ ಮನಸ್ಸಿನಿಂದ ಚಂದ್ರನೂ (ಹುಟ್ಟಿದರು)" (೧-೧-೪) ಎಂದು ಯಾವ ದನ್ನು ಹೇಳಿತ್ತೋ ಅದೇ ಈ ಹೃದಯವು[1] ಮತ್ತು ಈ ಮನಸ್ಸು.[2] ಅದು ಒಂದೇ (ಆಗಿದ್ದು) ಅನೇಕ ಬಗೆಯಾಗುತ್ತದೆ. ಈ ಅಂತಃಕರಣವೊಂದೇ ಚಕ್ಷುರಿಂದ್ರಿಯ ವಾಗಲು (ಇದರಿಂದ) ರೂಪವನ್ನು ನೋಡುತ್ತಾನೆ, (ಇದು) ಶ್ರೋತ್ರವಾಗಲು (ಇದ ರಿಂದ) ಕೇಳುತ್ತಾನೆ, ಘ್ರಾಣವಾಗಲು ಮೂಸುತ್ತಾನೆ, ವಾಕ್ಕಾಗಲು ಮಾತಾಡು ತ್ತಾನೆ, ಜಿಹ್ವೆಯಾಗಲು ಸವಿಯುತ್ತಾನೆ, ವಿಕಲ್ಪಿಸುವದೆಂಬ ತನ್ನದೇ ಆದ ವಿಕಲ್ಪ ನೆಯ ರೂಪದ ಮನಸ್ಸಿನಿಂದ ವಿಕಲ್ಪಿಸುತ್ತಾನೆ. ಬುದ್ಧಿಯ ರೂಪದಿಂದ[3] ನಿಶ್ಚಯಿ ಸುತ್ತಾನೆ. ಆದ್ದರಿಂದ ಎಲ್ಲಾ ಕರಣಗಳ ವಿಷಯದ ವ್ಯಾಪಾರವೂ ಉಳ್ಳದ್ದಾಗಿ ಜ್ಞಾತೃವಿಗೆ ಎಲ್ಲವನ್ನೂ ಅರಿಯುವದಕ್ಕೆ ಇದೊಂದೇ ಕರಣವು. ಆದ್ದರಿಂದಲೇ

---

1. ಉದಾಹರಿಸಿರುವ ಶ್ರುತಿಗಳಲ್ಲಿರುವ ಹೃದಯವೇ ಈ ಕರಣವು.
2. ಮನಶ್ಶಬ್ದದಿಂದ ಶ್ರುತಿಯಲ್ಲಿ ಹೇಳಿರುವದೂ ಈ ಕರಣವೇ.
3. ಹೃದಯವೆಂಬ ಮೂಲಕ್ಕೆ ಇಲ್ಲಿ ಬುದ್ಧಿಯೆಂದೇ ಅರ್ಥವೆಂಬುದು ಸ್ಪಷ್ಟ.

**ಕೌಷಿತಕಿಗಳ** (ಉಪನಿಷತ್ತಿನಲ್ಲಿ) "ಪ್ರಜ್ಞೆಯಿಂದ ವಾಕ್ಕನ್ನು ಏರಿ ನಾಮಗಳನ್ನೆಲ್ಲ ಪಡೆದುಕೊಳ್ಳುತ್ತಾನೆ, ಪ್ರಜ್ಞೆಯಿಂದ ಚಕ್ಷುಸ್ಸನ್ನೇರಿ ರೂಪಗಳನ್ನೆಲ್ಲ ಪಡೆದುಕೊಳುತ್ತಾನೆ" (ಕೌ. ೩-೬) ಎಂದು ಮುಂತಾಗಿ (ಹೇಳಿದೆ)[1], **ವಾಜಸನೇಯಕದಲ್ಲಿಯೂ** "ಮನಸ್ಸಿನಿಂದಲೇ ಕಾಣುತ್ತಾನೆ, ಮನಸ್ಸಿನಿಂದಲೇ ಕೇಳುತ್ತಾನೆ" (ಬೃ. ೧-೫-೩), "ಹೃದಯದಿಂದಲೇ ಅಲ್ಲವೆ, ರೂಪಗಳನ್ನು ಅರಿತುಕೊಳ್ಳುತ್ತಾನೆ?[2]" (ಬೃ. ೩-೯-೨೦) ಎಂದು ಮುಂತಾಗಿ (ಹೇಳಿರುತ್ತದೆ). ಆದ್ದರಿಂದ ಹೃದಯ, ಮನಸ್ಸು (ಎಂಬ ಶಬ್ದಗಳಿಂದ) ವಾಚ್ಯವಾಗಿರುವ (ಅಂತಃಕರಣವು) ಎಲ್ಲವನ್ನೂ ಅರಿಯುವದಕ್ಕೆ ಕರಣ (ವಾಗಿರುವ ದೆಂಬುದು (ಶ್ರುತಿ) ಪ್ರಸಿದ್ಧವಾಗಿರುತ್ತದೆ.

## ಕರಣರೂಪನಾದ ಪ್ರಾಣನು ಆತ್ಮನಲ್ಲ, ಅರಿಯುವವನೇ ಆತ್ಮನು

### (ಭಾಷ್ಯ)

೭೫. ತದಾತ್ಮಕಶ್ಚ ಪ್ರಾಣಃ । "ಯೋ ವೈ ಪ್ರಾಣಃ ಸಾ ಪ್ರಜ್ಞಾ ಯಾ ವೈ ಪ್ರಜ್ಞಾ ಸ ಪ್ರಾಣಃ" (ಕೌ. ೩-೪) ಇತಿ ಹಿ[3] **ಬ್ರಾಹ್ಮಣಮ್** । **ಕರಣಸಂಹತಿರೂಪಶ್ಚ ಪ್ರಾಣಃ ಇತ್ಯವೋಚಾಮ ಪ್ರಾಣಸಂವಾದಾದೌ** । ತಸ್ಮಾತ್ ಯತ್ ಪ್ರಪದಾಭ್ಯಾಂ ಪ್ರಾಪದ್ಯತ ತದ್ಬ್ರಹ್ಮ ತದುಪಲುಬ್ಧುರುಪಲಬ್ಧಿಕರಣತ್ವೇನ ಗುಣಭೂತತ್ವಾತ್ ನೈವ ತದ್ ವಸ್ತುಬ್ರಹ್ಮ ಉಪಾಸ್ಯ[4] ಆತ್ಮಾ ಭವಿತುಮರ್ಹತಿ । ಪಾರಿಶೇಷ್ಯಾತ್ ಯಸ್ಯ ಉಪಲುಬ್ಧುರುಪಲಬ್ಧ್ಯರ್ಥಾ ಏತಸ್ಯ ಹೃದಯಮನೋರೂಪಸ್ಯ[5] ಕರಣಸ್ಯ ವೃತ್ತಯೋ ವಕ್ಷ್ಯಮಾಣಾಃ ಸ ಉಪಲಬ್ಧಾ ಉಪಾಸ್ಯ ಆತ್ಮಾ ನೋ[6] ಭವಿತುಮರ್ಹತಿ ಇತಿ ನಿಶ್ಚಯಂ ಕೃತವನ್ತಃ ॥

---

1. ಪ್ರಜ್ಞೆ ಎಂದರೆ ಅಂತಃಕರಣವು, ಎಲ್ಲಾ ಕರಣಗಳ ವ್ಯಾಪಾರವನ್ನೂ ಮಾಡುತ್ತದೆ ಎಂದು ಭಾವ.

2. ಇಲ್ಲಿ ಮನಸ್ಸು, ಹೃದಯ ಎಂದು ಹೇಳಿರುವದು ಎಲ್ಲಾ ಕರಣಗಳ ವ್ಯಾಪಾರವನ್ನೂ ಮಾಡುವ ಅಂತಃಕರಣವೇ.

3. ವಾ॥ ಪಾಠ.

4. 'ಉಪಾಸ್ಯಾತ್ಮಾ' ಎಂಬ ಪಾಠಕ್ಕಿಂತ ಇದೇ ಮೇಲೆಂಬುದು ಮುಂದಿನ ಭಾಷ್ಯದಿಂದ ಗೊತ್ತಾಗುತ್ತದೆ.

5. 'ಹೃದಯಸ್ಯ ಮನೋರೂಪಸ್ಯ' ಎಂಬ ಅ॥ ಪಾಠಕ್ಕಿಂತ ಈ ವಾ॥ ಪಾಠವು ಉತ್ತಮ.

6. 'ನೋಽಸ್ಮಾಕಮ್' ಎಂಬ ಪಾಠದಲ್ಲಿ ಅಸ್ಮಾಕಮ್ ಹೆಚ್ಚು.

(ಭಾಷ್ಯಾರ್ಥ)

ಪ್ರಾಣನು ಈ (ಅಂತಃಕರಣದ) ಸ್ವರೂಪನಾಗಿರುತ್ತಾನೆ. "ಯಾವದು ಪ್ರಾಣವೆಂದು ಪ್ರಸಿದ್ಧವಾಗಿರುವದೋ ಅದೇ ಪ್ರಜ್ಞೆ, ಯಾವದು ಪ್ರಜ್ಞೆಯೆಂದು ಪ್ರಸಿದ್ಧವಾಗಿರುವದೋ ಅದೇ ಪ್ರಾಣವು" (ಕೌ. ೩-೪) ಎಂದಲ್ಲವೆ, ಬ್ರಾಹ್ಮಣದಲ್ಲಿದೆ ?[1] ಪ್ರಾಣನೆಂದರೆ ಕರಣಗಳು ಒಂದುಗೂಡಿದ ಗುಂಪೇ ಎಂದು ಪ್ರಾಣಸಂವಾದದ ಮೊದಲಿನಲ್ಲಿ ಹೇಳಿರುತ್ತೇವೆ.[2] ಆದ್ದರಿಂದ ಯಾವುದು ಮುಂಗಾಲುಗಳಿಂದ[3] ಹೊಕ್ಕಿರುವದೋ ಆ ಬ್ರಹ್ಮವು ತನ್ನ ಜ್ಞಾತೃವಿಗೆ ಅರಿಯುವ ಕರಣವಾಗಿರುವದರಿಂದ (ಅದಕ್ಕೆ) ಅಧೀನವಾಗಿರುತ್ತದೆಯಾಗಿ ಅದು ನಿಜವಾದ ಬ್ರಹ್ಮವಲ್ಲವೇ ಅಲ್ಲ, ಆತ್ಮನೆಂದು ಅರಿಯುವದಕ್ಕೆ ತಕ್ಕದ್ದಲ್ಲ.[4] ಪರಿಶೇಷನ್ಯಾಯದಿಂದ[5] ಯಾವ ಜ್ಞಾತೃವಿಗೆ ಅರಿಯುವದಕ್ಕೆ ಸಾಧನವಾಗಿ ಈ ಹೃದಯಮನೋರೂಪವಾದ ಕರಣದ ಮುಂದೆ ಹೇಳುವ ವೃತ್ತಿಗಳು (ಉಂಟಾಗುವವೋ)[6] ಆ ಜ್ಞಾತೃವೇ ನಮ್ಮ ಆತ್ಮನೆಂದು ಅರಿಯುವದಕ್ಕೆ ತಕ್ಕವನಾಗಿರಬೇಕು ಎಂದು ನಿಶ್ಚಯಮಾಡಿದರು.

## ಅಂತಃಕರಣದ ವೃತ್ತಿಗಳು

(ಭಾಷ್ಯ)

೮೬. ತದನ್ತಃಕರಣೋಪಾಧಿಸ್ಥಸ್ಯ ಉಪಲಬ್ಧುಃ ಪ್ರಜ್ಞಾನರೂಪಸ್ಯ ಬ್ರಹ್ಮಣ ಉಪಲಬ್ಧ್ಯರ್ಥಾ ಯಾ ಅನ್ತಃಕರಣವೃತ್ತಯೋ ಬಾಹ್ಯಾನ್ತರ್ವರ್ತಿವಿಷಯವಿಷಯಾಃ

---

1. ಜ್ಞಾನಕ್ರಿಯಾಶಕ್ತಿಗಳೆರಡೂ ಪ್ರಾಣನಿಗೇ ಸೇರಿದವೆನ್ನುವದಕ್ಕೆ ಈ ವಚನವನ್ನು ಪ್ರಮಾಣವಾಗಿ ಕೊಟ್ಟಿದೆ. "ಯಾ ವೈ ಪ್ರಜ್ಞಾ," ಎಂಬುದು ನಿರ್ಣಯಸಾಗರದ ಪುಸ್ತಕದಲ್ಲಿ "ಯಾವಾ ಪ್ರಾಜ್ಞಾ" ಎಂದು ಅಚ್ಚಾಗಿದೆ.

2. ಹಿಂದಿನ ಆರಣ್ಯಕಭಾಗಕ್ಕೂ ಆಚಾರ್ಯರು ಭಾಷ್ಯವನ್ನು ಬರೆದಿರಬಹುದೆಂಬುದಕ್ಕೆ ಇದೊಂದು ಸೂಚನೆ. ಪೀಠಿಕೆಯನ್ನು ನೋಡಿರಿ.

3. 'ಪದ್ಭ್ಯಾಮ್' ಎಂಬ ಪಾಠಕ್ಕಿಂತ 'ಪ್ರಪದಾಭ್ಯಾಮ್' ಎಂಬ ಪಾಠವೇ ಇಲ್ಲಿಗೆ ಒಪ್ಪುತ್ತದೆ.

4. ಏಕೆಂದರೆ ಆತ್ಮನು ಮತ್ತೊಂದಕ್ಕೆ ಕರಣವಾಗಿರಲಾರನು.

5. ಮಿಕ್ಕದ್ದು ಯಾವದೂ ಅಲ್ಲದಿದ್ದರೆ ಕೊನೆಗೆ ಉಳಿಯುವದೇ ಅದಾಗಿರಬೇಕು ಎಂಬ ಯುಕ್ತಿಯಿಂದ.

6. ವೃತ್ತಿಗಳು ಪರಾರ್ಥವಾಗಿರುತ್ತವೆ, ಸ್ವಾರ್ಥವಾಗಿರುವ ಆತ್ಮನ ಅರಿವೆಂಬ ಪ್ರಯೋಜನಕ್ಕಾಗಿರುತ್ತವೆ. ಆದ್ದರಿಂದ ಅರಿಯುವವನು ಆತ್ಮನು, ಕರಣವಾಗಿರುವ ವೃತ್ತಿಸಮೂಹವು ಆತ್ಮನಲ್ಲ ಎಂದಭಿಪ್ರಾಯ.

ತಾ ಇಮಾ ಉಚ್ಯನ್ತೇ । ಸಂಜ್ಞಾನಂ ಸಂಜ್ಞಪ್ತಿಃ ಚೇತನಭಾವಃ । ಆಜ್ಞಾನಮ್ ಆಜ್ಞಪ್ತಿಃ ಈಶ್ವರಭಾವಃ । ವಿಜ್ಞಾನಂ ಕಲಾದಿಪರಿಜ್ಞಾನಮ್ । ಪ್ರಜ್ಞಾನಂ ಪ್ರಜ್ಞಪ್ತಿಃ ಪ್ರಜ್ಞತಾ । ಮೇಧಾ ಗ್ರನ್ಥಧಾರಣಸಾಮರ್ಥ್ಯಮ್ । ದೃಷ್ಟಿಃ ಇನ್ದ್ರಿಯದ್ವಾರಾ ಸರ್ವವಿಷಯೋಪಲಬ್ಧಿಃ । ಧೃತಿಃ ಧಾರಣಮ್ ಅವಸನ್ನಾನಾಂ ಶರೀರೇನ್ದ್ರಿಯಾಣಾಂ ಯಯಾ ಉತ್ತಮ್ಭನಂ ಭವತಿ । ಧೃತ್ಯಾ ಶರೀರಮ್ ಉದ್ವಹನ್ತಿ ಇತಿ ಹಿ ವದನ್ತಿ । ಮತಿಃ ಮನನಮ್ । ಮನೀಷಾ ತತ್ರ ಸ್ವಾತನ್ತ್ರ್ಯಮ್ । ಜೂತಿಃ ಚೇತಸೋ ರುಜಾದಿದುಃಖಿತ್ವಭಾವಃ । ಸ್ಮೃತಿಃ ಸ್ಮರಣಮ್ । ಸಙ್ಕಲ್ಪಃ ಶುಕ್ಲಕೃಷ್ಣಾದಿಭಾವೇನ ಸಙ್ಕಲ್ಪನಂ ರೂಪಾದೀನಾಮ್ । ಕ್ರತುಃ ಅಧ್ಯವಸಾಯಃ । ಅಸುಃ ಪ್ರಾಣನಾದಿ ಜೀವನಕ್ರಿಯಾನಿಮಿತ್ತಾ ವೃತ್ತಿಃ । ಕಾಮಃ ಅಸನ್ನಿಹಿತವಿಷಯಾಕಾಙ್ಕ್ಷಾ ತೃಷ್ಣಾ । ವಶಃ ಸ್ತ್ರೀವ್ಯತಿಕರಾದ್ಯಭಿಲಾಷಃ । ಇತಿ ಏವಮಾದ್ಯಾ ಅನ್ತಃಕರಣವೃತ್ತಯಃ ಪ್ರಜ್ಞಪ್ತಿಮಾತ್ರಸ್ಯ ಉಪಲಬ್ಧುಃ ಉಪಲಬ್ಧ್ಯರ್ಥತ್ವಾತ್ ಶುದ್ಧಪ್ರಜ್ಞಾನರೂಪಸ್ಯ ಬ್ರಹ್ಮಣ ಉಪಾಧಿಭೂತಾಃ । ತದುಪಾಧಿಜನಿತಗುಣನಾಮಧೇಯಾನಿ ಸಂಜ್ಞಾನಾದೀನಿ ಭವನ್ತಿ, ನ ತು ಸಾಕ್ಷಾತ್ । ತಥಾ ಚೋಕ್ತಮ್ "ಪ್ರಾಣನ್ನೇವ ಪ್ರಾಣೋ ನಾಮ ಭವತಿ" (ಬೃ. ೧-೪-೭) ಇತ್ಯಾದಿ ॥

(ಭಾಷ್ಯಾರ್ಥ)

ಆ ಅಂತಃಕರಣವೆಂಬ ಉಪಾಧಿಯಲ್ಲಿರುವ ಜ್ಞಾತೃವಿನ ಪ್ರಜ್ಞಾನರೂಪವಾದ ಬ್ರಹ್ಮಕ್ಕೆ ಹೊರಗೂ ಒಳಗೂ ಇರುವ ವಿಷಯಗಳನ್ನು ಅರಿಯುವ ಪ್ರಯೋಜನಕ್ಕಾಗಿ ಯಾವ ಅಂತಃಕರಣವೃತ್ತಿಗಳುಂಟೋ ಅಂಥ ಈ (ವೃತ್ತಿಗಳನ್ನು ಈಗ) ಹೇಳಲಾಗುತ್ತದೆ. **ಸಂಜ್ಞಾನ** ಎಂದರೆ ಎಚ್ಚರವು, ಚೇತನನೆನಿಸಿರುವದು. **ಆಜ್ಞಾನ** ಎಂದರೆ ಅಪ್ಪಣೆಮಾಡುವದು, ಆಳುವದು. **ವಿಜ್ಞಾನ** ಎಂದರೆ ಕಲೆಯೇ ಮುಂತಾದದ್ದನ್ನು ತಿಳಿದಿರುವದು. **ಪ್ರಜ್ಞಾನ** ಎಂದರ ಚೆನ್ನಾಗಿ ಅರಿಯುವಿಕೆ, ತಿಳಿವಳಿಕೆ. **ಮೇಧಾ** ಎಂದರೆ ಗ್ರಂಥವನ್ನು ನೆನಪಿನಲ್ಲಿ ಇಟ್ಟುಕೊಳ್ಳುವ ಶಕ್ತಿ. **ದೃಷ್ಟಿ** ಎಂದರೆ ಇಂದ್ರಿಯಗಳ ಮೂಲಕವಾಗಿ ವಿಷಯಗಳೆಲ್ಲವನ್ನೂ ಅರಿಯುವದು. **ಧೃತಿ** ಎಂದರೆ ಎತ್ತಿಹಿಡಿಯುವದು; ಅದರಿಂದ ಕುಸಿದುಬಿದ್ದ ಶರೀರವನ್ನೂ ಇಂದ್ರಿಯಗಳನ್ನೂ ಮೇಲಕ್ಕೆತ್ತಿ ನಿಲ್ಲಿಸಿಕೊಳ್ಳುವದಕ್ಕಾಗುತ್ತದೆ. "ಧೃತಿಯಿಂದ ಶರೀರವನ್ನು ಧರಿಸಿರುತ್ತಾರೆ" ಎಂದಲ್ಲವೆ, ಹೇಳುತ್ತಾರೆ? **ಮತಿ** ಎಂದರೆ ಯೋಚಿಸುವದು. **ಮನೀಷಾ**

---

1. ಕಲ್ಲು, ಮಣ್ಣು—ಮುಂತಾದವಕ್ಕೆ ಇಲ್ಲದ, ಚೇತನವೆಂಬ ಹೆಸರು ಸಲ್ಲುವದಕ್ಕೆ ಬೇಕಾದ, ಅರಿವು.

ಎಂದರೆ ಆ (ಯೋಚಿಸುವದರಲ್ಲಿ) ಸ್ವಾತಂತ್ರ್ಯವು.[1] **ಜೂತಿ** ಎಂದರೆ ಚಿತ್ತವು. ರೋಗಾದಿಗಳಿಂದ ನರಳುತ್ತಿರುವದು. **ಸ್ಮೃತಿ** ಎಂದರೆ ನೆನಪು. **ಸಂಕಲ್ಪ** ಎಂದರೆ ಬಿಳುಪು, ಕಪ್ಪು ಎಂದು ಮುಂತಾಗಿ ರೂಪಾದಿಗಳನ್ನು ಕಲ್ಪಿಸುವದು. **ಕ್ರತು** ಎಂದರೆ ನಿಶ್ಚಯಮಾಡುವದು, **ಅಸು** ಎಂದರೆ ಉಸಿರಾಡುವದೇ ಮುಂತಾದ ಬದುಕಿರುವದೆಂಬ ಕ್ರಿಯೆಗೆ ಕಾರಣವಾಗಿರುವ ವೃತ್ತಿ. **ಕಾಮ** ಎಂದರೆ ಎದುರಿಗಿಲ್ಲದ ವಿಷಯವನ್ನು ಅಪೇಕ್ಷಿಸುವದು, ಬಯಕೆ. **ವಶ** ಎಂದರೆ ಹೆಂಗಸಿನಲ್ಲಿ ಬೆರೆಯುವದೇ ಮುಂತಾದದ್ದರ ಅಭಿಲಾಷೆ. 'ಇತಿ' ಎಂದರೆ ಇವೇ ಮುಂತಾದ ಅಂತಃಕರಣದ ವೃತ್ತಿಗಳು ಬರಿಯ ಅರಿವಾಗಿರುವ ಅರಿಯುವಾತನ ಅರಿವಿನ ಪ್ರಯೋಜನಕ್ಕಾಗಿರುವದರಿಂದ ಬರಿಯ ಅರಿವಿನ ರೂಪವಾಗಿರುವ ಬ್ರಹ್ಮಕ್ಕೆ ಉಪಾಧಿಯಾಗಿರುತ್ತವೆ. ಆ ಉಪಾಧಿಯಿಂದಾದ ಗುಣದ ಹೆಸರುಗಳಾಗಿರುವ ಸಂಜ್ಞಾನವೇ ಮುಂತಾದ ಇವುಗಳೆಲ್ಲವೂ ಬರಿಯ ಅರಿವೇ ಆಗಿರುವ ಪ್ರಜ್ಞಾನಕ್ಕೆ ಹೆಸರುಗಳಾಗಿರುತ್ತವೆಯೇ ಹೊರತು ನೇರಾಗಿ (ಅದರ ಹೆಸರುಗಳ)ಲ್ಲ.[2] ಆದ್ದರಿಂದಲೇ (ಶ್ರುತಿಯಲ್ಲಿ) "ಉಸಿರಾಡುವದರಿಂದಲೇ ಪ್ರಾಣನೆಂದಾಗುತ್ತಾನೆ" (ಬೃ. ೧-೪-೭) ಎಂದು ಮುಂತಾಗಿ ಹೇಳಿರುತ್ತದೆ.[3]

## ಎಲ್ಲರಲ್ಲಿರುವ ಪ್ರಜ್ಞಾನವೇ ಬ್ರಹ್ಮವು

**ಏಷ ಬ್ರಹ್ಮೈಷ ಇನ್ದ್ರ ಏಷ ಪ್ರಜಾಪತಿರೇತೇ ಸರ್ವೇ ದೇವಾ ಇಮಾನಿ ಪಞ್ಚ ಮಹಾಭೂತಾನಿ ಪೃಥಿವೀ ವಾಯುರಾಕಾಶ ಆಪೋ ಜ್ಯೋತೀಂಷೀತ್ಯೇತಾನೀಮಾನಿ ಚ ಕ್ಷುದ್ರಮಿಶ್ರಾಣೀವ । ಬೀಜಾನೀತರಾಣಿ ಚೇತರಾಣಿ ಚಾಣ್ಡಜಾನಿ ಚ ಜಾರುಜಾನಿ ಚ ಸ್ವೇದಜಾನಿ ಚೋದ್ಭಿಜ್ಜಾನಿ ಚಾಶ್ವಾ ಗಾವಃ ಪುರುಷಾ ಹಸ್ತಿನೋ ಯತ್ಕಿಂಚೇದಂ ಪ್ರಾಣಿ ಜಙ್ಗಮಂ ಚ ಪತತ್ರಿ ಚ ಯಚ್ಚ ಸ್ಥಾವರಮ್ । ಸರ್ವಂ ತತ್ ಪ್ರಜ್ಞಾನೇತ್ರಂ ಪ್ರಜ್ಞಾನೇ ಪ್ರತಿಷ್ಠಿತಂ ಪ್ರಜ್ಞಾನೇತ್ರೋ ಲೋಕಃ ಪ್ರಜ್ಞಾ ಪ್ರತಿಷ್ಠಾ ಪ್ರಜ್ಞಾನಂ ಬ್ರಹ್ಮ ॥ ೩ ॥**

---

1. ಮನಸ್ಸಿಗೆ ಹೊಳೆಯುವದೆಲ್ಲ ಮತಿ; ಸ್ವತಂತ್ರವಾಗಿ ವಿಚಾರಮಾಡುವ ಶಕ್ತಿಯು ಮನೀಷೆ; ಆ ಶಕ್ತಿಯಿರುವವರನ್ನು 'ಮನೀಷಿಗಳು' ಎನ್ನುವರು.

2. ವೃತ್ತಿಗಳಿಗೆ ಹೆಸರಾಗಿರುವ ಈ ಶಬ್ದಗಳು ಲಕ್ಷಣೆಯಿಂದ ವೃತ್ತಿಯೆಂಬ ಉಪಾಧಿಯುಳ್ಳ ಚೇತನವನ್ನೂ ತಿಳಿಸುತ್ತವೆ ಎಂದರ್ಥ.

3. ಆಯಾ ಉಪಾಧಿಯಿಂದ ಆಯಾ ಹೆಸರು ಆತ್ಮನಿಗೆ ಬರುತ್ತದೆ ಎಂಬುದು ಶ್ರುತಿಯ ಅಭಿಪ್ರಾಯ.

೩. ಈತನೇ ಬ್ರಹ್ಮವು, ಈತನೇ ಇಂದ್ರನು, ಈತನೇ ಪ್ರಜಾಪತಿ, ಈ ದೇವತೆಗಳೆಲ್ಲರೂ ಈತನೇ. ಮತ್ತು ಪೃಥಿವಿ, ವಾಯು, ಆಕಾಶ, ಅಪ್ಪು, ಜ್ಯೋತಿ–ಎಂಬೀ ಪಂಚಮಹಾಭೂತಗಳೂ (ಈತನೇ). ಮತ್ತು ಕ್ಷುದ್ರಮಿಶ್ರಗಳಾಗಿರುವ ಈ ಬೇರೆಬೇರೆಯ ಬೀಜಗಳು ಎಂದರೆ ಅಂಡಜಗಳು, ಜಾರುಜಗಳು, ಸ್ವೇದಜಗಳು, ಉದ್ಭಿಜ್ಜಗಳು, ಕುದುರೆಗಳು, ಎತ್ತುಗಳು, ಮನುಷ್ಯರು, ಆನೆಗಳು; ಜಂಗಮವೂ ಪತತ್ರಿಯೂ ಈ ಪ್ರಾಣಿ ಎಂಬುದೆಲ್ಲ ಯಾವದೋ, ಮತ್ತು ಸ್ಥಾವರವಾದದ್ದು ಯಾವದೋ ಅದೆಲ್ಲವೂ ಪ್ರಜ್ಞಾನೇತ್ರವು, ಪ್ರಜ್ಞಾನದಲ್ಲಿ ನಿಂತಿರುವದು; ಲೋಕವು ಪ್ರಜ್ಞಾನೇತ್ರವು, ಪ್ರಜ್ಞೆಯೇ ಒತ್ತಾಸೆ, ಪ್ರಜ್ಞಾನವು ಬ್ರಹ್ಮವು.

(ಭಾಷ್ಯ)

೮೭. ಸ ಏಷಃ ಪ್ರಜ್ಞಾನರೂಪ ಆತ್ಮಾ ಬ್ರಹ್ಮ ಅಪರಂ ಸರ್ವಶರೀರಸ್ಥಃ[1] ಪ್ರಾಣಃ ಪ್ರಜ್ಞಾತ್ಮಾ । ಅನ್ತಃಕರಣೋಪಾಧಿಷು ಅನುಪ್ರವಿಷ್ಟಃ, ಜಲಭೇದಗತ ಸೂರ್ಯಪ್ರತಿಬಿಮ್ಬವತ್ ಹಿರಣ್ಯಗರ್ಭಃ ಪ್ರಾಣಃ ಪ್ರಜ್ಞಾತ್ಮಾ । ಏಷ ಏವ ಇನ್ದ್ರಃ ಗುಣಾತ್, ದೇವರಾಜೋ ವಾ । ಏಷ ಪ್ರಜಾಪತಿಃ ಯಃ ಪ್ರಥಮಜಃ ಶರೀರೀ । ಯತೋ ಮುಖಾದಿನಿರ್ಭೇದದ್ವಾರೇಣ ಅಗ್ನ್ಯಾದಯೋ ಲೋಕಪಾಲಾ ಜಾತಾಃ ಸ ಪ್ರಜಾಪತಿರೇಷ ಏವ । ಯೇಽಪಿ ಏತೇ ಅಗ್ನ್ಯಾದಯಃ ಸರ್ವೇ ದೇವಾ ಏಷ ಏವ । ಇಮಾನಿ ಚ ಸರ್ವಶರೀರೋಪಾದಾನಭೂತಾನಿ ಪಞ್ಚ ಪೃಥಿವ್ಯಾದೀನಿ ಮಹಾಭೂತಾನಿ ಅನ್ನಾನ್ನಾದಲಕ್ಷಣಾನಿ ಏತಾನಿ । ಕಿಂ ಚ ಇಮಾನಿ ಚ ಕ್ಷುದ್ರಮಿಶ್ರಾಣಿ ಕ್ಷುದ್ರೈರಲ್ಪಕೈರ್ಮಿಶ್ರಾಣಿ । ಇವಶಬ್ದೋಽನರ್ಥಕಃ । ಸರ್ಪಾದೀನಿ ಬೀಜಾನಿ ಕಾರಣಾನಿ ಇತರಾಣಿ ಚ ಇತರಾಣಿ ಚ ದ್ವೈರಾಶ್ಯೇನ ನಿರ್ದಿಶ್ಯಮಾನಾನಿ । ಕಾನಿ ತಾನಿ ಉಚ್ಯನ್ತೇ । ಅಣ್ಡಜಾನಿ ಪಕ್ಷ್ಯಾದೀನಿ ಜಾರುಜಾನಿ ಜರಾಯುಜಾನಿ ಮನುಷ್ಯಾದೀನಿ ಸ್ವೇದಜಾನಿ ಯೂಕಾದೀನಿ ಉದ್ಭಿಜ್ಜಾನಿ ಚ ವೃಕ್ಷಾದೀನಿ । ಅಶ್ವಾಃ ಗಾವಃ ಪುರುಷಾಃ ಹಸ್ತಿನಃ ಅನ್ಯಚ್ಚ ಯತ್ಕಿಂಚೇದಂ ಪ್ರಾಣಿಜಾತಮ್ । ಕಿಂ ತತ್ ? ಜಙ್ಗಮಂ ಯತ್ ಚಲತಿ, ಪದ್ಭ್ಯಾಂ ಗಚ್ಛತಿ । ಯಚ್ಚ ಪತತ್ರಿ ಆಕಾಶೇನ ಪತನಶೀಲಮ್ । ಯಚ್ಚ ಸ್ಥಾವರಮ್ ಅಚಲಮ್ । ಸರ್ವಂ ತತ್ ಅಶೇಷತಃ ಪ್ರಜ್ಞಾನೇತ್ರಮ್ । ಪ್ರಜ್ಞಪ್ತಿಃ ಪ್ರಜ್ಞಾ ತಚ್ಚ ಬ್ರಹ್ಮೈವ । ನೀಯತೇ ಅನೇನ ಇತಿ ನೇತ್ರಮ್ । ಪ್ರಜ್ಞಾನೇತ್ರಂ ಯಸ್ಯ ತದಿದಂ ಪ್ರಜ್ಞಾನೇತ್ರಮ್ । ಪ್ರಜ್ಞಾನೇ

1. ವಾ॥ ಪಾಠ.

ಬ್ರಹ್ಮಣಿ ಉತ್ಪತ್ತಿಸ್ಥಿತಿಲಯಕಾಲೇಷು ಪ್ರತಿಷ್ಠಿತಮ್, ಪ್ರಜ್ಞಾಶ್ರಯಮ್ ಇತ್ಯರ್ಥಃ। ಪ್ರಜ್ಞಾನೇತ್ರೋ ಲೋಕಃ ಪೂರ್ವವತ್ । ಪ್ರಜ್ಞಾಚಕ್ಷುರ್ವಾ ಸರ್ವ ಏವ ಲೋಕಃ। ಪ್ರಜ್ಞಾ ಪ್ರತಿಷ್ಠಾ ಸರ್ವಸ್ಯ ಜಗತಃ । ತಸ್ಮಾತ್ ಪ್ರಜ್ಞಾನಂ ಬ್ರಹ್ಮ ॥

(ಭಾಷ್ಯಾರ್ಥ)

ಆ ಈ ಪ್ರಜ್ಞಾನರೂಪನಾದ ಆತ್ಮನೇ ಬ್ರಹ್ಮವು, ಅಪರ (ಬ್ರಹ್ಮವು), ಎಲ್ಲಾ ಶರೀರಗಳಲ್ಲಿಯೂ[1] ಇರುವ ಪ್ರಜ್ಞಾತ್ಮನಾದ ಪ್ರಾಣನು[2]; ಬೇರೆಬೇರೆಯ ಜಲಗಳಲ್ಲಿರುವ ಸೂರ್ಯಪ್ರತಿಬಿಂಬದಂತೆ ಅಂತಃಕರಣಗಳೆಂಬ ಉಪಾಧಿಗಳಲ್ಲಿ ಒಳಹೊಕ್ಕಿರುವ[3] ಹಿರಣ್ಯಗರ್ಭಸು ಪ್ರಜ್ಞಾತ್ಮನಾದ ಪ್ರಾಣನು.[4] ಈತನೇ ಗುಣದಿಂದ[5] ಇಂದ್ರನು, ಅಥವಾ ದೇವತೆಗಳ ಒಡೆಯನು.[6]. ಈತನೇ ಮೊದಲು ಹುಟ್ಟಿದ[7] ಪ್ರಜಾಪತಿಯು ; (ಪ್ರಜಾಪತಿಯಿಂದಲೇ) ಮುಖಾದಿಗಳು ಒಡೆದುಕೊಂಡು ಅಗ್ನಿಯೇ ಮೊದಲಾದ ದೇವತೆಗಳು ಹುಟ್ಟಿದ್ದು. ಆ ಪ್ರಜಾಪತಿಯೂ ಈತನೇ. ಇನ್ನು ಈ ಅಗ್ನ್ಯಾದಿದೇವತೆಗಳಿರುವರಲ್ಲ,[8] ಇವರೂ ಈತನೇ ಸರ್ವಶರೀರಿಗಳಿಗೂ ಉಪಾದಾನವಾಗಿ ಅನ್ನ, ಅನ್ನಾದ[9]–ಎಂಬ ರೂಪದಿಂದಿರುವ ಪೃಥ್ವಿಯೇ ಮುಂತಾದ ಈ ಮಹಾಭೂತಗಳೂ (ಈತನೇ). ಮತ್ತು ಕ್ಷುದ್ರಮಿಶ್ರಗಳಾಗಿರುವ, ಕ್ಷುದ್ರವಾದ

---

1. ಇದು ಸಮಷ್ಟಿಸ್ಥೂಲಶರೀರದ ವಿಷಯವೆಂದು ವ್ಯಾಖ್ಯಾನದಲ್ಲಿದೆ ; ಆ ವ್ಯಾಖ್ಯಾನಕ್ಕೆ ಆಧಾರವಿಲ್ಲ.

2. ಪ್ರಾಣ, ಪ್ರಜ್ಞಾ ಎರಡೂ ಒಂದೇ ಎಂಬುದನ್ನು ಆಗಲೆ ಕೌಷೀತಕಿಬ್ರಾಹ್ಮಣವಚನದಿಂದ ಸಮರ್ಥಿಸಿದೆ.

3. ಐ.ಅ. ೩-೨-೩ರಲ್ಲಿ ಸರ್ವಭೂತಗಳಲ್ಲಿಯೂ ಈತನನ್ನೇ ಬ್ರಹ್ಮವೆನ್ನುವರು– ಎಂದು ಹೇಳಿರುವದಕ್ಕೆ ಇದೇ ಅರ್ಥ. ಸೂಕ್ಷ್ಮಶರೀರಗಳೆಲ್ಲ ಹಿರಣ್ಯಗರ್ಭಶರೀರದ ಅಂಶಗಳು. ಕ. ೨-೧-೬, ಮು. ೨-೧-೪, ಪ್ರ. ೨-೭–ಈ ಭಾಷ್ಯಗಳನ್ನು ನೋಡಿರಿ.

4. ಏಷ ಬ್ರಹ್ಮ ಎಂಬ ವಾಕ್ಯಾರ್ಥವು ಮುಗಿಯಿತೆಂದು ತಿಳಿಸುವದಕ್ಕೆ ಪ್ರಾಣಃ ಪ್ರಜ್ಞಾತ್ಮಾ–ಎಂಬ ಮಾತನ್ನು ಮತ್ತೊಮ್ಮೆ ಬರೆದಿದೆ.

5. ಇದನ್ನು ಕಂಡೆನು ಎಂಬ ಅರಿವಿನ ರೂಪವಾದ ಗುಣದಿಂದ.

6. ಇಂದ್ರನ ಆತ್ಮನೂ ಇವನೇ.

7. ಪ್ರಥಮಜಃ ಎಂಬುದರ ಬದಲು ಪ್ರಥಮಃ ಎಂಬ ಪಾಠವಿದ್ದರೆ ಸ ವೈ ಶರೀರೀ ಪ್ರಥಮಃ ಎಂಬ ಸ್ಮೃತಿಯ ಸೂಚನೆಯಾಗುವದು.

8. ವಿರಾಟ್ಪುರುಷನಿಂದ ಹುಟ್ಟಿದರೆಂದು ಒಂದನೆಯ ಅಧ್ಯಾಯದಲ್ಲಿ ಹೇಳಿದ ದೇವತೆಗಳು.

9. ಐ.ಆ. ೨-೩-೧ (ಉಕ್ಥವಿಚಾರ)ದಲ್ಲಿ ಇದನ್ನು ವಿವರಿಸಿದೆ.

ಎಂದರೆ ಅಲ್ಪವಾದ[1] (ಶರೀರಗಳೊಡನೆ) ಕೂಡಿರುವ–ಮೂಲದಲ್ಲಿರುವ ಇವ ಎಂಬ ಮಾತಿಗೆ ಅರ್ಥವಿಲ್ಲ–ಸರ್ಪಾದಿಗಳು[2] ಎಂದರ್ಥ; (ಇವು) ಬೇರೆಬೇರೆಯಾಗಿರುವ ಬೀಜಗಳು ಎಂದರೆ ಎರಡೆರಡು ರಾಶಿಯಾಗಿ (ಮುಂದೆ) ತಿಳಿಸುವ (ಕಾರಣಗಳು). ಅವು ಯಾವವು ಎಂದರೆ (ಶ್ರುತಿ) ಹೇಳುತ್ತದೆ: ಅಂಡಜಗಳು[3] (ಎಂದರೆ ಮೊಟ್ಟೆಯಿಂದ ಹುಟ್ಟುವ) ಹಕ್ಕಿಗಳೇ ಮುಂತಾದವು; ಜಾರುಜಗಳು, ಜರಾಯುಜಗಳು (ಎಂದರೆ ಗರ್ಭಕೋಶದಿಂದ ಹುಟ್ಟುವ) ಮನುಷ್ಯನೇ ಮುಂತಾದವು; ಸ್ವೇದಜಗಳು (ಎಂದರೆ ಬೆವರಿನಿಂದ ಹುಟ್ಟುವ) ಹೇನು ಮುಂತಾದವು; ಉದ್ಭಿಜ್ಜಗಳು (ಎಂದರೆ ನೆಲವನ್ನು ಒಡೆದುಕೊಂಡು ಹುಟ್ಟುವ) ಮರಗಳೇ ಮುಂತಾದವು– .ಕುದುರೆಗಳು, ಎತ್ತುಗಳು, ಮನುಷ್ಯರು, ಆನೆಗಳು, ಮತ್ತು ಈ (ಬಗೆಯ) ಎಲ್ಲಾ ಪ್ರಾಣಿಸಮೂಹವು. ಅದು ಯಾವದು? ಎಂದರೆ ಜಂಗಮವು; ಯಾವದು ಚಲಿಸುತ್ತದೆಯೋ, ಕಾಲಿನಿಂದ ನಡೆಯುತ್ತದೆಯೋ (ಅದು). ಮತ್ತು ಪತತ್ರಿ ಯಾವದು ಆಕಾಶದಲ್ಲಿ ಹಾರಾಡುವ ಸ್ವಭಾವವುಳ್ಳದ್ದೋ ಅದು; ಮತ್ತು ಯಾವದು ಸ್ಥಾವರವಾದದ್ದೋ ಚಲಿಸದೆ ಇರುವದೋ, ಅದೆಲ್ಲವೂ ಒಂದಿಷ್ಟೂ ಬಿಡದೆ (ಎಲ್ಲವೂ) ಪ್ರಜ್ಞಾನೇತ್ರವಾಗಿರುತ್ತದೆ. ಪ್ರಜ್ಞಾ ಎಂದರೆ ಅರಿವು, ಆ (ಅರಿವೆಂಬುದು) ಬ್ರಹ್ಮವೇ; ಯಾವದರಿಂದ ಒಯ್ಯಲ್ಪಡುವದೋ (' ನೀಯತೇ ') ಅದು ನೇತ್ರವು. ಪ್ರಜ್ಞೆಯೇ ಯಾವದಕ್ಕೆ ನೇತ್ರವೋ ಆ ಈ (ಜಗತ್ತು) ಪ್ರಜ್ಞಾನೇತ್ರವು. (ಇದು) ಪ್ರಜ್ಞಾನವೆಂಬ ಬ್ರಹ್ಮದಲ್ಲಿ ಸೃಷ್ಟಿಸ್ಥಿತಿಲಯಕಾಲಗಳಲ್ಲಿ ನಿಂತಿರುತ್ತದೆ, ಪ್ರಜ್ಞಾನವನ್ನೇ ಆಶ್ರಯಿಸಿರುತ್ತದೆ ಎಂದರ್ಥ. ಲೋಕವು ಪ್ರಜ್ಞಾನೇತ್ರವು ಎಂಬುದನ್ನು ಮೊದಲಿನಂತೆ[4] (ವ್ಯಾಖ್ಯಾನಮಾಡಬೇಕು). ಅಥವಾ ಲೋಕಕ್ಕೆ ಪ್ರಜ್ಞೆಯೇ (ಚೈತನ್ಯವೇ)

---

1. ಕೀಳಾದ.

2. ಇವೇ ಮುಂದೆ ಹೇಳಿರುವ ಬೀಜಗಳು.

3. ಅಂಡಜಗಳೇ ಮುಂತಾದವನ್ನು ಬೀಜವೆಂದು ಕರೆದಿರುವದಕ್ಕೆ ಛಾ.ಭಾ.೬-೩-೧ನ್ನು ನೋಡಿ.

4. ಲೋಕವು ಪ್ರಜ್ಞಾನದಿಂದ ಒಯ್ಯಲ್ಪಡುತ್ತದೆ, ಪ್ರಜ್ಞಾನವನ್ನು ಆಶ್ರಯಿಸಿರುತ್ತದೆ ಎಂದು ವ್ಯಾಖ್ಯಾನಮಾಡಬೇಕು. ಜನರನ್ನು ಕರ್ಮಫಲಕ್ಕೆ ಒಯ್ಯುವವನು ಪರಮಾತ್ಮನೇ ಎಂದು ಭಾವ.

ಕಣ್ಣು ಎಂದಾದರೂ (ಅರ್ಥಮಾಡಬಹುದು). ಎಲ್ಲಾ ಜಗತ್ತಿಗೂ ಪ್ರಜ್ಞಾನವೇ ಒತ್ತಾಸೆ.[1] ಆದ್ದರಿಂದ ಪ್ರಜ್ಞಾನವು ಬ್ರಹ್ಮವು.[2]

## ಪ್ರಜ್ಞಾನವೇ ಎಲ್ಲಾರೀತಿಯಿಂದಲೂ ವ್ಯವಹರಿಸಲ್ಪಡುತ್ತದೆ

(ಭಾಷ್ಯ)

೮೮. ತದೇತತ್ ಪ್ರತ್ಯಸ್ತಮಿತಸರ್ವೋಪಾಧಿವಿಶೇಷಂ ಸತ್ ನಿರಞ್ಜನಂ ನಿರ್ಮಲಂ ನಿಷ್ಕ್ರಿಯಂ ಶಾನ್ತಮ್ ಏಕಮ್, ಅದ್ವಯಮ್, ನೇತಿ ನೇತಿ–ಇತಿ ಸರ್ವವಿಶೇಷಾಪೋಹಸಂವೇದ್ಯಂ ಸರ್ವಶಬ್ದಪ್ರತ್ಯಯಾಗೋಚರಮ್ । ತದತ್ಯನ್ತ ವಿಶುದ್ಧಪ್ರಜ್ಞೋಪಾಧಿಸಮ್ಬನ್ಧೇನ ಸರ್ವಜ್ಞಮ್ **ಈಶ್ವರಸಂಜ್ಞಂ ಭವತಿ** । ಸರ್ವ ಸಾಧರಣಾವ್ಯಾಕೃತಜಗದ್ಬೀಜಪ್ರವರ್ತಕಂ ನಿಯನ್ತೃತ್ವಾತ್ **ಅನ್ತರ್ಯಾಮಿ ಸಂಜ್ಞಂ** ಭವತಿ । ತದೇವ ವ್ಯಾಕೃತಜಗದ್ಬೀಜಭೂತಬುಧ್ಧ್ಯಾತ್ಮಾಭಿಮಾನಲಕ್ಷಣಂ **ಹಿರಣ್ಯಗರ್ಭಸಂಜ್ಞಂ** ಭವತಿ । ತದೇವ ಅನ್ತರಣ್ಡೋದ್ಭೂತಪ್ರಥಮಶರೀರೋಪಾಧಿಮದ್ **ವಿರಾಟ್ ಪ್ರಜಾಪತಿಸಂಜ್ಞಂ** ಭವತಿ । ತದುದ್ಭೂತಾಗ್ನ್ಯಾದ್ಯುಪಾಧಿಮತ್ **ದೇವತಾಸಂಜ್ಞಂ** ಭವತಿ । ತಥಾ ವಿಶೇಷಶರೀರೋಪಾಧಿಷ್ವಪಿ ಬ್ರಹ್ಮಾದಿ ಸ್ತಮ್ಬಪರ್ಯನ್ತೇಷು ತತ್ತನ್ನಾಮರೂಪಲಾಭೋ ಬ್ರಹ್ಮಣಃ । ತದೇವೈವಂ ಸರ್ವೋಪಾಧಿಭೇದಭಿನ್ನಂ ಸರ್ವೈಃ ಪ್ರಾಣಿಭಿಃ ತಾರ್ಕಿಕೈಶ್ಚ ಸರ್ವಪ್ರಕಾರೇಣ ಜ್ಞಾಯತೇ ವಿಕಲ್ಪ್ಯತೇ ಚಾನೇಕಧಾ । "ಏತಮೇಕೇ ವದನ್ತ್ಯಗ್ನಿಂ ಮನುಮನ್ಯೇ ಪ್ರಜಾಪತಿಮ್ । ಇನ್ದ್ರಮೇಕೇಽಪರೇ ಪ್ರಾಣಮಪರೇ ಬ್ರಹ್ಮ ಶಾಶ್ವತಮ್" (ಮನು. ೧೨-೧೨೩) ಇತ್ಯಾದ್ಯಾ ಸ್ಮೃತಿಃ ॥

---

1. ಪ್ರಜ್ಞಾನದಲ್ಲಿಯೇ ಅಧ್ಯಸ್ತವಾಗಿದೆ, ಪ್ರಜ್ಞಾನವೇ ಅದಕ್ಕೆ ಆಧಾರವೆಂದರ್ಥ.

2. "ಕೋಽಯಮಾತ್ಮೇತಿ" ಎಂಬಲ್ಲಿಂದ "ಏತೇ ಸರ್ವೇ ದೇವಾಃ" ಎಂಬವರೆಗೆ ತ್ವಂಪದಾರ್ಥ ಶೋಧನೆ, "ಇಮಾನಿ ಚ" ಎಂಬಲ್ಲಿಂದ "ಪ್ರತಿಷ್ಠಾ" ಎಂಬವರೆಗೆ ತತ್ಪದಾರ್ಥಶೋಧನೆಯೆಂದು ವ್ಯಾಖ್ಯಾನದಲ್ಲಿದೆ. ಪ್ರಜ್ಞಾನಂ ಬ್ರಹ್ಮ ಎಂಬ ವಾಕ್ಯಕ್ಕೆ (೧) ಪ್ರತ್ಯಗಾತ್ಮನು ನಿರ್ವಿಶೇಷಸ್ವರೂಪನು (೨) ಪ್ರತ್ಯಗಾತ್ಮನು ಜಗತ್ಕಾರಣತ್ವೋಪಲಕ್ಷಿತ ಬ್ರಹ್ಮವು–ಎಂಬೆರಡು ಅರ್ಥಗಳನ್ನು ವ್ಯಾಖ್ಯಾನದಲ್ಲಿ ಕೊಟ್ಟಿದೆ. ಹೀಗೆ ವಿಂಗಡಿಸುವದಕ್ಕೆ ಭಾಷ್ಯದ ಆಧಾರವೇನೋ ತಿಳಿಯದು.

(ಭಾಷ್ಯಾರ್ಥ)

ಆ ಈ (ಬ್ರಹ್ಮವು) ಯಾವ ಉಪಾಧಿಯಿಂದಾದ ವಿಶೇಷವೂ ಇಲ್ಲದಿರುವದಾಗಿ, ಯಾವದರ ಅಂಟೂ ಇಲ್ಲದೆ, ಯಾವ ಕಲ್ಮಷವೂ ಇಲ್ಲದೆ, ಯಾವ ಕ್ರಿಯೆಯೂ ಇಲ್ಲದೆ, ಶಾಂತವಾಗಿ[1] ತನಗೆರಡನೆಯದಿಲ್ಲದ ಒಂದೇ ಆಗಿ[2] "ಇದಲ್ಲ, ಇದಲ್ಲ" ಎಂದು[3] ಎಲ್ಲಾ ವಿಶೇಷಗಳನ್ನೂ ಅಲ್ಲಗಳೆಯುವದರಿಂದ ತಿಳಿಯಬರುವದಾಗಿ, ಯಾವ ಮಾತಿಗಾಗಲಿ ಪ್ರತ್ಯಯಕ್ಕಾಗಲಿ ವಿಷಯವಾಗದೆ[4] (ಇರುತ್ತದೆ). ಅದೇ ಅತ್ಯಂತ ಶುದ್ಧವಾದ ಪ್ರಜ್ಞೆ ಎಂಬ ಉಪಾಧಿಯ ಸಂಬಂಧದಿಂದ[5] ಸರ್ವಜ್ಞವಾಗಿ **ಈಶ್ವರನೆಂಬ** ಹೆಸರನ್ನು ಪಡೆಯುವದಾಗುವದು. ಎಲ್ಲರಿಗೂ ಸಮಾನವಾಗಿರುವ[6] ಅವ್ಯಾಕೃತವೆಂಬ ಜಗದ್ಬೀಜವನ್ನು ಕಾರ್ಯವಾಗಲು ತೊಡಗಿಸುವದಾಗಿ (ಎಲ್ಲವನ್ನೂ) ವಶದಲ್ಲಿಟ್ಟುಕೊಂಡಿರುವದರಿಂದ **ಅಂತರ್ಯಾಮಿ** ಎಂಬ ಹೆಸರು ಪಡೆಯುತ್ತದೆ. ಅದೇ ವ್ಯಾಕೃತವಾದ ಜಗದ್ಬೀಜವಾಗಿರುವ ಬುದ್ಧಿಯೇ ತಾನೆಂಬ ಅಭಿಮಾನವುಳ್ಳ[7] ಸ್ವರೂಪದ್ದಾಗಿ **ಹಿರಣ್ಯಗರ್ಭ**ನೆಂಬ ಹೆಸರುಳ್ಳದ್ದಾಗುತ್ತದೆ. ಅಂಡದೊಳಗೆ ಹುಟ್ಟಿದ ಮೊದಲನೆಯ ಶರೀರವೆಂಬ ಉಪಾಧಿಯುಳ್ಳದ್ದಾಗಿ **ವಿರಾಟ್, ಪ್ರಜಾಪ್ರತಿ**–ಎಂಬ ಹೆಸರುಳ್ಳದ್ದಾಗುತ್ತದೆ. ಅದು ಹೊರತೋರಿಕೊಂಡ ಅಗ್ನಿಯೇ ಮುಂತಾದ ಉಪಾಧಿಗಳುಳ್ಳದ್ದಾಗಿ **ದೇವತೆ** ಎಂಬ ಹೆಸರುಳ್ಳದ್ದಾಗುತ್ತದೆ. ಇದರಂತೆ ಬ್ರಹ್ಮನಿಂದ ಹಿಡಿದು ಸ್ತಂಬದವರೆಗಿನ ಆಯಾಶರೀರಗಳೆಂಬ ಉಪಾಧಿಗಳಲ್ಲಿಯೂ ಬ್ರಹ್ಮಕ್ಕೆ ಆಯಾ ಹೆಸರೂ ರೂಪವೂ ಬರುತ್ತದೆ. ಅದೊಂದೇ ಎಲ್ಲಾ ಪ್ರಾಣಿ

---

1. ಶ್ವೇ. ೬-೧೯.
2. ಛಾ. ೬-೨-೧.
3. ಬೃ. ೨-೩-೬.
4. ತೈ. ೨-೯
5. ಬೃ.ಭಾ. ೩-೮.೧೨ರಲ್ಲಿ ಕೊಟ್ಟಿರುವ ವಿವರವನ್ನು ನೋಡಿ.
6. ಮುಂ.ಭಾ. ೧-೧-೮ರಲ್ಲಿ "ಅನ್ನಮ್" ಎಂಬುದರ ವಿವರಣೆಯನ್ನು ನೋಡಿ.
7. ಜೀವ, ಈಶ್ವರ, ಬ್ರಹ್ಮ–ಎಂಬ ಮೂವರು ಬೇರೆಬೇರೆಯ ಆತ್ಮರಿರುವರೆಂಬ ಪೂರ್ವಪಕ್ಷವನ್ನು ತೆಗೆದು ವಿಚಾರಮಾಡಿದ್ದೂ ದ್ರಷ್ಟೃ, ದ್ರಷ್ಟೃವಲ್ಲ ಎಂದು ಮುಂತಾಗಿ ವಿಕಲ್ಪಿಸಿ ವಿಚಾರಮಾಡಿದ್ದೂ ಇದೇ ಬ್ರಹ್ಮವನ್ನೇ. ಉಪಾಧಿಯಿಂದ ಬ್ರಹ್ಮದಲ್ಲಿ ಬೇರೆಬೇರೆಯ ಆಕಾರಗಳು ತೋರುವವೇ ಹೊರತು ಸ್ವತಃ ಅದರಲ್ಲಿ ಯಾವ ವಿಶೇಷಗಳೂ ಇಲ್ಲ ಎಂದು ಭಾವ.

ಗಳಿಂದಲೂ **ತಾರ್ಕಿಕರಿಂದಲೂ**[1] ಎಲ್ಲಾ ಪ್ರಕಾರಗಳಿಂದಲೂ ಅರಿಯಲ್ಪಡುತ್ತದೆ. ಮತ್ತು ಅನೇಕವಿಧವಾಗಿ ವಿಕಲ್ಪಿಸಲ್ಪಡುತ್ತದೆ. (ಆದ್ದರಿಂದಲೇ)

**ಏತಮೇಕೇ ವದನ್ತ್ಯಗ್ನಿಂ ಮನುಮನ್ಯೇ ಪ್ರಜಾಪತಿಮ್ ।**
**ಇನ್ದ್ರಮೇಕೇಽಪರೇ ಪ್ರಾಣಮಪರೇ ಬ್ರಹ್ಮ ಶಾಶ್ವತಮ್ ॥**

(ಮನು. ೧೨-೧೨೩).

"ಈತನನ್ನು **ಅಗ್ನಿ**ಯೆಂದು ಕೆಲವರು ಕರೆಯುವರು; ಮತ್ತೆ ಕೆಲವರು **ಮನು**ವೆನ್ನುವರು; **ಇಂದ್ರ**ನೆಂದು ಕೆಲವರು, **ಪ್ರಾಣ**ನೆಂದು ಕೆಲವರು, ಶಾಶ್ವತ ವಾದ ಬ್ರಹ್ಮವೆಂದು ಮತ್ತೆ ಕೆಲವರು (ಕರೆಯುವರು)"-ಎಂದು ಮುಂತಾಗಿ ಸ್ಮೃತಿ(ಯಲ್ಲಿ ಹೇಳಿರುತ್ತದೆ).

## ಬ್ರಹ್ಮಜ್ಞಾನಫಲದ ಉಪಸಂಹಾರ

**ಸ ಏತೇನ ಪ್ರಜ್ಞೇನಾತ್ಮನಾಸ್ಮಾಲ್ಲೋಕಾದುತ್ಕ್ರಮ್ಯಾಮುಷ್ಮಿನ್ ಸ್ವರ್ಗೇ ಲೋಕೇ ಸರ್ವಾನ್ ಕಾಮಾನಾಪ್ತ್ವಾಮೃತಃ ಸಮಭವತ್ ಸಮಭವತ್ ॥೪॥**

೪. ಆ ಈ ಪ್ರಜ್ಞನಾದ ಆತ್ಮನರೂಪದಿಂದ ಈ ಲೋಕದಿಂದ ಮೇಲಕ್ಕೇರಿ ಆ ಸ್ವರ್ಗಲೋಕದಲ್ಲಿ ಸರ್ವ ಕಾಮಗಳನ್ನೂ ಪಡೆದು ಅಮೃತನಾದನು, ಆದನು.

(ಭಾಷ್ಯ)

೪. ಸ ವಾಮದೇವಃ, ಅನ್ಯೋ ವಾ, ಏವಂ ಯಥೋಕ್ತಂ ಬ್ರಹ್ಮ ಯೋ ವೇದ ಪ್ರಜ್ಞೇನ ಆತ್ಮನಾ, ಯೇನೈವ ಪ್ರಜ್ಞೇನ ಆತ್ಮನಾ ಪೂರ್ವೇ ವಿದ್ವಾಂಸಃ ಅಮೃತಾ ಅಭೂವನ್ ತಥಾ ಅಯಮಪಿ ವಿದ್ವಾನ್ ಏತೇನೈವ ಪ್ರಜ್ಞೇನ ಆತ್ಮನಾ "ಅಸ್ಮಾತ್ ಲೋಕಾತ್ ಉತ್ಕ್ರಮ್ಯ" ಇತ್ಯಾದಿ ವ್ಯಾಖ್ಯಾತಮ್ । ಅಸ್ಮಾತ್ **ಲೋಕಾತ್** ಉತ್ಕ್ರಮ್ಯ ಅಮುಷ್ಮಿನ್ ಸ್ವರ್ಗೇ ಲೋಕೇ ಸರ್ವಾನ್ ಕಾಮಾನ್ ಆಪ್ತ್ವಾ ಅಮೃತಃ ಸಮಭವತ್ ಸಮಭವತ್ ಇತಿ ಓಮಿತಿ ॥

ಇತ್ಯೈತರೇಯೋಪನಿಷತ್ ಭಾಷ್ಯಂ ಸಂಪೂರ್ಣಂ

---

1. ವೇದಾಂತಿಗಳನ್ನು ಬಿಟ್ಟು ಮಿಕ್ಕ ವಾದಿಗಳೆಲ್ಲರೂ ತಾರ್ಕಿಕರೇ; ಏಕೆಂದರೆ ಅವರಿಗೆ ಸ್ವತಂತ್ರತರ್ಕವೇ ಪ್ರಧಾನವಾಗಿರುತ್ತದೆ.

(ಭಾಷ್ಯಾರ್ಥ)

ಆ ವಾಮದೇವನು, ಅಥವಾ ಹೀಗೆ ಹಿಂದೆ ಹೇಳಿದ ಬ್ರಹ್ಮವನ್ನು ಅರಿತುಕೊಂಡ ಮತ್ತೊಬ್ಬನು,[1] ಈ ಪ್ರಜ್ಞನಾದ ಆತ್ಮರೂಪದಿಂದ–ಯಾವ ಪ್ರಜ್ಞನಾದ ಆತ್ಮರೂಪವಿಂದ ಹಿಂದೆ ಜ್ಞಾನಿಗಳು (ಹೇಗೆ) ಅಮೃತರಾಗಿದ್ದರೋ ಈ ಜ್ಞಾನಿಯೂ ಹಾಗೆಯೇ ಈ ಪ್ರಜ್ಞನಾದ ಆತ್ಮನ ರೂಪದಿಂದಲೇ[2]. "ಈ ಲೋಕದಿಂದ ಮೇಲಕ್ಕೇರಿ" ಮುಂತಾದದ್ದನ್ನು ಹಿಂದೆ ವ್ಯಾಖ್ಯಾನಮಾಡಿದ್ದಾಗಿದೆ.[3] ಈ ಲೋಕದಿಂದ ಮೇಲಕ್ಕೇರಿ ಆ ಸ್ವರ್ಗಲೋಕದಲ್ಲಿ ಸರ್ವಕಾಮಗಳನ್ನೂ ಪಡೆದುಕೊಂಡು ಅಮೃತನಾದನು. ಓಮ್ ![4]

---

1. ಯಾವನು ಅರಿತುಕೊಂಡರೂ ಈ ಫಲವಾಗುವದು; ವಾಮದೇವನಂಥ ಋಷಿಯೇ ಬೇಕೆಂಬ ನಿಯಮವಿಲ್ಲ.

2. ಆತ್ಮಜ್ಞಾನದಿಂದ ನಿತ್ಯವಾದ ತನ್ನ ಸ್ವರೂಪವನ್ನು ಪಡೆದುಕೊಂಡು ಎಂದರ್ಥ. ಅದ್ವಿತೀಯಾತ್ಮಜ್ಞಾನದಿಂದಲೇ ಎಲ್ಲರಿಗೂ ಮುಕ್ತಿ.

3. ನಿಜವಾಗಿ ಶರೀರವನ್ನು ಬಿಟ್ಟು ಮೇಲಿನ ಲೋಕಕ್ಕೆ ಹೋಗಿ ಎಂದೇನೂ ಅರ್ಥವಲ್ಲ. ಅಜ್ಞಾನದಿಂದಾಗಿರುವ ದೇಹವನ್ನು ಜ್ಞಾನದಿಂದ ಬಿಡುವವೇ ಉತ್ಕ್ರಮಣವು, ಸ್ವರ್ಗವೆಂದರೆ ಆನಂದಾತ್ಮನಲ್ಲಿ ನೆಲೆ ನಿಲ್ಲುವದೇ_ಎಂದು ಹಿಂದೆ ಹೇಳಿದೆ.

4. ಓಮ್ ಎಂಬುದು ಭಾಷ್ಯದ ಸಮಾಪ್ತಿಯನ್ನು ಸೂಚಿಸುವ ಮಂಗಲವಾಚಕವು. ಆರಣ್ಯಕದ ಏಳನೆಯ ಅಧ್ಯಾಯದ ರೂಪದಲ್ಲಿರುವ "ವಾಙ್ಮೇ ಮನಸಿ ಪ್ರತಿಷ್ಠಿತಾ" ಎಂಬ ಮಂತ್ರವನ್ನೂ ಈ ಉಪನಿಷತ್ತಿಗೆ ಸೇರಿಸಿಕೊಂಡು ಶಾಂತಿಗಾಗಿ ಪಠಿಸುವ ವಾಡಿಕೆಯಿದೆ. ಆ ಮಂತ್ರವೂ ಸೇರಿ ಉಪನಿಷತ್ತು 'ಆತ್ಮಷಟ್ಕ' (ಆತ್ಮನನ್ನು ತಿಳಿಸುವ) ಆರುಭಾಗಗಳ ಗ್ರಂಥವಾಗಿದೆ ಎಂದು ಕೆಲವರ ಭಾವನೆ. ಈ ವಿಷಯದಲ್ಲಿ ಪೀಠಿಕೆಯನ್ನು ನೋಡಿರಿ.

# ಉಪನಿಷತ್ತಿನ ಸಾರ

## ಒಂದನೆಯ ಅಧ್ಯಾಯ

(ಖಂಡ ೧) :—ಮೊದಲು ಆತ್ಮನೊಬ್ಬನೇ ಇರುತ್ತಿದ್ದನು, ಅವನಿಗಿಂತ ಬೇರೆಯಾಗಿ ಮತ್ತೇನೇನೂ ಇರಲಿಲ್ಲ. ಆವನು ಲೋಕಗಳನ್ನು ಸೃಷ್ಟಿಸುವೆನು ಎಂದು ಯೋಚಿಸಿ ಅಂಭಸ್ಸು, ಮರೀಚಿ, ಮರ, ಅಪ್ಪು—ಎಂಬ ಪಂಚಭೂತಾತ್ಮಕವಾದ ಲೋಕಗಳನ್ನು ಸೃಷ್ಟಿಸಿದನು. ಆಮೇಲೆ ಈ ಲೋಕಗಳನ್ನು ಕಾಪಾಡುವ ದೇವತೆಗಳನ್ನು ಸೃಷ್ಟಿಸುವೆನು ಎಂದುಕೊಂಡು ಅದೇ ಪಂಚಭೂತಗಳಿಂದ ಒಬ್ಬ ಪುರುಷನ ಆಕೃತಿಯನ್ನು ಮಾಡಿ ಅದನ್ನು ಕುರಿತು ಧ್ಯಾನ ಮಾಡಲು ಅದರಿಂದ ಮುಖ, ವಾಕ್ಕು, ಅಗ್ನಿ; ಮೂಗು, ಪ್ರಾಣ, ವಾಯು; ಕಣ್ಣು, ಚಕ್ಷು ರಿಂದ್ರಿಯ, ಆದಿತ್ಯ; ಕಿವಿ, ಶ್ರೋತ್ರೇಂದ್ರಿಯ, ದಿಗ್ದೇವತೆಗಳು; ಚರ್ಮ ಕೂದಲು, ಔಷಧಿ ವನಸ್ಪತಿದೇವತೆಗಳು; ಹೃದಯ, ಮನಸ್ಸು, ಚಂದ್ರ; ಹೊಕ್ಕಲು, ಅಪಾನ, ಮೃತ್ಯು; ಶಿಶ್ನ, ರೇತಸ್ಸು, ಅಪ್ಪು ಹೀಗೆ ಅವಯವಗಳೂ ಇಂದ್ರಿಯಗಳೂ ದೇವತೆಗಳೂ ಉಂಟಾದರು.

(ಖಂಡ ೨) :—ಈ ದೇವತೆಗಳು ಸಂಸಾರಕ್ಕೆ ಒಳಗಾದರು ಮೊದಲು ಸೃಷ್ಟಿಸಿದ್ದ ವಿರಾಟ್ಪುರುಷನಿಗೆ ಆತ್ಮನು ಹಸಿವುನೀರಡಿಕೆಗಳನ್ನು ಕೂಡಿಸಿದ್ದರಿಂದ ಆ ಪುರುಷನಿಂದಾದ ದೇವತೆಗಳಿಗೂ ಹಸಿವುನೀರಡಿಕೆಯುಂಟಾದವುಗಳ. ಹಸಿವುನೀರಡಿಕೆಗಳನ್ನು ತೀರಿಸಿಕೊಳ್ಳು ವದಕ್ಕೆ ತಕ್ಕ ಶರೀರವನ್ನು ನಮಗೆ ಸೃಷ್ಟಿಮಾಡಿಕೊಡಬೇಕು—ಎಂದು ಅವರು ಪರಮೇಶ್ವರ ನನ್ನು ಬೇಡಿಕೊಂಡರು ಆಗ ಪರಮಾತ್ಮನು ಕ್ರಮಕ್ರಮವಾಗಿ ಪ್ರಾಣಿಗಳೆಲ್ಲವನ್ನೂ ಸೃಷ್ಟಿಸಿ ಅವುಗಳಲ್ಲಿ ಯಾವದೊಂದರ ಶರೀರವೂ ತಮಗೆ ತಕ್ಕದ್ದಲ್ಲವೆಂದು ದೇವತೆಗಳು ಹೇಳಲು ಈಶ್ವರನು ಮನುಷ್ಯನನ್ನು ಸೃಷ್ಟಿಸಿದನು ಅವರು “ಭಲೆ! ಇದು ಚೆನ್ನಾಗಿದೆ'' ಎಂದು ಮೆಚ್ಚಿ ಈಶ್ವರನ ಅಪ್ಪಣೆಯನ್ನು ಪಡೆದು ಆ ಶರೀರವನ್ನು ಹೊಕ್ಕರು. ದೇವತೆಗಳಿಲ್ಲಿ ವಿರಾಟ್ಪುರುಷನ ಯಾವ ಇಂದ್ರಿಯದಿಂದ ಇವನು ಹೊರಕ್ಕೆ ಬಂದಿದ್ದನೋ ಮನುಷ್ಯಶರೀರದಲ್ಲಿಯೂ ಆಯಾ ಇಂದ್ರಿಯವನ್ನೇ ಆಯಾ ದೇವತೆಯು ಹೊಕ್ಕಬಳಿಕ ಹಸಿವುನೀರಡಿಕೆಗಳ ದೇವತೆಗಳಿಗೆ ಬೇರೆ ಸ್ಥಾನವಿಲ್ಲದ್ದರಿಂದ ಅವರಿಬ್ಬರೂ ಆಯಾ ದೇವತೆಗಳೊಡನೆಯೇ ಇದ್ದು ಅವರ ತೃಪ್ತಿಯಿಂದಲೇ ತೃಪ್ತಿಹೊಂದಬೇಕೆಂದು ಈಶ್ವರನು ಗೊತ್ತುಮಾಡಿದನು.

(ಖಂಡ ೩) :— ಇದಾದ ಬಳಿಕ ಲೋಕಪಾಲಕರಿಗೋಸ್ಕರ ಈಶ್ವರನು ಅದೇ ಪಂಚ ಭೂತಗಳಿಂದ ಅನ್ನವೆಂಬ ಒಂದು ಆಕಾರವನ್ನು ಸೃಷ್ಟಿಮಾಡಿದನು ಆದರೆ ಅದು ಓಡಿ ಹೋಗುವದಕ್ಕೆಳಸಿತು ಲೋಕಪಾಲಕರ ಒಟ್ಟಾದ ವಿರಾಟ್ಪುರುಷನಿಗೆ ಅದನ್ನು ಯಾವ ಇಂದ್ರಿಯದಿಂದಲೂ ಹಿಡಿಯುವದಕ್ಕಾಗಲಿಲ್ಲ. ಒಂದಾಗಿ ಪರೀಕ್ಷಿಸಿ ನೋಡಿ ಕೊನೆಗೆ ಮುಖ ದೊಳಕ್ಕೆ ಎಳೆದುಕೊಳ್ಳುವದಕ್ಕೆ ಅನುಕೂಲವಾದ ಅಪಾನವಾಯುವಿನಿಂದ ಅನ್ನವನ್ನು ಎಳೆದ

ಕೊಂಡನು. ಆದ್ದರಿಂದ ಈಗಲೂ ವಿರಾಟ್ಪುರುಷನ ವಂಶಜರಾದ ಜೀವರುಗಳು ಅನ್ನವನ್ನು ಹಾಗೆಯೇ ಒಳಕ್ಕೆಳೆದುಕೊಳ್ಳುತ್ತಿದಾರೆ.

ಇಷ್ಟೆಲ್ಲ ಆದ ಮೇಲೆ ಇಂದ್ರಿಯಗಳು ತಮ್ಮ ತಮ್ಮ ಕೆಲಸವನ್ನು ಯಾರಿಗೋಸ್ಕರ ಮಾಡಬೇಕೋ ಅಂಥ ಸ್ವತಂತ್ರವಾದ ಒಡೆಯನೊಬ್ಬನು ಶರೀರದಲ್ಲಿರಬೇಕೆಂದು ತಾನೇ ಜೀವರೂಪದಿಂದ ಒಳಹೊಕ್ಕನು. ಪ್ರಾಣನು ಈ ಶರೀರವನ್ನು ಮುಂಗಾಲುಗಳ ಮುಲಕವಾಗಿ ಹೊಕ್ಕಿದ್ದದ್ದರಿಂದ ಆ ದಾರಿಯನ್ನು ಬಿಟ್ಟು ತಲೆಯ ಬೈತಲೆಯನ್ನು ಸೀಳಿಕೊಂಡು ಅದರ ಮೂಲಕ ಶರೀರವನ್ನು ಸೇರಿದನು. ಇದರಿಂದ ಆತ್ಮನನ್ನು ಅರಿತುಕೊಳ್ಳುವದಕ್ಕೆ ಒಂದು ಸಾಧನವು ದೊರಕಿದಂತಾಯಿತು. ಶರೀರವನ್ನು ಹೊಕ್ಕ ಜೀವನಿಗೆ ಇಂದ್ರಿಯ, ಮನಸ್ಸು, ಹೃದಯಾಕಾಶ-ಎಂಬ ಮೂರು ಸ್ಥಾನಗಳಿವೆ; ಎಚ್ಚರ, ಕನಸು, ತನಿ ನಿದ್ರೆ— ಎಂಬ ಮೂರು ಸ್ವಪ್ನಗಳಾಗುತ್ತಿವೆ. ಜೀವನು ಈ ಮೂರನ್ನೂ ಇದೊಂದು, ಇದೊಂದು— ಎಂದು ಅನುಭವಿಸುತ್ತಿರುತ್ತಾನೆ.

ಈ ರೀತಿಯಲ್ಲಿ ಜೀವನಾದ ಮೇಲೆ ಆತ್ಮನು ಭೂತಗಳೆಲ್ಲವನ್ನೂ ವಿಂಗಡಿಸಿ ನೋಡಿ, ಮತ್ತೆ ಯಾವದನ್ನೂ ಕಾಣದೆ, ತನ್ನ ಸ್ವರೂಪವೇ ಎಲ್ಲವನ್ನೂ ವ್ಯಾಪಿಸಿರುವದನ್ನು ಕಂಡುಕೊಂಡನು. "ಇದನ್ನು ಕಂಡೆನು" ಎಂದು ಕಂಡುಕೊಂಡದ್ದರಿಂದ ಅವನಿಗೆ "ಇದಂದ್ರ" ಎಂಬ ಹೆಸರಾಯಿತು. ಜ್ಞಾನಿಗಳು ಈ ಹೆಸರನ್ನು "ಇಂದ್ರನು" ಎಂದು ಪರೋಕ್ಷವಾಗಿ ವ್ಯವಹರಿಸುತ್ತಾರೆ. ದೇವತೆಗಳಿಗೆ ಪರೋಕ್ಷನಾಮದಲ್ಲಿ ಪ್ರೀತಿಯಿರುವದರಿಂದ ದೇವದೇವನಾದ ಆತ್ಮನಿಗೂ ಪರೋಕ್ಷನಾಮವು ಪ್ರಿಯವಾಗಿರುತ್ತದೆ.

## ಎರಡನೆಯ ಅಧ್ಯಾಯ

ಈ ಜೀವನು ಪುರುಷನಲ್ಲಿ ಅನ್ನರಸದಿಂದಾಗುವ ರಕ್ತವೇ ಮುಂತಾದ ಧಾತುಗಳಿಂದ ರೇತಸ್ಸಿನ ರೂಪದಿಂದ ಗರ್ಭವಾಗುತ್ತಾನೆ. ಆ ರೇತಸ್ಸನ್ನು ತನ್ನ ದೇಹದಂತೆಯೇ ಕಾಪಾಡಿಕೊಂಡಿದ್ದು ಹೆಂಡತಿಯೊಡನೆ ಬೆಳೆಯುವಾಗ ಹೊರಗೆ ಹಾಕುವನಷ್ಟೆ. ಅದೇ ಜೀವನ ಒಂದನೆಯ ಜನ್ಮವು. ಆ ಸ್ತ್ರೀಯ ದೇಹದಲ್ಲಿ ಸಿಂತ ರೇತಸ್ಸನ್ನು ಆಕೆಯು ತನ್ನ ದೇಹದಂತೆಯೇ ಕಾಪಾಡುತ್ತಾಳೆ ಆಮೇಲೆ ಪುತ್ರರೂಪದಿಂದ ಅದು ಹೊರಕ್ಕೆ ಬರುತ್ತದೆ. ಅದು ಜೀವನ ಎರಡನೆಯ ಜನ್ಮವು. ತಂದೆಯು ಮಗನಿಗೆ ಸಂಸ್ಕಾರಗಳನ್ನು ಮಾಡಿಸಿ ತನ್ನ ಸ್ವರೂಪವೆಂದೇ ಅವನನ್ನು ಪೋಷಿಸುತ್ತಿದ್ದು ಸಾಯುವ ಮುಂಚೆ ತಾನು ಅವರೆಗೆ ಮಾಡುತ್ತಿದ್ದ ಅಧ್ಯಯನ, ಯಜ್ಞ—ಮುಂತಾದ ಕರ್ಮಗಳನ್ನು ಮಗನಿಗೆ ಒಪ್ಪಿಸಿ ಶರೀರವನ್ನು ಬಿಟ್ಟು ಮತ್ತೊಂದು ದೇಹವನ್ನು ಧರಿಸುತ್ತಾನೆ. ಹೀಗೆ ಸ್ತ್ರೀಯ ಗರ್ಭದಿಂದ ಹೊರಕ್ಕೆ ಬಂದು ಜೀವನಯಾತ್ರೆಯನ್ನು ಮುಗಿಸಿ ಮತ್ತೊಂದು ಶರೀರವನ್ನು ಪಡೆದುಕೊಳ್ಳುವದು ಜೀವನಿಗೆ ಮೂರನೆಯ ಜನ್ಮವು.

ಹೀಗೆ ಮೂರು ಶರೀರಗಳನ್ನು ಪಡೆಯುವದನ್ನೇ ಜೀವನ ಮೂರು ವಾಸಸ್ಥಾನಗಳೆಂದು ಭಾವಿಸಬಹುದಾಗಿದೆ. ಈ ಜನನಮರಣಗಳನ್ನು ಆತ್ಮಜ್ಞಾನಿಯು ಮಾತ್ರ ದಾಟುವನು. ಹೀಗೆಂದು ಋಗ್ವೇದದ ಒಂದು ಮಂತ್ರವು ಹೇಳುತ್ತದೆ; "ನಾನು ಗರ್ಭದಲ್ಲಿಯೇ ಇದ್ದು

ಕೊಂಡು ಈ ದೇವತೆಗಳ ಜನ್ಮವೆಲ್ಲವನ್ನೂ ಅರಿತುಕೊಂಡೆನು, ಇಂಥ ನೂರಾರು ಶರೀರಗಳು ನನ್ನನ್ನು ಕಬ್ಬಿಣದ ಕೋಟೆಯಂತೆ ಭದ್ರವಾಗಿ ಬಿಗಿದಿಟ್ಟುಕೊಂಡಿದ್ದವು. ಆದರೆ ಈಗ ನಾನು ಜ್ಞಾನದಿಂದ ಗಿಡುಗನು ಬಲೆಯಿಂದ ತಪ್ಪಿಸಿಕೊಂಡು ಬರುವಂತೆ ಶರೀರಗಳ ಕಟ್ಟನ್ನು ಬಿಡಿಸಿಕೊಂಡು ಈಚೆಗೆ ಬಂದುಬಿಟ್ಟಿದೇನೆ'' ಎಂಬುದು ಮಂತ್ರದ ಅರ್ಥವು. ಈ ವಾಕ್ಯವನ್ನು **ವಾಮದೇವ** ಋಷಿಯು ಗರ್ಭದಲ್ಲಿರುವಾಗಲೇ ಹೇಳಿದನು! ಆ ವಾಮದೇವನು ನಿತ್ಯಶುದ್ಧವಾದ ತನ್ನ ಆತ್ಮನಸ್ವರೂಪವನ್ನು ಜ್ಞಾನದಿಂದ ತಿಳಿದುಕೊಂಡು ಅವಿದ್ಯೆಯಿಂದಾದ ಶರೀರವನ್ನು ನಾಶಪಡಿಸಿಕೊಂಡು ಉತ್ಕೃಷ್ಟವಾದ ಪರಮಾತ್ಮಸ್ವರೂಪವನ್ನು ಹೊಂದಿ ಕಾಮುಗಳೆಲ್ಲವನ್ನೂ ಪಡೆದುಕೊಂಡು ಅಮೃತನಾದನು.

## ಮೂರನೆಯ ಅಧ್ಯಾಯ

ಶ್ರುತಿಯಲ್ಲಿ ಹೇಳಿರುವಂತೆ ವಾಮದೇವನು ಅರಿತುಕೊಂಡು ಮುಕ್ತನಾದ ಆತ್ಮಸ್ವರೂಪವು ಯಾವದು? ಅದನ್ನೇ ನಾವೂ ಅರಿತುಕೊಂಡು ಕೃತಕೃತ್ಯರಾಗಬೇಕೆಂದು ಮುಮುಕ್ಷುಗಳಾದವರು ವಿಚಾರಿಸುವಲ್ಲಿ ಅವರಿಗೆ ಈ ಜಿಜ್ಞಾಸೆಯುಂಟಾಗುವದು. ಮುಂಗಾಲುಗಳ ಮೂಲಕ ಶರೀರವನ್ನು ಹೊಕ್ಕ ಪ್ರಾಣನೊಬ್ಬನು, ಬೈತಲೆಯನ್ನು ಸೀಳಿಕೊಂಡು ಒಳಹೊಕ್ಕವನು ಮತ್ತೊಬ್ಬನು ಈ ಇಬ್ಬರಲ್ಲಿ ನಿಜವಾದ ಆತ್ಮನು ಯಾರು? ಮುಂಗಾಲುಗಳಿಂದ ಹೊಕ್ಕಿರುವ ಆತ್ಮನು ಅಂತಃಕರಣವೃತ್ತಿಗಳಿಂದ ಬೇರೆಬೇರೆಯ ವಿಷಯಗಳನ್ನು ಅರಿಯುವುದಕ್ಕೆ ಸಾಧನವಾಗಿರುತ್ತಾನೆ. ನೋಡುವದು, ಕೇಳುವದು, ಮೂಸುವದು, ಮಾತಾಡುವದು, ಸವಿಯುವದು-ಇವೆಲ್ಲವೂ ಈ ಪ್ರಾಣಾತ್ಮನಿಂದಲೇ ಆಗುವವು. ಅವನು ಕರಣರೂಪನಾಗಿರುವದರಿಂದ ಅವನು ನಿಜವಾಗಿ ಆತ್ಮನಲ್ಲ ಕರಣವು ಕರ್ತೃವಿಗಾಗಿರುತ್ತದೆ. ಆದ್ದರಿಂದ ಈ ನೋಡುವದು, ಕೇಳುವದು-ಮುಂತಾದ ಕ್ರಿಯೆಗಳನ್ನು ಯಾವನು ಮಾಡುತ್ತಿರುವನೋ ಅವನೇ ಆತ್ಮನೆಂಬುದು ಯುಕ್ತ.

ಈ ಮುಖ್ಯಾತ್ಮನು ಪ್ರಜ್ಞಾನದ ಎಂದರೆ ಬರಿಯರಿವಿನ ಸ್ವರೂಪನಾಗಿರುತ್ತಾನೆ. ಅಂತಃಕರಣದ ವೃತ್ತಿಗಳಿಂದ ಈ ಪ್ರಜ್ಞಾನಕ್ಕೆ ಅನೇಕ ಹೆಸರುಗಳು ಬರುವವು. ಆದರೆ ಎಚ್ಚರುವದು, ಸ್ವತಂತ್ರನೆಂದು ಭಾವಿಸುವದು, ಕಲಾದಿಗಳ ವಿಜ್ಞಾನ - ಮುಂತಾದ ಅರಿವಿನ ಈ ಭೇದಗಳು ಅಂತಃಕರಣಕ್ಕೆ ಸಂಬಂಧಪಟ್ಟವೇ ಹೊರತು ಪ್ರಜ್ಞಾನರೂಪಕ್ಕೆ ಸಂಬಂಧಪಟ್ಟಿರುವದಿಲ್ಲ. ಈ ಪ್ರಜ್ಞಾನವೆಂಬ ಶುದ್ಧಚೈತನ್ಯವೇ ಹಿರಣ್ಯಗರ್ಭನೆಂದೂ ಇಂದ್ರನೆಂದೂ ಪ್ರಜಾಪತಿಯೆಂದೂ ದೇವತೆಗಳೆಂದೂ ಬಗೆಬಗೆಯ ಹೆಸರುಗಳನ್ನು ತಳೆಯುತ್ತಿರುವದು. ಭೂತಭೌತಿಕಗಳೆಲ್ಲವೂ ಪ್ರಜ್ಞಾನರೂಪವಾದ ಈ ಪರಮಾತ್ಮನಲ್ಲಿಯೇ ಇದ್ದುಕೊಂಡು ಹುಟ್ಟು, ಇರವು, ಸಾವುಗಳನ್ನು ಕಾಣುತ್ತಿರುವದು. ಪ್ರಜ್ಞಾನಕ್ಕಿಂತ ಬೇರೆಯಾಗಿ ಯಾವದೊಂದೂ ಇಲ್ಲವಾದ್ದರಿಂದ ಪ್ರಜ್ಞಾನವೇ ಬ್ರಹ್ಮವು.

ಪ್ರಜ್ಞಾನರೂಪವಾಗಿರುವ ಈ ಆತ್ಮಸ್ವರೂಪವನ್ನು ಜ್ಞಾನದಿಂದ ಪಡೆದುಕೊಂಡಾತನು ಅವಿದ್ಯಾಕೃತವಾದ ಈ ಲೋಕವನ್ನು ದಾಟಿ ಆನಂದರೂಪನಾಗಿರುವ ಪರಮಾತ್ಮನ ರೂಪದಿಂದ ಸರ್ವಕಾಮಗಳನ್ನೂ ಪಡೆದು ಅಮೃತನಾಗುವನು.

# ಮನ್ತ್ರಾನುಕ್ರಮಣಿಕೆ

**ಸೂಚನೆ :**—ಮಂ. ಭಾ. ಎಂದರೆ ಇಲ್ಲಿ ಖಂಡಗಳನ್ನು ನಾವು ವಿಂಗಡಿಸಿಕೊಂಡಿರುವಂತೆ ಮನ್ತ್ರಭಾಗ.

# ಶಬ್ದಾನುಕ್ರಮಣಿಕೆ

**ಸೂಚನೆ :**—ಇಲ್ಲಿ ಕೊಟ್ಟಿರುವ ಸಂಖ್ಯೆಗಳು ಸಂಸ್ಕೃತಭಾಷ್ಯದ ಯಾವ ಭಾಗದಲ್ಲಿ ಬಂದಿವೆ ಎಂಬುದನ್ನು ಸೂಚಿಸುವವು.

---

**೧೯. ಅವಿದ್ಯಾ—**
ತಪ್ಪು ತಿಳಿವಳಿಕೆ, ಸಂಸಾರಕ್ಕೆ ಮೂಲ ಕಾರಣವಾದದ್ದು, ೧೩, ೨೬, ೫೬, ೭೩, ೮೦.

**೨೦. ಅವಿದ್ಯಾಕಾಮಕರ್ಮಾಣಿ—**
ಒಂದಕ್ಕೊಂದಕ್ಕೆ ಕಾರಣವಾಗಿರುವ ತಪ್ಪು ತಿಳಿವಳಿಕೆ, ಬಯಕೆ, ಕೆಲಸ—ಇವು, ೧೩, ೩೬, ೭೪.

**೨೧. ಅವ್ಯಾಕೃತಮ್—**
ಜಗತ್ತಿನ ಬೀಜರೂಪವಾಗಿರುವ ನಾಮರೂಪಗಳ ಸೂಕ್ಷ್ಮಸ್ಥಿತಿ, ೨೮, ೩೧, ೮೨.

**೨೨. ಅಸದ್ವಾದೀ—**
ಕಾರ್ಯವಾಗಲಿ ಕಾರಣವಾಗಲಿ ಇಲ್ಲವೆನ್ನುವವ, ೩೧.

**೨೩. ಅಸಂಸಾರೀ—**
ಸಂಸಾರಿಯಾದ ಜೀವನಲ್ಲದ ಪರಮಾತ್ಮ ೫೯.

**೨೪. ಅಸಂಹತಃ—**
ಮತ್ತೊಂದರೊಡನೆ ಕೂಡಿಕೊಂಡು ಕೆಲಸಮಾಡದೆ ಇರುವವ, ಆತ್ಮ, ೫೨.

**೨೫. ಆಗಮಸಂಪ್ರದಾಯಃ—**
ಗುರಪರಂಪರೆಯಿಂದ ಬಂದಿರುವ ವೈದಿಕೋಪದೇಶ, ೭೧.

**೨೬. ಆತ್ಮಗುಣಾಃ—**
ಆತ್ಮನನ್ನು ಅರಿತುಕೊಳ್ಳುವದಕ್ಕೆ ಸಾಧನವಾಗುವ ಸತ್ಯಾದಿಗಳು, ೩೬.

**೨೭. ಆತ್ಮಜ್ಞಾನಮ್, ಆತ್ಮವಿಜ್ಞಾನಮ್—**
ಆತ್ಮನ ಸ್ವರೂಪದ ತಿಳಿವಳಿಕೆ, ೩, ೪, ೫, ೭, ೧೧, ೧೯, ೫೭, ೭೯, ೮೦, ೮೯.

**೨೮. ಆತ್ಮದರ್ಶನಮ್—**
ಆತ್ಮನನ್ನು ಕಂಡುಕೊಳ್ಳುವದು, ಆತ್ಮಜ್ಞಾನ, ೧೮.

**೨೯. ಆತ್ಮಭಾವಃ—**
ಅದೇ ತಾನೆಂದು ಭಾವಿಸಿಕೊಳ್ಳುವದು, ೧, ೭೨.

**೩೦. ಆತ್ಮವಿದ್ಯಾ—**
ಆತ್ಮನನ್ನು ಅರಿತುಕೊಳ್ಳುವದು, ಆತ್ಮಜ್ಞಾನ ೧೯.

**೩೧. ಆತ್ಮಾ—**
ಪರಮಾತ್ಮ, ೨೮, ೨೯, ೩೦, ೩೧, ೩೭, ೫೯, ೮೨, ೮೭. ಈ ಶಬ್ದವನ್ನು ಜೀವ, ಶರೀರ—ಮುಂತಾದ ಅರ್ಥಗಳಲ್ಲಿಯೂ ಉಪಯೋಗಿಸುವದುಂಟು ೭೪, ೭೫, ೭೬ ೭೭.

**೩೨ ಆತ್ಮಾವಬೋಧಃ—**
ಆತ್ಮಜ್ಞಾನ, ೬೧, ೭೨.

**೩೩. ಆಶ್ರಮವಿಕಲ್ಪಃ—**
ಆಶ್ರಮಗಳನ್ನು ಒಂದನ್ನು ಬಿಟ್ಟು ಮತ್ತೆ ಯಾವದಾದರೂ ಒಂದನ್ನು ಪಡೆಯುವದು, ೨೩.

**೩೪. ಆಶ್ರಮಸಮುಚ್ಚಯಃ—**
ಆಶ್ರಮಗಳನ್ನು ಒಂದೊಂದಾಗಿ ಕ್ರಮದಿಂದ ಎಲ್ಲವನ್ನೂ ಪಡೆಯುವದು, ೨೩.

**೩೫. ಇನ್ದ್ರಃ—**
ತನ್ನ ಸ್ವರೂಪವನ್ನು ನೇರಾಗಿ ಅರಿತುಕೊಂಡ ಪರಮಾತ್ಮ, ೫೮, ೮೭; ದೇವತೆಗಳ ಒಡೆಯ, ೮೭.

**೩೬. ಈಶ್ವರಃ—**
ಎಲ್ಲವನ್ನೂ ಆಳುವದಕ್ಕೆ ಶಕ್ತನಾದ ಪರಮಾತ್ಮ, ೩೩, ೩೬, ೪೩, ೪೫, ೪೬, ೪೭, ೫೪, ೫೮, ೮೮; ಒಡೆಯ, ೪೬, ೪೭, ೮೬.

**೩೭. ಕರಣಸಂಹತಿಃ—**
ಕರಣಗಳ ಒಟ್ಟು ಗುಂಪಾದ ಪ್ರಾಣ, ೮೫.

**೫೮. ನಿಯೋಗಃ—**
ಈ ಕರ್ಮವನ್ನು ಮಾಡೆಂದು ವೇದವು ಮಾಡಿರುವ ಅಪ್ಪಣೆ, ೯, ೧೬.

**೫೯. ನಿರ್ವಾಣಮ್—**
ದೀಪವು ಆರಿ ನಿರ್ವಿಶೇಷವಾಗುವಂತೆ ಇಲ್ಲಿಯೇ ಪಡೆಯುವ ಮುಕ್ತಿ ೮೦.

**೬೦. ನಿರ್ವಿಶೇಷಮ್—**
ಇಂಥದ್ದು, ಅಂಥದ್ದು ಎಂದು ಹೇಳುವದಕ್ಕೆ ಇರಬೇಕಾದ ವಿಶೇಷಗಳು ಯಾವವೂ ಇಲ್ಲದಿರುವದು, ೭೧.

**೬೧. ಪಞ್ಚಭೂತಾನಿ—**
ಜಗತ್ತಿಗೆ ಕಾರಣವಾಗಿರುವ ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ— ಎಂಬ ಐದು ಭೂತಗಳು, ೮೭.

**೬೨. ಪಞ್ಚೇನ್ದ್ರಿಯಾಣಿ—**
ಚಕ್ಷುರಿಂದ್ರಿಯ, ಶ್ರೋತ್ರೇಂದ್ರಿಯ, ಸ್ಪರ್ಶೇಂದ್ರಿಯ, ಜಿಹ್ವೇಂದ್ರಿಯ, ಘ್ರಾಣೇಂದ್ರಿಯ—ಎಂಬ ಅರಿಯುವದಕ್ಕೆ ಸಾಧನವಾಗಿರುವ ಇಂದ್ರಿಯಗಳು, ೩೬.

**೬೩. ಪರಃ ಪುರುಷಾರ್ಥಃ—**
ಪುರುಷಾರ್ಥಗಳಲ್ಲೆಲ್ಲ ಹೆಚ್ಚಿನವಾದ ಮೋಕ್ಷವು, ೨೨.

**೬೪. ಪರಮಾತ್ಮಾ—**
ಎಲ್ಲಕ್ಕೂ ಹೆಚ್ಚಿನ ನಿಜವಾದ ಆತ್ಮ, ೧೯, ೮೦.

**೬೫. ಪರಮಾರ್ಥವಸ್ತು—**
ನಿಜವಾಗಿಯೂ ವಸ್ತುವಾಗಿರುವ ಆತ್ಮ, ತೋರಿಕೆಯ ವಸ್ತುವಲ್ಲ, ೧೯.

**೬೬. ಪರಮಾರ್ಥಾತ್ಮವಿಜ್ಞಾನಮ್**
ನಿಜವಾಗಿರುವ ವಸ್ತುವಾದ ಆತ್ಮನ ಅರಿವು, ಜ್ಞಾನ, ೮.

**೬೭. ಪರಮಾರ್ಥಾತ್ಮಾ—**
ನಿಜವಾಗಿ ಆತ್ಮನಾಗಿರುವ ಪರಮಾತ್ಮ; ಅವಿದ್ಯೆಗೆ ಆತ್ಮನೆಂದು ತೋರುವ ದೇಹಾದ್ಯಾತ್ಮರಲ್ಲ, ೮.

**೬೮. ಪರಬ್ರಹ್ಮ—**
ತೀರ ಹೆಚ್ಚಿನ ಬ್ರಹ್ಮ; ಸಗುಣನಾದ ಹಿರಣ್ಯಗರ್ಭನಲ್ಲ, ೮,೧೪,೩೭,೫೪.

**೬೯. ಪರಾ ಗತಿಃ—**
ಸಾಧಕನು ಮುಟ್ಟಬಹುದಾದ ಹೆಚ್ಚಿನ ಬ್ರಹ್ಮಲೋಕವು, ೨.

**೭೦. ಪರಾರ್ಥಮ್—**
ಸ್ವತಂತ್ರವಾಗಿರುವದಕ್ಕಾಗಿ ಕೆಲಸಮಾಡುತ್ತಿರುವ ಅಧೀನವಸ್ತು, ೫೧, ೫೨.

**೭೧. ಪಾಙ್ಕ್ತಲಕ್ಷಣಮ್—**
ಕರ್ಮಕ್ಕೆ ಬೇಕಾಗಿರುವ ಐದು ಉಪಕರಣಗಳು, ೧೩.

**೭೨. ಪಾರಿಶೇಷ್ಯಮ್—**
ಕೊನೆಯಲ್ಲಿ ಉಳಿಯುವದು ಇದೇ ಎಂದು ನಿರ್ಧರಿಸುವ ನ್ಯಾಯ, ೫೪, ೮೫.

**೭೩. ಪಾರಿವ್ರಾಜ್ಯಮ್—**
ಗೃಹಸ್ಥಾಶ್ರಮವನ್ನೂ ಅದರ ಕರ್ಮವನ್ನೂ ತ್ಯಾಗಮಾಡಿ ಪಡೆಯುವ ಸಂನ್ಯಾಸ, ೧೮, ೨೧.

**೭೪. ಪುರುಷಃ—**
ಆತ್ಮ, ೫೭, ೬೩; ವಿರಾಟ್, ೩೪, ೩೮, ೬೦; ಮನುಷ್ಯ, ೪೧, ೭೪.

**೭೫. ಪುರುಷವಿಧಃ—**
ಮನುಷ್ಯನಂತೆ ತಲೆ ಕೈ ಮುಂತಾದವುಗಳನ್ನುಳ್ಳವ, ೩೫.

**೭೬. ಪುರುಷಾಗ್ನಿಃ—**
ಛಾಂದೋಗ್ಯದಲ್ಲಿ ಹೇಳಿರುವ ಉಪಾಸನೆಯ ಐದು ಅಗ್ನಿಗಳಲ್ಲಿ ಪುರುಷನು, ೭೪.

**೯೯. ಮಹೇಶ್ವರಃ**— ಎಲ್ಲ ಈಶ್ವರರಿಗೂ ಈಶ್ವರನಾದ ಆತ್ಮ, ೪೬.

**೧೦೦. ಯಥಾಕಾಮಿತ್ವಮ್**— ಮನಬಂದಂತೆ ನಡೆಯುವದು, ೨೫.

**೧೦೧. ಯಾವಜ್ಜೀವಾದಿಶ್ರುತಿಃ**— ಬದುಕಿರುವವರೆಗೂ ಕರ್ಮವನ್ನು ಮಾಡಬೇಕೆಂದು ಹೇಳುವ ಶ್ರುತಿ, ೧೬ ೨೨.

**೧೦೨. ರಸಾದಿಕ್ರಮಃ**— ಅನ್ನರಸವೇ ಮುಂತಾದ ಕ್ರಮದಿಂದ ರೇತಸ್ಸಾಗುವ ರೀತಿ, ೭೪.

**೧೦೩. ವೃತ್ತಯಃ**— ಅಂತಃಕರಣದ ಬೇರೆ ಬೇರೆಯ ಮಾರ್ಪಾಡುಗಳು, ೮೫, ೮೬.

**೧೦೪. ವ್ಯುತ್ಥಾನಮ್**— ಗಾರ್ಹಸ್ಥ್ಯವನ್ನು ಬಿಟ್ಟು ಏಳುವ ಸಂನ್ಯಾಸ ೧೩, ೧೪, ೨೪, ೨೫.

**೧೦೫. ಶರೀರಪ್ರಬನ್ಧಃ**— ಶರೀರಗಳ ಸಾಲು, ೮೦.

**೧೦೬. ಶರೀರಭೇದಃ**— ಶರೀರದ ನಾಶ, ೮೦.

**೧೦೭. ಶಾಸ್ತ್ರಮ್**— ವೇದ, ೭೨, ೭೭.

**೧೦೮. ಸಂಯೋಗಜಮ್**— ಎರಡರ ಕೂಡುವಿಕೆಯಿಂದ ಉಂಟಾಗತಕ್ಕದ್ದು, ೬೬, ೬೮, ೬೯.

**೧೦೯. ಸಂಸಾರದೋಷಾಃ**— ಹಸಿವು, ನೀರಡಿಕೆ, ಶೋಕ, ಮೋಹ, ಮುಪ್ಪು, ಸಾವು ಮುಂತಾದವು, ೮.

**೧೧೦. ಸಂಹತಃ**— ಮತ್ತೊಂದರೊಡನೆ ಸೇರಿಕೊಂಡು ಕೆಲಸಮಾಡುವ ವಸ್ತು; ೫೨.

**೧೧೧. ಸಂಹಿತೋಪನಿಷತ್**— ಈ ಉಪನಿಷತ್ತಾದಬಳಿಕ ಬರುವ ಐತರೇಯಾರಣ್ಯಕದ ಭಾಗ, ೫.

**೧೧೨. ಸಙ್ಘಾತಃ**— ಎಲ್ಲವೂ ಸೇರಿ ಕೆಲಸಮಾಡುವ ಅವಯವಗಳ ಗುಂಪು, ೫೩.

**೧೧೩. ಸರ್ವಗತಃ**— ಎಲ್ಲೆಲ್ಲಿಯೂ ವ್ಯಾಪಿಸಿರುವ, ೬೦.

**೧೧೪. ಸರ್ವಜ್ಞಃ**— ಎಲ್ಲವನ್ನೂ ಬಲ್ಲ ಆತ್ಮ, ೩೦, ೩೧, ೫೯, ೬೧, ೬೨, ೮೦.

**೧೧೫. ಸರ್ವಶಕ್ತಿಃ**— ಎಲ್ಲವನ್ನೂ ಉಂಟುಮಾಡಬಲ್ಲ ಶಕ್ತಿಗಳುಳ್ಳವನು, ೩೧, ೫೯, ೬೧.

**೧೧೬. ಸರ್ವಾತ್ಮಭಾವಃ**— ಎಲ್ಲಕ್ಕೂ ಆತ್ಮನಾಗಿ, ಎಲ್ಲವೂ ತಾನೇ ಆಗುವಿಕೆ, ೮೦, ೮೧.

**೧೧೭. ಸರ್ವಾತ್ಮಕವಸ್ತು**— ಎಲ್ಲವೂ ತಾನೇ ಆಗಿರುವ ವಸ್ತು, ೧೯.

**೧೧೮. ಸರ್ವಾತ್ಮಾ**— ಎಲ್ಲಕ್ಕೂ ಆತ್ಮನಾಗಿರುವ ಪರಮಾತ್ಮ, ೬೦.

**೧೧೦. ಸವಿಶೇಷನಿರ್ವಿಶೇಷಾತ್ಮಾನೌ**— ಇಂಥದ್ದೆಂದು ಹೇಳುವದಕ್ಕೆ ಬರುವ ವಿಶೇಷಗಳಿರುವ ಸಗುಣಬ್ರಹ್ಮ ಮತ್ತು ಯಾವ ವಿಶೇಷವೂ ಇಲ್ಲದ ಪರಬ್ರಹ್ಮ, ೨೭.

**೧೨೦ ಸಾಧ್ಯಸಾಧನೇ**— ಕರ್ಮಾದಿಸಾಧನಗಳೂ ಪುತ್ರಾದಿಸಾಧ್ಯಗಳೂ, ೧೩, ೧೫, ೮೧.

**೧೨೧. ಸ್ವತೋಽಪ್ರಾಪ್ತಮ್**— ಪ್ರತ್ಯಕ್ಷಾದಿಗಳಿಂದಲೇ ನಿಶ್ಚಿತವಾಗದಿರುವದು, ೧೧.

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ ೨೬

ಶ್ರೀ ಶಾಂಕರಭಾಷ್ಯಸಮೇತ

# ತೈತ್ತಿರೀಯೋಪನಿಷತ್ತು

(ಉಪನಿಷತ್ತಿನ ಮತ್ತು ಭಾಷ್ಯದ ಸಂಸ್ಕೃತಮೂಲ, ಅನುವಾದ, ಟಿಪ್ಪಣಿ, ಸಾರ-ಮುಂತಾದವುಗಳೊಡನೆ)

ಬರೆದವರು :
ಅಧ್ಯಾತ್ಮಗ್ರಂಥಾವಳಿಯ ಸಂಪಾದಕ
**ಯಲ್ಲಂಬಳಸೆ ಸುಬ್ರಹ್ಮಣ್ಯಶರ್ಮ**

ಅಧ್ಯಾತ್ಮಗ್ರಂಥಾವಳಿಯ ಕ್ರಮಾಂಕ ೮

ಅಧ್ಯಾತ್ಮಪ್ರಕಾಶಕಾರ್ಯಾಲಯ
ಹೊಳೆನರಸೀಪುರ

೧೯೪೬

# ಪೀಠಿಕೆ

## ಉಪನಿಷತ್ತಿನ ಸ್ಥಾನ

ತೈತ್ತಿರೀಯೋಪನಿಷತ್ತು ನಮ್ಮ ದೇಶದಲ್ಲಿ ಸುಪ್ರಸಿದ್ಧವಾಗಿರುತ್ತದೆ. ಈ ಕಡೆಯಲ್ಲಿ ತೈತ್ತಿರೀಯಶಾಖೆಯವರು ಹೆಚ್ಚಿನ ಸಂಖ್ಯೆಯಲ್ಲಿ ಸಿಕ್ಕುತ್ತಾರೆ. ಈಗ ವೈದಿಕರು ಸ್ವರಸಹಿತವಾಗಿ ಪಠಿಸುವ ಕೆಲವೇ ಉಪನಿಷತ್ತುಗಳಲ್ಲಿ ಇದು ಒಂದು ಮುಖ್ಯವಾದ ಉಪನಿಷತ್ತಾಗಿದೆ. **ಈ ಉಪನಿಷತ್ತು ತೈತ್ತಿರೀಯಾರಣ್ಯಕದ ಏಳನೆಯ ಪ್ರಪಾಠಕದಿಂದ ಒಂಭತ್ತನೆಯ ಪ್ರಪಾಠಕದವರೆಗಿನ ಭಾಗವು.** ಹತ್ತನೆಯ ಪ್ರಪಾಠಕವಾದ "ನಾರಾಯಣಪನ್ನ ಅಥವಾ ಅಂಭಸಿ" ಎಂದು ವೈದಿಕರಲ್ಲಿ ಪ್ರಸಿದ್ಧವಾಗಿರುವ ಭಾಗವನ್ನು ಆಚಾರ್ಯರು ಸೂತ್ರಭಾಷ್ಯ (೩-೩-೨೪) ವೇ ಮುಂತಾದವುಗಳಲ್ಲಿ ಪ್ರಮಾಣವಾಗಿ ಉದಾಹರಿಸಿರುತ್ತಾರಾದರೂ ಆದೇಕೋ ಅದಕ್ಕೆ ಭಾಷ್ಯವನ್ನು ಬರೆದಿರುವದಿಲ್ಲ. ಸಾಯಣಾಚಾರ್ಯರು ಇಡಿಯ ವೇದಕ್ಕೇ ಭಾಷ್ಯವನ್ನು ಬರೆಯುವದಕ್ಕೆ ಹೊರಟವರಾದ್ದರಿಂದ ಆ ಭಾಗಕ್ಕೂ ವಿವರಣೆಯನ್ನು ಬರೆದಿರುತ್ತಾರೆ. ಅವರ ಮತದಲ್ಲಿ ತೈತ್ತಿರೀಯೋಪನಿಷತ್ತು 'ಸಾಂಹಿತೀ', 'ವಾರುಣೀ', 'ಯಾಜ್ಞಿಕೀ' ಎಂದು ಮೂರು ಬಗೆಯಾಗಿರುತ್ತದೆ. ಸಂಹಿತೆಗಳ ವಿಷಯವನ್ನು ಒಳಗೊಂಡಿರುವದರಿಂದ ಏಳನೆಯ ಪ್ರಪಾಠಕವು 'ಸಾಂಹಿತೀ ಉಪನಿಷತ್ತು'; ಎಂಟು, ಒಂಭತ್ತು-ಈ ಎರಡು ಪ್ರಪಾಠಕಗಳಿಗೆ ವರುಣನು ಸಂಪ್ರದಾಯಪ್ರವರ್ತಕನಾಗಿರುವದರಿಂದ ಅವೆರಡೂ ಸೇರಿ 'ವಾರುಣೀ ಉಪನಿಷತ್ತು', ಹತ್ತನೆಯ ಪ್ರಪಾಠಕದಲ್ಲಿ ಯಜ್ಞೋಪಯುಕ್ತವಾದ ಮಂತ್ರಗಳೂ ಅಲ್ಲಲ್ಲಿ ಕಂಡುಬರುವದರಿಂದ ಅದು "ಯಾಜ್ಞಿಕೀ ಉಪನಿಷತ್ತು" ಎಂದು ಅವರು ಉಪನಿಷತ್ತಿನ ಸಂಬಂಧಭಾಷ್ಯದಲ್ಲಿ ಬರೆದಿರುತ್ತಾರೆ. ತೈತ್ತಿರೀಯರ ಬ್ರಹ್ಮಯಜ್ಞತರ್ಪಣದಲ್ಲಿ ಈ ಹೆಸರುಗಳನ್ನು ಉಪಯೋಗಿಸುವ ಪದ್ಧತಿಯೂ ಇದೆ. ಆದರೆ ಶಂಕರಾಚಾರ್ಯರವರು ಈ ವಿಭಾಗವನ್ನು ಒಪ್ಪಿದ್ದರೋ ಇಲ್ಲವೋ ಎಂಬುದನ್ನು ಭಾಷ್ಯದ ಆಧಾರದಿಂದ ನಿಶ್ಚಯಿಸುವದಕ್ಕೆ ಬರುವಂತಿಲ್ಲ. ನಾರಾಯಣದಲ್ಲಿ ಅಥವಾ ಯಾಜ್ಞಿಕೀ ಉಪನಿಷತ್ತಿನಲ್ಲಿ ಅರುವತ್ತುನಾಲ್ಕು ಅನುವಾಕಗಳ ದ್ರಾವಿಡಪಾಠ, ಎಂಬತ್ತು ಅನುವಾಕಗಳ ಆಂಧ್ರಪಾಠ, ಎಂಬತ್ತುನಾಲ್ಕು ಅನುವಾಕಗಳ ಕಾರ್ಣಾಟಕ ಪಾಠ, ಎಂಬತ್ತೊಂಬತ್ತು ಅನುವಾಕಗಳ ಮತ್ತೊಂದು ಪಾಠ-ಹೀಗೆ ನಾಲ್ಕು ಪಾಠಸಂಪ್ರದಾಯಗಳು ಇರುವವೆಂದು ಸಾಯಣಭಾಷ್ಯದಲ್ಲಿ ಬರೆದಿದೆ. ಆಚಾರ್ಯರ ಕಾಲದಲ್ಲಿ ಈ ಸಂಪ್ರದಾಯಗಳು ಇದ್ದವೋ ಇಲ್ಲವೋ ಎಂಬುದನ್ನು ನಿರ್ಣಯಿಸುವದಕ್ಕೂ ನಮಗೆ ಸಾಕಾದಷ್ಟು ಆಧಾರವಿರುವದಿಲ್ಲ.

## ಉಪನಿಷತ್ತಿನ ಭಾಷ್ಯ

"ಪದವಾಕ್ಯಪ್ರಮಾಣಗಳನ್ನು ಅನುಸರಿಸಿ ಸರ್ವ ಉಪನಿಷತ್ತುಗಳಿಗೂ ವಿವರವನ್ನು ಬರೆದಿರುವ ಗುರುಗಳಿಗೆ ನಾನು ನಿತ್ಯವೂ ನಮಸ್ಕರಿಸುವೆನು" ಎಂಬ ವಾಕ್ಯವೊಂದು ಈ ಭಾಷ್ಯದ ಆದಿಯಲ್ಲಿ ಕಂಡುಬರುತ್ತದೆ. ಭಾಷ್ಯಕಾರರು ಇಲ್ಲಿ ಯಾವ ಗುರುಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಬರೆದಿರುವರೋ ಊಹಿಸುವದಕ್ಕೆ ಬರುವಂತಿಲ್ಲ. ಸದ್ಯಕ್ಕೆ ಅದ್ವೈತಿಗಳಿಗೆಲ್ಲ ಮಾನ್ಯವಾಗಿ ನಮಗೆ ಸಿಕ್ಕುವ ಅತ್ಯಂತ ಪ್ರಾಚೀನ ಭಾಷ್ಯವೆಂದರೆ ಈ ಆಚಾರ್ಯರ ಭಾಷ್ಯವೇ ಆಗಿರುತ್ತದೆ. ತೈತ್ತಿರೀಯ ಭಾಷ್ಯದಲ್ಲಿ ಸಿದ್ಧಾಂತದ ಸಾರವನ್ನೆಲ್ಲ ಹಿಂಡಿಟ್ಟಿರುತ್ತದೆ. ಶಂಕರಭಗವತ್ಪಾದರವರ ಶೈಲಿಯು ಸ್ವಭಾವದಿಂದ ಲಲಿತವೇ ಅದರೂ ಈ ಉಪನಿಷತ್ತಿನ ಭಾಷ್ಯವು ಇನ್ನಷ್ಟು ವಿವರವಾಗಿರಬೇಕಾಗಿತ್ತೆಂದು ಅನ್ನಿಸುವ ಭಾಗಗಳೂ ಕೆಲವು ಕಂಡುಬರುತ್ತವೆ. ಈ ಭಾಷ್ಯಕ್ಕೆ ವಾರ್ತಿಕವನ್ನು ಬರೆದಿರುವ **ಸುರೇಶ್ವರಾಚಾರ್ಯರು** ಭಾಷ್ಯಕಾರರ ಬೆಂಬಳಿಯ ಶಿಷ್ಯರಾಗಿದ್ದರೂ ಅವರ ಬರೆವಣಿಗೆಯಿಂದ ಭಾಷ್ಯದಲ್ಲಿ ಗಡುಚಾಗಿ ಕಾಣುವ ಸ್ಥಳಗಳಲ್ಲಿ ಸಹಾಯವೇನೂ ಆಗುವಂತಿಲ್ಲ. ಭಾಷ್ಯಾರ್ಥವನ್ನು ಬಹು ಸಂಕ್ಷೇಪವಾಗಿ ವಿವರಿಸಿ, ಅದ್ವೈತಿಗಳಲ್ಲಿ ತಮ್ಮ ಕಾಲಕ್ಕೆ ಕಾಣಿಸಿಕೊಂಡಿದ್ದ ಪ್ರಕ್ರಿಯಾಭೇದಗಳನ್ನು ವಿಮರ್ಶಿಸುವದಕ್ಕೆಂದೇ ಅವರ ವಾರ್ತಿಕವು ಹೊರಟಿರುವಂತೆ ಕಾಣುತ್ತದೆ. ಮುಖ್ಯವಾಗಿ ಬ್ರಹ್ಮಜ್ಞಾನವು ವಸ್ತುತಂತ್ರವಾದದ್ದು, ವಿಧಿಗೆ ವಿಷಯವಲ್ಲ,-ಎಂಬುದನ್ನು ಸ್ಪಷ್ಟಪಡಿಸುವದಕ್ಕೇ ಅವರು ತಮ್ಮ ಗ್ರಂಥದ ಬಹುಭಾಗವನ್ನು ವಿನಿಯೋಗಿಸಿರುತ್ತಾರೆ. **ಸಾಯಣಾಚಾರ್ಯರು** ಆಚಾರ್ಯರಿಗಿಂತ ಬಹಳ ಈಚಿನವರಾಗಿರುವದರಿಂದಲೂ ಕೆಲವು ಕಡೆಗಳಲ್ಲಿ ತಮ್ಮದೇ ಆಗಿರುವ ಸ್ವತಂತ್ರ ವ್ಯಾಖ್ಯಾನವನ್ನು ಅವರು ಬರೆದಿರುವದರಿಂದಲೂ ಭಾಷ್ಯಾರ್ಥವನ್ನು ನಿರ್ಣಯಿಸುವದಕ್ಕೆ ಅವರ ವೇದಭಾಷ್ಯವೂ ಅಷ್ಟು ಪ್ರಯೋಜನಕರವಾಗಿರುವದಿಲ್ಲ. ಈ ಸಂನಿವೇಶದಲ್ಲಿ ನಾವು ಆಚಾರ್ಯರ ಬೇರೆಯ ಉಪನಿಷತ್ತುಗಳ ಮತ್ತು ಗೀತೆಯ ಭಾಷ್ಯಗಳ ಆಧಾರದಿಂದಲೇ ಸಾಧ್ಯವಾದ ಮಟ್ಟಿಗೂ ಪ್ರಕೃತದಲ್ಲಿ ಅಲ್ಲಲ್ಲಿ ಸಿಕ್ಕುವ ಕಗ್ಗಂಟುಗಳನ್ನು ಬಿಚ್ಚುವದಕ್ಕೆ ಪ್ರಯತ್ನವನ್ನು ಮಾಡಬೇಕಾಗಿರುತ್ತದೆ. ಅದರಲ್ಲಿಯೂ ಮುಖ್ಯವಾಗಿ ಆಚಾರ್ಯರ **ಬೃಹದಾರಣ್ಯಕಭಾಷ್ಯವು** ಉಪನಿಷದ್ಭಾಷ್ಯಗಳಲ್ಲೆಲ್ಲ ಅತ್ಯಂತ ವಿಸ್ತಾರವಾಗಿರುವದರಿಂದಲೂ ಆ ಭಾಷ್ಯಕ್ಕೆ ವಾರ್ತಿಕವನ್ನು ಬರೆದಿರುವ **ಸುರೇಶ್ವರಾಚಾರ್ಯರು** ಅಲ್ಲಿಯ ಅನೇಕ ಶ್ಲೋಕಗಳನ್ನು ಇಲ್ಲಿಯೂ ಹಾಗೆಯೇ ಜೋಡಿಸಿಟ್ಟಿರುವದು ಕಂಡುಬರುವದರಿಂದಲೂ ಈ ಎರಡು ಉಪನಿಷದ್ಭಾಷ್ಯಗಳ ಹೋಲಿಕೆಯಿಂದ ಭಾಷ್ಯದ ಹೃದಯವನ್ನು ಗೊತ್ತುಪಡಿಸುವದು ಯುಕ್ತವೆಂದು ನಾನು ಭಾವಿಸಿರುತ್ತೇನೆ. ಆದ್ದರಿಂದ ಮಿಕ್ಕ ವ್ಯಾಖ್ಯಾನಗಳ ಸಹಾಯವನ್ನೂ ತೆಗೆದುಕೊಂಡೇ ಹೊರಟಿದ್ದರೂ

ಭಾಷ್ಯಾನುವಾದದಲ್ಲಿ ನಾನು ಸ್ವತಂತ್ರವಾಗಿಯೇ ಪ್ರವರ್ತಿಸಿರುವಂತೆ ಕೆಲವು ಕಡೆ ತಟ್ಟನೆ ಕಂಡರೆ ಅದಕ್ಕೆ ಭಾಷ್ಯಹೃದಯವನ್ನು ಭಾಷ್ಯದ ಬೆಂಬಲದಿಂದಲೇ ಕಂಡು ಹಿಡಿಯಲು ಮಾಡಿರುವ ಪ್ರಯತ್ನವೇ ಕಾರಣವೆಂದು ಇಲ್ಲಿ ಬಿನ್ನವಿಸಿಕೊಂಡಿರುತ್ತೇನೆ.

## ಭಾಷ್ಯದ ವಿಭಾಗಗಳು

ಉಪನಿಷತ್ತಿನಲ್ಲಿ ಶೀಕ್ಷಾವಲ್ಲಿ, ಆನಂದವಲ್ಲಿ, ಭೃಗುವಲ್ಲಿ—ಎಂಬ ಮೂರು ಭಾಗ ಗಳಿರುತ್ತವೆ. ಶೀಕ್ಷಾವಲ್ಲಿಯಲ್ಲಿ ವರ್ಣಸ್ವರಾದಿಗಳ ವಿಚಾರವು ಮಾತ್ರ ಇರುವದಿಲ್ಲ; ಅದರಲ್ಲಿ ಹಲವು ಉಪಾಸನೆಗಳೂ ಇವೆ. ಮುಖ್ಯವಾಗಿ ಅಪರಬ್ರಹ್ಮದ ಅಥವಾ ಸೋಪಾಧಿಕಬ್ರಹ್ಮದ ಉಪಾಸನೆಯನ್ನೂ ಮುಮುಕ್ಷುಗಳಿಗೆ ಬೇಕಾಗಿರುವ ಕರ್ಮದ ವಿಚಾರವನ್ನೂ ಅಲ್ಲಿ ತಿಳಿಸಿರುತ್ತದೆ. ಆದ್ದರಿಂದ ಅದಕ್ಕೆ **'ಶೀಕ್ಷಾವಲ್ಲಿ'** ಎಂದು ಪ್ರಚಾರ ದಲ್ಲಿರುವ ಹೆಸರಾಗಲಿ 'ಸಾಂಹಿತೀ ಉಪನಿಷತ್ತು' ಎಂದು ಸಾಯಣರು ಕೊಟ್ಟಿರುವ ಹೆಸರಾಗಲಿ ಅನ್ವರ್ಥವಾಗಿರುವದಿಲ್ಲ. ಎರಡನೆಯ ವಲ್ಲಿಯಲ್ಲಿ ನಮ್ಮ ಪರಮಾತ್ಮ ಸ್ವರೂಪವಾದ ಆನಂದವೇ ಸತ್ಯವೂ ಜ್ಞಾನವೂ ಅನಂತವೂ ಆಗಿರುವ ಬ್ರಹ್ಮವು ಎಂಬ ಜ್ಞಾನದಿಂದ ಪರಮಪುರುಷಾರ್ಥವು ದೊರಕುವದೆಂದು ಪ್ರತಿಪಾದಿಸಿದೆ. ಆದ್ದರಿಂದ 'ಬ್ರಹ್ಮವಲ್ಲಿ', 'ಆನಂದವಲ್ಲಿ', 'ಬ್ರಹ್ಮಾನಂದವಲ್ಲಿ' ಎಂದು ರೂಢಿಯಲ್ಲಿರುವ ಹೆಸರು ಗಳು ಅದಕ್ಕೆ ಅನ್ವರ್ಥವಾಗಿವೆ ಎನ್ನಬಹುದು. ಆದರೆ ಆಚಾರ್ಯರು ಕಂಠೋಕ್ತವಾಗಿ **"ಆನಂದವಲ್ಲಿ"** ಎಂದೇ ಕರೆದಿರುವದರಿಂದ ಈ ಅನುವಾದದಲ್ಲಿ ಅದೇ ಹೆಸರನ್ನೇ ಇಟ್ಟುಕೊಂಡಿದೆ. ಮೂರನೆಯ ವಲ್ಲಿಯಲ್ಲಿ ಭೃಗುವಿಗೆ ವರುಣನು ಉಪದೇಶಿಸಿದ ತಪಸ್ಸೆಂಬ ಬ್ರಹ್ಮವಿದ್ಯಾಸಾಧನದ ವಿಚಾರವಿದೆ; ಭೃಗುವು ಅನ್ನದಿಂದ ಹಿಡಿದು ಕ್ರಮಕ್ರಮವಾಗಿ ವಿಚಾರಮಾಡುತ್ತಾ ಆನಂದವೇ ಬ್ರಹ್ಮವೆಂದು ನಿಶ್ಚಯಿಸಿದ ವಿವರ ವಿದೆ; ಬ್ರಹ್ಮದ ಬಗೆಬಗೆಯ ಉಪಾಸನೆಗಳ ಮತ್ತು ಅವುಗಳ ಫಲದ ವಿವರವೂ ಇದೆ. ಆದ್ದರಿಂದ ಅದಕ್ಕೆ **"ಭೃಗುವಲ್ಲಿ"** ಎಂದು ಪ್ರಚಾರದಲ್ಲಿರುವ ಹೆಸರಾಗಲಿ ಆನಂದ ವಲ್ಲಿಯನ್ನೂ ಸೇರಿಸಿಕೊಂಡು **ಸಾಯಣಾಚಾರ್ಯರವರು** ಇಟ್ಟಿರುವ "ವಾರುಣೀ ಉಪನಿಷತ್ತು" ಎಂಬ ಹೆಸರಾಗಲಿ ಅದರ ಸ್ವರೂಪವನ್ನು ವರ್ಣಿಸುವಷ್ಟು ವ್ಯಾಪಕ ವಾಗಿರುವದಿಲ್ಲವೆಂದು ಹೇಳಬೇಕಾಗಿದೆ.

## ಅನುವಾಕಗಳ ವಿಂಗಡ

ಈ ಮೂರು ವಲ್ಲಿಗಳ ಭಾಷ್ಯವನ್ನು ಕನ್ನಡಿಸುವದರಲ್ಲಿ ಒಂದು ನಿಯತ ವಾದ ವಿಭಾಗಕ್ರಮವನ್ನು ಅನುಸರಿಸುವದು ಸಾಧ್ಯವಾಗಲಿಲ್ಲ. ವೈದಿಕಪಾಠದ ಸಂಪ್ರದಾಯದಂತೆ ಶೀಕ್ಷಾವಲ್ಲಿಯಲ್ಲಿ ಹತ್ತು (ಶಾಂತಿಯೂ ಸೇರಿ ಹನ್ನೊಂದು) ಅನುವಾಕಗಳಿರುತ್ತವೆ; ಆನಂದವಲ್ಲಿಯಲ್ಲಿ ಒಂಬತ್ತು (ಶಾಂತಿಯೂ ಸೇರಿ ಹತ್ತು), ಭೃಗುವಲ್ಲಿಯಲ್ಲಿಯಲ್ಲಿ ಹತ್ತು-ಹೀಗೆ ಅನುವಾಕಗಳಿರುತ್ತವೆ. ಅನುವಾಕಗಳನ್ನೂ ಅವು

ಗಳಲ್ಲಿರುವ ವಾಕ್ಯಗಳನ್ನು ಹತ್ತುಹತ್ತಾಗಿ ವಿಂಗಡಿಸಿಕೊಳ್ಳುವ ಹನಸುಗಳನ್ನೂ ಲೆಕ್ಕ ಮಾಡಿಕೊಂಡು ವೈದಿಕರು ಅಧ್ಯಯನಮಾಡುತ್ತಿರುವರಾದರೂ ಅರ್ಥಕ್ಕನುಸಾರ ವಾಗಿ ನೋಡಿದರೆ ಆನಂದವಲ್ಲಿಯಲ್ಲಾಗಲಿ ಭೃಗುವಲ್ಲಿಯಲ್ಲಾಗಲಿ ಆ ಕ್ರಮವನ್ನು ಅನುಸರಿಸುವದು ಸಾಧ್ಯವೇ ಇಲ್ಲ. ಭಾಷ್ಯಕಾರರಾಗಲಿ ಸಾಯಣರಾಗಲಿ ಈಗ ಪ್ರಚಾರದಲ್ಲಿರುವ ಅನುವಾಕವಿಭಾಗವನ್ನು ಅನುಸರಿಸಿರುವದಿಲ್ಲ. ವೇದಭಾಷ್ಯವನ್ನು ಅನುವಾಕಾನುಸಾರವಾಗಿ ವಿಂಗಡಿಸಿಕೊಂಡು ಬರೆದಿರುವ ಸಾಯಣರುಕೂಡ ಆನಂದ ವಲ್ಲಿಯ ಶಾಂತಿಯನ್ನು ಬಿಟ್ಟು ಮಿಕ್ಕದ್ದೆಲ್ಲ ಒಂದು ಅನುವಾಕವೆಂದೂ ಭೃಗುವಲ್ಲಿ ಯೆಲ್ಲ ಮತ್ತೊಂದು ಅನುವಾಕವೆಂದೂ ಭಾವಿಸಿ ಎಂಟನೆಯ ಪ್ರಪಾಠಕಕ್ಕೆ ಮೂರು ಅನುವಾಕಗಳೆಂದು ಎಣಿಸಿರುತ್ತಾರೆ. ಈ ಎಲ್ಲಾ ಕಾರಣಗಳಿಂದ ನಾನು ಅನುವಾಕಗಳ ವಿಂಗಡನೆಯನ್ನು ಲೆಕ್ಕಕ್ಕೆ ತಾರದೆ ಭಾಷ್ಯದ ಪ್ರತಿಪಾದನೆಗೆ ತಕ್ಕಂತೆ ಅರ್ಥಕ್ಕನುಗುಣವಾಗಿ ಈ ಎರಡು ವಲ್ಲಿಗಳನ್ನೂ ಕೆಲವು ಖಂಡಗಳಾಗಿ ವಿಂಗಡಿಸಿ ಕೊಂಡಿರುತ್ತೇನೆ. ಭಾಷ್ಯವನ್ನು ಇಂಗ್ಲಿಷಿಗೆ ರೂಪಾಂತರಗೊಳಿಸಿರುವ **ಕೈಲಾಸವಾಸಿ ಎ. ಮಹಾದೇವಶಾಸ್ತ್ರಿಗಳವರ ಗ್ರಂಥ**ದಿಂದ ಈ ವಿಭಾಗಕ್ರಮವೇ ಸರಿಯೆಂದು ನನಗೆ ಮೊಟ್ಟಮೊದಲು ಮನದಲ್ಲಿ ಮಿಂಚಿತಾದರೂ ವಿಭಾಗಗಳನ್ನೂ ಅವುಗಳ ಹೆಸರು ಗಳನ್ನೂ ನನಗೆ ಯುಕ್ತವಾಗಿ ಕಂಡಂತೆ ಮಾರ್ಪಡಿಸಿಕೊಂಡಿರುತ್ತೇನೆ. ಭಾಷ್ಯದ ವಿಚಾರಸರಣಿಯನ್ನು ಮನದಟ್ಟುಮಾಡಿಕೊಳ್ಳಬೇಕೆನ್ನುವವರಿಗೆ ಈ ಪದ್ಧತಿಯಿಂದ ಹೆಚ್ಚಿನ ಸಹಾಯವಾಗುವದೆಂದು ನಾನು ನಂಬಿರುತ್ತೇನೆ.

## ಭಾಷ್ಯದ ಮುಖ್ಯಾಂಶಗಳು

ಭಾಷ್ಯದಲ್ಲಿ ಸಿದ್ಧಾಂತಕ್ಕೆ ಅಡಿಗಲ್ಲಾಗಿರುವ ಅನೇಕ ವಿಷಯಗಳನ್ನು ಪ್ರತಿ ಪಾದಿಸಿರುತ್ತದೆ. ಮುಖ್ಯವಾಗಿ ಕರ್ಮಗಳಿಗೂ ಜ್ಞಾನಕ್ಕೂ ಇರುವ ಸಂಬಂಧ, ಅಪರಬ್ರಹ್ಮಪ್ರಾಪ್ತಿಗೂ ಪರಬ್ರಹ್ಮಪ್ರಾಪ್ತಿಗೂ ಇರುವ ತಾರತಮ್ಯ, ನಿರ್ವಿಶೇಷ ವಾದ ಬ್ರಹ್ಮಾನಂದವನ್ನು ಇಲ್ಲಿಯೇ ಅನುಭವಕ್ಕೆ ತಂದುಕೊಂಡರೆ ಪರಮ ಮುಕ್ತಿಯು ಲಭಿಸುವದು ಎಂಬುದರ ರಹಸ್ಯ, ದ್ವೈತವೂ ಜೀವನ ಸಂಸಾರಿತ್ವವೂ ಅವಿದ್ಯಕವೆಂದೂ ವಿದ್ಯಾವಿದ್ಯೆಗಳುಕೂಡ ನಿಜವಾಗಿ ಆತ್ಮನ ಧರ್ಮಗಳಲ್ಲವೆಂದೂ ಮನಗಾಣಿಸುವ ಯುಕ್ತಿ--ಇವಿಷ್ಟನ್ನು ಜಿಜ್ಞಾಸುಗಳು ಮನದಟ್ಟುಮಾಡಿಕೊಳ್ಳತಕ್ಕ ದ್ದಿದೆ. ಒಂದೊಂದರ ವಿಷಯಕ್ಕೂ ದಿಗ್ದರ್ಶಕವಾಗಿ ಎರಡು ಮಾತುಗಳನ್ನು ಇಲ್ಲಿ ಹೇಳುವದು ಅಂಥವರಿಗೆ ಸಹಾಯಕವಾದೀತೆಂದು ನಂಬಿರುತ್ತೇನೆ.

### (೧) ಕರ್ಮಗಳಿಗೂ ಜ್ಞಾನಗಳಿಗೂ ಸಂಬಂಧ

**ಕರ್ಮದಿಂದಲೇ ಎಂದಿಗೂ ಮೋಕ್ಷವಾಗಲಾರದು** (ಭಾ. ಭೂ. ೮, ೭೧) **ಸಂಚಿತಕರ್ಮಗಳೂ ಆಗಾಮಿಕರ್ಮಗಳೂ ಯಾವಾಗಲೂ ಉಳಿದುಕೊಂಡೇ ಇರುತ್ತವೆ**

ಯಾದ್ದರಿಂದ ಅವುಗಳ ಫಲದಿಂದ ಬಿಡುಗಡೆಯನ್ನು ಹೊಂದುವದಕ್ಕೆ ಯಾವ ಕರ್ಮವೂ ಸಹಾಯಕವಾಗಲಾರದು (ಭಾ. ಭಾ. ೪) ಉಪಾಸನೆಯಿಂದ **ಕಾರ್ಯ ಬ್ರಹ್ಮ**ವನ್ನು ಮುಟ್ಟಬಹುದು; ಆದರೆ ಎಲ್ಲಕ್ಕೂ ಕಾರಣವಾಗಿರುವ ಪರಬ್ರಹ್ಮವನ್ನು ಸೇರುವದು ಅದರಿಂದಾಗಲಾರದು. ಕರ್ಮಕ್ಕೆ ಉತ್ಪತ್ತಿ, ಸಂಸ್ಕಾರ, ವಿಕಾರ, ಆಪ್ತಿ ಎಂಬ ನಾಲ್ಕೇ ಬಗೆಯಾದ ಫಲವನ್ನು ಕೊಡುವ ಶಕ್ತಿಯಿದೆ; ಆದರೆ ಬ್ರಹ್ಮಸ್ವರೂಪ ವಾದ ನಿತ್ಯವಾದ ಮುಕ್ತಿಯು ಈ ನಾಲ್ಕರಲ್ಲಿ ಒಂದೂ ಅಲ್ಲ. (೭೪ ರಿಂಡ ೭೬). ನಾವು ಅಜ್ಞಾನದಿಂದಲೇ ಪರಬ್ರಹ್ಮಕ್ಕಿಂತ ಬೇರೆಯಾಗಿರುವದರಿಂದ ಜ್ಞಾನದಿಂದಲೇ ಅದನ್ನು ಸೇರಬೇಕಾಗಿರುವದು (೯೦ ರಿಂದ ೯೩). ಅಕರ್ತ್ರಾತ್ಮಬುದ್ಧಿರೂಪವಾದ ಬ್ರಹ್ಮಜ್ಞಾನದೊಳಗೆ ಅಜ್ಞಾನದಿಂದಾಗಿರುವ ಕರ್ತೃತ್ವಬುದ್ಧಿಯಿಂದೊಡಗೂಡಿದ ಕರ್ಮವು ಇರಲೇ ಆರದು (೭೭). ಆದರೂ ಕರ್ಮಗಳನ್ನು ವಿಧಿಸಿರುವದು ವ್ಯರ್ಥ ವಲ್ಲ; ಅವುಗಳನ್ನು ಉಪಾಸನೆಯ ಜೊತೆಗೆ ಅನುಷ್ಠಾನಮಾಡುತ್ತಿದ್ದರೆ ಅಪರ ಬ್ರಹ್ಮವನ್ನು ಸೇರಿ ಸ್ವಾರಾಜ್ಯವನ್ನು ಪಡೆದುಕೊಳ್ಳಬಹುದು; ನಿಷ್ಕಾಮವಾಗಿ ಅನು ಷ್ಠಾನಮಾಡಿ ಚಿತ್ತಶುದ್ಧಿಯ ಮೂಲಕವಾಗಿ ಪರಬ್ರಹ್ಮದ ಜ್ಞಾನವನ್ನು ಪಡೆದು ಕೊಳ್ಳಬಹುದು (ಭಾ. ೫೩ ರಿಂದ ೫೯, ೭೯, ೮೧). ಆದರೆ ಮೋಕ್ಷಕ್ಕೆ ಗೃಹಸ್ಥಾ ಶ್ರಮದ ಕರ್ಮಗಳೇ ಆಗಬೇಕೆಂಬ ನಿರ್ಬಂಧವೇನೂ ಇಲ್ಲ; ಪೂರ್ವಜನ್ಮದಲ್ಲಿ ಕರ್ಮವನ್ನು ಮಾಡಿ ಚಿತ್ತಸಂಸ್ಕಾರವಾಗಿರುವವರಿಗೆ ಆಶ್ರಮಾಂತರದಲ್ಲಿಯೇ ಇದ್ದು ಕೊಂಡು ಸತ್ಯ, ಬ್ರಹ್ಮಚರ್ಯ, ಅಹಿಂಸೆ, ತಪಸ್ಸು-ಮುಂತಾದ ಸಾಧನಗಳಿಂದಲೇ ಈಶ್ವರನ ಅನುಗ್ರಹವುಂಟಾಗಿ ಜ್ಞಾನವುಂಟಾಗಬಹುದಾಗಿದೆ ಇದಲ್ಲದೆ ಶ್ರವಣ, ಮನನ, ನಿದಿಧ್ಯಾಸನ-ಎಂಬಿವೇ ಜ್ಞಾನಕ್ಕೆ ಬೇಕಾದ ಸಾಕ್ಷಾತ್ಸಾಧನಗಳಾಗಿರುತ್ತವೆ (೮೦ ರಿಂದ ೮೫)-ಎಂದು ಭಾಷ್ಯಕಾರರು ಪ್ರತಿಪಾದಿಸಿರುತ್ತಾರೆ.

ಕರ್ಮಕಾಂಡದಲ್ಲಿ ಅಲ್ಲಲ್ಲಿ ಜ್ಞಾನವಾಕ್ಯಗಳು ಕಾಣುವದುಂಟು; ಜ್ಞಾನಕಾಂಡ ದಲ್ಲಿ ಕರ್ಮಗಳೂ ವಿಹಿತವಾಗಿರುವದು ಕಾಣುತ್ತದೆ. ಆದರೆ ಕರ್ಮಕಾಂಡದಲ್ಲಿರುವ ಜ್ಞಾನವು ಕರ್ಮಕ್ಕೆ ಅಂಗವಾಗಿರುತ್ತದೆ; ಜ್ಞಾನಕಾಂಡದಲ್ಲಿರುವ ಕರ್ಮಗಳು ಜ್ಞಾನಾರ್ಥವಾಗಿರುತ್ತವೆ. ಕರ್ಮವು ಚಿತ್ತಶುದ್ಧಿಗಾಗಿ ಉಪಯುಕ್ತವಾಗಿ ಜ್ಞಾನಕ್ಕೆ ಹೇತುವಾಗುತ್ತದೆ. ಅದು ಅವಿದ್ಯೆಯಿಂದಾಗಿರುವ ಕಾಮವನ್ನು ಮೂಲವಾಗಿಟ್ಟು ಕೊಂಡೇ ಹೊರಟಿರುವದರಿಂದ ಅವಿದ್ಯೆಯನ್ನು ಅತ್ಯಂತಿಕವಾಗಿ ನಾಶಪಡಿಸುವ ಜ್ಞಾನವು ಜ್ಞಾನಕಾಂಡದಲ್ಲಿ ಮಾತ್ರ ಸಿಕ್ಕುತ್ತದೆ ಎಂಬುದನ್ನು ಆಚಾರ್ಯರು ಈ ಉಪನಿಷತ್ತಿನ ಭಾಷ್ಯದಲ್ಲಿ ಸ್ಪಷ್ಟಪಡಿಸಿ ಜ್ಞಾನಕರ್ಮಸಮುಚ್ಚಯವಾದಿಗಳ ಭ್ರಾಂತಿ ಯನ್ನು ತೊಲಗಿಸಿರುತ್ತಾರೆ. (ಭಾ.ಭಾ. ೧, ೨, ೩೦, ೫೪, ೫೯, ೯೦)

## (೨) ಪರಾಪರಬ್ರಹ್ಮಪ್ರಾಪ್ತಿಗಳ ತಾರತಮ್ಯ

ಬ್ರಹ್ಮವು ಅಪರಬ್ರಹ್ಮ, ಕಾರ್ಯಬ್ರಹ್ಮ, ಸೋಪಾಧಿಕಬ್ರಹ್ಮ—ಎಂಬ ಹೆಸರಿನ

**ಹಿರಣ್ಯಗರ್ಭ**ನೆಂದೂ (೧೪, ೫೦, ೭೬, ೯೦), ಪರಬ್ರಹ್ಮ, **ಕಾರಣಬ್ರಹ್ಮ** ನಿರುಪಾಧಿಕಬ್ರಹ್ಮ—ಎಂಬ **ಸರ್ವರ ಆತ್ಮರೂಪನಾದ ಬ್ರಹ್ಮ**ವೆಂದೂ (೫೦, ೭೬, ೯೦) ಎರಡು ಬಗೆಯಾಗಿರುತ್ತದೆ. **ಅಪರ ಬ್ರಹ್ಮವನ್ನು** ಪಾಙ್ಕ್ತರೂಪದಿಂದು 'ಮಹಃ' ಎಂಬ ವ್ಯಾಹೃತಿಯ ಮೂಲಕವಾಗಿ, ಓಂಕಾರದ ಮೂಲಕವಾಗಿ—ಎಂದು ಬಗೆ ಬಗೆಯಿಂದ ಉಪಾಸನೆಮಾಡುವರು; ಇದೇ ಅಪರಬ್ರಹ್ಮವಿದ್ಯೆ. ಬ್ರಹ್ಮವನ್ನು ಹೃದಯ ಪುಂಡರೀಕದಲ್ಲಿ ಇಂಥಿಂಥ ಗುಣಗಳುಳ್ಳದ್ದೆಂದು, ಉಪಾಸನೆಮಾಡಿ, ಸಾಕ್ಷಾತ್ಕಾರ, ಮಾಡಿಕೊಂಡರೆ, ಸುಷುಮ್ನಾನಾಡಿಯ ಮೂಲಕವಾಗಿ ಶರೀರವನ್ನು ಬಿಟ್ಟು ಹೊರಟು ಹಿರಣ್ಯಗರ್ಭನ ಸಾಯುಜ್ಯವನ್ನು ಪಡೆಯುತ್ತಾನೆ. ಆ ಸಾಯುಜ್ಯವನ್ನು ಪಡೆದವನಿಗೆ ಐಶ್ವರ್ಯವು–ಎಂದರೆ ಧರ್ಮಜ್ಞಾನಸ್ವಾತಂತ್ರ್ಯಾದಿಗಳು ಲಭಿಸು ವದು—ಫಲವು (೪೦ ರಿಂದ ೪೫, ೧೪೦). ಅವನು ಸರ್ವಕಾಮಗಳನ್ನೂ ಪಡೆಯು ವನು. ಅಪರಬ್ರಹ್ಮವಿದ್ಯೆಯನ್ನು ಕ್ರಮಕ್ರಮವಾಗಿ ವಿವರಿಸುವದೇ ಶೀಕ್ಷಾವಲ್ಲಿಯ ಮುಖ್ಯೋದ್ದೇಶವು.

ಆದರೆ **ಪರಬ್ರಹ್ಮವನ್ನು** ಪಡೆದುಕೊಂಡವನಿಗೆ ಪರಮಪುರುಷಾರ್ಥವೇ ದೊರಕುವದು. ಪರಬ್ರಹ್ಮಪ್ರಾಪ್ತಿ ಎಂದರೆ ಅಜ್ಞಾನದಿಂದ ಅಪ್ರಾಪ್ತವಾದಂತೆ ಇದ್ದ ತನ್ನ ಆತ್ಮನೇ ಆಗಿರುವ ಸರ್ವಾಧಾರವಾದ ಸತ್ಯಜ್ಞಾನಾನಂತರೂಪವಾದ ಪರಮಾನಂದವನ್ನು ಅನಾತ್ಮವಿಷಯಗಳಿಂದ ಹಿಂತಿರುಗಿ ನಾನೇ ಎಲ್ಲರ ಆತ್ಮನು ಎಂದು ಇಲ್ಲಿಯೇ ಅಂತಃಕರಣಸಾಕ್ಷಿಯ ರೂಪದಿಂದಲೇ ಅರಿತುಕೊಳ್ಳುವದು. (೯೦ ರಿಂದ ೧೧೩, ೨೧೧, ೨೧೮). ಈ ಆತ್ಮನನ್ನು ವಿಷಯವಾಗಿ ಅರಿತುಕೊಳ್ಳಬೇಕೆಂದೇನೂ ಅರ್ಥವಲ್ಲ; ತಾನು ಅದ್ವಿತೀಯನು ಜ್ಞಾತೃಜ್ಞಾನಜ್ಞೇಯವಿಭಾಗಶೂನ್ಯನು ಎಂಬ ಅನುಭವವನ್ನು ಅಂತಃಕರಣದಲ್ಲಿ ಪಡೆದುಕೊಳ್ಳುವದೇ ಪ್ರಾಪ್ತಿ (೯೯, ೧೦೦). ಈ ಆತ್ಮಜ್ಞಾನವನ್ನುಂಟುಮಾಡುವದಕ್ಕೆಂದೇ ಶ್ರುತಿಯಲ್ಲಿ ಬ್ರಹ್ಮವು ತಾನು ಬಹುವಾಗಿ ಆಕಾಶಾದಿಜಗತ್ತನ್ನು ಸೃಷ್ಟಿಮಾಡಿ ಅದರೊಳಗೆ ಹೊಕ್ಕಿತೆಂದೂ ಜ್ಞಾನಿಗಳು ಅದರ ಸ್ವರೂಪವನ್ನು ಪಡೆದುಕೊಂಡು ಆನಂದಿಗಳಾಗಿ ಅಭಯದಿಂದ ತಮ್ಮ ಪರಮಾರ್ಥ ಸ್ವರೂಪದಲ್ಲಿ ನೆಲೆನಿಲ್ಲುವರೆಂದೂ ವರ್ಣಿಸಿದೆ (೨೦೭, ೨೧೬). ಅಪರಬ್ರಹ್ಮವನ್ನು ಸೇರುವವನು ಸರ್ವಕಾಮಗಳನ್ನೂ ಒಂದೊಂದಾಗಿ ಪಡೆದುಕೊಳ್ಳುತ್ತಾನೆ; ಆದರೆ ಪರಬ್ರಹ್ಮವನ್ನು ಅರಿತುಕೊಂಡವನು ಎಲ್ಲಾ ಕರ್ಮಗಳನ್ನೂ ಎಲ್ಲಾ ಕಾಮಗಳನ್ನೂ ಬ್ರಹ್ಮರೂಪವಾಗಿಯೇ ಮಾಡಿಕೊಳ್ಳುವದರಿಂದ ಅವನು ಬ್ರಹ್ಮರೂಪದಿಂದಲೇ ಎಲ್ಲಾ ಕಾಮಗಳನ್ನೂ ಒಟ್ಟಿಗೆ ಅನುಭವಿಸುವನು (೯೨,೧೦೯,೨೨೪). ಅಪರ ಬ್ರಹ್ಮವನ್ನು ಪಡೆಯುವವನಿಗೆ ತಾನು ಇಚ್ಛಿಸಿದ ರೂಪವೂ ಇಚ್ಛಿಸಿದ ಭೋಗವೂ ಸಿಕ್ಕುವವು; ಅವನು ಯಾವ ಲೋಕವನ್ನು ಬೇಕಾದರೂ ಸಂಕಲ್ಪಮಾತ್ರದಿಂದ ಪಡೆದುಕೊಳ್ಳಬಹುದು. ಇಂಥ ಐಶ್ವರ್ಯವು ಅವನಿಗೆ ಉಪಾಸನೆಯ ಫಲವಾಗಿ ದೊರಕುತ್ತದೆ. ಆದರೆ ಪರಬ್ರಹ್ಮಜ್ಞಾನಿಯು ಅಪರಬ್ರಹ್ಮವನ್ನು ಪಡೆದುಕೊಂಡವ

ನಿಗೂ ಆತ್ಮನಾಗಿರುವದರಿಂದ ಅವನ ಭೋಗವೂ ಇವನದೇ ಆಗಿರುತ್ತದೆ (೨೫೬) ಭೋಕ್ತೃ, ಭೋಗ್ಯ, ಭೋಗ-ಎಂಬ ವಿಭಾಗವು ಅವಿದ್ಯೆಯಿಂದಾಗಿರುವದಾದ್ದರಿಂದ ಇಂಥ ಜ್ಞಾನಿಯು ಇದೆಲ್ಲವೂ ತಾನೇ ಆಗಿರುವೆನೆಂದೂ ತನಗಿಂತ ವ್ಯತಿರಿಕ್ತವಾದ ಭೋಗ್ಯಾದಿಗಳು ಇಲ್ಲವೆಂದೂ ತಿಳಿದಿರುತ್ತಾನೆ. (೨೫೫.೨೬೦,೨೬೧) ಉಪಾಸಕರು ಅನ್ನದೃಷ್ಟಿಯಿಂದ ಉಪಾಸನೆಮಾಡುವ ಪ್ರಾಣಾದಿಗಳೂ ವಾಕ್ಕು, ವೃಷ್ಟಿ ಮುಂತಾದವುಗಳಲ್ಲಿ ಕ್ಷೇಮ, ತೃಪ್ತಿ-ಮುಂತಾದ ರೂಪದಿಂದ ಬ್ರಹ್ಮವು ನೆಲಸಿರುವ ದೆಂದು ಮಾಡುವದರಿಂದ ದೊರೆಯುವ ಫಲಗಳೂ ಬ್ರಹ್ಮವೇ ಆಗಿರುವದರಿಂದ ಬ್ರಹ್ಮಾಭಿನ್ನನಾದ ಜ್ಞಾನಿಯನ್ನೇ ನಿಜವಾಗಿ ಅವರೆಲ್ಲರೂ ಉಪಾಸನೆಮಾಡುತ್ತಿರು ವರು (೨೪೬ ರಿಂದ ೨೪೮). ಬ್ರಹ್ಮವನ್ನು ಯಾವಯಾವ ದೃಷ್ಟಿಯಿಂದ ಉಪಾಸನೆ ಮಾಡಿದರೆ ಅಂಥಂಥ ಫಲಗಳು ದೊರಕುವವು (೨೪೯). ಆದರೆ ಬ್ರಹ್ಮವೆಂದೇ ಅದನ್ನು ಅರಿತುಕೊಂಡವನಿಗೆ ಕ್ರಿಯಾಕಾರಕಫಲರೂಪವಾದ ಯಾವ ಸಂಸಾರವೂ ಇರುವದಿಲ್ಲ, ಅವನು ಬ್ರಹ್ಮವೇ ಆಗಿರುತ್ತಾನೆ (೨೫೧ ರಿಂದ ೨೫೨).

## (೩) ಸದ್ಯೋಮುಕ್ತಿ

ಪರಬ್ರಹ್ಮವನ್ನು ಹೃದಯದಲ್ಲಿರುವ ಬುದ್ಧಿಗೆ ಸಾಕ್ಷಿಯಾಗಿ ಅರಿತುಕೊಳ್ಳುವದೇ ಅದರ ಪ್ರಾಪ್ತಿಯು, ಅದೇ ಪರಮಪುರುಷಾರ್ಥವು. ಬ್ರಹ್ಮವು ನಮ್ಮ ಸ್ವರೂಪವೇ ಎಂದು ಅರಿಯದೆ ಅನಾತ್ಮಗಳಾದ ಪಂಚಕೋಶಗಳನ್ನು ನಾವೆಂದು ಭಾವಿಸಿರುವ ಅವಿದ್ಯೆಯಿಂದ ಅದು ಅಪ್ರಾಪ್ತವಾಗಿರುವದು ಅದರ ನಿಜವನ್ನು ಅರಿತುಕೊಂಡಕೂಡಲೆ ಅದು ದೊರೆಯುವದು (೯೩). ಬ್ರಹ್ಮವು ನಮ್ಮ ತೀರ ಒಳಗಿನ ಆತ್ಮನಾಗಿರುತ್ತದೆ. ಅದನ್ನು ಅರಿತುಕೊಳ್ಳುವದಕ್ಕಾಗಿ ಅನ್ನಮಯವೇ ಮುಂತಾದ **ಪಂಚಕೋಶಗಳನ್ನು** ಒಂದೊಂದಾಗಿ ಅರಿತುಕೊಳ್ಳುತ್ತಾ ಹೋಗಬೇಕು (೧೧೭). ನಮ್ಮ ಅನ್ನಮಯದೇಹವು ಸ್ಥೂಲವಾಗಿರುವ ವಿರಾಟ್ಪುರುಷನ ಉಪಾಧಿಯಾದ ಸಮಷ್ಟಿಶರೀರದಲ್ಲಿ ಅಡಕ ವಾಗಿದೆ. ಪ್ರಾಣವು ಸೂತ್ರಾತ್ಮನಲ್ಲಿ, ಮನಸ್ಸು ಮತ್ತು ವಿಜ್ಞಾನಗಳು ಹಿರಣ್ಯಗರ್ಭನ ಜ್ಞಾತೃತ್ವಕರ್ತೃತ್ವಗಳಲ್ಲಿ ಅಡಕವಾಗಿರುತ್ತವೆ, ನಮ್ಮ ಭೋಕ್ತೃತ್ವದ ಸುಖವು ಹಿರಣ್ಯ ಗರ್ಭನ ಆನಂದದಲ್ಲಿ ಅಡಕವಾಗಿರುತ್ತದೆ. ಅನ್ನಮಯನಿಂದ ಹಿಡಿದು ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ-ಎಂಬ ಪಂಚಕೋಶಗಳನ್ನು ಅರಿತುಕೊಳ್ಳುತ್ತಾ ಹೋದಂತೆ ಒಳಗೊಳಗೆ ಹೊಕ್ಕು ಕೊನೆಗೆ ಆನಂದಮಯನಿಗೂ ಆತ್ಮನಾಗಿರುವ ಆನಂದಸ್ವರೂಪವಾದ ನಮ್ಮ ನಿಜವಾದ ಆತ್ಮನಾದ ಬ್ರಹ್ಮದ ಸಾಕ್ಷಾ ತ್ಕಾರವನ್ನು ಮಾಡಿಕೊಳ್ಳಬಹುದು (೧೪೯). ಆನಂದಮಯನಾದ ಆತ್ಮನೇ ನಮಗೆ ತೀರ ಒಳಗಿರುವಂತೆ ತೋರಿದರೂ ಅವನು ಸವಿಶೇಷನಾಗಿರುವದರಿಂದಲೂ ಫಲರೂಪ ದಿಂದ ಪ್ರತ್ಯಕ್ಷವಾಗಿ ಅನುಭವಕ್ಕೆ ಬರುತ್ತಿರುವದರಿಂದಲೂ ತಾರತಮ್ಯಯುಕ್ತನಾಗಿರು ವದರಿಂದಲೂ ಅವನು ಪರಮಾತ್ಮನಲ್ಲ (೧೪೪, ೧೪೫). ಆನಂದವೇ ನಿಜವಾದ ಆತ್ಮನು (೧೪೬); ಈ ಆನಂದವು ವಿಷಯವಿಷಯಿಗಳ ಸಂಬಂಧದಿಂದ ಹುಟ್ಟುವದಲ್ಲ;

ಮನುಷ್ಯರಿಂದ ಹಿಡಿದು ಹಿರಣ್ಯಗರ್ಭನವರೆಗೆ ತೋರುವ ಆನಂದದ **ಉತ್ಕರ್ಷವೆಲ್ಲ** ಉಪಾಧಿತಾರತಮ್ಯದಿಂದ ಆಗಿರುವದೇ ಹೊರತು ಸ್ವತಃ ಅದರಲ್ಲಿ ಯಾವ ತಾರ ತಮ್ಯವೂ ಇಲ್ಲ (೧೯೯ ರಿಂದ ೨೦೬). ಅದರಲ್ಲಿ ಯಾವ ವಿಶೇಷವೂ ಇರುವದಿಲ್ಲ(೧೮೯), ಅದನ್ನು ಯಾವ ಮಾತಿನಿಂದಲಾದರೂ ತಿಳಿಸುವದಕ್ಕಾಗಲಿ ಯಾವ ಪ್ರತ್ಯಯ ದಿಂದಲಾದರೂ ವಿಷಯೀಕರಿಸುವದಕ್ಕಾಗಲಿ ಆಗುವಹಾಗಿಲ್ಲ (೨೧೯,೨೨೦). ಅದು ಸತ್ಯ, ಜ್ಞಾನ, ಅನಂತ-ಎಂದು ಹೇಳುವದೂ ಆ ಶಬ್ದಪ್ರತ್ಯಯಗಳಿಗೆ ಅದು ವಿಷಯವೆಂಬ ಅಭಿಪ್ರಾಯದಿಂದ ಅಲ್ಲ; ಆ ಶಬ್ದಗಳಿಗೆ ಅದು ಬರಿಯ ಲಕ್ಷ್ಯಾರ್ಥವು (೧೦೭). ನಮ್ಮ ಆತ್ಮನೇ ಆಗಿರುವದರಿಂದ ಅದನ್ನು ಸತ್ಯಜ್ಞಾನಾನಂತವೆಂದು ನಾವು ನಮ್ಮಲ್ಲಿಯೇ ಕಂಡುಕೊಳ್ಳುವದಕ್ಕೆ ಆಗುತ್ತದೆ (೧೧೪,೨೨೦). ಹೀಗೆ ಕಂಡುಕೊಳ್ಳು ವದೆಂಬುದೂ ಅವಿದ್ಯೆಯನ್ನು ತೊಲಗಿಸಿಕೊಳ್ಳುವದರಿಂದ ಮಾತ್ರವೇ (೨೧೮) ಆಗಿರುತ್ತದೆ.

## (೪) ಸಂಸಾರವೆಲ್ಲವೂ ಆವಿದ್ಯಕ

ನಿರ್ವಿಶೇಷವಾದ ಈ ಬ್ರಹ್ಮವೇ ಮೊದಲು ಸೂಕ್ಷ್ಮರೂಪದಿಂದ **ಅವ್ಯಾಕೃತ** ವಾಗಿದ್ದು ಬಳಿಕ ಮೂರ್ತಾಮೂರ್ತಗಳ ರೂಪದಿಂದ **ವ್ಯಾಕೃತ**ವಾಗಿರುವಂತೆ ಅವಿದ್ಯೆ ಯಿಂದ ತೋರುತ್ತಿರುವದು. ಶರೀರದಲ್ಲಿ ಜೀವರೂಪದಿಂದ ಒಳಹೊಕ್ಕು ನೋಡುವದು, ಕೇಳುವದು, ಯೋಚಿಸುವದು, ಅರಿತುಕೊಳ್ಳುವದು-ಮುಂತಾದ ಸಂಸಾರಧರ್ಮ ದಿಂದ ಕೂಡಿಕೊಂಡಿರುವಂತೆಯೂ ತೋರುತ್ತಿರುವದು (೧೬೩ ರಿಂದ ೧೮೨). ವ್ಯಾಕೃತಾವ್ಯಾಕೃತನಾದ **ನಾಮರೂಪಗಳೆಂಬ ಉಪಾಧಿಗಳು** ಆತ್ಮನಾದ ಈ ಬ್ರಹ್ಮವನ್ನು ಬಿಟ್ಟು ಎಂದಿಗೂ ಇರಲಾರವು, ಬ್ರಹ್ಮವೇ ಅವುಗಳ ತಿರುಳು (೧೬೫). ಆದ್ದರಿಂದ **ಅನ್ನಮಯಾದಿಪಂಚಕೋಶಗಳೂ ಅವಿದ್ಯಾಕೃತ**ವಾಗಿರುತ್ತವೆ (೧೨೨,೧೨೭). ಆದ್ದರಿಂದ ಮಿಥ್ಯಾಕಲ್ಪಿತವಾದ (೧೨೩) ಈ ಕೋಶಗಳ ಧರ್ಮವನ್ನು ಆತ್ಮನು ಯಾವಾಗಲೂ ಮೀರಿರುತ್ತಾನೆ. ಬ್ರಹ್ಮವನ್ನು ಅರಿತವನಿಗೆ ಈ ದ್ವೈತವು ಸತ್ಯವಾಗಿ ತೋರುವದೇ ಇಲ್ಲ ಆದ್ದರಿಂದಲೇ ಶ್ರುತಿಯು ಬ್ರಹ್ಮವನ್ನು ಅರಿತು ಕೊಳ್ಳಬೇಕೆಂದು ಉಪದೇಶಿಸುತ್ತದೆ ; ಅರಿತಮೇಲೆ ಮಾಡಬೇಕಾದ ಸಾಧನವನ್ನು ಯಾವದನ್ನೂ ಉಪದೇಶಿಸುವದಿಲ್ಲ (೨೧೧).

ದ್ವೈತವು ಪರಮಾರ್ಥವಲ್ಲ ಎಂಬುದು **ಸುಷುಪ್ತಿಯ ಅನುಭವ**ದಿಂದ ಸಿದ್ಧವಾಗುತ್ತದೆ. ಎಚ್ಚರಕನಸುಗಳಲ್ಲಿ ಮಾತ್ರ ದ್ವೈತವು ಕಾಣುವದರಿಂದಲೂ ತನಿನಿದ್ರೆಯಲ್ಲಿಯೂ ಸಮಾಧಿಯಲ್ಲಿಯೂ ಕಾಣಿಸದೆ ಇರುವದರಿಂದಲೂ ಅದು ಪರಮಾರ್ಥವಲ್ಲವೆಂದು ಸ್ಪಷ್ಟವಾಗುತ್ತದೆ ಸುಷುಪ್ತಿಯು ಸ್ವಾಭಾವಿಕವಾದ ಅವಸ್ಥೆ ; ಎಚ್ಚರಕನಸುಗಳಲ್ಲಿ ಆತ್ಮನಿಗೆ ವಿಶೇಷವಾದ ಅನುಭವವಾಗುತ್ತಿರುವದರಿಂದಲೂ ಆ ಅನುಭವಕ್ಕೆ ಕಾರಕಗಳ ಅಪೇಕ್ಷೆಯಿರುವದರಿಂದಲೂ ಅವು ಸ್ವಾಭಾವಿಕವಾದ ಅವಸ್ಥೆಗಳಲ್ಲ, ಅವಿದ್ಯಾಕೃತವಾಗಿರುತ್ತವೆ. ಆದ್ದರಿಂದ **ದ್ವೈತವು ಅವಿದ್ಯಾಕೃತ ವೆಂದೂ ಆತ್ಮನು ಅದ್ವಿತೀಯನೆಂದೂ** ಏರ್ಪಡುತ್ತದೆ (೨೧೩).

## (೫) ವಿದ್ಯಾವಿದ್ಯೆಗಳು ಆತ್ಮನ ಧರ್ಮವಲ್ಲ

**ಅವಿದ್ಯೆಯಿಂದ ತೋರುವ** ಸಂಸಾರವು ವಿದ್ಯೆಯಿಂದ **ಅಪರಮಾರ್ಥವೆಂದು** ತಿಳಿಯಬರುತ್ತದೆ ಎಂದದ್ದರಿಂದ ವಿದ್ಯಾವಿದ್ಯೆಗಳೆಂಬ ವಿಶೇಷಗಳು ಆತ್ಮನಲ್ಲಿರುತ್ತವೆಂದು ತಿಳಿಯುವದಕ್ಕಿಲ್ಲ. ಏಕೆಂದರೆ **ಅವಿದ್ಯೆ**ಯೆಂದರೆ ಬ್ರಹ್ಮಸ್ವರೂಪವನ್ನು ಅರಿಯದೆ ಅನೃತವಾದ ಅನಾತ್ಮಗಳನ್ನು ತಾನೆಂದು ತಪ್ಪಾಗಿ ತಿಳಿದುಕೊಂಡಿರುವದು (೯೩); ವಿದ್ಯೆಯೆಂದರೆ ಬ್ರಹ್ಮಸ್ವರೂಪವು ಇಂಥದ್ದೆಂದು ಅರಿತುಕೊಳ್ಳುವದು. ಇವೆರಡೂ ಅಂತಃಕರಣದ ಧರ್ಮಗಳಾಗಿರುತ್ತವೆ (೨೧೬). ಅವು ಅನುಭವಕ್ಕೆ ವಿಷಯವಾಗಿರುವದರಿಂದಲೂ ವಿದ್ಯೆಯ ಉಪದೇಶ, ಗ್ರಹಣ-ಇವುಗಳಿಂದ ಅವಿದ್ಯೆಯು ಹೋಗುವದರಿಂದಲೂ ಅವು ನಾಮರೂಪಪಕ್ಷಕ್ಕೇ ಸೇರಿದವುಗಳಾಗಿವೆ; ನಾಮರೂಪಗಳು ಆತ್ಮನಲ್ಲಿ ಕಲ್ಪಿತವಾಗಿರುವವೇ ಹೊರತು ಪರಮಾರ್ಥವಲ್ಲವೆಂದು ಆಗಲೆ ತಿಳಿಸಿದ್ದೂ ಆಗಿದೆ. ಆದ್ದರಿಂದ ಆತ್ಮನಲ್ಲಿ ಕಲ್ಪಿತವಾಗಿದ್ದ ಅವಿದ್ಯಾನಾಶವೇ ಪರಮಪುರುಷಾರ್ಥವೆಂದು ಏರ್ಪಡುತ್ತದೆ (೨೧೮).

## ಭಾಷ್ಯದ ವ್ಯಾಖ್ಯಾನಕಾರರು

ತೈತ್ತಿರೀಯಭಾಷ್ಯಕ್ಕೆ ವ್ಯಾಖ್ಯಾನವನ್ನು ಬರೆದಿರುವವರು **ಆನಂದಗಿರಿಗಳೆಂದು** ಪ್ರಸಿದ್ಧರಾಗಿರುತ್ತಾರೆ. ಇವರು "ಶ್ರೀಮಚ್ಛಂಕರಭಗವಚ್ಛಿಷ್ಯರು" ಎಂದು ಆನಂದಾಶ್ರಮ ಮುದ್ರಿತಪುಸ್ತಕದಲ್ಲಿ ಅಚ್ಚಾಗಿರುವದು ಲೇಖಕರ ಭ್ರಾಂತಿಯಿಂದ ಎಂಬದನ್ನು ಹೇಳಬೇಕಾಗಿಯೇ ಇಲ್ಲ. ಅದೇ ಪುಸ್ತಕದಲ್ಲಿ "ಶ್ರೀಮಚ್ಛುದ್ಧಾನಂದಭಗವತ್ಪೂಜ್ಯಪಾದಶಿಷ್ಯಶ್ರೀಮದ್ಭಗವದಾನಂದಜ್ಞಾನವಿರಚಿತಾಯಾಮ್" ಎಂದೂ ಬರೆದಿರುವದರಿಂದ ಇವರ ಹೆಸರು ನಿಜವಾಗಿ ಆನಂದಜ್ಞಾನರೆಂಬುದು ಸ್ಪಷ್ಟವಾಗಿರುತ್ತದೆ. ಪುಸ್ತಕದ ಕೈಪ್ರತಿಯನ್ನು ಬರೆದವರು ಆನಂದಗಿರಿಗಳೆಂಬವರು ಶಂಕರಾಚಾರ್ಯರ ನೇರಾದ ಶಿಷ್ಯರೆಂಬ ಭ್ರಾಂತಿಗೆ ಪಕ್ಕಾಗಿ ಹೀಗೆ ಉಲ್ಲೇಖಿಸಿರುವರೆಂಬುದೂ ಸ್ಪಷ್ಟವಾಗುತ್ತದೆ.

ಈ ವ್ಯಾಖ್ಯಾನಕಾರರಾದ **"ಆನಂದಜ್ಞಾನರು"** ಶೀಕ್ಷಾವಲ್ಲಿಯಲ್ಲಿ **"ತತ್ತ್ವಾಲೋಕ" "ಪ್ರಕಟಾರ್ಥ"** ಎಂಬ ತಮ್ಮ ಗ್ರಂಥಗಳನ್ನು ಪರಾಮರ್ಶಿಸಿಕೊಂಡಿರುತ್ತಾರೆ. "ಸತ್ಯಂ ಜ್ಞಾನಮನನ್ತಂ ಬ್ರಹ್ಮ" ಎಂಬ ಲಕ್ಷಣವಾಕ್ಯದ ವ್ಯಾಖ್ಯಾನದಲ್ಲಿ ಲಕ್ಷಣಲಕ್ಷಣವನ್ನು ವಿವರಿಸುವಾಗ **ಶ್ರೀ ಹರ್ಷನ ಖಂಡನ** ಗ್ರಂಥವನ್ನು ಪರಾಮರ್ಶಿಸಿರುತ್ತಾರೆ. "ಸುಷುಪ್ತಿಯಲ್ಲಿ ಏನನ್ನೂ ಕಾಣದಿರುವದರಿಂದ ಅಲ್ಲಿ ದ್ವೈತವು ಕಾಣದೆ ಇರುವದಕ್ಕೆ ಅನ್ಯಾಸಕ್ತಿಯು ಕಾರಣವಲ್ಲ" (೨೧೩) ಎಂಬ ಭಾಷ್ಯಕ್ಕೆ "ಅಲ್ಲಿರುವ ಅಜ್ಞಾನವು ಆತ್ಮನಿಗಿಂತ ಅತಿರಿಕ್ತವೆಂದು ನಿರ್ವಚನಮಾಡಿ ಹೇಳುವದಕ್ಕೆ ಬರುವಂತಿಲ್ಲವಾದ್ದರಿಂದ **ತಾತ್ತ್ವಿಕ**ದ್ವಿತೀಯವಸ್ತುವಲ್ಲ" ಎಂದು **ಅನಿರ್ವಚನೀಯಾವಿದ್ಯಾವಾದವನ್ನು** ಸೇರಿಸಿಕೊಂಡು ವ್ಯಾಖ್ಯಾನ ಮಾಡಿರುತ್ತಾರೆ. ವಿದ್ಯಾವಿದ್ಯೆಗಳು ಆತ್ಮನ ಧರ್ಮವಲ್ಲ; ಅನುಭವವೇದ್ಯವಾಗಿ

ಅಂತಃಕರಣಧರ್ಮಗಳಾಗಿರುವದರಿಂದ ಅವು ನಾಮರೂಪಪಕ್ಷಕ್ಕೆ ಸೇರಿದವುಗಳೇ ಎಂಬ (೨೧೬) ಭಾಷ್ಯಕ್ಕೆ "ಚಿನ್ಮಾತ್ರತಂತ್ರವಾದ ಅನಾದಿಯಾದ ಅನಿರ್ವಾಚ್ಯವಾದ ಅವಿದ್ಯೆಯು ಅಂತಃಕರಣವಾಗಿ ಪರಿಣಮಿಸುತ್ತದೆ; ಅದರಲ್ಲಿ ಪ್ರತಿಬಿಂಬಿಸಿದ ಚಿದ್ಧಾತುವು ತನ್ನ ಉಪಾಧಿಯ ಧರ್ಮದಿಂದಲೇ ಭ್ರಾಂತಿಯನ್ನು ಹೊಂದಿತೆಂದೂ ಸರಿಯಾಗಿ ಅರಿತುಕೊಂಡಿತೆಂದೂ ವ್ಯವಹರಿಸಲ್ಪಡುತ್ತದೆ. ಆದ್ದರಿಂದ ನಿಜವಾಗಿ ಅದರಲ್ಲಿ ವಿದ್ಯೆಯಾಗಲಿ ಅವಿದ್ಯೆಯಾಗಲಿ ಇರುವದಿಲ್ಲ" ಎಂದು ಈಚಿನ ವೇದಾಂತಿಗಳ ಅನಿರ್ವಚನೀಯಾವಿದ್ಯಾವಾದವನ್ನೂ ಸೇರಿಸಿಕೊಂಡು ವ್ಯಾಖ್ಯಾನಮಾಡಿರುತ್ತಾರೆ. ಈ ಎಲ್ಲಾ ಕಾರಣಗಳಿಂದ ನಾನು ಈ ವ್ಯಾಖ್ಯಾನಕಾರರು ಭಾಷ್ಯಕ್ಕೆ ಕೊಟ್ಟಿರುವ ಅರ್ಥವನ್ನು ಸ್ವೀಕರಿಸುವಾಗ ಪೂರ್ವಾಪರಸಂದರ್ಭಗಳಿಗೂ ಭಾಷ್ಯಾಂತರಕ್ಕೂ ಹೋಲಿಸಿಯೇ ತೆಗೆದುಕೊಂಡಿರುತ್ತೇನೆ.

## ಕೃತಜ್ಞತೆ

ಈ ಗ್ರಂಥವು ಈಗ ಮೊದಲನೆಯ ಸಲಕ್ಕೆ ಮುದ್ರಣ ಶಾಲೆಯನ್ನು ಪ್ರವೇಶಿಸಿರುತ್ತದೆ ಭಾಷ್ಯವನ್ನು ವಿಂಗಡಿಸಿಕೊಳ್ಳುವದೇ ಮುಂತಾದ ಭಾಗಗಳಲ್ಲಿ ಕೈಲಾಸವಾಸಿ ಮಹಾದೇವಶಾಸ್ತ್ರಿಗಳಿಂದ ಆದ ಸಹಾಯವನ್ನು ಆಗಲೆ ತಿಳಿಸಿರುತ್ತೇನೆ. ಇದರ ಕೈ ಪ್ರತಿಯನ್ನು ಮೂಲಕ್ಕೆ ಹೋಲಿಸಿ ನೋಡಿ ಕೆಲವು ಸೂಚನೆಗಳನ್ನು ಕೊಟ್ಟಿರುವ ಹೊಳೆನರಸೀಪುರದ ಪ್ಲೀಡರ್ ಶ್ರೀಯುತ ಪಿ. ಎನ್. ನರಸಿಂಹಯ್ಯನವರಿಗೂ ಅಚ್ಚಿನ ಕರಡುಗಳನ್ನು ತಿದ್ದುವದು ಮುಂತಾದ ಪ್ರಕಾರಗಳಿಂದ ಸಹಾಯಮಾಡಿರುವ ಆಸ್ಥಾನ ವಿದ್ವಾನ್ ಬ್ರ॥ ಶ್ರೀ॥ ಎಸ್. ವಿಠಲಶಾಸ್ತ್ರಿಗಳು, ವೇದಾಂತಶಿರೋಮಣಿ ಇವರಿಗೂ ನಾನು ಕೃತಜ್ಞನಾಗಿರುತ್ತೇನೆ. ಗ್ರಂಥವು ಬಹು ಶೀಘ್ರವಾಗಿ ಅಚ್ಚಾದ ಕಾರಣದಿಂದಲೂ ನನ್ನ ಮತಿಮಾಂದ್ಯದಿಂದಲೂ ಉಳಿದಿರಬಹುದಾದ ಕುಂದುಕೊರತೆಗಳನ್ನು ವಿದ್ವಾಂಸರು ತಿಳಿಸಿಕೊಟ್ಟರೆ ಕೃತಜ್ಞತೆಯಿಂದ ಬರಮಾಡಿಕೊಂಡು ಮುಂದಿನ ಸಂಸ್ಕರಣದಲ್ಲಿ ಅವರ ಸೂಚನೆಗಳ ಲಾಭವನ್ನು ಪಡೆಯುವೆನು.

5-2-46. ಯ. ಸುಬ್ರಹ್ಮಣ್ಯಶರ್ಮ.

# ಸಂಕೇತಗಳ ವಿವರ

ಮೊದಲನೆಯ ಸಂಪುಟದ ಭಾಷ್ಯಾನುವಾದಗಳಲ್ಲಿಯೂ ಐತರೇಯಭಾಷ್ಯದ ಅನುವಾದದಲ್ಲಿಯೂ ಉಪಯೋಗಿಸಿರುವಂತೆಯೇ ಇವನ್ನು ತಿಳಿಯಬೇಕು. ಕೆಲವು ಸಂಕೇತಗಳನ್ನು ಮಾತ್ರ ಇಲ್ಲಿ ವಿವರಿಸಿದೆ.

| | |
|---|---|
| ಆ॥ | ಆನಂದಾಶ್ರಮಪುಸ್ತಕದ ಪಾಠ, ಆನಂದಜ್ಞಾನರ ವ್ಯಾಖ್ಯಾನ. |
| ಋ॥ | ಋಗ್ವೇದ. |
| ಐ. ಆ. | ಐತರೇಯ ಆರಣ್ಯಕ. |
| ಕಾ॥ | ಕಾಶಿಯ ಹಿತಚಿಂತಕಮುದ್ರಣಾಲಯಪುಸ್ತಕದ ಪಾಠ. |
| ಗೋ॥ | ಗೋರಖಪುರದ ಗೀತಾಪ್ರೆಸ್ಸಿನ ಪುಸ್ತಕದ ಪಾಠ. |
| ಗೌ ಧ. | ಗೌತಮಧರ್ಮಸೂತ್ರ. |
| ಜೈ. ಸೂ. | ಜೈಮಿನಿಗಳ ಮೀಮಾಂಸಾಸೂತ್ರ. |
| ತಂ. ವಾ. | ತಂತ್ರವಾರ್ತಿಕ, ಕುಮಾರಿಲಭಟ್ಟರು ಶಾಬರಭಾಷ್ಯಕ್ಕೆ ಬರೆದಿರುವ ವ್ಯಾಖ್ಯಾನ. |
| ತೈ. ವಾ. | ತೈತ್ತಿರೀಯಭಾಷ್ಯಕ್ಕೆ ಸುರೇಶ್ವರಾಚಾರ್ಯರು ಬರೆದಿರುವ ವ್ಯಾಖ್ಯಾನ. |
| ತೈ. ಸಂ. | ತೈತ್ತಿರೀಯಸಂಹಿತೆ. |
| ನ್ಯಾ. ಸೂ. | ಗೌತಮರು ಬರೆದಿರುವ ನ್ಯಾಯಸೂತ್ರ. |
| ಭಾ. ಭಾ. | ಭಾಷ್ಯಭಾಗ. |
| ಬೋ. ಗೃ. | ಬೋಧಾಯನರ ಗೃಹ್ಯಸೂತ್ರ. |
| ಮೋ. ಧ. | ಮೋಕ್ಷಧರ್ಮ. |
| ರಾ. ಧ. | ಮಹಾಭಾರತ, ಶಾಂತಿಪರ್ವ, ರಾಜಧರ್ಮ. |
| ವಾ॥ | ಶ್ರೀರಂಗದ ವಾಣೀವಿಲಾಸಮುದ್ರಣಾಲಯದ ಪುಸ್ತಕದ ಪಾಠ. |

**ವಿಶೇಷ :** ಉಪನಿಷತ್ತುಗಳ, ಗೀತೆಯ, ಮತ್ತು ಸೂತ್ರಗಳ ಸಂಖ್ಯೆಯನ್ನು ಒಂದನೆಯ ಸಂಪುಟದಂತೆಯೇ ಆದ್ಯಕ್ಷರಗಳಿಂದ ಸೂಚಿಸಿದೆ. ಬರಿಯ ಸಂಖ್ಯೆಯು ಈ ಉಪನಿಷತ್ತಿನ ಭಾಷ್ಯಭಾಗವನ್ನೂ ಬರಿಯ ಎರಡು ಸಂಖ್ಯೆಗಳು ಈ ಉಪನಿಷತ್ತಿನ ವಲ್ಲಿ ಮತ್ತು ಅನುವಾಕಗಳ ಸಂಖ್ಯೆಗಳನ್ನೂ ತಿಳಿಸುವವು.

# ವಿಷಯಾನುಕ್ರಮಣಿಕಾ

## ಭಾಷ್ಯಕಾರರ ಅವತರಣಿಕೆ



## ಶೀಕ್ಷಾವಲ್ಲಿ

### (ಅಪರಬ್ರಹ್ಮವಿದ್ಯೆ)

## ಶೀಕ್ಷಾವಲ್ಲಿಯ ಉಪಸಂಹಾರಭಾಷ್ಯ



## ಆನಂದವಲ್ಲಿ

### (ಪರಬ್ರಹ್ಮವಿದ್ಯೆ)

## ಭೃಗುವಲ್ಲಿ

(ಬ್ರಹ್ಮಜ್ಞಾನಕ್ಕೆ ಸಾಧನ, ಬ್ರಹ್ಮದ ಉಪಾಸನೆಗಳು)

॥ ಓಂ ॥

**ಶಾಂಕರಭಾಷ್ಯಸಮೇತವಾದ**

# ತೈತ್ತಿರೀಯೋಪನಿಷತ್ತು

## ಭಾಷ್ಯಕಾರರ ಅವತರಣಿಕೆ

### ಮಂಗಲ

**ಯಸ್ಮಾಜ್ಜಾತಂ ಜಗತ್ಸರ್ವಂ ಯಸ್ಮಿನ್ನೇವ ಪ್ರಲೀಯತೇ ।**
**ಯೇನೇದಂ ಧಾರ್ಯತೇ ಚೈವ ತಸ್ಮೈ ಜ್ಞಾನಾತ್ಮನೇ ನಮಃ ॥೧॥**

೧. ಜಗತ್ತೆಲ್ಲವೂ ಯಾವನಿಂದಲೇ ಹುಟ್ಟಿದೆಯೋ, ಯಾವನಲ್ಲಿಯೇ ಪ್ರಲಯವಾಗುವದೋ ಮತ್ತು ಯಾವನಿಂದಲೇ ಧರಿಸಲ್ಪಡುತ್ತದೆಯೋ, ಆ ಜ್ಞಾನಸ್ವರೂಪನಿಗೆ[1] ನಮಸ್ಕಾರ.

**ಯೈರಿಮೇ ಗುರುಭಿಃ ಪೂರ್ವಂ ಪದವಾಕ್ಯಪ್ರಮಾಣತಃ ।**
**ವ್ಯಾಖ್ಯಾತಾಃ ಸರ್ವವೇದಾನ್ತಾಸ್ತಾನ್ನಿತ್ಯಂ ಪ್ರಣತೋಽಸ್ಮ್ಯಹಮ್ ॥**

೨. ಯಾವ ಗುರುಗಳಿಂದ (ಈ) ಮೊದಲು ಈ ಉಪನಿಷತ್ತುಗಳೆಲ್ಲವೂ ಪದವಾಕ್ಯಪ್ರಮಾಣಗಳನ್ನನುಸರಿಸಿ[2] ವಿವರಿಸಲ್ಪಟ್ಟಿರುವವೋ ಅವರನ್ನು ನಾನು ನಿತ್ಯವೂ ನಮಸ್ಕರಿಸುವೆನು.[3]

---

1 ಈ ಶ್ಲೋಕದಲ್ಲಿ ಬ್ರಹ್ಮದ ಸ್ವರೂಪಲಕ್ಷಣವನ್ನೂ ತಟಸ್ಥಲಕ್ಷಣವನ್ನೂ ಹೇಳಿರುತ್ತದೆ. ಜಗತ್ತಿನ ಹುಟ್ಟು, ಇರವು, ನಾಶ-ಇವುಗಳಿಗೆ ಕಾರಣವಾಗಿರುವದೆಂಬುದು ತಟಸ್ಥ ಲಕ್ಷಣ ; ಜ್ಞಾನಸ್ವರೂಪವೆಂಬುದು ಸ್ವರೂಪಲಕ್ಷಣ.

2 ವ್ಯಾಕರಣ, ಮೀಮಾಂಸಾ, ನ್ಯಾಯ-ಈ ಶಾಸ್ತ್ರಗಳ ಬೆಂಬಲದಿಂದ.

3 ಈ ಶ್ಲೋಕವನ್ನು ಶಾಂತಿಪಾಠದಲ್ಲಿ ಹೇಳಿಕೊಳ್ಳುವ ಸಂಪ್ರದಾಯವಿದೆ. ಆಚಾರ್ಯರಿಗಿಂತಲೂ ಹಿಂದೆ ಉಪನಿಷತ್ತುಗಳ ವ್ಯಾಖ್ಯಾನವನ್ನು ಕೆಲವರು ಈ ಸಂಪ್ರದಾಯದವರು ಮಾಡಿದ್ದರೆಂದು ಈ ಶ್ಲೋಕದ ಆಧಾರದಿಂದ ಹೇಳಬಹುದು. ಆದರೆ ಗೌಡಪಾದರ ಮಾಂಡೂಕ್ಯಕಾರಿಕೆಯನ್ನು ಬಿಟ್ಟರೆ ಬೇರೆ ಯಾವ ಪ್ರಾಚೀನ ವೇದಾಂತಗ್ರಂಥಗಳೂ ಸದ್ಯಕ್ಕೆ ಸಿಕ್ಕಿಲ್ಲ. 'ಗುರುಭಿಃ' ಎಂಬುದರಿಂದ ಗೋವಿಂದಭಗವತ್ಪಾದರವರನ್ನು ಸೂಚಿಸಿರಬಹುದೆ ?- ಎಂಬುದು ವಿಚಾರಣೀಯವಾಗಿರುತ್ತದೆ.

**ತೈತ್ತಿರೀಯಕಸಾರಸ್ಯ ಮಯಾಚಾರ್ಯಪ್ರಸಾದತಃ ।**
**ವಿಸ್ಪಷ್ಟಾರ್ಥರುಚೀನಾಂ ಹಿ ವ್ಯಾಖ್ಯೇಯಂ ಸಂಪ್ರಣೀಯತೇ ॥ ೩ ॥**

೩. ತೈತ್ತಿರೀಯಸಾರದ ಅರ್ಥವನ್ನು ವಿಸ್ಪಷ್ಟವಾಗಿ ತಿಳಿಯಬೇಕೆನ್ನುವವರಿಗಾಗಿ ಆಚಾರ್ಯರ ಪ್ರಸಾದದಿಂದ ನಾನು ಈ ವ್ಯಾಖ್ಯಾನವನ್ನು ಮಾಡಿರುತ್ತೇನೆ.[1]

## ಈ ಗ್ರಂಥದ ಸಂಬಂಧ

(ಭಾಷ್ಯ)

೧. ನಿತ್ಯಾನ್ಯಧಿಗತಾನಿ ಕರ್ಮಾಣಿ ಉಪಾತ್ತದುರಿತಕ್ಷಯಾರ್ಥಾನಿ, ಕಾಮ್ಯಾನಿ ಚ ಫಲಾರ್ಥಿನಾಮ್, ಪೂರ್ವಸ್ಮಿನ್ ಗ್ರನ್ಥೇ । ಇದಾನೀಂ ಕರ್ಮೋಪಾದಾನಹೇತುಪರಿಹಾರಾಯ ಬ್ರಹ್ಮವಿದ್ಯಾ ಪ್ರಸ್ತೂಯತೇ ॥

(ಭಾಷ್ಯಾರ್ಥ)

ಹಿಂದಿನ ಗ್ರಂಥ(ಭಾಗ)ದಲ್ಲಿ (ಹಿಂದೆ) ಪಡೆದಿರುವ ಪಾಪವನ್ನು ಕಳೆಯುವದಕ್ಕೆ ಬೇಕಾದ **ನಿತ್ಯಕರ್ಮಗಳನ್ನೂ** ಫಲವು ಬೇಕೆನ್ನುವವರಿಗೆ ಬೇಕಾದ **ಕಾಮ್ಯಕರ್ಮ**ಗಳನ್ನೂ[2] ತಿಳಿದುಕೊಂಡಿದ್ದಾಗಿರುತ್ತದೆ. ಈಗ ಕರ್ಮವನ್ನು ಸ್ವೀಕರಿಸುವದಕ್ಕೆ ಕಾರಣವಾಗಿರುವದನ್ನು ತೊಲಗಿಸುವದಕ್ಕಾಗಿ **ಬ್ರಹ್ಮವಿದ್ಯೆ**ಯನ್ನು[3] **ಪ್ರಾರಂಭಿಸಿರುತ್ತದೆ.**

(ಭಾಷ್ಯ)

೨. ಕರ್ಮಹೇತುಃ ಕಾಮಃ ಸ್ಯಾತ್, ಪ್ರವರ್ತಕತ್ವಾತ್ । ಆಪ್ತಕಾಮಾನಾಂ ಹಿ ಕಾಮಾಭಾವೇ ಸ್ವಾತ್ಮನ್ಯವಸ್ಥಾನಾತ್ ಪ್ರವೃತ್ತ್ಯನುಪಪತ್ತಿಃ । ಆತ್ಮಕಾಮತ್ವೇ ಚಾಪ್ತಕಾಮತಾ । ಆತ್ಮಾ ಚ[4] ಬ್ರಹ್ಮ । ತದ್ವಿದೋ ಹಿ ಪರಪ್ರಾಪ್ತಿಂ ವಕ್ಷ್ಯತಿ ।

---

1. ಈ ಶ್ಲೋಕವು ತೈತ್ತಿರೀಯವಾರ್ತಿಕದ ಮುದ್ರಿತಪುಸ್ತಕದಲ್ಲಿಯೂ ಕಾಣುತ್ತದೆ, ವ್ಯಾಖ್ಯಾನಕಾರರು ಆಯಾ ಗ್ರಂಥಕ್ಕೆ ತಕ್ಕಂತೆ ಬೇರೆಬೇರೆಯ ವ್ಯಾಖ್ಯಾನವನ್ನು ಮಾಡಿರುತ್ತಾರೆ. ಈ ಶ್ಲೋಕವು ನಿಜವಾಗಿ ಆಚಾರ್ಯಕೃತವೆ ಅಥವಾ ವಾರ್ತಿಕಕಾರಕೃತವೆ? ಎಂಬುದನ್ನು ಪಂಡಿತರು ಶೋಧಿಸಬೇಕಾಗಿದೆ.

2. ಅವಶ್ಯವಾಗಿ ಮಾಡಬೇಕೆಂದು ವೇದದಲ್ಲಿ ಹೇಳಿರುವ ಕರ್ಮಗಳು ನಿತ್ಯಕರ್ಮಗಳು; ಇಂಥ ಬಯಕೆಯುಳ್ಳವರು ಇಂಥ ಕರ್ಮವನ್ನು ಮಾಡಬೇಕೆಂದು ಹೇಳಿರುವ ಕರ್ಮಗಳು ಕಾಮ್ಯಕರ್ಮಗಳು.

3 ಹಿಂದೆ ಹೇಳಿರುವದು ಕರ್ಮದ ತಿಳಿವಳಿಕೆ, ಈಗ ಹೇಳುವದು ಬ್ರಹ್ಮದ ತಿಳಿವಳಿಕೆ.

4. 'ಹಿ' ಎಂದು ಆ॥ ಕಾ॥ ಪಾಠ. ಇಲ್ಲಿ ಕೊಟ್ಟಿರುವ ವಾ॥ ಪಾಠ.

ಅತಃ, ಅವಿದ್ಯಾನಿವೃತ್ತೌ ಸ್ವಾತ್ಮನ್ಯವಸ್ಥಾನಂ ಪರಪ್ರಾಪ್ತಿಃ । "ಅಭಯಂ ಪ್ರತಿಷ್ಠಾಂ ವಿನ್ದತೇ" (೨-೭) "ಏತಮಾನನ್ದಮಯಮಾತ್ಮಾನಮುಪಸಂಕ್ರಾಮತಿ" (೨-೮) ಇತ್ಯಾದಿಶ್ರುತೇಃ ॥

(ಭಾಷ್ಯಾರ್ಥ)

ಕರ್ಮಕ್ಕೆ ಕಾರಣವಾದದ್ದು ಕಾಮವಾಗಿರಬೇಕು, ಏಕೆಂದರೆ (ಅದು ಕರ್ಮದಲ್ಲಿ) ಪ್ರವರ್ತಿಸುವಂತೆ ಮಾಡುವದಾಗಿರುತ್ತದೆ. ಯಾರು ಕಾಮಗಳ(ನ್ನೆಲ್ಲ) ಪಡೆದುಕೊಂಡಿರುತ್ತಾರೋ ಅವರಿಗೆ ಕಾಮವಿಲ್ಲದ್ದರಿಂದ (ಅವರು) ತಮ್ಮ ಸ್ವರೂಪದಲ್ಲಿಯೇ ನಿಂತುಬಿಡುವರಾದ್ದರಿಂದ[1] (ಕರ್ಮದಲ್ಲಿ) ತೊಡಗುವದೆಂಬುದು ಹೊಂದುವದಿಲ್ಲ. ಮತ್ತು ಆತ್ಮನೇ ಬೇಕೆನ್ನುವವರಿಗೆ (ಮಾತ್ರ) ಕಾಮಗಳನ್ನೆಲ್ಲ ಪಡೆದುಕೊಂಡಂತೆ (ಆಗುತ್ತದೆ)[2]; ಏಕೆಂದರೆ ಆತ್ಮನೇ ಬ್ರಹ್ಮವು,[3] ಆ ಬ್ರಹ್ಮವನ್ನು ಅರಿತಾತನಿಗೇ ಹೆಚ್ಚಿನ (ಪುರುಷಾರ್ಥದ) ಪ್ರಾಪ್ತಿಯಾಗುವದೆಂದು (ಮುಂದೆ ೨-೧ರಲ್ಲಿ) ಹೇಳಿರುತ್ತದೆ. ಆದ್ದರಿಂದ ಅವಿದ್ಯೆಯು ತೊಲಗಿದರೆ[4] ತನ್ನ ಸ್ವರೂಪದಲ್ಲಿ ನಿಲ್ಲುವದೇ ಹೆಚ್ಚಿನ (ಪುರುಷಾರ್ಥದ) ಪ್ರಾಪ್ತಿ. "ಅಂಜಿಕೆಯಿಲ್ಲದ ನಿಲುಗಡೆಯನ್ನು ಪಡೆದುಕೊಳ್ಳುತ್ತಾನೆ" (೨-೭) "ಈ ಆನಂದಮಯನಾದ ಆತ್ಮನನ್ನು ಅರಿತುಕೊಳ್ಳುತ್ತಾನೆ"[5] (೨-೮) ಮುಂತಾದ ಶ್ರುತಿಯು ಇದಕ್ಕೆ ಪ್ರಮಾಣ.

## ಕರ್ಮಮಾತ್ರದಿಂದ ಮೋಕ್ಷವಾಗಲಾರದು

(ಭಾಷ್ಯ)

೪. ಕಾಮ್ಯಪ್ರತಿಷಿದ್ಧಯೋರನಾರಮ್ಭಾತ್, ಆರಬ್ಧಸ್ಯ ಚ ಉಪಭೋಗೇನ

---

1 ತಮ್ಮ ಪರಮಾರ್ಥಸ್ವರೂಪವನ್ನು ಅರಿತುಕೊಂಡು ಅದರಲ್ಲಿ ನೆಲೆನಿಂತಿರುವರಾದ್ದರಿಂದ. ಮು. ಭಾ. ೧-೩-೧, ಕ. ಭಾ. ೩-೧-೩ ನೋಡಿರಿ.

2. ಬೃ. ೪-೪-೬ ರ ಸೂಚನೆ.

3. ಆದ್ದರಿಂದ ಬ್ರಹ್ಮಜ್ಞಾನಿಗಳಿಗೆ ಮತ್ತೊಂದು ಬೇಕೆಂಬ ಕಾಮವಾಗಲಿ, ಆದಕ್ಕಾಗಿ ಕರ್ಮವಾಗಲಿ ಉಂಟಾಗಲಾರದು.

4. ಬ್ರಹ್ಮವನ್ನರಿತುಕೊಂಡು ಅದರ ವಿಷಯಕ್ಕೆ ನಮಗಿರುವ ತಪ್ಪು ತಿಳಿವಳಿಕೆಯನ್ನು ತೊಲಗಿಸಿಕೊಂಡರೆ. ಈ ತಪ್ಪುತಿಳಿವಳಿಕೆಯಿಂದಲೇ ತನಗಿಂತ ಬೇರೆಯಾಗಿ ಪಡೆಯಬೇಕಾದ ವಿಷಯಗಳು ಇರುವಂತೆ ತೋರುತ್ತಿರುವದು.

5. ಇಲ್ಲಿ ಆನಂದಮಯನು ಪರಮಾತ್ಮನೆಂದಿಟ್ಟುಕೊಂಡು ಶ್ರುತಿಯನ್ನು ಉದಾಹರಿಸಿದೆ ಎಂಬ (ಆ॥) ವ್ಯಾಖ್ಯಾನಕ್ಕೆ ಆಧಾರವಿಲ್ಲ. "ಯ ಏವಂವಿತ್" ಯಾವನು ಈರೀತಿ ತಿಳಿದುಕೊಂಡಿರುವನೋ ಅವನಿಗೆ ಆಗುವ ಫಲವನ್ನು ಇಲ್ಲಿ ಹೇಳಿದೆ; ವಾಕ್ಯಶೇಷದಲ್ಲಿ, ಬ್ರಹ್ಮದ ಆನಂದಸ್ವರೂಪವನ್ನು ಅರಿತವನಿಗೆ ಆಗುವ ಅಭಯಪ್ರಾಪ್ತಿಯನ್ನೂ ಹೇಳಿದೆ. ಅವಿದ್ಯೆಯು ತೊಲಗುವದರಿಂದ ಅಭಯಪ್ರಾಪ್ತಿ ಎಂಬುದು ಬ್ರಹ್ಮಜ್ಞಾನದ ಫಲವು.

ಕ್ಷಯಾತ್ ನಿತ್ಯಾನುಷ್ಠಾನೇನ ಚ ಪ್ರತ್ಯವಾಯಾಭಾವಾತ್ ಅಯತ್ನತ ಏವ ಸ್ವಾತ್ಮನ್ಯವಸ್ಥಾನಂ ಮೋಕ್ಷಃ। ಅಥವಾ ನಿರತಿಶಯಾಯಾಃ ಪ್ರೀತೇಃ ಸ್ವರ್ಗಶಬ್ದವಾಚ್ಯಾಯಾಃ ಕರ್ಮಹೇತುತ್ವಾತ್ ಕರ್ಮಭ್ಯ ಏವ ಮೋಕ್ಷ ಇತಿ ಚೇತ್ ॥

(ಭಾಷ್ಯಾರ್ಥ)

(ಪೂರ್ವಪಕ್ಷಿ) :— ಕಾಮ್ಯಪ್ರತಿಷಿದ್ಧ (ಕರ್ಮ)ಗಳನ್ನು ಮಾಡದೆ ಫಲವನ್ನು ಕೊಡುವದಕ್ಕೆ ಪ್ರಾರಂಭವಾಗಿರುವದನ್ನು [1] ಅನುಭವಿಸಿ ಸವೆಯಿಸಿಕೊಂಡು ನಿತ್ಯಕರ್ಮವನ್ನು ಮಾಡುವದರಿಂದ ಪ್ರತ್ಯವಾಯವಿಲ್ಲವಾಗಲು [2] ಯಾವ ಯತ್ನವೂ ಇಲ್ಲದೆ [3] ತನ್ನ ಸ್ವರೂಪದಲ್ಲಿ ನಿಂತುಬಿಡುವದೇ ಮೋಕ್ಷವು.[4] ಅಥವಾ ಸ್ವರ್ಗವೆಂಬ ಮಾತಿಗೆ ವಾಚ್ಯವಾದ ಮಿಗಿಲಿಲ್ಲದ ಸುಖವು [5] ಕರ್ಮವೆಂಬ ಕಾರಣದಿಂದಲೇ ಆಗತಕ್ಕದ್ದಾದ್ದರಿಂದ ಕರ್ಮಗಳಿಂದಲೇ ಮೋಕ್ಷ(ವಾಗುತ್ತದೆಯಲ್ಲ)!

(ಭಾಷ್ಯ)

೨. ನ। ಕರ್ಮಾನೇಕತ್ವಾತ್। ಅನೇಕಾನಿ ಹಿ ಆರಬ್ಧಫಲಾನಿ ಅನಾರಬ್ಧಫಲಾನಿ ಚ ಅನೇಕ ಜನ್ಮಾನ್ತರಕೃತಾನಿ ವಿರುದ್ಧಫಲಾನಿ ಕರ್ಮಾಣಿ ಸಂಭವನ್ತಿ। ಅತಃ ತೇಷ್ವನಾರಬ್ಧಫಲಾನಾಮ್ ಏಕಸ್ಮಿನ್ ಜನ್ಮನ್ಯುಪಭೋಗೇನ [6] ಕ್ಷಯಾಸಂಭವಾತ್ ಶೇಷಕರ್ಮನಿಮಿತ್ತಶರೀರಾರಮ್ಭೋಪಪತ್ತಿಃ। ಕರ್ಮಶೇಷಸದ್ಭಾವಸಿದ್ಧಿಶ್ಚ। "ತದ್ಯ ಇಹ ರಮಣೀಯಚರಣಾಃ" (ಛಾ. ೫-೧೦-೭) "ತತಃ ಶೇಷೇಣ" (ಗೌ. ಧ. ೨-೨೯) ಇತ್ಯಾದಿಶ್ರುತಿಸ್ಮೃತಿಶತೇಭ್ಯಃ ॥

---

1 ವಿಧಿಯ ದೃಷ್ಟಿಯಿಂದ ಕರ್ಮವನ್ನು ನಿತ್ಯ, ನೈಮಿತ್ತಿಕ, ಕಾಮ್ಯ, ನಿಷಿದ್ಧ-ಎಂದು ನಾಲ್ಕು ಬಗೆಯಾಗಿ ವಿಂಗಡಿಸುವರು; ಫಲಭೋಗದ ದೃಷ್ಟಿಯಿಂದ ಸಂಚಿತ, ಆರಬ್ಧ, ಆಗಾಮಿ-ಎಂದು ಮೂರು ಬಗೆಯಾಗಿ ವಿಂಗಡಿಸುವರು.

2. ಮಾಡದೆ ಇರುವವರಿಂದಾಗುವ ದೋಷವಿಲ್ಲವಾಗಲು.

3. ಜ್ಞಾನವೇ ಮುಂತಾದವನ್ನು ಪಡೆದುಕೊಳ್ಳುವ ಆವಶ್ಯಕತೆಯಿಲ್ಲದೆ.

4. ಆತ್ಮಸ್ವರೂಪದಲ್ಲಿ ನಿಲ್ಲುವದಕ್ಕೆ ಸಾಧನವು ಬೇಕೆಂದು ಪೂರ್ವಪಕ್ಷಿ ನಂಬಿರುತ್ತಾನೆ. ಈ ಪೂರ್ವಪಕ್ಷವನ್ನು ಗೀ. ಭಾ. ೧೮-೬೬, ಸೂ. ಭಾ. ೪-೩-೧೪ರಲ್ಲಿಯೂ ಖಂಡಿಸಿರುತ್ತದೆ.

5. ಸ್ವರ್ಗಕ್ಕಿಂತ ಬೇರೆಯಾದ ಮೋಕ್ಷವೆಂಬ ಪುರುಷಾರ್ಥವೇ ಇಲ್ಲವೆಂಬ ವೀರಮೀಮಾಂಸಕರ ಮತವಿದು.

6. "ಉಪಭೋಗಕ್ಷಯಾಸಂಭವಾತ್" ಎಂಬ ಆ॥ ಪಾಠಕ್ಕಿಂತ ಈ ವಾ॥ ಕಾ॥ ಪಾಠವು ಉತ್ತಮ.

(ಭಾಷ್ಯಾರ್ಥ)

(ಸಿದ್ಧಾಂತಿ):—ಹಾಗಲ್ಲ. ಏಕೆಂದರೆ ಕರ್ಮಗಳು ಅನೇಕವಿಧವಾಗಿರುತ್ತವೆ. ಫಲವನ್ನು ಕೊಟ್ಟಿರುವ ಮತ್ತು ಕೊಡದೆ ಇರುವ ಅನೇಕ ಜನ್ಮಾಂತರಗಳಿಂದ ಮಾಡಿಕೊಂಡುಬಂದಿರುವ (ಒಂದಕ್ಕೊಂದು) ವಿರುದ್ಧವಾದ ಫಲವನ್ನು (ಕೊಡಬೇಕಾಗಿರುವ)[1] ಅನೇಕ ಕರ್ಮಗಳು ಇರಬಹುದಲ್ಲವೆ? ಆದ್ದರಿಂದ ಅವುಗಳಲ್ಲಿ ಫಲವನ್ನು ಕೊಡದೆ ಇರುವ (ಅನೇಕ ಕರ್ಮಗಳನ್ನು) ಒಂದೇ ಜನ್ಮದಲ್ಲಿ ಅನುಭವಿಸಿ ಸವೆಯಿಸುವದು ಆಗಲಾರದಾದ್ದರಿಂದ ಉಳಿದಿರುವ ಕರ್ಮವೆಂಬ ಕಾರಣದಿಂದ (ಮತ್ತೊಂದು) ಶರೀರವು ಉಂಟಾಗಬಹುದಾಗಿರುತ್ತದೆ. ಕರ್ಮದಲ್ಲಿ (ಒಂದು ಭಾಗವು) ಉಳಿದಿರಬಹುದೆಂದೂ ಏರ್ಪಡುತ್ತದೆ. "ಅವರಲ್ಲಿ ಯಾರು ಇಲ್ಲಿ ಒಳ್ಳೆಯದನ್ನು ಮಾಡಿರುವರೋ (ಅವರು ಬೇಗ ಒಳ್ಳೆಯ ಜನ್ಮವನ್ನು ಪಡೆಯುತ್ತಾರೆ.)" (ಛಾ. ೫-೧೦-೭) "ಆಮೇಲೆ (ಕರ್ಮ) ಶೇಷದಿಂದ (ಜನ್ಮವನ್ನು ಪಡೆಯುವರು)"[2] (ಗೌ. ಧ. ೨-೨೯) ಮುಂತಾದ ನೂರಾರು ಶ್ರುತಿಸ್ಮೃತಿಗಳು ಇದಕ್ಕೆ ಪ್ರಮಾಣವಾಗಿರುತ್ತವೆ.

(ಭಾಷ್ಯ)

೫. ಇಷ್ಟಾನಿಷ್ಟಫಲಾನಾಮ್ ಅನಾರಬ್ಧಾನಾಂ ಕ್ಷಯಾರ್ಥಾನಿ ನಿತ್ಯಾನಿ ಇತಿ ಚೇತ್ । ನ । ಅಕರಣೇ ಪ್ರತ್ಯವಾಯಶ್ರವಣಾತ್ । ಪ್ರತ್ಯವಾಯಶಬ್ದೋ ಹಿ ಅನಿಷ್ಟವಿಷಯಃ । ನಿತ್ಯಾಕರಣನಿಮಿತ್ತಸ್ಯ ಪ್ರತ್ಯವಾಯಸ್ಯ ದುಃಖರೂಪಸ್ಯ ಆಗಾಮಿನಃ ಪರಿಹಾರಾರ್ಥಾನಿ ನಿತ್ಯಾನಿ ಇತ್ಯಭ್ಯುಪಗಮಾತ್ ನ ಅನಾರಬ್ಧಫಲಕರ್ಮಕ್ಷಯಾರ್ಥಾನಿ । ಯದಿ ನಾಮ ಅನಾರಬ್ಧಕರ್ಮಕ್ಷಯಾರ್ಥಾನಿ ನಿತ್ಯಾನಿ ಕರ್ಮಾಣಿ, ತಥಾಪಿ ಅಶುದ್ಧಮೇವ ಕ್ಷಪಯೇಯುಃ ನ ಶುದ್ಧಮ್ । ವಿರೋಧಾಭಾವಾತ್ । ನ ಹಿ ಇಷ್ಟಫಲಸ್ಯ ಕರ್ಮಣಃ ಶುದ್ಧರೂಪತ್ವಾತ್ ನಿತ್ಯೈರ್ವಿರೋಧ ಉಪಪದ್ಯತೇ । ಶುದ್ಧಾಶುದ್ಧಯೋರ್ಹಿ ವಿರೋಧೋ ಯುಕ್ತಃ ॥

---

1. ಬ್ರಹ್ಮಹತ್ಯೆ, ಜ್ಯೋತಿಷ್ಟೋಮ-ಇಂಥ ಎರಡು ಕರ್ಮಗಳಿಗೆ ಆಗುವ ಫಲಗಳು ಒಂದಕ್ಕೊಂದು ಅತ್ಯಂತ ವಿರುದ್ಧವಾಗಿರುತ್ತವೆ. ಅವುಗಳ ಫಲವನ್ನು ಒಂದೇ ಶರೀರದಲ್ಲಿ ಅನುಭವಿಸುವದು ಆಗಲಾರದು.

2. "ವರ್ಣಾ ಆಶ್ರಮಾಶ್ಚ ಸ್ವಕರ್ಮನಿಷ್ಠಾಃ ಪ್ರೇತ್ಯ ಸ್ವಕರ್ಮಫಲಮನುಭೂಯ ತತಃ ಶೇಷೇಣ ವಿಶಿಷ್ಟದೇಶಜಾತಿಕುಲರೂಪಾಯುಃಶ್ರುತವೃತ್ತವಿತ್ತಸುಖಮೇಧಸೋ ಜನ್ಮ ಪ್ರತಿಪದ್ಯಂತೇ" ಎಂಬ ಸೂತ್ರವಾಕ್ಯದ ಭಾಗವಿದು.

(ಭಾಷ್ಯಾರ್ಥ)

(ಪೂರ್ವಪಕ್ಷಿ) :—ಫಲವನ್ನು (ಇನ್ನೂ) ಕೊಡದೆ ಇರುವ ಬೇಕಾದ ಮತ್ತು ಬೇಡವಾದ ಫಲಗಳನ್ನು ಕೊಡಬಹುದಾದ (ಕರ್ಮಗಳನ್ನು) ಸವೆಯಿಸುವದಕ್ಕೆ ನಿತ್ಯ ಕರ್ಮಗಳು (ವಿಹಿತವಾಗಿವೆ, ಅಲ್ಲವೆ) ?

(ಸಿದ್ಧಾಂತಿ) :—ಹಾಗಲ್ಲ. ಏಕೆಂದರೆ (ಅವನ್ನು) ಮಾಡದಿದ್ದರೆ ಪ್ರತ್ಯವಾಯವನ್ನು ಶ್ರುತಿಯಲ್ಲಿ ಹೇಳಿರುತ್ತದೆ.[1] ಪ್ರತ್ಯವಾಯವೆಂಬ ಮಾತು ಅನಿಷ್ಟವಾದದ್ದನ್ನೇ ಹೇಳುತ್ತದೆ. ನಿತ್ಯ (ಕರ್ಮ)ಗಳನ್ನು ಮಾಡದೆ ಇರುವ ನಿಮಿತ್ತದಿಂದ ಮುಂದೆ ಉಂಟಾಗ(ಬಹುದಾದ) ದುಃಖರೂಪವಾದ ಪ್ರತ್ಯವಾಯವನ್ನು ನೀಗುವದಕ್ಕೆ ನಿತ್ಯಕರ್ಮಗಳನ್ನು (ವಿಧಿಸಿದೆಯೆಂದು ನೀವೇ) ಒಪ್ಪಿರುವದರಿಂದ (ಅವು) ಫಲವನ್ನು ಕೊಡದೆ (ಉಳಿದಿರುವ) ಕರ್ಮಗಳನ್ನು ಸವೆಯಿಸುವದಕ್ಕೆ (ವಿಹಿತವಾಗಿವೆ ಎಂಬುದು) ಸರಿಯಲ್ಲ. ಒಂದು ವೇಳೆ ಫಲವನ್ನು ಕೊಡದೆ (ಉಳಿದಿರುವ) ಕರ್ಮಗಳನ್ನು ಸವೆಯಿಸುವದಕ್ಕೆ ನಿತ್ಯಕರ್ಮಗಳು (ವಿಹಿತವಾಗಿವೆ) ಎಂದು ಇಟ್ಟುಕೊಂಡರೂ (ಅವು) ಅಶುದ್ಧ (ಕರ್ಮಗಳನ್ನು) ಸವೆಯಿಸಿಯಾವೇ ಹೊರತು ಶುದ್ಧ (ಕರ್ಮ)ವನ್ನು ಸವೆಯಿಸಲಾರವು. ಏಕೆಂದರೆ (ಇವೆರಡಕ್ಕೂ) ವಿರೋಧವಿರುವದಿಲ್ಲ. ಇಷ್ಟವಾದ ಫಲವನ್ನು ಕೊಡುವ ಕರ್ಮವು ಶುದ್ಧರೂಪವಾಗಿರುವದರಿಂದ (ಅದಕ್ಕೂ) ನಿತ್ಯ (ಕರ್ಮ)ಗಳಿಗೂ ವಿರೋಧ(ವುಂಟೆಂಬುದು) ಸರಿಯಾಗುವದೇ ಇಲ್ಲ; (ಒಂದು) ಶುದ್ಧ, (ಒಂದು) ಅಶುದ್ಧ-(ಹೀಗಿರುವ ಎರಡು ಕರ್ಮ)ಗಳಿಗಲ್ಲವೆ, ಒಂದಕ್ಕೊಂದಕ್ಕೆ ವಿರೋಧ(ವಿದೆ ಎಂಬುದು) ಯುಕ್ತವಾಗುತ್ತದೆ?

(ಭಾಷ್ಯ)

೬. ನ ಚ ಕರ್ಮಹೇತೂನಾಂ ಕಾಮಾನಾಂ ಜ್ಞಾನಾಭಾವೇ ನಿವೃತ್ತ್ಯಸಂಭವಾತ್ ಅಶೇಷಕರ್ಮಕ್ಷಯೋಪಪತ್ತಿಃ । ಅನಾತ್ಮವಿದೋ ಹಿ ಕಾಮಃ । ಅನಾತ್ಮಫಲವಿಷಯತ್ವಾತ್ । ಸ್ವಾತ್ಮನಿ ಚ ಕಾಮಾನುಪಪತ್ತಿಃ । ನಿತ್ಯಪ್ರಾಪ್ತತ್ವಾತ್ । ಸ್ವಯಂ ಚ ಆತ್ಮಾ ಪರಂ ಬ್ರಹ್ಮ ಇತ್ಯುಕ್ತಮ್ ॥

(ಭಾಷ್ಯಾರ್ಥ)

ಇದೂ ಅಲ್ಲದೆ ಕರ್ಮಕ್ಕೆ ಕಾರಣವಾಗಿರುವ ಕಾಮಗಳು (ಆತ್ಮ) ಜ್ಞಾನವುಂಟಾದ ಹೊರತು ತೊಲಗಲಾರವಾದ್ದರಿಂದ (ಅದಿಲ್ಲದೆ) ಎಲ್ಲಾ ಕರ್ಮಗಳೂ ಸವೆ

1. ಪೂರ್ವಪಕ್ಷಿಯು ಇದನ್ನು ಒಪ್ಪಿರುತ್ತಾನೆ. ಸಿದ್ಧಾಂತಿಯ ಮತವು ಮುಂದೆ ಬರುತ್ತದೆ.

ಯುನವೆಂಬುದೂ ಸರಿಯಾಗುವದಿಲ್ಲ.[1] ಆತ್ಮನನ್ನು ಅರಿಯದವನಿಗೇ ಕಾಮ ವುಂಟಾಗುತ್ತದೆ, ಏಕೆಂದರೆ (ಕಾಮಕ್ಕೆ) ಅನಾತ್ಮ(ರೂಪವಾದ) ಫಲವೇ ವಿಷಯವು. ತನ್ನ ಆತ್ಮನಲ್ಲಿ (ತನಗೆ) ಕಾಮವುಂಟಾಗುವಹಾಗೂ ಇಲ್ಲ; ಏಕೆಂದರೆ (ಆತ್ಮನು) ಯಾವಾಗಲೂ ಪ್ರಾಪ್ತನಾಗಿಯೇ ಇರುತ್ತಾನೆ. ಆತ್ಮನೇ ಪರಬ್ರಹ್ಮವೆಂದು (ಹಿಂದೆಯೇ) ಹೇಳಿರುತ್ತದೆ.

(ಭಾಷ್ಯ)

೭. ನಿತ್ಯಾನಾಂ ಚ ಅಕರಣಮ್ ಅಭಾವಃ । ತತಃ ಪ್ರತ್ಯವಾಯಾನುಪಪತ್ತಿರಿತ್ಯತಃ ಪೂರ್ವೋಪಚಿತದುರಿತೇಭ್ಯಃ ಪ್ರಾಪ್ಯಮಾಣಾಯಾಃ ಪ್ರತ್ಯವಾಯಕ್ರಿಯಾಯಾಃ ನಿತ್ಯಾಕರಣಂ ಲಕ್ಷಣಮ್ ಇತಿ "ಅಕುರ್ವನ್ ವಿಹಿತಂ ಕರ್ಮ" (ಮನು. ೧೧-೪೪, ಶಾಂ. ರಾ. ೩೪-೨) ಇತಿ ಶತುರ್ನಾನುಪಪತ್ತಿಃ । ಅನ್ಯಥಾ ಅಭಾವಾದ್ಭಾವೋತ್ಪತ್ತಿರಿತಿ ಸರ್ವಪ್ರಮಾಣವ್ಯಾಕೋಪ ಇತಿ । ಅತಃ ಅಯತ್ನತಃ ಸ್ವಾತ್ಮನ್ಯವಸ್ಥಾನಮ್ ಇತ್ಯನುಪಪನ್ನಮ್ ॥

(ಭಾಷ್ಯಾರ್ಥ)

ನಿತ್ಯಕರ್ಮಗಳನ್ನು ಮಾಡದೆ ಇರುವದೆಂಬುದು ಅಭಾವವು, (ಆದ್ದರಿಂದ) ಅದರಿಂದ ಪ್ರತ್ಯವಾಯ(ವುಂಟಾಗುವ)ದೆಂಬುದು ಹೊಂದುವದಿಲ್ಲ.[2] ಆದ್ದರಿಂದ ಹಿಂದೆ ಕೂಡಿಹಾಕಿಕೊಂಡಿರುವ ಪಾಪಗಳಿಂದ ಮುಂದೆ ಬರುವದಾಗಿರುವ ಪ್ರತ್ಯವಾಯಕ್ರಿಯೆಗೆ ನಿತ್ಯಕರ್ಮವನ್ನು ಮಾಡದಿರುವದು ಗುರುತಾಗಿರುತ್ತದೆಯಾದ್ದರಿಂದ "ಅಕುರ್ವನ್ ವಿಹಿತಂ ಕರ್ಮ" (ಮನು. ೧೧-೪೪, ಶಾಂ. ರಾ. ೩೪-೨) ಎಂಬ ಸ್ಮೃತಿವಾಕ್ಯದಲ್ಲಿ ಶತೃಪ್ರತ್ಯಯ(ವನ್ನುಪಯೋಗಿಸಿರುವದು) ಅಯುಕ್ತವಾಗುವದಿಲ್ಲ.[3] ಹೀಗಿಲ್ಲದಿದ್ದರೆ ಅಭಾವದಿಂದ ಭಾವವು ಹುಟ್ಟುತ್ತದೆ ಎಂದು (ಹೇಳಿ

---

1. ಕಾಮಗಳಿಗೆ ಆತ್ಮಾಜ್ಞಾನವೇ ಮೂಲವೆಂಬ ಸಿದ್ಧಾಂತದಿಂದ ಇದು ಹೊರಡುತ್ತದೆ. ಈ ಸಿದ್ಧಾಂತಕ್ಕೆ ಯುಕ್ತಿಯನ್ನು ಈಗ ಹೇಳುತ್ತಿದಾರೆ.

2. ನಿತ್ಯಕರ್ಮಗಳನ್ನು ಮಾಡದಿದ್ದರೆ ಪ್ರತ್ಯವಾಯವುಂಟಾಗುವದೆಂದು ಭಾಟ್ಟರು ಹೇಳುತ್ತಾರೆ; ಈ ಪಕ್ಷವನ್ನು ಗೀ.ಭಾ. ೪-೧೮ರಲ್ಲಿಯೂ ಖಂಡಿಸಿದೆ. ನಿತ್ಯಕರ್ಮಗಳಿಗೆ ಬೇರೆಯ ಫಲವಿಲ್ಲವೆಂಬ ಪ್ರಾಭಾಕರ ಮತವನ್ನು ಗೀ. ೪-೧೮ರಲ್ಲಿ ಖಂಡಿಸಿದೆ.

3. ಅಕುರ್ವನ್ ವಿಹಿತಂ ಕರ್ಮ ನಿನ್ದಿತಂ ಚ ಸಮಾಚರನ್ । ಪ್ರಸಕ್ತಶ್ಚೇನ್ದ್ರಿಯಾರ್ಥೇಷು ಪ್ರಾಯಶ್ಚಿತ್ತೀಯತೇ ನರಃ ॥ (ಮನು. ೧೧-೪೪); ಅಕುರ್ವನ್ ವಿಹಿತಂ ಕರ್ಮ ಪ್ರತಿಷಿದ್ಧಾನಿ ಚಾಚರನ್ । ಪ್ರಾಯಶ್ಚಿತ್ತೀಯತೇ ಹ್ಯೇವಂ ನರೋ ಮಿಥ್ಯಾನುವರ್ತಯನ್ ॥ (ರಾ. ಧ ೩೪-೨)—ಎಂಬ ಎರಡು ವಾಕ್ಯಗಳಲ್ಲಿ ಯಾವದನ್ನು ತೆಗೆದುಕೊಂಡರೂ "ಅಕುರ್ವನ್" ಎಂಬಲ್ಲಿ ಶತೃ (ವರ್ತಮಾನಕೃತ್) ಪ್ರತ್ಯಯವೇ ಇರುತ್ತದೆ.

ದಂತಾಗಿ) ಎಲ್ಲಾ ಪ್ರಮಾಣಗಳಿಗೂ ವಿರೋಧವಾಗುತ್ತದೆ.[1] ಆದ್ದರಿಂದ ಯಾವ ಯತ್ನವೂ ಇಲ್ಲದೆ ಆತ್ಮನಲ್ಲಿ ನಿಲ್ಲಬಹುದು (ಎಂದದ್ದು) ಸರಿಯಲ್ಲ.

(ಭಾಷ್ಯ)

೮. ಯಚ್ಚೋಕ್ತಂ ನಿರತಿಶಯಪ್ರೀತೇಃ ಸ್ವರ್ಗಶಬ್ದವಾಚ್ಯಾಯಾಃ ಕರ್ಮನಿಮಿತ್ತತ್ವಾತ್ ಕರ್ಮಭ್ಯ ಏವ ಮೋಕ್ಷಃ ಇತಿ । ತನ್ನ । ನಿತ್ಯತ್ವಾನ್ಮೋಕ್ಷಸ್ಯ । ನ ಹಿ ನಿತ್ಯಂ ಕಿಂಚಿತ್ ಆರಭ್ಯತೇ । ಲೋಕೇ ಯದಾರಬ್ಧಂ ತದನಿತ್ಯಮ್ ಇತಿ । ಅತೋ ನ ಕರ್ಮಾರಭ್ಯೋ ಮೋಕ್ಷಃ ॥

(ಭಾಷ್ಯಾರ್ಥ)

ಇನ್ನು ಸ್ವರ್ಗವೆಂಬ ಶಬ್ದಕ್ಕೆ ವಾಚ್ಯವಾಗಿರುವ ಮಿಗಿಲಿಲ್ಲದ ಸುಖವು ಕರ್ಮದಿಂದಲೇ ಆಗುವದರಿಂದ ಮೋಕ್ಷವು ಕರ್ಮಗಳಿಂದುಂಟಾಗತಕ್ಕದ್ದೇ ಎಂದು (ಪೂರ್ವಪಕ್ಷದಲ್ಲಿ ಹೇಳಿತ್ತಷ್ಟೆ),[2] ಅದು ಸರಿಯಲ್ಲ. ಏಕೆಂದರೆ ಮೋಕ್ಷವು ನಿತ್ಯವಾಗಿರುತ್ತದೆ. ನಿತ್ಯವಾದದ್ದು ಯಾವದೂ ಉಂಟಾಗುವದೇ ಇಲ್ಲ. ಲೋಕದಲ್ಲಿ ಯಾವ (ಯಾವದು) ಉಂಟಾಗಿರುವದೋ ಅದು ಅನಿತ್ಯ(ವಾಗಿರುತ್ತದೆ), ಆದ್ದರಿಂದ ಮೋಕ್ಷವು ಕರ್ಮಗಳಿಂದ ಉಂಟಾಗತಕ್ಕದ್ದಲ್ಲ.

## ಕರ್ಮಜ್ಞಾನಸಮುಚ್ಚಯದಿಂದಲೂ ಮೋಕ್ಷವುಂಟಾಗಲಾರದು

(ಭಾಷ್ಯ)

೯. ವಿದ್ಯಾಸಹಿತಾನಾಂ ಕರ್ಮಣಾಂ ನಿತ್ಯಾರಮ್ಭಸಾಮರ್ಥ್ಯಮ್ ಇತಿ ಚೇತ್ । ನ । ವಿರೋಧಾತ್ । ನಿತ್ಯಂ ಚ ಆರಭ್ಯತೇ ಚ[3] ಇತಿ ವಿರುದ್ಧಮ್ । ಯದ್ವಿನಷ್ಟಂ ತದೇವ ನೋತ್ಪದ್ಯತೇ ಇತಿ ಪ್ರಧ್ವಂಸಾಭಾವವತ್ ನಿತ್ಯೋಽಪಿ ಮೋಕ್ಷ ಆರಭ್ಯ ಏವ ಇತಿ ಚೇತ್ । ನ । ಮೋಕ್ಷಸ್ಯ ಭಾವರೂಪತ್ವಾತ್ । ಪ್ರಧ್ವಂಸಾಭಾವೋಽಪಿ ಆರಭ್ಯತೇ ಇತಿ[4] ಅಭಾವಸ್ಯ ವಿಶೇಷಾಭಾವಾತ್ ವಿಕಲ್ಪಮಾತ್ರಮೇತತ್ । ಭಾವಪ್ರತಿಯೋಗೀ ಹ್ಯಭಾವಃ । ಯಥಾ ಹಿ ಅಭಿನ್ನೋಽಪಿ ಭಾವೋ ಘಟ

---

1. ಅಸತ್ಕಾರ್ಯವಾದವು ಸರ್ವಪ್ರಮಾಣಗಳಿಗೂ ವಿರುದ್ಧ.

2. ೩ನೆಯ ಭಾ.ಭಾ. ವನ್ನು ನೋಡಿ.

3. 'ಇತಿ' ಅಥವಾ 'ಇತಿ ಚ' ಎಂಬ ಪಾಠಕ್ಕಿಂತ 'ಚ ಇತಿ' ಎಂದಿದ್ದರೆ ಮೇಲು.

4. ನ ಸಮ್ಭವತಿ–ಎಂದು ವಾ॥ ಪಾಠದಲ್ಲಿ ಹೆಚ್ಚಾಗಿದೆ.

ಪಟಾದಿಭಿರ್ವಿಶೇಷ್ಯತೇ ಭಿನ್ನ ಇವ[1] 'ಘಟಭಾವಃ' 'ಪಟಭಾವಃ' ಇತಿ । ಏವಂ ನಿರ್ವಿಶೇಷೋಽಪಿ ಅಭಾವಃ[2] ಕ್ರಿಯಾಗುಣಯೋಗಾತ್ ದ್ರವ್ಯಾದಿವತ್ ವಿಕಲ್ಪ್ಯತೇ । ನ ಹಿ ಅಭಾವ ಉತ್ಪಲಾದಿವತ್ ವಿಶೇಷಣಸಹಭಾವೀ । ವಿಶೇಷಣವತ್ತ್ವೇ ಭಾವ ಏವ ಸ್ಯಾತ್ ॥

(ಭಾಷ್ಯಾರ್ಥ)

(ಪೂರ್ವಪಕ್ಷಿ): ಜ್ಞಾನದಿಂದೊಡಗೂಡಿದ ಕರ್ಮಗಳಿಗೆ ನಿತ್ಯವಾದದ್ದನ್ನು ಉಂಟುಮಾಡುವ ಸಾಮರ್ಥ್ಯವಿದೆ.

(ಸಿದ್ಧಾಂತಿ): ಹಾಗಲ್ಲ. ಏಕೆಂದರೆ (ಅದು) ವಿರುದ್ಧವಾದದ್ದು. ನಿತ್ಯವೂ ಆಗಿದೆ, ಉಂಟಾಗುವದೂ ಆಗಿದೆ–ಎಂಬುದು ವಿರುದ್ಧವು.

(ಪೂರ್ವಪಕ್ಷಿ):—ಯಾವದು ವಿನಾಶವಾಗುವದೋ ಅದೇ ಹುಟ್ಟಲಾರದು.[3] ಆದ್ದರಿಂದ ಮೋಕ್ಷವು ನಿತ್ಯವಾದರೂ ಪ್ರಧ್ವಂಸಾಭಾವದಂತೆ[4] (ಹೊಸದಾಗಿ) ಉಂಟಾಗಲೇಬಹುದಲ್ಲವೆ ?

(ಸಿದ್ಧಾಂತಿ): ಹಾಗಲ್ಲ. ಏಕೆಂದರೆ ಮೋಕ್ಷವು ಭಾವರೂಪವಾಗಿರುತ್ತದೆ.[5] ಪ್ರಧ್ವಂಸಾಭಾವವುಕೂಡ ಹುಟ್ಟುತ್ತದೆ ಎನ್ನುವದು ಬರಿಯ ವಿಕಲ್ಪವೇ[6]; ಏಕೆಂದರೆ ಅಭಾವಕ್ಕೆ ಯಾವ ವಿಶೇಷಗಳೂ ಇರುವದಿಲ್ಲ. ಅದು ಹೇಗೆಂದರೆ ಅಭಾವವು ಭಾವಕ್ಕೆ ಪ್ರತಿದ್ವಂದ್ವಿ[7]ಯು, ಭಾವವೆಂಬುದು ಒಂದೇ ಆದರೂ ಆ ಒಂದನ್ನೇ 'ಗಡಿಗೆಯ ಇರವು' 'ಬಟ್ಟೆಯ ಇರವು' ಎಂದು ಘಟಪಟಾದಿಗಳಿಂಡ ಹೇಗೆ ವಿಂಗಡಿಸುತ್ತಾರೋ ಹಾಗೆಯೇ ಯಾವ ವಿಶೇಷವೂ ಇಲ್ಲದ ಅಭಾವವನ್ನು ಕ್ರಿಯೆ,

---

1. 2. ಈ ಸಂ|| ಎರಡೇ ಪಾ.

3. ಉಂಟಾಗುವದು ನಿತ್ಯವಲ್ಲ ಎಂಬುದು ಸರಿಯಾದ ನಿಯಮವಲ್ಲ; ವಿನಾಶವಾಗುವದು ನಿತ್ಯ ಎಂಬ ನಿಯಮವು ಸರಿಯಾದದ್ದು–ಎಂದು ಪೂರ್ವಪಕ್ಷಿಯ ಭಾವ.

4. ಪ್ರಾಗಭಾವ (ಕಾರ್ಯವು ಮೊದಲು ಇಲ್ಲದಿರುವಿಕೆ), ಪ್ರಧ್ವಂಸಾಭಾವ (ನಾಶವಾದಬಳಿಕ ಇಲ್ಲದಿರುವಿಕೆ). ಅನ್ಯೋನ್ಯಾಭಾವ (ಒಂದು ಇನ್ನೊಂದಲ್ಲದಿರುವಿಕೆ), ಅತ್ಯಂತಾಭಾವ (ತೀರ ಇಲ್ಲದಿರುವಿಕೆ)–ಎಂದು ನಾಲ್ಕು ಬಗೆಯ ಅಭಾವಗಳಿರುವವೆಂದೂ ಪ್ರಧ್ವಂಸಾಭಾವವು ನಿತ್ಯವೆಂದೂ ಮೀಮಾಂಸಕರೆನ್ನುವರು.

5. ಆತ್ಮನಲ್ಲಿ ನಿಲ್ಲುವದೆಂಬ ಮೋಕ್ಷವು ಪ್ರಧ್ವಂಸಾಭಾವದಂತೆ ಅಭಾವವಲ್ಲ.

6. ಬರಿಯಮಾತೇ, ನಿಜವಾಗಿ ಅಂಥ ಪದಾರ್ಥವೇ ಇಲ್ಲ.

7. ಪ್ರತಿದ್ವಂದ್ವಿ.

ಗುಣ–ಇವುಗಳ ಸಂಬಂಧದಿಂದ ದ್ರವ್ಯಾದಿಗಳಂತೆ (ಜನರು) ವಿಕಲ್ಪಿಸುತ್ತಾರೆ.[1] ಆದರೆ ಅಭಾವವೆಂಬುದು ನೈದಿಲೆಯೇ ಮುಂತಾದವುಗಳಂತೆ ವಿಶೇಷಣಗಳೊಡನೆ ಇರತಕ್ಕದ್ದೇ ಅಲ್ಲ; (ಏಕೆಂದರೆ ಅದಕ್ಕೆ) ವಿಶೇಷಣಗಳಿರುವದಾದರೆ (ಅದೂ) ಭಾವವೇ ಆಗಿಬಿಟ್ಟೀತು.[2]

(ಭಾಷ್ಯ)

೧೦. ವಿದ್ಯಾಕರ್ಮಕರ್ತುರ್ನಿತ್ಯತ್ವಾತ್ [3] ವಿದ್ಯಾಕರ್ಮಸನ್ತಾನಜನಿತ ಮೋಕ್ಷನಿತ್ಯತ್ವಮ್ ಇತಿ ಚೇತ್ । ನ । ಗಙ್ಗಾಸ್ರೋತೋವತ್ಕರ್ತೃತ್ವಸ್ಯ ದುಃಖರೂಪತ್ವಾತ್ । ಕರ್ತೃತ್ವೋಪರಮೇ ಚ ಮೋಕ್ಷವಿಚ್ಛೇದಾತ್ ॥

(ಭಾಷ್ಯಾರ್ಥ)

(ಆಕ್ಷೇಪ) :—ಜ್ಞಾನ ಮತ್ತು ಕರ್ಮ–ಇವುಗಳ ಕರ್ತೃವು ನಿತ್ಯವಾಗಿರುವದರಿಂದ ಜ್ಞಾನಕರ್ಮಗಳ ಪ್ರವಾಹದಿಂದುಂಟಾದ ಮೋಕ್ಷವೂ ನಿತ್ಯವಾಗಿರಬಹುದಲ್ಲ !

(ಪರಿಹಾರ) :—ಹಾಗಲ್ಲ. ಏಕೆಂದರೆ ಗಂಗೆಯ ಪ್ರವಾಹದಂತೆ ಕರ್ತೃತ್ವವಿರುವದು ದುಃಖರೂಪವಾಗಿರುತ್ತದೆ.[4] ಮತ್ತು ಕರ್ತೃತ್ವವು ಹೋದರೆ ಮೋಕ್ಷವೂ ಕಡಿದುಹೋಗುತ್ತದೆ.[5]

## ಉಪನಿಷತ್ಪ್ರಾರಂಭಸಮರ್ಥನದ ಉಪಸಂಹಾರ

(ಭಾಷ್ಯ)

೧೧. ತಸ್ಮಾತ್ (ಅವಿದ್ಯಾಕಾಮ)ಕರ್ಮೋಪಾದಾನಹೇತುನಿವೃತ್ತೌ ಸ್ವಾತ್ಮನ್ಯವಸ್ಥಾನಂ ಮೋಕ್ಷ ಇತಿ । ಸ್ವಯಂ ಚ ಆತ್ಮಾ ಬ್ರಹ್ಮ । ತದ್ವಿಜ್ಞಾನಾತ್ ಅವಿದ್ಯಾನಿವೃತ್ತಿಃ ಮೋಕ್ಷಃ ಇತಿ ಬ್ರಹ್ಮವಿದ್ಯಾರ್ಥಾ ಉಪನಿಷತ್ ಆರಭ್ಯತೇ ॥

---

1. ಕ್ರಿಯೆಯ ಅಭಾವ, ಗುಣದ ಅಭಾವ_ಎಂದು ಮುಂತಾಗಿ ವಿಕಲ್ಪಿಸುತ್ತಾರೆ. ಇದು ಸರಿಯಲ್ಲ, ಏಕೆಂದರೆ ಅಭಾವದಲ್ಲಿ ವಿಶೇಷಗಳಿಲ್ಲ. ಗೀ.ಭಾ. ೧೮-೪೮, ಸೂ.ಭಾ. ೨-೨-೨೬.

2. ವಿಶೇಷಣಗಳೊಡನಿರುವ ಯೋಗ್ಯತೆಯು ಭಾವಕ್ಕೆ ಮಾತ್ರವೇ ಸೇರಿದ್ದು ಎಂದು ಅಭಿಪ್ರಾಯ.

3. ಇದು ವಾ॥ ಪಾಠ.

4. ಆದ್ದರಿಂದಲೇ ಕರ್ಮವನ್ನು ಮಾಡುತ್ತಲೇ ಇರಬೇಕೆಂದು ಯಾರೂ ಬಯಸುವದಿಲ್ಲ. ಸೂ.ಭಾ. ೨-೩-೪೦.

5. ಆಗ ಮೋಕ್ಷವು ನಿತ್ಯವಲ್ಲದೆ ಹೋಗುತ್ತದೆ.

(ಭಾಷ್ಯಾರ್ಥ)

ಆದ್ದರಿಂದ (ಅವಿದ್ಯೆ, ಕಾಮ) ಕರ್ಮ-ಎಂಬ (ದೇಹ) ಸ್ವೀಕಾರದ ಕಾರಣವು [1] ನಿವೃತ್ತಿಯಾಗಲಾಗಿ ತನ್ನ ಆತ್ಮನಲ್ಲಿಯೇ ನಿಲ್ಲುವುದು ಮೋಕ್ಷವು; ಆತ್ಮನು ತಾನೇ ಬ್ರಹ್ಮವು, ಆ (ಬ್ರಹ್ಮವನ್ನು) ಅರಿತುಕೊಳ್ಳುವದರಿಂದ ಅವಿದ್ಯೆಯು ತೊಲಗುವದೆಂಬ ಮೋಕ್ಷವುಂಟಾಗುತ್ತದೆ.[2] ಆದ್ದರಿಂದ ಬ್ರಹ್ಮವಿದ್ಯೆಯನ್ನು (ತಿಳಿಸುವದ)ಕ್ಕೋಸ್ಕರ ಉಪನಿಷತ್ತನ್ನು ಪ್ರಾರಂಭಿಸಿದೆ,

## ಉಪನಿಷತ್ತೆಂದರೆ ಏನು ?

(ಭಾಷ್ಯ)

೧೨. 'ಉಪನಿಷತ್' ಇತಿ ವಿದ್ಯಾ ಉಚ್ಯತೇ । ತಚ್ಛೀಲಿನಾಂ ಗರ್ಭಜನ್ಮಜರಾದಿನಿಶಾತನಾತ್ ತದವಸಾದನಾದ್ವಾ, ಬ್ರಹ್ಮಣೋ ವಾ ಉಪನಿಗಮಯಿತೃತ್ವಾತ್ । ಉಪನಿಷಣ್ಣಂ ವಾ ಅಸ್ಯಾಂ ಪರಂ ಶ್ರೇಯಃ ಇತಿ । ತದರ್ಥತ್ವಾತ್ ಗ್ರನ್ಥೋಽಪಿ ಉಪನಿಷತ್ ॥

(ಭಾಷ್ಯಾರ್ಥ)

"ಉಪನಿಷತ್" ಎಂಬ ಮಾತು ವಿದ್ಯೆಯನ್ನು[3] ಹೇಳುತ್ತದೆ. ಆ (ವಿದ್ಯೆಯನ್ನು) ಅಭ್ಯಾಸಮಾಡುವವರಿಗೆ ಗರ್ಭದಲ್ಲಿ (ಸೇರುವದು), ಹುಟ್ಟುವದು, ಮುಪ್ಪು-ಮುಂತಾದ ದೋಷಗಳನ್ನು ಕತ್ತರಿಹಾಕುವದರಿಂದ ಅಥವಾ ಕುಗ್ಗಿಸುವದರಿಂದ

---

1. ಇಲ್ಲಿ "ಅವಿದ್ಯಾಕಾಮ" ಎಂಬ ಮಾತುಗಳು ಬರೆಯುವವರ ತಪ್ಪಿನಿಂದ ಹೆಚ್ಚು ಬಿದ್ದಿರಬಹುದೆಂದು ಊಹಿಸುವದಕ್ಕೆ ಅವಕಾಶವಿದೆ. "ಕರ್ಮೋಪಾದಾನಹೇತುನಿವೃತ್ತೌ" ಎಂದು ಇಷ್ಟೇ ಇದ್ದರೆ ಪ್ರತಿಜ್ಞಾಭಾಷ್ಯ (ಭಾ. ಭಾ. ೧)ಕ್ಕೆ ಅನುಗುಣವಾಗುತ್ತದೆ. "ಕರ್ಮವನ್ನು ಸ್ವೀಕರಿಸುವದಕ್ಕೆ ಕಾರಣವಾಗಿರುವ (ಅವಿದ್ಯಾಕಾಮಗಳು) ತೊಲಗಲಾಗಿ" ಎಂದು ಸರಳವಾಗಿ ಅರ್ಥವನ್ನು ಮಾಡಿಕೊಳ್ಳಬಹುದಾಗಿರುತ್ತದೆ.

2. ಅವಿದ್ಯೆಯು ತೊಲಗಿದರೆ ಕಾಮವು ತೊಲಗಿ ಕರ್ಮದಿಂದ ಬಿಡುಗಡೆಯು ಅವಶ್ಯವಾಗಿ ಆಗುತ್ತದೆ. "ಸ್ವಾತ್ಮನ್ಯವಸ್ಥಾನಮ್" ಎಂಬ ಮೋಕ್ಷವಿವರಕ್ಕೆ ಕೇನ ಭಾ. ೨-೪ (ಭಾ. ಭಾ. ೫೮), ಕ. ಭಾ. ೨-೧-೨ (ಭಾ. ಭಾ. ೧೧೨) ನೋಡಿ.

3. ಆತ್ಮತತ್ತ್ವಜ್ಞಾನವನ್ನು.

ಬ್ರಹ್ಮದ ಬಳಿಗೆ ಕೊಂಡೊಯ್ಯುವದರಿಂದ, ಅಥವಾ ಇದರಲ್ಲಿ ಪರಮಶ್ರೇಯಸ್ಸೇ ಆಶ್ರಯಿಸಿಕೊಂಡಿರುವದರಿಂದ (ಈ ವಿದ್ಯೆಗೆ) **'ಉಪನಿಷತ್ತು'** ಎಂಬ ಹೆಸರು (ಬಂದಿರುತ್ತದೆ). ಆ (ವಿದ್ಯೆಯೆಂಬ) ಪ್ರಯೋಜನವನ್ನುಂಟುಮಾಡುವದರಿಂದ ಗ್ರಂಥವೂ ಉಪನಿಷತ್ತು (ಎನಿಸುತ್ತದೆ.) [1]

---

1. ತತ್ತ್ವಚಿಂತಕರಿಗೆ ಗರ್ಭಾದಿಗಳು ಅವಿದ್ಯಾಕಲ್ಪಿತವೇ ಹೊರತು ಪರಮಾರ್ಥವಲ್ಲ ಎಂಬ ದೃಢನಿಶ್ಚಯವಾಗಿರುತ್ತದೆ, ಬ್ರಹ್ಮವು ನಿತ್ಯಪ್ರಾಪ್ತವೆಂಬ ನಿಶ್ಚಯವೂ ಆಗಿರುತ್ತದೆ, ಆದ್ದರಿಂದ ತತ್ತ್ವಜ್ಞಾನಕ್ಕೆ ಉಪನಿಷತ್ ಎಂಬ ಹೆಸರು ಬಂದಿದೆ ಎಂದರ್ಥ. ಕಠ, ಮುಂಡಕ, ಬೃಹದಾರಣ್ಯಕ-ಇವುಗಳ ಭಾಷ್ಯಗಳಲ್ಲಿ ಉಪನಿಷತ್ ಎಂಬ ಶಬ್ದಕ್ಕೆ ಕೊಟ್ಟಿರುವ ನಿರ್ವಚನವನ್ನು ನೋಡಿರಿ.

# ಶೀಕ್ಷಾವಲ್ಲಿ

## ೧. ಶಾಂತಿಪಾಠ

|| ಓಂ ||

**ಶಂ ನೋ ಮಿತ್ರಃ ಶಂ ವರುಣಃ । ಶಂ ನೋ ಭವತ್ವರ್ಯಮಾ । ಶಂ ನ ಇನ್ದ್ರೋ ಬೃಹಸ್ಪತಿಃ । ಶಂ ನೋ ವಿಷ್ಣುರುರುಕ್ರಮಃ । ನಮೋ ಬ್ರಹ್ಮಣೇ । ನಮಸ್ತೇ ವಾಯೋ । ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ । ತ್ವಮೇವ ಪ್ರತ್ಯಕ್ಷಂ ಬ್ರಹ್ಮ ವದಿಷ್ಯಾಮಿ । ಋತಂ ವದಿಷ್ಯಾಮಿ । ಸತ್ಯಂ ವದಿಷ್ಯಾಮಿ । ತನ್ಮಾಮವತು । ತದ್ವಕ್ತಾರ ಮವತು । ಅವತು ಮಾಮ್ । ಅವತು ವಕ್ತಾರಮ್ || ೧ ||**

**ಓಂ ಶಾನ್ತಿಃ ಶಾನ್ತಿಃ ಶಾನ್ತಿಃ ||**

೧. ನಮಗೆ ಮಿತ್ರನು ಸುಖವನ್ನುಂಟು(ಮಾಡಲಿ)! ವರುಣನು ಸುಖವನ್ನುಂ(ಟುಮಾಡಲಿ)! ಅರ್ಯಮನು ಸುಖ (ಕಾರಕ)ನಾಗಲಿ! ಇಂದ್ರನೂ ಬೃಹಸ್ಪತಿಯೂ ಸುಖವ(ನ್ನುಂಟುಮಾಡಲಿ)! ಉರುಕ್ರಮನಾದ ವಿಷ್ಣುವು ನಮಗೆ ಸುಖವನ್ನು(ಂಟುಮಾಡಲಿ)! ಬ್ರಹ್ಮಕ್ಕೆ ನಮಸ್ಕಾರ! ವಾಯುವೆ, ನಿನಗೆ ನಮಸ್ಕಾರ! ನೀನೇ ಪ್ರತ್ಯಕ್ಷಬ್ರಹ್ಮವಾಗಿರುತ್ತೀಯೆ. ನೀನೇ ಪ್ರತ್ಯಕ್ಷಬ್ರಹ್ಮವೆನ್ನುವೆನು, ಋತವೆನ್ನುವೆನು, ಸತ್ಯವೆನ್ನುವೆನು. ಅದು ನನ್ನನ್ನು ಕಾಪಾಡಲಿ, ಅದು ಹೇಳುವಾತನನ್ನು ಕಾಪಾಡಲಿ! ನನ್ನನ್ನು ಕಾಪಾಡಲಿ, ಹೇಳುವಾತನನ್ನು ಕಾಪಾಡಲಿ!

ಓಂ ಶಾಂತಿ, ಶಾಂತಿ, ಶಾಂತಿ!

(ಭಾಷ್ಯ)

೧ಃ. ಶಂ ಸುಖಂ ಪ್ರಾಣವೃತ್ತೇಃ ಅಹ್ನಶ್ಚ ಅಭಿಮಾನೀ ದೇವತಾತ್ಮಾ ಮಿತ್ರಃ ನಃ ಅಸ್ಮಾಕಂ ಭವತು । ತಥೈವ ಅಪಾನವೃತ್ತೇಃ ರಾತ್ರೇಶ್ಚ ಅಭಿಮಾನೀ ದೇವತಾತ್ಮಾ ವರುಣಃ । ಚಕ್ಷುಷಿ ಆದಿತ್ಯೇ ಚ ಅಭಿಮಾನೀ ಅರ್ಯಮಾ । ಬಲೇ ಇನ್ದ್ರಃ । ವಾಚಿ ಬುದ್ಧೌ ಚ ಬೃಹಸ್ಪತಿಃ । ವಿಷ್ಣುಃ ಉರುಕ್ರಮಃ ವಿಸ್ತೀರ್ಣ ಕ್ರಮಃ ಪಾದಯೋರಭಿಮಾನೀ । ಏವಮ್ ಅಧ್ಯಾತ್ಮದೇವತಾಃ । ಶಂ ನಃ ।

"ಭವತು" ಇತಿ ಸರ್ವತ್ರಾನುಷಙ್ಗಃ। ತಾಸು ಹಿ ಸುಖಕೃತ್ಸು ವಿದ್ಯಾಶ್ರವಣ ಧಾರಣೋಪಯೋಗಾಃ ಅಪ್ರತಿಬನ್ಧೇನ ಭವಿಷ್ಯನ್ತಿ ಇತಿ ತತ್ಸುಖಕೃತ್ತ್ವಂ[1] ಪ್ರಾರ್ಥ್ಯತೇ "ಶಂ ನೋ ಭವತು" ಇತಿ ॥

(ಭಾಷ್ಯಾರ್ಥ)

ಪ್ರಾಣವೃತ್ತಿಗೂ ಹಗಲಿಗೂ ಅಭಿಮಾನಿಯಾದ ದೇವತಾಸ್ವರೂಪನಾಗಿರುವ **ಮಿತ್ರನು**[2] ನಮಗೆ ಸುಖವನ್ನು(ಂಟುಮಾಡುವ)ನಾಗಲಿ! ಹಾಗೆಯೇ ಅಪಾನ ವೃತ್ತಿಗೂ ರಾತ್ರಿಗೂ ಅಭಿಮಾನಿಯಾದ ದೇವತಾತ್ಮನಾದ **ವರುಣನು**; ಕಣ್ಣಿಗೂ ಸೂರ್ಯನಿಗೂ ಅಭಿಮಾನಿಯಾದ **ಅರ್ಯಮನು**; ಬಲಕ್ಕೆ ಅಭಿಮಾನಿಯಾದ **ಇಂದ್ರನು**; ವಾಕ್ಕಿಗೂ ಬುದ್ಧಿಗೂ (ಅಭಿಮಾನಿಯಾದ) **ಬೃಹಸ್ಪತಿಯು**; ಉರು ಕ್ರಮನಾದ ಎಂದರೆ ವಿಸ್ತೀರ್ಣವಾಗಿ ಹೆಜ್ಜೆಯಿಡುವ ಪಾದಗಳಿಗಭಿಮಾನಿಯಾದ **ವಿಷ್ಣು**—ಈ ರೀತಿಯಲ್ಲಿರುವ **ಅಧ್ಯಾತ್ಮದೇವತೆಗಳು**.[3] ನಮಗೆ ಸುಖವನ್ನು "ಉಂಟುಮಾಡಲಿ" ಎಂದು (ಹಿಂದೆ ಹೇಳಿರುವ ಮಾತನ್ನು) ಎಲ್ಲಾ ಕಡೆಯಲ್ಲಿಯೂ ಸೇರಿಸಿಕೊಳ್ಳಬೇಕು. ಅವರು ಸುಖವನ್ನುಂಟುಮಾಡಿದರೇ ವಿದ್ಯೆಯನ್ನು[4] ಶ್ರವಣ ಮಾಡುವದು, ಧಾರಣೆಮಾಡುವದು. (ಮತ್ತೊಬ್ಬರಿಗಾಗಿ) ಉಪಯೋಗಿಸುವದು— (ಇವು) ಅಡ್ಡಿಯಿಲ್ಲದೆ ಆಗುವವು[5] ಎಂಬ ಕಾರಣದಿಂದ ಅವರು ಸುಖಕಾರಕರಾಗಿರ ಲೆಂದು ಪ್ರಾರ್ಥಿಸಲಾಗಿದೆ.

---

1. ಸುಖಕರ್ತೃತ್ವಮ್ ಎಂಬ ಅ॥ ಪಾಠಕ್ಕೂ ಇದೇ ಅರ್ಥ.

2. ದೇವತೆಗಳಲ್ಲಿ ಹಿರಣ್ಯಗರ್ಭನೆಂಬ ಹೆಸರಿನ ಬ್ರಹ್ಮಸ್ವರೂಪದಲ್ಲಿ ಅಡಕವಾಗಿರು ತ್ತಾನೆ. ಹಗಲು ಮುಂತಾದವುಗಳಿಗೆ ಅಧಿದೇವತೆಗಳಾಗಿರುವವರೇ ಅಧ್ಯಾತ್ಮದೇವತೆಗಳು ಎಂಬುದನ್ನು ತಿಳಿಸುವದಕ್ಕಾಗಿ ಹೊರಗಿನ ಹಗಲು ಮುಂತಾದವುಗಳನ್ನೂ ಉದಾಹರಿಸಿರು ತ್ತಾರೆ.

3. ಅಧಿದೈವತಕ್ಕೂ ಇವರೇ ಅಭಿಮಾನಿಗಳಾದರೂ ಮುಖ್ಯವಾಗಿ ಇವರನ್ನು ಅಧ್ಯಾತ್ಮ ದೇವತೆಗಳಾಗಿಯೇ ಪ್ರಾರ್ಥನೆಮಾಡಿರುತ್ತದೆ.

4. ಇಲ್ಲಿ ಹೇಳುವ ಅಪರಬ್ರಹ್ಮವಿದ್ಯೆಯನ್ನು, ಉಪಾಸನೆಯನ್ನು.

5. ಉಪಾಸನಾವಿಷಯವನ್ನು ಶಾಸ್ತ್ರಾಚಾರ್ಯರುಗಳಿಂದ ಕೇಳಿ ತಿಳಿದುಕೊಂಡು ಅದನ್ನು ತನ್ನಲ್ಲಿಟ್ಟುಕೊಂಡು ಶಿಷ್ಯರಿಗೆ ತಿಳಿಸಿಕೊಡುವ ಸಾಮರ್ಥ್ಯವು ಬರುವದಕ್ಕೆ ಶರೀರವೂ ಇಂದ್ರಿಯಗಳೂ ಪಟುವಾಗಿರಬೇಕು. ಇವಕ್ಕೆ ಅಧ್ಯಾತ್ಮಾಭಿಮಾನಿದೇವತೆಗಳ ಅನುಗ್ರಹವು ಬೇಕಾಗುತ್ತದೆ.

(ಭಾಷ್ಯ)

೧೪. ಬ್ರಹ್ಮವಿದ್ಯಾವಿವಿದಿಷುಣಾ ನಮಸ್ಕಾರಬ್ರಹ್ಮವದನಕ್ರಿಯೇ[1] ವಾಯುವಿಷಯೇ ಬ್ರಹ್ಮವಿದ್ಯೋಪಸರ್ಗಶಾನ್ತ್ಯರ್ಥಂ ಕ್ರಿಯೇತೇ। ಸರ್ವಕ್ರಿಯಾಫಲಾನಾಂ ತದಧೀನತ್ವಾತ್। ಬ್ರಹ್ಮ ವಾಯುಃ। ತಸ್ಮೈ ಬ್ರಹ್ಮಣೇ ನಮಃ ಪ್ರಹ್ವೀಭಾವಂ 'ಕರೋಮಿ' ಇತಿ ವಾಕ್ಯಶೇಷಃ। ನಮಃ ತೇ ತುಭ್ಯಂ ಹೇ ವಾಯೋ ನಮಸ್ಕರೋಮಿ ಇತಿ ಪರೋಕ್ಷಪ್ರತ್ಯಕ್ಷಾಭ್ಯಾಂ ವಾಯುರೇವಾಭಿಧೀಯತೇ। ಕಿಂ ಚ ತ್ವಮೇವ ಚಕ್ಷುರಾದ್ಯಪೇಕ್ಷ್ಯ ಬಾಹ್ಯಂ ಸನ್ನಿಕೃಷ್ಟಮ್ ಅವ್ಯವಹಿತಂ ಪ್ರತ್ಯಕ್ಷಂ ಬ್ರಹ್ಮ ಅಸಿ ಯಸ್ಮಾತ್ ತಸ್ಮಾತ್ ತ್ವಾಮೇವ ಪ್ರತ್ಯಕ್ಷಂ ಬ್ರಹ್ಮ ವದಿಷ್ಯಾಮಿ ಋತಂ ಯಥಾಶಾಸ್ತ್ರಂ ಯಥಾಕರ್ತವ್ಯಂ ಬುದ್ಧೌ ಸುಪರಿನಿಶ್ಚಿತಮ್ ಅರ್ಥಂ[2] ತ್ವದಧೀನತ್ವಾತ್ ತ್ವಾಮೇವ ವದಿಷ್ಯಾಮಿ। "ಸತ್ಯಮ್" ಇತಿ ವಾಕ್ಕಾಯಾಭ್ಯಾಂ ಸಂಪಾದ್ಯಮಾನಃ। ಸೋಽಪಿ ತ್ವದಧೀನ ಏವ ಸಂಪಾದ್ಯಃ ಇತಿ ತ್ವಾಮೇವ ಸತ್ಯಂ ವದಿಷ್ಯಾಮಿ। ತತ್ ಸರ್ವಾತ್ಮಕಂ ವಾಯ್ವಾಖ್ಯಂ ಬ್ರಹ್ಮ ಮಯಾ ಏವಂ ಸ್ತುತಂ ಸತ್ ವಿದ್ಯಾರ್ಥಿನಂ ಮಾಮ್ ಅವತು ವಿದ್ಯಾಸಂಯೋಜನೇನ। ತದೇವ ಬ್ರಹ್ಮ ವಕ್ತಾರಮ್ ಆಚಾರ್ಯಂ ವಕ್ತೃತ್ವಸಾಮರ್ಥ್ಯಸಂಯೋಜನೇನ ಅವತು। "ಅವತು ಮಾಮ್ ಅವತು ವಕ್ತಾರಮ್" ಇತಿ ಪುನರ್ವಚನಮ್ ಆದರಾರ್ಥಮ್। "ಓಂ ಶಾನ್ತಿಃ ಶಾನ್ತಿಃ ಶಾನ್ತಿಃ" ಇತಿ ತ್ರಿರ್ವಚನಮ್ ಆಧ್ಯಾತ್ಮಿಕಾಧಿಭೌತಿಕಾಧಿದೈವಿಕಾನಾಂ ವಿದ್ಯಾಪ್ರಾಪ್ತ್ಯುಪಸರ್ಗಾಣಾಂ ಪ್ರಶಮಾರ್ಥಮ್॥

(ಭಾಷ್ಯಾರ್ಥ)

ಬ್ರಹ್ಮವಿದ್ಯೆಯನ್ನು[3] ಅರಿತುಕೊಳ್ಳಬೇಕೆಂಬವನಿಂದ ಬ್ರಹ್ಮವಿದ್ಯೆಗೆ ಇರುವ ಅಡ್ಡಿಗಳು ಶಾಂತಿಯಾಗುವದಕ್ಕಾಗಿ ವಾಯುವಿಷಯಕವಾದ[4] ನಮಸ್ಕಾರ, ಬ್ರಹ್ಮವದನ ಎಂಬ ಕ್ರಿಯೆಗಳು (ಇಲ್ಲಿ) ಮಾಡಲ್ಪಟ್ಟಿರುತ್ತವೆ. ಎಲ್ಲಾ ಕರ್ಮಗಳ ಫಲಗಳೂ ಆತನ ಅಧೀನವಾಗಿರುವದರಿಂದ[5] (ಹೀಗೆ ನಮಸ್ಕರಿಸಿದೆ). ಬ್ರಹ್ಮವೆಂದರೆ ವಾಯು. ಆ ಬ್ರಹ್ಮಕ್ಕೆ ನಮಸ್ಕಾರ! ನಮಸ್ಕಾರವನ್ನು 'ಮಾಡುತ್ತೇನೆ' ಎಂದು

---

1. ವನ್ದನಕ್ರಿಯೇ ಎಂಬ ಆ॥ ಪಾಠಕ್ಕಿಂತ ಈ ವಾ॥ಕಾ॥ ಪಾಠವು ಉತ್ತಮ.

2. "ತದಪಿ" ಎಂದು ಆ॥ ಪಾಠದಲ್ಲಿ ಹೆಚ್ಚಾಗಿದೆ.

3. ಇಲ್ಲಿ ಪ್ರಕೃತವಾಗಿರುವದು ಬ್ರಹ್ಮವಿದ್ಯೆ. ಆದ್ದರಿಂದ "ಬ್ರಹ್ಮವಿದ್ಯಾ ವಿವಿದಿಷುಣಾ" ಎಂಬ (ವಾ॥) ಪಾಠವೇ ಮೇಲು.

4. ಕ್ರಿಯಾಶಕ್ತಿಪ್ರಧಾನನಾದ ಸೂತ್ರಾತ್ಮನನ್ನು ಇಲ್ಲಿ ವಾಯುವೆಂದು ಕರೆದಿದೆ. ಬೃ. ಭಾ. ೩-೭-೨ ನೋಡಿ. ವಾಯುವು ನಮ್ಮ ಶರೀರದಲ್ಲಿ ಪ್ರಾಣವಾಗಿರುತ್ತಾನೆ.

5. ಕರ್ಮಗಳು ಸರಿಯಾಗಿ ನಡೆದು ಫಲವನ್ನು ಕೊಡಬೇಕಾದರೆ ಸೂತ್ರಾತ್ಮನ ಅನುಗ್ರಹವು ಬೇಕು.

ವಾಕ್ಯಶೇಷವು. ಎಲೈ ವಾಯುವೆ, ನಿನಗೆ ನಮಸ್ಕಾರ, ನಮಸ್ಕಾರವನ್ನು ಮಾಡುತ್ತೇನೆ ಎಂದು ಪರೋಕ್ಷ ಪ್ರತ್ಯಕ್ಷವಾದ(ವಚನ)ಗಳಿಂದ[1] ವಾಯುವನ್ನೇ ಹೇಳಿರುತ್ತದೆ. ಮತ್ತು ಹೊರಗಿನ ಚಕ್ಷುರಾದೀಂದ್ರಿಯಗಳಿಗೆ ಹೋಲಿಸಿದರೆ[2] ನೀನೇ ಹತ್ತಿರವಿರುವ ನಡುವೆ ಏನೂ ಇಲ್ಲದ ಬ್ರಹ್ಮವಾಗಿರುತ್ತೀಯೆ! ಹೀಗಿರುವದರಿಂದ ನಿನ್ನನ್ನೇ[3] ಪ್ರತ್ಯಕ್ಷವಾದ ಬ್ರಹ್ಮವೆಂದು ಕರೆಯುವೆನು. **ಋತ**ವನ್ನು ಎಂದರೆ ಶಾಸ್ತ್ರದಲ್ಲಿ ಹೇಳಿರುವಂತೆ ಮಾಡಬೇಕೆಂದು ಬುದ್ಧಿಯಲ್ಲಿ ಚೆನ್ನಾಗಿ ನಿಶ್ಚಯವಾಗಿರುವ ಅರ್ಥವನ್ನು (ಅದು) ನಿನ್ನ ಅಧೀನವಾಗಿರುವದರಿಂದ ನೀನೆಂದೇ ಹೇಳುವೆನು. **ಸತ್ಯ**ವೆಂಬುದು ಮಾತಿನಿಂದಲೂ ಶರೀರದಿಂದಲೂ ಮಾಡತಕ್ಕದ್ದು[4] ಅದೂ ನಿನ್ನ ಅಧೀನವಾಗಿಯೇ ಮಾಡಿಕೊಳ್ಳಬೇಕಾಗಿರುವದರಿಂದ[5] ನಿನ್ನನ್ನೇ ಸತ್ಯವೆಂದು ಕರೆಯುವೆನು. ಆ ಸರ್ವಾತ್ಮನಾದ[6] ವಾಯುವೆಂಬ ಬ್ರಹ್ಮವು ಹೀಗೆ ನನ್ನಿಂದ ಸ್ತುತವಾಗಿರುವದಾಗಿ ವಿದ್ಯಾರ್ಥಿಯಾದ ನನ್ನನ್ನು ವಿದ್ಯೆಯನ್ನು ಕೊಟ್ಟು ಕಾಪಾಡಲಿ! ಅದೇ ಬ್ರಹ್ಮವು ಹೇಳುವಾತನನ್ನು ಎಂದರೆ ಆಚಾರ್ಯನನ್ನು ಹೇಳಿಕೊಡುವ ಸಾಮರ್ಥ್ಯವನ್ನು ಕೊಡುವಮೂಲಕ ಕಾಪಾಡಲಿ! "ನನ್ನನ್ನು ಕಾಪಾಡಲಿ, ಹೇಳುವಾತನನ್ನು ಕಾಪಾಡಲಿ!" ಎಂದು ಮತ್ತೆ ಹೇಳಿರುವದು ಆದರ(ವನ್ನು ತೋರಿಸು)ವದಕ್ಕೆ "ಓಂ ಶಾನ್ತಿಃ ಶಾನ್ತಿಃ ಶಾನ್ತಿಃ" ಎಂದು ಮೂರು ಸಲ (ಶಾಂತಿಶಬ್ದವನ್ನು) ಹೇಳಿರುವದು ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ, ಎಂಬ (ಮೂರು ಬಗೆಯ) ಅಡ್ಡಿಗಳು[7] ನಾಶವಾಗಲೆಂದು.

---

1. 'ಬ್ರಹ್ಮಕ್ಕೆ ನಮಸ್ಕಾರ' ಎಂಬುದು ಪರೋಕ್ಷವಾಗಿ ಹೇಳಿದ್ದು; 'ವಾಯುವೆ, ನಿನಗೆ ನಮಸ್ಕಾರ' ಎಂಬುದು ಪ್ರತ್ಯಕ್ಷವಾಗಿ ಹೇಳಿದ್ದು.

2. ಇಂದ್ರಿಯಗಳಿಗಿಂತ ಪ್ರಾಣನು ನಮಗೆ ಹತ್ತಿರದ ಆತ್ಮನು. ಪ್ರಾಣದಮೂಲಕ ಇಂದ್ರಿಯಗಳೂ ದೇಹವೂ ನಮ್ಮವೆನಿಸಿವೆ.

3. ಉಪನಿಷತ್ತಿನಲ್ಲಿರುವ 'ತ್ವಮೇವ' ಎಂಬುದನ್ನೇ 'ತ್ವಾಮೇವ' ಎಂದು ಭಾಷ್ಯದಲ್ಲಿ ಅರ್ಥಕ್ಕನುಗುಣವಾಗಿ ಬರೆದುಕೊಂಡಿದೆ.

4. ಮಾತಿನಿಂದ ಸತ್ಯವನ್ನು ಹೇಳುವದು, ಶರೀರದಿಂದ ಧರ್ಮವನ್ನು ಮಾಡುವದು,

5. ಶಾಸ್ತ್ರಾರ್ಥವನ್ನು ನಿಶ್ಚಯಿಸುವ ಕ್ರಿಯೆ, ಅದರಂತೆ ನಡೆನುಡಿಗಳನ್ನು ಇಟ್ಟುಕೊಳ್ಳುವ ಕ್ರಿಯೆ–ಇವೆರಡೂ ವಾಯುವಿನ ಅನುಗ್ರಹದಿಂದ ಆಗಬೇಕು.

6. ಕಾರ್ಯಕರಣಗಳಲ್ಲಿರುವ ಸರ್ವವ್ಯಾಪಾರರೂಪನಾಗಿರುವ.

7. ಶರೀರದ ಒಳಗೆ, ಮತ್ತು ಶರೀರದ ಹೊರಗೆ, ಅಕಸ್ಮಾತ್ತಾಗಿ ಆಗುವ ಅಡ್ಡಿಗಳು. ಪ್ರತಿದಿನವೂ ಸರ್ವದೇವತಾತ್ಮಕನಾದ ಪರಮೇಶ್ವರನನ್ನು ಆರಾಧಿಸುವ ಮುಮುಕ್ಷುವಿಗೆ ಕರಣಗಳ ಪಾಟವ, ಉತ್ತಮವಾದ ಸನ್ನಿವೇಶ, ಅಕಸ್ಮಾತ್ತಾಗಿ ಒದಗಬಹುದಾದ ವಿಘ್ನಗಳ ಪರಿಹಾರ–ಎಲ್ಲವೂ ಆಗುವದು.

(ಭಾಷ್ಯ)

೧೫. ಅರ್ಥಜ್ಞಾನಪ್ರಧಾನತ್ವಾತ್ ಉಪನಿಷದಃ ಗ್ರಂಥಪಾಠೇ ಯತ್ನೋ೽ಪರಮೋ ಮಾ ಭೂತ್ ಇತಿ ಶೀಕ್ಷಾಧ್ಯಾಯ ಆರಭ್ಯತೇ—

(ಭಾಷ್ಯಾರ್ಥ)

ಉಪನಿಷತ್ತಿಗೆ[1] ಅರ್ಥಜ್ಞಾನವೇ ಮುಖ್ಯವಾಗಿರುವದರಿಂದ ಗ್ರಂಥವನ್ನು ಪಾಠಮಾಡುವದರಲ್ಲಿ ಯತ್ನವನ್ನು ಬಿಡುವದಾಗದೆ ಇರಲೆಂದು ಈ ಶೀಕ್ಷಾಧ್ಯಾಯವನ್ನು ಆರಂಭಿಸಿರುತ್ತದೆ :—

# ೨. ಶೀಕ್ಷಾಧ್ಯಾಯ

**ಓಂ ಶೀಕ್ಷಾಂ ವ್ಯಾಖ್ಯಾಸ್ಯಾಮಃ । ವರ್ಣಃ ಸ್ವರಃ । ಮಾತ್ರಾ ಬಲಮ್ । ಸಾಮ ಸನ್ತಾನಃ । ಇತ್ಯುಕ್ತಃ ಶೀಕ್ಷಾಧ್ಯಾಯಃ ॥ ೨ ॥**

೨. ಶೀಕ್ಷೆಯನ್ನು ವ್ಯಾಖ್ಯಾನಮಾಡುವೆವು. ವರ್ಣ, ಸ್ವರ, ಮಾತ್ರೆ, ಬಲ, ಸಾಮ, ಸಂತಾನ-ಹೀಗೆ ಶೀಕ್ಷಾಧ್ಯಾಯವನ್ನು ಹೇಳಿದ್ದಾಯಿತು.

(ಭಾಷ್ಯ)

೧೬. ಶಿಕ್ಷಾ ಶಿಕ್ಷ್ಯತೇ ಅನಯಾ ಇತಿ ವರ್ಣಾದ್ಯುಚ್ಚಾರಣಲಕ್ಷಣಮ್ । ಶಿಕ್ಷ್ಯನ್ತೆ ಇತಿ ವಾ ಶಿಕ್ಷಾಃ ವರ್ಣಾದಯಃ। ಶಿಕ್ಷೈವ ಶೀಕ್ಷಾ । ದೈರ್ಘ್ಯಂ ಛಾನ್ದಸಮ್ । ತಾಂ ಶೀಕ್ಷಾಂ ವ್ಯಾಖ್ಯಾಸ್ಯಾಮಃ ವಿಸ್ಪಷ್ಟಮ್ ಆಸಮನ್ತಾತ್ ಪ್ರಕಥಯಿಷ್ಯಾಮಃ । ಚಕ್ಷಿಙಃ ಖ್ಯಾಞಾದಿಷ್ಟಸ್ಯ ವ್ಯಾಙ್‌ಪೂರ್ವಸ್ಯ ವ್ಯಕ್ತವಾಕ್ಕರ್ಮಣ ಏತದ್ರೂಪಮ್ । ತತ್ರ ವರ್ಣಃ ಅಕಾರಾದಿಃ । ಸ್ವರಃ ಉದಾತ್ತಾದಿಃ । ಮಾತ್ರಾ ಹ್ರಸ್ವಾದ್ಯಾಃ । ಬಲಂ ಪ್ರಯತ್ನವಿಶೇಷಃ । ಸಾಮ ವರ್ಣಾನಾಂ ಮಧ್ಯಮವೃತ್ತ್ಯಾ ಉಚ್ಚಾರಣಮ್ ಸಮತಾ । ಸನ್ತಾನಃ ಸನ್ತತಿಃ । ಸಂಹಿತಾ ಇತ್ಯರ್ಥಃ । ಏಷ ಹಿ ಶಿಕ್ಷಿತವ್ಯೋ೽ರ್ಥಃ । ಶಿಕ್ಷಾ ಯಸ್ಮಿನ್ ಅಧ್ಯಾಯೇ ಸೋ೽ಯಂ ಶೀಕ್ಷಾಧ್ಯಾಯಃ ಇತಿ ಏವಮ್ ಉಕ್ತಃ ಇತ್ಯುಪಸಂಹಾರಃ ಉತ್ತರಾರ್ಥಃ ॥

---

1. ಮಂತ್ರಗಳಿಗೆ ಉಚ್ಚಾರಣೆಯು ಪ್ರಧಾನ ; ಉಪನಿಷತ್ತಿನ ವಾಕ್ಯಗಳಿಗೆ ಹಾಗಲ್ಲ. ಅರ್ಥವನ್ನು ಅರಿಯದೆ ಉಪಾಸನೆಯನ್ನು ಮಾಡುವದಕ್ಕಾಗಲಿ ತತ್ತ್ವವನ್ನು ತಿಳಿದುಕೊಳ್ಳುವದಕ್ಕಾಗಲಿ ಆಗಲಾರದು.

(ಭಾಷ್ಯಾರ್ಥ)

ಯಾವದರಿಂದ ಕಲಿಯುತ್ತೇವೆಯೋ ಅದು ಶಿಕ್ಷೆ, ವರ್ಣಗಳೇ ಮುಂತಾದವುಗಳ ಉಚ್ಚಾರಣೆಯ ಶಾಸ್ತ್ರವು. ಅಥವಾ ಯಾವವು ಕಲಿಸಲ್ಪಡುತ್ತವೆಯೋ ಆ ವರ್ಣಾದಿಗಳೇ ಶಿಕ್ಷೆ(ಯೆನಿಸುವವು).[1] ಶಿಕ್ಷೆಯೇ ಶೀಕ್ಷೆ; (ಇಲ್ಲಿ ಬಂದಿರುವ) ದೀರ್ಘವು ವೇದಭಾಷೆಯದು.[2] ಆ ಶೀಕ್ಷೆಯನ್ನು ವ್ಯಾಖ್ಯಾನಮಾಡುವೆವು, ಎಂದರೆ (ವಿ) ವಿಸ್ಪಷ್ಟವಾಗಿ (ಆ) ಎಲ್ಲಾ ವಿಧದಿಂದಲೂ (ಖ್ಯಾ) ವಿವರಿಸುವೆವು (ಎಂದರ್ಥ). ಅಥವಾ (ಇಲ್ಲಿರುವ ವ್ಯಾಖ್ಯಾಸ್ಯಾಮಃ ಎಂಬ) ಈ (ಶಬ್ದ)ರೂಪವು ವ್ಯಕ್ತವಾಗಿ ಹೇಳು ಎಂಬರ್ಥದ ಚಕ್ಷಿಙ್ ಎಂಬ ಧಾತುವಿಗೆ ಖ್ಯಾಞ್ ಎಂಬ ಆದೇಶವು ಬಂದಿದೆ; ಇದಕ್ಕೆ ವಿ, ಆಙ್ ಎಂಬ ಉಪಸರ್ಗಗಳನ್ನು ಹಿಂದೆ (ಸೇರಿಸಿ ಆದ ರೂಪವಿದು ಎಂದಾದರೂ ಹೇಳಬಹುದು).[3]

ಇವುಗಳಲ್ಲಿ[4] **ವರ್ಣ**ವೆಂದರೆ ಅಕಾರಾದಿಗಳು. **ಸ್ವರ**ವೆಂದರೆ ಉದಾತ್ತವೇ ಮುಂತಾದದ್ದು. **ಮಾತ್ರೆ**ಗಳು ಎಂದರೆ ಹ್ರಸ್ವವೇ ಮುಂತಾದದ್ದು. **ಬಲ** ಎಂದರೆ ಆಯಾ (ಉಚ್ಚಾರಣೆಯ) ಪ್ರಯತ್ನವು. **ಸಾಮ** ಎಂದರೆ ವರ್ಣಗಳನ್ನು ನಡುವಿನ ಧ್ವನಿಯಿಂದ ಉಚ್ಚರಿಸುವದು. ಸಮತೆ, ಸಂತಾನ ಎಂದರೆ ಎಡೆಬಿಡದೆ ಇರುವದು; ಸಂಹಿತೆ ಎಂದರ್ಥ.

ಇಷ್ಟೇ (ಉಚ್ಚಾರಣೆಯ ವಿಷಯದಲ್ಲಿ) ಕಲಿಯಬೇಕಾಗಿರುವ ವಿಷಯವು. ಯಾವ ಅಧ್ಯಾಯದಲ್ಲಿ ಶಿಕ್ಷೆ ಇರುವದೋ ಅದೇ ಶೀಕ್ಷಾಧ್ಯಾಯವು. (ಅದನ್ನು)

---

1. ಶಿಕ್ಷ್—ಕಲಿ ಎಂಬ ಧಾತುವಿನಿಂದ ಕರಣಾರ್ಥದಲ್ಲಿ ಹುಟ್ಟಿರುವ ರೂಪವೆಂದು ಭಾವಿಸಿದರೆ ಶಿಕ್ಷಾ ಎಂಬ ಶಬ್ದಕ್ಕೆ ವರ್ಣಾದಿಗಳನ್ನು ಉಚ್ಚರಿಸುವದನ್ನು ತಿಳಿಸುವ ಶಾಸ್ತ್ರವೆಂದು ಅರ್ಥವಾಗುತ್ತದೆ; ಕರ್ಮಾರ್ಥದಲ್ಲಿ ಹುಟ್ಟಿರುವ ರೂಪವಿದೆಂದು ಭಾವಿಸಿದರೆ ವರ್ಣಾದಿಗಳು ಎಂದರ್ಥವಾಗುತ್ತದೆ.

2. ಶಿಕ್ಷಾ ಎಂಬ ಮಾತಿಗೆ ವೈದಿಕಭಾಷೆಯಲ್ಲಿ ಶೀಕ್ಷಾ ಎಂಬ ರೂಪವೂ ಉಂಟು. ಅರ್ಥಭೇದವೇನೂ ಇಲ್ಲ.

3. ಖ್ಯಾ—ಪ್ರಕಥನೇ ಎಂಬ ಧಾತುವಿನಿಂದಲೇ ಅಲ್ಲದೆ ಚಕ್ಷಿಙ್—ವ್ಯಕ್ತಾಯಾಂ ವಾಚಿ ಎಂಬ ಧಾತುವಿನಿಂದ ಹುಟ್ಟಿದ್ದು ಈ ರೂಪವು ಎಂದಾದರೂ ಹೇಳಬಹುದು ಎಂದರ್ಥ.

4. ವರ್ಣಾದಿಗಳಲ್ಲಿ.

ಇತಿ ಹೀಗೆಂದು ಹೇಳಿದ್ದಾಯಿತು ಎಂದು ಉಪಸಂಹಾರಮಾಡಿರುವದು ಮುಂದಿನ ವಿಷಯವನ್ನು (ಪ್ರಾರಂಭಮಾಡು)ವದಕ್ಕೆ.[1]

## ೩. ಸಂಹಿತೋಪಾಸನೆ

**ಸಹ ನೌ ಯಶಃ । ಸಹ ನೌ ಬ್ರಹ್ಮವರ್ಚಸಮ್ । ಅಥಾತಃ ಸಗ್ಂಹಿತಾಯಾ ಉಪನಿಷದಂ ವ್ಯಾಖ್ಯಾಸ್ಯಾಮಃ । ಪಞ್ಚ ಸ್ವಧಿಕರಣೇಷು । ಅಧಿಲೋಕಮಧಿಜ್ಯೌತಿಷಮಧಿಪ್ರಜಮಧ್ಯಾತ್ಮಮ್ । ತಾ ಮಹಾಸಗ್ಂಹಿತಾ ಇತ್ಯಾಚಕ್ಷತೇ । ಅಥಾಧಿಲೋಕಮ್ । ಪೃಥಿವೀ ಪೂರ್ವರೂಪಮ್ । ದ್ಯೌರುತ್ತರರೂಪಮ್ । ಆಕಾಶಃ ಸನ್ಧಿಃ । ವಾಯುಃ ಸನ್ಧಾನಮ್ । ಇತ್ಯಧಿಲೋಕಮ್ । ಅಥಾಧಿಜ್ಯೌತಿಷಮ್। ಅಗ್ನಿಃ ಪೂರ್ವರೂಪಮ್। ಆದಿತ್ಯ ಉತ್ತರರೂಪಮ್ । ಆಪಃ ಸನ್ಧಿಃ । ವೈದ್ಯುತಃ ಸನ್ಧಾನಮ್। ಇತ್ಯಧಿಜ್ಯೌತಿಷಮ್ । ಅಥಾಧಿವಿದ್ಯಮ್ । ಆಚಾರ್ಯಃ ಪೂರ್ವರೂಪಮ್ । ಅನ್ತೇವಾಸ್ಯುತ್ತರರೂಪಮ್ । ವಿದ್ಯಾ ಸನ್ಧಿಃ। ಪ್ರವಚನಸಗ್ಂ ಸನ್ಧಾನಮ್ । ಇತ್ಯಧಿವಿದ್ಯಮ್ । ಅಥಾಧಿಪ್ರಜಮ್। ಮಾತಾ ಪೂರ್ವರೂಪಮ್ । ಪಿತೋತ್ತರರೂಪಮ್ । ಪ್ರಜಾ ಸನ್ಧಿಃ । ಪ್ರಜನನಗ್ಂ ಸನ್ಧಾನಮ್। ಇತ್ಯಧಿಪ್ರಜಮ್ । ಅಥಾಧ್ಯಾತ್ಮಮ್ । ಅಧರಾ ಹನುಃ ಪೂರ್ವರೂಪಮ್ । ಉತ್ತರಾಹನುರುತ್ತರರೂಪಮ್ । ವಾಕ್ ಸನ್ಧಿಃ । ಜಿಹ್ವಾ ಸನ್ಧಾನಮ್। ಇತ್ಯಧ್ಯಾತ್ಮಮ್ । ಇತೀಮಾ ಮಹಾಸಗ್ಂಹಿತಾಃ । ಯ ಏವಮೇತಾ ಮಹಾಸಗ್ಂಹಿತಾ ವ್ಯಾಖ್ಯಾತಾ ವೇದ । ಸನ್ಧೀಯತೇ ಪ್ರಜಯಾ ಪಶುಭಿಃ । ಬ್ರಹ್ಮವರ್ಚಸೇನಾನ್ನಾದ್ಯೇನ ಸುವರ್ಗೇಣ ಲೋಕೇನ ॥ ೩ ॥**

೩. ನಮ್ಮಿಬ್ಬರಿಗೂ ಜೊತೆಯಲ್ಲಿಯೇ ಕೀರ್ತಿ(ಯುಂಟಾಗಲಿ) ! ನಮ್ಮಿಬ್ಬರಿಗೂ ಜೊತೆಯಲ್ಲಿಯೇ ಬ್ರಹ್ಮವರ್ಚಸ್ಸು(ಂಟಾಗಲಿ) ! ಇನ್ನು ಆದ್ದ

---

1. ಶೀಕ್ಷಾಧ್ಯಾಯವನ್ನು ಹೇಳಿ ಅದರಲ್ಲಿ ಅಡಕವಾಗಿರುವ ಸಂಹಿತೆಯ **ವಿಷಯ**ವಾದ ಉಪಾಸನೆಯನ್ನು ಇನ್ನು ಹೇಳುವೆನೆಂದು ಸೂಚಿಸುವದಕ್ಕೆ. ವಾ॥ಕಾ॥ಗೋ॥ **ಪಾಠಗಳಲ್ಲಿ** “ **ಉಪಸಂಹಾರಾರ್ಥಃ** ” ಎಂದಿಷ್ಟೇ ಇದೆ.

ರಿಂದ ಸಂಹಿತೆಯ ಉಪನಿಷತ್ತನ್ನು ವಿವರಿಸುವೆವು. ಐದು ಅಧಿಕರಣಗಳಲ್ಲಿ ಅಧಿಲೋಕ, ಅಧಿಜ್ಯೌತಿಷ, ಅಧಿವಿದ್ಯ, ಅಧಿಪ್ರಜ, ಅಧ್ಯಾತ್ಮ. ಅವುಗಳನ್ನು ಮಹಾಸಂಹಿತೆಗಳೆಂದು ಕರೆಯುತ್ತಿದ್ದಾರೆ.

ಈಗ ಅಧಿಲೋಕ :—ಪೃಥಿವಿಯು ಹಿಂದಿನ ರೂಪವು; ದ್ಯುಲೋಕವು ಮುಂದಿನ ರೂಪವು; ಆಕಾಶವು ಸಂಧಿ; ವಾಯುವು ಸಂಧಾನವು. ಇಂತು ಅಧಿಲೋಕವಾಯಿತು,

ಈಗ ಅಧಿಜ್ಯೌತಿಷ :—ಅಗ್ನಿಯು ಹಿಂದಿನ ರೂಪವು; ಆದಿತ್ಯನು ಮುಂದಿನ ರೂಪವು; ಅಪ್ಪು ಸಂಧಿ; ಮಿಂಚು ಸಂಧಾನವು. ಇಂತು ಅಧಿಜ್ಯೌತಿಷವಾಯಿತು.

ಈಗ ಅಧಿವಿದ್ಯ : ಆಚಾರ್ಯನು ಹಿಂದಿನ ರೂಪವು; ಶಿಷ್ಯನು ಮುಂದಿನ ರೂಪವು; ವಿದ್ಯೆಯು ಸಂಧಿ; ಹೇಳಿಕೊಡುವದೇ ಸಂಧಾನವು. ಇಂತು ಅಧಿವಿದ್ಯವಾಯಿತು.

ಈಗ ಅಧಿಪ್ರಜ :—ತಾಯಿಯು ಹಿಂದಿನ ರೂಪವು: ತಂದೆಯು ಮುಂದಿನ ರೂಪವು; ಪ್ರಜೆಯು ಸಂಧಿಯು; ಪ್ರಜನನವು ಸಂಧಾನವು. ಇಂತು ಅಧಿಪ್ರಜವಾಯಿತು.

ಈಗ ಅಧ್ಯಾತ್ಮ :—ಕೆಳಗಿನ ದವಡೆಯು ಹಿಂದಿನ ರೂಪವು; ಮೇಲಿನ ದವಡೆಯು ಮುಂದಿನ ರೂಪವು; ವಾಕ್ಕು ಸಂಧಿ; ನಾಲಗೆಯು ಸಂಧಾನವು. ಇಂತು ಅಧ್ಯಾತ್ಮವಾಯಿತು.

ಇಂತಿವು **ಮಹಾಸಂಹಿತೆಗಳು.** ಈ ವಿವರಿಸಿದ ದೊಡ್ಡ ಸಂಹಿತೆಗಳನ್ನು ಯಾವಾತನು ತಿಳಿಯುವನೋ ಅವನು ಮಕ್ಕಳು, ದನಕರುಗಳು, ಬ್ರಹ್ಮವರ್ಚಸ್ಸು, ಅನ್ನಾದ್ಯವು, ಸ್ವರ್ಗಲೋಕ–ಇವುಗಳಿಂದ ಕೂಡಿಕೊಳ್ಳುತ್ತಾನೆ.

## ಕೀರ್ತಿ, ಬ್ರಹ್ಮವರ್ಚಸ್ಸು–ಇವುಗಳಿಗಾಗಿ ಪ್ರಾರ್ಥನೆ

(ಭಾಷ್ಯ)

೧೭. ಅಧುನಾ ಸಂಹಿತೋಪನಿಷತ್ ಉಚ್ಯತೇ । ತತ್ರ ಸಂಹಿತಾದ್ಯುಪನಿಷತ್ಪರಿಜ್ಞಾನನಿಮಿತ್ತಂ ಯದ್ ಯಶಃ ಪ್ರಾರ್ಥ್ಯತೇ ತತ್ ನೌ ಆವಯೋಃ ಶಿಷ್ಯಾಚಾರ್ಯಯೋಃ ಸಹೈವ ಅಸ್ತು । ತನ್ನಿಮಿತ್ತಂ ಚ ಯದ್ ಬ್ರಹ್ಮವರ್ಚಸಂ ತೇಜಃ,

ತಚ್ಚ ಸಹೈವ ಅಸ್ತು ಇತಿ ಶಿಷ್ಯವಚನಮ್ ಆಶೀಃ । ಶಿಷ್ಯಸ್ಯ ಹಿ ಅಕೃತಾರ್ಥತ್ವಾತ್ ಪ್ರಾರ್ಥನಾ ಉಪಪದ್ಯತೇ ನಾಚಾರ್ಯಸ್ಯ । ಕೃತಾರ್ಥತ್ವಾತ್ । ಕೃತಾರ್ಥೋ ಹಿ ಆಚಾರ್ಯೋ ನಾಮ ಭವತಿ ॥

(ಭಾಷ್ಯಾರ್ಥ)

ಈಗ ಸಂಹಿತಾವಿಷಯವಾದ ಉಪಾಸನೆಯನ್ನು ಹೇಳಲಾಗುತ್ತದೆ. ಅಲ್ಲಿ ಸಂಹಿತೆಯೇ ಮುಂತಾದದ್ದರ ಉಪಾಸನೆಯನ್ನು ಅರಿತುಕೊಂಡದ್ದರಿಂದ ಯಾವ ಯಶಸ್ಸನ್ನು ಕೋರಿದೆಯೋ [1] ಅದು ನಮ್ಮಿಬ್ಬರಿಗೂ ಜೊತೆಯಲ್ಲಿಯೇ ಶಿಷ್ಯಾಚಾರ್ಯರಾದ ನಮ್ಮಿಬ್ಬರಿಗೂ ಜೊತೆಯಲ್ಲಿಯೇ ಉಂಟಾಗಲಿ! ಅದರ ನಿಮಿತ್ತದಿಂದಾಗುವ ಬ್ರಹ್ಮವರ್ಚಸವು ತೇಜಸ್ಸುಂಟಲ್ಲ, ಅದೂ ಜತೆಯಲ್ಲಿಯೇ (ನಮ್ಮಿಬ್ಬರಿಗೂ) ಆಗಲಿ! ಹೀಗೆಂಬುದು ಶಿಷ್ಯನ ಹಾರೈಕೆಯ ಮಾತು. ಏಕೆಂದರೆ ಶಿಷ್ಯನು ಕೃತಾರ್ಥನಲ್ಲವಾದ್ದರಿಂದ ಅವನು (ಹೀಗೆಂದು) ಹಾರೈಸುವದು ಹೊಂದಿಕೆಯಾಗುತ್ತದೆ; ಆಚಾರ್ಯನು (ಹಾರೈಸುವದೆಂಬುದು) ಸರಿಯಾಗಲಾರದು, ಏಕೆಂದರೆ ಅವನು ಕೃತಾರ್ಥನಾಗಿರುತ್ತಾನೆ. ಕೃತಾರ್ಥನೇ ಅಲ್ಲವೆ, ಆಚಾರ್ಯನೆನಿಸುವನು ?

## ಸಂಹಿತೆಯ ಐದು ಉಪಾಸನೆಗಳು

(ಭಾಷ್ಯ)

೧೮. ಅಥ ಅನನ್ತರಮ್ ಅಧ್ಯಯನಲಕ್ಷಣವಿಧಾನಸ್ಯ, [2] (ಅತಃ) ಯತಃ ಅತ್ಯರ್ಥಂ ಗ್ರನ್ಥಭಾವಿತಾ ಬುದ್ಧಿಃ ನ ಶಕ್ಯತೇ ಸಹಸಾ ಅರ್ಥಜ್ಞಾನವಿಷಯೇ ಅವತಾರಯಿತುಮ್ ಇತ್ಯತಃ, ಸಂಹಿತಾಯಾ ಉಪನಿಷದಂ ಸಂಹಿತಾವಿಷಯಂ ದರ್ಶನಮ್ ಇತ್ಯೇತತ್ । ಗ್ರನ್ಥಸನ್ನಿಕೃಷ್ಟಾಮೇವ ವ್ಯಾಖ್ಯಾಸ್ಯಾಮಃ । ಪಞ್ಚಸು ಅಧಿಕರಣೇಷು ಆಶ್ರಯೇಷು ಜ್ಞಾನವಿಷಯೇಷು ಇತ್ಯರ್ಥಃ । ಕಾನಿ ತಾನೀತಿ? ಆಹ–ಅಧಿಲೋಕಮ್ ಲೋಕೇಷ್ವಧಿ ಯದ್ ದರ್ಶನಮ್ ತತ್ ಅಧಿಲೋಕಮ್ । ತಥಾ ಅಧಿಜ್ಯೌತಿಷಮ್ ಅಧಿವಿದ್ಯಮ್ । ಅಧಿಪ್ರಜಮ್ ಅಧ್ಯಾತ್ಮಮ್ ಇತಿ । ತಾಃ ಏತಾಃ ಪಞ್ಚವಿಷಯಾ ಉಪನಿಷದಃ ಲೋಕಾದಿಮಹಾವಸ್ತುವಿಷಯತ್ವಾತ್, ಸಂಹಿತಾವಿಷ

---

1. ಪ್ರಾಪ್ಯತೇ ಎಂಬ (ವಾ॥) ಪಾಠದಲ್ಲಿ "ಯಾವ ಯಶಸ್ಸು ದೊರೆಯುವದೋ" ಎಂದು ಕನ್ನಡಿಸಿಕೊಳ್ಳಬೇಕು.

2. ಇಲ್ಲಿ "ಪೂರ್ವವೃತ್ತಸ್ಯ" ಎಂಬ ಮಾತು ವಾ॥ಕಾ॥ ಪಾಠಗಳಲ್ಲಿದೆ; ಹಿಂದೆ ಆಗಿಹೋಗಿರುವ ಅಧ್ಯಯನದ ಲಕ್ಷಣವನ್ನು ವಿಧಿಸಿದಮೇಲೆ ಎಂದು ಅದಕ್ಕೆ ಅರ್ಥ.

ಯತ್ವಾಚ್ಚ ಮಹತ್ವಾಚ್ಚ ತಾಃ ಸಂಹಿತಾಶ್ಚ ಮಹಾಸಂಹಿತಾಃ ಇತಿ ಆಚಕ್ಷತೇ ಕಥಯನ್ತಿ ವೇದವಿದಃ ||

(ಭಾಷ್ಯಾರ್ಥ)

ಇನ್ನು ಎಂದರೆ ಅಧ್ಯಯನದ ಲಕ್ಷಣವನ್ನು ವಿಧಿಸಿದಮೇಲೆ [1] (ಆದ್ದರಿಂದ) [2] ಬಹಳವಾಗಿ ಗ್ರಂಥದ ವಾಸನೆಯೇ ಬಲವಾಗಿರುವ ಬುದ್ಧಿಯನ್ನು ತಟಕ್ಕನೆ [3] ಅರ್ಥಜ್ಞಾನಕ್ಕೆ ಇಳಿಸುವದು ಆಗಲಾರದ್ದರಿಂದ ಸಂಹಿತೆಯ ಉಪನಿಷತ್ತನ್ನು ಎಂದರೆ ಗ್ರಂಥಕ್ಕೆ ಹತ್ತಿರವೇ ಇರುವ [4] ಸಂಹಿತಾವಿಷಯವಾದ ಉಪಾಸನೆಯನ್ನು ಎಂದರ್ಥ; (ಅದನ್ನು) ವಿವರಿಸುತ್ತೇವೆ. ಐದು ಅಧಿಕರಣಗಳಲ್ಲಿ ಎಂದರೆ ಆಶ್ರಯಗಳಲ್ಲಿ, ಜ್ಞಾನವಿಷಯಗಳಲ್ಲಿ [5] (ಉಪಾಸನೆಯನ್ನು ವಿವರಿಸುತ್ತೇವೆ) ಎಂದರ್ಥ. ಅವು ಯಾವವು ?–ಎಂದರೆ (ಶ್ರುತಿಯು) ಹೇಳುತ್ತದೆ; ಅಧಿಲೋಕವು, ಲೋಕಗಳನ್ನು ಕುರಿತ ಉಪಾಸನೆಯು ಯಾವದೋ ಅದು ಅಧಿಲೋಕವು. ಇದರಂತೆಯೇ ಅಧಿಜ್ಯೌತಿಷ, ಅಧಿವಿದ್ಯ, ಅಧಿಪ್ರಜ, ಅಧ್ಯಾತ್ಮ–(ಇವುಗಳನ್ನೂ ಅರ್ಥಮಾಡಿಕೊಳ್ಳಬೇಕು). ಐದು ವಿಷಯಗಳ ಆ ಈ ಉಪನಿಷತ್ತುಗಳು [6] ಲೋಕಗಳೇ ಮುಂತಾದ ಮಹಾವಸ್ತುಗಳನ್ನು ಕುರಿತ (ಉಪಾಸನೆ)ಗಳಾದ್ದರಿಂದಲೂ ಸಂಹಿತೆಗಳನ್ನು ಕುರಿತ (ಉಪಾಸನೆ)ಗಳಾದ್ದರಿಂದಲೂ **ಮಹಾಸಂಹಿತೆಗಳು** ಎಂದು ವೇದವನ್ನು ಬಲ್ಲವರು (ಇವನ್ನು) ಕರೆಯುತ್ತಾರೆ.

---

1. ಅಧ್ಯಯನದಲ್ಲಿ ಲಕ್ಷ್ಯವಿಡಬೇಕಾದ ವರ್ಣ, ಸ್ವರ–ಮುಂತಾದವುಗಳ ವಿಚಾರವನ್ನು ಹಿಂದೆ ಹೇಳಲಾಗಿದೆ; ಈ ಅನುವಾಕದಲ್ಲಿ ಸಂಧಿಗಳ ವಿಷಯವಾದ ಉಪಾಸನೆಯನ್ನು ಹೇಳಿರುತ್ತದೆ.

2. 'ಅತಃ' ಎಂಬ ಮಾತಿನ ಪರಿವರ್ತನೆಯಿದು. ಈ ಮಾತು ವಾ|| ಮುಂತಾದ ಕೋಶಗಳಲ್ಲಿಲ್ಲ. ಇದಿಲ್ಲದಿದ್ದರೂ ಸಾಗುತ್ತದೆ.

3. ಗ್ರಂಥವಾಸನೆಯಿರುವವರಿಗೆ ಮೇಧಾಶಕ್ತಿಯೊಂದೇ ಸಾಕು; ಅರ್ಥವಿಚಾರವನ್ನು ಮಾಡುವವರಿಗೆ ಏಕಾಗ್ರದಿಂದ ನೋಡುವ ಧ್ಯಾನಶಕ್ತಿಯೂ ಬೇಕು, ಆದ್ದರಿಂದ.

4. ಉಪಾಸನೆಗಳಲ್ಲಿ ಗ್ರಂಥಕ್ಕೆ ಸಂಬಂಧಪಟ್ಟ ಉಪಾಸನೆಗಳನ್ನೇ ಮೊದಲು ಹೇಳಿರುವದು ಸೌಕರ್ಯಕ್ಕೆ; ಏಕೆಂದರೆ ಅಧ್ಯಯನಮಾಡಿರುವವರಿಗೆ ವೇದದಲ್ಲಿ ಶಬ್ದರೂಪವು ಚೆನ್ನಾಗಿ ಗೊತ್ತಾಗಿರುತ್ತದೆ.

5. ಉಪಾಸನೆಗೆ ವಿಷಯವಾದ ಲೋಕ ಮುಂತಾದವುಗಳಲ್ಲಿ.

6. ಉಪಾಸನೆಗಳು. ಉಪನಿಷತ್ತೆಂದರೆ ಈ ಪ್ರಕರಣದಲ್ಲಿ ಉಪಾಸನೆ.

# ಸಂಹಿತೋಪಾಸನೆಗಳ ವಿವರ

(ಭಾಷ್ಯ)

೧೯. ಅಥ ತಾಸಾಂ ಯಥೋಪನ್ಯಸ್ತಾನಾಂ (ಮಧ್ಯೇ)[1] ಅಧಿಲೋಕಂ ದರ್ಶನಮುಚ್ಯತೇ । ದರ್ಶನಕ್ರಮವಿವಕ್ಷಾರ್ಥಃ ಅಥಶಬ್ದಃ ಸರ್ವತ್ರ । ಪೃಥಿವೀ ಪೂರ್ವರೂಪಮ್ । ಪೂರ್ವೋ ವರ್ಣಃ ಪೂರ್ವರೂಪಮ್ । ಸಂಹಿತಾಯಾಃ ಪೂರ್ವೇ ವರ್ಣೇ ಪೃಥಿವೀದೃಷ್ಟಿಃ ಕರ್ತವ್ಯಾ ಇತ್ಯುಕ್ತಂ ಭವತಿ । ತಥಾ ದ್ಯೌಃ ಉತ್ತರ ರೂಪಮ್ । ಆಕಾಶಃ ಅನ್ತರಿಕ್ಷಲೋಕಃ ಸನ್ಧಿಃ ಮಧ್ಯಂ ಪೂರ್ವೋತ್ತರರೂಪಯೋಃ ಸನ್ಧೀಯೇತೇ ಅಸ್ಮಿನ್ ಪೂರ್ವೋತ್ತರರೂಪೇ ಇತಿ । ವಾಯುಃ ಸನ್ಧಾನಮ್ । ಸನ್ಧೀಯತೇ ಅನೇನ ಇತಿ ಸನ್ಧಾನಮ್ । ಇತಿ ಅಧಿಲೋಕಂ ದರ್ಶನಮ್ ಉಕ್ತಮ್ । “ಅಥಾಧಿಜ್ಯೌತಿಷಮ್” ಇತ್ಯಾದಿ ಸಮಾನಮ್ ॥

(ಭಾಷ್ಯಾರ್ಥ)

ಈಗ ಮೇಲೆ ಹೇಳಿದ (ಉಪಾಸನೆಗ)ಳೊಳಗೆ ಅಧಿಲೋಕವಾದ ಉಪಾಸನೆಯನ್ನು ಹೇಳಲಾಗುವದು. (ಮೂಲದಲ್ಲಿರುವ) ಅಥ ಈಗ ಎಂಬ ಶಬ್ದವು (ಇಲ್ಲಿ) ಎಲ್ಲಾ ಕಡೆಯಲ್ಲಿಯೂ ಉಪಾಸನೆಯ ಕ್ರಮವನ್ನು[2] ಹೇಳುವ ಇಚ್ಛೆಯಿಂದ (ಉಪಯೋಗಿಸಲ್ಪಟ್ಟಿರುತ್ತದೆ.) ಪೃಥ್ವಿಯು ಹಿಂದಿನ ರೂಪವು. ಹಿಂದಿನ ರೂಪವೆಂದರೆ ಹಿಂದಿನ ವರ್ಣವು. ಸಂಹಿತೆಯ[3] ಹಿಂದಿನ ವರ್ಣದಲ್ಲಿ ಪೃಥ್ವಿ ಎಂಬ ದೃಷ್ಟಿಯನ್ನು ಮಾಡಬೇಕು[4] ಎಂದು ಹೇಳಿದಂತೆ ಆಯಿತು. ಹೀಗೆಯೇ[5] ದ್ಯುಲೋಕವು

---

1. ಈ ಮಾತು ಪಾ॥ ಕಾ॥ ಪಾಠಗಳಲ್ಲಿ ಹೆಚ್ಚಾಗಿರುತ್ತದೆ.

2. ಈಗ ಉಪಾಸನೆಯ ವಿವರವು ಮೊದಲಾಯಿತು ಎಂದು ತಿಳಿಸುವದಕ್ಕೆ ಮತ್ತು ಈ ಕ್ರಮದಲ್ಲಿ ಉಪಾಸನೆಯನ್ನು ಮಾಡಬೇಕೆಂದು ತಿಳಿಸುವದಕ್ಕೆ.

3. ವೇದದಲ್ಲಿ ಇಷ್ಟೇ ತ್ವಾ ಊರ್ಜೇ ತ್ವಾ ಇವುಗಳು ಸೇರಿ ಇಷೇ ತ್ವೋರ್ಜೇ ತ್ವಾ ಎಂದಾಗಿರುವದಷ್ಟೆ; ಈ ಸಂಹಿತೆಯಲ್ಲಿ ಹಿಂದಿನ ವರ್ಣವಾದ ಅಕಾರವನ್ನು ಪೃಥ್ವಿಯೆಂದು ತಿಳಿಯಬೇಕು ಎಂದರ್ಥ.

4. ಅಕಾರವು ಪೃಥ್ವಿಯಲ್ಲ, ಆದರೂ ಪೃಥ್ವಿ ಎಂದು ಅದನ್ನು ಧ್ಯಾನಮಾಡಬೇಕು. ಸಾಲಗ್ರಾಮಶಿಲೆಯನ್ನು ವಿಷ್ಣುವೆಂದು ಬಗೆವಂತೆಯೇ ಇದು. ಹೀಗೆ ಒಂದು ವಸ್ತುವನ್ನು ಮತ್ತೊಂದೆಂಬ ದೃಷ್ಟಿಯಿಂದ ಉಪಾಸನೆಮಾಡುವದಕ್ಕೆ **ಪ್ರತೀಕೋಪಾಸನೆ** ಎಂದು ಹೆಸರು.

5. ಸಂಹಿತೆಯ ಮುಂದಿನ ವರ್ಣವಾದ ಊಕಾರದಲ್ಲಿ ಸ್ವರ್ಗವೆಂಬ ದೃಷ್ಟಿಯನ್ನು ಮಾಡಿ ಉಪಾಸನೆಮಾಡಬೇಕು ಎಂದರ್ಥ.

ಮುಂದಿನರೂಪವು; ಆಕಾಶವು ಎಂದರೆ ಅಂತರಿಕ್ಷಲೋಕವು ಸಂಧಿ ಎಂದರೆ ಹಿಂದು ಮುಂದಿನ ವರ್ಣಗಳ ನಡುಭಾಗವು. (ಇದರಲ್ಲಿ)[1] ಹಿಂದುಮುಂದಿನ ವರ್ಣಗಳು ಸೇರುತ್ತವೆಯಾದ್ದರಿಂದ (ಇದಕ್ಕೆ ಸಂಧಿ ಎಂದು ಹೆಸರು). ವಾಯುವು ಸನ್ಧಾನವು; ಇದರಿಂದ[2] ಸೇರಿಸೋಣವಾಗುತ್ತದೆಯಾದ್ದರಿಂದ (ಇದು) ಸಂಧಾನ(ವೆನಿಸುತ್ತದೆ). **ಈ ರೀತಿಯಲ್ಲಿ ಅಧಿಲೋಕದ ಉಪಾಸನೆಯನ್ನು** ಹೇಳಿದ್ದಾಯಿತು.

"ಈಗ ಅಧಿಜ್ಯೌತಿಷವು" ಮುಂತಾದದ್ದರ (ಅರ್ಥವು ಮೇಲೆ ವಿವರಿಸಿರುವ ಅಧಿಲೋಕದ ವಿವರಣೆಗೆ) ಸಮಾನವಾಗಿರುತ್ತದೆ.[3]

## ಉಪಾಸನೆಯ ಸ್ವರೂಪ

(ಭಾಷ್ಯ)

೨೦. "ಇತೀಮಾಃ" ಇತಿ ಉಕ್ತಾಃ ಉಪಪ್ರದರ್ಶ್ಯನ್ತೇ। ಯಃ ಕಶ್ಚಿತ್ ಏವಮ್ ಏತಾಃ ಮಹಾಸಂಹಿತಾಃ ವ್ಯಾಖ್ಯಾತಾಃ ವೇದ ಉಪಾಸ್ತೇ। 'ವೇದ' ಇತಿ ಉಪಾಸನಂ ಸ್ಯಾತ್। ವಿಜ್ಞಾನಾಧಿಕಾರಾತ್, "ಇತಿ ಪ್ರಾಚೀನಯೋಗ್ಯೋಽಪಾಸ್ವ" (೧-೬) ಇತಿ ಚ ವಚನಾತ್। **ಉಪಾಸನಂ ಚ ಯಥಾಶಾಸ್ತ್ರಂ ತುಲ್ಯಪ್ರತ್ಯಯಸನ್ತತಿಃ। ಅಸಙ್ಕೀರ್ಣಾ ಚ ಅತತ್ಪ್ರತ್ಯಯೈಃ ಶಾಸ್ತ್ರೋಕ್ತಾಲಮ್ಬನವಿಷಯಾ ಚ। ಪ್ರಸಿದ್ಧಶ್ಚ ಉಪಾಸನಶಬ್ದಾರ್ಥೋ ಲೋಕೇ 'ಗುರುಮ್ ಉಪಾಸ್ತೇ' 'ರಾಜಾನಮ್ ಉಪಾಸ್ತೇ' ಇತಿ।** ಯೋ ಹಿ ಗುರ್ವಾದೀನ್ ಸನ್ತತಮ್ ಉಪಚರತಿ ಸ ಉಪಾಸ್ತೇ ಇತ್ಯುಚ್ಯತೇ। ಸ ಚ ಫಲಮ್ ಆಪ್ನೋತ್ಯುಪಾಸನಸ್ಯ। ಅತಃ ಅತ್ರಾಪಿ ಯ ಏವಂ ವೇದ ಸನ್ಧೀಯತೇ ಪ್ರಜಾದಿಭಿಃ ಸ್ವರ್ಗಾನ್ತೈಃ। ಪ್ರಜಾದಿಫಲಂ ಪ್ರಾಪ್ನೋತಿ[4] ಇತ್ಯರ್ಥಃ॥

---

1. ತ್ವಾ ಊ ಇವುಗಳ ನಡುವಿನ ಭಾಗವನ್ನು ಆಕಾಶವೆಂದು ಚಿಂತಿಸಬೇಕು.

2. ಓಕಾರದಿಂದ ಆಊಕಾರಗಳೆರಡೂ ಸೇರಿಸಲ್ಪಟ್ಟವೆಯಾದ್ದರಿಂದ ಅದು ಸಂಧಾನವು—ಎಂದರ್ಥ. ಸಾಯಣಭಾಷ್ಯದಲ್ಲಿ ಕೊಟ್ಟಿರುವ ಉದಾಹರಣೆ ಹೀಗಿದೆ; ಇಷೇ ತ್ವಾ ಎಂಬಲ್ಲಿ ಏಕಾರವು ಪೃಥ್ವಿ; ತಕಾರವು ದ್ಯುಲೋಕವು; ಅವುಗಳ ನಡುವೆ ಇರುವ ಭಾಗವು ಆಕಾಶವು; ಸಂಹಿತೆಯಿಂದ ಇಷೇತ್ತ್ವಾ ಎಂದಾಗುವ ದ್ವಿರ್ಭಾವದ ತಕಾರವು ವಾಯು ಎಂದು ಚಿಂತಿಸಬೇಕು.

3. ಹಿಂದಿನ ವರ್ಣವು ವಹ್ನ್ಯಾದಿ, ಮುಂದಿನದು ಆದಿತ್ಯಾದಿ, ನಡುವಣ ಭಾಗವು ಅಬಾದಿ, ಕೂಡಿಸುವ ಸಂಧಿಯ ವರ್ಣವು ವಿದ್ಯುದಾದಿ ಎಂದು ಚಿಂತಿಸಬೇಕು ಎಂದರ್ಥ.

4. "ಫಲಾನ್ಯಾಪ್ನೋತಿ" ಎಂದು ಅ॥ ಪಾಠ.

(ಭಾಷ್ಯಾರ್ಥ)

"ಇಂತಿವು" ಎಂದು (ಹಿಂದೆ) ಹೇಳಿರುವ (ಸಂಹಿತೆಗಳನ್ನು) ಪರಾಮರ್ಶಿಸಿರುತ್ತದೆ. ಯಾವನೇ ಆಗಲಿ ಈ ರೀತಿಯಲ್ಲಿ[1] ಈ ವಿವರಿಸಿದ ಮಹಾಸಂಹಿತೆಗಳನ್ನು 'ವೇದ' ಉಪಾಸನೆಮಾಡುವನೋ (ಎಂದರ್ಥ). ವೇದ ಎಂಬ (ಮಾತಿಗೆ ಇಲ್ಲಿ) ಉಪಾಸನೆಯೇ (ಅರ್ಥ)ವಾಗಿರಬೇಕು;[2] ಏಕೆಂದರೆ ಇದು ಉಪಾಸನೆಯ ಪ್ರಕರಣವಾಗಿರುತ್ತದೆ,[3] ಮತ್ತು ಮುಂದೆ "ಹೀಗೆಂದು ಎಲೈ ಪ್ರಾಚೀನಯೋಗ್ಯನೇ ಉಪಾಸನೆಮಾಡು" (೧-೬) ಎಂದು ಹೇಳಿಯೂ ಇರುತ್ತದೆ. **"ಉಪಾಸನೆ" ಎಂದರೆ ಶಾಸ್ತ್ರೋಕ್ತವಾದ ಆಲಂಬನವನ್ನು ಕುರಿತು ಶಾಸ್ತ್ರದಲ್ಲಿ ಹೇಳಿರುವಂತೆ ಸಮಾನವಾದ ಪ್ರತ್ಯಯಗಳನ್ನು ಬೇರೆಯ ವಿಷಯದ ಪ್ರತ್ಯಯಗಳ ಬೆರಕೆಯಿಲ್ಲದೆ ಪ್ರವಾಹವಾಗಿ (ನಡೆಯಿಸಿಕೊಂಡು ಹೋಗುವದು.)**[4] **ಇದಲ್ಲದೆ 'ಗುರುವನ್ನು ಉಪಾಸನೆಮಾಡುತ್ತಾನೆ' 'ರಾಜನನ್ನು ಉಪಾಸನೆ ಮಾಡುತ್ತಾನೆ' ಎಂದು (ಹೇಳುವಾಗ) ಉಪಾಸನೆ ಎಂಬ ಶಬ್ದದ ಅರ್ಥವು ಲೋಕದಲ್ಲಿ**[5] **ಪ್ರಸಿದ್ಧವೂ ಆಗಿದೆ.** ಯಾವನು ಗುರುವೇ ಮೊದಲಾದವರನ್ನು ಒಂದೇ ಸಮನೆ ಉಪಚರಿಸುತ್ತಾನೋ ಅವನು ಉಪಾಸನೆಮಾಡುತ್ತಾನೆ ಎನ್ನುತ್ತಾರಲ್ಲವೆ? ಮತ್ತು ಅವನು (ಆ) ಉಪಾಸನೆಯ ಫಲವನ್ನು ಪಡೆದುಕೊಳ್ಳುತ್ತಾನೆ (ಎಂಬುದೂ ಪ್ರಸಿದ್ಧವು).[6] ಆದ್ದರಿಂದ ಇಲ್ಲಿಯೂ ಯಾವಾತನು ಹೀಗೆಂದು ತಿಳಿಯುವನೋ[7] ಅವನು ಪ್ರಜೆ ಮುಂತಾಗಿ ಸ್ವರ್ಗದವರೆಗಿನ ಫಲಗಳಿಂದ ಕೂಡಿಕೊಳ್ಳು

---

1. ಇಲ್ಲಿ ವಿಧಿಸಿರುವ ರೀತಿಯಲ್ಲಿ.

2. ವೇದ ಎಂದರೆ ಅರಿಯುತ್ತಾನೆ, ಚಿಂತಿಸುತ್ತಾನೆ ಎಂದು ವೇದದಲ್ಲಿ ಎರಡು ಅರ್ಥಗಳು. ಇಲ್ಲಿ 'ಚಿಂತಿಸುತ್ತಾನೆ' ಎಂದೇ ಅರ್ಥ.

3. ಶೀಕ್ಷಾವಲ್ಲಿಯಲ್ಲಿ ಉಪಾಸನೆಯನ್ನೇ ಮುಖ್ಯವಾಗಿ ಹೇಳುತ್ತದೆ; ಮುಂದಿನ ವಲ್ಲಿಯಲ್ಲಿ ಜ್ಞಾನವನ್ನು ಹೇಳಿದೆ.

4. ಪ್ರ.ಭಾ. ೫-೧, ಛಾ. ಸಂಬಂಧಭಾಷ್ಯ ಬೃ.ಭಾ. ೧-೫-೨ ಇದೇ ಗೀ.ಭಾ. ೧೨-೩ ಸೂ.ಭಾ. ೪-೧-೧ ಇವುಗಳಲ್ಲಿ ಉಪಾಸನಾಶಬ್ದಕ್ಕೆ ನಿರ್ವಚನವಿದೆ.

5. ವೈದಿಕವಲ್ಲದ ಸಂಸ್ಕೃತಭಾಷೆಯಲ್ಲಿ.

6. ಗುರುವಿನ ಉಪಾಸನೆಯಿಂದ ವಿದ್ಯೆಯನ್ನೂ, ರಾಜನ ಉಪಾಸನೆಯಿಂದ ಗ್ರಾಮಾದಿಗಳನ್ನೂ ಪಡೆಯುತ್ತಾನೆ.

7. ಉಪಾಸನೆಮಾಡುವನೋ.

ತ್ತಾನೆ, ಎಂದರೆ ಪ್ರಜೆಯೇ ಮುಂತಾದ ಫಲಗಳನ್ನು ಪಡೆದುಕೊಳ್ಳುತ್ತಾನೆ[1] ಎಂದರ್ಥ.

## ೪. ವಿವಿಧ ಜಪಹೋಮಗಳು

### ಅನುವಾಕದ ವಿಷಯ

(ಭಾಷ್ಯ)

೨೧. "ಯಶ್ಛನ್ದಸಾಮ್" ಇತಿ ಮೇಧಾಕಾಮಸ್ಯ ಶ್ರೀಕಾಮಸ್ಯ ಚ ತತ್ಪ್ರಾಪ್ತಿಸಾಧನಂ ಜಪಹೋಮೌ ಉಚ್ಯೇತೇ । "ಸ ಮೇನ್ದ್ರೋ ಮೇಧಯಾ ಸ್ಪೃಣೋತು" ತತೋ ಮೇ ಶ್ರಿಯಮಾವಹ" ಇತಿ ಚ ಲಿಙ್ಗದರ್ಶನಾತ್ ॥

(ಭಾಷ್ಯಾರ್ಥ)

"ಯಾವನು ಛಂದಸ್ಸುಗಳಿಗೆ" ಎಂಬ (ಅನುವಾಕದಲ್ಲಿ) ಮೇಧಾಕಾಮನಿಗೂ ಶ್ರೀಕಾಮನಿಗೂ[2] ಅವುಗಳನ್ನು ಪಡೆದುಕೊಳ್ಳುವದಕ್ಕೆ ಸಾಧನವಾಗಿ ಜಪಹೋಮಗಳನ್ನು ಹೇಳಿರುತ್ತದೆ. "ಆ ಇಂದ್ರನು ನನ್ನನ್ನು ಮೇಧಾಶಕ್ತಿಯಿಂದ ಬಲಪಡಿಸಲಿ!" "ಆಮೇಲೆ ಶ್ರೀಯನ್ನು ನನಗಾಗಿ ತರುವನಾಗು!" ಎಂದೂ (ಮೇಧಾಶ್ರೀಗಳನ್ನು ಸೂಚಿಸುವ ಮಾತಿನ) ಲಿಂಗವು (ಇಲ್ಲಿ) ಕಂಡುಬರುವದರಿಂದ (ಹೀಗೆಂದು ನಿಶ್ಚಯಿಸಬೇಕು).

**ಯಶ್ಛನ್ದಸಾಮೃಷಭೋ ವಿಶ್ವರೂಪಃ । ಛನ್ದೋಭ್ಯೋಽಧ್ಯಮೃತಾತ್ ಸಂಬಭೂವ। ಸ ಮೇನ್ದ್ರೋ ಮೇಧಯಾ ಸ್ಪೃಣೋತು। ಅಮೃತಸ್ಯ ದೇವ ಧಾರಣೋ ಭೂಯಾಸಮ್ । ಶರೀರಂ ಮೇ ವಿಚರ್ಷಣಮ್ । ಜಿಹ್ವಾ ಮೇ ಮಧುಮತ್ತಮಾ। ಕರ್ಣಾಭ್ಯಾಂ ಭೂರಿ ವಿಶ್ರುವಮ್ । ಬ್ರಹ್ಮಣಃ ಕೋಶೋಽಸಿ ಮೇಧಯಾ ಪಿಹಿತಃ। ಶ್ರುತಂ ಮೇ ಗೋಪಾಯ ॥ ಆವಹನ್ತೀ ವಿತನ್ವಾನಾ।**

---

1. ಪ್ರಜೆ, ಪಶು, ಅನ್ನ–ಇವು ದೃಷ್ಟಫಲಗಳು; ಸ್ವರ್ಗವು ಅದೃಷ್ಟಫಲ. ಇಲ್ಲಿ ಕೊಟ್ಟಿರುವ ಉಪಾಸನೆಗಳನ್ನು ಉಪಾಸಕನು ತನ್ನ ಕಾಮಗಳಿಗೆ ಅನುಗುಣವಾಗಿ ಬೇಕಾದರೆ ಕೂಡಿಸಿಕೊಳ್ಳಬಹುದು, ಇಲ್ಲದಿದ್ದರೆ ಬಿಡಬಹುದು. ಸೂ. ಭಾ. ೩-೩-೬೦ನ್ನು ನೋಡಿ.

2. ಶರೀರಾದಿಗಳ ಸುಸ್ಥಿತಿ, ಕೀರ್ತಿ–ಮುಂತಾದವುಗಳನ್ನು ಬಯಸುವವರೆಗೂ ಎಂದು ಸೇರಿಸಿಕೊಳ್ಳಬೇಕು. ಏಕೆಂದರೆ ಇಲ್ಲಿ ಅವನ್ನೂ ಪ್ರಾರ್ಥಿಸಿದೆ.

**ಕುರ್ವಾಣಾ ಚೀರಮಾತ್ಮನಃ । ವಾಸಾಗ್ಂಸಿ ಮಮ ಗಾವಶ್ಚ । ಅನ್ನಪಾನೇ ಚ ಸರ್ವದಾ । ತತೋ ಮೇ ಶ್ರಿಯಮಾವಹ । ಲೋಮಶಾಂ ಪಶುಭಿಃ ಸಹ ಸ್ವಾಹಾ । ಆಮಾಯನ್ತು ಬ್ರಹ್ಮ ಚಾರಿಣಃ ಸ್ವಾಹಾ । ವಿಮಾಯನ್ತು ಬ್ರಹ್ಮಚಾರಿಣಃ ಸ್ವಾಹಾ । ಪ್ರಮಾಯನ್ತು ಬ್ರಹ್ಮಚಾರಿಣಃ ಸ್ವಾಹಾ । ದಮಾಯನ್ತು ಬ್ರಹ್ಮಚಾರಿಣಃ ಸ್ವಾಹಾ । ಶಮಾಯನ್ತು ಬ್ರಹ್ಮಚಾರಿಣಃ ಸ್ವಾಹಾಃ । ಯಶೋ ಜನೇಽಸಾನಿ ಸ್ವಾಹಾ । ಶ್ರೇಯಾನ್ ವಸ್ಯ ಸೋಽಸಾನಿ ಸ್ವಾಹಾ । ತಂ ತ್ವಾ ಭಗ ಪ್ರವಿಶಾನಿ ಸ್ವಾಹಾ । ಸಮಾ ಭಗ ಪ್ರವಿಶ ಸ್ವಾಹಾ । ತಸ್ಮಿನ್ತ್ಸಹಸ್ರಶಾಖೇ । ನಿಭ ಗಾಹಂ ತ್ವಯಿ ಮೃಜೇ ಸ್ವಾಹಾ । ಯಥಾಪಃ ಪ್ರವತಾ ಯನ್ತಿ । ಯಥಾ ಮಾಸಾ ಅಹರ್ಜರಮ್ । ಏವಂ ಮಾಂ ಬ್ರಹ್ಮಚಾರಿಣಃ । ಧಾತರಾಯನ್ತು ಸರ್ವತಃ ಸ್ವಾಹಾ । ಪ್ರತಿವೇಶೋಽಸಿ ಪ್ರ ಮಾ ಭಾಹಿ ಪ್ರ ಮಾ ಪದ್ಯಸ್ವ ॥ ೪ ॥**

೪. ಯಾವನು ಛಂದಸ್ಸುಗಳಿಗೆ ಋಷಭನಾಗಿರುವನೋ, ವಿಶ್ವ ರೂಪನಾಗಿರುವನೋ ಛಂದಸ್ಸುಗಳೆಂಬ ಅಮೃತದಿಂದ ಉಂಟಾಗಿರುವನೋ ಆ ಇಂದ್ರನು ನನ್ನನ್ನು ಮೇಧಾಶಕ್ತಿಯಿಂದ ಬಲಪಡಿಸಲಿ ! ಎಲೈ ದೇವನೆ, (ನಾನು) ಅಮೃತವನ್ನು ಧರಿಸುವವನಾಗಲಿ ! ನನ್ನ ಶರೀರವು ಯೋಗ್ಯ ವಾಗಲಿ ! ನನ್ನ ನಾಲಗೆಯು ಅತ್ಯಂತ ಸವಿಯುಳ್ಳದ್ದಾಗಲಿ ! (ನಾನು) ಕಿವಿಗಳಿಂದ ಹೆಚ್ಚು ಕೇಳುವಂತೆ ಆಗಲಿ ! (ನೀನು) ಬ್ರಹ್ಮದ ಕೋಶವಾಗಿರು ತ್ತೀಯೆ, ಮೇಧೆಯಿಂದ ಮುಚ್ಚಿಕೊಂಡಿರುತ್ತೀಯೆ ! ನಾನು ಕೇಳಿದ್ದನ್ನು ಕಾಪಾಡಿಕೊಡು ! ನನಗೆ ಬಟ್ಟೆಗಳು, ಗೋವುಗಳು ಮತ್ತು ಅನ್ನಪಾನಗಳು– ಇವುಗಳನ್ನು ಯಾವಾಗಲೂ ಹೊತ್ತು ತರುವಳೂ ಹೆಚ್ಚಿಸುವಳೂ ಯಾವಾ ಗಲೂ (ಇರುವಂತೆ) ಮಾಡುವಳೂ ಆಗಿ ತುಪ್ಪಟದಿಂದ ಕೂಡಿದವಳೂ ಪಶುಗಳಿಂದ ಕೂಡಿದವಳೂ ಆದ ಶ್ರೀಯನ್ನು ಆಮೇಲೆ ನನಗಾಗಿ ತರುವ ನಾಗು, ಸ್ವಾಹಾ ! ಬ್ರಹ್ಮಚಾರಿಗಳು ನನ್ನಲ್ಲಿಗೆ ಬರಲಿ, ಸ್ವಾಹಾ । ಬ್ರಹ್ಮ ಚಾರಿಗಳು ನನ್ನಲ್ಲಿಗೆ ವಿಧವಿಧವಾಗಿ ಬರಲಿ, ಸ್ವಾಹಾ । ಬ್ರಹ್ಮಚಾರಿಗಳು ನನ್ನಲ್ಲಿಗೆ ಪ್ರಕೃಷ್ಟವಾಗಿ ಬರಲಿ, ಸ್ವಾಹಾ । ಬ್ರಹ್ಮಚಾರಿಗಳು ದಮವುಳ್ಳವ ರಾಗಿ ಬರಲಿ । ಬ್ರಹ್ಮಚಾರಿಗಳು ಶಮವುಳ್ಳವರಾಗಿ ಬರಲಿ, ಸ್ವಾಹಾ । ಜನರಲ್ಲಿ (ನಾನು) ಯಶಸ್ಸುಳ್ಳವನಾಗಲಿ, ಸ್ವಾಹಾ । ಹೆಚ್ಚಿನವನೂ ಹೆಚ್ಚಿನ

ಧನವಂತನೂ ಆಗುವಂತಾಗಲಿ, ಸ್ವಾಹಾ! ಎಲೈ ಭಗವಂತನೆ, ನಿನ್ನನ್ನು ನಾನು ಸೇರಿಕೊಳ್ಳುವಂತೆ ಆಗಲಿ, ಸ್ವಾಹಾ! ಆ ನೀನು, ಎಲೈ ಭಗವಂತನೆ! ನನ್ನನ್ನು ಸೇರಿಕೊ, ಸ್ವಾಹಾ! ಸಾವಿರ ಶಾಖೆಗಳುಳ್ಳ ಆ ನಿನ್ನಲ್ಲಿ ನಾನು (ಪಾಪವನ್ನು) ತೊಳೆದುಕೊಳ್ಳುತ್ತೇನೆ, ಸ್ವಾಹಾ! ನೀರು ತಗ್ಗಿಗೆ ಹರಿದು ಬರುವಂತೆಯೂ, ತಿಂಗಳುಗಳು ಅಹರ್ಜರವನ್ನು (ಸೇರಿಕೊಳ್ಳುವಂತೆಯೂ) ನನ್ನನ್ನು ಬ್ರಹ್ಮಚಾರಿಗಳು ಎಲ್ಲಾ ಕಡೆಯಿಂದಲೂ ಎಲೈ ಧಾತನೆ, ಬಂದು ಸೇರಲಿ! ಸ್ವಾಹಾ! (ನೀನು) ಪ್ರತಿವೇಶವಾಗಿರುತ್ತೀಯೆ, ನನಗೆ ಹೊಳೆಯುವವನಾಗು, ನನ್ನನ್ನು ಹೊಂದುವವನಾಗು!

## ಮೇಧಾಕಾಮನಿಗೆ ಜಪ

(ಭಾಷ್ಯ)

೨೨. ಯಃ ಛನ್ದಸಾಂ ವೇದಾನಾಮ್ ಋಷಭ ಇವ ಋಷಭಃ। ಪ್ರಾಧಾನ್ಯಾತ್। ವಿಶ್ವರೂಪಃ ಸರ್ವರೂಪಃ। ಸರ್ವವಾಗ್ವ್ಯಾಪ್ತೇಃ। "ತದ್ಯಥಾ ಶಙ್ಕುನಾ" (ಛಾ. ೨-೨೩-೩) ಇತ್ಯಾದಿಶ್ರುತ್ಯನ್ತರಾತ್। ಅತ ಏವ ಋಷಭತ್ವಂ ಓಂಕಾರಸ್ಯ। ಓಂಕಾರೋ ಹಿ ಅತ್ರ ಉಪಾಸ್ಯಃ ಇತಿ ಋಷಭಾದಿಶಬ್ದೈಃ ಸ್ತುತಿಃ ನ್ಯಾಯ್ಯೈವ ಓಂಕಾರಸ್ಯ। ಛನ್ದೋಭ್ಯಃ ವೇದೇಭ್ಯಃ। ವೇದಾ ಹಿ ಅಮೃತಮ್, ತಸ್ಮಾತ್ ಅಮೃತಾತ್ ಅಧಿ ಸಂಬಭೂವ। ಲೋಕವೇದವ್ಯಾಹೃತಿಭ್ಯಃ ಸಾರಿಷ್ಠಂ ಜಿಘೃಕ್ಷೋಃ ಪ್ರಜಾಪತೇಸ್ತಪಸ್ಯತಃ ಓಂಕಾರಃ ಸಾರಿಷ್ಠತ್ವೇನ ಪ್ರತ್ಯಭಾತ್ ಇತ್ಯರ್ಥಃ। ನ ಹಿ ನಿತ್ಯಸ್ಯ ಓಂಕಾರಸ್ಯ ಅಞ್ಜಸೈವ ಉತ್ಪತ್ತಿಃ ಅವಕಲ್ಪತೇ[1]। ಸ ಏವಂಭೂತಃ ಓಂಕಾರಃ ಇನ್ದ್ರಃ ಸರ್ವಕಾಮೇಶಃ ಪರಮೇಶ್ವರಃ ಮಾ ಮಾಂ ಮೇಧಯಾ ಪ್ರಜ್ಞಯಾ ಸ್ಪೃಣೋತು ಪ್ರೀಣಯತು। ಬಲಯತು ವಾ। ಪ್ರಜ್ಞಾಬಲಂ ಹಿ ಪ್ರಾರ್ಥ್ಯತೇ। ಅಮೃತಸ್ಯ ಅಮೃತತ್ವಹೇತುಭೂತಸ್ಯ ಬ್ರಹ್ಮಜ್ಞಾನಸ್ಯ। ತದಧಿಕಾರಾತ್। ಹೇ ದೇವ। ಧಾರಣಃ ಧಾರಯಿತಾ ಭೂಯಾಸಂ ಭವೇಯಮ್॥

(ಭಾಷ್ಯಾರ್ಥ)

ಯಾವನು ಛಂದಸ್ಸುಗಳಿಗೆ ಎಂದರೆ ವೇದಗಳಿಗೆ ಋಷಭನಾಗಿರುವನೋ ಮುಖ್ಯನಾಗಿರುವದರಿಂದ ಎತ್ತಿನಂತೆ ಇರುವನೋ[2] ವಿಶ್ವರೂಪನಾಗಿರುವನೋ ಸರ್ವ

---

1. "ಉತ್ಪತ್ತಿರೇವ ಕಲ್ಪ್ಯತೇ" ಎಂಬ (ಆ॥) ಪಾಠಕ್ಕಿಂತ ಈ ವಾ॥ ಪಾಠವೇ ಉತ್ತಮ.

2. 'ಪುರುಷರ್ಷಭ' ಮುಂತಾದ ಪ್ರಯೋಗಗಳಲ್ಲಿ ಹೇಗೋ ಹಾಗೆ ಇಲ್ಲಿಯೂ ಮುಖ್ಯನೆಂಬ ಅರ್ಥದಲ್ಲಿಯೇ ಋಷಭಶಬ್ದವನ್ನು ಉಪಯೋಗಿಸಿರುತ್ತದೆ ಎಂದು ಭಾವ.

ಪನಾಗಿರುವನೋ (ಎಂದರ್ಥ) ಏಕೆಂದರೆ (ಓಂಕಾರವು) ವಾಕ್ಕೆಲ್ಲವನ್ನೂ ವ್ಯಾಪಿಸಿ ಂಡಿರುತ್ತದೆ. "ಹೇಗೆ ನಾಳದಿಂದ(ಎಲೆಗಳೆಲ್ಲ ವ್ಯಾಪ್ತವಾಗಿರುವವೋ ಹಾಗೆ ಓಂಕಾರ ದ ವಾಕ್ಕೆಲ್ಲವೂ ವ್ಯಾಪ್ತವಾಗಿರುತ್ತದೆ)" (ಛಾ. ೨-೨೩-೩) ಎಂದು ಮುಂತಾಗಿ ವ ಬೇರೊಂದು ಶ್ರುತಿಯು ಇದಕ್ಕೆ ಪ್ರಮಾಣವು. ಆದ್ದರಿಂದಲೇ ಓಂಕಾರವು ಷಭನಾಗಿರುತ್ತದೆ. ಓಂಕಾರವೇ ಅಲ್ಲವೆ, ಇಲ್ಲಿ ಉಪಾಸ್ಯವಾಗಿರುವದು ? ಆದ್ದ ದ ಓಂಕಾರವನ್ನು ಋಷಭ ಮುಂತಾದ ಶಬ್ದಗಳಿಂದ ಹೊಗಳಿರುವದು ಯುಕ್ತವೇ [1] ಗಿರುತ್ತದೆ). ಛಂದಸ್ಸುಗಳೆಂಬ ಎಂದರೆ ವೇದಗಳೆಂಬ (ಅಮೃತದಿಂದ) [2]–ವೇದ ು ನಾಶವಿಲ್ಲದವುಗಳಷ್ಟೆ.[3] ಆ ಅಮೃತದಿಂದ–ಉಂಟಾಗಿರುವನೋ (ಎಂದರೆ) ೇಕಗಳು, ವೇದಗಳು, ವ್ಯಾಹೃತಿಗಳು–ಇವುಗಳಿಂದ ಅತ್ಯಂತ ಸಾರವಾದದ್ದನ್ನು ಹಿಸಬೇಕೆಂದು ತಪಸ್ಸುಮಾಡಿದ **ಪ್ರಜಾಪತಿಗೆ** ಓಂಕಾರವೇ ಸಾರವಾದದ್ದೆಂದು ಾಳೆಯಿತು [4] ಎಂದರ್ಥ. ಏಕೆಂದರೆ ನಿತ್ಯವಾಗಿರುವ ಓಂಕಾರಕ್ಕೆ [5] ಮುಖ್ಯ ತ್ತಿಯಿಂದಲೇ ಉತ್ಪತ್ತಿಯು ಹೊಂದುವದಿಲ್ಲ. ಆ ಇಂಥವನಾದ ಓಂಕಾರವೆಂಬ ದ್ರನು ಎಂದರೆ ಸರ್ವಕಾಮುಗಳಿಗೂ ಒಡೆಯನಾದ [6] ಪರಮೇಶ್ವರನು 'ಮಾ' ನ್ನನ್ನು ಮೇಧಾಶಕ್ತಿಯಿಂದ ಎಂದರೆ ಪ್ರಜ್ಞೆಯಿಂದ 'ಸ್ಪೃಣೋತು' (ಎಂದರೆ) ತೋಷಗೊಳಿಸಲಿ, ಅಥವಾ 'ಬಲಪಡಿಸಲಿ!' (ಎಂದಾದರೂ ಸ್ಪೃಣೋತು ಎಂಬು ಕ್ಕೆ ವ್ಯಾಖ್ಯಾನಮಾಡಬಹುದು) ಏಕೆಂದರೆ (ಇಲ್ಲಿ) ಪ್ರಜ್ಞಾಬಲವನ್ನೇ [7] ಪ್ರಾರ್ಥ

---

1 ವಿಧಿಯನ್ನು ಹೊಗಳುವದು ವೇದದಲ್ಲಿ ಸ್ವಾಭಾವಿಕ; ಇಲ್ಲಿ ಓಂಕಾರವನ್ನು ಹೊಗ ುವದರಿಂದ ಅದರ ಉಪಾಸನೆಯನ್ನು ವಿಧಿಸಿದೆ ಎಂದು ನಿಶ್ಚಯವಾಗುತ್ತದೆ ಎಂದು ಭಾವ.

2 ಅಮೃತಾತ್ ಎಂಬ ಮಾತು ಭಾಷ್ಯದಲ್ಲಿದ್ದು ಬರೆದವರು ಬಿಟ್ಟಿರಬೇಕೆಂದು ೀರುವದು.

3 ವೇದವು ನಿಯತರಚನಾರೂಪವಾಗಿ ಯಾವಾಗಲೂ ಇದ್ದುಕೊಂಡಿರುವದೆಂದು ಾಮಾಂಸಕರ ಮತವು. ವೇದವು ಆತ್ಮರೂಪದಿಂದ ನಿತ್ಯವೆಂದು ಮುಂದೆ ಭಾಷ್ಯದಲ್ಲಿ -೩) ರಲ್ಲಿ ಸಾಧಿಸಿರುತ್ತದೆ.

4. ಛಾ. ೨-೨೩-೨ ನೋಡಿ. ಆ ಶ್ರುತಿಯಲ್ಲಿ ದೇವ ಎಂಬ ಶಬ್ದವಿಲ್ಲದ್ದರಿಂದ ಇಲ್ಲಿ ರೆದವರ ಕೈತಪ್ಪಿನಿಂದ ಬಿದ್ದಿರಬೇಕೆಂದು ಅದನ್ನು ಕೈಬಿಟ್ಟಿದೆ.

5 ವೇದಸಾರವಾದ್ದರಿಂದ ಓಂಕಾರವು ನಿತ್ಯ, ಇಲ್ಲಿ ನಾಮವಾದ ಓಂಕಾರಕ್ಕೂ ಮಿಯಾದ ಪರಮೇಶ್ವರನಿಗೂ ಅಭೇದವನ್ನು ಇಟ್ಟುಕೊಳ್ಳಬೇಕು.

6 ಯಾವನು ಏನು ಬಯಸಿದರೆ ಅದು ಓಂಕಾರದಿಂದ ದೊರೆಯುವದು. ಕ. ೧-೨-೧೬

7. ಸ್ಪೃ–ಪ್ರೀತಿಪಾಲನಯೋಃ ಎಂಬ ಎರಡರ್ಥವನ್ನೂ ತೆಗೆದುಕೊಳ್ಳಬಹುದು. ಆದರೂ ಲ್ಲಿ ಓಂಕಾರೋಪಾಸನೆಯನ್ನು ವಿಧಿಸಿರುವದು ಬ್ರಹ್ಮಜ್ಞಾನಕ್ಕಾಗಿ; ಆದ್ದರಿಂದ 'ಮೇಧಾ' ಂದರೆ ಬರಿಯ ಗ್ರಂಥಧಾರಣಾಶಕ್ತಿಯಲ್ಲ ಎಂದರ್ಥ.

ಸಿರುತ್ತದೆ. ಎಲೈ ದೇವನೆ, (ನಾನು) ಅಮೃತವನ್ನು ಎಂದರೆ ಮುಕ್ತಿಗೆ ಕಾರಣವಾಗಿರುವ ಬ್ರಹ್ಮಜ್ಞಾನವನ್ನು (ಎಂದರ್ಥ) ಏಕೆಂದರೆ ಅದೇ ಇಲ್ಲಿ ಪ್ರಕೃತವಾಗಿರುತ್ತದೆ. (ಆ ಜ್ಞಾನವನ್ನು) ಧರಿಸುವವನಾಗಲಿ, ಪಡೆಯುವವನಾಗಲಿ!

## ಶರೀರೇಂದ್ರಿಯಗಳ ಯೋಗ್ಯತಾಪ್ರಾಪ್ತಿಗಾಗಿ ಪ್ರಾರ್ಥನೆ

(ಭಾಷ್ಯ)

೨೩. ಕಿಂ ಚ ಶರೀರಂ ಮೇ ವಿಚರ್ಷಣಂ ವಿಚಕ್ಷಣಂ ಯೋಗ್ಯಮ್ ಇತ್ಯೇತತ್ । ಭೂಯಾತ್ ಇತಿ ಪ್ರಥಮಪುರುಷವಿಪರಿಣಾಮಃ । ಜಿಹ್ವಾ ಮೇ ಮಮ ಮಧುಮತ್ತಮಾ ಮಧುಮತೀ ಅತಿಶಯೇನ ಮಧುರಭಾಷಿಣೀ ಇತ್ಯರ್ಥಃ । ಕರ್ಣಾಭ್ಯಾಂ ಶ್ರೋತ್ರಾಭ್ಯಾಂ ಭೂರಿ ಬಹು ವಿಶ್ರುವಂ ವ್ಯಶ್ರವಮ್ (?) । ಶ್ರೋತಾ ಭೂಯಾಸಮ್ ಇತ್ಯರ್ಥಃ ಆತ್ಮಜ್ಞಾನಯೋಗ್ಯಃ ಕಾರ್ಯಕಾರಣಸಂಘಾತೋ-ಸ್ತು ಇತಿ ವಾಕ್ಯಾರ್ಥಃ । ಮೇಧಾ ಚ ತದರ್ಥಮೇವ ಹಿ ಪ್ರಾರ್ಥ್ಯತೇ ॥

(ಭಾಷ್ಯಾರ್ಥ)

ಮತ್ತು ನನ್ನ ಶರೀರವು ವಿಚರ್ಷಣವು, ವಿಚಕ್ಷಣವಾದದ್ದು, ಯೋಗ್ಯವಾದದ್ದು ಎಂದರ್ಥ. ಭೂಯಾತ್ (ಆಗಲಿ) ಎಂದು ಪ್ರಥಮಪುರುಷಕ್ಕೆ ತಿರುಗಿಸಿಕೊಳ್ಳಬೇಕು.[1] ನನ್ನ ನಾಲಗೆಯು ಅತ್ಯಂತ ಸವಿಯುಳ್ಳದ್ದಾಗಲಿ (ಬಹಳ) ಸವಿಯುಳ್ಳದ್ದು ಎಂದರೆ ಅತ್ಯಂತವಾಗಿ ಸವಿನುಡಿಯನ್ನಾಡುವದು (ಆಗಲಿ)! ಎಂದರ್ಥ. (ನಾನು) ಕರ್ಣಗಳಿಂದ ಕಿವಿಗಳಿಂದ ಭೂರಿ ಹೆಚ್ಚಾಗಿ ವಿಶ್ರುವಮ್–ವ್ಯಶ್ರುವಮ್ (ಕೇಳಿದೆನು), ಕೇಳುವವನಾಗಲಿ! ಎಂದರ್ಥ. ದೇಹೇಂದ್ರಿಯಗಳ ಗುಂಪು ಆತ್ಮಜ್ಞಾನಕ್ಕೆ ತಕ್ಕದ್ದು ಆಗಲಿ[2] ಎಂಬುದು (ಒಟ್ಟು) ವಾಕ್ಯದ ಅರ್ಥವು. ಏಕೆಂದರೆ ಇಲ್ಲಿ ಮೇಧಾಶಕ್ತಿಯನ್ನು ಕೇಳಿಕೊಂಡಿರುವದು ಅದಕ್ಕಾಗಿಯೇ ಅಲ್ಲವೆ?[3]

---

1. ಹಿಂದೆ ಪ್ರಯೋಗಿಸಿರುವ ಭೂಯಾಸಮ್' ಎಂಬ ಉತ್ತಮಪುರುಷದ ಕ್ರಿಯಾಪದವನ್ನು ಇಲ್ಲಿ 'ಶರೀರಮ್' ಎಂಬುವದಕ್ಕೆ ಹೊಂದುವದಕ್ಕಾಗಿ ಪ್ರಥಮಪುರುಷಕ್ಕೆ ತಿರುಗಿಸಿಕೊಳ್ಳಬೇಕು.

2. ಶರೀರಾದಿಗಳ ಆರೋಗ್ಯವನ್ನು ಕೇಳಿರುವದು ಬರಿಯ ಆರೋಗ್ಯಕ್ಕಾಗಿ ಅಲ್ಲ; ದೇಹೇಂದ್ರಿಯಗಳು ಸಾತ್ತ್ವಿಕವಾಗಿದ್ದು ಜ್ಞಾನಕ್ಕೆ ತಕ್ಕವುಗಳಾಗಲಿ ಎಂಬ ಉದ್ದೇಶದಿಂದ.

3. ಮೇಧೆಯನ್ನು ಕೊಡು ಎಂದರೆ ಆತ್ಮಜ್ಞಾನಕ್ಕೆ ತಕ್ಕ ಮೇಧಾಶಕ್ತಿಯನ್ನು ಕೊಡು ಎಂದೇ ಅರ್ಥವೆಂದು ಹಿಂದೆಯೇ ಹೇಳಿದೆ.

# ಜ್ಞಾನಕ್ಕಾಗಿ ಪ್ರಾರ್ಥನೆ

(ಭಾಷ್ಯ)

೨೪. ಬ್ರಹ್ಮಣಃ ಪರಮಾತ್ಮನಃ ಕೋಶಃ ಅಸಿ ಅಸೇರಿವ। ಉಪಲಬ್ಧ್ಯಧಿಷ್ಠಾನತ್ವಾತ್। ತ್ವಂ ಹಿ ಬ್ರಹ್ಮಣಃ ಪ್ರತೀಕಮ್, ತ್ವಯಿ ಬ್ರಹ್ಮ ಉಪಲಭ್ಯತೇ। ಮೇಧಯಾ ಲೌಕಿಕಪ್ರಜ್ಞಯಾ ಪಿಹಿತಃ ಆಚ್ಛಾದಿತಃ। ಸ ತ್ವಂ ಸಾಮಾನ್ಯಪ್ರಜ್ಞೈರವಿದಿತತತ್ತ್ವಃ ಇತ್ಯರ್ಥಃ। ಶ್ರುತಂ ಶ್ರವಣಪೂರ್ವಕಮ್ ಆತ್ಮಜ್ಞಾನಾದಿಕಂ ವಿಜ್ಞಾನಂ ಮೇ ಗೋಪಾಯ ರಕ್ಷ। ತತ್ಪ್ರಾಪ್ತ್ಯವಿಸ್ಮರಣಾದಿಕಂ ಕುರು ಇತ್ಯರ್ಥಃ। ಜಪಾರ್ಥಾ ಏತೇ ಮನ್ತ್ರಾ ಮೇಧಾಕಾಮಸ್ಯ ॥

(ಭಾಷ್ಯಾರ್ಥ)

(ನೀನು) ಕತ್ತಿಗೆ (ಒರೆಯಂತೆ) ಬ್ರಹ್ಮಕ್ಕೆ ಪರಮಾತ್ಮನಿಗೆ ಒರೆಯಾಗಿರುತ್ತೀಯೆ. ಏಕೆಂದರೆ (ಅದನ್ನು) ಅರಿಯುವದಕ್ಕೆ ಆಧಾರವಾಗಿರುತ್ತೀಯೆ.[1] ನೀನೇ ಬ್ರಹ್ಮಕ್ಕೆ **ಪ್ರತೀಕವು**,[2] ನಿನ್ನಲ್ಲಿ ಬ್ರಹ್ಮವು ತೋರುವದು.[3] ಮೇಧೆಯಿಂದ ಎಂದರೆ ಲೌಕಿಕಪ್ರಜ್ಞೆಯಿಂದ ಮುಚ್ಚಿರುತ್ತೀಯೆ, ಮರೆಯಾಗಿರುತ್ತೀಯೆ. ಆ ನಿನ್ನ ಸ್ವರೂಪವು ಸಾಮಾನ್ಯವಾದ ತಿಳಿವಳಿಕೆಯುಳ್ಳವರಿಗೆ ತಿಳಿಯುವದಿಲ್ಲ[4] ಎಂದರ್ಥ. ನಾನು ಕೇಳಿದ್ದನ್ನು ಎಂದರೆ ಶ್ರವಣಪೂರ್ವಕವಾದ ಆತ್ಮಜ್ಞಾನವೇ ಮುಂತಾದ[5] ತಿಳಿವಳಿಕೆಯನ್ನು ಕಾಪಾಡಿಕೊಡು, ರಕ್ಷಿಸಿಕೊಡು; ಅದು ದೊರೆಯುವಂತೆಯೂ ಮರೆಯದಂತೆಯೂ ಇದೇ ಮುಂತಾದದ್ದನ್ನು[6] ಮಾಡಿಕೊಡು ಎಂದರ್ಥ. ಈವರೆಗಿನ ಮಂತ್ರಗಳು ಮೇಧಾಕಾಮನಾದವನು ಜಪಮಾಡುವದಕ್ಕೋಸ್ಕರ ಹೇಳಿದವುಗಳಾಗಿವೆ.

---

1. ಒರೆಯಲ್ಲಿ ಕತ್ತಿಯಿರುವಂತೆ ಓಂಕಾರದಲ್ಲಿ ಆತ್ಮನು ಇರುತ್ತಾನೆ.

2. ಓಂ ಎಂಬುದನ್ನೇ ಬ್ರಹ್ಮವೆಂದು ಉಪಾಸನೆಮಾಡಿದರೆ ಪ್ರತೀಕವಾಗುವದು.

3. ಓಂಕಾರವು ಬ್ರಹ್ಮದ ನಾಮವೆಂದು ತಿಳಿದು ಅರ್ಥವನ್ನು ವಿಚಾರಮಾಡಿದರೆ ಬ್ರಹ್ಮವನ್ನು ಅರಿಯುವ ಸಾಧನವಾಗುವದು.

4. ವಿಷಯವಾಸನೆಯಿಂದ ಕೂಡಿರುವವರಿಗೆ ಓಂಕಾರವು ಬರಿಯ ಶಬ್ದವೆಂದು ತೋರುತ್ತದೆ; ಅದರ ತತ್ತ್ವವು ತಿಳಿಯುವದಿಲ್ಲ.

5. ಇಲ್ಲಿ ಮುಂತಾದದ್ದು ಎಂದರೆ ಜ್ಞಾನಕ್ಕೆ ಬೇಕಾದದ್ದು ಎಂದರ್ಥ; ಒಂದು ಪಾಠದಲ್ಲಿ 'ಆತ್ಮಜ್ಞಾನಮ್' ಎಂದಿಷ್ಟೇ ಇದೆ.

6. ಶಿಷ್ಯರಲ್ಲಿ ವಿನಿಯೋಗಮಾಡುವಂತೆಯೂ.

# ಶ್ರೀಕಾಮನಿಗೆ ಮಂತ್ರಗಳು

(ಭಾಷ್ಯ)

೨೫. ಹೋಮಾರ್ಥಸ್ತ್ವಧುನಾ ಶ್ರೀಕಾಮಸ್ಯ ಮನ್ತ್ರಾ ಉಚ್ಯನ್ತೇ[1] । ಆವಹನ್ತೀ ಆನಯನ್ತೀ । ವಿತನ್ವಾನಾ ವಿಸ್ತಾರಯನ್ತೀ । ತನೋತೇಸ್ತತ್ಕರ್ಮತ್ವಾತ್ । ಕುರ್ವಾಣಾ ನಿರ್ವರ್ತಯನ್ತೀ ಅಚೀರಮ್ ಅಚಿರಂ ಕ್ಷಿಪ್ರಮೇವ । ಛಾನ್ದಸೋ ದೀರ್ಘಃ । ಚಿರಂ ವಾ ಕುರ್ವಾಣಾ । ಆತ್ಮನಃ ಮಮ । ಕಿಮಿತಿ ? ಆಹ–ವಾಸಾಂಸಿ ವಸ್ತ್ರಾಣಿ ಮಮ ಗಾವಶ್ಚ ಗಾಶ್ಚ ಇತಿ ಯಾವತ್ । ಅನ್ನಪಾನೇ ಚ ಸರ್ವದಾ । ಏವಮಾದೀನಿ ಕುರ್ವಾಣಾ ಶ್ರೀರ್ಯಾ ತಾಂ ತತಃ ಮೇಧಾನಿರ್ವರ್ತನಾತ್ ಪರಮ್ ಆವಹ ಆನಯ । ಅಮೇಧಸೋ ಹಿ ಶ್ರೀಃ ಅನರ್ಥಾಯೈವ ಇತಿ । ಕಿಂವಿಶಿಷ್ಟಾಮ್ ? ಲೋಮಶಾಮ್ ಅಜಾವ್ಯಾದಿಯುಕ್ತಾಮ್ ಅನ್ಯೈಶ್ಚ ಪಶುಭಿಃ ಸಹ ಯುಕ್ತಾಮ್[2] ಆವಹ ಇತಿ ಅಧಿಕಾರಾತ್ ಓಂಕಾರ ಏವ ಅಭಿಸಂಬಧ್ಯತೇ ! ಸ್ವಾಹಾ । ಸ್ವಾಹಾಕಾರೋ ಹೋಮಾರ್ಥಮನ್ತ್ರಾನ್ತಜ್ಞಾಪನಾರ್ಥಃ ॥

(ಭಾಷ್ಯಾರ್ಥ)

ಈಗಲಾದರೋ ಶ್ರೀಕಾಮನಾದವನಿಗೆ ಹೋಮಮಾಡುವದಕ್ಕೋಸ್ಕರ ಮಂತ್ರಗಳನ್ನು ಹೇಳಲಾಗುತ್ತದೆ. ಹೊತ್ತುತರುವವಳು ಎಂದರೆ ತಂದುಕೊಡುವವಳು ; ಹೆಚ್ಚಿಸುವವಳು ಎಂದರೆ ವಿಸ್ತರಿಸುವವಳು ; ತನು ಎಂಬ ಧಾತುವಿಗೆ (ವಿಸ್ತರಿಸು) ಎಂಬುದೇ ಅರ್ಥವಾದ್ದರಿಂದ (ಹೀಗೆ ಅರ್ಥಮಾಡಬೇಕು). ಮಾಡುವವಳು ಎಂದರೆ ಉಂಟುಮಾಡುವವಳು ; ಅಚೀರಮ್ ಎಂದರೆ ಕ್ಷಿಪ್ರವಾಗಿಯೇ । (ಅಚೀರಮ್ ಎಂದು) ದೀರ್ಘವನ್ನು ಉಪಯೋಗಿಸಿರುವದು ವೈದಿಕಪ್ರಯೋಗವು. ಅಥವಾ (ಕುರ್ವಾಣಾ ಚೀರಮ್ ಎಂದು ಪದಚ್ಛೇದಮಾಡಿದರೆ) ಯಾವಾಗಲೂ (ಇರುವಂತೆ) ಮಾಡುವವಳು (ಎಂದಾದರೂ ಅರ್ಥವನ್ನುಮಾಡಬಹುದು). ಆತ್ಮನಃ ಎಂದರೆ ನನಗೆ (ಉಂಟುಮಾಡುವವಳು) ; ಏನನ್ನು ? ಎಂದರೆ ಹೇಳುತ್ತಾರೆ ; ಬಟ್ಟೆಗಳನ್ನು, ಉಡಿಗೆತೊಡಿಗೆಗಳನ್ನು. ಮೂಲದಲ್ಲಿರುವ 'ಗಾವಶ್ಚ' ಎಂಬ ರೂಪಕ್ಕೆ ಗಾಶ್ಚ (ಗೋವುಗಳನ್ನು) ಎಂದೇ ಅರ್ಥ ; ಅನ್ನಪಾನಗಳನ್ನು ಇವೇ ಮುಂತಾದವುಗಳನ್ನು ಯಾವಾಗಲೂ ಉಂಟುಮಾಡುವ ಶ್ರೀಯುಂಟಷ್ಟೆ, ಆಕೆಯನ್ನು ಆಮೇಲೆ ಎಂದರೆ

---

1. "ಶ್ರೀಕಾಮಸ್ಯ ಹೋಮಾರ್ಥಾಸ್ತ್ವಧುನಾ ಉಚ್ಯನ್ತೇ ಮನ್ತ್ರಾಃ" ಎಂದು ವಾ॥ ಪಾಠ.

2. "ಸಂಯುಕ್ತಾಮ್" ಎಂಬ (ಆ॥ಗೋ॥ಕಾ॥) ಪಾಠಕ್ಕಿಂತ ಈ (ವಾ॥) ಪಾಠವು ಮೂಲಕ್ಕೆ ಹೆಚ್ಚು ಹೊಂದುತ್ತದೆ.

ಮೇಧಾಶಕ್ತಿಯನ್ನುಂಟುಮಾಡಿದಬಳಿಕ ತರುವನಾಗು ತೆಗೆದುಕೊಂಡು ಬಾ ; ಏಕೆಂದರೆ ತಿಳಿವಳಿಕೆ ಇಲ್ಲದವನಿಗೆ ಸಂಪತ್ತು ಅನರ್ಥವನ್ನೇ ಉಂಟುಮಾಡುತ್ತದೆ (ಆದ್ದರಿಂದ ಮೇಧೆಯಾದಬಳಿಕವೇ ಶ್ರೀಯನ್ನು ತರುವವನಾಗು). ಎಂಥ ಶ್ರೀಯನ್ನು (ತರಬೇಕು)? ಎಂದರೆ ತುಪ್ಪಟದಿಂದ ಕೂಡಿದವಳು ಎಂದರೆ ಆಡು ಕುರಿ ಮುಂತಾದವುಗಳಿಂದ ಕೂಡಿದವಳೂ ಮತ್ತು ಬೇರೆಯ ಪಶುಗಳಿಂದಲೂ ಕೂಡಿದವಳೂ ಆದವಳನ್ನು (ಬಳಿಕ) "ತರುವವನಾಗು" ಎಂಬುದನ್ನು ಓಂಕಾರಕ್ಕೇ ಸಂಬಂಧಿಸಬೇಕು; ಏಕೆಂದರೆ ಇದು (ಓಂಕಾರದ್ದೇ) ಪ್ರಕರಣವು. ಸ್ವಾಹಾ! (ಇಲ್ಲಿ) ಸ್ವಾಹಾಕಾರವನ್ನು ಕೊಟ್ಟಿರುವದು ಹೋಮಕ್ಕಾಗಿ (ಕೊಟ್ಟಿರುವ) ಮಂತ್ರವು ಇಲ್ಲಿಯವರೆಗೆ ಎಂದು ತಿಳಿಸುವದಕ್ಕೆ.

## ಶಿಷ್ಯರಿಗಾಗಿ ಹೋಮಮಂತ್ರಗಳು

(ಭಾಷ್ಯ)

೨೬. ಆ ಮಾ ಯನ್ತು ಇತಿ ।[1] ಆ ಯನ್ತು ಮಾಮ್ ಇತಿ ವ್ಯವಹಿತೇನ ಸಂಬನ್ಧಃ । ಬ್ರಹ್ಮಚಾರಿಣಃ । ವಿ ಮಾ ಯನ್ತು । ಪ್ರ ಮಾ ಯನ್ತು । ದಮಾಯನ್ತು । ಶಮಾಯನ್ತು ಇತ್ಯಾದಿ ॥

(ಭಾಷ್ಯಾರ್ಥ)

ಆ ಮಾ ಯನ್ತು ಎಂಬ ವಾಕ್ಯದಲ್ಲಿ 'ಆ ಯನ್ತು ಮಾ' ಎಂದು ಆಚೆ ಇರುವ ಪದಕ್ಕೆ (ಆ ಎಂಬ ಉಪಸರ್ಗವನ್ನು) ಸಂಬಂಧಿಸಬೇಕು. ಬ್ರಹ್ಮಚಾರಿಗಳು (ನನ್ನನ್ನು ಬಂದು ಸೇರಲಿ ಎಂದರ್ಥ). ವಿಮಾಯನ್ತು, ಪ್ರಮಾಯನ್ತು, ಶಮಾಯನ್ತು (ಎಂಬಲ್ಲಿಯೂ ಹೀಗೆಯೇ).

## ಕೀರ್ತಿಗಾಗಿ ಹೋಮಮಂತ್ರಗಳು

(ಭಾಷ್ಯ)

೨೭. ಯಶೋ ಯಶಸ್ವೀ ಜನೇ ಜನಸಮೂಹೇ ಅಸಾನಿ ಭವಾನಿ ।

---

1. ಮಾ ಆಯನ್ತು, ಮಾ ವಿ ಆಯನ್ತು, ಮಾ ಪ್ರ ಆಯನ್ತು ಎಂದು ಅನ್ವಯ. ಇಲ್ಲಿ ಭಾಷ್ಯದಲ್ಲಿ ಏಕೆ 'ಇತ್ಯಾದಿ' ಎಂದಿದೆಯೋ ಗೊತ್ತಾಗುವಂತಿಲ್ಲ. ವಿಮಾಯನ್ತು ಮುಂತಾದ ನಾಲ್ಕು ಮಂತ್ರಗಳು ಶಾಖಾಂತರಕ್ಕೆ ಸೇರಿದವೆಂಬ ಕಾರಣದಿಂದ ಕೆಲವು ದೇಶಗಳಲ್ಲಿ ಇದನ್ನು ತೈತ್ತಿರೀಯದಲ್ಲಿ ಪಠಿಸುವದಿಲ್ಲ ಎಂದು **ಸಾಯಣಭಾಷ್ಯದಲ್ಲಿದೆ.** ಆ **ಸೂಚನೆಯೇನೂ ಭಾಷ್ಯದಲ್ಲಿ** ಕಂಡುಬರುವದಿಲ್ಲ.

ಶ್ರೇಯಾನ್ ಪ್ರಶಸ್ಯತರಃ ವಸ್ಯಸಃ ವಸೀಯಸಃ । ವಸುತರಾತ್ ವಸುಮತ್ತರಾದ್ವಾ ಅಸಾನಿ ಇತ್ಯನ್ವಯಃ ॥

(ಭಾಷ್ಯಾರ್ಥ)

(ನಾನು) ಜನರಲ್ಲಿ ಎಂದರೆ ಜನರ ಗುಂಪಿನಲ್ಲಿ ಯಶಸ್ಸು ಎಂದರೆ ಹೆಸರುಳ್ಳವನು ಆಗಲಿ, ಹೆಚ್ಚಿನವನು ಎಂದರೆ ಹೊಗಳತಕ್ಕವನು, ವಸ್ಯಸಃ=ವಸೀಯಸಃ, ಅತಿಶಯವಾಗಿ ವಸುವುಳ್ಳವನಿಗಿಂತಲೂ ಅಥವಾ (ಅತಿಶಯವಾಗಿ) ಧನವಂತನಾಗಿರುವವನಿಗಿಂತ[1] (ನಾನು ಹೆಚ್ಚಿನವನು) ಆಗಲಿ ಎಂದು ಅನ್ವಯವು.

## ಓಂಕಾರಸಾಯುಜ್ಯಕ್ಕಾಗಿ ಪ್ರಾರ್ಥನೆ

(ಭಾಷ್ಯ)

೨೮. ಕಿಂ ಚ ತಂ ಬ್ರಹ್ಮಣಃ ಕೋಶಭೂತಂ ತ್ವಾ ತ್ವಾಂ ಹೇ ಭಗ ಭಗವನ್ ಪೂಜಾವನ್ ಪ್ರವಿಶಾನಿ ಪ್ರವಿಶ್ಯ ಚ ಅನನ್ಯಃ ತ್ವದಾತ್ಮೈವ ಭವಾನಿ ಇತ್ಯರ್ಥಃ । ಸ ತ್ವಮಪಿ ಮಾ ಮಾಂ ಭಗ ಭಗವನ್ ಪೂಜಾವನ್ ಪ್ರವಿಶ । ಆವಯೋಃ ಏಕತ್ವಮೇವ ಅಸ್ತು । ತಸ್ಮಿನ್ ತ್ವಯಿ ಸಹಸ್ರಶಾಖೇ ಬಹುಶಾಖಾಭೇದೇ[2] ಹೇ ಭಗವನ್[3] ನಿಮೃಜೇ ಶೋಧಯಾಮಿ ಅಹಂ ಪಾಪಕೃತ್ಯಾಮ್ ॥

(ಭಾಷ್ಯಾರ್ಥ)

ಮತ್ತು ಬ್ರಹ್ಮಕ್ಕೆ ಒರೆಯಾಗಿರುವ ಆ ನಿನ್ನನ್ನು ಎಲೈ ಭಗ, ಭಗವಂತನೆ, ಪೂಜ್ಯನೆ (ನಾನು) ಸೇರಿಕೊಳ್ಳುವಂತೆ ಒಳಸೇರಿಕೊಂಡು ನಿನಗಿಂತ ಬೇರೆಯಲ್ಲದೆ ನಿನ್ನ ಸ್ವರೂಪವೇ ಆಗುವಂತೆ ಆಗಲಿ! ಎಂದರ್ಥ. ಆ ನೀನುಕೂಡ ನನ್ನನ್ನು ಎಲೈ ಭಗ, ಭಗವಂತನೆ, ಪೂಜ್ಯನೆ ಸೇರುವವನಾಗು; ನಮ್ಮಿಬ್ಬರಿಗೂ ಏಕತ್ವವೇ ಉಂಟಾಗಲಿ![4] ಸಾವಿರ ಕವಲುಗಳುಳ್ಳ ಹಲವು ಭೇದಗಳುಳ್ಳ ಆ ನಿನ್ನಲ್ಲಿ ಎಲೈ

1. ವಸ–ನಿವಾಸೇ, ವಸ–ಆಚ್ಛಾದನೇ ಎಂಬ ಧಾತುಗಳನ್ನು ಇಟ್ಟುಕೊಂಡರೆ ವಸು ಎಂಬುದಕ್ಕೆ ವಾಸವುಳ್ಳವನು, ಮತ್ತೊಬ್ಬರಿಗೆ ಅನ್ನಬಟ್ಟೆಗಳನ್ನು ನೀಡುವವನು ಎಂದರ್ಥವಾಗುವದು; ಅಥವಾ ವಸುಮಾನ್ ಎಂದರ್ಥಮಾಡಿದರೆ ಧನವಂತನಾಗಿರುವನು ಎಂದೂ ಅರ್ಥ ಮಾಡಿಕೊಳ್ಳಬಹುದು.

2. ವಾ॥ ಪಾಠ.

3. ಇದು ವಾ॥ ಪಾಠ. ಇದು ಭಗ ಎಂಬ ಮೂಲದ ಅರ್ಥ.

4. ಓಂಕಾರಸ್ವರೂಪನಾದ ಪರಮೇಶ್ವರನ ಸಾಯುಜ್ಯವನ್ನೇ ಇಲ್ಲಿ ಬೇಡಿರುತ್ತದೆ.

ಭಗವಂತನೆ, ನಾನು ಪಾಪಕೃತ್ಯವನ್ನು 'ನಿಮ್ನಜೇ' ತೊಳೆದುಕೊಳ್ಳುತ್ತೇನೆ, ಶುದ್ಧಿ ಮಾಡಿಕೊಳ್ಳುತ್ತೇನೆ.[1]

## ಬಹು ಶಿಷ್ಯರಿಗಾಗಿ ಹೋಮಮಂತ್ರ ಪ್ರಾರ್ಥನೆ

(ಭಾಷ್ಯ)

೨೯. ಯಥಾ ಲೋಕೇ ಆಪಃ ಪ್ರವತಾ ಪ್ರವಣವತಾ ನಿಮ್ನವತಾ ದೇಶೇನ ಯನ್ತಿ ಗಚ್ಛನ್ತಿ । ಯಥಾ ಚ ಮಾಸಾಃ ಅಹರ್ಜರಮ್ । ಸಂವತ್ಸರೋ ಅಹರ್ಜರಃ । ಅಹೋಭಿಃ ಪರಿವರ್ತಮಾನೋ ಲೋಕಾನ್ ಜರಯತಿ ಇತಿ । ಅಹಾನಿ ವಾ ಅಸ್ಮಿನ್ ಜೀರ್ಯನ್ತಿ ಅನ್ತರ್ಭವನ್ತಿ ಇತಿ ಅಹರ್ಜರಃ । ತಂ ಚ ಯಥಾ ಮಾಸಾಃ ಯನ್ತಿ । ಏವಂ ಮಾಂ ಬ್ರಹ್ಮಚಾರಿಣಃ ಹೇ ಧಾತಃ ಸರ್ವಸ್ಯ ವಿಧಾತಃ ಮಾಮ್ ಆಯನ್ತು ಆಗಚ್ಛನ್ತು ಸರ್ವತಃ ಸರ್ವದಿಗ್ಭ್ಯಃ । ಪ್ರತಿವೇಶಃ ಶ್ರಮಾಪನಯನಸ್ಥಾನಮ್ ಆಸನ್ನಂ ಗೃಹಮ್ ಇತ್ಯರ್ಥಃ । ಏವಂ ತ್ವಂ ಪ್ರತಿವೇಶ ಇವ ಪ್ರತಿವೇಶಃ ತ್ವಚ್ಛೀಲಿನಾಂ ಸರ್ವಪಾಪದುಃಖಾಪನಯನಸ್ಥಾನಮ್ ಅಸಿ । ಅತಃ ಮಾ ಮಾಂ ಪ್ರತಿ ಪ್ರಭಾಹಿ ಪ್ರಕಾಶಯ ಆತ್ಮಾನಮ್ । ಪ್ರ ಮಾ ಪದ್ಯಸ್ವ[2] ಪ್ರಪದ್ಯಸ್ವ ಚ ಮಾಮ್ । ರಸವಿದ್ಧಮಿವ ಲೋಹಂ ತ್ವನ್ಮಯಂ ತ್ವದಾತ್ಮಾನಂ ಕುರು ಇತ್ಯರ್ಥಃ ॥

(ಭಾಷ್ಯಾರ್ಥ)

ಹೇಗೆ ಲೋಕದಲ್ಲಿ ನೀರು ತಗ್ಗಾದ ಹಳ್ಳವಾದ ಕೆಳಮಟ್ಟದ ಪ್ರದೇಶದ ಮೂಲಕ ಹರಿದುಬರುವದೋ, ಮತ್ತು ಹೇಗೆ ತಿಂಗಳುಗಳು ಅಹರ್ಜರವನ್ನು–ಅಹರ್ಜರವೆಂದರೆ ಸಂವತ್ಸರವು. ದಿನಗಳ ರೂಪದಿಂದ ಸುತ್ತುತ್ತಾ ಜನರನ್ನು ಮುದಿಯಾಗಿ ಮಾಡುತ್ತಿರುವದರಿಂದ, ಅಥವಾ ದಿನಗಳು ಇದರಲ್ಲಿ ಮುದಿಯಾಗುತ್ತವೆ ಎಂದರೆ ಅಡಕವಾಗಿಹೋಗುತ್ತವೆಯಾದ್ದರಿಂದ (ಇದಕ್ಕೆ) ಅಹರ್ಜರ(ವೆಂದು ಹೆಸರು); ಆ (ಅಹರ್ಜರವನ್ನು)–ಹೇಗೆ ತಿಂಗಳುಗಳು ಸೇರಿಕೊಳ್ಳುತ್ತಿರುವವೋ ಹೀಗೆಯೇ ನನ್ನನ್ನು ಬ್ರಹ್ಮಚಾರಿಗಳು ಎಲ್ಲಾ ಕಡೆಯಿಂದಲೂ, ಎಲೈ ಧಾತನೆ, ಸರ್ವವನ್ನೂ ವಿಧಾನಮಾಡುವಾತನೆ, ನನ್ನನ್ನು ಕುರಿತು ಎಲ್ಲಾ ಕಡೆಯಿಂದಲೂ ಎಲ್ಲಾ ದಿಕ್ಕುಗಳಿಂದಲೂ ಬಂದು ಸೇರಲಿ; (ನನ್ನ ಬಳಿಗೆ) ಬರಲಿ! ಪ್ರತಿವೇಶವೆಂದರೆ ಆಯಾಸವನ್ನು ಪರಿಹರಿಸಿಕೊಳ್ಳುವ ಸ್ಥಾನವು, ಹತ್ತಿರದ ಮನೆಯು ಎಂದರ್ಥ; ಹೀಗೆಯೇ ನೀನೂ ಪ್ರತಿವೇಶದಂತೆ ಪ್ರತಿವೇಶವಾಗಿರುತ್ತೀಯೆ, ಎಂದರೆ ನಿನ್ನನ್ನು

---

1. ಪರಮಾತ್ಮಸ್ವರೂಪನಾದ ಜೀವನಿಗೆ ಇನ್ನು ಮೇಲೆ ಯಾವ ಪಾಪವೂ ಇರುವದಿಲ್ಲ.
2. ಇದು ಆ॥ ಪಾಠವಲ್ಲಿ ಬಿಟ್ಟುಹೋಗಿದೆ; ವಾ॥ ಪಾಠದಲ್ಲಿದೆ.

ಪರಿಶೀಲನೆಮಾಡುವವರಿಗೆ[1] ಎಲ್ಲಾ ಬಗೆಯ ದುಃಖವನ್ನೂ ಕಳೆಯುವ ಸ್ಥಾನವಾಗಿರುತ್ತೀಯೆ: ಆದ್ದರಿಂದ ನನಗೆ ನನಗೋಸ್ಕರ ಹೊಳೆಯುವವನಾಗು! ನಿನ್ನ ಸ್ವರೂಪವನ್ನು ತೋರಿಸುವವನಾಗು। ಮತ್ತು ಪ್ರ ಮಾ ಪದ್ಯಸ್ವ=ಮಾಂ ಪ್ರಪದ್ಯಸ್ವ ನನ್ನನ್ನು ಹೊಂದುವವನಾಗು! ಪಾದರಸವು ಹತ್ತಿಕೊಂಡ ಲೋಹವು ತನ್ಮಯವಾಗುವಂತೆ ನಿನ್ನ ಸ್ವರೂಪದವನೇ[2] ಆಗಿಬಿಡುವಂತೆ (ನನ್ನನ್ನು) ಮಾಡಿಬಿಡು ಎಂದರ್ಥ.

## ಶ್ರೀಕಾಮವೂ ಜ್ಞಾನಕ್ಕಾಗಿಯೇ

(ಭಾಷ್ಯ)

೩೦. ಶ್ರೀಕಾಮೋಽಸ್ಮಿನ್ ವಿದ್ಯಾಪ್ರಕರಣೇ ಅಭಿಧೀಯಮಾನಃ ಧನಾರ್ಥಃ। ಧನಂ ಚ ಕರ್ಮಾರ್ಥಮ್। ಕರ್ಮ ಚ ಉಪಾತ್ತದುರಿತಕ್ಷಯಾರ್ಥಮ್। ತತ್ಕ್ಷಯೇ ಹಿ ವಿದ್ಯಾ ಪ್ರಕಾಶತೇ। ತಥಾ ಚ ಸ್ಮೃತಿಃ!—

**ಜ್ಞಾನಮುತ್ಪದ್ಯತೇ ಪುಂಸಾಂ ಕ್ಷಯಾತ್ ಪಾಪಸ್ಯ ಕರ್ಮಣಃ।**
**ಯಥಾದರ್ಶತಲೇ[3] ಪ್ರಖ್ಯೇ ಪಶ್ಯನ್ತ್ಯಾತ್ಮಾನಮಾತ್ಮನಿ॥**

**(ಮೋ. ೨೦೪-೮) ಇತಿ.**

(ಭಾಷ್ಯಾರ್ಥ)

ಈ ಜ್ಞಾನಪ್ರಕರಣದಲ್ಲಿ[4] ಶ್ರೀಯ ಬಯಕೆಯ (ವಿಷಯವಾಗಿ ಹೇಳಿರುವದು) ಧನಕ್ಕಾಗಿ, ಧನವು ಕರ್ಮಕ್ಕಾಗಿ, ಕರ್ಮವು ಹಿಂದೆ ಮಾಡಿದ ಪಾಪದ ಕ್ಷಯಕ್ಕಾಗಿ

---

1. ಉಪಾಸನೆಮಾಡುವವರಿಗೆ ಮತ್ತು ಅರ್ಥವಿಚಾರವನ್ನು ಮಾಡುವವರಿಗೆ ಓಂಕಾರವು ಅಪರಬ್ರಹ್ಮದ ಅಥವಾ ಪರಬ್ರಹ್ಮದ ಅನುಭವವನ್ನು ಕೊಟ್ಟು ದುಃಖಗಳನ್ನೆಲ್ಲಾ ಕಳೆಯುತ್ತದೆ.

2. ಕಲಾಯವನ್ನು ಮಾಡಿದ ಪಾತ್ರೆಯು ತವರವೇ ಮುಂತಾದ ಕಲಾಯದ ಲೋಹದ ಸ್ವರೂಪವೇ ಆಗಿ ತೋರುವಂತೆ ಸಾಧಕನು ಉಪಾಸ್ಯಸ್ವರೂಪನೇ ತಾನೆಂಬ ಸಾಕ್ಷಾತ್ಕಾರ ಹೊಂದಿದರೆ ಮಾತ್ರ ಆಯಾ ದೇವತೆಯ ಸಾಯುಜ್ಯವನ್ನು ಪಡೆಯುವನೆಂದು ಶಾಸ್ತ್ರದಲ್ಲಿದೆ. ಬೃ. ೪-೧, ಗೀ. ೮-೬ ನೋಡಿರಿ.

3. "ಆಥಾದರ್ಶತಲಪ್ರಖ್ಯೇ" ಎಂದು ಕುಂಭಕೋಣಮುದ್ರಿತಭಾರತದ ಪಾಠ. ಆ ಬಳಿಕ ಕನ್ನಡಿಯ ಮೇಲುಭಾಗದಂತೆ ಹೊಳೆಯುವ ಅಂತಃಕರಣದಲ್ಲಿ—ಎಂದು ಅದಕ್ಕೆ ಅರ್ಥ.

4. ಉಪಾಸನೆಯನ್ನೂ ಜ್ಞಾನವನ್ನೂ ಹೇಳುವ ಪ್ರಕರಣದಲ್ಲಿ ಶ್ರೀಕಾಮದ ಸುದ್ದಿ ಏಕೆ? ಇಲ್ಲಿ ಕಾಮ್ಯಕರ್ಮದ ವಿಚಾರವಿಲ್ಲವಲ್ಲ!—ಎಂಬ ಶಂಕೆಗೆ ಪರಿಹಾರವಿದು.

ಏಕೆಂದರೆ ಆ (ಪಾಪವು) ನಾಶವಾದರೇ ಜ್ಞಾನವು ತೋರಿಕೊಳ್ಳುತ್ತದೆ.[1] ಆದ್ದರಿಂದಲೇ "ಜನರಿಗೆ ಪಾಪಕರ್ಮವು ಸವೆಯುವದರಿಂದ ಜ್ಞಾನವುಂಟಾಗುತ್ತದೆ. ಸ್ವಚ್ಛವಾದ ಕನ್ನಡಿಯ ಮೇಲುಗಡೆಯಲ್ಲಿ ಹೇಗೋ ಹಾಗೆ ಅಂತಃಕರಣದಲ್ಲಿ ತಮ್ಮ ಆತ್ಮನನ್ನು ಕಂಡುಕೊಳ್ಳುವರು!" (ಮೋ. ೨೦೪-೮) ಎಂದು ಸ್ಮೃತಿಯಲ್ಲಿ ಹೇಳಿದೆ.

# ೫. ವ್ಯಾಹೃತ್ಯಾತ್ಮಬ್ರಹ್ಮದ ಉಪಾಸನೆ

## ಅನುವಾಕದ ವಿಷಯ

(ಭಾಷ್ಯ)

೩೧. ಸಂಹಿತಾವಿಷಯಮ್ ಉಪಾಸನಮ್ ಉಕ್ತಮ್। ತದನು ಮೇಧಾಕಾಮಸ್ಯ ಶ್ರೀಕಾಮಸ್ಯ ಚ ಮನ್ತ್ರಾ ಅನುಕ್ರಾನ್ತಾಃ। ತೇ ಚ ಪಾರಂಪರ್ಯೇಣ ವಿದ್ಯೋಪಯೋಗಾರ್ಥಾ ಏವ। ಅನನ್ತರಂ ವ್ಯಾಹೃತ್ಯಾತ್ಮನೋ ಬ್ರಹ್ಮಣಃ ಅನ್ತರುಪಾಸನಮ್ ಸ್ವಾರಾಜ್ಯಫಲಂ ಪ್ರಸ್ತೂಯತೇ ॥

(ಭಾಷ್ಯಾರ್ಥ)

ಸಂಹಿತೆಗಳ ವಿಷಯದ ಉಪಾಸನೆಯನ್ನು ಹೇಳಿದ್ದಾಯಿತು. ಆಮೇಲೆ ಮೇಧಾಕಾಮನಿಗೂ ಶ್ರೀಕಾಮನಿಗೂ ಮಂತ್ರಗಳನ್ನು ಹೇಳಿದ್ದಾಯಿತು. ಅವುಗಳೂ ಪರಂಪರೆಯಿಂದ ಜ್ಞಾನಕ್ಕೆ ಉಪಯೋಗವಾದವುಗಳೇ (ಎಂದು ತಿಳಿಸಿರುತ್ತೇವೆ). ಇನ್ನು ಈಗ ಸ್ವಾರಾಜ್ಯವೆಂಬ ಫಲವನ್ನು ಕೊಡುವ ವ್ಯಾಹೃತಿರೂಪವಾದ ಬ್ರಹ್ಮವನ್ನು[2] ಒಳಗೆ ಉಪಾಸನೆಮಾಡುವ (ಕ್ರಮವನ್ನು ಹೇಳುವದಕ್ಕೆ) ಪ್ರಾರಂಭಿಸಿರುತ್ತದೆ:—

**ಭೂರ್ಭುವಃ ಸುವರಿತಿ ವಾ ಏತಾಸ್ತಿಸ್ರೋ ವ್ಯಾಹೃತಯಃ। ತಾಸಾಮು ಹ ಸ್ಮೈತಾಂ ಚತುರ್ಥೀಮ್। ಮಾಹಾಚಮಸ್ಯಃ ಪ್ರವೇದಯತೇ। ಮಹ ಇತಿ। ತದ್ ಬ್ರಹ್ಮ। ಸ ಆತ್ಮಾ। ಅಙ್ಗಾನ್ಯನ್ಯಾ ದೇವತಾಃ। ಭೂರಿತಿ ವಾ ಅಯಂ ಲೋಕಃ। ಭುವ ಇತ್ಯನ್ತರಿಕ್ಷಮ್। ಸುವರಿತ್ಯಸೌ ಲೋಕಃ। ಮಹ ಇತ್ಯಾದಿತ್ಯಃ। ಆದಿತ್ಯೇನ ವಾವ ಸರ್ವೇ ಲೋಕಾ ಮಹೀ**

1. ಅಧಿಕಾರಕ್ಕೆ ತಕ್ಕಂತೆ ಸಗುಣಬ್ರಹ್ಮದ ಜ್ಞಾನವೋ ನಿರ್ಗುಣ ಬ್ರಹ್ಮದ ಜ್ಞಾನವೋ ಉಂಟಾಗುತ್ತದೆ.

2. ಸಗುಣಬ್ರಹ್ಮವನ್ನು.

**ಯನ್ತೇ। ಭೂರಿತಿ ವಾ ಅಗ್ನಿಃ। ಭುವ ಇತಿ ವಾಯುಃ। ಸುವ ರಿತ್ಯಾದಿತ್ಯಃ। ಮಹ ಇತಿ ಚನ್ದ್ರಮಾಃ। ಚನ್ದ್ರಮಸಾ ವಾವ ಸರ್ವಾಣಿ ಜ್ಯೋತೀಗ್ಂಷಿ ಮಹೀಯನ್ತೇ। ಭೂರಿತಿ ವಾ ಋಚಃ। ಭುವ ಇತಿ ಸಾಮಾನಿ। ಸುವರಿತಿ ಯಜೂಗ್ಂಷಿ। ಮಹ ಇತಿ ಬ್ರಹ್ಮ। ಬ್ರಹ್ಮಣಾ ವಾವ ಸರ್ವೇ ವೇದಾ ಮಹೀ ಯನ್ತೇ। ಭೂರಿತಿ ವೈ ಪ್ರಾಣಃ। ಭುವ ಇತ್ಯಪಾನಃ। ಸುವ ರಿತಿ ವ್ಯಾನಃ। ಮಹ ಇತ್ಯನ್ನಮ್। ಅನ್ನೇನ ವಾವ ಸರ್ವೇ ಪ್ರಾಣಾ ಮಹೀಯನ್ತೇ। ತಾ ವಾ ಏತಾಶ್ಚತಸ್ರಶ್ಚತುರ್ಧಾ। ಚತಸ್ರಶ್ಚತಸ್ರೋ ವ್ಯಾಹೃತಯಃ। ತಾ ಯೋ ವೇದ। ಸ ವೇದ ಬ್ರಹ್ಮ। ಸರ್ವೇಽಸ್ಮೈ ದೇವಾ ಬಲಿಮಾವಹನ್ತಿ ॥ ೩ ॥**

೩. 'ಭೂಃ', 'ಭುವಃ', 'ಸುವಃ' ಎಂಬಿವು ಮೂರು ವ್ಯಾಹೃತಿಗಳಷ್ಟೆ. ಅವುಗಳಿಗೆ ನಾಲ್ಕನೆಯದಾದ ಈ (ವ್ಯಾಹೃತಿಯನ್ನು) ಮಾಹಾಚಮಸ್ಯನು ತಿಳಿದುಕೊಂಡನು. (ಅದು ಯಾವದೆಂದರೆ) 'ಮಹಃ' ಎಂಬುದು. ಅದು ಬ್ರಹ್ಮವು, ಅದು ಆತ್ಮನು. ಉಳಿದ ದೇವತೆಗಳು ಅಂಗಗಳು.

(೧) ಭೂಃ ಎಂಬುದೇ ಈ ಲೋಕವು; ಭುವಃ ಎಂಬುದು ಅಂತರಿಕ್ಷವು; ಸುವಃ ಎಂಬುದು ಆ ಲೋಕವು; ಮಹಃ ಎಂಬುದು ಆದಿತ್ಯನು; ಆದಿತ್ಯನಿಂದಲೇ ಅಲ್ಲವೆ, ಲೋಕಗಳೆಲ್ಲಾ ಮಹತ್ತಾಗುವವು?

(೨) ಭೂಃ ಎಂಬುದೇ ಅಗ್ನಿ; ಭುವಃ ಎಂಬುದು ವಾಯು; ಸುವಃ ಎಂಬುದು ಆದಿತ್ಯ; ಮಹಃ ಎಂಬುದು ಚಂದ್ರನು; ಚಂದ್ರನಿಂದಲೇ ಅಲ್ಲವೆ, ಜ್ಯೋತಿಗಳೆಲ್ಲವೂ ಮಹತ್ತಾಗುವವು?

(೩) ಭೂಃ ಎಂಬುದೇ ಋಕ್ಕುಗಳು; ಭುವಃ ಎಂಬುದು ಸಾಮಗಳು; ಸುವಃ ಎಂಬುದು ಯಜುಸ್ಸುಗಳು; ಮಹಃ ಎಂಬುದು ಬ್ರಹ್ಮ; ಬ್ರಹ್ಮದಿಂದಲೇ ಅಲ್ಲವೆ, ಮಹತ್ತಾಗುವವು?

(೪) ಭೂಃ ಎಂಬುದು ಪ್ರಾಣವು, ಭುವಃ ಎಂಬುದು ಅನ್ನವು. ಅನ್ನದಿಂದಲೇ ಅಲ್ಲವೆ, ಪ್ರಾಣಗಳು ಮಹತ್ತಾಗುವದು?

ಆ ಈ ಪ್ರಸಿದ್ಧವಾದ ನಾಲ್ಕು, ನಾಲ್ಕು ಬಗೆಯಾಗಿರುತ್ತವೆ. ನಾಲ್ಕು ನಾಲ್ಕಾಗಿವೆ (ಈ) ವ್ಯಾಹೃತಿಗಳು. ಅವುಗಳನ್ನು ಯಾವಾತನು ಅರಿಯುತ್ತಾನೋ ಅವನು ಬ್ರಹ್ಮವನ್ನು ಅರಿತುಕೊಂಡವನಾಗುವನು. ದೇವತೆಗಳೆಲ್ಲರೂ ಇವನಿಗೆ ಕಾಣಿಕೆಯನ್ನು ತಂದು ಕೊಡುತ್ತಾರೆ.

# ವ್ಯಾಹೃತಿಗಳ ಸ್ವರೂಪ

(ಭಾಷ್ಯ)

೩೨. ಭೂರ್ಭುವಃ ಸುವರಿತಿ । ಇತಿರುಕ್ತೋಪಪ್ರದರ್ಶನಾರ್ಥಃ । 'ಏತಾಃ ತಿಸ್ರಃ' ಇತಿ ಚ ಪ್ರದರ್ಶಿತಾನಾಂ ಪರಾಮರ್ಶಾರ್ಥಃ । ಪರಾಮೃಷ್ಟಾಃ ಸ್ಮಾರ್ಯನ್ತೇ 'ವಾ' ಇತ್ಯನೇನ । ತಿಸ್ರಃ ಏತಾಃ ಪ್ರಸಿದ್ಧಾಃ ವ್ಯಾಹೃತಯಃ ಸ್ಮಾರ್ಯನ್ತೇ ತಾವತ್ । ತಾಸಾಮ್ ಇಯಂ ಚತುರ್ಥೀ ವ್ಯಾಹೃತಿಃ 'ಮಹಃ' ಇತಿ । ತಾಮ್ ಏತಾಂ ಚತುರ್ಥೀಂ ಮಹಾಚಮಸಸ್ಯ ಅಪತ್ಯಂ ಮಾಹಾಚಮಸ್ಯಃ ಪ್ರವೇದಯತೇ । 'ಉ' 'ಹ' 'ಸ್ಮ' ಇತ್ಯೇತೇಷಾಂ ವೃತ್ತಾನುಕಥನಾರ್ಥತ್ವಾತ್ ವಿದಿತವಾನ್ ದದರ್ಶ ಇತ್ಯರ್ಥಃ । ಮಾಹಾಚಮಸ್ಯಗ್ರಹಣಮ್ ಆರ್ಷಾನುಸ್ಮರಣಾರ್ಥಮ್ । ಋಷ್ಯನುಸ್ಮರಣಮಪಿ ಉಪಾಸನಾಙ್ಗಮಿತಿ ಗಮ್ಯತೇ । ಇಹ ಉಪದೇಶಾತ್ ॥

(ಭಾಷ್ಯಾರ್ಥ)

"ಭೂರ್ಭುವಸ್ಸುವರಿತಿ" ಎಂಬಲ್ಲಿ ಇತಿ ಎಂಬ ಮಾತು ಹೇಳಿದ್ದನ್ನು ಬಿಡಿಸಿ ತಿಳಿಸುವದಕ್ಕೆ; "ಈ ಮೂರು" ಎಂಬ ಮಾತು ತಿಳಿಸಿದ್ದನ್ನು ಪರಾಮರ್ಶಿಸುವದಕ್ಕೆ; 'ವೈ' (ಅಷ್ಟೆ) ಎಂಬ ಮಾತು (ಹಾಗೆ) ಪರಾಮರ್ಶಿಸಿದ್ದನ್ನು ನೆನಪಿಗೆ ತರುತ್ತದೆ.[1] ಈ ಮೂರು ಪ್ರಸಿದ್ಧವಾದ ವ್ಯಾಹೃತಿಗಳನ್ನು ಮೊದಲು ನೆನಪಿಗೆ ತಂದು ಕೊಟ್ಟದ್ದಾಗಿದೆ.[2] ಅವುಗಳಿಗೆ ನಾಲ್ಕನೆಯದು 'ಮಹಃ' ಎಂಬೀ ವ್ಯಾಹೃತಿಯು. ಆ ಈ ನಾಲ್ಕನೆಯ (ವ್ಯಾಹೃತಿಯನ್ನು) ಮಹಾಚಮಸನ ಮಗನಾದ[3] ಮಾಹಾಚಮಸ್ಯನು ತಿಳಿದುಕೊಂಡನು. 'ಉ' 'ಹ' 'ಸ್ಮ' ಎಂಬೀ (ಶಬ್ದಗಳು) ಹಿಂದೆ ನಡೆದದ್ದನ್ನು ತಿಳಿಸುವವಾದ್ದರಿಂದ ಅರಿತುಕೊಂಡನು, ಕಂಡುಹಿಡಿದನು ಎಂದು ಅರ್ಥವನ್ನು (ಮಾಡಬೇಕು).[4] ಮಾಹಾಚಮಸ್ಯನ ಹೆಸರನ್ನು ಹೇಳಿರುವದು ಋಷಿಯನ್ನು ಸ್ಮರಿಸಬೇಕೆಂದು (ತಿಳಿಸುವದಕ್ಕೆ). ಇಲ್ಲಿ (ಹೆಸರನ್ನು) ಉಪದೇಶ

---

1. ಅನುವಾದಮಾಡಿಕೊಂಡಿದೆ ಎಂದರ್ಥ. ಈ ಅರ್ಥವು ಸ್ಮಾರ್ಯನ್ತೇ ಎಂಬ ವಾ॥ ಪಾಠದಲ್ಲಿ ಬರುವದಿಲ್ಲ.

2. ಇವುಗಳನ್ನು ಅನುವಾದಮಾಡಿಕೊಂಡು ನಾಲ್ಕನೆಯ ವ್ಯಾಹೃತಿಯನ್ನು ಹೇಳಿರುತ್ತದೆ ಎಂದರ್ಥ.

3. ಚಮಸವೆಂಬ ಸೋಮಪಾನಪಾತ್ರೆಯನ್ನು ಅನೇಕ ಸೋಮಯಾಗಗಳಲ್ಲಿ ಉಪಯೋಗಿಸುವರು. ಮಹಾಚಮಸನೆಂದರೆ ಅನೇಕ ಸೋಮಯಾಗಗಳನ್ನು ಮಾಡಿದವನು.

4. ಸಂಸ್ಕೃತದಲ್ಲಿ ವರ್ತಮಾನಕ್ರಿಯಾಪದಕ್ಕೆ ಸ್ಮ ಮುಂತಾದ ನಿಪಾತಗಳನ್ನು ಸೇರಿಸಿದರೆ ಕ್ರಿಯೆಯು ಹಿಂದೆ ನಡೆಯಿತು ಎಂಬರ್ಥವು ತೋರುತ್ತದೆ.

ಮಾಡಿರುವದರಿಂದ ಋಷಿಸ್ಮರಣವೂ ಉಪಾಸನೆಗೆ ಒಂದು ಭಾಗವೆಂದು[1] ನಿಶ್ಚಯ ವಾಗುತ್ತದೆ.

## ಮಹಃ ಎಂಬ ವ್ಯಾಹೃತಿ

(ಭಾಷ್ಯ)

೩೩. ಯೇಯಂ ಮಾಹಾಚಮಸ್ಯೇನ ದೃಷ್ಟಾ ವ್ಯಾಹೃತಿಃ ಮಹಃ ಇತಿ ತತ್ ಬ್ರಹ್ಮ । ಮಹದ್ ಹಿ ಬ್ರಹ್ಮ । ಮಹಶ್ಚ ವ್ಯಾಹೃತಿಃ । ಕಿಂ ಪುನಸ್ತತ್? ಸ ಆತ್ಮಾ । ಆಪ್ನೋತೇರ್ವ್ಯಾಪ್ತಿಕರ್ಮಣಃ ಆತ್ಮಾ । ಇತರಾಶ್ಚ ವ್ಯಾಹೃತಯೋ ಲೋಕಾಃ ದೇವಾಃ ವೇದಾಃ ಪ್ರಾಣಾಶ್ಚ ಮಹಃ ಇತ್ಯನೇನ ವ್ಯಾಹೃತ್ಯಾತ್ಮನಾ ಆದಿತ್ಯ ಚನ್ದ್ರಬ್ರಹ್ಮಾನ್ನಭೂತೇನ ವ್ಯಾಪ್ಯನ್ತೇ ಯತಃ । ಅತಃ ಅಙ್ಗಾನಿ ಅವಯವಾಃ ಅನ್ಯಾಃ ದೇವತಾಃ । ದೇವತಾಗ್ರಹಣಮ್ ಉಪಲಕ್ಷಣಾರ್ಥಂ ಲೋಕಾದೀನಾಮ್ । ಮಹಃ ಇತ್ಯೇತಸ್ಯ ವ್ಯಾಹೃತ್ಯಾತ್ಮನೋ ದೇವಲೋಕಾದಯಃ ಸರ್ವೇ ಅವಯವ ಭೂತಾಃ । ಯತ ಆಹ ಆದಿತ್ಯಾದಿಭಿಃ ಲೋಕಾದಯೋ ಮಹೀಯನ್ತ ಇತಿ । ಆತ್ಮನಾ ಹಿ ಅಙ್ಗಾನಿ ಮಹೀಯನ್ತೇ । ಮಹನಂ ವೃದ್ಧಿಃ ಉಪಚಯಃ । ಮಹೀ ಯನ್ತೇ ವರ್ಧನ್ತೇ ಇತ್ಯರ್ಥಃ ॥

(ಭಾಷ್ಯಾರ್ಥ)

ಮಾಹಾಚಮಸ್ಯನು ಕಂಡುಹಿಡಿದ ಯಾವ ಈ ಮಹಃ ಎಂಬ ವ್ಯಾಹೃತಿ ಯುಂಟೋ ಅದು ಬ್ರಹ್ಮವು; ಏಕೆಂದರೆ ಬ್ರಹ್ಮವು ದೊಡ್ಡದು; ವ್ಯಾಹೃತಿಯೂ 'ಮಹಃ' ಎಂಬುದು.[2] ಅದು ಯಾವದು? ಎಂದರೆ ಅದು ಆತ್ಮನು. ಆತ್ಮ ಎಂಬ ಶಬ್ದವು ವ್ಯಾಪಿಸಿಕೊಳ್ಳು ಎಂಬರ್ಥದ ಆಪ್ ಧಾತುವಿನಿಂದ ಬಂದಿರುತ್ತದೆ. (ಆದ್ದ ರಿಂದ ಈ ವ್ಯಾಹೃತಿಯು) ಆತ್ಮನು. ಉಳಿದ ವ್ಯಾಹೃತಿಗಳು–ಎಂದರೆ ಲೋಕಗಳು, ದೇವತೆಗಳು, ವೇದಗಳು, ಪ್ರಾಣಗಳು (ಇವುಗಳ ರೂಪದಲ್ಲಿರುವವು). ಮಹಃ ಎಂಬ ಆದಿತ್ಯ, ಚಂದ್ರ, ಬ್ರಹ್ಮ, ಅನ್ನ–ಇವುಗಳ ರೂಪದಲ್ಲಿರುವ ವ್ಯಾಹೃತಿರೂಪ

---

1. ಕರ್ಮದಲ್ಲಿ ಮಂತ್ರದ ಋಷಿ, ಛಂದಸ್ಸು ಮುಂತಾದವನ್ನು ನೆನಪಿಡುವಂತೆ ಈ ಉಪಾಸನೆಯಲ್ಲಿ ಋಷಿಯ ಹೆಸರನ್ನೂ ನೆನಪಿಡಬೇಕು.

2. ಬ್ರಹ್ಮ ಎಂಬ ಮಾತು ವೃದ್ಧಿ-(ಹೆಚ್ಚಿಗೆಯನ್ನು) ಹೇಳುವ ಬೃಹ್ ಧಾತುವಿನಿಂದ ಹುಟ್ಟಿರುತ್ತದೆ; ಮಹಃ ಎಂಬ ಮಾತೂ ದೊಡ್ಡದೆಂಬ ಅರ್ಥವನ್ನು ಕೊಡುತ್ತದೆ.

ವಾದ ಆತ್ಮನಿಂದ ವ್ಯಾಪಿಸಲ್ಪಟ್ಟಿರುತ್ತವೆ[1]ಯಾದ್ದರಿಂದ (ಮಹಃ ಎಂಬುದು ಆತ್ಮನು).[2] ಆದ್ದರಿಂದ ಉಳಿದ ದೇವತೆಗಳು ಅಂಗಗಳು, ಅವಯುವಗಳು. ದೇವತೆ ಎಂಬ ಮಾತನ್ನು ಉಪಲಕ್ಷಣಕ್ಕಾಗಿ[3] ಹೇಳಿರುತ್ತದೆಯಾದ್ದರಿಂದ ಲೋಕಾದಿಗಳನ್ನೂ (ಇಲ್ಲಿ ತೆಗೆದುಕೊಳ್ಳಬೇಕ). ಮಹಃ ಎಂಬೀ ವ್ಯಾಹೃತ್ಯಾತ್ಮನಿಗೆ ದೇವತೆಗಳು, ಲೋಕಗಳು ಮುಂತಾದವು ಅವಯುವಗಳಾಗಿರುತ್ತವೆ; ಆದ್ದರಿಂದಲೇ ಆದಿತ್ಯಾದಿಗಳಿಂದ ಲೋಕಾದಿಗಳು ಮಹತ್ತಾಗುತ್ತವೆ ಎಂದು (ಶ್ರುತಿಯು) ಹೇಳುತ್ತದೆ. ಆತ್ಮನಿಂದಲೇ ಅಲ್ಲವೆ, ಅಂಗಗಳು ಮಹತ್ತಾಗುತ್ತವೆ? ಮಹತ್ತಾಗುವದೆಂದರೆ ಬೆಳೆಯುವದು ಪುಷ್ಟವಾಗುವದು. ಮಹತ್ತಾಗುತ್ತವೆ ಎಂದರೆ ಬೆಳೆಯುತ್ತವೆ ಎಂದು ಅರ್ಥ.[4]

## ವ್ಯಾಹೃತಿಗಳು ಒಂದೊಂದೂ ನಾಲ್ಕು ಬಗೆ

(ಭಾಷ್ಯ)

೩೪. ಅಯಂ ಲೋಕಃ, ಅಗ್ನಿಃ, ಋಗ್ವೇದಃ, ಪ್ರಾಣಃ ಇತಿ ಪ್ರಥಮಾ ವ್ಯಾಹೃತಿಃ ಭೂಃ ಇತಿ । ಏವಮ್ ಉತ್ತರೋತ್ತರಾ ಏಕ್ಕೈಕಾ ಚತುರ್ಧಾ ಭವತಿ ।[5] ಮಹ ಇತಿ ಬ್ರಹ್ಮ। ಬ್ರಹ್ಮ ಇತ್ಯೋಙ್ಕಾರಃ । ಶಬ್ದಾಧಿಕಾರೇ ಅನ್ಯಸ್ಯ ಅಸಂಭವಾತ್ । ಉಕ್ತಾರ್ಥಮನ್ಯತ್ ॥

---

1. ಲೋಕಾದಿಗಳು ಆದಿತ್ಯಾದಿಗಳಿಂದ ವ್ಯಾಪಿಸಲ್ಪಟ್ಟಿರುತ್ತವೆ.

2. ಮಹಃ ಎಂಬುದು ಬ್ರಹ್ಮವೆಂದೂ ಇತರ ವ್ಯಾಹೃತಿಗಳನ್ನು ವ್ಯಾಪಿಸಿಕೊಂಡಿರುವದೆಂದೂ ಚಿಂತಿಸಬೇಕು ಎಂದರ್ಥ.

3. ಹೆಗ್ಗುರುತಾಗಿ. ಒಂದನ್ನು ಹೇಳಿದರೆ ಮಿಕ್ಕದ್ದನ್ನೂ ಹೇಳಿದಂತೆ ಎಂದು ಸೂಚಿಸುವ ಅಭಿಪ್ರಾಯದಿಂದ.

4. ಮಹತ್ತಾಗುತ್ತವೆ ಎಂದರೆ ಬೆಳೆಯುತ್ತವೆ ಎಂದರ್ಥ. ಆತ್ಮನಿಂದ ಎಂದರೆ ಶರೀರದ ನಡುಭಾಗದಿಂದ ಅವಯುವಗಳೆಲ್ಲವೂ ಪುಷ್ಟಿಯನ್ನು ಪಡೆಯುವಂತೆ ಮಹಃ ಎಂಬ ವ್ಯಾಹೃತಿಯು ಅರ್ಥವಾದ ಆದಿತ್ಯಾದಿಗಳಿಂದ ಲೋಕಾದಿಗಳು ಮಹತ್ತಾಗುತ್ತವೆ ಎಂದಿರುವದರಿಂದ ಮಿಕ್ಕ ವ್ಯಾಹೃತಿಗಳೆಲ್ಲವೂ ಅವಯುವಗಳೆಂದು ಹೇಳಿದಂತಾಯಿತು. ಬರಿಯ ದೇವತೆಗಳು ಮಾತ್ರ ಅವಯುವಗಳೆಂಬುದೇನೂ ಶ್ರುತಿಯ ತಾತ್ಪರ್ಯವಲ್ಲ ಎಂದು ಭಾವ.

5. ಇಲ್ಲಿ "ಏವಂ......ಭವತಿ" ಎಂಬ ವಾಕ್ಯದ ಬದಲು ಅಂತರಿಕ್ಷಂ ವಾಯುಃ ಸಾಮಾನಿ ಅಪಾನಃ ಇತಿ ದ್ವಿತೀಯಾ ವ್ಯಾಹೃತಿಃ ಭುವಃ । ಅಸೌ ಲೋಕಃ ಆದಿತ್ಯಃ ಯಜೂಗ್‌ಂಷಿ ವ್ಯಾನಃ ಇತಿ ತೃತೀಯಾ ವ್ಯಾಹೃತಿಃ ಸುವಃ । ಆದಿತ್ಯಃ ಚನ್ದ್ರಮಾಃ ಬ್ರಹ್ಮ ಅನ್ನಮ್ ಇತಿ ಚತುರ್ಥೀ ವ್ಯಾಹೃತಿಃ ಮಹಃ । ಇತ್ಯೇವಮ್ ಏಕೈಕಾಃ ಚತುರ್ಧಾ ಭವನ್ತಿ ॥ ಎಂಬ ವಾಕ್ಯಗಳು ವಾ॥ಕಾ॥ ಪಾಠದಲ್ಲಿವೆ.

(ಭಾಷ್ಯಾರ್ಥ)

ಈ ಲೋಕವು, ಅಗ್ನಿ, ಋಗ್ವೇದ, ಪ್ರಾಣ–ಎಂದು ಭೂಃ ಎಂಬ ಒಂದನೆಯ ವ್ಯಾಹೃತಿಯು (ನಾಲ್ಕುಬಗೆ) ಹೀಗೆ ಮುಂದುಮುಂದಿನ ಒಂದೊಂದು (ವ್ಯಾಹೃತಿಯೂ) ನಾಲ್ಕುಬಗೆಯಾಗಿರುತ್ತದೆ. "ಮಹ ಇತಿ ಬ್ರಹ್ಮ" ಎಂಬ (ಮೂರನೆಯ ಪರ್ಯಾಯದ ವಾಕ್ಯದಲ್ಲಿ) ಬ್ರಹ್ಮವೆಂದರೆ ಓಂಕಾರವೇ; ಏಕೆಂದರೆ (ಅದು) ಶಬ್ದದ ಪ್ರಕರಣವಾದ್ದರಿಂದ ಮತ್ತೊಂದು (ಅರ್ಥವು) ಅದಕ್ಕೆ ಹೊಂದುವದಿಲ್ಲ. ಉಳಿದ (ಶ್ರುತಿಯ ಭಾಗಕ್ಕೆ) ಅರ್ಥವನ್ನು ಹೇಳಿದಂತಾಗಿದೆ.

(ಭಾಷ್ಯ)

೩೫. "ತಾ ವಾ ಏತಾಶ್ಚತಸ್ರಶ್ಚತುರ್ಧಾ" ಇತಿ । ತಾ ವೈ ಏತಾಃ ಭೂಃ ಭುವಃ ಸುವಃ ಮಹಃ ಇತಿ ಚತಸ್ರಃ ಏಕೈಕಶಃ ಚತುರ್ಧಾ ಚತುಷ್ಪ್ರಕಾರಾಃ । ಧಾಶಬ್ದಃ ಪ್ರಕಾರವಚನಃ । ಚತಸ್ರಶ್ಚತಸ್ರಃ ಸತ್ಯಃ ಚತುರ್ಧಾ ಭವನ್ತಿ ಇತ್ಯರ್ಥಃ । ತಾಸಾಂ ಯಥಾಕ್ಲ್ಪ್ತಾನಾಂ ಪುನರುಪದೇಶಃ ತಥೈವ ಉಪಾಸನನಿಯಮಾರ್ಥಃ ॥

(ಭಾಷ್ಯಾರ್ಥ)

"ಈ ನಾಲ್ಕು ನಾಲ್ಕುಬಗೆ" (ಎಂಬ ವಾಕ್ಯದ ಅರ್ಥವೇನೆಂದರೆ) ಆ ಪ್ರಸಿದ್ಧವಾದ ಭೂಃ ಭುವಃ ಸುವಃ ಎಂಬೀ ನಾಲ್ಕು ಒಂದೊಂದಾಗಿ ನಾಲ್ಕು ನಾಲ್ಕು ಪ್ರಕಾರಗಳಾಗಿವೆ. ಧಾ ಶಬ್ದವು ಪ್ರಕಾರವನ್ನು ಹೇಳುತ್ತದೆ; ನಾಲ್ಕು ನಾಲ್ಕಾಗಿದ್ದು (ಒಂದೊಂದೂ) ನಾಲ್ಕುಬಗೆಯಾಗಿರುತ್ತವೆ ಎಂದರ್ಥ. (ನಾಲ್ಕೆಂದು) ಮೇಲೆ ಕಲ್ಪಿಸಿರುವ ಆ (ವ್ಯಾಹೃತಿಗಳು ನಾಲ್ಕು ನಾಲ್ಕಾಗಿರುವವೆಂದು) ಮತ್ತೆ ಹೇಳಿರುವದು ಹಾಗೆಯೇ ಉಪಾಸನೆಮಾಡಬೇಕೆಂದು ನಿಯಮಮಾಡುವದಕ್ಕೆ.[2]

(ಭಾಷ್ಯ)

೩೬. ತಾಃ ಯಥೋಕ್ತಾಃ ವ್ಯಾಹೃತೀಃ ಯಃ ವೇದ, ಸ ವೇದ ವಿಜಾನಾತಿ । ಕಿಂ ತತ್? ಬ್ರಹ್ಮ । ನನು "ತದ್ಬ್ರಹ್ಮ ಸ ಆತ್ಮಾ" ಇತಿ ಜ್ಞಾತೇ ಬ್ರಹ್ಮಣಿ ನ ವಕ್ತವ್ಯಮ್ ಅವಿಜ್ಞಾತವತ್ "ಸ ವೇದ ಬ್ರಹ್ಮ" ಇತಿ । ನ । ತದ್ವಿಶೇಷವಿವಕ್ಷುತ್ವಾತ್ ಅದೋಷಃ । ಸತ್ಯಂ ವಿಜ್ಞಾತಂ ಚತುರ್ಥವ್ಯಾಹೃತ್ಯಾತ್ಮಾ ಬ್ರಹ್ಮ ಇತಿ। ನ ತು ತದ್ವಿಶೇಷೋ ಹೃದಯಾನ್ತರುಪಲಭ್ಯತ್ವಂ ಮನೋಮಯತ್ವಾದಿಶ್ಚ

---

1. ಒಂದೊಂದು ವ್ಯಾಹೃತಿಯೂ ನಾಲ್ಕು ನಾಲ್ಕು ವಿಧವಾಗಿವೆ; ಅವು ನಾಲ್ಕು ಇರುವದರಿಂದ ಒಟ್ಟು ಹದಿನಾರುಬಗೆಯಾಯಿತು ಎಂದಭಿಪ್ರಾಯ.

2. ವ್ಯಾಹೃತಿಗಳನ್ನು ಹೀಗೆಯೇ ಉಪಾಸನೆ ಮಾಡಬೇಕು ಎಂದು ವಿಧಿಸುವದಕ್ಕೆ.

ಾನ್ತಿಸಮೃದ್ಧಮ್ " ಇತ್ಯೇವಮನ್ತೋ ವಿಶೇಷಣವಿಶೇಷರೂಪೋ ಧರ್ಮ
ಗೋ ವಿಜ್ಞಾಯತೇ ಇತಿ ತದ್ವಿವಕ್ಷು ಹಿ ಶಾಸ್ತ್ರಮ್ ಅವಿಜ್ಞಾತಮಿವ ಬ್ರಹ್ಮ
ತ್ವಾ ಸ ವೇದ ಬ್ರಹ್ಮ ಇತ್ಯಾಹ । ಅತೋ ನ ದೋಷಃ । ಯೋ ಹಿ ವಕ್ಷ್ಯ
ಾಣೇನ ಧರ್ಮಪೂಗೇನ ವಿಶಿಷ್ಟಂ ಬ್ರಹ್ಮ ವೇದ ಸ ವೇದ ಬ್ರಹ್ಮ ಇತ್ಯಭಿಪ್ರಾಯಃ॥

(ಭಾಷ್ಯಾರ್ಥ)

ಈ ಮೇಲೆ ಹೇಳಿದ ವ್ಯಾಹೃತಿಗಳನ್ನು ಯಾವನು ಅರಿತುಕೊಳ್ಳುವನೋ [1]
ವನು ಬ್ರಹ್ಮವನ್ನು ಅರಿತುಕೊಳ್ಳುವನು.

(ಆಕ್ಷೇಪ) :—" ಅದು ಬ್ರಹ್ಮವು, ಅದು ಆತ್ಮನು " ಎಂದು ಬ್ರಹ್ಮವನ್ನು
ರಿತುಕೊಂಡಮೇಲೂ ಅದನ್ನು ಅರಿತುಕೊಂಡಿಲ್ಲವೇನೋ ಎಂಬಂತೆ "ಅವನು ಬ್ರಹ್ಮ
ನ್ನು ಅರಿತುಕೊಳ್ಳುತ್ತಾನೆ " ಎಂದು ಹೇಳಬೇಕಾಗಿಲ್ಲವಲ್ಲ [2] !

(ಪರಿಹಾರ) : ಹಾಗಲ್ಲ. ಅದರ ವಿಶೇಷವನ್ನು ಹೇಳಬೇಕೆಂದಿರುವದ
ದ (ಇಲ್ಲಿ ಪುನರುಕ್ತಿದೋಷವಿಲ್ಲ). ನಾಲ್ಕನೆಯ ವ್ಯಾಹೃತಿಸ್ವರೂಪವೇ ಬ್ರಹ್ಮವು
ದು ತಿಳಿಯಿತು, ನಿಜ. ಆದರೆ ಅದರ ವಿಶೇಷವಾದ ಹೃದಯದ ಒಳಗಡೆ
ಡ.ಕೊಳ್ಳಬೇಕಾಗಿರುವದು, ಮನೋಮಯತ್ವವು—ಮೊದಲಾಗಿ ಶಾಂತಿಸಮೃದ್ಧ
ಗಿ (ಅಮೃತವಾಗಿರುವದು) ಎಂಬವರೆಗಿನ ವಿಶೇಷಣವಿಶೇಷಗಳ ರೂಪವಾದ
ರ್ಮಸಮೂಹವು (ಇನ್ನೂ) ತಿಳಿದುಬಂದಿರುವದಿಲ್ಲ. ಆದ್ದರಿಂದ ಅದನ್ನು ತಿಳಿಸ
ೇಕೆಂದೇ ಶಾಸ್ತ್ರವು. ಬ್ರಹ್ಮವು (ಇನ್ನೂ) ತಿಳಿದಂತಾಗಲಿಲ್ಲವೆಂಬಂತೆ ಭಾವಿಸಿಕೊಂಡು
ಅವನೇ ಬ್ರಹ್ಮವನ್ನು ಅರಿತುಕೊಳ್ಳುವನು" ಎಂದಿದೆ. ಆದ್ದರಿಂದ ದೋಷವಿಲ್ಲ.
ಯಾವನು ಮುಂದೆ ಹೇಳಲಿರುವ ಧರ್ಮಸಮೂಹದಿಂದ ಕೂಡಿರುವ ಬ್ರಹ್ಮವನ್ನು
ರಿತುಕೊಳ್ಳುವನೋ ಅವನೇ ಬ್ರಹ್ಮವನ್ನು ಅರಿತುಕೊಳ್ಳುವನು [3] ಎಂದು
ಭಿಪ್ರಾಯ.

---

1. ಹೀಗೆ ಉಪಾಸನೆಮಾಡುವನೋ.

2. ಮಹಃ ಎಂಬುದನ್ನು ಬ್ರಹ್ಮವೆಂದೂ ಎಲ್ಲಾ ವ್ಯಾಹೃತಿಗಳನ್ನೂ ವ್ಯಾಪಿಸಿಕೊಂಡಿರುವ
ೆಂದೂ ಉಪಾಸನೆಮಾಡಬೇಕೆಂದು ಹೇಳಿಯೇ ಇದೆಯಲ್ಲ! ಎಂದು ಆಕ್ಷೇಪ.

3. ಈ ವ್ಯಾಹೃತಿಗಳನ್ನು ಯಾವನು ಉಪಾಸನೆಮಾಡುವನೋ ಅವನೇ ಮುಂದೆ
ಹೇಳಿರುವ ವಿಶೇಷಣಗಳಿಂದ ಕೂಡಿದ ಬ್ರಹ್ಮವನ್ನು ಸರಿಯಾಗಿ ಉಪಾಸನೆಮಾಡಿದವನಾಗು
ವನು ಎಂದು ವಾಕ್ಯಾರ್ಥವೆಂದು ಅಭಿಪ್ರಾಯ.

## ಐದು ಆರನೆಯ ಅನುವಾಕಗಳಲ್ಲಿ ಒಂದೇ ಉಪಾಸನೆಯನ್ನು ಹೇಳಿದೆ

(ಭಾಷ್ಯ)

೩೭. ಅತಃ ವಕ್ಷ್ಯಮಾಣೇನ ಅನುವಾಕೇನ ಏಕವಾಕ್ಯತಾ ಅಸ್ಯ । ಉಭಯೋರ್ಹಿ ಅನುವಾಕಯೋಃ ಏಕಮ್ ಉಪಾಸನಮ್ । ಲಿಙ್ಗಾಚ್ಚ । "ಭೂರಿತ್ಯಗ್ನೌ ಪ್ರತಿತಿಷ್ಠತಿ" ಇತ್ಯಾದಿಕಂ ಲಿಙ್ಗಮ್ ಉಪಾಸನೈಕತ್ವೇ । ವಿಧಾಯಕಾಭಾವಾಚ್ಚ । ನ ಹಿ 'ವೇದ,' 'ಉಪಾಸಿತವ್ಯಃ' ಇತಿ ವಿಧಾಯಕಃ ಕಶ್ಚಿಚ್ಛಬ್ದೋಽಸ್ತಿ ವ್ಯಾಹೃತ್ಯನುವಾಕೇ । "ತಾ ಯೋ ವೇದ" ಇತಿ ಚ ವಕ್ಷ್ಯಮಾಣಾರ್ಥತ್ವಾತ್ ನೋಪಾಸನಭೇದಕಃ । ವಕ್ಷ್ಯಮಾಣಾರ್ಥತ್ವಂ ಚ ತದ್ವಿಶೇಷವಿವಕ್ಷುತ್ವಾತ್ ಇತ್ಯಾದಿನಾ ಉಕ್ತಮ್ ॥

(ಭಾಷ್ಯಾರ್ಥ)

ಆದ್ದರಿಂದ ಮುಂದೆ ಹೇಳಲಿರುವ ಅನುವಾಕಕ್ಕೂ ಈ (ಅನುವಾಕ)ಕ್ಕೂ ಏಕವಾಕ್ಯತೆ ಇರುತ್ತದೆ. ಏಕೆಂದರೆ ಎರಡು ಅನುವಾಕಗಳಲ್ಲಿಯೂ ಒಂದೇ ಉಪಾಸನೆ (ಯನ್ನೇ ಹೇಳಿ)ರುತ್ತದೆ. ಲಿಂಗದಿಂದಲೂ (ಹೀಗೆಂದು ತಿಳಿಯಬೇಕು) "ಭೂಃ ಎಂಬ ಅಗ್ನಿಯಲ್ಲಿ ನಿಲ್ಲುವನು" ಎಂಬುದೇ ಮುಂತಾದ (ವಚನವು ಈ ಎರಡು ಅನುವಾಕಗಳಲ್ಲಿಯೂ ಹೇಳಿರುವ) ಉಪಾಸನೆಯು ಒಂದೇ ಎಂಬುದಕ್ಕೆ ಲಿಂಗವಾಗಿರುತ್ತದೆ.[1] ವಿಧಾನಮಾಡುವ (ಶಬ್ದವು) ಇಲ್ಲದಿರುವದರಿಂದಲೂ (ಹೀಗೆಂದು ತಿಳಿಯಬೇಕು). 'ವೇದ' (ತಿಳಿಯಬೇಕು), 'ಉಪಾಸಿತವ್ಯಃ' (ಉಪಾಸನೆಮಾಡತಕ್ಕದ್ದು) ಎಂದು (ಮುಂತಾಗಿ) ವಿಧಾನಮಾಡುವ ಯಾವ ಶಬ್ದವೂ (ಈ) ವ್ಯಾಹೃತ್ಯನುವಾಕದಲ್ಲಿರುವದೇ ಇಲ್ಲ.[2] 'ತಾ ಯೋ ವೇದ' ಎಂದು (ವೇದ ಎಂಬ ಶಬ್ದವಿರುವದು) ಮುಂದೆ ಹೇಳುವ (ಉಪಾಸನೆಗೆ ಅಂಗ)ವಾಗಿರುವದರಿಂದ ಅದು ಉಪಾಸನೆಯನ್ನು ಬೇರ್ಪಡಿಸುವ (ಶಬ್ದ)ವಲ್ಲ.[3] ಅದು ಮುಂದಿನ (ಉಪಾಸನೆಗೆ ಅಂಗ)ವೆಂಬುದನ್ನು

---

1. "ತಾ ಯೋ ವೇದ" ಎಂಬ ವಾಕ್ಯದ ಅರ್ಥವು ಬೇರೆ ರೀತಿಯಲ್ಲಿ ಹೊಂದುವದಿಲ್ಲವಾದ್ದರಿಂದ ಎರಡು ಅನುವಾಕಗಳಲ್ಲಿಯೂ ಒಂದೇ ಉಪಾಸನೆಯನ್ನು ಹೇಳಿದೆ ಎಂಬುದು ಮಾತ್ರವಲ್ಲ; ಈ ಅನುವಾಕದಲ್ಲಿ ಹೇಳಿರುವ ಅಗ್ನ್ಯಾದಿಸ್ವರೂಪವನ್ನು ಪಡೆಯುವನೆಂಬುದೂ ಇದಕ್ಕೇ ಒಂದು ಲಿಂಗ, ಗುರುತು.

2. ವಿಧಾನಮಾಡುವ ಶಬ್ದವಿದ್ದರೆ ಇದೇ ಒಂದು ಬೇರೆಯ ಉಪಾಸನೆಯೆಂದಾಗುತ್ತಿತ್ತು.

3. ಹಾಗಿದ್ದರೆ 'ವೇದ' ಎಂಬುದೂ ಈ ಅನುವಾಕಕ್ಕೆ, "ಉಪಾಸ್ವ" ಎಂಬುದು ಮುಂತಾದ ಅನುವಾಕಕ್ಕೆ— ಹೀಗೆ ಎರಡೂ ವಿಧಾಯಕ ಶಬ್ದಗಳಾಗುತ್ತಿದ್ದವು.

"ಆದರ ವಿಶೇಷವನ್ನು ಹೇಳಬೇಕೆಂದಿರುವದರಿಂದ" ಎಂದು ಮುಂತಾದ (ವಾಕ್ಯ) ದಿಂದ ತಿಳಿಸಿಕೊಟ್ಟಿರುತ್ತೇವೆ

## ಅಂಗೋಪಾಸನೆಯ ಫಲ

(ಭಾಷ್ಯ)

೩೮. ಸರ್ವೇ ದೇವಾಃ ಅಸ್ಮೈ ಏವಂ ವಿದುಷೇ ಅಙ್ಗಭೂತಾಃ ಆವಹನ್ತಿ ಆನಯನ್ತಿ ಬಲಿಮ್ । ಸ್ವಾರಾಜ್ಯಪ್ರಾಪ್ತೌ ಸತ್ಯಾಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ದೇವತೆಗಳೆಲ್ಲರೂ ಇವನಿಗೆ ಎಂದರೆ ಹೀಗೆಂದು ಉಪಾಸನೆಮಾಡುವಾತನಿಗೆ ಅಂಗಗಳಾಗಿದ್ದುಕೊಂಡು (ಇವನಿಗೆ) ಸ್ವಾರಾಜ್ಯಪ್ರಾಪ್ತಿಯಾದಾಗ[1] ಕಾಣಿಕೆಯನ್ನು ತಂದುಕೊಡುತ್ತಾನೆ, ತಂದೊದಗಿಸುತ್ತಾರೆ ಎಂದರ್ಥ.

# ೬. ಮಹಃ ಎಂಬ ವ್ಯಾಹೃತಿರೂಪವಾದ ಬ್ರಹ್ಮದ ಉಪಾಸನೆ

## ಸಂಬಂಧ

(ಭಾಷ್ಯ)

೩೯. ಭೂರ್ಭುವಃಸುವಃಸ್ವರೂಪಾ ಮಹಃ ಇತ್ಯೇತಸ್ಯ ವ್ಯಾಹೃತ್ಯಾತ್ಮನೋ ಬ್ರಹ್ಮಣಃ ಅಙ್ಗಾನ್ಯನ್ಯಾ ದೇವತಾಃ ಇತ್ಯುಕ್ತಮ್ । ಯಸ್ಯ ತಾಃ ಅಙ್ಗಭೂತಾಃ ತಸ್ಯ ಏತಸ್ಯ ಬ್ರಹ್ಮಣಃ ಸಾಕ್ಷಾತ್ ಉಪಲಬ್ಧ್ಯರ್ಥಮ್ ಉಪಾಸನಾರ್ಥಂ ಚ ಹೃದಯಾಕಾಶಃ ಸ್ಥಾನಮುಚ್ಯತೇ ಶಾಲಗ್ರಾಮ ಇವ ವಿಷ್ಣೋಃ । ತಸ್ಮಿನ್ ಹಿ ತದ್ ಬ್ರಹ್ಮ ಉಪಾಸ್ಯಮಾನ್ಯಂ ಮನೋಮಯತ್ವಾದಿ ಧರ್ಮವಿಶಿಷ್ಟಂ ಸಾಕ್ಷಾತ್ ಉಪಲಭ್ಯತೇ ಪಾಣಾವಿವ ಆಮಲಕಮ್ । ಮಾರ್ಗಶ್ಚ ಸರ್ವಾತ್ಮಭಾವಪ್ರತಿಪತ್ತಯೇ ವಕ್ತವ್ಯಃ ಇತ್ಯನುವಾಕಃ ಆರಭ್ಯತೇ ॥

---

1. ಸ್ವಾರಾಜ್ಯವೆಂದರೆ ಬ್ರಹ್ಮಸಮಾನವಾದ ಐಶ್ವರ್ಯವು ಸೂ.ಭಾ ೩-೪-೨೧ ; ಆದನ್ನು ಪಡೆದಾಗ ಇತರ ದೇವತೆಗಳು ಈಶ್ವರನಂತೆಯೇ ಇವನನ್ನು ಸೇವೆಮಾಡುವರು, ಮುಂದಿ ಅನುವಾಕದಲ್ಲಿ ಹೇಳಿರುವ ಉಪಾಸನೆಗೆ ಬ್ರಹ್ಮಪ್ರಾಪ್ತಿಯೇ ಫಲವಾದ್ದನಂದ ದೇವತೋಪಾಸ್ಯತ್ವವೂ ಉಪಾಸಕನಿಗೆ ದೊರೆಯುವದು.

(ಭಾಷ್ಯಾರ್ಥ)

ಭೂಃ ಭುವಃ ಸುವಃ ಎಂಬ (ವ್ಯಾಹೃತಿಗಳ) ರೂಪದ ಮಿಕ್ಕ ದೇವತೆಗಳು ಮಹಃ ಎಂಬೀ ವ್ಯಾಹೃತಿಯ-ರೂಪವಾದ ಬ್ರಹ್ಮಕ್ಕೆ ಅಂಗಗಳಾಗಿರುತ್ತಾರೆ ಎಂದು ಹೇಳಿದ್ದಾಯಿತು. ಯಾವ (ಬ್ರಹ್ಮಕ್ಕೆ) ಅವರು ಅಂಗವಾಗಿರುತ್ತಾರೋ ಆ ಈ ಬ್ರಹ್ಮವನ್ನು ನೇರಾಗಿ ಕಂಡುಕೊಳ್ಳುವದಕ್ಕೂ ಉಪಾಸನೆಮಾಡುವದಕ್ಕೂ[2] ವಿಷ್ಣುವಿಗೆ ಸಾಲಿಗ್ರಾಮದಂತೆ (ಇರುವ) ಹೃದಯಾಕಾಶವೆಂಬ ಸ್ಥಾನವನ್ನು ಈಗ ಹೇಳಲಾಗುತ್ತದೆ. ಏಕೆಂದರೆ ಆ ಬ್ರಹ್ಮವನ್ನು ಅಲ್ಲಿ ಉಪಾಸನೆಮಾಡಿದರೆ ಮನೋಮಯತ್ವಾದಿಗಳಿಂದ ಕೂಡಿದ್ದಾಗಿ ಅಂಗೈನೆಲ್ಲಿಯಂತೆ ನೇರಾಗಿ ಕಾಣಬರುತ್ತದೆ. ಮತ್ತು ಸರ್ವಾತ್ಮಭಾವವನ್ನು ಪಡೆದುಕೊಳ್ಳುವದಕ್ಕೆ ಮಾರ್ಗವನ್ನೂ[1] ಹೇಳಬೇಕಾಗಿದೆ. ಆದ್ದರಿಂದ ಈ ಅನುವಾಕವನ್ನು ಪ್ರಾರಂಭಿಸಿದೆ.

**ಸ ಯ ಏಷೋಽನ್ತರ್ಹೃದಯ ಆಕಾಶಃ । ತಸ್ಮಿನ್ನಯಂ ಪುರುಷೋ ಮನೋಮಯಃ । ಅಮೃತೋ ಹಿರಣ್ಮಯಃ । ಅನ್ತರೇಣ ತಾಲುಕೇ । ಯ ಏಷ ಸ್ತನ ಇವಾವಲಮ್ಬತೇ । ಸೇನ್ದ್ರಯೋನಿಃ । ಯತ್ರಾಸೌ ಕೇಶಾನ್ತೋ ವಿವರ್ತತೇ । ವ್ಯಪೋಹ್ಯ ಶೀರ್ಷಕಪಾಲೇ । ಭೂರಿತ್ಯಗ್ನೌ ಪ್ರತಿತಿಷ್ಠತಿ । ಭುವ ಇತಿ ವಾಯೌ । ಸುವರಿತ್ಯಾದಿತ್ಯೇ । ಮಹ ಇತಿ ಬ್ರಹ್ಮಣಿ । ಆಪ್ನೋತಿ ಸ್ವಾರಾಜ್ಯಮ್ । ಆಪ್ನೋತಿ ಮನಸಸ್ಪತಿಮ್ । ವಾಕ್ಪತಿಶ್ಚಕ್ಷುಷ್ಪತಿಃ । ಶ್ರೋತ್ರಪತಿರ್ವಿಜ್ಞಾನಪತಿಃ । ಏತತ್ ತತೋ ಭವತಿ । ಆಕಾಶಶರೀರಂ ಬ್ರಹ್ಮ । ಸತ್ಯಾತ್ಮ ಪ್ರಾಣಾರಾಮಂ ಮನಆನನ್ದಮ್ । ಶಾನ್ತಿಸಮೃದ್ಧಮಮೃತಮ್ । ಇತಿ ಪ್ರಾಚೀನಯೋಗ್ಯೋಪಾಸ್ಸ್ವ ॥ ೬ ॥**

೬. ಹೃದಯದ ಒಳಗೆ ಯಾವ ಈ ಆಕಾಶವಿದೆಯೋ ಅದರಲ್ಲಿ ಆ ಈ ಮನೋಮಯನಾದ, ಅಮೃತನಾದ, ಹಿರಣ್ಮಯನಾದ ಪುರುಷನು (ಇರುವನು.) ಎರಡು ದವಡೆಗಳ ನಡುವೆ, ಯಾವ ಇದು ಸ್ತನದಂತೆ

---

1. ಉಪಾಸನೆಯ ಬಲದಿಂದ ತಾನೇ ಬ್ರಹ್ಮವೆಂಬ ಸಾಕ್ಷಾತ್ಕಾರವನ್ನು ಪಡೆಯುವದಕ್ಕೆ ಸೂ. ಭಾ. ೩-೩-೨೯.

2. ಸ್ಥಾನ, ವಿಶೇಷಣಗಳು_ಇದೇ ಅಲ್ಲದೆ ಉಪಾಸಕನು ಬ್ರಹ್ಮಲೋಕದ ಮಾರ್ಗವನ್ನು ಚಿಂತಿಸಬೇಕು. ಸೂ. ಭಾ. ೪-೨-೧೭.

ನೇತಾಡುತ್ತಿರುವದೋ ಇದರ ನಡುವೆ, ಎಲ್ಲಿ ಈ ಕೂದಲುಗಳ ಕೊನೆಯು ಇಬ್ಬಗೆಯಾಗಿರುವದೋ (ಅಲ್ಲಿ) ತಲೆಬುರುಡೆಯ ಕಪಾಲಗಳನ್ನು ಒಡೆದು ಕೊಂಡು (ಹೊರಟಿರುವದಲ್ಲ) ಅದೇ ಇಂದ್ರನ ಯೋನಿಯು. ಭೂಃ ಎಂಬ ಅಗ್ನಿಯಲ್ಲಿ ನಿಲ್ಲುವನು; ಭುವಃ ಎಂಬ ವಾಯುವಿನಲ್ಲಿ, ಸುವಃ ಎಂಬ ಆದಿತ್ಯನಲ್ಲಿ, ಮಹಃ ಎಂಬ ಬ್ರಹ್ಮದಲ್ಲಿ (ನಿಲ್ಲುವನು). ಸ್ವಾರಾಜ್ಯವನ್ನು ಪಡೆದುಕೊಳ್ಳುವನು, ಮನಸ್ಸುಗಳ ಒಡೆಯನನ್ನು ಪಡೆದುಕೊಳ್ಳುವನು, ವಾಕ್ಕುಗಳಿಗೆ ಒಡೆಯನು, ಚಕ್ಷುಸ್ಸುಗಳಿಗೆ ಒಡೆಯನು, ಶ್ರೋತ್ರಗಳಿಗೆ ಒಡೆಯನು, ವಿಜ್ಞಾನಗಳಿಗೆ ಒಡೆಯನು. ಅದಕ್ಕಿಂತಲೂ (ಹೆಚ್ಚಿನ) ಇದೂ ಆಗುವನು, ಆಕಾಶಶರೀರವಾಗಿರುವ, ಸತ್ಯಾತ್ಮವಾದ, ಪ್ರಾಣಾರಾಮವಾದ, ಮನ ಆನಂದವಾಗಿರುವ, ಶಾಂತಿಸಮೃದ್ಧವಾಗಿರುವ, ಅಮೃತವಾಗಿರುವ (ಬ್ರಹ್ಮವು). ಹೀಗೆಂದು ಎಲೈ ಪ್ರಾಚೀನಯೋಗ್ಯನೆ, ಉಪಾಸನೆ ಮಾಡು.

## ಹೃದಯಾಕಾಶದಲ್ಲಿರುವ ಬ್ರಹ್ಮ

(ಭಾಷ್ಯ)

೪೦. 'ಸಃ' ಇತಿ ವ್ಯುತ್ಕ್ರಮ್ಯ "ಅಯಂ ಪುರುಷಃ" ಇತ್ಯನೇನ ಸಂಬಧ್ಯತೇ । ಯ ಏಷಃ ಅನ್ತರ್ಹೃದಯೇ ಹೃದಯಸ್ಯಾನ್ತಃ । ಹೃದಯಮ್ ಇತಿ ಪುಣ್ಡರೀಕಾಕಾರೋ ಮಾಂಸಪಿಣ್ಡಃ ಪ್ರಾಣಾಯತನಃ ಅನೇಕನಾಡೀಸುಷಿರಃ, ಊರ್ಧ್ವನಾಲಃ, ಅಧೋಮುಖಃ, ವಿಶಸ್ಯಮಾನೇ ಪಶೌ ಪ್ರಸಿದ್ಧಃ ಉಪಲಭ್ಯತೇ । ತಸ್ಯ ಅನ್ತಃ ಯ ಏಷ ಆಕಾಶಃ ಪ್ರಸಿದ್ಧ ಏವ ಕರಕಾಕಾಶವತ್ । ತಸ್ಮಿನ್ ಸೋಽಯಂ ಪುರುಷಃ ಪುರಿ ಶಯನಾತ್, ಪೂರ್ಣಾ ವಾ ಭೂರಾದಯೋ ಲೋಕಾಃ ಯೇನ, ಇತಿ ಪುರುಷಃ । ಮನೋಮಯಃ । ಮನಃ ವಿಜ್ಞಾನಮ್ । ಮನುತೇ ಜ್ಞಾನಕರ್ಮಣಃ । ತನ್ಮಯಃ ತತ್ಪ್ರಾಯಃ ।[1] ತದುಪಲಭ್ಯತ್ವಾತ್ । ಮನುತೇ ಽನೇನ ಇತಿ ವಾ ಮನಃ ಅನ್ತಃಕರಣಮ್ । ತದಭಿಮಾನೀ ತನ್ಮಯಃ । ತಲ್ಲಿಙ್ಗೋ ವಾ । ಅಮೃತಃ ಅಮರಣಧರ್ಮಾ । ಹಿರಣ್ಮಯಃ ಜ್ಯೋತಿರ್ಮಯಃ ॥

(ಭಾಷ್ಯಾರ್ಥ)

ಸಃ (ಅ) ಎಂಬ (ಮಾತನ್ನು) ಕ್ರಮತಪ್ಪಿಸಿ 'ಅಯಂ ಪುರುಷಃ' (ಈ ಪುರುಷನು) ಎಂಬುದಕ್ಕೆ ಸಂಬಂಧಿಸಿಕೊಳ್ಳಬೇಕು. ಹೃದಯದೊಳಗೆ ಎಂದರೆ ಹೃದಯದೊಳಗಡೆಯಲ್ಲಿ. ಹೃದಯವೆಂದರೆ ಕಮಲದ ಆಕಾರವುಳ್ಳದ್ದಾಗಿ, ಪ್ರಾಣಕ್ಕೆ ಆಶ್ರಯ

---

1. ಈ ಮಾತು ವಾ॥ಕಾ॥ ಪಾಠಗಳಲ್ಲಿ ಮಾತ್ರ ಇದೆ.

ವಾಗಿ, ಅನೇಕ ನಾಡಿಗಳಿಂದಲೂ ರಂಧ್ರಗಳಿಂದಲೂ ಕೂಡಿದ್ದಾಗಿ ಮೇಲ್ಗಡೆಗೆ ನಾಳ ಕೆಳಗಡೆಗೆ ಮುಖ ಇರುವದಾಗಿ ಯಜ್ಞದ ಪಶುವನ್ನು ಕೊಯ್ಯುವಾಗ ಪ್ರಸಿದ್ಧವಾಗಿ ಕಾಣುವ ಮಾಂಸಪಿಂಡವು. ಅದರ ಒಳಗಡೆಯಲ್ಲಿ ಯಾವ ಈ ಆಕಾಶವಿದೆಯೋ, ಕಮಂಡಲುವಿನೊಳಗಿನ ಆಕಾಶದಂತೆ ಪ್ರಸಿದ್ಧವಾದ[1] (ಯಾವ ಆಕಾಶವಿದೆಯೋ) ಅದರಲ್ಲಿ ಆ ಈ ಪುರುಷನು (ಇರುವನು). **ಪುರದಲ್ಲಿ ಇರುವದರಿಂದ, ಅಥವಾ ಭೂಃ ಮುಂತಾದ ಲೋಕಗಳು ಯಾವನಿಂದ ಪೂರ್ಣವಾಗಿರುವವೋ ಅವನಾದ್ದರಿಂದ, (ಇವನು) ಪುರುಷನೆನಿಸುವನು,**[2] (ಇವನು) ಮನೋಮಯನು, ಮನಸ್ಸೆಂದರೆ ವಿಜ್ಞಾನವು; ಅರಿಯುವದು ಎಂಬರ್ಥದ ಮನ್ ಧಾತುವಿನಿಂದ (ಈ ಶಬ್ದರೂಪವಾಗಿರುತ್ತದೆ). ತನ್ಮಯನಾಗಿರುತ್ತಾನೆ, ಎಂದರೆ ಅದರಿಂದ ಕಾಣಬರುತ್ತಾನೆ.[3] ಅಥವಾ ಯಾವದರಿಂದ ತಿಳಿದುಕೊಳ್ಳುವರೋ (ಆ) ಅಂತಃಕರಣಕ್ಕೆ ಮನಸ್ಸು ಎಂದು (ಇಲ್ಲಿ ಹೆಸರು); ಆ (ಅಂತಃಕರಣಕ್ಕೆ) ಅಭಿಮಾನಿಯಾಗಿರುತ್ತಾನಾದ್ದರಿಂದ[4] ಅಥವಾ ಆ (ಅಂತಃಕರಣವೆಂಬ) ಗುರುತುಳ್ಳವನಾದ್ದರಿಂದ[5] (ಮನೋಮಯನು).[6] ಅಮೃತನಾಗಿರುತ್ತಾನೆ, ಎಂದರೆ ಸಾವಿಲ್ಲದ್ದೆಂಬ ಧರ್ಮವುಳ್ಳವನು.[7] ಹಿರಣ್ಮಯನು ಎಂದರೆ ಜ್ಯೋತಿರ್ಮಯನು.[8]

---

1. ಮಹಃ ಎಂದರೆ ಬ್ರಹ್ಮವು ಎಂದು ಪರೋಕ್ಷವಾಗಿ ಹೇಳಿದ್ದ ಪುರುಷನು ಹೃದಯದಲ್ಲಿರುವ ಈ ಪುರುಷನೇ ಎಂದರ್ಥ.

2. ಶರೀರದಲ್ಲಿರುವ ಹೃದಯದಲ್ಲಿ ಉಪಾಸ್ಯನಾಗಿರುವದರಿಂದ ಅಥವಾ ಆದಿತ್ಯರೂಪದಿಂದ ಸರ್ವ ಲೋಕಗಳನ್ನೂ ತುಂಬಿಕೊಂಡಿರುವನೆಂದು ಚಿಂತಿಸಬೇಕೆಂದು ಹಿಂದಿನ ಅನುವಾಕದಲ್ಲಿ ಹೇಳಿದವನಾದ್ದರಿಂದ ಇವನು ಪುರುಷನು.

3. ಮನ-ಜ್ಞಾನೇ ಎಂಬ ಧಾತುವಿನಿಂದ ಮನಃ ಎಂಬ ಶಬ್ದವಾಗಿದೆ; ಜ್ಞಾನದಿಂದ ಎಂದರೆ ಉಪಾಸನೆಯಿಂದ ಸಾಕ್ಷಾತ್ಕಾರವಾಗುತ್ತಾನೆ.

4. ಅಪರಬ್ರಹ್ಮವಾದ ಹಿರಣ್ಯಗರ್ಭನು ಸಮಷ್ಟಿಯಾದ ಅಂತಃಕರಣಕ್ಕೆ ಅಭಿಮಾನಿ; ಅವನನ್ನೇ ಇಲ್ಲಿ ವ್ಯಾಪೃತ್ಯಾತ್ಮನಾಗಿ ಉಪಾಸನೆಮಾಡಬೇಕೆಂದು ಹೇಳಿರುವದು. ಬೃ. ೫-೫, ೩-೪ ; ೫-೬-೧ ನೋಡಿ.

5. ಅಂತಃಕರಣದ ವ್ಯಾಪಾರಕ್ಕೆ ಆಶ್ರಯವಾಗಿರುವ ತನ್ನ ಆತ್ಮನು ಹಿರಣ್ಯಗರ್ಭನೇ ಎಂದು ಅಂತಃಕರಣದ ಗುರುತಿನಿಂದ ಉಪಾಸ್ಯನಾದವನು.

6. ಪರಮೇಶ್ವರನನ್ನು ಮನೋಮಯನೆನ್ನಬಹುದೆ ? ಎಂಬುದನ್ನು ಸೂ. ಭಾ. ೧-೨-೨ ರಲ್ಲಿ ಚರ್ಚಿಸಿದೆ.

7. ಹಿರಣ್ಯಗರ್ಭನು ಕಲ್ಪಾಂತಸ್ಥಾಯಿಯಾದ್ದರಿಂದ ಇತರಾಪೇಕ್ಷೆಯಿಂದ ಅಮೃತನು.

8. ಪರಮೇಶ್ವರನನ್ನು ಹಿರಣ್ಮಯನೆನ್ನಬಹುದೆ ? ಎಂಬುದನ್ನು ಸೂ. ಭಾ. ೧-೧-೨೦ ರಲ್ಲಿ ಚರ್ಚಿಸಿದೆ.

# ಬ್ರಹ್ಮಪ್ರಾಪ್ತಿಗೆ ದಾರಿ

(ಭಾಷ್ಯ)

೪೧. ತಸ್ಯ ಏವಂಲಕ್ಷಣಸ್ಯ ಹೃದಯಾಕಾಶೇ ಸಾಕ್ಷಾತ್ಕೃತಸ್ಯ ವಿದುಷಃ ಆತ್ಮಭೂತಸ್ಯ ಇನ್ದ್ರಸ್ಯ ಈಶ್ವರರೂಪಸ್ಯ[1] ಪ್ರತಿಪತ್ತಯೇ ಮಾರ್ಗಃ ಅಭಿಧೀಯತೇ—

(ಭಾಷ್ಯಾರ್ಥ)

ಆ ಈ ಲಕ್ಷಣದ,[2] ಹೃದಯಾಕಾಶದಲ್ಲಿ ಸಾಕ್ಷಾತ್ಕಾರವಾಗಿ ಉಪಾಸಕನ ಸ್ವರೂಪವೇ ಆಗಿರುವ ಇಂದ್ರನ ಈಶ್ವರರೂಪವನ್ನು ಹೊಂದುವದಕ್ಕೆ ಮಾರ್ಗವನ್ನು[3] ಈಗ ಹೇಳಲಾಗುತ್ತದೆ.

(ಭಾಷ್ಯ)

೪೨. ಹೃದಯಾತ್ ಊರ್ಧ್ವಂ ಪ್ರವೃತ್ತಾ ಸುಷುಮ್ನಾ ನಾಮ ನಾಡೀ **ಯೋಗಶಾಸ್ತ್ರೇಷು** ಚ ಪ್ರಸಿದ್ಧಾ । ಸಾ ಚ ಅನ್ತರೇಣ ಮಧ್ಯೇ ಪ್ರಸಿದ್ಧೇ ತಾಲುಕೇ ತಾಲುಕಯೋಃ ಗತಾ । ಯಶ್ಚ ಏಷ ತಾಲುಕಯೋಃ ಮಧ್ಯೇ ಸ್ತನ ಇವ **ಅವಲಮ್ಬತೇ** ಮಾಂಸಪಿಣ್ಡಃ, ತಸ್ಯ ಚ ಅನ್ತರೇಣ ಇತ್ಯೇತತ್ । ಯತ್ರ ಚ ಕೇಶಾನ್ತಃ। ಕೇಶಾನಾಮ್ ಅನ್ತಃ, ಅವಸಾನಂ ಮೂಲಂ ಕೇಶಾನ್ತಃ ವಿವರ್ತತೇ ವಿಭಾಗೇನ ವರ್ತತೇ । ಮೂರ್ಧಪ್ರದೇಶಃ ಇತ್ಯರ್ಥಃ । ತಂ ದೇಶಂ ಪ್ರಾಪ್ಯ ತೇನ ಅನ್ತರೇಣ ತತ್ರ ವಿನಿಃಸೃತಾ । ವ್ಯಪೋಹ್ಯ ವಿಭಜ್ಯ ವಿದಾರ್ಯ ಶೀರ್ಷಕಪಾಲೇ ಶಿರಃಕಪಾಲೇ ವಿನಿರ್ಗತಾ ಯಾ ಸಾ ಇನ್ದ್ರಸ್ಯ ಬ್ರಹ್ಮಣೋ ಯೋನಿಃ ಮಾರ್ಗಃ ಸ್ವರೂಪಪ್ರತಿಪತ್ತಿದ್ವಾರಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ಹೃದಯದಿಂದ ಮೇಲಕ್ಕೆ ಹಾಯ್ದಿರುವ **ಸುಷುಮ್ನಾ**[4] ಎಂಬ ನಾಡಿಯುಂಟು,

---

1. "ಈಶ್ವರರೂಪಸ್ಯ" ಎಂಬುದು ವಾ॥ ಪಾಠ. "ಈಶ್ವರಸ್ವರೂಪಪ್ರತಿಪತ್ತಯೇ" ಎಂಬ ಆ॥ ಪಾಠದಲ್ಲಿ "ಇಂಥ ಸ್ವರೂಪವನ್ನು ಪಡೆದುಕೊಳ್ಳುವದಕ್ಕಾಗಿ" ಎಂದು ಕನ್ನಡಿಸಬೇಕು.

2. ಹೃದಯಸ್ಥಾನವುಳ್ಳವನು, ಮನೋಮಯನು, ಅಮೃತನು, ಹಿರಣ್ಮಯನು—ಎಂಬ ವಿಶೇಷಣದ.

3. ನಾನೇ ಬ್ರಹ್ಮವೆಂದು ಸಾಕ್ಷಾತ್ಕಾರಮಾಡಿಕೊಂಡಬಳಿಕ ಮರಣಕಾಲದಲ್ಲಿ ಈ ಮಾರ್ಗದಿಂದ ಹೋಗಿ ಫಲವನ್ನು ಪಡೆಯಬೇಕೆಂಬ ನಿಯಮವುಂಟು. ಸೂ.ಭಾ. ೪-೩-೧೭.

4. ಸುಷುಮ್ನಾನಾಡಿಯ ವಿಷಯಕ್ಕೆ ಕ.ಭಾ. ೨-೩-೧೬, ಪ್ರ.ಭಾ. ೩-೭, ಛಾ.ಭಾ. ೮-೬-೬ ಇವುಗಳನ್ನು ನೋಡಿರಿ. ಈ ನಾಡಿಯು ಮನೋಮಯವಾದದ್ದು, ಕಣ್ಣಿಗೆ ಕಾಣುವದಿಲ್ಲ.

(ಅದು) **ಯೋಗಶಾಸ್ತ್ರಗಳಲ್ಲಿಯೂ** ಪ್ರಸಿದ್ಧವಾಗಿರುತ್ತದೆ. ಅದು ಪ್ರಸಿದ್ಧವಾದ ದವಡೆಗಳ (ತಾಲುಕೇ=ತಾಲುಕಯೋಃ) ಅಂತರದಿಂದ ಎಂದರೆ ನಡುವೆಯಿಂದ (ಹೊರಟು) ಹೋಗಿರುತ್ತದೆ. ದವಡೆಗಳ ನಡುವೆ ಮೊಲೆಯಂತಿರುವ ಯಾವ ಜೋಲಾಡುತ್ತಿರುವ ಮಾಂಸಖಂಡವಿರುವದೋ ಅದರ ನಡುವೆಯೂ ಎಂದರ್ಥ. ಮತ್ತು ಕೇಶಾಂತವು ಎಂದರೆ ಕೂದಲುಗಳ ಅಂತವು, ಕೊನೆಗಾಣುವ (ಸ್ಥಲವು), ಬುಡವು, ಇಬ್ಬಗೆಯಾಗಿರುವದೋ[1] ಎಂದರೆ ಮೂರ್ಧಪ್ರದೇಶವು ಎಂದರ್ಥ. ಆ ಸ್ಥಲವನ್ನು ಸೇರಿ ಆ ನಡುವೆಯಿಂದ ಅಲ್ಲಿಂದ ಮುಂದಕ್ಕೆ ಹೊರಟಿರುತ್ತದೆ. ತಲೆ ಬುರುಡೆಯ ಕಪಾಲಗಳನ್ನು, ತಲೆಬುರುಡೆಯ (ಎರಡು) ಹೋಳುಗಳನ್ನು ಒಡೆದು ಕೊಂಡು ವಿಂಗಡಿಸಿಕೊಂಡು ಸೀಳಿಕೊಂಡು ಹೊರಟಿರುವದೋ ಆ (ಸುಷುಮ್ನೆಯು) ಇಂದ್ರಯೋನಿಯು. **ಇಂದ್ರನ** ಎಂದರೆ ಬ್ರಹ್ಮದ ಯೋನಿಯು, ಸ್ವರೂಪವನ್ನು ಪಡೆದುಕೊಳ್ಳುವದಕ್ಕೆ ಬಾಗಿಲು[2] ಎಂದರ್ಥ.

## ಉಪಾಸನೆಯ ಫಲ

(ಭಾಷ್ಯ)

೪೩. ತಯಾ ಏವಂವಿದ್ವಾನ್ ಮನೋಮಯಾತ್ಮದರ್ಶೀ ಮೂರ್ಧ್ನೋ ವಿನಿಷ್ಕ್ರಮ್ಯ ಅಸ್ಯ ಲೋಕಸ್ಯ ಅಧಿಷ್ಠಾತಾ ಭೂಃ ಇತಿ ವ್ಯಾಹೃತಿರೂಪೋ ಯೋಽಗ್ನಿಃ ಮಹತೋ ಬ್ರಹ್ಮಣೋಽಙ್ಗಭೂತಃ ತಸ್ಮಿನ್ ಅಗ್ನೌ ಪ್ರತಿತಿಷ್ಠತಿ ಅಗ್ನ್ಯಾತ್ಮನಾ ಇಮಂ ಲೋಕಂ ವ್ಯಾಪ್ನೋತಿ ಇತ್ಯರ್ಥಃ। ತಥಾ ಭುವಃ ಇತಿ ದ್ವಿತೀಯವ್ಯಾಹೃತ್ಯಾತ್ಮನಿ ವಾಯೌ। ಪ್ರತಿತಿಷ್ಠತಿ ಇತ್ಯನುವರ್ತತೇ। ಸುವಃ ಇತಿ ತೃತೀಯವ್ಯಾಹೃತ್ಯಾತ್ಮನಿ ಆದಿತ್ಯೇ। ಮಹಃ ಇತಿ ಅಙ್ಗಿನಿ ಚತುರ್ಥವ್ಯಾಹೃತ್ಯಾತ್ಮನಿ ಬ್ರಹ್ಮಣಿ ಪ್ರತಿತಿಷ್ಠತಿ। ತೇಷು ಆತ್ಮಭಾವೇನ ಸ್ಥಿತ್ವಾ ಆಪ್ನೋತಿ ಬ್ರಹ್ಮಭೂತಃ ಸ್ವಾರಾಜ್ಯಮ್ ಸ್ವರಾಡ್ಭಾವಮ್। ಸ್ವಯಮೇವ ರಾಜಾ ಅಧಿಪತಿರ್ಭವತಿ ಅಙ್ಗಭೂತಾನಾಂ ದೇವಾನಾಂ

1. ಐ. ಉಪನಿಷತ್ತಿನಲ್ಲಿ "ಸೀಮಾನಂ ವಿದಾರ್ಯ" ಎಂದು ವರ್ಣಿಸಿರುವದು ಇದನ್ನೇ.

2. ಸಾಯುವಕಾಲದಲ್ಲಿ ಉಪಾಸಕನಿಗೆ ಈ ನಾಡಿಯ ಮಾರ್ಗವು ದೊರೆತು **ದೇವಯಾನ**ವೆಂಬ ಮಾರ್ಗದಮೂಲಕ ಅಪರಬ್ರಹ್ಮಪ್ರಾಪ್ತಿಯಾಗುವದೆಂದು ಉಪನಿಷತ್ತುಗಳಲ್ಲಿ ವರ್ಣಿಸಿದೆ. ನಾನು ಬ್ರಹ್ಮವು ಎಂದು ಉಪಾಸನೆಮಾಡುವವರಿಗೆಲ್ಲ ಈ ಮಾರ್ಗವು ದೊರೆಯುವದೆಂದು ಬ್ರ.ಸೂ. ೪-೩-೧ರಲ್ಲಿ ನಿರ್ಣಯಮಾಡಿರುತ್ತದೆ. ಈ ಮಾರ್ಗದ ವರ್ಣನೆಯನ್ನೂ ಅದರ ವಿಷಯವಾದ ಚರ್ಚೆಯನ್ನೂ ಬ್ರ.ಸೂ. **೪-೩-೨ ರಿಂದ ೬ ರವರೆಗಿನ ಸೂತ್ರಗಳಲ್ಲಿ ಕಾಣಬಹುದು.**

ಯಥಾ ಬ್ರಹ್ಮ। ದೇವಾಶ್ಚ ಸರ್ವೇ ಅಸ್ಮೈ ಬಲಿಮ್ ಆವಹನ್ತಿ ಅಙ್ಗಭೂತಾಃ ಯಥಾ ಬ್ರಹ್ಮಣಿ। ಆಪ್ನೋತಿ ಮನಸಸ್ಪತಿಮ್। ಸರ್ವೇಷಾಂ ಹಿ ಮನಸಾಂ ಪತಿಃ। ಸರ್ವಾತ್ಮಕತ್ವಾತ್ ಬ್ರಹ್ಮಣಃ। ಸರ್ವೈರ್ಹಿ ಮನೋಭಿಃ ತನ್ಮನುತೇ। ತದಾಪ್ನೋತಿ ಏವಂವಿದ್ವಾನ್। ಕಿಂ ಚ ವಾಕ್ಪತಿಃ ಸರ್ವಾಸಾಂ ವಾಚಾಂ ಪತಿರ್ಭವತಿ। ತಥೈವ ಚಕ್ಷುಷ್ಪತಿಃ ಚಕ್ಷುಷಾಂ ಪತಿಃ। ಶ್ರೋತ್ರಪತಿಃ ಶ್ರೋತ್ರಾಣಾಂ ಪತಿಃ। ವಿಜ್ಞಾನ ಪತಿಃ ವಿಜ್ಞಾನಾನಾಂ ಚ ಪತಿಃ। ಸರ್ವಾತ್ಮಕತ್ವಾತ್ ಸರ್ವಪ್ರಾಣಿನಾಂ ಕರಣೈಸ್ತದ್ವಾನ್ ಭವತಿ ಇತ್ಯರ್ಥಃ ॥

(ಭಾಷ್ಯಾರ್ಥ)

ಆ (ನಾಡಿಯಿಂದ) ಈ ರೀತಿಯಲ್ಲಿ ಉಪಾಸನೆಮಾಡಿದ ಮನೋಮಯಾತ್ಮನ ಉಪಾಸಕನು ಮೂರ್ಧಭಾಗದಿಂದ ಹೊರಟು ಈ ಲೋಕಕ್ಕೆ ಅಧಿಷ್ಠಾತೃವಾಗಿ ಭೂಃ ಎಂಬ ವ್ಯಾಹೃತಿರೂಪನಾದ ಯಾವ ಅಗ್ನಿಯು ಮಹತ್ತಾದ ಬ್ರಹ್ಮಕ್ಕೆ ಅಂಗವಾಗಿರುವನೋ ಆ ಅಗ್ನಿಯಲ್ಲಿ ನಿಲ್ಲುವನು; ಅಗ್ನಿಯ ರೂಪದಿಂದ ಈ ಲೋಕವನ್ನು ವ್ಯಾಪಿಸಿಕೊಳ್ಳುವನು[1] ಎಂದರ್ಥ. ಇದರಂತೆ ಭುವಃ ಎಂಬ ಎರಡನೆಯ ವ್ಯಾಹೃತಿಯ ರೂಪನಾದ ವಾಯುವಿನಲ್ಲಿ 'ನಿಲ್ಲುವನು' ಎಂಬ (ಹಿಂದಿನ ಮಾತು) ಇಲ್ಲಿಗೂ ಸೇರಿರುತ್ತದೆ. ಸುವಃ ಎಂಬ ಮೂರನೆಯ ವ್ಯಾಹೃತಿಯ ರೂಪದ ಆದಿತ್ಯನಲ್ಲಿ (ನಿಲ್ಲುವನು); (ಆಮೇಲೆ) ಮಹಃ ಎಂಬ ಎಲ್ಲಕ್ಕೂ ಅಂಗಿಯಾಗಿರುವ[2] ನಾಲ್ಕನೆಯ ವ್ಯಾಹೃತಿರೂಪವಾದ ಬ್ರಹ್ಮದಲ್ಲಿ ನಿಲ್ಲುವನು.

ಅವುಗಳಲ್ಲಿ ಆತ್ಮಭಾವದಿಂದ[3] ಇದ್ದುಕೊಂಡು ಬ್ರಹ್ಮವೇ ಆಗಿ[4] ಸ್ವಾರಾಜ್ಯವನ್ನು ಎಂದರೆ ಸ್ವಾರಾಡ್ರೂಪವನ್ನು ಪಡೆದುಕೊಳ್ಳುವನು. (ಅವನು) ತಾನೇ ರಾಜನು, ಅಂಗವಾಗಿರುವ ದೇವತೆಗಳಿಗೆ ಬ್ರಹ್ಮದಂತೆ ಅಧಿಪತಿಯು, ಆಗುವನು. ಮತ್ತು ದೇವತೆಗಳೆಲ್ಲರೂ ಇವನಿಗೆ ಬ್ರಹ್ಮಕ್ಕೆ ಹೇಗೋ ಹಾಗೆ ಅಂಗಭೂತರಾಗಿ ಕಪ್ಪವನ್ನು ತಂದೊಪ್ಪಿಸುವರು, (ಅವನು) ಮನಸ್ಸುಗಳ ಒಡೆಯನನ್ನು ಪಡೆದು

---

1. ಅಂಗವಾದ ವ್ಯಾಹೃತಿಗಳ ಉಪಾಸನೆಯ ಫಲವನ್ನು ಪಡೆದುಕೊಂಡು ಕ್ರಮಕ್ರಮವಾಗಿ ಅಂಗಿಯಾದ ಮಹಃ ಎಂಬ ವ್ಯಾಹೃತಿಯ ಉಪಾಸನೆಯ ಫಲವನ್ನು ಪಡೆದುಕೊಳ್ಳುವನು ಎಂದು ಅಭಿಪ್ರಾಯ.

2. ಮಹಃ ಎಂಬ ವ್ಯಾಹೃತಿಯ ಅರ್ಥವಾಗಿರುವ ಸಗುಣಬ್ರಹ್ಮದ ಉಪಾಸನೆಯೇ ಇಲ್ಲಿ ಪ್ರಧಾನವು; ಉಳಿದ ವ್ಯಾಹೃತಿಗಳ ಉಪಾಸನೆಗಳು ಅಂಗವು.

3. ತಾನೇ ಅವುಗಳಾಗಿ.

4. ಅಪರಬ್ರಹ್ಮದ ಸ್ವರೂಪವನ್ನೇ ಪಡೆದುಕೊಂಡು.

ಕೊಳ್ಳುವನು. ಏಕೆಂದರೆ ಬ್ರಹ್ಮವು ಸರ್ವಾತ್ಮಕವಾಗಿರುವದರಿಂದ ಎಲ್ಲಾ ಮನಸ್ಸು ಗಳಿಗೂ (ಅದು) ಒಡೆಯನಾಗಿರುವದು, ಎಲ್ಲಾ ಮನಸ್ಸುಗಳಿಂದಲೂ ಅದು ಮನನ ಮಾಡುತ್ತಿರುವದು, ಅಲ್ಲವೆ? ಈ ರೀತಿಯಲ್ಲಿ ಉಪಾಸನೆಮಾಡುವವನು ಆ (ಬ್ರಹ್ಮ ವನ್ನು) ಪಡೆದುಕೊಳ್ಳುವನು. ಮತ್ತು ವಾಕ್ಕುಗಳ ಒಡೆಯನು ಎಂದರೆ ಎಲ್ಲಾ ವಾಕ್ಕುಗಳಿಗೂ ಒಡೆಯನಾಗುವನು; ಹಾಗೆಯೇ ಚಕ್ಷುಸ್ಸುಗಳಿಗೆ ಒಡೆಯನು, ಎಂದರೆ (ಎಲ್ಲಾ) ಚಕ್ಷುಸ್ಸುಗಳಿಗೂ ಒಡೆಯನಾಗುವನು. ಶ್ರೋತ್ರಗಳಿಗೆ ಪತಿಯು ಎಂದರೆ ಶ್ರೋತ್ರಗ[1] ಳಿ(ಲ್ಲಕ್ಕೂ) ಒಡೆಯ(ನಾಗುವನು). ವಿಜ್ಞಾನಗಳಿಗೆ ಪತಿಯು ಎಂದರೆ (ಎಲ್ಲಾ) ವಿಜ್ಞಾನಗಳಿಗೂ ಒಡೆಯನಾಗುವನು, ಸರ್ವಾತ್ಮನಾಗಿರುವದರಿಂದ ಪ್ರಾಣಿಗಳೆಲ್ಲದರ ಕರಣಗಳಿಂದಲೂ ಆಯಾ (ಕರಣ) ವುಳ್ಳವನಾಗುವನು ಎಂದರ್ಥ.

## ವ್ಯಾಹೃತ್ಯಾತ್ಮನ ರೂಪಕಲ್ಪನೆ

(ಭಾಷ್ಯ)

೪೪. ಕಿಂ ಚ ತತೋಽಪ್ಯಧಿಕತರಮ್ ಏತದ್ ಭವತಿ । ಕಿಂ ತತ್? ಉಚ್ಯತೇ । ಆಕಾಶಶರೀರಮ್ ಆಕಾಶಃ ಶರೀರಮ್ ಅಸ್ಯ ಆಕಾಶವದ್ವಾ ಸೂಕ್ಷ್ಮಂ ಶರೀರಮ್ ಅಸ್ಯ ಇತ್ಯಾಕಾಶಶರೀರಮ್ । ಕಿಂ ತತ್? ಪ್ರಕೃತಂ ಬ್ರಹ್ಮ । ಸತ್ಯಾತ್ಮ ಸತ್ಯಂ ಮೂರ್ತಾಮೂರ್ತಮ್ ಅವಿತಥಂ ಸ್ವರೂಪಂ ವಾ[2] ಆತ್ಮಾ ಸ್ವಭಾವಃ ಅಸ್ಯ ತದಿದಂ ಸತ್ಯಾತ್ಮ । ಪ್ರಾಣಾರಾಮಂ ಪ್ರಾಣೇಷು ಆರಾಮಃ ಆರಮಣಮ್ ಆಕ್ರೀಡಾ ಯಸ್ಯ ತತ್ ಪ್ರಾಣಾರಾಮಮ್ । ಪ್ರಾಣಾನಾಂ ವಾ ಆರಾಮೋ ಯಸ್ಮಿನ್ ತತ್ ಪ್ರಾಣಾರಾಮಮ್ । ಮನಆನನ್ದಮ್ ಆನನ್ದಭೂತಂ ಸುಖಕೃದೇವ ಯಸ್ಯ ಮನಃ ತತ್ ಮನಆನನ್ದಮ್ । ಶಾನ್ತಿಸಮೃದ್ಧಮ್ । ಶಾನ್ತಿಃ ಉಪಶಮಃ । ಶಾನ್ತಿಶ್ಚ ತತ್ ಸಮೃದ್ಧಂ ಚ ಶಾನ್ತಿಸಮೃದ್ಧಮ್ । ಶಾನ್ತ್ಯಾ ವಾ ಸಮೃದ್ಧಮ್ ತತ್ ಉಪಲಭ್ಯತೇ ಇತಿ ಶಾನ್ತಿಸಮೃದ್ಧಮ್ । ಅಮೃತಮ್ ಅಮರಣಧರ್ಮಿ । ಏತಚ್ಚ ಅಧಿಕತರಂ ವಿಶೇಷಣಂ ತತ್ರೈವ 'ಮನೋಮಯಃ' ಇತ್ಯಾದೌ ದ್ರಷ್ಟವ್ಯಮ್ ॥

---

1. ಬ್ರಹ್ಮವನ್ನು ಪಡೆದುಕೊಳ್ಳುವವೆಂದರೆ ಎಲ್ಲಾ ಮನಸ್ಸುಗಳ, ಎಲ್ಲಾ ಚಕ್ಷುರಾದೀಂದ್ರಿಯಗಳ ಒಡೆಯನಾಗುವದು. ಈ ಸ್ವಾರಾಜ್ಯವು ಬ್ರಹ್ಮದಂತೆ ಜಗತ್ತನ್ನು ಸೃಷ್ಟಿ ಮಾಡುವ ರೂಪದ್ದಲ್ಲ. ಅಣಿಮಾದ್ಯೈಶ್ವರ್ಯವೇ; ಈಶ್ವರನ ಸಂಕಲ್ಪಕ್ಕೆ ಒಳಪಟ್ಟು ಈಶ್ವರನಿಗೆ ಸಮಾನವಾದ ಭೋಗಗಳನ್ನು ಪಡೆಯುವದೇ ಬ್ರಹ್ಮಸಾಯುಜ್ಯವು. ಸೂ. ಭಾ. ೪-೪-೧೭ ರಿಂದ ೨೧ನ್ನು ನೋಡಿರಿ.

2. 'ಚ' ಎಂಬ ಆ॥ ಪಾಠಕ್ಕಿಂತ ಈ ವಾ॥ಕಾ॥ ಪಾಠವು ಮೇಲು.

(ಭಾಷ್ಯಾರ್ಥ)

ಮತ್ತು ಅದಕ್ಕಿಂತಲೂ ಹೆಚ್ಚಾಗಿ ಇದೂ ಆಗುವನು. ಅದು ಯಾವದು? ಎಂದರೆ ಹೇಳುತ್ತಾನೆ: ಆಕಾಶವು ಇದಕ್ಕೆ ಶರೀರವು ಅಥವಾ ಆಕಾಶದಂತೆ ಇದರ ಶರೀರವು ಸೂಕ್ಷ್ಮವಾಗಿರುವದು; ಆದ್ದರಿಂದ (ಇದು) ಆಕಾಶಶರೀರವೆನಿಸುವದು.[1] ಅದು ಯಾವದು? ಎಂದರೆ ಪ್ರಕೃತವಾದ ಬ್ರಹ್ಮವೇ.[2] **ಸತ್ಯಾತ್ಮವಾದದ್ದು**; ಸತ್ಯವು ಎಂದರೆ ಮೂರ್ತಾಮೂರ್ತವು[3] ಅಥವಾ ಸುಳ್ಳಲ್ಲದ[4] ಸ್ವರೂಪವು; (ಇಂಥ ಸತ್ಯವು) ಇದಕ್ಕೆ ಆತ್ಮವು ಎಂದರೆ ಸ್ವಭಾವವು; ಆದ್ದರಿಂದ ಆ ಇದಕ್ಕೆ ಸತ್ಯಾತ್ಮವೆಂದು ಹೆಸರು. **ಪ್ರಾಣಾರಾಮವು**: ಪ್ರಾಣಗಳಲ್ಲಿ[5] ಆರಾಮವು ಎಂದರೆ ಆರಮಣವು, ಕ್ರೀಡಿಸುತ್ತಿರುವದು, ಯಾವದಕ್ಕಿರುವದೋ ಅದು ಪ್ರಾಣಾರಾಮವು, ಅಥವಾ ಪ್ರಾಣಗಳ ಆರಾಮವು ಯಾವದರಲ್ಲಿರುವದೋ[6] ಅದು ಪ್ರಾಣಾರಾಮವು. **ಮನಆನಂದವು**: ಆನಂದವಾಗಿರುವ ಎಂದರೆ ಸುಖವನ್ನುಂಟುಮಾಡುತ್ತಲೇ[7] ಇರುವ ಮನಸ್ಸು ಯಾವದಕ್ಕಿರುವದೋ ಅದು ಮನಆನಂದವು. **ಶಾಂತಿಸಮೃದ್ಧವು**: ಶಾಂತಿ ಎಂದರೆ ಉಪಶಮವು ಶಾಂತಿಯೂ ಸಮೃದ್ಧವೂ ಆಗಿರುವದರಿಂದ[8] ಶಾಂತಿಸಮೃದ್ಧವು; ಅಥವಾ ಶಾಂತಿಯಿಂದ ಸಮೃದ್ಧವಾಗಿರುವ ಅದು ಕಂಡುಬರುತ್ತದೆ[9]

1. ಆಕಾಶವು ಇದಕ್ಕೆ ಉಪಾಧಿಯು; ಅಥವಾ ಸೂಕ್ಷ್ಮಭೂತಗಳೆಂಬ ಉಪಾಧಿಗಳುಳ್ಳದ್ದಾಗಿ ಅತೀಂದ್ರಿಯವಾಗಿರುವದು.

2. ಮಹಃ ಎಂಬ ವ್ಯಾಹೃತ್ಯಾತ್ಮಕನಾದ ಹಿರಣ್ಯಗರ್ಭನೇ.

3. ಬೃ. ೨-೩ರಲ್ಲಿ ಹೇಳಿರುವ ಸತ್ ಮತ್ತು ತ್ಯತ್ ಎಂಬ ಪದಗಳಿಂದ ಬೋಧಿತವಾಗಿರುವ ಪೃಥಿವ್ಯಾದಿಪಂಚಭೂತಗಳು ಇದಕ್ಕೆ ಉಪಾಧಿಯು.

4. ವ್ಯಾವಹಾರಿಕಸತ್ಯವಾದದ್ದು, ಶುಕ್ತಿರಜತಾದಿಗಳಂತೆ ಮಿಥ್ಯೆಯಲ್ಲದ್ದು. ಜೀವನಿಗೂ ಸತ್ಯರೂಪವೇ ಇದ್ದರೂ ಅದು ಬ್ರಹ್ಮಕ್ಕೆ ಇರುವಂಥ ಸತ್ಯರೂಪವಲ್ಲ.

5. ಇಂದ್ರಿಯಗಳ ವ್ಯಾಪಾರವೆಲ್ಲ ಹಿರಣ್ಯಗರ್ಭನದೇ.

6. ಇಂದ್ರಿಯಗಳೆಲ್ಲ ಹಿರಣ್ಯಗರ್ಭನನ್ನಾಶ್ರಯಿಸಿಯೇ ವ್ಯಾಪಾರಮಾಡುವವು. ಆದ್ದರಿಂದಲೇ ಇವನನ್ನು ವಾಯು ಎಂದು ಶಾಂತಿಯಲ್ಲಿ ಸಂಬೋಧಿಸಿದ್ದು.

7. ಸತ್ತ್ವಗುಣಪ್ರಧಾನವಾಗಿರುವದರಿಂದ ಯಾವಾಗಲೂ ಹಿರಣ್ಯಗರ್ಭನ ಮನಸ್ಸು ಆನಂದವನ್ನೇ ಉಂಟುಮಾಡುತ್ತಿರುವದು.

8. ಹಿರಣ್ಯಗರ್ಭನ ಮನಸ್ಸು ಸ್ವಚ್ಛವಾಗಿರುವದರಿಂದ ಶಾಂತವಾಗಿರುವದು, ಸಮಷ್ಟಿಜ್ಞಾನಕ್ರಿಯಾಶಕ್ತಿಗಳುಳ್ಳದ್ದಾದ್ದರಿಂದ ಸಮೃದ್ಧವಾಗಿರುವದು.

9. ಶಾಂತಿಯಿಂದ ಉಪಾಸನೆಮಾಡುವವರಿಗೆ ಮಾತ್ರ ಸಮೃದ್ಧವಾದ ಬ್ರಹ್ಮದ ಸಾಕ್ಷಾತ್ಕಾರವಾಗುತ್ತದೆ.

ಯಾದ್ದರಿಂದ ಶಾಂತಿಸಮೃದ್ಧವು. ಅಮೃತವು, ಸಾವಿಲ್ಲದ್ದೆಂಬ ಧರ್ಮವುಳ್ಳದ್ದು.[1] ಈ ಹೆಚ್ಚಿನ ವಿಶೇಷಣವನ್ನೂ 'ಮನೋಮಯಃ' ಮುಂತಾದ (ಧರ್ಮಗಳನ್ನು ಹೇಳಿರು)ವಲ್ಲಿಯೇ ಸೇರಿಸಿಕೊಂಡು (ಚಿಂತಿಸಬೇಕು).[2]

## ಉಪಾಸನೆಯನ್ನು ಮಾಡಬೇಕೆಂಬ ಉಪದೇಶ

(ಭಾಷ್ಯ)

೪೫. ಇತಿ ಏವಂ ಮನೋಮಯತ್ವಾದಿಧರ್ಮೈರ್ವಿಶಿಷ್ಟಂ ಯಥೋಕ್ತಂ ಬ್ರಹ್ಮ ಹೇ ಪ್ರಾಚೀನಯೋಗ್ಯ ಉಪಾಸ್ಸ್ವ ಇತಿ ಆಚಾರ್ಯವಚನೋಕ್ತಿಃ ಆದರಾರ್ಥಾ ॥

(ಭಾಷ್ಯಾರ್ಥ)

ಹೀಗೆಂದು ಈ ರೀತಿಯಲ್ಲಿ ಮನೋಮಯತ್ವವೇ ಮುಂತಾದ ಧರ್ಮಗಳಿಂದ ಕೂಡಿರುವ ಮೇಲೆ ಹೇಳಿರುವ ಬ್ರಹ್ಮವನ್ನು, ಎಲೈ ಪ್ರಾಚೀನಯೋಗ್ಯನೆ, ಉಪಾಸನೆ ಮಾಡು ಎಂದು ಆಚಾರ್ಯವಚನವನ್ನು ಹೇಳಿರುವದು ಆದರಕ್ಕಾಗಿ.[3]

## ೭. ಬ್ರಹ್ಮದ ಪಾಙ್ಕ್ತೋಪಾಸನೆ

### ಅನುವಾಕದ ವಿಷಯ

(ಭಾಷ್ಯ)

೪೬. ಯದೇತದ್ ವ್ಯಾಹೃತ್ಯಾತ್ಮಕಂ ಬ್ರಹ್ಮ ಉಪಾಸ್ಯಮ್ ಉಕ್ತಮ್, ತಸ್ಯೈವ ಇದಾನೀಂ ಪೃಥಿವ್ಯಾದಿಪಾಙ್ಕ್ತಸ್ವರೂಪೇಣ ಉಪಾಸನಮ್ ಉಚ್ಯತೇ ।

---

1. ಕಾರ್ಯಬ್ರಹ್ಮಲೋಕವು ಪ್ರಲಯವಾಗುವವರೆಗೆ ಹಿರಣ್ಯಗರ್ಭತ್ವವು ಇರುವದರಿಂದಲೂ ಬಳಿಕ ಸಮ್ಯಗ್ಜ್ಞಾನದಿಂದ ಪರಮಾತ್ಮಸ್ವರೂಪದಲ್ಲಿಯೇ ಬೆರೆತುಹೋಗುವದರಿಂದಲೂ ಅಮೃತವು. ಸೂ.ಭಾ. ೪-೩-೧೦.

2. ಹಿಂದೆ ಳಂರಲ್ಲಿ ಮನೋಮಯಃ, ಅಮೃತಃ, ಹಿರಣ್ಮಯಃ ಎಂಬ ವಿಶೇಷಣಗಳನ್ನು ಹೇಳಿತ್ತಷ್ಟೆ. ಅವುಗಳ ಜೊತೆಗೆ ಆಕಾಶಶರೀರಮ್ ಮುಂತಾದ ವಿಶೇಷಣಗಳನ್ನೂ ಸೇರಿಸಿಕೊಂಡು ಉಪಾಸನೆಮಾಡಬೇಕು. ಆ ಉಪಾಸನೆಗೆ ಅಂಥ ಬ್ರಹ್ಮಪ್ರಾಪ್ತಿಯೇ ಫಲವಾಗುವದು.

3. ಪ್ರಾಚೀನಯೋಗ್ಯನೆ, ಎಂದು ಶಿಷ್ಯನನ್ನು ಮಹಾಚಮಸ್ಯನು ಸಂಬೋಧಿಸಿರುವದು ಯೋಗ್ಯನಾದ ಶಿಷ್ಯನಿಗೆ ಉಪಾಸನೆಯಲ್ಲಿ ಅಧಿಕಾರವೆಂಬುದನ್ನು ತಿಳಿಸುವದರಮೂಲಕ ಆದರವನ್ನು ತಿಳಿಸುವದಕ್ಕೆ.

ಙ್ಕ್ತಿಸಂಖ್ಯಾಯೋಗಾತ್ ಪಙ್ಕ್ತಿಚ್ಛನ್ದಃಸಂಪತ್ತಿಃ । ತತಃ ಪಾಙ್ಕ್ತತ್ವಂ ಸರ್ವಸ್ಯ। ಙ್ಕ್ತಶ್ಚ ಯಜ್ಞಃ । "ಪಞ್ಚಪದಾ ಪಙ್ಕ್ತಿಃ" (?) "ಪಾಙ್ಕ್ತೋ ಯಜ್ಞಃ" .ಸಂ. ೧-೫-೨) ಇತಿ ಶ್ರುತೇಃ । ತೇನ ಯತ್ ಸರ್ವಂ ಲೋಕಾದಿ ಆತ್ಮಾನ್ತಂ ಚ ಙ್ಕ್ತಂ ಪರಿಕಲ್ಪಯತಿ ಯಜ್ಞಮೇವ ತತ್ ಪರಿಕಲ್ಪಯತಿ । ತೇನ ಯಜ್ಞೇನ ಕಲ್ಪಿತೇನ ಪಾಙ್ಕ್ತಾತ್ಮಕಂ ಪ್ರಜಾಪತಿಮ್ ಅಭಿಸಂಪದ್ಯತೇ । ತತ್ ಕಥಂ ಙ್ಕ್ತಮ್ ಇದಂ ಸರ್ವಮಿತಿ ? ಅತ ಆಹ—

(ಭಾಷ್ಯಾರ್ಥ)

ವ್ಯಾಹೃತ್ಯಾತ್ಮನೆಂದು ಉಪಾಸನೆಮಾಡಬೇಕೆಂತ ಯಾವ ಈ ಬ್ರಹ್ಮವನ್ನು ಳಲಾಯಿತೋ ಅದೇ (ಬ್ರಹ್ಮವನ್ನು)[1] ಪೃಥಿವಿಯೇ ಮುಂತಾದ ಪಾಙ್ಕ್ತಸ್ವರೂಪ ದ ಉಪಾಸನೆ (ಮಾಡಬೇಕೆಂದು) ಈಗ ಹೇಳಲಾಗುತ್ತದೆ. ಐದು ಎಂಬ ಖ್ಯೆಯ ಸಂಬಂಧವಿರುವದರಿಂದ ಪಙ್ಕ್ತಿ ಎಂಬ ಛಂದಸ್ಸಿನ (ಗುಣವನ್ನು) ಪಾದಿಸಿದಂತೆ ಆಗುತ್ತದೆ.[2] ಅದರಿಂದ ಎಲ್ಲವೂ ಪಾಙ್ಕ್ತವಾಗುತ್ತದೆ. ಮತ್ತು ಜ್ಞವೂ ಪಾಙ್ಕ್ತವೇ.[3] "ಪಙ್ಕ್ತಿಯಲ್ಲಿ ಐದು ಪದಗಳಿರುವವು", (?) ಯಜ್ಞವು ಪಾಙ್ಕ್ತವು" (ತೈ. ಸಂ. ೧-೫-೨) ಎಂಬ ಶ್ರುತಿಗಳು ಇದಕ್ಕೆ ಪ್ರಮಾ ವು. ಅದ್ದರಿಂದ ಲೋಕದಿಂದ ಹಿಡಿದು ಆತ್ಮನವರೆಗೆ ಎಲ್ಲವೂ ಪಾಙ್ಕ್ತವೆಂದು ಲ್ಪನೆಮಾಡಿದರೆ[4] (ಎಲ್ಲವೂ) ಯಜ್ಞವೆಂದೇ ಕಲ್ಪನೆಮಾಡಿದಂತೆ ಆಗುತ್ತದೆ. ಗೆ ಯಜ್ಞವನ್ನು ಕಲ್ಪನೆಮಾಡುವದರಿಂದ ಪಾಙ್ಕ್ತಾತ್ಮನಾದ ಪ್ರಜಾಪತಿಯನ್ನು[5] ತೆದುಕೊಳ್ಳುತ್ತಾನೆ. ಆದ್ದರಿಂದ ಇದೆಲ್ಲವೂ ಪಾಙ್ಕ್ತವೆಂಬುದು ಹೇಗೆ ?[6] ಎಂದರೆ ದಕ್ಕೆ (ಶ್ರುತಿ) ಹೇಳುತ್ತದೆ :—

---

1. ಆ ಸಗುಣಬ್ರಹ್ಮವನ್ನೇ.

2. ಪಙ್ಕ್ತಿ ಎಂಬ ಛಂದಸ್ಸಿನಲ್ಲಿ ಎಂಟು ಅಕ್ಷರಗಳ ಐದು ಪಾದಗಳಿರುತ್ತವೆ; ರಿಂದ ಐದೈದು ಎಂದು ಕಲ್ಪನೆಮಾಡಿದರೆ ಎಲ್ಲವೂ ಪಙ್ಕ್ತಿಚ್ಛಂದಸ್ಸೆಂದು ಚಿಂತಿಸಿದಂತೆ ಯಿತು.

3. ಯಜ್ಞವು ಪತ್ನಿ, ಯಜಮಾನ, ಪುತ್ರ, ದೈವವಿತ್ತ, ಮಾನುಷವಿತ್ತ ಎಂಬ ಐದ ದ ಆಗತಕ್ಕದ್ದು.

4. ಈ ಕಲ್ಪನೆಯ ರೂಪದ ಉಪಾಸನೆಯನ್ನೇ ಈಗ ವಿಧಿಸುತ್ತಿರುವದು.

5. ಎಲ್ಲವೂ ಯಜ್ಞವೆಂದು ಭಾವಿಸಿದರೆ ಎಲ್ಲವೂ ಪ್ರಜಾಪತಿಯೇ ಎಂದು ಭಾವಿಸಿ ತೆ ಆಗುತ್ತದೆ; ಆದರಿಂದ ಪ್ರಜಾಪತಿಸ್ವರೂಪವೇ ಪ್ರಾಪ್ತವಾಗುತ್ತದೆ.

6. ಐದೈದಾಗಿ ಹೇಗೆ ಭಾವಿಸಬೇಕು ?

**ಪೃಥಿವ್ಯನ್ತರಿಕ್ಷಂ ದ್ಯೌರ್ದಿಶೋಽವಾನ್ತರದಿಶಾಃ । ಅಗ್ನಿರ್ವಾಯುರಾದಿತ್ಯಶ್ಚನ್ದ್ರಮಾ ನಕ್ಷತ್ರಾಣಿ । ಆಪ ಓಷಧಯೋ ವನಸ್ಪತಯ ಆಕಾಶ ಆತ್ಮಾ । ಇತ್ಯಧಿಭೂತಮ್ । ಅಥಾಧ್ಯಾತ್ಮಮ್ । ಪ್ರಾಣೋ ವ್ಯಾನೋಽಪಾನ ಉದಾನಃ ಸಮಾನಃ । ಚಕ್ಷುಃ ಶ್ರೋತ್ರಂ ಮನೋ ವಾಕ್ ತ್ವಕ್ । ಚರ್ಮ ಮಾಗ್ಂಸಗ್ಂ ಸ್ನಾವಾಸ್ಥಿ ಮಜ್ಜಾ । ಏತದಧಿವಿಧಾಯ ಋಷಿರವೋಚತ್ । ಪಾಙ್ಕ್ತಂ ವಾ ಇದಗ್ಂ ಸರ್ವಮ್ । ಪಾಙ್ಕ್ತೇನೈವ ಪಾಙ್ಕ್ತಗ್ಂ ಸ್ಪೃಣೋತೀತಿ ॥ ೭ ॥**

೭. ಪೃಥಿವಿ, ಅಂತರಿಕ್ಷ, ದ್ಯುಲೋಕ, ದಿಕ್ಕುಗಳು, ಅವಾಂತರ ದಿಕ್ಕುಗಳು ; ಅಗ್ನಿ, ವಾಯು, ಆದಿತ್ಯ, ಚಂದ್ರ, ನಕ್ಷತ್ರಗಳು ; ಅಪ್ಪು, ಗಿಡಗಳು, ಮರಗಳು, ಆಕಾಶ, ಆತ್ಮ-ಇದು ಅಧಿಭೂತವು. ಇನ್ನು ಅಧ್ಯಾತ್ಮವು. ಪ್ರಾಣ, ವ್ಯಾನ, ಅಪಾನ, ಉದಾನ, ಸಮಾನ ; ಚಕ್ಷು, ಶ್ರೋತ್ರ, ಮನ, ವಾಕ್ಕು, ತ್ವಕ್ಕು ; ಚರ್ಮ, ಮಾಂಸ, ನರ, ಮೂಳೆ, ಕೊಬ್ಬು. ಇದನ್ನು ಹೀಗೆ ಇಟ್ಟುಕೊಂಡು ಋಷಿಯು ಹೇಳಿದನೇನೆಂದರೆ: ಇದೆಲ್ಲವೂ ಪಾಙ್ಕ್ತವೇ ; ಪಾಙ್ಕ್ತದಿಂದಲೇ ಪಾಙ್ಕ್ತವನ್ನು ಬಲಪಡಿಸುತ್ತಾನೆ."

## ಹೊರಗಿನ ಪಾಙ್ಕ್ತತ್ರಯ

(ಭಾಷ್ಯ)

೪೭. ಪೃಥಿವೀ, ಅನ್ತರಿಕ್ಷಮ್, ದ್ಯೌಃ, ದಿಶಃ, ಅವಾನ್ತರದಿಶಾಃ ಇತಿ ಲೋಕಪಾಙ್ಕ್ತಮ್ । ಅಗ್ನಿಃ, ವಾಯುಃ, ಆದಿತ್ಯಃ, ಚನ್ದ್ರಮಾಃ, ನಕ್ಷತ್ರಾಣಿ ಇತಿ ದೇವತಾಪಾಙ್ಕ್ತಮ್ । ಆಪಃ, ಓಷಧಯಃ, ವನಸ್ಪತಯಃ, ಆಕಾಶಃ, ಆತ್ಮಾ ಇತಿ ಭೂತಪಾಙ್ಕ್ತಮ್ । ಆತ್ಮಾ ಇತಿ ವಿರಾಟ್ । ಭೂತಾಧಿಕಾರಾತ್ । ಇತ್ಯಧಿಭೂತಮ್ ಇತಿ ಅಧಿಲೋಕಾಧಿದೈವತಪಾಙ್ಕ್ತದ್ವಯೋಪಲಕ್ಷಣಾರ್ಥಮ್ । ಲೋಕದೇವತಾಪಾಙ್ಕ್ತಯೋಶ್ಚ ಅಭಿಹಿತತ್ವಾತ್ ॥

(ಭಾಷ್ಯಾರ್ಥ)

ಪೃಥಿವಿ, ಅಂತರಿಕ್ಷ, ಸ್ವರ್ಗ, ದಿಕ್ಕುಗಳು, ಅವಾಂತರದಿಕ್ಕುಗಳು[1]-ಎಂಬುದು **ಲೋಕಪಾಙ್ಕ್ತವು.** ಅಗ್ನಿ, ವಾಯು, ಆದಿತ್ಯ, ಚಂದ್ರ, ನಕ್ಷತ್ರಗಳು-ಎಂಬುದು

---

1 ದಿಕ್ಕುಗಳ ನಡುನಡುವೆ ಇರುವ ವಿದಿಕ್ಕುಗಳು.

**ದೇವತಾಪಾಙ್ಕ್ತವು.** ನೀರು, ಗಿಡಗಳು, ಮರಗಳು, ಆಕಾಶ, ಆತ್ಮ-ಎಂಬುದು **ಭೂತಪಾಙ್ಕ್ತವು.** ಇಲ್ಲಿ ಆತ್ಮ ಎಂದರೆ **ವಿರಾಜನು**[1], ಏಕೆಂದರೆ ಇದು ಭೂತಗಳ ಪ್ರಕರಣದಲ್ಲಿ (ಬಂದಿರುತ್ತದೆ). "ಇದು ಅಧಿಭೂತವು" ಎಂದು (ಶ್ರುತಿಯಲ್ಲಿ ಹೇಳಿರುವದು), ಅಧಿಲೋಕ, ಅಧಿದೈವತ-ಈ ಎರಡು ಪಾಙ್ಕ್ತಗಳಿಗೂ ಉಪಲಕ್ಷಣಕ್ಕಾಗಿ[2]; ಏಕೆಂದರೆ ಲೋಕಗಳು, ದೇವತೆಗಳು-ಇವುಗಳ ಪಾಙ್ಕ್ತಗಳನ್ನೂ (ಇಲ್ಲಿ) ಹೇಳಿರುತ್ತದೆ.

## ಒಳಗಿನ ಪಾಙ್ಕ್ತತ್ರಯ

(ಭಾಷ್ಯ)

೪೮. ಅಥ ಅನನ್ತರಮ್ ಅಧ್ಯಾತ್ಮಂ ಪಾಙ್ಕ್ತತ್ರಯಮ್ ಉಚ್ಯತೇ-ಪ್ರಾಣಾದಿ ವಾಯುಪಾಙ್ಕ್ತಮ್। ಚಕ್ಷುರಾದಿ ಇನ್ದ್ರಿಯಪಾಙ್ಕ್ತಮ್। ಚರ್ಮಾದಿ ಧಾತುಪಾಙ್ಕ್ತಮ್ ॥

(ಭಾಷ್ಯಾರ್ಥ)

ಇನ್ನು ಅನಂತರದಲ್ಲಿ ಅಧ್ಯಾತ್ಮದ ಮೂರು ಪಾಙ್ಕ್ತವನ್ನು ಹೇಳಲಾಗುತ್ತದೆ. ಪ್ರಾಣವೇ ಮುಂತಾದದ್ದು **ವಾಯುಪಾಙ್ಕ್ತವು**; ಚಕ್ಷುವೇ ಮುಂತಾದದ್ದು **ಇಂದ್ರಿಯಪಾಙ್ಕ್ತವು**; ಚರ್ಮವೇ ಮುಂತಾದದ್ದು **ಧಾತುಪಾಙ್ಕ್ತವು.**[3]

## ಪಾಙ್ಕ್ತೋಪಾಸನೆಯೂ ಅದರ ಫಲವೂ

(ಭಾಷ್ಯ)

೪೯. ಏತಾವದ್ ಹಿ ಇದಂ ಸರ್ವಮ್। ಅಧ್ಯಾತ್ಮಂ ಬಾಹ್ಯಂ ಚ ಪಾಙ್ಕ್ತಮೇವ ಇತಿ ಏತತ್ ಏವಮ್ ಅಧಿವಿಧಾಯ ಪರಿಕಲ್ಪ್ಯ ಋಷಿಃ ವೇದಃ ಏತದ್ದರ್ಶನಸಂಪನ್ನೋ ವಾ ಕಶ್ಚಿದ್ ಋಷಿಃ **ಅವೋಚತ್** ಉಕ್ತವಾನ್। ಕಿಮಿತಿ? ಆಹ-ಪಾಙ್ಕ್ತಂ ವಾ ಇದಂ ಸರ್ವಮ್ ಪಾಙ್ಕ್ತೇನೈವ ಆಧ್ಯಾತ್ಮಿಕೇನ ಸಂಖ್ಯಾ

---

1 ಸಮಷ್ಟಿಸ್ಥೂಲೋಪಾಧಿಯು.

2 ಲೋಕಪಾಙ್ಕ್ತವನ್ನೂ ದೇವತಾಪಾಙ್ಕ್ತವನ್ನೂ ಸೇರಿಸಿಕೊಳ್ಳಬೇಕೆಂದು ತಿಳಿಸುವದಕ್ಕೆ ಉದಾಹರಣೆಯಾಗಿ.

3 ಧಾತುಗಳು ರಸವೇ ಮುಂತಾದ ಏಳೆಂದು ವೈದ್ಯಶಾಸ್ತ್ರದಲ್ಲಿ ರೂಢಿಯಾಗಿರುತ್ತದೆಯಾದರೂ ಸ್ಥೂಲವಾಗಿ ಕಾಣುವ ಚರ್ಮಾದಿಗಳು ಶರೀರವನ್ನು ಧಾರಣೆಮಾಡಿರುವವೆಂಬ ನಿಮಿತ್ತದಿಂದ ಅವುಗಳನ್ನೂ ಧಾತುಗಳೆಂದು ಇಲ್ಲಿ ಕರೆದಿದೆ ಎಂದು ತಿಳಿಯಬೇಕು.

ಸಾಮಾನ್ಯಾತ್ ಪಾಙ್ಕ್ತಂ ಬಾಹ್ಯಂ ಸ್ಪೃಣೋತಿ ಬಲಯತಿ ಪೂರಯತಿ । ಏಕಾತ್ಮತಯಾ ಉಪಲಭತೇ ಇತ್ಯೇತತ್ । ಏವಂ ಪಾಙ್ಕ್ತಮ್ ಇದಂ ಸರ್ವಮ್ ಇತಿ ಯೋ ವೇದ ಸ ಪ್ರಾಜಾಪತ್ಯಾತ್ಮೈವ ಭವತಿ ಇತ್ಯರ್ಥಃ ॥

(ಭಾಷ್ಯಾರ್ಥ)

ಇದೆಲ್ಲವೂ ಇಷ್ಟೇ (ಆಗಿರುತ್ತದೆ).[1] ಅಧ್ಯಾತ್ಮವೂ ಬಾಹ್ಯವೂ ಪಾಙ್ಕ್ತವೇ ಎಂದು ಇದನ್ನು ಹೀಗೆ ಇಟ್ಟುಕೊಂಡು ಎಂದರೆ ಪರಿಕಲ್ಪನೆಮಾಡಿಕೊಂಡು[2] **ಋಷಿಯು ಎಂದರೆ ವೇದವು, ಅಥವಾ ಈ ದರ್ಶನದಿಂದ ಕೂಡಿದ[3] ಒಬ್ಬಾನೊಬ್ಬ ಋಷಿಯು** ಹೇಳಿದನು, (ಹೀಗೆಂದು) ಹೇಳಿದವನಾದನು. ಏನೆಂದು? ಎಂದರೆ (ಶ್ರುತಿ) ಹೇಳುತ್ತದೆ: ಇದೆಲ್ಲವೂ ಪಾಙ್ಕ್ತವೇ, ಆಧ್ಯಾತ್ಮಿಕವಾದ ಪಾಙ್ಕ್ತದಿಂದಲೇ ಹೊರಗಿನ ಪಾಙ್ಕ್ತವನ್ನು–ಸಂಖ್ಯೆಯು (ಎರಡಕ್ಕೂ) ಸಮಾನವಾಗಿರುವದರಿಂದ[4]–ಬಲಪಡಿಸುತ್ತಾನೆ ಅಥವಾ ಪೂರಣಗೊಳಿಸುತ್ತಾನೆ ಎಂದರೆ ಒಂದೇ ಎಂದು ಕಾಣುತ್ತಾನೆ[5] ಎಂದು ತಾತ್ಪರ್ಯ. ಹೀಗೆ ಇದೆಲ್ಲವೂ ಪಾಙ್ಕ್ತವು ಎಂದು ಯಾವಾತನು ಅರಿಯುತ್ತಾನೋ[6] ಆತನು ಪ್ರಜಾಪತಿಸ್ವರೂಪನೇ ಆಗುತ್ತಾನೆ[7] ಎಂದರ್ಥ.

# ೮. ಓಂಕಾರದ ಉಪಾಸನೆ

## ಅನುವಾಕದ ವಿಷಯ

(ಭಾಷ್ಯ)

೫೦. ವ್ಯಾಹೃತ್ಯಾತ್ಮನೋ ಬ್ರಹ್ಮಣ ಉಪಾಸನಮ್ ಉಕ್ತಮ್ । ಅನನ್ತರಂ ಚ ಪಾಙ್ಕ್ತಸ್ವರೂಪೇಣ ತಸ್ಯೈವ ಉಪಾಸನಮ್ ಉಕ್ತಮ್ । ಇದಾನೀಂ

---

1. ಆಧ್ಯಾತ್ಮಿಕಪಾಙ್ಕ್ತ, ಆಧಿಭೌತಿಕಪಾಙ್ಕ್ತ–ಎಂಬ ಎರಡರಲ್ಲಿಯೇ ಅಡಕವಾಗಿರುತ್ತದೆ.

2. ಮನದಂದುಕೊಂಡು.

3. ಉಪಾಸನೆಯಿಂದ ಸಾಕ್ಷಾತ್ಕಾರವನ್ನು ಹೊಂದಿದ.

4. ಐದೈದಾಗಿರುವದು ಸಮಾನವಾದ್ದರಿಂದ.

5 ಆಧ್ಯಾತ್ಮಿಕವೂ ಬಾಹ್ಯವೂ ಒಂದೇ, ಎರಡೂ ಪಾಙ್ಕ್ತವೇ ಎಂದು ಮನಗಾಣುತ್ತಾನೆ.

6 ಉಪಾಸನೆಮಾಡಿ ಸಾಕ್ಷಾತ್ಕಾರವನ್ನು ಪಡೆಯುತ್ತಾನೋ.

7. ಪಾಙ್ಕ್ತವಾದ ಜಗತ್ತೆಲ್ಲವೂ ಪ್ರಜಾಪತಿಯ ಶರೀರವಾಗಿರುವವರಿಂದ ತಾನೇ ಅವನೆಂಬ ಉಪಾಸನೆಯಿಂದ ಈ ಫಲವನ್ನು ಪಡೆಯುತ್ತಾನೆ.

ಸರ್ವೋಪಾಸನಾಙ್ಗಭೂತಸ್ಯ ಓಂಕಾರಸ್ಯ ಉಪಾಸನಂ ವಿಧಿತ್ಸ್ಯತೇ । ಪರಾಪರಬ್ರಹ್ಮ ದೃಷ್ಟ್ಯಾ ಹಿ ಉಪಾಸ್ಯಮಾನ ಓಂಕಾರಃ ಶಬ್ದಮಾತ್ರೋಽಪಿ ಪರಾಪರಬ್ರಹ್ಮಪ್ರಾಪ್ತಿ ಸಾಧನಂ ಭವತಿ । ಸ ಹಿ ಆಲಮ್ಬನಂ ಬ್ರಹ್ಮಣಃ ಪರಸ್ಯ ಅಪರಸ್ಯ ಚ ಪ್ರತಿಮೇವ ವಿಷ್ಣೋಃ । ಏತೇನೈವ ಆಯತನೇನ ಏಕತರಮ್ ಅನ್ವೇತಿ'' (ಪ್ರ. ೫-೨) ಇತಿ ಶ್ರುತೇಃ ॥

(ಭಾಷ್ಯಾರ್ಥ)

ವ್ಯಾಹೃತಿಸ್ವರೂಪವಾದ ಬ್ರಹ್ಮದ ಉಪಾಸನೆಯನ್ನು ಹೇಳಿದ್ದಾಯಿತು. ಆಮೇಲೆ ಪಾಙ್ಕ್ತಸ್ವರೂಪದಿಂದ ಅದೇ (ಬ್ರಹ್ಮದ) ಉಪಾಸನೆಯನ್ನು ಹೇಳಿದ್ದಾ ಯಿತು. **ಈಗ ಎಲ್ಲಾ ಉಪಾಸನೆಗೂ**[1] **ಅಂಗವಾಗಿರುವ ಓಂಕಾರದ ಉಪಾ ಸನೆಯನ್ನು ವಿಧಿಸಲಾಗುತ್ತದೆ.** ಪರಬ್ರಹ್ಮ, ಅಪರಬ್ರಹ್ಮ-ಎಂಬ ದೃಷ್ಟಿಯಿಂದ ಓಂಕಾರವನ್ನು ಉಪಾಸನೆಮಾಡಿದರೆ (ಅದು) ಬರಿಯ ಶಬ್ದವೇ ಆದರೂ ಪರ ಅಥವಾ ಅಪರಬ್ರಹ್ಮವನ್ನು ಪಡೆಯುವದಕ್ಕೆ ಸಾಧನವಾಗುತ್ತದೆ. **ವಿಷ್ಣುವಿಗೆ ಪ್ರತಿಮೆ ಹೇಗೋ ಹಾಗೆ** ಪರಬ್ರಹ್ಮಕ್ಕೂ ಅಪರಬ್ರಹ್ಮಕ್ಕೂ ಅದೇ ಆಲಂಬನವಾಗಿರುತ್ತದೆ.[2] "ಇದೇ ಆಶ್ರಯದಿಂದ ಇವೆರಡರಲ್ಲಿ ಒಂದನ್ನು ಹೋಗಿ ಸೇರಿಕೊಳ್ಳುವನು"[3] (ಪ್ರ. ೬-೨) ಎಂಬ ಶ್ರುತಿ (ಇದಕ್ಕೆ ಪ್ರಮಾಣವು): —

**ಓಮಿತಿ ಬ್ರಹ್ಮ । ಓಮಿತೀದಗ್ಂ ಸರ್ವಮ್ । ಓಮಿತ್ಯೇತದನು ಕೃತಿ ಹ ಸ್ಮ ವಾ ಅಪ್ಯೋ ಶ್ರಾವಯೇತ್ಯಾಶ್ರಾವಯನ್ತಿ । ಓಮಿತಿ ಸಾಮಾನಿ ಗಾಯನ್ತಿ । ಓಗ್ಂಶೋಮಿತಿ ಶಸ್ತ್ರಾಣಿ ಶಗ್ಂಸನ್ತಿ । ಓಮಿತ್ಯಧ್ವರ್ಯುಃ ಪ್ರತಿಗರಂ ಪ್ರತಿಗೃಣಾತಿ । ಓಮಿತಿ ಬ್ರಹ್ಮಾ ಪ್ರಸೌತಿ । ಓಮಿತ್ಯಗ್ನಿಹೋತ್ರಮನುಜಾನಾತಿ ।**

---

1. ಸಗುಣನಿರ್ಗುಣಬ್ರಹ್ಮಗಳ ಉಪಾಸನೆಗಳಿಗೂ. ಈ ಅನುವಾಕದಲ್ಲಿ ಹೇಳಿರುವದು ಅಪರಬ್ರಹ್ಮದ ಉಪಾಸನೆ; ಪ್ರಶ್ನ ೬-೫ರಲ್ಲಿ ಹಿರಣ್ಯಗರ್ಭನ ಪ್ರಾಪ್ತಿಯ ದ್ವಾರದಿಂದ ಪರ ಮಾತ್ಮನ ದರ್ಶನವನ್ನು ಪಡೆಯುತ್ತಾರೆಂದು ಹೇಳಿದೆ.

2. ಪ್ರತೀಕವಾಗಿರುತ್ತದೆ. ಓಂಕಾರದ ಅರ್ಥವನ್ನು ಪರಿಶೀಲನೆಮಾಡಿದರೆ ಪರಮಾತ್ಮ ಜ್ಞಾನವೂ ಆಗುತ್ತದೆ. ಆದರೆ ಈ ವಲ್ಲಿಯಲ್ಲಿ ಜ್ಞಾನವು ಪ್ರಕೃತವಾಗಿಲ್ಲವಾದ್ದರಿಂದ ಆದನ್ನು ಇಲ್ಲಿ ಹೇಳಲಿಲ್ಲ. ಪ್ರತೀಕೋಪಾಸನೆಯ ವಿಚಾರಕ್ಕೆ ಸೂ. ಭಾ. ೪-೧-೪, ೫ ನೋಡಿ.

3. ಇದು ಪ್ರತೀಕೋಪಾಸನೆಯಾದರೂ ಪರಾಪರಬ್ರಹ್ಮದ ಉಪಾಸನೆಯ ಅಂಗವಾಗಿರು ವದರಿಂದಲೂ ಶ್ರುತಿವಚನಸಾಮರ್ಥ್ಯದಿಂದಲೂ ಪಂಚಾಗ್ನಿವಿದ್ಯೆಯೇ ಮುಂತಾದವುಗಳಿಂದ ಆಗುವಂತೆ ಇದರಿಂದಲೂ ಬ್ರಹ್ಮಪ್ರಾಪ್ತಿಯಾಗುತ್ತದೆ. ಸೂ. ಭಾ. ೪-೪-೧೫ ನೋಡಿ.

**ಓಮಿತಿ ಬ್ರಾಹ್ಮಣಃ ಪ್ರವಕ್ಷ್ಯನ್ನಾಹ ಬ್ರಹ್ಮೋಪಾಪ್ನವಾನೀತಿ। ಬ್ರಹ್ಮೈವೋಪಾಪ್ನೋತಿ ॥ ೮ ॥**

೮. ಓಂ ಎಂಬುದು ಬ್ರಹ್ಮವು. ಇದೆಲ್ಲವೂ ಓಂ ಎಂಬುದು. ಓಂ ಎಂಬುದು ಅನುಕೃತಿಯಲ್ಲವೆ ? ಮತ್ತು " ಓ ಶ್ರಾವಯ !" ಎಂದಮೇಲೆ (ಮಂತ್ರವನ್ನು) ಹೇಳುತ್ತಾರೆ. ಓಂ! ಎಂದು ಸಾಮಗಳನ್ನು ಗಾನಮಾಡುತ್ತಾರೆ. ಓಂ ಶೋಂ ಎಂದು ಶಸ್ತ್ರಗಳನ್ನು ಶಂಸನಮಾಡುತ್ತಾರೆ. ಓಂ ! ಎಂದು ಅಧ್ವರ್ಯುವು ಪ್ರತಿಗರವನ್ನು ತಿರುಗಿ ಹೇಳುತ್ತಾನೆ. ಓಂ ! ಎಂದು ಅಗ್ನಿಹೋತ್ರಕ್ಕೆ ಒಪ್ಪಿಗೆಯನ್ನು ಕೊಡುತ್ತಾನೆ. ಬ್ರಹ್ಮವನ್ನೇ (ನಾನು) ಪಡೆಯಬೇಕು ಎಂದು ಬ್ರಾಹ್ಮಣನು ಪ್ರವಚನಮಾಡುವವನಾಗಿ ಓಂ ! ಎಂದು ಹೇಳುತ್ತಾನೆ, ಬ್ರಹ್ಮವನ್ನೇ ಪಡೆಯುತ್ತಾನೆ.

## ಓಂಕಾರೋಪಾಸನೆಯ ವಿಧಿ

(ಭಾಷ್ಯ)

೫೧. ಓಮಿತಿ । ಇತಿ ಶಬ್ದಃ ಸ್ವರೂಪಪರಿಚ್ಛೇದಾರ್ಥಃ । ಓಂ ಇತ್ಯೇತತ್ ಶಬ್ದರೂಪಂ ಬ್ರಹ್ಮ ಇತಿ ಮನಸಾ ಧಾರಯೇತ್ ಉಪಾಸೀತ । ಯತಃ ಓಮಿತಿ ಇದಂ ಸರ್ವಮ್ । ಸರ್ವಂ ಹಿ ಶಬ್ದರೂಪಮ್ ಓಂಕಾರೇಣ ವ್ಯಾಪ್ತಮ್ । " ತದ್ಯಥಾ ಶಙ್ಕುನಾ " (ಛಾ. ೨-೨೩-೩) ಇತಿ ಶ್ರುತ್ಯನ್ತರಾತ್ । ಅಭಿಧಾನತನ್ತ್ರಂ ಹಿ ಅಭಿಧೇಯಮ್ ಇತ್ಯತಃ ಇದಂ ಸರ್ವಮ್ ಓಂಕಾರಃ ಇತ್ಯುಚ್ಯತೇ ॥

(ಭಾಷ್ಯಾರ್ಥ)

" ಓಮಿತಿ " (ಎಂಬಲ್ಲಿ) ಇತಿ ಎಂಬ ಶಬ್ದವು (ಓಂಕಾರದ) ಸ್ವರೂಪವನ್ನು ಗೊತ್ತುಪಡಿಸುವದಕ್ಕೆ (ಪ್ರಯುಕ್ತವಾಗಿರುತ್ತದೆ). ಓಂ ಎಂಬೀ ಶಬ್ದರೂಪವು ಬ್ರಹ್ಮವು ಎಂದು ಮನಸ್ಸಿನಿಂದ ಧರಿಸಬೇಕು, ಉಪಾಸನೆಮಾಡಬೇಕು. ಏಕೆಂದರೆ ಇದೆಲ್ಲವೂ ಓಂಕಾರವೇ, ಎಂದರೆ ಶಬ್ದರೂಪವೆಲ್ಲವೂ ಓಂಕಾರದಿಂದಲೇ ವ್ಯಾಪ್ತವಾಗಿರುತ್ತದೆ.[1] " ಹೇಗೆ ಎಲೆಯ ನಾಳದಿಂದ (ಎಲೆಗಳೆಲ್ಲ ವ್ಯಾಪ್ತವಾಗಿರುವವೋ) " (ಛಾ. ೨-೨೩-೩) ಎಂಬ ಬೇರೊಂದು ಶ್ರುತಿಯೂ ಇದಕ್ಕೆ ಪ್ರಮಾಣವು. ಅಭಿ

---

1. ಓಂಕಾರದ ಕಾರ್ಯವಾಗಿರುತ್ತದೆ; ಓಂ ಎಂಬುದು ಸರ್ವವಾಚಕವು, ಮಿಕ್ಕ ಶಬ್ದಗಳು ಒಂದೊಂದು ವ್ಯಕ್ತಿಯನ್ನು ಮಾತ್ರ ಹೇಳುತ್ತವೆ.

**ಧ್ಯಾನಕ್ಕೆ ಅಭಿಧೇಯವು ಅಧೀನವಾಗಿರುತ್ತದೆ**; ಆದ್ದರಿಂದ ಇದೆಲ್ಲವೂ ಓಂಕಾರವೇ ಎಂದಿರುತ್ತದೆ.[1]

## ಓಂಕಾರದ ಸ್ತುತಿ

(ಭಾಷ್ಯ)

೫೨. ಓಂಕಾರಸ್ತುತ್ಯರ್ಥಃ[2] ಉತ್ತರೋ ಗ್ರನ್ಥಃ । ಉಪಾಸ್ಯತ್ವಾತ್ ತಸ್ಯ । ಓಂ ಇತ್ಯೇತತ್ ಅನುಕೃತಿಃ ಅನುಕರಣಮ್ । 'ಕರೋಮಿ' 'ಯಾಸ್ಯಾಮಿ ಚ' ಇತಿ ಕೃತಮ್ ಉಕ್ತಮ್ ಓಂ! ಇತ್ಯನುಕರೋತಿ ಅನ್ಯಃ । ಅತಃ ಓಂಕಾರೋಽನುಕೃತಿಃ । ಹ ಸ್ಮ ವೈ ಇತಿ ಪ್ರಸಿದ್ಧಾವದ್ಯೋತಕಾಃ । ಪ್ರಸಿದ್ಧಂ ಹಿ ಓಂಕಾರಸ್ಯ ಅನುಕೃತಿತ್ವಮ್ । ಅಪಿ ಚ ಓ ಶ್ರಾವಯ ಇತಿ ಪ್ರೈಷಪೂರ್ವಕಮ್ ಆಶ್ರಾವಯನ್ತಿ ಪ್ರತಿಶ್ರಾವಯನ್ತಿ । ತಥಾ ಓಂ! ಇತಿ ಸಾಮಾನಿ ಗಾಯನ್ತಿ ಸಾಮಗಾಃ । ಓಂ ಶೋಂ ಇತಿ ಶಸ್ತ್ರಾಣಿ ಶಂಸನ್ತಿ ಶಸ್ತ್ರಶಂಸಿತಾರೋಽಪಿ । ತಥಾ ಓಂ! ಇತಿ ಅಧ್ವರ್ಯುಃ ಪ್ರತಿಗರಂ ಪ್ರತಿಗೃಣಾತಿ । ಓಂ! ಇತಿ ಬ್ರಹ್ಮಾ ಪ್ರಸೌತಿ, ಅನುಜಾನಾತಿ[3] ಓಂ! ಇತಿ ಅಗ್ನಿಹೋತ್ರಮ್ ಅನುಜಾನಾತಿ । ಜುಹೋಮಿ ಇತ್ಯುಕ್ತಃ ಓಂ! ಇತ್ಯೇವ ಅನುಜ್ಞಾಂ ಪ್ರಯಚ್ಛತಿ । ಓಂ ಇತ್ಯೇವ ಬ್ರಾಹ್ಮಣಃ ಪ್ರವಕ್ಷ್ಯನ್ ಪ್ರವಚನಂ ಕರಿಷ್ಯನ್ ಅಧ್ಯೇಷ್ಯಮಾಣಃ ಓಮಿತ್ಯೇವಾಹ ಓಮಿತಿ ಪ್ರತಿಪದ್ಯತೇ ಅಧ್ಯೇತುಮ್ ಇತ್ಯರ್ಥಃ । ಬ್ರಹ್ಮ ವೇದಮ್ ಉಪಾಪ್ನವಾನಿ ಇತಿ ಪ್ರಾಪ್ನುಯಾಂ ಗ್ರಹೀಷ್ಯಾಮಿ ಇತಿ । ಉಪಾಪ್ನೋತ್ಯೇವ ಬ್ರಹ್ಮ । ಅಥವಾ ಬ್ರಹ್ಮ ಪರಮಾತ್ಮಾನಮ್ ಉಪಾಪ್ನವಾನಿ ಇತಿ ಆತ್ಮಾನಂ ಪ್ರವಕ್ಷ್ಯನ್ ಪ್ರಾಪಯಿಷ್ಯನ್ ಓಂ! ಇತ್ಯೇವಾಹ । ಸ ಚ ತೇನ ಓಂಕಾರೇಣ ಬ್ರಹ್ಮ ಪ್ರಾಪ್ನೋತ್ಯೇವ । ಓಂಕಾರಪೂರ್ವಂ ಪ್ರವೃತ್ತಾನಾಂ ಕ್ರಿಯಾಣಾಂ ಫಲವತ್ತ್ವಂ ಯಸ್ಮಾತ್, ತಸ್ಮಾತ್ ಓಂಕಾರಂ ಬ್ರಹ್ಮ ಇತ್ಯುಪಾಸೀತ ಇತಿ ವಾಕ್ಯಾರ್ಥಃ ॥

(ಭಾಷ್ಯಾರ್ಥ)

(ಇನ್ನು) ಮುಂದಿನ ಗ್ರಂಥವು ಓಂಕಾರವನ್ನು ಹೊಗಳುವದಕ್ಕೆ (ಬಂದಿರುತ್ತದೆ). ಏಕೆಂದರೆ ಅದನ್ನೇ ಉಪಾಸನೆಮಾಡಬೇಕಾಗಿರುತ್ತದೆ.[4]

---

1. ಓಂಕಾರವಾಚ್ಯವೇ ಎಲ್ಲವೂ ಎಂಬಭಿಪ್ರಾಯದಿಂದ ಹೀಗೆ ಹೇಳಿರುತ್ತದೆ.
2. 'ಸ್ತುತ್ಯರ್ಥಮ್' ಎಂದು ಆ॥ಕಾ॥ ಪಾಠ.
3. 'ಉಕ್ತಃ' ಎಂಬ ವಾ॥ಕಾ॥ ಪಾಠಕ್ಕಿಂತ ಇದೇ ಮೇಲೆಂದು ತೋರುತ್ತದೆ.
4. ಯಾವದರ ಉಪಾಸನೆಯನ್ನು ವಿಧಿಸಿದೆಯೋ ಅದನ್ನು ಹೊಗಳುವದು ಯುಕ್ತ. ಇಲ್ಲಿ ಓಂಕಾರದ ಉಪಾಸನೆಯನ್ನು ವಿಧಿಸಿದೆ. ಆದ್ದರಿಂದ ಅದನ್ನು ಹೊಗಳಿರುತ್ತದೆ.

ಓಂ ಎಂಬುದು ಅನುಕೃತಿಯು ಎಂದರೆ ಅನುಕರಣವು. ಕೃತವನ್ನು ಎಂದರೆ ಒಬ್ಬನು ಹೇಳಿದ್ದನ್ನು ಓಂ! 'ಮಾಡುತ್ತೇನೆ', 'ಹೋಗುತ್ತೇನೆ' ಎಂದು ಮತ್ತೊಬ್ಬನು ಅನುಕರಣಮಾಡುತ್ತಾನೆ.[1] ಆದ್ದರಿಂದ ಓಂಕಾರವು ಅನುಕೃತಿಯು, ಹ ಸ್ಮ ವೈ (ಎಂಬ ಅವ್ಯಯಗಳು) ಇದು ಪ್ರಸಿದ್ಧವೆಂಬುದನ್ನು ತೋರಿಸುತ್ತವೆ. ಓಂಕಾರವು ಅನುಕೃತಿ(ವಾಚಕ)ವೆಂಬುದು ಪ್ರಸಿದ್ಧವಲ್ಲವೆ? (ಎಂದಭಿಪ್ರಾಯ). ಮತ್ತು "ಓ ಶ್ರಾವಯ" ಎಂಬ ಪ್ರೈಷಪೂರ್ವಕವಾಗಿ[2] (ಮಂತ್ರವನ್ನು) ಹೇಳುತ್ತಾರೆ, ಹಿಂತಿರುಗಿ ಅನ್ನುತ್ತಾರೆ. ಇದರಂತೆ ಸಾಮಗಾನಮಾಡುವವರು ಓಂ! ಎಂದ (ಬಳಿಕವೇ) ಸಾಮವನ್ನು ಹಾಡುತ್ತಾರೆ. ಶಸ್ತ್ರವನ್ನು ಹೇಳುವವರುಕೂಡ "ಓಂ ಶೋಂ!"[3] ಎಂದು ಶಸ್ತ್ರಗಳನ್ನು ಹೇಳುತ್ತಾರೆ. ಹೀಗೆಯೇ ಓಂ! ಎಂದು ಅಧ್ವರ್ಯುವು ಪ್ರತಿಗರವನ್ನು[4] ಪ್ರತಿಯಾಗಿ ಹೇಳುತ್ತಾನೆ ಬ್ರಹ್ಮನು ಓಂ! ಎಂದು ಒಪ್ಪಿಗೆಯನ್ನು ಕೊಡುತ್ತಾನೆ, ಒಪ್ಪುತ್ತಾನೆ.[5] ಓಂ! ಎಂದು ಅಗ್ನಿಹೋತ್ರಕ್ಕೆ ಒಪ್ಪಿಗೆಯನ್ನು ಕೊಡುತ್ತಾನೆ; "ಹೋಮಮಾಡುತ್ತೇನೆ" ಎಂದು ಹೇಳುತ್ತಲೂ ಓಂ! ಎಂದೇ ಅನುಜ್ಞೆಯನ್ನು ಕೊಡುತ್ತಾನೆ.[6] ಬ್ರಾಹ್ಮಣನು 'ಪ್ರವಕ್ಷ್ಯನ್'

---

1. ಹಾಗೆ ಆಗಲಿ; ಹಾಗೇ ಮಾಡುತ್ತೇನೆ ಎಂದು ತಿಳಿಸುವದಕ್ಕೆ ಓಂ! ಎನ್ನುತ್ತಾನೆ.

2. ದರ್ಶಪೂರ್ಣಮಾಸವೇ ಮುಂತಾದ ಯಾಗಗಳಲ್ಲಿ ಯಜುರ್ವೇದೋಕ್ತಕರ್ಮವನ್ನು ಮಾಡುವ ಅಧ್ವರ್ಯುವು ಆಗ್ನೀಧ್ರನನ್ನು "ಎಲೈ ಆಗ್ನೀಧ್ರನೆ, ದೇವತೆಗಳಿಗೆ ಹವಿಸ್ಸನ್ನು ಕೊಡುವ ಕಾಲವನ್ನು ತಿಳಿಸು" ಎಂದು ಕೇಳುವದಕ್ಕೆ "ಓ ಶ್ರಾವಯ" ಎನ್ನುವನು. ಇದಕ್ಕೆ ಪ್ರೈಷವೆಂದು ಹೆಸರು. ಇಲ್ಲಿ ಓ ಎಂಬದು ಓಂಕಾರದ ರೂಪಾಂತರವು.

3. ಋಗ್ವೇದಿಯಾದ ಹೋತೃವು ನಿಷ್ಕೇವಲ್ಯವೇ ಮುಂತಾದ ಶಸ್ತ್ರಗಳನ್ನು ಹೇಳವಲ್ಲಿ ಅಧ್ವರ್ಯುವಿನ ಅನುಜ್ಞೆಯನ್ನು ಬೇಡುವದಕ್ಕೆ "ಅಧ್ವರ್ಯೋ ಶೋಂಸಾವೋಮ್" ಎಂದು ಹೇಳುವನು. ಇಲ್ಲಿ ಮೊದಲು ಶೋಂ ಕೊನೆಯಲ್ಲಿ ಓಂ ಎಂದು ಇರುತ್ತದೆ. ಅಧ್ವರ್ಯುವೆ, ನಾವು ಶಂಸನವನ್ನು ಮಾಡೋಣವೆ?—ಎಂದು ಮಂತ್ರದ ಅರ್ಥ.

4. ಅಧ್ವರ್ಯುವು ಶಸ್ತ್ರವನ್ನು ಕೇಳಿ ಹೇಳುವ "ಓಥಾಮೋದ ಇವ" (ಎಲೈ ನಮಗೆ ಶಸ್ತ್ರವನ್ನು ಕೇಳಿ ಬಹಳ ಸಂತೋಷವಾಯಿತು) ಎಂಬ ಪ್ರೋತ್ಸಾಹಕವಾಕ್ಯಕ್ಕೆ ಪ್ರತಿಗರವೆಂದು ಹೆಸರು.

5. ಇತರ ಋತ್ವಿಜರಿಗೆ ಅನುಜ್ಞೆಯನ್ನು ಕೊಡುತ್ತಾನೆ. ಇಲ್ಲಿ 'ಪ್ರೈಷಪೂರ್ವಕಮಾಶ್ರಾವಯತಿ" ಎಂದು (ಆ॥) ಪಾಠದಲ್ಲಿ ಹೆಚ್ಚಾಗಿ ಬಿದ್ದಿದೆ,

6. ಬ್ರಹ್ಮನು ಅಗ್ನಿಹೋತ್ರವನ್ನು ಮಾಡಬಹುದೆಂದು ಕೊಡುವ ಅನುಜ್ಞೆಯೂ ಓಂಕಾರರೂಪವಾಗಿರುತ್ತದೆ.

ಪ್ರವಚನಮಾಡಬೇಕೆಂದು[1] ಅಧ್ಯಯನಮಾಡಬೇಕೆಂದು ಓಂ! ಎಂದೇ ಹೇಳುತ್ತಾನೆ, ಓಂ! ಎಂದೇ ಅಧ್ಯಯನಮಾಡುವದಕ್ಕೆ ಮೊದಲುಮಾಡುತ್ತಾನೆ ಎಂದರ್ಥ. ಬ್ರಹ್ಮವನ್ನು ಎಂದರೆ ವೇದವನ್ನು ಪಡೆಯೋಣ, ಗ್ರಹಣಮಾಡೋಣ, ಎಂದು (ಓಂಕಾರೋಚ್ಚಾರಣದಿಂದ ಮೊದಲುಮಾಡುತ್ತಾನೆ. ಅವನು ಅದರಂತೆ) ಬ್ರಹ್ಮವನ್ನು ಪಡೆದೇ ಪಡೆಯುತ್ತಾನೆ. ಅಥವಾ ಬ್ರಹ್ಮವೆಂದರೆ ಪರಮಾತ್ಮನು; (ಅವನನ್ನು) ಪಡೆಯುತ್ತೇನೆ ಎಂದು ತನ್ನನ್ನು (ಆ ಬ್ರಹ್ಮವನ್ನು) ಮುಟ್ಟಿಸಿಕೊಳ್ಳುವದಕ್ಕಾಗಿ[2] ಓಂ! ಎಂದೇ ಹೇಳುತ್ತಾನೆ. ಮತ್ತು ಅವನು ಆ ಓಂಕಾರ(ದ ಉಚ್ಚಾರಣೆ)ಯಿಂದ ಬ್ರಹ್ಮವನ್ನು ಪಡೆದೇಪಡೆಯುತ್ತಾನೆ.

ಓಂಕಾರಪೂರ್ವಕವಾಗಿ ಪ್ರಾರಂಭಮಾಡಿದ ಕರ್ಮಗಳೆಲ್ಲವೂ ಸಫಲವಾಗುವವಲ್ಲವೆ, ಆದ್ದರಿಂದ ಓಂಕಾರವನ್ನು ಬ್ರಹ್ಮವೆಂದು ಉಪಾಸನೆಮಾಡಬೇಕು ಎಂದು (ಒಟ್ಟು) ವಾಕ್ಯದ ಅರ್ಥವು.

# ೬. ಕರ್ಮಗಳಿಗೆ ಆನರ್ಥಕ್ಯಪರಿಹಾರ

## ಅನುವಾಕದ ವಿಷಯ

(ಭಾಷ್ಯ)

೫೩. ವಿಜ್ಞಾನಾದೇವ ಆಪ್ನೋತಿ ಸ್ವಾರಾಜ್ಯಮ್ (೪೩) ಇತ್ಯುಕ್ತತ್ವಾತ್ ಶ್ರೌತಸ್ಮಾರ್ತಾನಾಂ ಕರ್ಮಣಾಮ್ ಆನರ್ಥಕ್ಯಂ ಪ್ರಾಪ್ತಮ್ ಇತ್ಯತಃ ತನ್ಮಾ[3] ಪ್ರಾಪತ್ ಇತಿ ಕರ್ಮಣಾಂ ಪುರುಷಾರ್ಥಂ ಪ್ರತಿ ಸಾಧನತ್ವಪ್ರದರ್ಶನಾರ್ಥಃ ಇಹ ಉಪನ್ಯಾಸಃ ||

---

1. ವಚ ಪರಿಭಾಷಣೇ ಎಂಬ ಧಾತುವಿನಿಂದ ಪ್ರವಕ್ಷ್ಯೆ ಎಂಬ ರೂಪವು ಬಂದಿದೆ ಎಂದು ಇಟ್ಟುಕೊಂಡಿದೆ.

2. ವಹ ಪ್ರಾಪಣೇ ಎಂಬ ಧಾತುವಿನ ರೂಪವು ಪ್ರವಕ್ಷ್ಯೆ ಎಂಬುದೆಂದು ಇಟ್ಟುಕೊಂಡು ಈ ಅರ್ಥವನ್ನು ಹೇಳಿದೆ. ಓಂಕಾರೋಚ್ಚಾರಣೆಯಿಂದ ಅಧ್ಯಯನಮಾಡುವವನಿಗೆ ವೇದವು ಅಳವಡುವದೆಂದು ಹಿಂದೆ ಹೇಳಿತ್ತು; ಓಂಕಾರವನ್ನು ಉಚ್ಚರಿಸುವದರಿಂದ ಪ್ರೀತನಾದ ಪರಮೇಶ್ವರನು ಉಪಾಸಕನಿಗೆ ತನ್ನ ಸಾಯುಜ್ಯವನ್ನು ಕೊಡುವನು ಎಂದು ಈಗ ಹೇಳಿದೆ.

3. "ಇತ್ಯೇತನ್ಮಾ" ಎಂದು ವಾ|| ಪಾಠ.

(ಭಾಷ್ಯಾರ್ಥ)

ವಿಜ್ಞಾನದಿಂದಲೇ ಸ್ವಾರಾಜ್ಯವನ್ನು ಪಡೆಯುತ್ತಾನೆ (೪೩) ಎಂದು ಹೇಳಿದ್ದ ರಿಂದ **ಶ್ರೌತಸ್ಮಾರ್ತಕರ್ಮಗಳು** ವ್ಯರ್ಥವೆಂದಾಯಿತು. ಆದ್ದರಿಂದ ಹಾಗಾಗ ಬಾರದೆಂದು ಕರ್ಮಗಳು ಪುರುಷಾರ್ಥಕ್ಕೆ [1] ಸಾಧನವೆಂದು ತೋರಿಸಿಕೊಡುವದಕ್ಕಾಗಿ (ಅವನ್ನು) ಇಲ್ಲಿ [2] ಹೇಳಿರುತ್ತದೆ.

**ಋತಂ ಚ ಸ್ವಾಧ್ಯಾಯಪ್ರವಚನೇ ಚ । ಸತ್ಯಂ ಚ ಸ್ವಾಧ್ಯಾಯ ಪ್ರವಚನೇ ಚ । ತಪಶ್ಚ ಸ್ವಾಧ್ಯಾಯಪ್ರವಚನೇ ಚ । ದಮಶ್ಚ ಸ್ವಾಧ್ಯಾಯಪ್ರವಚನೇ ಚ । ಶಮಶ್ಚ ಸ್ವಾಧ್ಯಾಯಪ್ರವಚನೇ ಚ । ಅತಿಥಯಶ್ಚ ಸ್ವಾಧ್ಯಾಯಪ್ರವಚನೇ ಚ । ಮಾನುಷಂ ಚ ಸ್ವಾಧ್ಯಾಯಪ್ರವಚನೇ ಚ । ಪ್ರಜಾ ಚ ಸ್ವಾಧ್ಯಾಯಪ್ರ ವಚನೇ ಚ। ಪ್ರಜನಶ್ಚ ಸ್ವಾಧ್ಯಾಯಪ್ರವಚನೇ ಚ. ಪ್ರಜಾತಿಶ್ಚ ಸ್ವಾಧ್ಯಾಯಪ್ರವಚನೇ ಚ । ಸತ್ಯಮಿತಿ ಸತ್ಯವಚಾ ರಾಥೀ ತರಃ । ತಪ ಇತಿ ತಪೋನಿತ್ಯಃ ಪೌರುಶಿಷ್ಟಿಃ। ಸ್ವಾಧ್ಯಾಯ ಪ್ರವಚನೇ ಏವೇತಿ ನಾಕೋ ಮೌದ್ಗಲ್ಯಃ। ತದ್ಧಿ ತಪಸ್ತದ್ಧಿ ತಪಃ ॥ ೯ ॥**

೯. ಋತವೂ ಸ್ವಾಧ್ಯಾಯಪ್ರವಚನಗಳೂ; ಸತ್ಯವೂ ಸ್ವಾಧ್ಯಾಯ ಪ್ರವಚನಗಳೂ; ತಪಸ್ಸೂ ಸ್ವಾಧ್ಯಾಯಪ್ರವಚನಗಳೂ; ದಮವೂ ಸ್ವಾಧ್ಯಾಯಪ್ರವಚನಗಳೂ; ಶಮವೂ ಸ್ವಾಧ್ಯಾಯಪ್ರವಚನಗಳೂ; ಅಗ್ನಿ ಗಳೂ ಸ್ವಾಧ್ಯಾಯಪ್ರವಚನಗಳೂ; ಅಗ್ನಿಹೋತ್ರವೂ ಸ್ವಾಧ್ಯಾಯಪ್ರವಚನ ಗಳೂ; ಅತಿಥಿಗಳೂ ಸ್ವಾಧ್ಯಾಯಪ್ರವಚನಗಳೂ; ಮಾನುಷವೂ ಸ್ವಾಧ್ಯಾಯ ಪ್ರವಚನಗಳೂ; ಪ್ರಜೆಯೂ ಸ್ವಾಧ್ಯಾಯಪ್ರವಚನಗಳೂ; ಪ್ರಜನವೂ ಸ್ವಾಧ್ಯಾಯಪ್ರವಚನಗಳೂ; ಪ್ರಜಾತಿಯೂ ಸ್ವಾಧ್ಯಾಯಪ್ರವಚನಗಳೂ. 'ಸತ್ಯವು' ಎಂದು ಸತ್ಯವಚನದ ರಾಥೀತರನು; 'ತಪಸ್ಸು' ಎಂದು ತಪೋ ನಿತ್ಯನಾದ ಪೌರುಶಿಷ್ಟಿಯು; ಸ್ವಾಧ್ಯಾಯಪ್ರವಚನಗಳೇ' ಎಂದು ನಾಕಮೌದ್ಗಲ್ಯನು. ಅದೇ ತಪಸ್ಸು, ಅದೇ ತಪಸ್ಸು.

---

1. **ಮೋಕ್ಷಕ್ಕೆ.**

2. **ವಿದ್ಯಾಪ್ರಕರಣದಲ್ಲಿ. ಕರ್ಮಕಾಂಡದಲ್ಲಿ ಹೇಳಿರುವದು ಮುಮುಕ್ಷುಗಳಲ್ಲದವರೂ ವರ್ಣಾಶ್ರಮಧರ್ಮಗಳನ್ನು ಮಾಡಬೇಕೆಂದು ತಿಳಿಸುವದಕ್ಕೆ ಸೂ. ಭಾ. ೩-೪-೩೪.**

## ಮುಮುಕ್ಷುವು ಮಾಡಬೇಕಾದ ಕರ್ಮಗಳು

(ಭಾಷ್ಯ)

೫೪. ಋತಮ್ ಇತಿ ವ್ಯಾಖ್ಯಾತಮ್ । ಸ್ವಾಧ್ಯಾಯಃ ಅಧ್ಯಯನಮ್ । ಪ್ರವಚನಮ್ ಅಧ್ಯಾಪನಂ ಬ್ರಹ್ಮಯಜ್ಞೋ ವಾ । ಏತಾನಿ ಋತಾದೀನಿ 'ಅನುಷ್ಠೇಯಾನಿ' ಇತಿ ವಾಕ್ಯಶೇಷಃ । ಸತ್ಯಂ ಸತ್ಯವಚನಮ್ । ಯಥಾವ್ಯಾಖ್ಯಾತಾರ್ಥಂ ವಾ । ತಪಃ ಕೃಚ್ಛ್ರಾದಿ । ದಮಃ ಬಾಹ್ಯಕರಣೋಪಶಮಃ । ಶಮಃ ಅನ್ತಃಕರಣೋಪಶಮಃ । ಅಗ್ನಯಶ್ಚ ಆಧಾತವ್ಯಾಃ । ಅಗ್ನಿಹೋತ್ರಂ ಚ ಹೋತವ್ಯಮ್ । ಅತಿಥಯಶ್ಚ ಪೂಜ್ಯಾಃ । ಮಾನುಷಮ್ ಇತಿ ಲೌಕಿಕಃ ಸಂವ್ಯವಹಾರಃ । ತಚ್ಚ ಯಥಾಪ್ರಾಪ್ತಮ್ ಅನುಷ್ಠೇಯಮ್ । ಪ್ರಜಾ ಚ ಉತ್ಪಾದ್ಯಾ । ಪ್ರಜನಶ್ಚ ಪ್ರಜನನಮ್ । ಋತೌ ಭಾರ್ಯಾಗಮನಮ್ ಇತ್ಯರ್ಥಃ । ಪ್ರಜಾತಿಃ ಪೌತ್ರೋತ್ಪತ್ತಿಃ । ಪುತ್ರೋ ನಿವೇಶಯಿತವ್ಯಃ ಇತ್ಯೇತತ್ ॥

(ಭಾಷ್ಯಾರ್ಥ)

**ಋತ**ವೆಂಬುದನ್ನು ಹಿಂದೆ (೧೪ರಲ್ಲಿ) ವಿವರಿಸಿದೆ. **ಸ್ವಾಧ್ಯಾಯ**ವೆಂದರೆ ವೇದವನ್ನು ಕಲಿಯುವದು. **ಪ್ರವಚನ** ಎಂದರೆ ವೇದವನ್ನು ಕಲಿಸುವದು, ಅಥವಾ **ಬ್ರಹ್ಮಯಜ್ಞವು**[1]. ಈ ಋತವೇ ಮುಂತಾದವುಗಳನ್ನು 'ಮಾಡತಕ್ಕದ್ದು' ಎಂದು ವಾಕ್ಯಕ್ಕೆ ಸೇರಿಸಿಕೊಳ್ಳಬೇಕು. **ಸತ್ಯ**ವೆಂದರೆ ಸತ್ಯವನ್ನು ನುಡಿಯುವದು, ಅಥವಾ ಹಿಂದೆ (೧೪ರಲ್ಲಿ) ವಿವರಿಸಿರುವ ಅರ್ಥವು (ಧರ್ಮವು). **ತಪಸ್ಸು** ಎಂದರೆ ಕೃಚ್ಛ್ರವೇ[2] ಮುಂತಾದದ್ದು. **ದಮ** ಎಂದರೆ ಹೊರಗಿನ ಕರಣವನ್ನು ತಡೆದಿಟ್ಟುಕೊಳ್ಳುವದು, **ಶಮ**ವೆಂದರೆ ಒಳಗಿನ ಕರಣವನ್ನು ತಡೆದಿಟ್ಟುಕೊಳ್ಳುವದು.[3] **ಅಗ್ನಿ**ಗಳನ್ನು ಆಧಾನಮಾಡಬೇಕು; **ಅಗ್ನಿಹೋತ್ರ**ವನ್ನೂ ಹೋಮಮಾಡಬೇಕು; **ಅತಿಥಿ**ಗಳನ್ನೂ ಪೂಜಿಸಬೇಕು. **ಮಾನುಷ** ಎಂದರೆ ಲೌಕಿಕವ್ಯವಹಾರವು; ಅದನ್ನೂ ಒದಗಿದಂತೆ ಮಾಡುತ್ತಿರಬೇಕು. **ಪ್ರಜೆ**ಯನ್ನು ಪಡೆಯಬೇಕು. **ಪ್ರಜನ**ವೆಂದರೆ ಪುತ್ರೋತ್ಪತ್ತಿಯನ್ನು ಮಾಡುವ ಯತ್ನವು; ಋತುಕಾಲದಲ್ಲಿ ಭಾರ್ಯೆಯನ್ನು ಕೂಡುವದು ಎಂದರ್ಥ. **ಪ್ರಜಾತಿ** ಎಂದರೆ ಮೊಮ್ಮಗನನ್ನು ಪಡೆಯುವದು; ಪುತ್ರನಿಗೆ ಮದುವೆಮಾಡಬೇಕು ಎಂದರ್ಥ.

---

1. ದ್ವಿಜನು ಮಾಡಬೇಕಾಗಿರುವ ಪಂಚಮಹಾಯಜ್ಞಗಳಲ್ಲಿ ಒಂದು.
2. ಕೃಚ್ಛ್ರ, ಚಾಂದ್ರಾಯಣ—ಮುಂತಾದವುಗಳ ಲಕ್ಷಣವನ್ನು ಧರ್ಮಶಾಸ್ತ್ರಗಳಿಂದ ತಿಳಿದುಕೊಳ್ಳಬೇಕು.
3. ಕರ್ಮಗಳು ಬಾಹ್ಯಸಾಧನ, ಶಮಾದಿಗಳು ಅಂತರಂಗಸಾಧನ. ಸೂ. ಭಾ. ೩-೪-೨೭ನ್ನು ನೋಡಿ.

## ಮುಮುಕ್ಷುವಿನ ಕರ್ಮಗಳಲ್ಲಿ ಮುಖ್ಯವಾದವುಗಳು

(ಭಾಷ್ಯ)

೫೫. ಸರ್ವೈರೇತೈಃ ಕರ್ಮಭಿರ್ಯುಕ್ತಸ್ಯಾಪಿ ಸ್ವಾಧ್ಯಾಯಪ್ರವಚನೇ ಯತ್ನತೋಽನುಷ್ಠೇಯೇ ಇತ್ಯೇವಮರ್ಥಂ ಸರ್ವೇಣ ಸಹ ಸ್ವಾಧ್ಯಾಯಪ್ರವಚನ ಗ್ರಹಣಮ್ । ಸ್ವಾಧ್ಯಾಯಾಧೀನಂ ಹಿ ಅರ್ಥಜ್ಞಾನಮ್ । ಅರ್ಥಜ್ಞಾನಾಯತ್ತಂ ಚ[1] ಪರಂ ಶ್ರೇಯಃ । ಪ್ರವಚನಂ ಚ ತದವಿಸ್ಮರಣಾರ್ಥಂ ಧರ್ಮಪ್ರವೃದ್ಧ್ಯರ್ಥಂ[2] ಚ । ಅತಃ[3] ಸ್ವಾಧ್ಯಾಯಪ್ರವಚನಯೋರಾದರಃ ಕಾರ್ಯಃ । ಸತ್ಯಮಿತಿ ಸತ್ಯಮೇವ ಅನುಷ್ಠೇಯಮ್ ಇತಿ ಸತ್ಯವಚಾಃ ಸತ್ಯಮೇವ ವಚೋ ಯಸ್ಯ ಸೋಽಯಂ ಸತ್ಯ ವಚಾಃ। ನಾಮ ವಾ ತಸ್ಯ। ರಾಥೀತರಃ । ರಥೀತರಸಗೋತ್ರಃ[4] ರಾಥೀತರ ಆಚಾರ್ಯೋ ಮನ್ಯತೇ । ತಪಃ ಇತಿ ತಪ ಏವ ಕರ್ತವ್ಯಮ್ ಇತಿ ತಪೋನಿತ್ಯಃ ತಪಸಿ ನಿತ್ಯಃ ತಪಃ ಪರಃ । ತಪೋನಿತ್ಯ ಇತಿ ವಾ ನಾಮ । ಪೌರುಶಿಷ್ಟಿಃ ಪುರುಶಿಷ್ಟಸ್ಯ ಅಪತ್ಯಂ ಪೌರು ಶಿಷ್ಟಿಃ ಆಚಾರ್ಯೋ ಮನ್ಯತೇ । ಸ್ವಾಧ್ಯಾಯಪ್ರವಚನೇ ಏವ ಅನುಷ್ಠೇಯೇ ಇತಿ ನಾಕೋ ನಾಮತಃ ಮುದ್ಗಲಸ್ಯ ಅಪತ್ಯಂ ಮೌದ್ಗಲ್ಯಃ ಆಚಾರ್ಯೋ ಮನ್ಯತೇ । ತದ್ ಹಿ ತಪಃ ತದ್ ಹಿ ತಪಃ । ಯಸ್ಮಾತ್ ಸ್ವಾಧ್ಯಾಯಪ್ರವಚನೇ ಏವ ತಪಃ ತಸ್ಮಾತ್ ತೇ ಏವ ಅನುಷ್ಠೇಯೇ ಇತಿ । ಉಕ್ತಾನಾಮಪಿ ಸತ್ಯತಪಃಸ್ವಾಧ್ಯಾಯ ಪ್ರವಚನಾನಾಂ ಪುನರ್ಗ್ರಹಣಮ್ ಆದರಾರ್ಥಮ್ ॥

(ಭಾಷ್ಯಾರ್ಥ)

ಈ ಎಲ್ಲಾ ಕರ್ಮಗಳಿಂದೊಡಗೂಡಿದ್ದರೂ ಸ್ವಾಧ್ಯಾಯಪ್ರವಚನಗಳನ್ನು ಯತ್ನಪೂರ್ವಕವಾಗಿ ಅನುಷ್ಠಾನಮಾಡಬೇಕು–ಹೀಗೆಂಬುದನ್ನು (ತಿಳಿಸುವ)ದಕ್ಕಾಗಿ ಪ್ರತಿಯೊಂದರ ಜೊತೆಗೂ "ಸ್ವಾಧ್ಯಾಯ, ಪ್ರವಚನ" ಇವುಗಳನ್ನು ಸೇರಿಸಿಕೊಂಡು ಹೇಳಿರುತ್ತದೆ. ಏಕೆಂದರೆ (ವೇದದ) ಅರ್ಥಜ್ಞಾನವು ಅಧ್ಯಯನವನ್ನು ಅವಲಂಬಿಸಿ ಕೊಂಡಿರುತ್ತದೆ;[5] (ವೇದದ) ಅರ್ಥಜ್ಞಾನವನ್ನು ಪರಮಶ್ರೇಯಸ್ಸು[6] ಅವಲಂಬಿಸಿ

---

1. "ಜ್ಞಾನಾಧೀನಂ ಚ" ಎಂದು ವಾ॥ ಪಾಠ.
2. "ಧರ್ಮವೃದ್ಧ್ಯರ್ಥಂ" ಎಂದು ವಾ॥ ಪಾಠ.
3. 'ತತಃ' ಎಂದು ವಾ॥ ಪಾಠ.
4. "ರಥೀತರಸ್ಯ ಗೋತ್ರಃ" ಎಂದು ಆ॥ ಪಾಠ.
5. ಅಧ್ಯಯನವನ್ನು ಮಾಡದೆ ಇರುವವನಿಗೆ ಅದರ ಅರ್ಥವಿಚಾರಕ್ಕೆ ಅವಕಾಶವಿರುವದಿಲ್ಲ.
6. ಮುಕ್ತಿ.

ೞಂಡಿರುತ್ತದೆ. ಪ್ರವಚನವು ಆ (ವೇದವನ್ನು) ಮರೆಯದಿರುವದಕ್ಕಾಗಿ ಮತ್ತು ರ್ಮವು ಬೆಳೆಯುವದಕ್ಕಾಗಿ.[1] ಇದ್ದರಿಂದ ಸ್ವಾಧ್ಯಾಯ, ಪ್ರವಚನ-ಇವೆರಡರಲ್ಲಿ ಶೆಚ್ಚಿನ) ಆದರವನ್ನು ಮಾಡಬೇಕು. "ಸತ್ಯವು" ಎಂದು ಸತ್ಯವನ್ನೇ ಅನು ಿನಮಾಡಬೇಕು ಎಂದು ಸತ್ಯವಚನನಾದ—ಸತ್ಯವಾಗಿಯೇ ಇರುವ ವಾಕ್ಯುಳ ನು ಯಾವನೋ ಅಂಥವನಾದ್ದರಿಂದ **ಸತ್ಯವಚ** ಎನ್ನಿಸಿಕೊಂಡಿರುತ್ತಾನೆ; ಅಥವಾ ತ್ಯವಚನೆಂಬುದು ಅವನ ಹೆಸರು (ಎಂದಾದರೂ ಇಟ್ಟುಕೊಳ್ಳಬಹುದು).[2]—ರಾಥೀ ರನು, ರಥೀತರನ ಗೋತ್ರದವನಾದ್ದರಿಂದ **ರಾಥೀತರ**ನೆನಿಸಿರುವ, (ರಾಥೀತರ ಂಬ) ಆಚಾರ್ಯನು ಅಭಿಪ್ರಾಯಪಡುತ್ತಾನೆ. "ತಪಸ್ಸು" ಎಂದು ತಪಸ್ಸನ್ನೇ ಾಡಬೇಕು[3] ಎಂದು ತಪೋನಿತ್ಯನಾದ-ತಪಸ್ಸಿನಲ್ಲಿಯೇ ನಿತ್ಯನಾದ ತಪಸ್ಸಿನಲ್ಲಿಯೇ ತ್ಪರನಾಗಿರುವ ಅಥವಾ ತಪೋನಿತ್ಯನೆಂಬ ಹೆಸರುಳ್ಳ-ಪುರುಶಿಷ್ಟನ ಮಗ **ಪೌರು ಷ್ಟಿ** ಎಂಬ ಆಚಾರ್ಯನು ಅಭಿಪ್ರಾಯಪಡುತ್ತಾನೆ. ಏಕೆಂದರೆ ಅದೇ ತಪಸ್ಸು, ದೇ ತಪಸ್ಸು; ಸ್ವಾಧ್ಯಾಯಪ್ರವಚನಗಳೇ ತಪಸ್ಸು, ಆದ್ದರಿಂದ ಅವೆರಡನ್ನೇ ಅನು ಿನಮಾಡಬೇಕು ಎಂದು (ಆತನ ಮತವು). ಹಿಂದೆಯೇ ಹೇಳಿರುವ ಸತ್ಯ, ಪಸ್ಸು, ಸ್ವಾಧ್ಯಾಯಪ್ರವಚನಗಳು-ಇವನ್ನು ಮತ್ತೂ ಹೇಳಿರುವದು ಆದರಕ್ಕಾಗಿ.[4]

# ೧೦. ತ್ರಿಶಂಕುವಿನ ಆರ್ಷದರ್ಶನ

## ಅನುವಾಕದ ವಿಷಯ

(ಭಾಷ್ಯ)

೫೬. "ಅಹಂ ವೃಕ್ಷಸ್ಯ ರೇರಿವಾ" ಇತಿ ಸ್ವಾಧ್ಯಾಯಾರ್ಥೋ ಮನ್ತ್ರಾ ಮ್ನಾಯಃ । ಸ್ವಾಧ್ಯಾಯಶ್ಚ ವಿದ್ಯೋತ್ಪತ್ತಯೇ । ಪ್ರಕರಣಾತ್ । ವಿದ್ಯಾರ್ಥಂ ಹಿ

---

1 ಒಬ್ಬರೊಬ್ಬರಿಗೆ ವೇದವನ್ನು ಹೇಳಿಕೊಡುವದರಿಂದ ಧರ್ಮವು ಬೆಳೆಯುತ್ತದೆ.

2 ಸತ್ಯವನ್ನೇ ಅನುಸರಿಸಬೇಕು ಎಂದು ಉಪದೇಶಮಾಡುವ ಆಚಾರ್ಯನು ಆ ಉಪ ೇಶದ ಅನುಭವವನ್ನು ಪಡೆದಿರುವನೆಂಬುದೇ ಸರಿಯಾದ್ದರಿಂದ ಮೊದಲನೆಯ ಅರ್ಥವೇ ಚ್ಚು ಒಪ್ಪುತ್ತದೆ. ಇದರಂತೆ ಮುಂದೆ ಬರುವ ತಪೋನಿತ್ಯನೆಂಬ ಹೆಸರನ್ನೂ ತಿಳಿಯಬೇಕು. ವು ಯೋಗರೂಢನಾಮಗಳಿರಬಹುದು.

3 ತಪಸ್ಸನ್ನೇ ಮುಖ್ಯವಾಗಿ ಮಾಡಬೇಕು ಎಂದರ್ಥ. ಸತ್ಯ, ಸ್ವಾಧ್ಯಾಯಪ್ರವಚನ—ವುಗಳ ವಿಷಯವನ್ನೂ ಹೀಗೆಯೇ ತಿಳಿಯಬೇಕು. ಇವುಗಳನ್ನು ಮುಮುಕ್ಷುವು ಪ್ರಧಾನವಾಗಿ ನುಷ್ಠಾನಮಾಡಬೇಕು ಎಂದರ್ಥ.

4 ಹಿಂದೆ ಹೇಳಿರುವ ಸಾಧನಗಳಲ್ಲಿ ಇವು ಮುಖ್ಯವೆಂದು ತಿಳಿಸುವದಕ್ಕಾಗಿ; ಅದ ಲ್ಲಿಯೂ ಸ್ವಾಧ್ಯಾಯಪ್ರವಚನಗಳನ್ನು ತಪಸ್ಸೆಂದು ಹೊಗಳಿರುವದರಿಂದ ಅವು ಎಲ್ಲಕ್ಕೂ ಮುಖ್ಯವಾದವು.

ಇದಂ ಪ್ರಕರಣಮ್ । ನ ಚ ಅನ್ಯಾರ್ಥತ್ವಮ್ ಅವಗಮ್ಯತೇ । ಸ್ವಾಧ್ಯಾಯೇನ ಚ ವಿಶುದ್ಧಸತ್ತ್ವಸ್ಯ ವಿದ್ಯೋತ್ಪತ್ತಿರವಕಲ್ಪತೇ ॥

(ಭಾಷ್ಯಾರ್ಥ)

"ಅಹಂ ವೃಕ್ಷಸ್ಯ ರೇರಿವಾ" ಎಂಬ ಮಂತ್ರವನ್ನು (ಇಲ್ಲಿ) ಹೇಳಿರುವದು ಸ್ವಾಧ್ಯಾಯಕ್ಕಾಗಿ[1]. ಸ್ವಾಧ್ಯಾಯವು ಜ್ಞಾನವುಂಟಾಗುವದಕ್ಕೆ[2]. ಏಕೆಂದರೆ (ಇದು ಜ್ಞಾನದ) ಪ್ರಕರಣವಾಗಿರುತ್ತದೆ. ಈ ಪ್ರಕರಣವು ಜ್ಞಾನಕ್ಕಾಗಿಯೇ; ಮತ್ತೊಂದು ಪ್ರಯೋಜನವು (ಇದಕ್ಕೆ ಇದೆ) ಎಂಬುದು ನಿಶ್ಚಿತವಾಗಿರುವದೂ ಇಲ್ಲ.[3] ಸ್ವಾಧ್ಯಾಯದಿಂದ ಸತ್ತ್ವಶುದ್ಧಿಯುಂಟಾದವನಿಗೆ ಜ್ಞಾನವುಂಟಾಗುವದೆಂಬುದು ಯುಕ್ತವಾಗಿರುತ್ತದೆ.

**ಅಹಂ ವೃಕ್ಷಸ್ಯ ರೇರಿವಾ । ಕೀರ್ತಿಃ ಪೃಷ್ಠಂ ಗಿರೇರಿವ । ಊರ್ಧ್ವಪವಿತ್ರೋ ವಾಜಿನೀವ ಸ್ವಮೃತಮಸ್ಮಿ । ದ್ರವಿಣಗ್ಂ ಸವರ್ಚಸಮ್ । ಸುಮೇಧಾ ಅಮೃತೋಕ್ಷಿತಃ । ಇತಿ ತ್ರಿಶಙ್ಕೋರ್ವೇದಾನುವಚನಮ್ ॥ ೧೦ ॥**

೧೦. "ನಾನು ವೃಕ್ಷವನ್ನು ಬೆಳೆಯಿಸತಕ್ಕವನು. ಕೀರ್ತಿಯು ಪರ್ವತದ ಮೇಲುಭಾಗದಂತೆ ಪವಿತ್ರವಾದ ಊರ್ಧ್ವವುಳ್ಳವನು. ವಾಜಿಯಲ್ಲಿ ಹೇಗೋ ಹಾಗೆ ಒಳ್ಳೆಯ ಅಮೃತವಾಗಿರುತ್ತೇನೆ. ಕಾಂತಿಯಿಂದ ಕೂಡಿದ ದ್ರವ್ಯವಾಗಿರುತ್ತೇನೆ. ಒಳ್ಳೆಯ ಮೇಧೆಯುಳ್ಳವನು, ಅಮೃತನು, ಸವೆಯದವನು.'' ಹೀಗೆಂಬುದು ತ್ರಿಶಂಕುವಿನ ವೇದಾನುವಚನವು.

## ಮಂತ್ರವು ಜ್ಞಾನವನ್ನು ಹೊರಪಡಿಸುವದು

(ಭಾಷ್ಯ)

೫೭. ಅಹಂ ವೃಕ್ಷಸ್ಯ ಉಚ್ಛೇದಾತ್ಮಕಸ್ಯ ಸಂಸಾರವೃಕ್ಷಸ್ಯ ರೇರಿವಾ ಪ್ರೇರಯಿತಾ ಅನ್ತರ್ಯಾಮ್ಯಾತ್ಮನಾ । ಕೀರ್ತಿಃ ಖ್ಯಾತಿಃ ಗಿರೇಃ ಪೃಷ್ಠಮಿವ ಉಚ್ಛ್ರಿತಾ ಮಮ । ಊರ್ಧ್ವಪವಿತ್ರಃ ಊರ್ಧ್ವಂ ಕಾರಣಂ ಪವಿತ್ರಂ ಪಾವನಂ ಜ್ಞಾನ

1. ಜಪಕ್ಕಾಗಿ. ಈ ಮಂತ್ರವನ್ನು ಬ್ರಹ್ಮಯಜ್ಞದಲ್ಲಿ ನಿತ್ಯವೂ ಜಪಿಸುವರು.
2. ಧ್ಯಾನವಾಗಲಿ, ಜ್ಞಾನವಾಗಲಿ, ದಕ್ಕುವದಕ್ಕೆ ಸಹಾಯವಾಗುತ್ತದೆ.
3. ಇಷೇ ತ್ವಾ ಮುಂತಾದ ಮಂತ್ರಗಳನ್ನು ಶಾಖಾಚ್ಛೇದವೇ ಮುಂತಾದವುಗಳಲ್ಲಿ ವಿನಿಯೋಗಿಸಿರುವಂತೆ ಈ ಮಂತ್ರವನ್ನು ವೇದದಲ್ಲಿ ಮತ್ತೇತಕ್ಕೂ ವಿನಿಯೋಗಿಸಿಲ್ಲ.

ಕಾಶ್ಯಂ[1] ಪರಂ ಬ್ರಹ್ಮ ಯಸ್ಯ ಸರ್ವಾತ್ಮನೋ ಮಮ ಸೋಽಹಮ್ ಊರ್ಧ್ವ
ವಿತ್ರಃ । ವಾಜಿನೀವ ವಾಜವತೀವ । ವಾಜಮ್ ಅನ್ನಮ್ । ತದ್ವತಿ ಸವಿತರೀವ
ತ್ಯರ್ಥಃ । ಯಥಾ ಸವಿತರಿ ಅಮೃತಮ್ ಆತ್ಮತತ್ತ್ವಂ ವಿಶುದ್ಧಂ ಪ್ರಸಿದ್ಧಂ ಶ್ರುತಿ
ಮೃತಿಶತೇಭ್ಯಃ, ಏವಂ ಸು ಅಮೃತಂ ಶೋಭನಂ ವಿಶುದ್ಧಮ್ ಆತ್ಮತತ್ತ್ವಮ್
ಸ್ಮಿ ಭವಾಮಿ । ದ್ರವಿಣಂ ಧನಂ ಸವರ್ಚಸಂ ದೀಪ್ತಿಮತ್ ತದೇವ ಆತ್ಮತತ್ತ್ವಮ್
ಸ್ಮಿ ಇತ್ಯನುವರ್ತತೇ । ಬ್ರಹ್ಮಜ್ಞಾನಂ ವಾ ಆತ್ಮತತ್ತ್ವಪ್ರಕಾಶಕತ್ವಾತ್ ಸ
ರ್ಚಸಮ್ । ದ್ರವಿಣಮಿವ ದ್ರವಿಣಮ್ । ಮೋಕ್ಷಸುಖಹೇತುತ್ವಾತ್ । ಅಸ್ಮಿನ್ ಪಕ್ಷೇ
ಪ್ರಾಪ್ತಂ ಮಯಾ" ಇತ್ಯಧ್ಯಾಹಾರಃ ಕರ್ತವ್ಯಃ । ಸುಮೇಧಾಃ ಶೋಭನಾ ಮೇಧಾ
ರ್ವಜ್ಞತ್ವಲಕ್ಷಣಾ ಯಸ್ಯ ಮಮ ಸೋಽಹಂ ಸುಮೇಧಾಃ । ಸಂಸಾರಸ್ಥಿತ್ಯುತ್ಪತ್ತಿ
ಂಹಾರ[2]ಕೌಶಲಯೋಗಾತ್ ಸುಮೇಧಸ್ತ್ವಮ್ । ಅತ ಏವ ಅಮೃತಃ ಅಮರಣ
ರ್ಮಾ । ಅಕ್ಷಿತಃ ಅಕ್ಷೀಣಃ ಅವ್ಯಯಃ । ಅಕ್ಷತೋ ವಾ । ಅಮೃತೇನ ವಾ
ಕ್ಷಿತಃ ಸಿಕ್ತಃ । "ಅಮೃತೋಕ್ಷಿತೋಽಹಮ್" (?) ಇತ್ಯಾದಿ ಬ್ರಾಹ್ಮಣಮ್ ॥

(ಭಾಷ್ಯಾರ್ಥ)

ನಾನು ವೃಕ್ಷವನ್ನು ಉಚ್ಛೇದಸ್ವಭಾವದ[3] ಸಂಸಾರವೆಂಬ ಮರವನ್ನು ಬೆಳೆ
ಂಸತಕ್ಕವನು, ಅಂತರ್ಯಾಮಿಯಾಗಿ ಪ್ರೇರಿಸುವಾತನು.[4] ನನ್ನ ಕೀರ್ತಿಯು
ಪರುವಾಸಿಯು ಬೆಟ್ಟದ ಮೇಲುಭಾಗದಂತೆ[5] ಉನ್ನತವಾಗಿರುವದು ; ಜ್ಞಾನದಿಂದ
ಳಗಲ್ಪಡುವ ಪರಬ್ರಹ್ಮವೇ ಸರ್ವಾತ್ಮನಾದ ನನಗೆ (ಮೂಲರೂಪವಾಗಿರುವದರಿಂದ)
ರ್ಧ್ವವು ಎಂದರೆ ಕಾರಣವು, ಪವಿತ್ರವು ಎಂದರೆ ಪಾವನವಾಗಿರುವ[6] ಆ ನಾನು
ರ್ಧ್ವಪವಿತ್ರನು. ವಾಜಿಯಲ್ಲಿ ಹೇಗೋ ಹಾಗೆ ಎಂದರೆ ವಾಜವುಳ್ಳದ್ದರಲ್ಲಿರುವಂತೆ–
ಜವೆಂದರೆ ಅನ್ನವು, ಅದನ್ನುಳ್ಳ ಸೂರ್ಯನಲ್ಲಿ ಎಂದರ್ಥ–ಹೇಗೆ ಸೂರ್ಯನಲ್ಲಿ

---

1 ಇದಾದಮೇಲೆ 'ಪವಿತ್ರಮ್' ಎಂಬ ಮಾತು ಆ॥ ಪಾಠದಲ್ಲಿ ಹೆಚ್ಚಾಗಿದೆ.

2. 'ಉಪಸಂಹಾರ' ಎಂದು ಆ॥ ಪಾಠ; ಇಲ್ಲಿ ಕೊಟ್ಟಿರುವದು ವಾ॥ಕಾ। ಪಾಠ.

3. ವ್ರಶ್ಚೂ ಛೇದನೇ ಎಂಬ ಧಾತುವಿನಿಂದ ವೃಕ್ಷ ಶಬ್ದವು ಬಂದಿರುತ್ತದೆ. ಸಂಸಾರವು
ಜ್ಞಾನದಿಂದ ನಾಶವಾಗುವದೆಂದು ಈ ವಿಶೇಷಣದಿಂದ ಸೂಚಿತವಾಗಿರುತ್ತದೆ.

4. ಊರ್ಧ್ವಮೂಲವೆಂಬ ಕ. ೨-೩-೧, ಗೀ. ೧೫-೧ ವಿಶೇಷಣವನ್ನು ಇದಕ್ಕೆ
ಹೋಲಿಸಿರಿ.

5. ಕೋಡುಗಲ್ಲಿನಂತೆ.

6. ಊರ್ಧ್ವವೆಂದರೆ ಕಾರಣವು, ಮೂಲರೂಪವು ಪವಿತ್ರವಾಗಿದೆ; ನಾನು ನಿಜವಾಗಿ
ಪವಿತ್ರನಾದ ಸಂಸಾರಿಯಲ್ಲ.

ಅಮೃತವು ಎಂದರೆ ವಿಶುದ್ಧವಾದ ಆತ್ಮತತ್ತ್ವವು ಇರುವದೆಂದು ನೂರಾರು ಶ್ರುತಿ ಸ್ಮೃತಿಗಳಿಂದ ಪ್ರಸಿದ್ಧವಾಗಿರುವದೋ[1] ಇದರಂತೆ ಒಳ್ಳೆಯ ಅಮೃತವು ಎಂದರೆ ಮಂಗಲಕರವಾದ ವಿಶುದ್ಧವಾದ ಆತ್ಮತತ್ತ್ವವು ಇರುತ್ತೇನೆ, ಎಂದರೆ (ಶುದ್ಧಾಮೃತ ಸ್ವರೂಪ)ನಾಗಿರುವೆನು.[2] ಕಾಂತಿಯಿಂದ ಕೂಡಿದ ಬೆಳಬೆಳಗುವ ದ್ರವ್ಯವು ಎಂದರೆ ಧನವು, ಅದೇ ಆತ್ಮತತ್ತ್ವವು. 'ಅಸ್ಮಿ' (ಆಗಿರುತ್ತೇನೆ) ಎಂಬ (ಹಿಂದಿನ ವಾಕ್ಯದ ಕ್ರಿಯಾಪದವು ಇಲ್ಲಿಯೂ) ಸೇರಿಕೊಳ್ಳುತ್ತದೆ. ಅಥವಾ ಬ್ರಹ್ಮಜ್ಞಾನವು ಆತ್ಮತತ್ತ್ವವನ್ನು ಬೆಳಗುವದರಿಂದ (ಅದನ್ನೇ ಇಲ್ಲಿ) ಕಾಂತಿಯಿಂದ ಕೂಡಿದ್ದು (ಎಂದು ಕರೆದಿದೆ ಎಂದಾದರೂ ಅರ್ಥಮಾಡಬಹುದು). ಮೋಕ್ಷಸುಖಕ್ಕೆ ಕಾರಣ ವಾಗಿರುವದರಿಂದ (ಅದು) ದ್ರವ್ಯದಂತೆ ಇರುತ್ತದೆ (ಎಂಬುದನ್ನು) **ದ್ರವಿಣಮ್** (ಎಂಬ ಮಾತು ತಿಳಿಸುತ್ತದೆ). ಈ (ಎರಡನೆಯ) ಪಕ್ಷದಲ್ಲಿ "ನನಗೆ ಸಿಕ್ಕಿತು" ಎಂದು ಅಧ್ಯಾಹಾರವನ್ನು ಮಾಡಿಕೊಳ್ಳಬೇಕು.[3] ಸುಮೇಧಾಃ ಒಳ್ಳೆಯ ಸರ್ವ ಜ್ಞತ್ವರೂಪವಾದ ಜ್ಞಾನವು ಯಾವ ನನಗೆ ಇರುವದರಿಂದ ಆ ನಾನು ಸುಮೇಧ (ನೆನಿಸಿರುವೆನು). ಸಂಸಾರದ ಇರವು, ಉಂಟಾಗುವಿಕೆ, ಅಡಗುವಿಕೆ–ಇವುಗಳನ್ನು (ಮಾಡುವ) ಜಾಣತನವಿರುವದರಿಂದ (ನನಗೆ) ಸುಮೇಧಸ್ತ್ವ(ವಿದೆ). ಆದ್ದ ರಿಂದಲೇ **ಅಮೃತನು** ಎಂದರೆ ಮರಣಧರ್ಮವಿಲ್ಲದವನು. **ಅಕ್ಷಿತನು,**[4] ಕ್ಷೀಣ ನಾಗದೆ ಇರುವವನು, ಸವೆಯದವನು. ಅಥವಾ 'ಅಕ್ಷತಃ' (ಎಂದರೆ) ಗಾಯವಾಗ ದವನು (ಎಂದಾದರೂ ಅರ್ಥಮಾಡಬಹುದು). ಅಥವಾ ಅಮೃತದಿಂದ **ಉಕ್ಷಿತ** ನಾದವನು[5] ಚಿಮುಕಿಸಲ್ಪಟ್ಟವನು (ಎಂದಾದರೂ ಶ್ರುತಿಗೆ ಅರ್ಥವನ್ನು ಮಾಡ ಬಹುದು). "ಅಮೃತೋಕ್ಷಿತೋಽಹಮ್" (?) 'ನಾನು ಅಮೃತದಿಂದ ಅಭಿಷಿಕ್ತ ನಾದವನು' ಎಂದು ಮುಂತಾಗಿರುವ ಬ್ರಾಹ್ಮಣವು[6] ಇದಕ್ಕೆ ಆಧಾರವು.

---

1. ಈ. ೧೬, ಪ್ರ. ೧.೮, ೧೫, ಮು. ೧-೨-೧೧, ಛಾ. ೭ ಮುಂತಾದ ಶ್ರುತಿಗಳನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬೇಕು.

2. ಸೂರ್ಯನೆಂಬ ಉತ್ಕೃಷ್ಟವಾದ ಉಪಾಧಿಯಲ್ಲಿರುವ ತತ್ತ್ವವೇ ನನ್ನಲ್ಲಿರುವದು ಎಂದಭಿಪ್ರಾಯ.

3. ಆತ್ಮಜ್ಞಾನವು ದೊರೆತದ್ದರಿಂದ ನಾನು ಧನ್ಯನು.

4. ಅಮೃತಃ ಅಕ್ಷಿತಃ ಎಂದು ಪದಚ್ಛೇದ.

5. "ಅಮೃತ+ಉಕ್ಷಿತಃ" ಎಂದು ಸಮಸ್ತಪದವಾಗಿಟ್ಟುಕೊಂಡು ಹೇಳಿದ ಅರ್ಥ.

6 ಈ ಬ್ರಾಹ್ಮಣವು ಯಾವದೆಂಬುದು ತಿಳಿಯದು.

# ಕರ್ಮವು ಜ್ಞಾನಕ್ಕೆ ಕಾರಣವು

(ಭಾಷ್ಯ)

೫೮. ಇತಿ ಏವಂ ತ್ರಿಶಙ್ಕೋಃ ಋಷೇಃ ಬ್ರಹ್ಮಭೂತಸ್ಯ ಬ್ರಹ್ಮವಿದಃ ವೇದಾನುವಚನಮ್ । ವೇದಃ ವೇದನಮ್ ಆತ್ಮೈಕತ್ವವಿಜ್ಞಾನಮ್ । ತಸ್ಯ ಪ್ರಾಪ್ತಿಮ್ ಅನು ವಚನಮ್ ವೇದಾನುವಚನಮ್ । ಆತ್ಮನಃ ಕೃತಕೃತ್ಯತಾ ಪ್ರಖ್ಯಾಪನಾರ್ಥಂ ವಾಮದೇವವತ್ ತ್ರಿಶಙ್ಕುನಾ ಆರ್ಷೇಣ ದರ್ಶನೇನ ದೃಷ್ಟಃ ಮನ್ತ್ರಾಮ್ನಾಯಃ ಆತ್ಮವಿದ್ಯಾಪ್ರಕಾಶಕ ಇತ್ಯರ್ಥಃ । ಅಸ್ಯ ಚ ಜಪೋ ವಿದ್ಯೋತ್ಪತ್ತ್ಯರ್ಥೋಽವಗಮ್ಯತೇ [1]। "ಋತಂ ಚ" ಇತಿ ಕರ್ಮೋಪನ್ಯಾಸಾತ್ [2] ಅನನ್ತರಂ ಚ ವೇದಾನುವಚನಪಾಠಾತ್ ಏತದವಗಮ್ಯತೇ-ಏವಂ ಶ್ರೌತಸ್ಮಾರ್ತೇಷು ನಿತ್ಯೇಷು ಕರ್ಮಸು ಯುಕ್ತಸ್ಯ ನಿಷ್ಕಾಮಸ್ಯ ಪರಂ ಬ್ರಹ್ಮ ವಿವಿದಿಷೋಃ ಆರ್ಷಾಣಿ ದರ್ಶನಾನಿ ಪ್ರಾದುರ್ಭವನ್ತಿ ಆತ್ಮಾದಿವಿಷಯಾಣಿ ಇತಿ ॥

(ಭಾಷ್ಯಾರ್ಥ)

ಹೀಗೆಂದು ಈ ಪ್ರಕಾರವಾಗಿ ತ್ರಿಶಂಕು ಎಂಬ ಬ್ರಹ್ಮಸ್ವರೂಪವನ್ನು ಪಡೆದು ಕೊಂಡ ಬ್ರಹ್ಮಜ್ಞಾನಿಯಾದ ಋಷಿಯ ವೇದಾನುವಚನವು. ವೇದ ಎಂದರೆ ಅರಿವು, ಆತ್ಮನು ಒಬ್ಬನೇ (ಸತ್ಯ) ಎಂಬ ಜ್ಞಾನ; ಆ (ಜ್ಞಾನ)ವನ್ನು ಪಡೆದು ಕೊಂಡಮೇಲೆ ಹೇಳಿದ್ದು ವೇದಾನುವಚನವು. ತಾನು ಕೃತಕೃತ್ಯನೆಂದು ತಿಳಿಯ ಪಡಿಸುವದಕ್ಕಾಗಿ ವಾಮದೇವನಂತೆ [3] ತ್ರಿಶಂಕುವಿನ ಆರ್ಷದರ್ಶನದಿಂದ [4] ಆತ್ಮ ಜ್ಞಾನವನ್ನು ಬೆಳಗುವ ಈ ಮಂತ್ರಾಮ್ನಾಯವು ಕಂಡುಹಿಡಿಯಲ್ಪಟ್ಟಿತು ಎಂದರ್ಥ.

ಇದನ್ನು ಜಪಮಾಡುವದು ವಿದ್ಯೋತ್ಪತ್ತಿ ಎಂಬ ಪ್ರಯೋಜನವುಳ್ಳದ್ದೆಂದು ಊಹಿಸಬೇಕಾಗಿದೆ.[5] "ಋತಂ ಚ" ಎಂದು (ಮುಂತಾಗಿ) ಕರ್ಮಗಳನ್ನು ಉಪ

---

1. 'ಅಧಿಗಮ್ಯತೇ' ಎಂದು ವಾ॥ ಪಾಠ.

2. 'ಧರ್ಮೋಪನ್ಯಾಸಾತ್' ಎಂದು ವಾ॥ ಪಾಠ.

3 ವಾಮದೇವನ ಆರ್ಷದರ್ಶನದ ವಚನವು ಐತರೇಯ (೨-೪), ಬೃಹದಾರ ಣ್ಯಕ (೧-೪-೧೦)—ಈ ಉಪನಿಷತ್ತುಗಳಲ್ಲಿ ಕಂಡುಬರುತ್ತದೆ.

4. ಧ್ಯಾನಮಗ್ನರಾದವರಿಗೆ ತಾನೇ ತೋರುವ ಮಂತ್ರಜ್ಞಾನಕ್ಕೆ ಆರ್ಷದರ್ಶನ ಎಂದು ಹೆಸರು.

5. ವಿದ್ಯಾಪ್ರಕರಣದಲ್ಲಿ ಹೇಳಿರುವದು, ಮಂತ್ರಕ್ಕೆ ಮತ್ತೊಂದು ವಿನಿಯೋಗವಿಲ್ಲ ದಿರುವದು—ಈ ಕಾರಣಗಳಿಂದ ಈ ಪ್ರಯೋಜನವು ನಿಶ್ಚಿತವಾಗುತ್ತದೆ ಎಂದು ಮೇಲೆ ಹೇಳಿದೆ.

ದೇಶಮಾಡಿದಬಳಿಕ[1] (ಈ) ವೇದಾನುವಚನವನ್ನು ಪಠಿಸಿರುವದರಿಂದ ಹೀಗೆಂದು ಗೊತ್ತಾಗುತ್ತದೆ: ಈ ರೀತಿಯಲ್ಲಿ ಶ್ರೌತಸ್ಮಾರ್ತನಿತ್ಯಕರ್ಮಗಳನ್ನು ಮಾಡುವದರಲ್ಲಿ ನಿರತನಾಗಿ ನಿಷ್ಕಾಮನಾಗಿ ಪರಬ್ರಹ್ಮವನ್ನು ತಿಳಿದುಕೊಳ್ಳಬೇಕೆಂದಿರುವಾತನಿಗೆ[2] ಆತ್ಮನೇ ಮುಂತಾದ[3] ವಿಷಯದ (ಈ ಬಗೆಯ) ಆರ್ಷದರ್ಶನಗಳು ಹೊರತೋರಿಕೊಳ್ಳುತ್ತವೆ.

# ೧೧. ಕರ್ಮಗಳನ್ನು ಅವಶ್ಯಕವಾಗಿ ಮಾಡಬೇಕು

## ಅನುವಾಕದ ವಿಷಯ

(ಭಾಷ್ಯ)

೫೯. "ವೇದಮನೂಚ್ಯ" ಇತ್ಯೇವಮಾದಿಕರ್ತವ್ಯೋಪದೇಶಾರಮ್ಭಃ[4] ಪ್ರಾಗ್ ಬ್ರಹ್ಮವಿಜ್ಞಾನಾತ್ ನಿಯಮೇನ ಕರ್ತವ್ಯಾನಿ ಶ್ರೌತಸ್ಮಾರ್ತಕರ್ಮಾಣಿ ಇತ್ಯೇವಮರ್ಥಃ । ಅನುಶಾಸನಶ್ರುತೇಃ ಪುರುಷಸಂಸ್ಕಾರಾರ್ಥತ್ವಾತ್ । ಸಂಸ್ಕೃತಸ್ಯ ಹಿ ವಿಶುದ್ಧಸತ್ತ್ವಸ್ಯ ಆತ್ಮಜ್ಞಾನಮ್ ಅಞ್ಜಸೈವ ಉತ್ಪದ್ಯತೇ । "ತಪಸಾ ಕಲ್ಮಷಂ ಹನ್ತಿ ವಿದ್ಯಯಾಮೃತಮಶ್ನುತೇ" (ಮನು. ೧೨-೧೦೪) ಇತಿ ಹಿ ಸ್ಮೃತಿಃ । ವಕ್ಷ್ಯತಿ ಚ "ತಪಸಾ ಬ್ರಹ್ಮ ವಿಜಿಜ್ಞಾಸಸ್ವ" (೩-೧) ಇತಿ । ಅತೋ ವಿದ್ಯೋತ್ಪತ್ತ್ಯರ್ಥಮ್ ಅನುಷ್ಠೇಯಾನಿ ಕರ್ಮಾಣಿ । "ಅನುಶಾಸ್ತಿ" ಇತ್ಯನುಶಾಸನಶಬ್ದಾತ್ । ಅನುಶಾಸನಾತಿಕ್ರಮೇ ಹಿ ದೋಷೋತ್ಪತ್ತಿಃ । ಪ್ರಾಗುಪನ್ಯಾಸಾಚ್ಚ ಕರ್ಮಣಾಮ್ । ಕೇವಲಬ್ರಹ್ಮವಿದ್ಯಾರಮ್ಭಾಚ್ಚ ಪೂರ್ವಂ ಕರ್ಮಾಣಿ ಉಪ

1. ಋತ, ಸತ್ಯ, ಸ್ವಾಧ್ಯಾಯ—ಮುಂತಾದವುಗಳನ್ನು ಮುಮುಕ್ಷುವಾದವನು ಅನುಷ್ಠಾನಮಾಡಬೇಕೆಂದು ಹೇಳಿದಮೇಲೆ ಈ ಮಂತ್ರಜಪವನ್ನು ವಿಧಿಸಿರುವದರಿಂದ ಇದಕ್ಕೆ ಆರ್ಷದರ್ಶನವೇ ಪ್ರಯೋಜನವೆಂದು ನಿಶ್ಚಯಿಸಬೇಕು.

2. ಮಿಕ್ಕವರಿಗೆ ಆಶ್ರಮಕರ್ಮವನ್ನು ಮಾಡಿದಂತೆ ಆಗುತ್ತದೆ.

3. ಮುಂತಾದ ಎಂದರೆ ಹಿರಣ್ಯಗರ್ಭಸ್ವರೂಪ, ಧರ್ಮಸ್ವರೂಪ—ಮುಂತಾದವು. ಇಂಥ ಉತ್ತಮಪ್ರಯೋಜನವಿರುವದರಿಂದ ಮುಮುಕ್ಷುವಿಗೂ ಕರ್ಮಗಳು ಬೇಕು ಎಂದು ಒಟ್ಟರ್ಥ.

4. "ಕರ್ತವ್ಯತೋಪದೇಶಾರಮ್ಭಃ" ಎಂದು ಮುದ್ರಿತಪುಸ್ತಕಗಳಲ್ಲಿದೆ; 'ಕರ್ತವ್ಯೋಪದೇಶಾರಮ್ಭಃ' ಎಂದಿದ್ದರೇ ಸಾಕೆಂದು ತೋರುತ್ತದೆ.

ಸ್ತ್ರಾನಿ । ಉದಿತಾಯಾಂ ಚ ವಿದ್ಯಾಯಾಮ್[1] "ಅಭಯಂ ಪ್ರತಿಷ್ಠಾಂ ವಿನ್ದತೇ" -೭) "ನ ಬಿಭೇತಿ ಕುತಶ್ಚನ" (೨-೯), "ಕಿಮಹಂ ಸಾಧು ನಾಕರವಮ್" (೨-೯) ಶ್ರೀವಮಾದಿನಾ ಕರ್ಮನೈಷ್ಕಿಂಚನ್ಯಂ ದರ್ಶಯಿಷ್ಯತಿ ಇತ್ಯತೋ ವಗಮ್ಯತೇ ಪೂರ್ವೋಪಚಿತದುರಿತಕ್ಷಯದ್ವಾರೇಣ ವಿದ್ಯೋತ್ಪತ್ತ್ಯರ್ಥಾನಿ ಕರ್ಮಾಣಿ ಇತಿ । ನ್ತ್ರವರ್ಣಾಚ್ಚ "ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಮೃತಮಶ್ನುತೇ" ಈ. ಮಾ. ೧೪) ಇತಿ ॥

(ಭಾಷ್ಯಾರ್ಥ)

"ವೇದಮನೂಚ್ಯ" ಮುಂತಾಗಿ ಕರ್ತವ್ಯವನ್ನು ಉಪದೇಶಿಸುವದಕ್ಕೆ ಮೊದಲು ಮಾಡಿರುವದು ಬ್ರಹ್ಮವಿಜ್ಞಾನವು (ಉಂಟಾಗುವ) ಮುಂಚೆ ಶ್ರೌತಸ್ಮಾರ್ತಕರ್ಮ ಗಳನ್ನು ನಿಯಮದಿಂದ ಮಾಡುತ್ತಲೇ ಇರಬೇಕು ಎಂಬ ಉದ್ದೇಶದಿಂದ. ಏಕೆಂದರೆ ಇಲ್ಲಿ ಹೇಳಿರುವ) ಅನುಶಾಸನಶ್ರುತಿಗೆ ಪುರುಷಸಂಸ್ಕಾರವೇ ಪ್ರಯೋಜನವಾಗಿರು ದೆ. ಸಂಸ್ಕಾರವನ್ನು ಹೊಂದಿ ಸತ್ತ್ವಶುದ್ಧಿಯನ್ನು ಪಡೆದವನಿಗೇ ಅಲ್ಲವೆ, ಆತ್ಮ ಜ್ಞಾನವು ತಾನೇ[2] ಉಂಟಾಗುತ್ತದೆ? "ತಪಸ್ಸಿನಿಂದ ಕಲ್ಮಷವನ್ನು ನಾಶಗೊಳಿಸಿ ಕೊಳ್ಳುತ್ತಾನೆ, ವಿದ್ಯೆಯಿಂದ ಅಮೃತವನ್ನು ಪಡೆಯುತ್ತಾನೆ" (ಮನು. ೧೨-೧೦೪) ಎಂದು ಸ್ಮೃತಿಯಿರುತ್ತದೆ.[3] "ತಪಸ್ಸಿನಿಂದ ಬ್ರಹ್ಮವನ್ನು ತಿಳಿಯಲೆಳಸುವನಾಗು" ೩-೧) ಎಂದು ಮುಂದೆ (ಈ ಉಪನಿಷತ್ತಿನಲ್ಲಿ) ಹೇಳಿಯೂ ಇರುತ್ತದೆ.[4] ಆದ್ದ ರಿಂದ ಜ್ಞಾನವುಂಟಾಗುವದಕ್ಕಾಗಿ ಕರ್ಮಗಳನ್ನು ಮಾಡಬೇಕು. "ಅಪ್ಪಣೆಮಾಡ ಬೇಕು'' ಎಂದು ಅಪ್ಪಣೆ ಎಂಬ ಶಬ್ದವನ್ನು ಉಪಯೋಗಿಸಿರುವದರಿಂದಲೂ ಹೀಗೆಂದು ತಿಳಿಯಬೇಕು); ಏಕೆಂದರೆ ಅಪ್ಪಣೆಯನ್ನು ಮೀರಿದರೆ ದೋಷವುಂಟಾ

1. "ಬ್ರಹ್ಮವಿದ್ಯಾಯಾಮ್" ಎಂದು ವಾ॥ಕಾ॥ಗೋ॥ ಪಾಠ. ಅರ್ಥದಲ್ಲಿ ಹೆಚ್ಚು ಕಡಿಮೆಯಿಲ್ಲ.

2. ಅಡ್ಡಿಯಿಲ್ಲದೆ ಉಂಟಾಗುತ್ತದೆ. ಆದ್ದರಿಂದ ಜ್ಞಾನವುಂಟಾಗುವದಕ್ಕಾಗಿ ಕರ್ಮ ಗಳನ್ನು ತಪ್ಪದೆ ಮಾಡಬೇಕು ಎಂಬ ನಿಯಮವು ಏರ್ಪಡುತ್ತದೆ.

3. "ತಪೋ ವಿದ್ಯಾ ಚ ವಿಪ್ರಸ್ಯ ನಿಶ್ಶ್ರೇಯಸಕರಂ ಪರಮ್" ಎಂಬುದು ಪೂರ್ವಾರ್ಧ. ಇಲ್ಲಿ ತಪಸ್ಸೆಂದರೆ ಸ್ವಧರ್ಮಾಚರಣೆ.

4. ಭೃಗುವಲ್ಲಿಯ ಭಾಷ್ಯದಲ್ಲಿ ತಪಸ್ಸೆಂದರೆ ಮನಸ್ಸು, ಇಂದ್ರಿಯಗಳು–ಇವುಗಳ ಸಂಯಮವೆಂದು ಹೇಳಿದೆ. ಆ ಸಂಯಮವೂ ಸ್ವಧರ್ಮಾಚರಣೆಯಿಂದಲೇ ಉಂಟಾಗುವ ದೆಂಬ ಅಭಿಪ್ರಾಯದಿಂದ ಈ ವಾಕ್ಯವನ್ನು ಇಲ್ಲಿ ಉದಾಹರಿಸಿರಬಹುದೆಂದು ತೋರುತ್ತದೆ.

ಗುತ್ತದೆ.[1] ಕರ್ಮಗಳನ್ನು ಮೊದಲು ಹೇಳಿರುವದರಿಂದಲೂ (ಹೀಗೆ) ಕೇವಲ ಬ್ರಹ್ಮವಿದ್ಯೆಯನ್ನು[2] (ಹೇಳುವದಕ್ಕೆ) ಆರಂಭಿಸುವ ಮುಂಚೆ (ಇಲ್ಲಿ) ಕರ್ಮಗಳನ್ನು ಹೇಳಿರುತ್ತದೆ. ವಿದ್ಯೆಯು ಹುಟ್ಟಿದಮೇಲೋ ಎಂದರೆ "ಅಂಜಿಕೆಯಿಲ್ಲದ ಪ್ರತಿಷ್ಠೆಯನ್ನು ಹೊಂದುವನು'' (೨-೭), "ಏತಕ್ಕೂ ಅಂಜುವದಿಲ್ಲ" (೨-೯), "ನಾನು ಏತಕ್ಕೆ ಪುಣ್ಯವನ್ನು ಮಾಡಲಿಲ್ಲ? (ಎಂದು ಜ್ಞಾನಿಯು ತಪಿಸುವದಿಲ್ಲ)" (೨-೯) ಎಂಬುದೇ ಮುಂತಾದ (ವಚನ)ಗಳಿಂದ ಕರ್ಮಗಳು ಒಂದಿಷ್ಟೂ ಇರುವದಿಲ್ಲವೆಂಬುದನ್ನು ಮುಂದೆ ತಿಳಿಸುತ್ತದೆಯಾದ್ದರಿಂದ[3] ಹಿಂದೆ ಕೂಡಿಹಾಕಿಕೊಂಡಿದ್ದ ಪಾಪವನ್ನು ಕ್ಷಯಗೊಳಿಸುವ ಮೂಲಕ ಕರ್ಮಗಳು ಜ್ಞಾನವುಂಟಾಗುವದಕ್ಕೆ (ಕಾರಣವಾಗುತ್ತವೆ) ಎಂದು ನಿಶ್ಚಿತವಾಗುತ್ತದೆ. "ಅವಿದ್ಯೆಯಿಂದ ಮೃತ್ಯುವನ್ನು ದಾಟಿ ವಿದ್ಯೆಯಿಂದ ಅಮೃತವನ್ನು ಪಡೆಯುತ್ತಾನೆ" (ಈ.ಮಾ. ೧೪) ಎಂದು **ಮಂತ್ರವರ್ಣವೂ**[4] ಹೇಳುತ್ತದೆ.

## ಕರ್ಮವನ್ನು ಎರಡುಸಲ ಉಪದೇಶಿಸಿರುವದರ ಉದ್ದೇಶ

(ಭಾಷ್ಯ)

೬೦. ಋತಾದೀನಾಂ ಪೂರ್ವತ್ರೋಪದೇಶಃ ಆನರ್ಥಕ್ಯಪರಿಹಾರಾರ್ಥಃ। ಇಹ ತು ಜ್ಞಾನೋತ್ಪತ್ತ್ಯರ್ಥತ್ವಾತ್ ಕರ್ತವ್ಯತಾನಿಯಮಾರ್ಥಃ ॥

(ಭಾಷ್ಯಾರ್ಥ)

ಋತವೇ ಮುಂತಾದವನ್ನು ಹಿಂದೆ (೯ನೆಯ ಅನುವಾಕದಲ್ಲಿ) ಉಪದೇಶಿಸಿರುವದು (ಕರ್ಮಗಳಿಗೆ) ಆನರ್ಥಕ್ಯವನ್ನು ಪರಿಹರಿಸುವದಕ್ಕೆ.[5] ಆದರೆ ಇಲ್ಲಿ

1. ಅನುಶಾಸ್ತಿ ಎಂದರೆ ಅಪ್ಪಣೆಮಾಡಬೇಕು ಎಂದು ಒಟ್ಟು ಶಬ್ದದ ಅರ್ಥ.

2. ಕರ್ಮಸಂಬಂಧವಿಲ್ಲದ ಶುದ್ಧ ಬ್ರಹ್ಮಜ್ಞಾನವನ್ನು.

3. ಕರ್ಮವು ಜ್ಞಾನದೊಡನೆ ಇರುವದಿಲ್ಲವೆಂದು ಮುಂದೆ ಹೇಳಿದೆ; ಇಲ್ಲಿ ಅವಶ್ಯವಾಗಿ ಕರ್ಮವನ್ನು ಮಾಡಬೇಕೆಂದು ಹೇಳಿದೆ. ಆದ್ದರಿಂದ ಕರ್ಮಗಳು ಜ್ಞಾನೋತ್ಪತ್ತಿ ಮೂಲಕವಾಗಿಯೇ ಮೋಕ್ಷಕಾರಣವೆಂದು ಹೇಳಿದಂತೆ ಆಯಿತು.

4. ಈ ಮಂತ್ರದಲ್ಲಿ ಅವಿದ್ಯೆಯೆಂದರೆ ಕರ್ಮವು, ಮೃತ್ಯುವೆಂದರೆ ಪಾಪವು.

5. ಉಪಾಸನೆಯನ್ನೂ ನಿಷ್ಕಾಮಕರ್ಮವನ್ನೂ ಮಾಡಿದವರಿಗೆ ಕಾಲಾಂತರಮುಕ್ತಿಯು ದೊರೆಯುತ್ತದೆ, ಆ ಕರ್ಮವು ನಿರರ್ಥಕವಾಗುವದಿಲ್ಲ ಎಂದು ತಿಳಿಸುವದಕ್ಕೆ.

(ಉಪದೇಶಿಸಿರುವದು ಅವುಗಳು) ಜ್ಞಾನವುಂಟಾಗುವದಕ್ಕೆ ಕಾರಣವಾಗಿರುವದರಿಂದ (ಅವನ್ನು) ಮಾಡಲೇಬೇಕು (ಎಂದು) ನಿಯಮಿಸುವದಕ್ಕೆ.[1]

**ವೇದಮನೂಚ್ಯಾಚಾರ್ಯೋಽನ್ತೇವಾಸಿನಮನುಶಾಸ್ತಿ । ಸತ್ಯಂ ವದ । ಧರ್ಮಂ ಚರ । ಸ್ವಾಧ್ಯಾಯಾನ್ಮಾ ಪ್ರಮದಃ । ಆಚಾರ್ಯಾಯ ಪ್ರಿಯಂ ಧನಮಾಹೃತ್ಯ ಪ್ರಜಾತನ್ತುಂ ಮಾ ವ್ಯವಚ್ಛೇತ್ಸೀಃ । ಸತ್ಯಾನ್ನ ಪ್ರಮದಿತವ್ಯಮ್ । ಧರ್ಮಾನ್ನ ಪ್ರಮದಿತವ್ಯಮ್ । ಕುಶಲಾನ್ನ ಪ್ರಮದಿತವ್ಯಮ್। ಭೂತ್ಯೈ ನ ಪ್ರಮದಿತವ್ಯಮ್ । ಸ್ವಾಧ್ಯಾಯಪ್ರವಚನಾಭ್ಯಾಂ ನ ಪ್ರಮದಿತವ್ಯಮ್। ದೇವಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಮ್ । ಮಾತೃದೇವೋ ಭವ। ಪಿತೃದೇವೋ ಭವ। ಆಚಾರ್ಯದೇವೋ ಭವ। ಅತಿಥಿದೇವೋ ಭವ । ಯಾನ್ಯನವದ್ಯಾನಿ ಕರ್ಮಾಣಿ । ತಾನಿ ಸೇವಿತವ್ಯಾನಿ । ನೋ ಇತರಾಣಿ । ಯಾನ್ಯಸ್ಮಾಕಗ್ಂ ಸುಚರಿತಾನಿ । ತಾನಿ ತ್ವಯೋಪಾಸ್ಯಾನಿ । ನೋ ಇತರಾಣಿ । ಯೇ ಕೇ ಚಾಸ್ಮಚ್ಛ್ರೇಯಾಗ್ಂಸೋ ಬ್ರಾಹ್ಮಣಾಃ। ತೇಷಾಂ ತ್ವಯಾಽಸನೇನ ಪ್ರಶ್ವಸಿತವ್ಯಮ್ । ಶ್ರದ್ಧಯಾ ದೇಯಮ್ । ಅಶ್ರದ್ಧಯಾಽದೇಯಮ್ । ಸಂವಿದಾ ದೇಯಮ್ । ಶ್ರಿಯಾ ದೇಯಮ್ । ಭಿಯಾ ದೇಯಮ್ । ಸಂವಿದಾ ದೇಯಮ್ । ಅಥ ಯದಿ ತೇ ಕರ್ಮವಿಚಿಕಿತ್ಸಾ ವಾ ವೃತ್ತವಿಚಿಕಿತ್ಸಾ ವಾ ಸ್ಯಾತ್ । ಯೇ ತತ್ರ ಬ್ರಾಹ್ಮಣಾಃ ಸಂಮರ್ಶಿನಃ । ಯುಕ್ತಾ ಆಯುಕ್ತಾಃ। ಅಲೂಕ್ಷಾ ಧರ್ಮಕಾಮಾಃ ಸ್ಯುಃ। ಯಥಾ ತೇ ತತ್ರ ವರ್ತೇರನ್ । ತಥಾ ತತ್ರ ವರ್ತೇಥಾಃ । ಅಥಾಭ್ಯಾಖ್ಯಾತೇಷು । ಯೇ ತತ್ರ ಬ್ರಾಹ್ಮಣಾಃ ಸಂಮರ್ಶಿನಃ । ಯುಕ್ತಾ ಆಯುಕ್ತಾಃ । ಅಲೂಕ್ಷಾ ಧರ್ಮಕಾಮಾಃ ಸ್ಯುಃ । ಯಥಾ ತೇ ತೇಷು ವರ್ತೇರನ್ । ತಥಾ ತೇಷು ವರ್ತೇಥಾಃ । ಏಷ ಆದೇಶಃ। ಏಷ ಉಪದೇಶಃ । ಏಷಾ ವೇದೋಪನಿಷತ್ । ಏತದನುಶಾಸನಮ್। ಏವಮುಪಾಸಿತವ್ಯಮ್ । ಏವಮು ಚೈತದುಪಾಸ್ಯಮ್॥**

೧೧. ವೇದವನ್ನು ಹೇಳಿಕೊಟ್ಟು ಆಚಾರ್ಯನು ಅಂತೇವಾಸಿಗೆ (ಹೀಗೆಂದು) ಅನುಶಾಸನಮಾಡಬೇಕು. ಸತ್ಯವನ್ನು ಹೇಳು, ಧರ್ಮವನ್ನು

---

1. ಚಿತ್ತಶುದ್ಧಿಯ ಮೂಲಕವಾಗಿ ಸದ್ಯೋಮುಕ್ತಿಗೆ ಕಾರಣವಾದ ಜ್ಞಾನವುಂಟಾಗುವದರಿಂದ ಮಾಡಲೇಬೇಕೆಂದು ತಿಳಿಸುವದಕ್ಕೆ.

ಆಚರಿಸು, ಸ್ವಾಧ್ಯಾಯವನ್ನು ಮರೆಯಬೇಡ. ಆಚಾರ್ಯನಿಗೆ ಪ್ರಿಯವಾದ ಧನವನ್ನು ತೆಗೆದಿಟ್ಟು ಪ್ರಜಾತಂತುವನ್ನು ಕಡಿದುಹೋಗಲೀಯದಿರು. ಸತ್ಯವನ್ನು ಮರೆಯಬಾರದು, ಧರ್ಮವನ್ನು ಮರೆಯಬಾರದು, ಕುಶಲವನ್ನು ಮರೆಯಬಾರದು, ಭೂತಿಯನ್ನು ಮರೆಯಬಾರದು. ಸ್ವಾಧ್ಯಾಯಪ್ರವಚನಗಳನ್ನು ಮರೆಯಬಾರದು. ಮಾತೃದೇವನಾಗಿರು, ಪಿತೃದೇವನಾಗಿರು, ಆಚಾರ್ಯದೇವನಾಗಿರು, ಅತಿಥಿದೇವನಾಗಿರು. ಯಾವ ಕರ್ಮಗಳು ನಿಂದಿತವಲ್ಲವೋ ಅವುಗಳನ್ನು ಸೇವಿಸಬೇಕು, ಉಳಿದವನ್ನು (ಸೇವಿಸ)ಬಾರದು. ಯಾವವು ನಮ್ಮ ಒಳ್ಳೆಯ ನಡತೆಗಳೋ ಅವುಗಳನ್ನು ನೀನು ಉಪಾಸನೆಮಾಡಬೇಕು, ಉಳಿದವನ್ನು (ಉಪಾಸನೆಮಾಡ)ಬಾರದು. ಯಾವ ಯಾವ ಬ್ರಾಹ್ಮಣರು ನಮಗಿಂತ ಉತ್ತಮರೋ ಅವರಿಗೆ ಆಸನವನ್ನು ಕೊಟ್ಟು ನೀನು ಆದರಮಾಡಬೇಕು. ಶ್ರದ್ಧೆಯಿಂದ ಕೊಡಬೇಕು, ಅಶ್ರದ್ಧೆಯಿಂದ ಕೊಡಬಾರದು. ಶ್ರೀಯಿಂದ ಕೊಡಬೇಕು, ನಾಚಿಕೆಯಿಂದ ಕೊಡಬೇಕು. ಇನ್ನು ನಿನಗೆ ಕರ್ಮಚಿಕಿತ್ಸೆಯಾಗಲಿ ವೃತ್ತಚಿಕಿತ್ಸೆಯಾಗಲಿ ಉಂಟಾಗುವದಾದರೆ ಯಾರು ಅಲ್ಲಿ ಸಮ್ಮರ್ಶಿಗಳಾಗಿಯೂ ಯುಕ್ತರಾಗಿಯೂ ಆಯುಕ್ತರಾಗಿಯೂ ಅಲೂಕ್ಷರಾಗಿಯೂ ಧರ್ಮಕಾಮರಾಗಿಯೂ ಇರುವ ಬ್ರಾಹ್ಮಣರಿರುವರೋ ಅವರು ಹೇಗೆ ಅಲ್ಲಿ ವರ್ತಿಸುವರೋ ಹಾಗೆ ಅಲ್ಲಿ ವರ್ತಿಸು. ಇನ್ನು ಅಭ್ಯಾಖ್ಯಾತರ ವಿಷಯದಲ್ಲಿ. ಯಾರು ಅಲ್ಲಿ ಸಮ್ಮರ್ಶಿಗಳಾಗಿಯೂ ಯುಕ್ತರಾಗಿಯೂ ಆಯುಕ್ತರಾಗಿಯೂ ಅಲೂಕ್ಷರಾಗಿಯೂ ಧರ್ಮಕಾಮರಾಗಿಯೂ ಇರುವ ಬ್ರಾಹ್ಮಣರಿರುವರೋ ಅವರು ಅವರಲ್ಲಿ ಹೇಗೆ ವರ್ತಿಸುವರೋ ಹಾಗೆ ಅವರಲ್ಲಿ ವರ್ತಿಸು. ಇದು ಆದೇಶವು, ಇದು ಉಪದೇಶವು, ಇದು ವೇದೋಪನಿಷತ್ತು, ಇದು ಅನುಶಾಸನವು; ಹೀಗೆ ಉಪಾಸನೆಮಾಡತಕ್ಕದ್ದು, ಇದು ಹೀಗೆಯೇ ಉಪಾಸನೆಮಾಡತಕ್ಕದ್ದು.

(ಭಾಷ್ಯ)

೬೧. ವೇದಮ್ ಅನೂಚ್ಯ ಅಧ್ಯಾಪ್ಯ ಆಚಾರ್ಯಃ ಅನ್ತೇವಾಸಿನಂ ಶಿಷ್ಯಮ್ ಅನುಶಾಸ್ತಿ ಗ್ರನ್ಥಗ್ರಹಣಾತ್ ಅನು ಪಶ್ಚಾತ್ ಶಾಸ್ತಿ ತದರ್ಥಂ ಗ್ರಾಹಯತಿ ಇತ್ಯರ್ಥಃ । ಅತೋಽವಗಮ್ಯತೇ ಅಧೀತವೇದಸ್ಯ ಧರ್ಮಜಿಜ್ಞಾಸಾಮ್ ಅಕೃತ್ವಾ ಗುರುಕುಲಾತ್ ನ ಸಮಾವರ್ತಿತವ್ಯಮ್ ಇತಿ । "ಬುದ್ಧ್ವಾ ಕರ್ಮಾಣಿ ಚಾರಭೇತ್" (?) ಇತಿ ಸ್ಮೃತೇಶ್ಚ ॥

(ಭಾಷ್ಯಾರ್ಥ)

ವೇದವನ್ನು ಹೇಳಿಕೊಟ್ಟು ಎಂದರೆ ಅಧ್ಯಯನಮಾಡಿಸಿ ಆಚಾರ್ಯನು ಅಂತೇವಾಸಿಗೆ ಎಂದರೆ ಶಿಷ್ಯನಿಗೆ (ಹೀಗೆಂದು) ಅನುಶಾಸನಮಾಡಬೇಕು. 'ಅನು' ಗ್ರಂಥವನ್ನು (ಶಿಷ್ಯನು) ಕಲಿತುಕೊಂಡಮೇಲೆ ಆ ಬಳಿಕ 'ಶಾಸ್ತಿ' ಅದರ ಅರ್ಥವನ್ನು ಕಲಿಸಿಕೊಡಬೇಕು[1]–ಎಂದರ್ಥ. ವೇದವನ್ನು ಅಧ್ಯಯನಮಾಡಿದವನು ಧರ್ಮಜಿಜ್ಞಾಸೆಯನ್ನು ಮಾಡದೆ ಗುರುಕುಲದಿಂದ ಸಮಾವರ್ತನೆ ಮಾಡಬಾರದು[2] ಎಂದು ಇದರಿಂದ ನಿಶ್ಚಿತವಾಗುತ್ತದೆ.[3] "ತಿಳಿದುಕೊಂಡು ಕರ್ಮಗಳನ್ನು ಆರಂಭಿಸಬೇಕು" (?) ಎಂಬ ಸ್ಮೃತಿಯಿಂದಲೂ (ಹೀಗೆಂದು ನಿಶ್ಚಿತವಾಗುತ್ತದೆ).

## ಸತ್ಯಾದಿಗಳನ್ನು ಅನುಷ್ಠಾನಮಾಡಬೇಕು

(ಭಾಷ್ಯ)

೭೨. ಕಥಮ್ ಅನುಶಾಸ್ತೀತಿ ! ಅತ[4] ಆಹ–ಸತ್ಯಂ ವದ ಯಥಾ ಪ್ರಮಾಣಾವಗತಂ ವಕ್ತವ್ಯಮ್[5] ತತ್ ವದ । ತದ್ವತ್ ಧರ್ಮಂ ಚರ । ಧರ್ಮಃ ಇತ್ಯನುಷ್ಠೇಯಾನಾಂ ಸಾಮಾನ್ಯವಚನಮ್ । ಸತ್ಯಾದಿವಿಶೇಷನಿರ್ದೇಶಾತ್ । ಸ್ವಾಧ್ಯಾಯಾತ್ ಅಧ್ಯಯನಾತ್ ಮಾ ಪ್ರಮದಃ ಪ್ರಮಾದಂ ಮಾ ಕಾರ್ಷೀಃ । ಆಚಾರ್ಯಾಯ ಆಚಾರ್ಯಾರ್ಥಂ ಪ್ರಿಯಮ್ ಇಷ್ಟಂ ಧನಮ್ ಆಹೃತ್ಯ ಆನೀಯ ದತ್ವಾ ವಿದ್ಯಾನಿಷ್ಕ್ರಯಾರ್ಥಮ್ ಆಚಾರ್ಯೇಣ ಚ ಅನುಜ್ಞಾತಃ ಅನುರೂಪಾನ್ ದಾರಾನ್ ಆಹೃತ್ಯ ಪ್ರಜಾತನ್ತುಂ ಪ್ರಜಾಸನ್ತಾನಂ ಮಾ ವ್ಯವಚ್ಛೇತ್ಸೀಃ ಪ್ರಜಾಸನ್ತತೇರ್ವಿಚ್ಛಿತ್ತಿರ್ನ ಕರ್ತವ್ಯಾ । ಅನುತ್ಪದ್ಯಮಾನೇಽಪಿ ಪುತ್ರೇ ಪುತ್ರಕಾಮ್ಯಾದಿಕರ್ಮಣಾ

---

1. 'ಅನುಶಾಸ್ತಿ' ಎಂಬುದನ್ನು ವಿಧಿಯಾಗಿ ಭಾವಿಸಬೇಕೆಂಬ ಭಾಷ್ಯಹೃದಯಕ್ಕನುಗುಣವಾಗಿ ಕನ್ನಡಿಸಿದೆ. ಅನುಶಾಸ್ತಿ ಎಂಬುದರ ಅನ್ವಯವಾರ್ಥವಿದು.

2. ವೇದವನ್ನು ಅಧ್ಯಯನಮಾಡಿದ ಬಳಿಕ ಸ್ನಾನಮಾಡಬೇಕು, ಗೃಹಸ್ಥನಾಗಬೇಕು– ಎಂಬ (ಬೋ. ಗೃ. ೬-೧) ಸ್ಮೃತಿಗೆ ಅರ್ಥವನ್ನು ವಿಚಾರಮಾಡದೆ ಎಂದೇನೂ ಅರ್ಥವಲ್ಲ. ಜೈ.ಸೂ. (ಶಾ.ಭಾ. ೧-೧-೧) ರಲ್ಲಿ ಅಥಶಬ್ದದ ಅರ್ಥವಿವರಣೆಯನ್ನು ನೋಡಿ.

3. ಏಕೆಂದರೆ ಅರ್ಥವಿಚಾರವನ್ನು ಮಾಡದೆ ಸ್ನಾತಕನಾಗುವದು ಈ ಶ್ರುತಿಗೆ ವಿರುದ್ಧವಾಗುತ್ತದೆ.

4. ವಾ॥ ಪಾಠದಲ್ಲಿ ಈ ಮಾತು ಹೆಚ್ಚಾಗಿದೆ.

5. ಇಲ್ಲಿ 'ವಕ್ತವ್ಯಂ ಚ' ಎಂದು ವಾ॥ ಪಾಠ.

ತದುತ್ಪತ್ತೌ ಯತ್ನಃ ಕರ್ತವ್ಯಃ ಇತ್ಯಭಿಪ್ರಾಯಃ । ಪ್ರಜಾಪ್ರಜನ[1] ಪ್ರಜಾತಿತ್ರಯ ನಿರ್ದೇಶಸಾಮರ್ಥ್ಯಾತ್ । ಅನ್ಯಥಾ ಪ್ರಜನಶ್ಚ ಇತ್ಯೇತದೇಕಮೇವ ಅವಕ್ಷ್ಯತ್ । ಸತ್ಯಾತ್ ನ ಪ್ರಮದಿತವ್ಯಮ್ । ಪ್ರಮಾದೋ ನ ಕರ್ತವ್ಯಃ । ಸತ್ಯಾಚ್ಚ ಪ್ರಮದ ನಮ್ ಅನೃತಪ್ರಸಙ್ಗಃ । ಪ್ರಮಾದಶಬ್ದಸಾಮರ್ಥ್ಯಾತ್ ವಿಸ್ಮೃತ್ಯಾಪಿ ಅನೃತಂ ನ ವಕ್ತವ್ಯಮ್ ಇತ್ಯರ್ಥಃ ।[2] ಅನ್ಯಥಾ ಅಸತ್ಯವದನಪ್ರತಿಷೇಧ ಏವ ಸ್ಯಾತ್ । ಧರ್ಮಾತ್ ನ ಪ್ರಮದಿತವ್ಯಮ್ । ಧರ್ಮಶಬ್ದಸ್ಯ ಅನುಷ್ಠೇಯವಿಷಯತ್ವಾತ್ ಅನನುಷ್ಠಾನಂ ಪ್ರಮಾದಃ । ಸ ನ ಕರ್ತವ್ಯಃ । ಅನುಷ್ಠಾತವ್ಯ ಏವ ಧರ್ಮಃ ಇತಿ ಯಾವತ್। ಏವಂ ಕುಶಲಾತ್ ಆತ್ಮರಕ್ಷಣಾರ್ಥಾತ್ ಕರ್ಮಣಃ ನ ಪ್ರಮದಿತವ್ಯಮ್। ಭೂತಿಃ ವಿಭೂತಿಃ । ತಸ್ಯೈ ಭೂತ್ಯೈ ಭೂತ್ಯರ್ಥಾತ್ ಮಙ್ಗಲಯುಕ್ತಾತ್ ಕರ್ಮಣಃ ನ ಪ್ರಮದಿತವ್ಯಮ್ । ಸ್ವಾಧ್ಯಾಯಪ್ರವಚನಾಭ್ಯಾಂ ನ ಪ್ರಮದಿತವ್ಯಮ್। ಸ್ವಾಧ್ಯಾಯಃ ಅಧ್ಯಯನಮ್, ಪ್ರವಚನಮ್ ಅಧ್ಯಾಪನಮ್ । ತಾಭ್ಯಾಂ ನ ಪ್ರಮದಿತವ್ಯಮ್[3] । ತೇ ಹಿ ನಿಯಮೇನ ಕರ್ತವ್ಯೇ ಇತ್ಯರ್ಥಃ । ತಥಾ ದೇವ ಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಮ್ । ದೈವಪಿತ್ರ್ಯೇ ಕರ್ಮಣೀ ಕರ್ತವ್ಯೇ ॥

(ಭಾಷ್ಯಾರ್ಥ)

ಹೇಗೆ ಅನುಶಾಸನಮಾಡಬೇಕು ? ಎಂದರೆ (ಶ್ರುತಿ) ಹೇಳುತ್ತದೆ. ಸತ್ಯವನ್ನು ಹೇಳು ; ಪ್ರಮಾಣದಿಂದ ಹೇಗೆ ನಿಶ್ಚಿತವಾಗಿರುವದೋ ಹಾಗೆಯೇ ಹೇಳಬೇಕಷ್ಟೆ, ಅದನ್ನು ಹೇಳು. ಅದರಂತೆ ಧರ್ಮವನ್ನು ಆಚರಿಸು. (ಇಲ್ಲಿ) ಧರ್ಮ ಎಂಬುದು ಅನುಷ್ಠಾನಮಾಡಬೇಕಾದ (ಕರ್ಮಗಳ) ಸಾಮಾನ್ಯವನ್ನು ಹೇಳುವ ಮಾತು (ಎಂದು ಇಟ್ಟುಕೊಳ್ಳಬೇಕು). ಏಕೆಂದರೆ ಸತ್ಯವೇ ಮುಂತಾದ ವಿಶೇಷ (ಧರ್ಮಗಳನ್ನೂ ಇಲ್ಲಿ) ಹೇಳಿರುತ್ತದೆ.[4] ಸ್ವಾಧ್ಯಾಯವನ್ನು ಎಂದರೆ ಅಧ್ಯಯನ

---

1. 'ಪ್ರಜನನ' ಎಂದು ಆ॥ ಪಾಠ; ಭಾಷ್ಯದಲ್ಲಿಯೂ ಶ್ರುತಿಯನ್ನು ಹಿಡಿದು ಬರೆದಿದೆ ಎಂದು ತೋರುತ್ತದೆ.

2. "ಅನೃತವದನ ವಿಷಯೇ ದೋಷಶ್ರುತೇಶ್ಚ । ಯೋಽನೃತಂ ವದತಿ ಸಮೂಲೋ ವಾ ಏಷ ಪರಿಶುಷ್ಯತಿ" ( ? ) ಇತಿ । ನ ಸತ್ಯಾತ್ ಪರಮೋ ಧರ್ಮೋ ನಾನೃತಾತ್ ಪಾತಕಂ ಪರಮ್" (?) ಇತಿ ಸ್ಮೃತೇಃ ಎಂದು ಒಂದು ಪುಸ್ತಕದಲ್ಲಿ ಅಧಿಕವಾಗಿ ಪಾಠವಿದೆ.

3. "ಸ್ವಾಧ್ಯಾಯಃ....ಪ್ರಮದಿತವ್ಯಮ್" ಎಂಬ ಭಾಷ್ಯಭಾಗವು ವಾ॥ ಪಾಠದಲ್ಲಿಲ್ಲ.

4. ಸತ್ಯವೇ ಮುಂತಾದವೂ ಧರ್ಮಗಳೇ. ಆದ್ದರಿಂದ ಇಲ್ಲಿ ಹೇಳದೆ ಇರುವ ಧರ್ಮಗಳನ್ನು 'ಧರ್ಮ' ಎಂಬ ಸಾಮಾನ್ಯವಚನದಿಂದ ಹೇಳಿದೆ ಎಂದಿಟ್ಟುಕೊಳ್ಳಬೇಕು.

ಮಾಡುವದನ್ನು ಮರೆಯಬೇಡ, ತಪ್ಪಿಬಿಡಬೇಡ. ಆಚಾರ್ಯನಿಗೋಸ್ಕರ ಪ್ರಿಯವಾದ ಇಷ್ಟವಾದ ಧನವನ್ನು ವಿದ್ಯೆಯ ನಿಷ್ಕ್ರಯಕ್ಕಾಗಿ [1] ಆಹೃತ್ಯ ಎಂದರೆ (ಸಂಪಾದನೆಮಾಡಿ) ತಂದುಕೊಟ್ಟು, ಆಚಾರ್ಯನಿಂದ ಅನುಜ್ಞೆಯನ್ನೂ ಪಡೆದು ಅನುರೂಪಳಾದ [2] ಹೆಂಡತಿಯನ್ನು ತಂದುಕೊಂಡು (ಮದುವೆಯಾಗಿ) ಪ್ರಜಾತಂತುವನ್ನು ಎಂದರೆ ಪ್ರಜಾಸಂತಾನವನ್ನು ಕಡಿದುಹೋಗಲೀಯದಿರು, ಪ್ರಜಾಸಂತತಿಯನ್ನು ಕಡಿದುಹೋಗುವಂತೆ ಮಾಡಬಾರದು. ಮಗನು ಹುಟ್ಟದೆ ಇದ್ದರೂ ಅವನು ಹುಟ್ಟುವದಕ್ಕಾಗಿ **ಪುತ್ರಕಾಮ್ಯೇ** ಮುಂತಾದ ಕರ್ಮಗಳಿಂದ ಅವನು ಹುಟ್ಟುವ ಪ್ರಯತ್ನವನ್ನು ಮಾಡಬೇಕು ಎಂದಭಿಪ್ರಾಯ. ಪ್ರಜೆ, ಪ್ರಜನ, ಪ್ರಜಾತಿ– ಎಂದು ಮೂರನ್ನೂ ಹೇಳಿರುವ (ಶಬ್ದದ) ಸಾಮರ್ಥ್ಯದಿಂದ [3] (ಹೀಗೆಂದು ಏರ್ಪಡುತ್ತದೆ). ಹೀಗೆಂಬ (ಅಭಿಪ್ರಾಯ)ವಿಲ್ಲದಿದ್ದರೆ [4] ಪ್ರಜನನವೆಂಬೀ ಒಂದನ್ನೇ (ಶ್ರುತಿಯು) ಹೇಳುತ್ತಿತ್ತು. ಸತ್ಯವನ್ನು ಮರೆಯಬಾರದು, (ಅದನ್ನು) ತಪ್ಪಕೂಡದು. ಸತ್ಯಕ್ಕೆ ತಪ್ಪುವದು ಎಂದರೆ ಸುಳ್ಳಿಗೂ ಎಡೆಯನ್ನು ಕೊಡುವದು. 'ಮರೆಯುವದು' ಎಂಬ (ಶಬ್ದದ) ಸಾಮರ್ಥ್ಯದಿಂದ ಮರೆತುಕೂಡ ಸುಳ್ಳನ್ನಾಡಬಾರದು ಎಂದು ಅರ್ಥ(ವಾಗುತ್ತದೆ). ಹಾಗಿಲ್ಲದಿದ್ದರೆ ಅಸತ್ಯವನ್ನು ಹೇಳುವದು ಬೇಡ ಎಂದಿಷ್ಟೇ (-ಹೇಳಿದಂತೆ) ಆಗುವದು. ಧರ್ಮವನ್ನು ಮರೆಯಬಾರದು. ಧರ್ಮವೆಂಬ ಮಾತು ಮಾಡತಕ್ಕದ್ದನ್ನು ಹೇಳುವದರಿಂದ [5] (ಅದನ್ನು) ಮಾಡದೆ ಇರುವದೇ ಮರೆಯುವದು. ಆ (ಮರವೆಯನ್ನು) ಮಾಡಬಾರದು, ಧರ್ಮವನ್ನು ಮಾಡುತ್ತಲೇ ಇರಬೇಕು ಎಂದು ತಾತ್ಪರ್ಯ. ಇದರಂತೆ ಕುಶಲವನ್ನು ಎಂದರೆ ತನ್ನನ್ನು ಕಾಪಾಡಿಕೊಳ್ಳುವದಕ್ಕೆ (ಮಾಡಬೇಕಾದ) ಕರ್ಮವನ್ನು ಮರೆಯಬಾರದು. ಭೂತಿ ಎಂದರೆ ಏಳಿಗೆ; ಆ ಭೂತಿಗೆ ಎಂದರೆ ಏಳಿಗೆಗೆ ಬೇಕಾದ ಮಂಗಲಯುಕ್ತ

1. ಗುರುದಕ್ಷಿಣೆಯನ್ನು ಕೊಡುವದು ಕೃತಜ್ಞತಾಸೂಚಕವೂ ಅಲ್ಲದೆ ಗ್ರಹಿಸಿರುವ ವಿದ್ಯೆಯು ತನ್ನದಾಗುವದಕ್ಕೂ ಕಾರಣವಾಗುತ್ತದೆ.

2. ಗೌ.ಧ. ೧-೪-೧ರ ಸೂಚನೆ.

3. ಒಂಭತ್ತನೆಯ ಅನುವಾಕದಲ್ಲಿ ಈ ಮೂರನ್ನೂ ಅನುಷ್ಠಾನಮಾಡಬೇಕೆಂದು ಹೇಳಿರುವದರಿಂದ ಅರ್ಥಾಪತ್ತಿಪ್ರಮಾಣದಿಂದ ಹೀಗೆಂದು ಏರ್ಪಡುತ್ತದೆ.

4. ಬರಿಯ ಪೌರುಷಯತ್ನವನ್ನು ಮಾಡಬೇಕು ಎಂಬುದೇ ಶ್ರುತಿಯ ಅಭಿಪ್ರಾಯವಾಗಿದ್ದರೆ.

5. "ಅನುಷ್ಠೇಯವಿಶೇಷವಿಷಯತ್ವಾತ್" ಎಂಬ ವಾ|| ಪಾಠವು 'ಅನುಷ್ಠೇಯಾನಾಂ ಸಾಮಾನ್ಯವಚನಮ್' ಎಂಬ ಹಿಂದಿನ ಭಾಷ್ಯಕ್ಕೆ ವಿರುದ್ಧ.

ವಾದ ಕರ್ಮವನ್ನು ಮರೆಯಬಾರದು. ಸ್ವಾಧ್ಯಾಯಪ್ರವಚನಗಳನ್ನು ಮರೆಯಬಾರದು. ಸ್ವಾಧ್ಯಾಯವೆಂದರೆ ಅಧ್ಯಯನವು, ಪ್ರವಚನವೆಂದರೆ ಅಧ್ಯಯನಮಾಡಿಸುವದು; ಅವುಗಳನ್ನು ಮರೆಯಭಾರದು. ಏಕೆಂದರೆ ಅವೆರಡೂ ನಿಯಮದಿಂದ ಮಾಡತಕ್ಕವುಗಳಾಗಿವೆ ಎಂದು ಅರ್ಥ. ಹಾಗೂ ದೇವಪಿತೃಕಾರ್ಯಗಳನ್ನು ಮರೆಯಬಾರದು; ದೇವತೆಗಳ ಮತ್ತು ಪಿತೃಗಳ ಕರ್ಮಗಳನ್ನು ಮಾಡತಕ್ಕದ್ದೇ.

(ಭಾಷ್ಯ)

೬೩. ಮಾತೃದೇವಃ ಮಾತಾ ದೇವಃ ಯಸ್ಯ ಸ ತ್ವಂ ಮಾತೃದೇವಃ ಭವಸ್ಯಾಃ । ಏವಂ ಪಿತೃದೇವಃ[1] ಆಚಾರ್ಯದೇವಃ ಅತಿಥಿದೇವಃ ಭವ । ದೇವತಾವತ್ ಉಪಾಸ್ಯಾ ಏತೇ ಇತ್ಯರ್ಥಃ । ಯಾನ್ಯಪಿ ಚ ಅನ್ಯಾನಿ ಅನವದ್ಯಾನಿ ಅನಿನ್ದಿತಾನಿ ಶಿಷ್ಟಾಚಾರಲಕ್ಷಣಾನಿ ಕರ್ಮಾಣಿ । ತಾನಿ ಸೇವಿತವ್ಯಾನಿ ಕರ್ತವ್ಯಾನಿ ತ್ವಯಾ । ನೋ ನ ಕರ್ತವ್ಯಾನಿ[2] ಇತರಾಣಿ ಸಾವದ್ಯಾನಿ ಶಿಷ್ಟಕೃತಾನ್ಯಪಿ । ಯಾನಿ ಅಸ್ಮಾಕಮ್ ಅಚಾರ್ಯಾಣಾಂ ಸುಚರಿತಾನಿ ಶೋಭನಚರಿತಾನಿ ಆಮ್ನಾಯಾದ್ಯವಿರುದ್ಧಾನಿ ತಾನ್ಯೇವ ತ್ವಯಾ ಉಪಾಸ್ಯಾನಿ ಅದೃಷ್ಟಾರ್ಥಾನಿ ಅನುಷ್ಠೇಯಾನಿ ನಿಯಮೇನ ಕರ್ತವ್ಯಾನಿ ಇತಿ ಯಾವತ್[3] । ನೋ ಇತರಾಣಿ ವಿಪರೀತಾನಿ ಆಚಾರ್ಯಕೃತಾನ್ಯಪಿ ॥

(ಭಾಷ್ಯಾರ್ಥ)

ಮಾತೃದೇವನು, ತಾಯಿಯೇ ದೇವನು ಯಾರಿಗೋ ಆ ನೀನು ಮಾತೃದೇವನು; (ಅಂಥ ಮಾತೃದೇವ)ನಾಗಿರು, ಇದ್ದುಕೊಂಡಿರು. ಇದರಂತೆ ಪಿತೃದೇವನು, ಆಚಾರ್ಯದೇವನು, ಅತಿಥಿದೇವನೂ ಆಗಿರು (ಎಂಬ ವಾಕ್ಯಗಳಿಗೂ ಅರ್ಥ). ಇವರನ್ನು ದೇವತೆಯಂತೆ ಸೇವಿಸಬೇಕು ಎಂದರ್ಥ. (ಇದಲ್ಲದೆ) ಇನ್ನೂ ಯಾವ ಕರ್ಮಗಳು ಅನವದ್ಯವಾಗಿರುವವೋ ಎಂದರೆ ನಿಂದಿತವಲ್ಲದೆ ಇರುವವೋ ಶಿಷ್ಟರು ಆಚರಿಸುವರೆಂಬ ಪ್ರಮಾಣದಿಂದ (ಒಳ್ಳೆಯವೆಂದು) ತಿಳಿಯತಕ್ಕವಾಗಿರುವವೋ ಅವುಗಳನ್ನು ನೀನು ಸೇವಿಸಬೇಕು, ಮಾಡಬೇಕು, ಉಳಿದವುಗಳನ್ನು ಎಂದರೆ ನಿಂದಿತವಾಗಿರುವವನ್ನು ಶಿಷ್ಟರು ಮಾಡಿದರೂ ಅಲ್ಲ, ಮಾಡತಕ್ಕ

---

1. "ಪಿತೃದೇವಃ ಭವ, ಆಚಾರ್ಯದೇವಃ ಭವ" ಎಂದು ವಾ॥ ಪಾಠ.
2. "ಅಕರ್ತವ್ಯಾನಿ" ಎಂದು ಆ॥ ಪಾಠ.
3. "ಇತ್ಯೇತತ್" ಎಂದು ವಾ॥ ಪಾಠ.

ವಲ್ಲ.[1] ಆಚಾರ್ಯರಾಗಿರುವ ನಮ್ಮ ಒಳ್ಳೆಯ ನಡತೆಗಳು ಸರಿಯಾದ ನಡತೆಗಳು, ಯಾವವೋ, ವೇದವೇ ಮುಂತಾದವುಗಳಿಗೆ ವಿರುದ್ಧವಲ್ಲದ (ನಡತೆಗಳು) ಯಾವವೋ ಅವುಗಳನ್ನೇ ನೀನು ಉಪಾಸನೆಮಾಡಬೇಕು, ಎಂದರೆ ಅದೃಷ್ಟ(ಫಲ)ಕ್ಕಾಗಿ[2] ಅನುಷ್ಠಾನಮಾಡಬೇಕು, ನಿಯಮದಿಂದ ಮಾಡಬೇಕು ಎಂದು ತಾತ್ಪರ್ಯ. ಆಚಾರ್ಯರು ಮಾಡುವ ಕರ್ಮಗಳಾದರೂ ಉಳಿದ (ಇದಕ್ಕೆ) ವಿರುದ್ಧವಾಗಿರುವ ಕರ್ಮಗಳನ್ನು (ಮಾಡ)ತಕ್ಕದ್ದಲ್ಲ.

## ದೊಡ್ಡವರ ವಿಷಯದಲ್ಲಿ ವರ್ತನೆ

(ಭಾಷ್ಯ)

೬೪. ಯೇ ಕೇ ಚ ಅವಿಶೇಷಿತಾಃ ಆಚಾರ್ಯತ್ವಾದಿಧರ್ಮೈಃ ಅಸ್ಮತ್ ಅಸ್ಮತ್ತಃ ಶ್ರೇಯಾಂಸಃ ಪ್ರಶಸ್ಯತರಾಃ[3] ತೇ ಚ ಬ್ರಾಹ್ಮಣಾಃ ನ ಕ್ಷತ್ರಿಯಾದಯಃ ತೇಷಾಮ್ ಆಸನೇನ ಆಸನದಾನಾದಿನಾ ತ್ವಯಾ ಪ್ರಶ್ವಸಿತವ್ಯಮ್ । ಪ್ರಶ್ವಸನಂ ಪ್ರಶ್ವಾಸಃ ಶ್ರಮಾಪನಯಃ । ತೇಷಾಂ ಶ್ರಮಃ ತ್ವಯಾ ಅಪನೇತವ್ಯಃ ಇತ್ಯರ್ಥಃ । ತೇಷಾಂ ವಾ[4] ಆಸನೇ ಗೋಷ್ಠೀನಿಮಿತ್ತೇ ಸಮುದಿತೇ ತೇಷು ನ ಪ್ರಶ್ವಸಿತವ್ಯಮ್ ಪ್ರಶ್ವಾಸೋಽಪಿ ನ ಕರ್ತವ್ಯಃ । ಕೇವಲಂ ತದುಕ್ತಸಾರಗ್ರಾಹಿಣಾ ಭವಿತವ್ಯಮ್ ॥

(ಭಾಷ್ಯಾರ್ಥ)

ಮತ್ತು ಯಾರು ಯಾರು, ಅವರು ಯಾರೇ ಆಗಿರಲಿ[5], ಆಚಾರ್ಯತ್ವವೇ ಮುಂತಾದ ಗುಣಗಳಿಂದ ಅಸ್ಮತ್' ಎಂದರೆ ನಮಗಿಂತಲೂ ಹೆಚ್ಚು ಉತ್ತಮರೋ ಹೊಗಳತಕ್ಕವರಾಗಿರುವರೋ ಮತ್ತು ಕ್ಷತ್ರಿಯಾದಿಗಳಲ್ಲದೆ ಬ್ರಾಹ್ಮಣರೂ[6] (ಆಗಿರು

---

1. ಶಾಸ್ತ್ರನಿಷಿದ್ಧವಾದರೂ ಸದಾಚಾರವೆಂಬ ನೆಪದಿಂದ ಮಾಡಬಾರದು.

2. ಹೀಗೆ ಮಾಡಿದರೆ ಅದೃಷ್ಟವಾದ ಪರಲೋಕಸುಖವುಂಟಾಗುವದು ಎಂದು ಭಾವ.

3. 'ಪ್ರಶಸ್ತತರಾಃ' ಎಂದು ವಾ॥ ಪಾಠ

4. 'ತೇಷಾಂ ಚ' ಎಂದು ಆ॥ ಪಾಠ.

5. 'ವಿಶೇಷಿತಾಃ' ಎಂದು ಮುದ್ರಿತಪುಸ್ತಕಪಾಠದಲ್ಲಿ 'ಧರ್ಮೈಃ' ಎಂಬ ಮುಂದಿನ ಪದದೊಡನೆ ಅನ್ವಯಿಸಿಕೊಂಡು 'ಗುಣಗಳಿಂದ ಕೂಡಿದವರಾಗಿ' ಎಂದು ಕನ್ನಡಿಸಬೇಕಾಗುವದು ; ಅದಕ್ಕಿಂತ ಈಗ ನಾವು ಕಲ್ಪಿಸಿರುವ ಪಾಠವು ಮೇಲು.

6. ಯಾರೇ ಆಗಲಿ ಗುಣವನ್ನು ಗ್ರಹಣಮಾಡಬೇಕು ; ಹೀಗೆ ಗೌರವವನ್ನು ತೋರಿಸುವಾಗ ವರ್ಣಾಶ್ರಮಧರ್ಮಕ್ಕೆ ಲೋಪವಿಲ್ಲದಂತೆಯೂ ನೋಡಿಕೊಳ್ಳಬೇಕು—ಎಂದರ್ಥ. ವಿತ್ತ, ಬಂಧು, ಕರ್ಮ, ಜಾತಿ, ವಿದ್ಯೆ, ವಯಸ್ಸು—ಇವುಗಳನ್ನು ಗೌರವಿಸಬೇಕು ; ಆಗ ಮುಂದು ಮುಂದಿನದು ಹಿಂದಿನದಕ್ಕಿಂತ ಪ್ರಬಲ (ಗೌ.ಧ. ೧-೭-೧೮).

ವರೋ) ಅವರಿಗೆ ಆಸನದಿಂದ ಎಂದರೆ ಆಸನವನ್ನು ಕೊಡುವದೇ ಮುಂತಾದದ್ದರಿಂದ ಪ್ರಶ್ವಸನಮಾಡಬೇಕು. ಪ್ರಶ್ವಸನವೆಂದರೆ ಪ್ರಶ್ವಾಸವು, ಆಯಾಸವನ್ನು ಹೋಗಲಾಡಿಸುವದು. ಅವರ ಆಯಾಸವನ್ನು ನೀನು ಕಳೆಯಬೇಕು ಎಂದರ್ಥ. ಅಥವಾ ಅವರು ಸಂಭಾಷಣೆಗಾಗಿ ಆಸನದಲ್ಲಿ ಕುಳಿತಿದ್ದರೆ[1] ಅವರ ಬಳಿಯಲ್ಲಿ (ನೀನು) ಉಸುರಬಾರದು. (ಕೊನೆಗೆ) ಉಸುರನ್ನುಕೂಡ ಬಿಡಬಾರದು ; ಸುಮ್ಮನೆ ಅವರು ಹೇಳುವದರ ಸಾರವನ್ನು ಗ್ರಹಿಸುವನಾಗಿರಬೇಕು.

## ದಾನವನ್ನು ಅವಶ್ಯವಾಗಿ ಮಾಡಬೇಕು

(ಭಾಷ್ಯ)

೬೫. ಕಿಂ ಚ ಯತ್ಕಿಂಚಿತ್ ದೇಯಮ್ ತತ್ ಶ್ರದ್ಧಯೈವ ದಾತವ್ಯಮ್। ಅಶ್ರದ್ಧಯಾ ಅದೇಯಂ ನ ದಾತವ್ಯಮ್ । ಶ್ರಿಯಾ ವಿಭೂತ್ಯಾ ದೇಯಂ ದಾತವ್ಯಮ್ । ಹ್ರಿಯಾ ಲಜ್ಜಯಾ ಚ ದೇಯಮ್ । ಭಿಯಾ ಭೀತ್ಯಾ[2] ಚ ದೇಯಮ್ । ಸಂವಿದಾ ಚ । ಸಂವಿತ್ ಮಿತ್ರಾದಿಕಾರ್ಯಮ್ ॥

(ಭಾಷ್ಯಾರ್ಥ)

ಇದಲ್ಲದೆ ಕೊಡತಕ್ಕದ್ದು ಯಾವದಾದರೂ (ಇದ್ದರೆ) ಅದನ್ನು ಶ್ರದ್ಧೆಯಿಂದಲೇ ಕೊಡಬೇಕು, ಅಶ್ರದ್ಧೆಯಿಂದ ಕೊಡತಕ್ಕದ್ದಲ್ಲ ; ಕೊಡಬಾರದು.[3] ಶ್ರೀಯಿಂದ ವಿಭೂತಿಯಿಂದ ಕೊಡಬೇಕು, ಕೊಡತಕ್ಕದ್ದು.[4] ಹ್ರೀಯಿಂದ ಎಂದರೆ ನಾಚಿಕೆಯಿಂದಲೂ ಕೊಡಬೇಕು.[5] ಭೀತಿಯಿಂದ ಎಂದರೆ ಭಯದಿಂದಲೂ[6] ಕೊಡಬೇಕು. ಸಂವಿತ್ತಿನಿಂದ (ತಿಳಿವಳಿಕೆಯಿಂದ)ಲೂ ಕೊಡಬೇಕು ; ಇಲ್ಲಿ ಸಂವಿತ್ತೆಂದರೆ ಮಿತ್ರಾದಿಗಳ ಕಾರ್ಯವೆಂದು ತಿಳಿಯುವದು.[7]

---

1. 'ಆಸನೇನ ಪ್ರಶ್ವಸಿತವ್ಯಮ್', 'ಆಸನೇ ನ ಪ್ರಶ್ವಸಿತವ್ಯಮ್' ಎಂಬ ಪದಚ್ಛೇದಗಳಿಗನುಗುಣವಾಗಿ ಈ ಎರಡು ಅರ್ಥಗಳು. ಎರಡರಲ್ಲಿಯೂ ಶ್ರುತಿಗೆ ಸ್ವಾರಸ್ಯವುಂಟು.
2. "ಭಿಯಾ ಚ ಭಯೇನ ದೇಯಮ್" ಅ॥ ಪಾಠ.
3. ಗೀ. ೧೭-೨೮.
4. ತನ್ನ ಸಂಪತ್ತಿಗೆ ತಕ್ಕಂತೆ.
5. ನಾನು ಯಾವ ದಾನವನ್ನೂ ಮಾಡಲಿಲ್ಲವಲ್ಲ ಎಂಬ ನಾಚಿಕೆಯಿಂದ.
6. ದಾನವೆಂಬ ನಿತ್ಯಕರ್ಮವನ್ನು ಮಾಡದಿದ್ದರೆ ಸದ್ಗತಿಯಾಗಲಾರದೆಂಬ ಅಂಜಿಕೆಯಿಂದ.
7. "ಸಂವಿದಾ ಚ ಮೈತ್ರ್ಯಾದಿಕಾರ್ಯೇಣ" ಎಂಬ ವಾ॥ ಪಾಠಕ್ಕೆ ಮಿತ್ರಾದಿಗಳ ಕಾರ್ಯವೆಂಬ ಭಾವನೆಯಿಂದ ಎಂದರ್ಥ. ಮಿತ್ರರೇ ಮುಂತಾದವರಿಗೆ ಇಂಥ ಸಮಯದಲ್ಲಿ ದಾನಮಾಡತಕ್ಕದ್ದು ಯುಕ್ತ ಎಂದು. ಸಾತ್ತ್ವಿಕದಾನದ ವರ್ಣನೆಯನ್ನು ಗೀ. ೧೭-೨೦ ರಲ್ಲಿ ನೋಡಿ.

# ಕರ್ಮವಿಷಯದ ಸಂದೇಹಗಳನ್ನು ಬಗೆಹರಿಸಿಕೊಳ್ಳುವ ಬಗೆ

(ಭಾಷ್ಯ)

೬೬. ಅಥ ಏವಂ ವರ್ತಮಾನಸ್ಯ ಯದಿ ಕದಾಚಿತ್ ತೇ ತವ ಶ್ರೌತೇ ಸ್ಮಾರ್ತೇ ವಾ ಕರ್ಮಣಿ ವೃತ್ತೇ ವಾ ಆಚಾರಲಕ್ಷಣೇ ವಿಚಿಕಿತ್ಸಾ ಸಂಶಯಃ ಸ್ಯಾತ್ ಚೇತ್[1] ಯೇ ತತ್ರ ತಸ್ಮಿನ್ ದೇಶೇ ಕಾಲೇ ವಾ ಬ್ರಾಹ್ಮಣಾಃ ತತ್ರ ಕರ್ಮಾದೌ 'ಯುಕ್ತಾಃ' ಇತಿ ವ್ಯವಹಿತೇನ ಸಂಬನ್ಧಃ ಕರ್ತವ್ಯಃ । ಸಂಮರ್ಶಿನಃ ವಿಚಾರಕ್ಷಮಾಃ ಯುಕ್ತಾಃ ಅಭಿಯುಕ್ತಾಃ ಕರ್ಮಣಿ ವೃತ್ತೇ ವಾ ಆಯುಕ್ತಾಃ ಅಪರಪ್ರಯುಕ್ತಾಃ ಅಲೂಕ್ಷಾಃ ಅರೂಕ್ಷಾಃ ಅಕ್ರೂರಮತಯಃ ಧರ್ಮಕಾಮಾಃ ಅದೃಷ್ಟಾರ್ಥಿನಃ ಅಕಾಮಹತಾಃ ಇತ್ಯೇತತ್ ಸ್ಯುಃ ಭವೇಯುಃ ತೇ ಬ್ರಾಹ್ಮಣಾಃ[2] ಯಥಾ ಯೇನ ಪ್ರಕಾರೇಣ ತತ್ರ ತಸ್ಮಿನ್ ಕರ್ಮಣಿ ವೃತ್ತೇ ವಾ ವರ್ತೇರನ್ ತಥಾ ತ್ವಮಪಿ ವರ್ತೇಥಾಃ ॥

(ಭಾಷ್ಯಾರ್ಥ)

ಇನ್ನು ಹೀಗೆ ಇರುವಲ್ಲಿ ನಿನಗೆ ಶ್ರೌತ (ಕರ್ಮದಲ್ಲಿ)ಯಾಗಲಿ ಸ್ಮಾರ್ತಕರ್ಮದಲ್ಲಿಯಾಗಲಿ ಆಚಾರರೂಪವಾದ ನಡತೆಯಲ್ಲಾಗಲಿ ಯಾವಾಗಲಾದರೂ ವಿಚಿಕಿತ್ಸೆಯು ಎಂದರೆ ಸಂಶಯವು ಉಂಟಾಗುವದಾದರೆ, ಅಲ್ಲಿ ಎಂದರೆ ಆ ದೇಶದಲ್ಲಿ ಅಥವಾ (ಆ) ಕಾಲದಲ್ಲಿ ಯಾವ ಬ್ರಾಹ್ಮಣರು ಆ ಕರ್ಮಾದಿಗಳಲ್ಲಿ 'ಯುಕ್ತರಾಗಿ' ಎಂದು ದೂರವಾಗಿರುವ ಶಬ್ದದೊಡನೆ (ಇದಕ್ಕೆ) ಸಂಬಂಧವನ್ನು ಮಾಡಿಕೊಳ್ಳಬೇಕು.[3] ಸಂಮರ್ಶಿಗಳಾಗಿಯೂ ಎಂದರೆ ವಿಚಾರಮಾಡುವದರಲ್ಲಿ ಸಮರ್ಥರಾಗಿಯೂ ಯುಕ್ತರಾಗಿಯೂ ಎಂದರೆ ಕರ್ಮದಲ್ಲಿ ಅಥವಾ ನಡತೆಯಲ್ಲಿ ನಿಪುಣರಾಗಿಯೂ ಆಯುಕ್ತರಾಗಿಯೂ ಎಂದರೆ ಮತ್ತೊಬ್ಬರಿಂದ ಪ್ರೇರಿತರಾಗದವರಾಗಿಯೂ[4] ಅಲೂಕ್ಷರಾಗಿಯೂ ಎಂದರೆ ರೂಕ್ಷರಲ್ಲದೆ ಕ್ರೂರವಾದ ಬುದ್ಧಿಯಿಲ್ಲದವರಾಗಿಯೂ ಅದೃಷ್ಟ (ಫಲ)ವನ್ನೇ ಬಯಸುವರಾಗಿಯೂ ಆಸೆಯ ಹೊಡೆತವಿಲ್ಲದವರಾಗಿಯೂ[5] ಎಂದರ್ಥ.

---

1. 'ಸ್ಯಾತ್'॥ ಆ॥ 'ಸ್ಯಾತ್ ಭವೇತ್'। ವಾ॥ ಎಂಬ ಪಾಠಗಳೂ ಉಂಟು.
2. ವಾ॥ ಪಾಠ.
3. ತತ್ರ ಯುಕ್ತಾಃ 'ಆ ಕರ್ಮದಲ್ಲಿ ಅಥವಾ ವೃತ್ತದಲ್ಲಿ ನಿಪುಣರಾದವರು' ಎಂದು ಸಂಬಂಧಮಾಡಿಕೊಳ್ಳಬೇಕು.
4. ತಾವೇ ಸ್ವತಂತ್ರವಾಗಿ ತಿಳಿದು ಪ್ರವರ್ತಿಸುವವರಾಗಿಯೂ.
5. ಕಾಮ್ಯಕರ್ಮಗಳನ್ನು ಬಿಟ್ಟು ಪರಗತಿಯನ್ನು ಕೊಡುವ ಸತ್ಕರ್ಮಗಳಲ್ಲಿಯೇ ನಿರತರಾಗಿರುವವರಾಗಿಯೂ.

(ಇಂಥ ಯಾವ ಬ್ರಾಹ್ಮಣರು ಅಲ್ಲಿ) ಇರುವರೋ ಇರಬಹುದೋ ಆ ಬ್ರಾಹ್ಮಣರು ಅಲ್ಲಿ ಎಂದರೆ ಆ ಕರ್ಮದಲ್ಲಿ ಅಥವಾ ನಡತೆಯಲ್ಲಿ ಹೇಗೆ ಇರುವರೋ ಹಾಗೆಯೇ ನೀನೂ ಇರು.[1]

## ಮಾತುಹೊತ್ತಿರುವವರಲ್ಲಿ ಸಂವ್ಯವಹಾರವು ಹೇಗಿರಬೇಕು ?

(ಭಾಷ್ಯ)

೬೭. ಅಥ ಅಭ್ಯಾಖ್ಯಾತೇಷು । ಅಭ್ಯಾಖ್ಯಾತಾ [2] ಅಭ್ಯುಕ್ತಾಃ ದೋಷೇಣ ಸಂದಿಹ್ಯಮಾನೇನ ಸಂಯೋಜಿತಾಃ ಕೇನಚಿತ್ । ತೇಷು ಚ ಯಥೋಕ್ತಂ ಸರ್ವಮ್ ಉಪನಯೇತ್ " ಯೇ ತತ್ರ" ಇತ್ಯಾದಿ ॥

(ಭಾಷ್ಯಾರ್ಥ)

ಇನ್ನು ಅಭ್ಯಾಖ್ಯಾತರ ವಿಷಯದಲ್ಲಿ. ಅಭ್ಯಾಖ್ಯಾತರು ಎಂದರೆ ಮಾತು ಹೊತ್ತವರು, ಯಾವದೋ ಒಂದು ಸಂದೇಹಕ್ಕೆ ಆಸ್ಪದವಾದ ದೋಷವನ್ನು ಹೊರಿಸಲ್ಪಟ್ಟಿರುವವರು; ಅವರ ವಿಷಯದಲ್ಲಿಯೂ " ಯಾರು ಅಲ್ಲಿ " ಎಂದು ಮುಂತಾಗಿರುವ (ಗ್ರಂಥಭಾಗವನ್ನು) ಹಿಂದೆ ಹೇಳಿದಂತೆ ಎಲ್ಲವನ್ನೂ ಹೊಂದಿಸಿಕೊಳ್ಳಬೇಕು.[3]

## ಉಪಸಂಹಾರ

(ಭಾಷ್ಯ)

೬೮. ಏಷಃ ಆದೇಶಃ ವಿಧಿಃ । ಏಷಃ ಉಪದೇಶಃ ಪುತ್ರಾದಿಭ್ಯಃ ಪಿತ್ರಾದೀನಾಮ್ । ಏಷಾ ವೇದೋಪನಿಷತ್ ವೇದರಹಸ್ಯಮ್ । ವೇದಾರ್ಥಃ ಇತ್ಯೇತತ್ । ಏತದೇವ ಅನುಶಾಸನಮ್ ಈಶ್ವರವಚನಮ್ । ಆದೇಶವಾಚ್ಯಸ್ಯ ವಿಧೇರುಕ್ತತ್ವಾತ್ । ಸರ್ವೇಷಾಂ ವಾ ಪ್ರಮಾಣಭೂತಾನಾಮ್ ಅನುಶಾಸನಮೇತತ್ । ಯಸ್ಮಾದೇವಂ ತಸ್ಮಾತ್ ಏವಂ ಯಥೋಕ್ತಂ ಸರ್ವಮ್ ಉಪಾಸಿತವ್ಯಂ ಕರ್ತವ್ಯಮ್ । ಏವಮ್ ಉ ಚ ಏತತ್ ಉಪಾಸ್ಯಮ್ ಉಪಾಸ್ಯಮೇವ ಚ ಏತತ್, ನಾನುಪಾಸ್ಯಮ್ ಇತಿ ಆದರಾರ್ಥಂ ಪುನರ್ವಚನಮ್ ॥

---

1 ಶಿಷ್ಟರ ಆಚಾರವನ್ನೇ ನೀನೂ ಅನುಸರಿಸು ಎಂದರ್ಥ.

2. ಈ ಮಾತು ವಾ॥ ಪಾಠದಲ್ಲಿದೆ; ಆ॥ ಪಾಠದಲ್ಲಿಲ್ಲ.

3. ನಿಪುಣರಾಗಿ ಸ್ವತಂತ್ರರಾಗಿ ಕ್ರೂರಿಗಳಲ್ಲದೆ ಧರ್ಮವನ್ನೇ ಬಯಸುತ್ತಾ ಇರುವ ಶಿಷ್ಟಾಚಾರಿಗಳಾದ ಬ್ರಾಹ್ಮಣರು ಅಂಥ ಸಂದಿಗ್ಧದೋಷವುಳ್ಳವರ ವಿಷಯದಲ್ಲಿ ಹೇಗೆ ನಡೆದುಕೊಳ್ಳುವರೋ ನೀನೂ ಆವರ ವಿಷಯದಲ್ಲಿ ಹಾಗೆಯೇ ನಡೆದುಕೊ ಎಂದು ಹಿಂದಿನಂತೆಯೇ ಅರ್ಥಮಾಡಬೇಕು. ಇಲ್ಲಿ ಹೆಚ್ಚಿಗೆಯಾಗಿ ವ್ಯಾಖ್ಯಾನಮಾಡತಕ್ಕದ್ದು ಏನೂ ಇರುವದಿಲ್ಲ ಎಂದು ಅಭಿಪ್ರಾಯ.

(ಭಾಷ್ಯಾರ್ಥ)

ಇದು ಆದೇಶವು, ಎಂದರೆ ವಿಧಿಯು. ಇದು ಮಕ್ಕಳು ಮುಂತಾದವರಿಗೆ ತಂದೆಯೇ ಮುಂತಾದವರು (ಮಾಡತಕ್ಕ) ಉಪದೇಶವು. ಇದು ವೇದೋಪನಿಷತ್ತು ಎಂದರೆ ವೇದರಹಸ್ಯವು; ವೇದಾರ್ಥವು ಎಂದರ್ಥ. ಇದೇ ಅನುಶಾಸನವು, ಈಶ್ವರವಚನವು (ಎಂದರ್ಥ); ಏಕೆಂದರೆ 'ಆದೇಶ' ಎಂಬ ಮಾತಿನಿಂದ ಹೇಳಲ್ಪಡುವ ವಿಧಿಯನ್ನು (ಆಗಲೆ) ಹೇಳಿದ್ದಾಗಿದೆ.[1] ಅಥವಾ ಪ್ರಮಾಣರೂಪವಾಗಿರುವ ಎಲ್ಲರ[2] ಅಪ್ಪಣೆ ಇದು. ಹೀಗಿರುವದಲ್ಲ, ಈ ಕಾರಣದಿಂದ ಹೀಗೆ ಮೇಲೆ ಹೇಳಿದಂತೆ ಎಲ್ಲವನ್ನೂ ಉಪಾಸನೆ ಮಾಡಬೇಕು, ಎಂದರೆ ಮಾಡಬೇಕು. ಹೀಗೆಯೇ ಇದನ್ನು ಉಪಾಸನೆಮಾಡಬೇಕು; ಇದನ್ನು ಉಪಾಸನೆಮಾಡಲೇಬೇಕು,[3] ಮಾಡದೆ ಇರಬಾರದು ಎಂದು ಮತ್ತೆ ಹೇಳಿರುವದು ಆದರಕ್ಕಾಗಿ.[4]

---

1. ಆದೇಶ ಎಂದರೆ ವಿಧಿ ಎಂದು ಹೇಳಿದ್ದಾಗಿದೆ; ಆದ್ದರಿಂದ ಅನುಶಾಸನ ಎಂಬುದಕ್ಕೂ ಅದೇ ಅರ್ಥವನ್ನು ಮಾಡುವದು ಪುನರುಕ್ತಿಯಾಗುವದು.

2. ಎಲ್ಲರ ಎಂದರೆ ತಂದೆ, ಗುರು, ಋಷಿಗಳು—ಮುಂತಾದವರ; ಅಥವಾ ಪ್ರಮಾಣಭೂತವಾದ ವೇದವೇ ಅಲ್ಲದೆ ಸ್ಮೃತಿಗಳೂ ತಿಳಿದವರೂ ಹೀಗೆಯೇ ಉಪದೇಶಮಾಡಿರುತ್ತಾರೆ ಎಂದಾದರೂ ಅರ್ಥವನ್ನು ಮಾಡಬಹುದು.

3. ಏವಮ್ ಉ ಎಂದರೆ ಹೀಗೆಯೇ ಎಂದರ್ಥ; ಉಪಾಸ್ಯಮ್ ಉ ಎಂದರೆ ಉಪಾಸನೆಮಾಡತಕ್ಕದ್ದೇ ಬಿಡತಕ್ಕದ್ದಲ್ಲ ಎಂದರ್ಥ. ಹೀಗೆ ಎರಡು ಅರ್ಥವನ್ನೂ ತೆಗೆದುಕೊಳ್ಳಬಹುದು ಎಂದರ್ಥ.

4. ಸತ್ಯ, ಧರ್ಮ—ಮುಂತಾದವುಗಳನ್ನು ಅವಶ್ಯವಾಗಿ ಮಾಡಬೇಕು ಎಂದು ಮುಮುಕ್ಷುಗಳಿಗೆ ಆದರವನ್ನು ಹುಟ್ಟಿಸುವದಕ್ಕಾಗಿ.



# ಶೀಕ್ಷಾವಲ್ಲಿಯ ಉಪಸಂಹಾರ

## ವಿಚಾರಣೀಯ ವಿಷಯ

(ಭಾಷ್ಯ)

೬೯. ಅತ್ರ ಏತಚ್ಚಿನ್ತ್ಯತೇ ವಿದ್ಯಾಕರ್ಮಣೋರ್ವಿವೇಕಾರ್ಥಮ್ । ಕಿಂ ಕರ್ಮಭ್ಯ ಏವ ಕೇವಲೇಭ್ಯಃ ಪರಂ ಶ್ರೇಯಃ, ಉತ ವಿದ್ಯಾಸವ್ಯಪೇಕ್ಷೇಭ್ಯಃ, ಆಹೋಸ್ವಿತ್ ವಿದ್ಯಾಕರ್ಮಭ್ಯಾಂ ಸಂಹತಾಭ್ಯಾಮ್, ವಿದ್ಯಾಯಾ ವಾ ಕರ್ಮಾಪೇಕ್ಷಾಯಾಃ, ಉತ ಕೇವಲಾಯಾ ಏವ ವಿದ್ಯಾಯಾಃ ಇತಿ ॥

(ಭಾಷ್ಯಾರ್ಥ)

ಈಗ ವಿದ್ಯೆ,[1] ಕರ್ಮ–ಇವುಗಳನ್ನು ವಿಂಗಡಿಸಿ ಅರಿಯುವದಕ್ಕಾಗಿ ಇದನ್ನು ವಿಚಾರಮಾಡಲಾಗುವದು: ಬರಿಯ ಕರ್ಮಗಳಿಂದಲೇ ಹೆಚ್ಚಿನ ಶ್ರೇಯಸ್ಸು[2] (ಉಂಟಾಗುವದೊ), ಅಥವಾ ವಿದ್ಯೆಯನ್ನು ಬಯಸುವ[3] (ಕರ್ಮಗಳಿಂದ ಉಂಟಾಗುವದೊ), ಇಲ್ಲದಿದ್ದರೆ ವಿದ್ಯೆ, ಕರ್ಮಗಳು–ಇವೆರಡೂ ಕೂಡಿದ (ಒಟ್ಟಿನಿಂದ ಉಂಟಾಗುವದೊ),[4] ಹಾಗಿಲ್ಲದಿದ್ದರೆ ಕರ್ಮಗಳನ್ನು ಬಯಸುವ[5] ವಿದ್ಯೆಯಿಂದ (ಉಂಟಾಗುವದೊ), ಅಥವಾ ಬರಿಯ ವಿದ್ಯೆಯಿಂದಲೇ (ಉಂಟಾಗುವದೊ)?[6]

## ಬರಿಯ ಕರ್ಮಗಳಿಂದ ಮೋಕ್ಷವಿಲ್ಲ

(ಭಾಷ್ಯ)

೭೦. ತತ್ರ ಕೇವಲೇಭ್ಯ ಏವ ಕರ್ಮಭ್ಯಃ ಸ್ಯಾತ್ । ಸಮಸ್ತ ವೇದಾರ್ಥಜ್ಞಾನವತಃ ಕರ್ಮಾಧಿಕಾರಾತ್ । "ವೇದಃ ಕೃತ್ಸ್ನೋಽಧಿಗನ್ತವ್ಯಃ ಸರಹಸ್ಯೋ

---

1. ಇಲ್ಲಿ ವಿದ್ಯೆ ಎಂದರೆ ಉಪಾಸನೆ, ಜ್ಞಾನ–ಎರಡನ್ನೂ ಗ್ರಹಿಸಬೇಕು. ಪೂರ್ವಪಕ್ಷಗಳಲ್ಲಿ ಉಪಾಸನೆ ಎಂಬ ಅಭಿಪ್ರಾಯವಿದೆ; ಸಿದ್ಧಾಂತದಲ್ಲಿ ಜ್ಞಾನವೆಂಬ ಅಭಿಪ್ರಾಯವಿದೆ.

2. ಮೋಕ್ಷವು.

3. ವಿದ್ಯೆ ಅಂಗ, ಕರ್ಮಗಳು ಅಂಗಿ–ಹೀಗೆ ಸೇರಿಕೊಂಡ ವಿದ್ಯಾಕರ್ಮಗಳಿಂದ.

4. ವಿದ್ಯೆಯಷ್ಟೇ ಕರ್ಮಗಳೂ ಪ್ರಧಾನವಾಗಿ ಎರಡೂ ಸೇರಿಕೊಂಡ ಒಟ್ಟಿನಿಂದ.

5. ಕರ್ಮಗಳು ಅಂಗ, ವಿದ್ಯೆಯು ಅಂಗಿ–ಹೀಗೆ ಸೇರಿಕೊಂಡಿರುವ ವಿದ್ಯಾಕರ್ಮಗಳಿಂದ.

6. ಕರ್ಮದ ಸಂಬಂಧವೇ ಇಲ್ಲದ ವಿದ್ಯೆಯಿಂದ. ಇಲ್ಲಿ ವಿದ್ಯೆ ಎಂದರೆ ಸಿದ್ಧಾಂತಿಗೆ ಒಪ್ಪಾಗಿರುವ ಆತ್ಮಜ್ಞಾನವು.

ದ್ವಿಜನ್ಮನಾ ||'' (ಮನು. ೨-೧೬೫) ಇತಿ ಸ್ಮರಣಾತ್ । ಅಧಿಗಮಶ್ಚ ಸಹೋಪನಿಷದರ್ಥೇನಾತ್ಮಜ್ಞಾನಾದಿನಾ । " ವಿದ್ವಾನ್ ಯಜತೇ '' (?) " ವಿದ್ವಾನ್ ಯಾಜಯತಿ " (?) ಇತಿ ಚ ವಿದುಷ ಏವ ಕರ್ಮಣ್ಯಧಿಕಾರಃ ಪ್ರದರ್ಶ್ಯತೇ ಸರ್ವತ್ರ । " ಜ್ಞಾತ್ವಾ ಚಾನುಷ್ಠಾನಮ್ " (?) ಇತಿ ಚ । ಕೃತ್ಸ್ನಶ್ಚ ವೇದಃ ಕರ್ಮಾರ್ಥಃ ಇತಿ ಹಿ ಮನ್ಯನ್ತೇ ಕೇಚಿತ್ । ಕರ್ಮಭ್ಯಶ್ಚೇತ್ ಪರಂ ಶ್ರೇಯೋ ನಾವಾಪ್ಯತೇ ವೇದೋಽನರ್ಥಕಃ ಸ್ಯಾತ್ ||

(ಭಾಷ್ಯಾರ್ಥ)

ಅವುಗಳಲ್ಲಿ[1] ಬರಿಯ ಕರ್ಮಗಳಿಂದಲೇ (ಮೋಕ್ಷವು) ಉಂಟಾದೀತು (ಎಂಬ ಪಕ್ಷವು ಮೊದಲು ತೋರುತ್ತದೆ). ಏಕೆಂದರೆ ಸಮಸ್ತ ವೇದಗಳ ಅರ್ಥವನ್ನೂ ಅರಿತುಕೊಂಡವನಿಗೇ ಕರ್ಮದಲ್ಲಿ ಅಧಿಕಾರವುಂಟಾಗುತ್ತದೆ.[2] " ದ್ವಿಜನಾದವನು ರಹಸ್ಯಗಳಿಂದೊಡಗೂಡಿದ ವೇದವೆಲ್ಲವನ್ನೂ ಸಂಪಾದಿಸಿಕೊಳ್ಳಬೇಕು '' ಎಂಬ (ಮನು. ೨-೧೬೫) ಸ್ಮೃತಿಯು ಇದಕ್ಕೆ ಪ್ರಮಾಣವು. (ಇಲ್ಲಿ) ವೇದಸಂಪಾದನೆ ಎಂದರೆ ಉಪನಿಷತ್ತುಗಳ ಅರ್ಥವಾದ ಆತ್ಮಜ್ಞಾನವನ್ನೂ ಸೇರಿಸಿಕೊಂಡೇ (ಮಾಡತಕ್ಕದ್ದಾಗಿದೆ).[3] " ತಿಳಿದವನು ಯಾಗಮಾಡಬೇಕು '' (?) " ತಿಳಿದವನು ಯಾಗ ಮಾಡಿಸಬೇಕು ''[4] (?) ಎಂದು ಜ್ಞಾನಿಗೇ ಕರ್ಮದಲ್ಲಿ ಅಧಿಕಾರವನ್ನು ಎಲ್ಲೆಲ್ಲಿಯೂ ಹೇಳಿರುತ್ತದೆ.[5] " ಅರಿತುಕೊಂಡು ಅನುಷ್ಠಾನಮಾಡಬೇಕು " (?) ಎಂದೂ (ವಚನವಿದೆ)[6] ವೇದವೆಲ್ಲವೂ ಕರ್ಮಕ್ಕಾಗಿಯೇ ಹೊಂದಿರುವದೆಂದೇ ಕೆಲವರು ಅಭಿಪ್ರಾಯಪಡುತ್ತಾರೆ.[7] ಕರ್ಮಗಳಿಂದ ಹೆಚ್ಚಿನ ಶ್ರೇಯಸ್ಸು ದೊರೆಯದಿದ್ದರೆ ವೇದವು ನಿರರ್ಥಕ(ವೆಂದಾ)ದೀತು.[8]

---

1. ಮೇಲೆ ಹೇಳಿದ ಕರ್ಮ, ಜ್ಞಾನಾಪೇಕ್ಷಕರ್ಮ, ಜ್ಞಾನಕರ್ಮಗಳು, ಕರ್ಮಾಪೇಕ್ಷಜ್ಞಾನ, ಬರಿಯ ಜ್ಞಾನ_ಎಂದು ಮೋಕ್ಷಸಾಧನಗಳನ್ನು ವಿಕಲ್ಪಿಸುವ ಐದು ಪಕ್ಷಗಳಲ್ಲಿ.

2. ಸೂ.ಭಾ. ೩-೪-೮ರಲ್ಲಿ ಹೇಳಿರುವ ಪೂರ್ವಪಕ್ಷವಿದು.

3. ಛಾ. ೬-೧೫-೧ ಮುಂತಾದ ಶ್ರುತಿಗಳಲ್ಲದೆ ಸ್ಮೃತಿಗಳೂ ವೇದಾರ್ಥಜ್ಞಾನವೆಲ್ಲವನ್ನೂ ದ್ವಿಜರು ಸಂಪಾದಿಸಿಕೊಂಡೇ ಇರಬೇಕೆಂದು ಹೇಳುತ್ತವೆ ಎಂದರ್ಥ. ಸ್ಮೃತಿಯಲ್ಲಿ ರಹಸ್ಯದೊಡನೆ ಎಂದಿಷ್ಟೇ ಇದೆ, ಅರ್ಥಜ್ಞಾನವೆಂಬ ಮಾತು ಇಲ್ಲವಲ್ಲ ! ಎಂಬ ಆಕ್ಷೇಪಕ್ಕೆ ಪರಿಹಾರವಾಗಿ ಈ ಮಾತನ್ನು ಆಡಿದೆ.

4. ವೇದದಲ್ಲಿ ಕರ್ಮಪ್ರಸ್ತಾವದಲ್ಲಿ ಅನೇಕ ಸ್ಥಲಗಳಲ್ಲಿ ಈ ವಚನಗಳಿವೆ.

5. ಆದ್ದರಿಂದ ಅರ್ಥಜ್ಞಾನವು ಅವಶ್ಯ.

6. ಇದು ಯಾವ ವಚನವೋ ತಿಳಿಯದು

7. ಕರ್ಮಮೀಮಾಂಸಕರು. ಜೈ.ಸೂ. ೧-೨-೧, ಶಾ.ಭಾ. ೧-೧-೧ ಮುಂತಾದ ವಚನಗಳನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬೇಕು.

8. ಈ ವಾಕ್ಯವು ವಾ॥ಕಾ॥ ಪಾಠಗಳಲ್ಲಿಲ್ಲ.

(ಭಾಷ್ಯ)

೭೧. ನ । ನಿತ್ಯತ್ವಾನ್ಮೋಕ್ಷಸ್ಯ । ನಿತ್ಯೋ ಹಿ ಮೋಕ್ಷ ಇಷ್ಯತೇ । ಕರ್ಮಕಾರ್ಯಸ್ಯ ಚ ಅನಿತ್ಯತ್ವಂ ಪ್ರಸಿದ್ಧಂ ಲೋಕೇ । ಕರ್ಮಭ್ಯಶ್ಚೇಚ್ಛ್ರೇಯಃ, ಅನಿತ್ಯಂ ಸ್ಯಾತ್ । ತಚ್ಚ ಅನಿಷ್ಟಮ್ । ತದ್ಯಥೇಹ ಕರ್ಮಚಿತೋ ಲೋಕಃ ಕ್ಷೀಯತೇ" (ಛಾ. ೮-೧-೬) ಇತಿ ನ್ಯಾಯಾನುಗೃಹೀತಶ್ರುತಿವಿರೋಧಾತ್ [1] । (ನನು)[2] ಕಾಮ್ಯಪ್ರತಿಷಿದ್ಧಯೋರನಾರಮ್ಭಾತ್ ; ಆರಬ್ಧಸ್ಯ ಚ ಕರ್ಮಣ ಉಪಭೋಗೇನ ಕ್ಷಯಾತ್, ನಿತ್ಯಾನುಷ್ಠಾನಾಚ್ಚ ಪ್ರತ್ಯವಾಯಾನುತ್ಪತ್ತೇಃ, ಜ್ಞಾನನಿರಪೇಕ್ಷ ಏವ ಮೋಕ್ಷಃ ಇತಿ ಚೇತ್ । ತಚ್ಚ ನ । ಕರ್ಮಶೇಷಸಂಭವಾತ್ ತನ್ನಿಮಿತ್ತಶರೀರಾನ್ತರೋತ್ಪತ್ತಿಃ [3] ಪ್ರಾಪ್ನೋತಿ ಇತಿ ಪ್ರತ್ಯುಕ್ತಮ್ । ಕರ್ಮಶೇಷಸ್ಯ ಚ ನಿತ್ಯಾನುಷ್ಠಾನೇನ ಅವಿರೋಧಾತ್ ಕ್ಷಯಾನುಪಪತ್ತಿಃ ಇತಿ ಚ ॥

(ಭಾಷ್ಯಾರ್ಥ)

(ಇದು ಸರಿ) ಯಲ್ಲ. ಏಕೆಂದರೆ ಮೋಕ್ಷವು ನಿತ್ಯವಾಗಿರುತ್ತದೆ. ಮೋಕ್ಷವು ನಿತ್ಯವೆಂಬುದು (ಎಲ್ಲರಿಗೂ ಇಷ್ಟವಾಗಿದೆ. ಕರ್ಮದ ಕಾರ್ಯವು ಅನಿತ್ಯವಾಗಿರುವದೆಂಬುದೂ ಲೋಕದಲ್ಲಿ ಪ್ರಸಿದ್ಧವಾಗಿರುತ್ತದೆ. ಕರ್ಮಗಳಿಂದ ಮೋಕ್ಷ(ವುಂಟಾಗುವ) ದಾದರೆ (ಅದು) ಅನಿತ್ಯವಾಗುವದು. ಅದಂತೂ (ಯಾರಿಗೂ) ಒಪ್ಪಿಲ್ಲ. (ಕರ್ಮಗಳಿಂದ ನಿತ್ಯವಾದ ಮೋಕ್ಷವು ದೊರಕುವದೆಂಬುದು) "ಇಲ್ಲಿ ಕರ್ಮಗಳಿಂದ ಗೆದ್ದುಕೊಂಡ ಲೋಕವು ಹೇಗೆ ಕ್ಷಯವಾಗುತ್ತದೆಯೋ (ಹಾಗೆ ಅಲ್ಲಿ ಪುಣ್ಯದಿಂದ ಗಳಿಸಿದ ಲೋಕವೂ ಕ್ಷಯವಾಗುತ್ತದೆ)" (ಛಾ. ೮-೧-೬) ಎಂಬ ಯುಕ್ತಿಯು ಬೆಂಬಲವುಳ್ಳ[4] ಶ್ರುತಿಗೆ ವಿರುದ್ಧ.

(ಆಕ್ಷೇಪ) :—ಕಾಮ್ಯಪ್ರತಿಷಿದ್ಧ (ಕರ್ಮ)ಗಳನ್ನು ಮಾಡದೆ ಇರುವದರಿಂದಲೂ ಫಲವನ್ನು ಕೊಟ್ಟಿರುವ ಕರ್ಮವು ಉಪಭೋಗದಿಂದಲೇ ಕ್ಷಯವಾಗುವದರಿಂದಲೂ ನಿತ್ಯಕರ್ಮವನ್ನು ಮಾಡುವದರಿಂದ ಪ್ರತ್ಯವಾಯವುಂಟಾಗದೆ ಇರುವದರಿಂದಲೂ ಜ್ಞಾನದ ಗೋಜಿಲ್ಲದೆಯೇ ಮೋಕ್ಷ(ವುಂಟಾಗಬಹುದಲ್ಲವೆ?)

(ಪರಿಹಾರ):—ಇದೂ (ಸರಿ)ಯಲ್ಲ. ಏಕೆಂದರೆ (ಇನ್ನೂ) ಕರ್ಮಗಳು ಉಳಿದು

---

1. ಈ ಮಾತು ಅ॥ ಪಾಠದಲ್ಲಿಲ್ಲ.

2. "ಶೇಷಕರ್ಮಸಂಭವಾತ್" ಎಂದು ಅ॥ ಪಾಠ.

3. "ತನ್ನಿಮಿತ್ತಾ ಶರೀರಾನ್ತರೋತ್ಪತ್ತಿಃ" ಎಂದು ವಾ॥ ಪಾಠ.

4. ಈ ವಾಕ್ಯವು ನಾವು ಮಾಡಿರುವಂತೆ ಅಧ್ಯಾಹಾರಮಾಡಿಕೊಂಡಲ್ಲದೆ ಸರಳವಾಗಿ ಅನ್ವಯಿಸುವದಿಲ್ಲ; ಆದ್ದರಿಂದಲೋ ಏನೋ, ವಾ॥ಕಾ॥ ಪಾಠದಲ್ಲಿ ಇದನ್ನು ಬಿಟ್ಟುಬಿಟ್ಟಿದೆ.

ೂಂಡಿರಬಹುದಾದ್ದರಿಂದ, ಅವುಗಳ ನಿಮಿತ್ತದಿಂದ ಮತ್ತೊಂದು ಶರೀರವುಂಟಾಗ
ೀಕಾಗುವದೆಂದು ಇದಕ್ಕೆ (ಹಿಂದೆಯೇ) ಉತ್ತರವನ್ನು ಹೇಳಿದ್ದಾಗಿದೆ. ಉಳಿ
ರುವ ಕರ್ಮಕ್ಕೂ ನಿತ್ಯಕರ್ಮದ ಅನುಷ್ಠಾನಕ್ಕೂ ವಿರೋಧವಿಲ್ಲದಿರುವದರಿಂದ
ರ್ಮವು) ಕ್ಷಯವಾಗಲಾರದೆಂದೂ (ಹೇಳಿದ್ದಾಗಿದೆ.)[1]

(ಭಾಷ್ಯ)

೭೨. ಯದುಕ್ತಂ "ಸಮಸ್ತವೇದಾರ್ಥಜ್ಞಾನವತಃ ಕರ್ಮಾಧಿಕಾರಾತ್"
ತ್ಯಾದಿ ! ತಚ್ಚ ನ । ಶ್ರುತಜ್ಞಾನವ್ಯತಿರೇಕಾತ್ ಉಪಾಸನಸ್ಯ । ಶ್ರುತಜ್ಞಾನ
ಾತ್ರೇಣ ಹಿ ಕರ್ಮಣ್ಯಧಿಕ್ರಿಯತೇ, ನೋಪಾಸನಜ್ಞಾನಮ್[2] ಅಪೇಕ್ಷತೇ ।
ಪಾಸನಂ ಚ ಶ್ರುತಜ್ಞಾನಾತ್ ಅರ್ಥಾನ್ತರಂ ವಿಧೀಯತೇ ಮೋಕ್ಷಫಲಮ್ ।
ರ್ಥಾನ್ತರಪ್ರಸಿದ್ಧೇಶ್ಚ ಸ್ಯಾತ್, "ಶ್ರೋತವ್ಯಃ" ಇತ್ಯುಕ್ತ್ವಾ ತದ್ವ್ಯತಿರೇಕೇಣ
ನ್ತವ್ಯೋ ನಿದಿಧ್ಯಾಸಿತವ್ಯಃ" (ಬೃ. ೨-೪-೫) ಇತಿ ಯತ್ನಾನ್ತರವಿಧಾನಾತ್ ।ಮನನ
ದಿಧ್ಯಾಸನಯೋಶ್ಚ ಪ್ರಸಿದ್ಧಂ ಶ್ರವಣಜ್ಞಾನಾದರ್ಥಾನ್ತರತ್ವಮ್ ॥

(ಭಾಷ್ಯಾರ್ಥ)

"ಸಮಸ್ತ ವೇದಾರ್ಥವನ್ನೂ ಅರಿತುಕೊಂಡವನಿಗೇ ಕರ್ಮದಲ್ಲಿ ಅಧಿಕಾರ
ಂಟಾಗುತ್ತವೆ" ಎಂದು ಮುಂತಾಗಿ (ಪೂರ್ವಪಕ್ಷಿಯಿಂದ) ಉಕ್ತವಾಗಿತ್ತಷ್ಟೆ;
ದೂ ಸರಿಯಲ್ಲ. ಏಕೆಂದರೆ ಉಪಾಸನೆಯ ಜ್ಞಾನವು ಶ್ರವಣಜ್ಞಾನಕ್ಕಿಂತ
ೇರೆಯಾಗಿರುತ್ತದೆ.[3] ಶ್ರವಣಜ್ಞಾನಮಾತ್ರದಿಂದಲೇ ಕರ್ಮಕ್ಕೆ ಅಧಿಕಾರಿಯಾಗು
ತ್ತನೆಯೇ ಹೊರತು (ಆ ಅಧಿಕಾರಿಯು) ಉಪಾಸನೆಯನ್ನೇನೂ ಬಯಸುವದಿಲ್ಲ.[4]
ವಣಜ್ಞಾನಕ್ಕಿಂತಲೂ ಉಪಾಸನೆಯು ಬೇರೆಯ (ಸಾಧನ)ವಾಗಿಯೇ ಮೋಕ್ಷ

---

1. ಈ ವಲ್ಲಿಯ ೪ ಮತ್ತು ೫ನೆಯ ಭಾಷ್ಯಭಾಗಗಳನ್ನು ನೋಡಿರಿ.

2. "ನೋಪಾಸನಾಮ್" ಎಂದು ಆ॥ಪಾಠ

3. ಅಧ್ಯಯನವನ್ನು ಮಾಡಿದಮಾತ್ರಕ್ಕೆ ಕರ್ಮಕ್ಕೆ ಅಧಿಕಾರಿಯಾಗಬಹುದು ಎಂಬ
ಮಾಧಾನವನ್ನು ಸೂ. ಭಾ. ೩-೪-೧೨ರಲ್ಲಿ ಹೇಳಿದೆ. ಆತ್ಮಜ್ಞಾನವು ಕರ್ಮಕ್ಕೆ ಅವಶ್ಯ
ಲ್ಲವೆಂದೂ ಅಲ್ಲಿ ಹೇಳಿದೆ.

4. ಶ್ರವಣವು ಬೇಕೆಂದು ಒಪ್ಪಿದರೂ ಉಪಾಸನೆಯೇನೂ ಬೇಕಾಗುವದಿಲ್ಲವೆಂದು
ಭಿಪ್ರಾಯ. ನಿಜವಾಗಿ ಆತ್ಮಶ್ರವಣವೂ ಕರ್ಮಕ್ಕೆ ಅಂಗವಲ್ಲ. ಏಕೆಂದರೆ ಆತ್ಮನು ಅಕರ್ತೃ
ಂಬ ಜ್ಞಾನವು ಕರ್ತೃತ್ವಬುದ್ಧಿಯಿಂದ ಮಾಡಬೇಕಾದ ಕರ್ಮಕ್ಕೆ ಉಪಯೋಗವಿಲ್ಲ, ವಿರು
ವೂ ಆಗಿದೆ. ಗೀ. ಭಾ. ೨-೨೦, ಸೂ. ಭಾ. ೧-೧-೪, ೩-೪-೧೬.

ವೆಂಬ ಫಲಕ್ಕಾಗಿ[1] ವಿಹಿತವಾಗಿರುತ್ತದೆ.[2] ಅದು (ಶ್ರವಣ)ಕ್ಕಿಂತ ಬೇರೊಂದು ಪದಾರ್ಥವೆಂದು ಪ್ರಸಿದ್ಧವಾಗಿರುವದರಿಂದಲೂ (ಹೀಗೆಂದು ತಿಳಿಯಬೇಕು).[3] "ಶ್ರವಣ ಮಾಡಬೇಕು" ಎಂದು ಹೇಳಿ ಅದಕ್ಕಿಂತ ಬೇರೆಯಾಗಿ "ಮನನಮಾಡಬೇಕು, ನಿದಿಧ್ಯಾಸನಮಾಡಬೇಕು" (ಬೃ. ೨-೪-೫) ಎಂದು ಮತ್ತೆ ಬೇರೊಂದು ಯತ್ನವನ್ನು ವಿಧಾನಮಾಡುವದರಿಂದ[4] ಮನನನಿದಿಧ್ಯಾಸನಗಳು ಶ್ರವಣಜ್ಞಾನಕ್ಕಿಂತ ಬೇರೆ ಎಂಬುದು ಪ್ರಸಿದ್ಧವೂ ಆಗಿರುತ್ತದೆ.

## ಜ್ಞಾನಾಪೇಕ್ಷಕರ್ಮದಿಂದಲೂ ಮೋಕ್ಷವಿಲ್ಲ

(ಭಾಷ್ಯ)

೭೩. ಏವಂ ತರ್ಹಿ ವಿದ್ಯಾಸವ್ಯಪೇಕ್ಷೇಭ್ಯಃ ಕರ್ಮಭ್ಯಃ ಸ್ಯಾನ್ಮೋಕ್ಷಃ । ವಿದ್ಯಾಸಹಿತಾನಾಂ ಚ ಕರ್ಮಣಾಂ ಭವೇತ್ ಕಾರ್ಯಾನ್ತರಾರಮ್ಭಸಾಮರ್ಥ್ಯಮ್ । ಯಥಾ ಸ್ವತೋ ಮರಣಜ್ವರಾದಿಕಾರ್ಯಾರಮ್ಭಸಾಮರ್ಥ್ಯಾನಾಮಪಿ[5] ವಿಷದಧ್ಯಾದೀನಾಂ ಮನ್ತ್ರಶರ್ಕರಾದಿಸಂಯುಕ್ತಾನಾಂ ಕಾರ್ಯಾನ್ತರಾರಮ್ಭಸಾಮರ್ಥ್ಯಮ್, ಏವಂ ವಿದ್ಯಾಸಹಿತೈಃ ಕರ್ಮಭಿರ್ಮೋಕ್ಷ ಆರಭ್ಯತೇ ಇತಿ ಚೇತ್ । ಆರಭ್ಯಸ್ಯ ಅನಿತ್ಯತ್ವಾತ್ ಇತ್ಯುಕ್ತೋ ದೋಷಃ । ವಚನಾತ್ ಆರಭ್ಯೋಽಪಿ ನಿತ್ಯ ಏವ ಇತಿ ಚೇತ್ । ನ । ಜ್ಞಾಪಕತ್ವಾದ್ ವಚನಸ್ಯ। ವಚನಂ ನಾಮ ಯಥಾಭೂತಸ್ಯಾರ್ಥಸ್ಯ ಜ್ಞಾಪಕಂ ವಿದ್ಯಮಾನಸ್ಯ ಕರ್ತೃ । ನ ಹಿ ವಚನಶತೇನಾಪಿ ನಿತ್ಯಮ್ ಆರಭ್ಯತೇ, ಆರಬ್ಧಂ ವಾ ಅವಿನಾಶಿ ಭವೇತ್ ॥

(ಭಾಷ್ಯಾರ್ಥ)

(ಪೂರ್ವಪಕ್ಷಿ):—ಹಾಗಾದರೆ ವಿದ್ಯೆಯನ್ನು ಬಯಸುವ ಕರ್ಮಗಳಿಂದ ಮೋಕ್ಷವಾಗಬಹುದು. ವಿದ್ಯೆಯಿಂದೊಡಗೂಡಿದ ಕರ್ಮಗಳಿಗೆ ಮತ್ತೊಂದು(ಬಗೆಯ)

---

1. ಮೋಕ್ಷಫಲಮ್ ಎಂಬುದನ್ನು ಉಪಾಸನಮ್ ಎಂಬುದಕ್ಕೆ ವಿಶೇಷಣವಾಗಿ ಮಾಡಿಕೊಳ್ಳಬೇಕು.

2. ನಿದಿಧ್ಯಾಸನವು ವಿಹಿತವಾಗಿದೆ ಎಂದು ಇಲ್ಲಿ ಇಟ್ಟುಕೊಂಡಿದೆ. ಈ ಪಕ್ಷದಲ್ಲಿ ನಿದಿಧ್ಯಾಸನವೂ ಆತ್ಮದರ್ಶನಕ್ಕೆ ವಿಹಿತವಾಗಿರುವ ಸಾಧನವು. ಇದು ಸೂ.ಭಾ. ೪-೧-೧ರಲ್ಲಿ **ಸೂಚಿತ**ವಾಗಿದೆ ನಿದಿಧ್ಯಾಸನವೆಂದರೆ ವಿಜ್ಞಾನವೇ, ಆತ್ಮನ ಅರಿವೇ ಎಂಬ ಪಕ್ಷವು ಬೃ ಭಾ. **೨-೪-೫,** ಮತ್ತು ಬೃ.ವಾ. ೨-೪-೨೧೭ ರಿಂದ **೨೩೪** ರಲ್ಲಿ ಕಾಣುತ್ತದೆ.

3. ನಿದಿಧ್ಯಾಸನವೇ ಬೇರೆಯಾಗಿರುವಾಗ ಮನನನಿದಿಧ್ಯಾಸನಗಳಿಂದ ಆಗುವ ದರ್ಶನವು ಬೇರೆಯೆಂದೂ ಕರ್ಮಕ್ಕೂ ಅದಕ್ಕೂ ಸಂಬಂಧವಿಲ್ಲವೆಂದೂ ಹೇಳತಕ್ಕದ್ದೇನು ?

4. ನಿದಿಧ್ಯಾಸನವಿಧಿಯು ಶ್ರುತ್ಯವಗತವೆಂದು ಭಾವ.

5. 'ಸಮರ್ಥಾನಾಮಪಿ' ಎಂದು ಪಾ॥ ಪಾಠ.

ಕಾರ್ಯವನ್ನು ಉಂಟುಮಾಡುವ ಸಾಮರ್ಥ್ಯವುಂಟಾಗಲೂ ಬಹುದು. ಹೇಗೆ ವಿಷ, ಮೊಸರು-ಮುಂತಾದವುಗಳು ತಮ್ಮಮಟ್ಟಿಗೆ ಇರುವಾಗ ಸಾವು, ಜ್ವರ-ಮುಂತಾದ ಕಾರ್ಯವನ್ನುಂಟುಮಾಡುವ ಸಾಮರ್ಥ್ಯವುಳ್ಳವುಗಳಾಗಿದ್ದರೂ ಮಂತ್ರ, ಸಕ್ಕರೆ-ಮುಂತಾದವುಗಳೊಡನೆ ಸೇರಿದರೆ (ಅವಕ್ಕೆ) ಬೇರೊಂದು ಕಾರ್ಯವನ್ನುಂಟುಮಾಡುವ ಸಾಮರ್ಥ್ಯವು (ಬರುವದೋ)[1] ಇದರಂತೆ ವಿದ್ಯೆಯೊಡನೆ ಸೇರಿದ ಕರ್ಮಗಳಿಂದ ಮೋಕ್ಷವು ಉಂಟಾಗಬಹುದಲ್ಲ !

(ಸಿದ್ಧಾಂತಿ) :—ಹಾಗಲ್ಲ. (ಏಕೆಂದರೆ) ಯಾವದು ಉಂಟಾಗತಕ್ಕದ್ದೋ (ಅದು) ಅನಿತ್ಯವಾಗಿರುವದು-ಎಂದು (ಈ ಪಕ್ಷದಲ್ಲಿ) ದೋಷವನ್ನು ಹಿಂದೆಯೇ[2] ಹೇಳಿದ್ದಾಗಿದೆ.

(ಪೂರ್ವಪಕ್ಷಿ) :—(ವೇದ) ವಚನದ (ಪ್ರಾಮಾಣ್ಯ)ದಿಂದ[3] ನಿತ್ಯವೇ (ಆಗಬಹುದಲ್ಲ) !

(ಸಿದ್ಧಾಂತಿ) :—ಹಾಗಲ್ಲ. ಏಕೆಂದರೆ **ವಚನವು ಜ್ಞಾಪಕವಾಗಿರುತ್ತದೆ.** ವಚನವೆಂಬುದು ಇರುವ ವಸ್ತುವನ್ನು ಇದ್ದಂತೆ ತಿಳಿಸತಕ್ಕದ್ದು, ಇರುವದನ್ನೇ ಉಂಟುಮಾಡತಕ್ಕದ್ದು.[4] **ನೂರು ವಚನಗಳಿಂದಲೂ ನಿತ್ಯವನ್ನು ಉಂಟುಮಾಡುವದು ಆಗಲಾರದು, ಉಂಟಾದದ್ದು ನಾಶವಾಗತಕ್ಕದ್ದಲ್ಲವೆಂದೂ ಆಗಲಾರದು.**[5]

---

1. ಮೊಸರು, ವಿಷ-ಇವುಗಳೂ ತೃಪ್ತಿ, ಪುಷ್ಟಿ ಎಂಬ ಬೇರೊಂದು ಕಾರ್ಯವನ್ನು ಉಂಟುಮಾಡುವದು ಅನುಭವದಲ್ಲಿದೆ ಎಂದರ್ಥ. ಸೂ.ಭಾ. ೪-೧-೧೬, ಬೃ.ಭಾ. ೩-೩ ರ ಸಂಬಂಧಭಾಷ್ಯ-ಇವುಗಳಲ್ಲಿಯೂ ಈ ಯುಕ್ತಿಯನ್ನೊಡ್ಡುವ ಪೂರ್ವಪಕ್ಷವಿದೆ.

2. ಈ ವಲ್ಲಿಯ ಆನೆಯ ಭಾ.ಭಾ. ದಲ್ಲಿ.

3. ಶಾಸ್ತ್ರಕ್ಕೆ ವಿರುದ್ಧವಾಗಿ ಯುಕ್ತಿಯನ್ನು ಹೂಡಬಾರದು ಎಂದು ಪೂರ್ವಪಕ್ಷಿಯ ಭಾವ. ಜ್ಞಾನಕರ್ಮಸಮುಚ್ಚಯದಿಂದ ಬ್ರಹ್ಮಲೋಕವನ್ನು ಪಡೆವವನು ಸಂಸಾರಕ್ಕೆ ಮರಳಿ ಬರುವದಿಲ್ಲವೆಂದು ಛಾ. ೮-೧೫-೧ ಮುಂತಾದ ಶ್ರುತಿಗಳಲ್ಲಿದೆ. ಅದರ ಬಲದಿಂದ ಈ ಪೂರ್ವಪಕ್ಷವನ್ನು ಒಡ್ಡಿದೆ.

4. ಅಜ್ಞಾನವನ್ನು ಕಳೆದು, ಇರುವ ವಸ್ತುವನ್ನೇ ಹೊಸದಾಗಿ ಪಡೆದಂತೆ ಮಾಡತಕ್ಕದ್ದು.

5. ವಚನವು ಅನುಭವಕ್ಕೆ ವಿರುದ್ಧವಾಗಿ ಹೇಳಿದರೆ ಅಪ್ರಮಾಣವೇ ಆಗುತ್ತದೆ. ಆದ್ದರಿಂದ ಅನುಭವವಿರುದ್ಧವಾಗಿ ವಚನಕ್ಕೆ ಅರ್ಥವನ್ನು ಕಲ್ಪಿಸಬಾರದು. ಪ್ರ.ಭಾ. ೬-೨, ಮಾ. ಕಾ. ಭಾ. ೨-೩೨ ; ಬೃ. ಭಾ. ೨-೧-೨೦, ೩-೯ ಉಪಸಂಹಾರ ; ಗೀ. ಭಾ. ೧೮-೬೬ ನೋಡಿ.

## ಜ್ಞಾನಕರ್ಮಗಳ ಸಮಸಮುಚ್ಚಯದಿಂದಲೂ ಮೋಕ್ಷವಿಲ್ಲ

(ಭಾಷ್ಯ)

೭೪. ಏತೇನ ವಿದ್ಯಾಕರ್ಮಣೋಃ ಸಂಹತಯೋರ್ಮೋಕ್ಷಾರಮ್ಭಕತ್ವಂ ಪ್ರತ್ಯುಕ್ತಮ್ । ವಿದ್ಯಾಕರ್ಮಣೀ ಮೋಕ್ಷಪ್ರತಿಬನ್ಧಹೇತುನಿವರ್ತಕೇ ಇತಿ ಚೇತ್ । ನ । ಕರ್ಮಣಃ ಫಲಾನ್ತರದರ್ಶನಾತ್ । ಉತ್ಪತ್ತಿಸಂಸ್ಕಾರವಿಕಾರಾಪ್ತಯೋ[1] ಹಿ ಫಲಂ ಕರ್ಮಣೋ ದೃಶ್ಯತೇ । ಉತ್ಪತ್ತ್ಯಾದಿಫಲವಿಪರೀತಶ್ಚ ಮೋಕ್ಷಃ ॥

(ಭಾಷ್ಯಾರ್ಥ)

ಹೀಗೆಂದದ್ದರಿಂದ[2] ವಿದ್ಯಾಕರ್ಮಗಳು (ಸಮಪ್ರಧಾನವಾಗಿ) ಸೇರಿಕೊಂಡು ಮೋಕ್ಷವನ್ನುಂಟುಮಾಡುವವು ಎಂಬುವನ್ನೂ ತಿರಸ್ಕರಿಸಿದಂತೆಯೇ ಆಯಿತು.

(ಪೂರ್ವಪಕ್ಷಿ):—ವಿದ್ಯಾಕರ್ಮಗಳು ಮೋಕ್ಷಕ್ಕೆ ಅಡ್ಡಿಯಾಗಿರುವ ಕಾರಣವನ್ನು ಹೋಗಲಾಡಿಸಬಹುದಲ್ಲ ![3]

(ಸಿದ್ಧಾಂತಿ): —ಹಾಗಲ್ಲ. ಏಕೆಂದರೆ ಕರ್ಮಕ್ಕೆ ಮತ್ತೊಂದು ಬಗೆಯ ಫಲವು ಕಂಡುಬರುತ್ತದೆ. ಹುಟ್ಟುವದು, ಸಂಸ್ಕಾರವನ್ನು ಹೊಂದುವದು, ವಿಕಾರವನ್ನು ಹೊಂದುವದು, (ಹೊಸದಾಗಿ) ಪಡೆಯುವದು–ಇವೇ ಕರ್ಮಕ್ಕೆ[4] ಫಲವೆಂದು ಕಂಡುಬರುತ್ತಿದೆ. ಆದರೆ ಮೋಕ್ಷವು (ಈ) ಹುಟ್ಟುವದೇ ಮುಂತಾದ ಫಲಕ್ಕೆ ವಿರುದ್ಧವಾಗಿರುತ್ತದೆ.[5]

(ಭಾಷ್ಯ)

೭೫. ಗತಿಶ್ರುತೇರಾಪ್ಯ ಇತಿ ಚೇತ್ । "ಸೂರ್ಯದ್ವಾರೇಣ" (ಮುಂ. ೧-೨-೧೧). "ತಯೋರ್ಧ್ವಮಾಯನ್" (ಕ. ೨-೩-೧೬, ಛಾ. ೮-೬-೬) ಇತ್ಯೇವಮಾದಿಗತಿಶ್ರುತಿಭ್ಯಃ ಪ್ರಾಪ್ಯೋ ಮೋಕ್ಷಃ ಇತಿ ಚೇತ್ । ನ । ಸರ್ವಗತತ್ವಾತ್ ।

---

1. "ಉತ್ಪತ್ತಿವಿಕಾರಸಂಸ್ಕಾರಾಪ್ತಯೋ ಹಿ" ಎಂದು ಪಾ॥ ಪಾಠ.

2. ಉಂಟಾಗತಕ್ಕದ್ದು ನಿತ್ಯವೆಂಬುದು ಆಗಲಾರದು ಎಂದದ್ದರಿಂದ.

3. ಪಾಪವು ಮುಂತಾದ ಅಡ್ಡಿಗಳು ಹೋದರೆ ಮುಕ್ತಿಯು ತಾನೇ ಸಿದ್ಧವಾಗಿರುವದರಿಂದ ಅಪ್ರಯತ್ನವಾಗಿ ದೊರೆಯುತ್ತದೆ; ವಿದ್ಯಾಕರ್ಮಗಳಿಂದ ಅದು ಹೊಸದಾಗಿ ಉಂಟಾಗುವದಲ್ಲವಾದ್ದರಿಂದ ಅದು ಅನಿತ್ಯವೆಂಬ ದೋಷವೂ ಬರುವದಿಲ್ಲ ಎಂದು ಭಾವ.

4. ಉತ್ಪತ್ತಿ ಮುಂತಾದವು ಕರ್ಮಕ್ಕೆ ಫಲವೆಂದು ಮೀಮಾಂಸಕರೂ ಒಪ್ಪಿರುತ್ತಾರೆ.

5. ಉತ್ಪತ್ತಿ ಮುಂತಾದವುಗಳು ಇಲ್ಲದ್ದರಿಂದ ಮುಕ್ತಿಯು ಕರ್ಮಕಾರ್ಯವಲ್ಲವೆಂಬುದನ್ನು ಈ. ಸಂಬಂಧಭಾಷ್ಯ, ಮುಂ. ಭಾ. ೨-೧-೧೨, ಬೃ. ಭಾ. ೩-೩-೧ ಇವುಗಳಲ್ಲಿ ಪ್ರತಿಪಾದಿಸಿದೆ.

ಗನ್ತೃಭಿಶ್ಚಾನನ್ಯತ್ವಾತ್ ॥[1] ಆಕಾಶಾದಿಕಾರಣತ್ವಾತ್ ಸರ್ವಗತಂ ಬ್ರಹ್ಮ । ಬ್ರಹ್ಮಾವ್ಯತಿರಿಕ್ತಾಶ್ಚ ಸರ್ವೇ ವಿಜ್ಞಾನಾತ್ಮಾನಃ । ಅತೋ ನಾಪ್ಯೋ ಮೋಕ್ಷಃ । ಗನ್ತುರನ್ಯದ್ ವಿಭಿನ್ನದೇಶಂ ಚ[2] ಭವತಿ ಗನ್ತವ್ಯಮ್ । ನ ಹಿ ಯೇನೈವಾವ್ಯತಿರಿಕ್ತಂ ಯತ್ ತತ್ ತೇನೈವ ಗಮ್ಯತೇ[3] । ಅನನ್ಯತ್ವಪ್ರಸಿದ್ಧಿಶ್ಚ[4] "ತತ್ ಸೃಷ್ಟ್ವಾ ತದೇವಾನುಪ್ರಾವಿಶತ್" (೨-೬), "ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ" (ಗೀ. ೧೩-೨) ಇತ್ಯೇವಮಾದಿ ಶ್ರುತಿಸ್ಮೃತಿಶತೇಭ್ಯಃ ॥

(ಭಾಷ್ಯಾರ್ಥ)

(ಪೂರ್ವಪಕ್ಷಿ) :—ಗಮನ(ವನ್ನು ಹೇಳುವ) ಶ್ರುತಿಯ (ಪ್ರಮಾಣದಿಂದ ಮೋಕ್ಷವು) ಪಡೆಯತಕ್ಕದ್ದೇ (ಎಂದು ನಿಶ್ಚಯವಾಗುತ್ತದೆ). ಹೇಗೆಂದರೆ (ಆ ಕಲ್ಮಷರಹಿತರು) ಸೂರ್ಯನಮೂಲಕವಾಗಿ (ಅಮೃತಪುರುಷನಿರುವಲ್ಲಿಗೆ ಹೋಗುವರು), (ಮುಂ. ೧-೨-೧೧) "ಆ (ನಾಡಿಯಿಂದ) ಮೇಲಕ್ಕೆ ಹೋಗುವವನು (ಅಮೃತತ್ವವನ್ನು ಹೊಂದುವವನು)" (ಕ. ೨-೩-೧೬, ಛಾ. ೮-೬-೬) ಇವೇ ಮುಂತಾದ[5] ಗಮನ(ವನ್ನು ಹೇಳುವ) ಶ್ರುತಿ (ಪ್ರಮಾಣದಿಂದ) ಮೋಕ್ಷವು (ಹೋಗಿ) ಪಡೆಯತಕ್ಕದ್ದೇ (ಎಂದು ನಿಶ್ಚಯಿಸಬೇಕು).

(ಸಿದ್ಧಾಂತಿ) :—ಹಾಗಲ್ಲ. ಏಕೆಂದರೆ (ಬ್ರಹ್ಮವು) ಸರ್ವಗತವಾಗಿರುತ್ತದೆ, ಗಂತೃಗಳಿಗೆ ಅನನ್ಯವಾಗಿಯೂ ಇರುತ್ತದೆ. (ಇದರ ವಿವರ) :—ಬ್ರಹ್ಮವು ಆಕಾಶವೇ ಮುಂತಾದದ್ದಕ್ಕೂ[6] ಕಾರಣವಾಗಿರುವದರಿಂದ ಎಲ್ಲೆಲ್ಲಿಯೂ ಇರುವದಾಗಿರುತ್ತದೆ. ಯಾವ ವಿಜ್ಞಾನಾತ್ಮರುಗಳೂ ಬ್ರಹ್ಮಕ್ಕಿಂತ ಬೇರೆಯಾಗಿರುವದೂ ಇಲ್ಲ. ಆದ್ದ

---

1. 'ಗನ್ತೃಭ್ಯಶ್ಚ' ಎಂದು ವಾ॥ ಪಾಠ.

2. "ವಿಭಿನ್ನಂ ದೇಶಂ ಪ್ರತಿ" ಎಂಬ (ಆ॥) ಪಾಠಕ್ಕಿಂತ ಈ (ವಾ॥) ಪಾಠವು ಮೇಲು.

3. (ಆ॥) ಪಾಠದಲ್ಲಿ "ಗಮ್ಯತೇ ತತ್" ಎಂದು ಒಂದು 'ತತ್' ಹೆಚ್ಚಾಗಿದೆ.

4. "ತದನನ್ಯತ್ವಸಿದ್ಧಿಶ್ಚ" ಎಂಬ ವಾ॥ ಪಾಠ; ಅನನ್ಯತ್ವತ್ರಪ್ರಸಿದ್ಧೇಶ್ಚ ಎಂಬ ಆ॥ ಪಾಠಕ್ಕಿಂತಲೂ ಇದೇ ಉತ್ತಮ.

5. "ಸೇನ್ದ್ರಯೋನಿಃ" ಎಂದು ಈ ವಲ್ಲಿಯ ೬ನೆಯ ಅನುವಾಕದಲ್ಲಿದೆ; ಪ್ರ. ೩-೭, ಛಾ. ೮-೬-೫ ಮುಂತಾದ ಕಡೆಯಲ್ಲಿ ಮೋಕ್ಷವನ್ನು ಒಂದು ಮಾರ್ಗದಿಂದ ಹೋಗಿ ಪಡೆಯಬೇಕೆಂದು ಹೇಳಿದೆ ಎಂದು ಪೂರ್ವಪಕ್ಷಿಯ ಭಾವ.

6. ಆಕಾಶಕ್ಕೂ ಕಾಲಕ್ಕೂ ಕಾರಣವಾಗಿರುವದರಿಂದ ಅದು ದೇಶಕಾಲಗಳಿಂದ ಮರೆಯಾಗಿಲ್ಲ. ಸೂ.ಭಾ. ೧-೧-೪, ೪-೩-೧೪.

ರಿಂದ ಮೋಕ್ಷವು ಪಡೆಯತಕ್ಕದ್ದಲ್ಲ.[1] ಹೋಗುವವನಿಗಿಂತ ಬೇರೆಯಾಗಿರುವದೂ ಬೇರೆಯ ದೇಶದಲ್ಲಿರುವದೂ[2] ಹೋಗಿ (ಪಡೆಯ)ತಕ್ಕದ್ದಾಗಿರುತ್ತದೆ. ಯಾವದು ಯಾವದನ್ನು ಬಿಟ್ಟು ಬೇರೆಯಾಗಿರುವದಿಲ್ಲವೋ ಅದು ಅದೇ (ಮತ್ತೊಂದು ಕಡೆಗೆ) ಹೋಗಿ ಪಡೆಯತಕ್ಕದ್ದಾಗಿರುವದಿಲ್ಲವಷ್ಟೆ.[3] "ಅದನ್ನು ಸೃಷ್ಟಿಸಿ ಅದನ್ನೇ ಒಳ ಹೊಕ್ಕಿತು" (೨-೬), "ಕ್ಷೇತ್ರಜ್ಞನನ್ನು ನನ್ನನ್ನಾಗಿಯೇ ತಿಳಿ" (ಗೀ. ೧೩-೨) ಮುಂತಾದ ನೂರಾರು ಶ್ರುತಿಗಳಿಂದಲೂ ಸ್ಮೃತಿಗಳಿಂದಲೂ (ಬ್ರಹ್ಮವು ಹೋಗಿ ಪಡೆಯುವ ವಿಜ್ಞಾನಾತ್ಮರುಗಳಿಗಿಂತ) ಬೇರೆಯಲ್ಲವೆಂದು ಗೊತ್ತಾಗುತ್ತದೆ.

(ಭಾಷ್ಯ)

೭೬. ಗತ್ಯೈಶ್ವರ್ಯಾದಿಶ್ರುತಿವಿರೋಧಃ ಇತಿ ಚೇತ್ । ಅಥಾಪಿ ಸ್ಯಾತ್ ಯದ್ಯಪ್ರಾಪ್ಯೋ ಮೋಕ್ಷಃ, ತದಾ ಗತಿಶ್ರುತೀನಾಮ್ "ಸ ಏಕಧಾ" (ಛಾ. ೭-೨೬-೨), "ಸ ಯದಿ ಪಿತೃಲೋಕಕಾಮಃ"(ಛಾ. ೮-೨-೧) ಸ್ತ್ರೀಭಿರ್ವಾ ಯಾನೈರ್ವಾ(ಛಾ ೮-೧೨-೩) ಇತ್ಯಾದಿಶ್ರುತೀನಾಂ ಚ ಕೋಪಃ ಸ್ಯಾತ್ ಇತಿ ಚೇತ್ । ನ । ಕಾರ್ಯಬ್ರಹ್ಮವಿಷಯತ್ವಾತ್ ತಾಸಾಮ್ । ಕಾರ್ಯೇ ಹಿ ಬ್ರಹ್ಮಣಿ ಸ್ತ್ರ್ಯಾದಯಃ ಸ್ಯುಃ, ನ ಕಾರಣೇ । "ಏಕಮೇವಾದ್ವಿತೀಯಮ್" (ಛಾ. ೬-೨-೧), "ಯತ್ರ ನಾನ್ಯತ್ ಪಶ್ಯತಿ" (ಛಾ. ೭-೨೪-೧) "ತತ್ ಕೇನ ಕಂ ಪಶ್ಯೇತ್" (ಬೃ. ೨-೪-೧೪) ಇತ್ಯಾದಿ ಶ್ರುತಿಭ್ಯಃ ॥

(ಭಾಷ್ಯಾರ್ಥ)

(ಪೂರ್ವಪಕ್ಷಿ) :—ಗತಿ, ಐಶ್ವರ್ಯ—ಮುಂತಾದವನ್ನು[4] (ಹೇಳುವ) ಶ್ರುತಿಗಳಿಗೆ ವಿರೋಧವಾಗುತ್ತದೆಯಲ್ಲ! (ಇದರ ವಿವರ) :—ಇನ್ನೊಂದು (ಆಕ್ಷೇಪ)ವಿದೆ.

---

1. ಆದ್ದರಿಂದ ಅದನ್ನು ಎಲ್ಲಿಗಾದರೂ ಹೋಗಿ ಪಡೆಯಬೇಕಾಗಿದ್ದಿಲ್ಲ. ಬ್ರಹ್ಮವೇ ಮೋಕ್ಷಸ್ವರೂಪವಾಗಿರುವದರಿಂದ ಬ್ರಹ್ಮವು ಸರ್ವಗತವು ಎಂದು ಮುಂತಾಗಿ ಹೇಳಿರುವದು ಅಪ್ರಕೃತವಲ್ಲವೆಂದು ತಿಳಿಯಬೇಕು. ಗತಿಶ್ರುತಿಗಳ ತಾತ್ಪರ್ಯವನ್ನು ಇಷ್ಟರಲ್ಲಿಯೇ ತಿಳಿಸಲಾಗುವದು.

2. ಹೋಗಿ ಪಡೆಯತಕ್ಕ ಗ್ರಾಮವು ಹೋಗುವವನಿಗಿಂತ ಬೇರೆಯಾಗಿರುತ್ತದೆ. ಬ್ರಹ್ಮಸ್ವರೂಪವು ಹೀಗಿಲ್ಲ. ಸೂ. ಭಾ. ೪-೩-೧೪.

3. ತಾನು ಇರುವೆಡೆಯಲ್ಲಿಯೇ ಇರುವದು ತನಗೆ ಪ್ರಾಪ್ಯವಾಗಿರುವದಿಲ್ಲ; ಉದಾಹರಣೆಗೆ ದ್ರವ್ಯವೂ ಗುಣವೂ ಒಂದೇ ಕಡೆಯಲ್ಲಿರುವದರಿಂದ ಅವು ಒಂದಕ್ಕೊಂದು ಪ್ರಾಪ್ಯವಲ್ಲ.

4. ಇಲ್ಲಿ ಮುಂತಾದದ್ದು ಎಂದರೆ ನದಿಗಳು ಸಮುದ್ರವನ್ನು ಸೇರುವಂತೆ ಜೀವರು ಬ್ರಹ್ಮವನ್ನು ಸೇರುವರೆಂದು ಹೇಳುವ ವಿಭಾಗಶ್ರುತಿಗಳು, ಸೃಷ್ಟಿಶ್ರುತಿಗಳು ಎಂದೂ ಅರ್ಥವನ್ನು ಮಾಡಬಹುದು; ಆದರೆ ಮುಂದಿನ ಭಾಷ್ಯದಲ್ಲಿ ಈ ವಿಚಾರವಿಲ್ಲ.

ೋಕ್ಷವು (ಹೋಗಿ) ಪಡೆಯತಕ್ಕದ್ದಲ್ಲವಾದರೆ ಆಗ ಗಮನ(ವನ್ನು ಹೇಳುವ) ಶ್ರುತಿ ಳಿಗೂ, "ಅವನು ಒಂದು ಪ್ರಕಾರವಾಗಿರುವನು, (ಮೂರು ಪ್ರಕಾರವಾಗಿರುವನು)" ಛಾ. ೭-೨೬-೨), "ಅವನಿಗೆ ಪಿತೃಲೋಕದ ಆಸೆಯುಂಟಾದರೆ (ಸಂಕಲ್ಪದಿಂದಲೇ ವನ ಪಿತೃಗಳು ಬಂದು ತೋರಿಕೊಳ್ಳುವರು)" (ಛಾ. ೮-೨-೧), "ಸ್ತ್ರೀಯರೊಡ ಾಗಲಿ ಯಾನಗಳೊಡನಾಗಲಿ (ಆಡುತ್ತಾ)" (ಛಾ. ೮-೧೨-೩) ಎಂಬುದೇ ಮುಂತಾದ ್ರುತಿಗಳಿಗೂ ವಿರೋಧವಾಗುವದಲ್ಲ!

(ಸಿದ್ಧಾಂತ):—ಹಾಗಲ್ಲ. ಏಕೆಂದರೆ ಆ (ಶ್ರುತಿಗಳು) **ಕಾರ್ಯಬ್ರಹ್ಮದ** ಿಷಯವಾದವುಗಳಾಗಿವೆ. **ಕಾರ್ಯಬ್ರಹ್ಮದಲ್ಲಿ**[1] ಸ್ತ್ರೀಯರು ಮುಂತಾದವರು ಇರುವರೇ ಹೊರತು **ಕಾರಣಬ್ರಹ್ಮದಲ್ಲಿ** (ಇರಲಾರರು). (ಇದೆಲ್ಲವೂ) ಎರಡನೆಯ ಿಲ್ಲದ ಒಂದೇ ಆದ (ಸತ್ತೇ ಆಗಿತ್ತು)" (ಛಾ. ೬-೨-೧), "ಎಲ್ಲಿ ಎರಡನೆಯದನ್ನು ಕಾಣುವದಿಲ್ಲವೋ (ಅದು ಭೂಮವು)" (ಛಾ. ೭-೨೪-೧), "(ಎಲ್ಲಿ ಇವನಿಗೆ ಇದೆ ್ಲವೂ ಆತ್ಮನೇ ಆಗಿರುವದೋ) ಅಲ್ಲಿ ಏತರಿಂದ ಯಾರನ್ನು ಕಂಡಾನು?" (ಬೃ. ೨-೪-೧೪) ಮುಂತಾದ ಶ್ರುತಿಗಳು (ಈ ಅಭಿಪ್ರಾಯಕ್ಕೆ ಪ್ರಮಾಣವು).[2]

## ಜ್ಞಾನಕರ್ಮಗಳ ಸಮುಚ್ಚಯವು ಅಸಾಧ್ಯ

(ಭಾಷ್ಯ)

೭೭. ವಿರೋಧಾಚ್ಚ ವಿದ್ಯಾಕರ್ಮಣೋಃ ಸಮುಚ್ಚಯಾನುಪಪತ್ತಿಃ । ಪ್ರವಿಲೀನಕರ್ತ್ರಾದಿಕಾರಕವಿಶೇಷತತ್ತ್ವವಿಷಯಾ[3] ಹಿ ವಿದ್ಯಾ ತದ್ವಿಪರೀತಕಾರಕ ಸಾಧ್ಯೇನ ಕರ್ಮಣಾ ವಿರುಧ್ಯತೇ । ನ ಹಿ ಏಕಂ ವಸ್ತು ಪರಮಾರ್ಥತಃ ಕರ್ತ್ರಾದಿ ವಿಶೇಷವತ್ ತಚ್ಛೂನ್ಯಂ ಚ ಇತಿ ಉಭಯಥಾ ದ್ರಷ್ಟುಂ ಶಕ್ಯತೇ । ಅವಶ್ಯಂ ಹಿ ಅನ್ಯತರತ್ ಮಿಥ್ಯಾ ಸ್ಯಾತ್ । ಅನ್ಯತರಸ್ಯ ಚ ಮಿಥ್ಯಾತ್ವಪ್ರಸಙ್ಗೇ ಯುಕ್ತಂ ಯತ್

1. ಕಾರ್ಯಬ್ರಹ್ಮ, ಅಪರಬ್ರಹ್ಮ, ಸಗುಣಬ್ರಹ್ಮ, ಸವಿಶೇಷಬ್ರಹ್ಮ—ಇವೆಲ್ಲ ಬ್ರಹ್ಮ ಲೋಕದಲ್ಲಿರುವ ಹಿರಣ್ಯಗರ್ಭನ ಹೆಸರುಗಳು. ಇವೇ ಉಪಾಸ್ಯಬ್ರಹ್ಮ. ಸೂ.ಭಾ. ೧-೧-೧೨, ೪-೩-೭, ೪-೩-೧೪ ಇವುಗಳಲ್ಲಿ ಗಂತವ್ಯವಾದ ಕಾರ್ಯಬ್ರಹ್ಮವನ್ನು ವರ್ಣಿಸಿದೆ.

2. ಕಾರಣಬ್ರಹ್ಮ, ಪರಬ್ರಹ್ಮ, ನಿರ್ಗುಣಬ್ರಹ್ಮ, ನಿರ್ವಿಶೇಷಬ್ರಹ್ಮ—ಇವೆಲ್ಲ ಮುಖ್ಯ ವಾದ ಬ್ರಹ್ಮದ ಹೆಸರುಗಳು. ಅದನ್ನು ಅಸ್ಥೂಲಾದಿ ಶಬ್ದಗಳಿಂದ ನಿಷೇಧಮುಖವಾಗಿಯೇ ಶ್ರುತಿಯು ತಿಳಿಸುತ್ತದೆ. ಆದರಲ್ಲಿ ಕಾರಣತ್ವವು ಸಾಪೇಕ್ಷವಾಗಿದೆ. ಪರಮಾರ್ಥವಾಗಿಲ್ಲ. ಸೂ.ಭಾ. ೪-೩-೧.

3. 'ಪ್ರವಿಲೀನ' ಎಂಬುದರ ಬದಲು "ಪ್ರಲೀನ" ಎಂದು ವಾ॥ ಪಾಠ.

ಸ್ವಾಭಾವಿಕಾಜ್ಞಾನವಿಷಯಸ್ಯ ದ್ವೈತಸ್ಯ ಮಿಥ್ಯಾತ್ವಮ್ । "ಯತ್ರ ಹಿ ದ್ವೈತಮಿವ ಭವತಿ" (ಬೃ. ೨-೪-೧೪) "ಮೃತ್ಯೋಃ ಸ ಮೃತ್ಯುಮಾಪ್ನೋತಿ" (ಕ. ೨-೧-೧೦, ಬೃ. ೪-೪-೧೯), "ಅಥ ಯತ್ರಾನ್ಯತ್ ಪಶ್ಯತಿ ತದಲ್ಪಮ್" (ಛಾ. ೭-೨೪-೧), "ಅನ್ಯೋಽಸಾವನ್ಯೋಽಹಮಸ್ಮಿ" (ಬೃ. ೧-೪-೧೦), "ಉದರಮನ್ತರಂ ಕುರುತೇ ಅಥ ತಸ್ಯ ಭಯಂ ಭವತಿ" (೨-೭), ಇತ್ಯಾದಿ ಶ್ರುತಿಶತೇಭ್ಯಃ । ಸತ್ಯತ್ವಂ ಚ ಏಕತ್ವಸ್ಯ । "ಏಕಧೈವಾನುದ್ರಷ್ಟವ್ಯಮ್" (ಬೃ. ೪-೪-೨೦), 'ಏಕಮೇವಾದ್ವಿತೀಯಮ್" (ಛಾ. ೬-೨-೧), "ಬ್ರಹ್ಮೈವೇದಗ್‌ಂ ಸರ್ವಮ್" (?), "ಆತ್ಮೈವೇದಗ್‌ಂ ಸರ್ವಮ್" (ಛಾ. ೭-೨೫-೨) ಇತ್ಯಾದಿಶ್ರುತಿಭ್ಯಃ । ನ ಚ ಸಂಪ್ರದಾನಾದಿಕಾರಕಭೇದಾದರ್ಶನೇ ಕರ್ಮ ಉಪಪದ್ಯತೇ । ಅನ್ಯತ್ವದರ್ಶನಾಪವಾದಾಶ್ಚ ವಿದ್ಯಾವಿಷಯೇ ಸಹಸ್ರಶಃ ಶ್ರೂಯನ್ತೇ । ಅತೋ ವಿರೋಧೋ ವಿದ್ಯಾಕರ್ಮಣೋಃ । ಅತಶ್ಚ ಸಮುಚ್ಚಯಾನುಪಪತ್ತಿಃ । ತತ್ರ ಯದುಕ್ತಂ ಸಂಹತಾಭ್ಯಾಂ ವಿದ್ಯಾಕರ್ಮಭ್ಯಾಂ ಮೋಕ್ಷಃ ಇತಿ । ಅನುಪಪನ್ನಂ ತತ್ ॥

(ಭಾಷ್ಯಾರ್ಥ)

(ಒಂದೊಂದಕ್ಕೆ) ವಿರೋಧವಿರುವದರಿಂದ ವಿದ್ಯಾಕರ್ಮಗಳಿಗೆ ಸಮುಚ್ಚಯವೆಂಬುದು ಹೊಂದುವಹಾಗೂ ಇಲ್ಲ.[1] ವಿದ್ಯೆಯು ಕರ್ತೃವೇ ಮುಂತಾದ ಕಾರಕವಿಶೇಷಗಳು (ಎಲ್ಲವೂ) ಅಡಗಿರುವ ತತ್ತ್ವದ ವಿಷಯವಾದ್ದರಿಂದ[2] ಅದಕ್ಕೆ ವಿರುದ್ಧ (ಸ್ವಭಾವದ್ದಾಗಿ) ಕಾರಕಗಳಿಂದಲೇ ಉಂಟಾಗಬೇಕಾಗಿರುವ ಕರ್ಮಕ್ಕೆ ವಿರುದ್ಧವಾಗಿರುತ್ತದೆ. ಒಂದೇ ವಸ್ತುವನ್ನು ಪರಮಾರ್ಥವಾಗಿ ಕರ್ತೃವೇ ಮುಂತಾದ ವಿಶೇಷಗಳುಳ್ಳದ್ದೂ (ಆಗಿದೆ), ಅವುಗಳಿಲ್ಲದ್ದೂ (ಆಗಿದೆ) ಎಂದು ಎರಡುಪ್ರಕಾರವಾಗಿ ಅರಿಯುವದು ಆಗುವಹಾಗಿಲ್ಲವಷ್ಟೆ? ಇವೆರಡರಲ್ಲಿ ಒಂದು ಅವಶ್ಯವಾಗಿ ಮಿಥ್ಯೆಯಾಗಿರಲೇ

1. ಇದುವರೆಗೂ ವಿದ್ಯಾಕರ್ಮಗಳ ಸಮುಚ್ಚಯವು ಹೊಂದುವದೆಂದು ಇಟ್ಟುಕೊಂಡು ಆ ಸಮುಚ್ಚಯದಿಂದ ಮೋಕ್ಷವುಂಟಾಗಲಾರದೆಂದು ವಾದಿಸಿತ್ತು. ವಿದ್ಯಾಕರ್ಮಗಳು ಒಬ್ಬನಲ್ಲಿಯೇ ಒಂದೇ ಕಾಲಕ್ಕೆ ಸೇರಿರುವ ಹಾಗೆಯೇ ಇಲ್ಲವೆಂಮು ಈಗ ವಾದಿಸಿದೆ. ಪೂರ್ವಪಕ್ಷಿಯ ಅಭಿಪ್ರಾಯದಲ್ಲಿ ವಿದ್ಯೆಯೆಂದರೆ ಉಪಾಸನೆ. ಆದರ ಸಮುಚ್ಚಯದಿಂದ ಅಪರಬ್ರಹ್ಮಪ್ರಾಪ್ತಿಯಾಗುವದಾದರೂ ಮುಖ್ಯಬ್ರಹ್ಮಪ್ರಾಪ್ತಿರೂಪವಾದ ಮುಕ್ತಿಯಾಗಲಾರದೆಂದು ಸಿದ್ಧಾಂತಿ ಹೇಳಿದ್ದಾನೆ. ನಿಜವಾದ ವಿದ್ಯೆ ಎಂದರೆ ಬ್ರಹ್ಮದ ಜ್ಞಾನವೇ, ಆದರೊಡನೆ ಸಮುಚ್ಚಯವೇ ಸಾಧ್ಯವಿಲ್ಲ—ಎಂದು ಈಗ ಹೇಳುತ್ತಿದ್ದಾನೆ.

2. ಬೃ. ೮-೫-೧, ಸೂ ಭಾ. ೩-೪-೧೬ ಇವನ್ನು ನೋಡಿ.

ಬೇಕು.[1] ಎರಡರಲ್ಲಿ ಒಂದು ಅವಶ್ಯವಾಗಿ ಮಿಥ್ಯೆಯಾಗಿರಲೇಬೇಕಾಗಿ ಬಂದರೆ ಸ್ವಾಭಾವಿಕವಾದ[2] ಅಜ್ಞಾನದಿಂದ ತೋರುವ ದ್ವೈತವೇ ಮಿಥ್ಯೆ ಎಂಬುದು ಯುಕ್ತವಾಗುತ್ತದೆ.[3] "ಎಲ್ಲಿ ದ್ವೈತದಂತೆ ಇರುವದೋ (ಅಲ್ಲಿ ಒಬ್ಬನು ಮತ್ತೊಬ್ಬನನ್ನು ಕಾಣುತ್ತಾನೆ)" (ಬೃ. ೨-೪-೧೪) "ಯಾವನು ಇಲ್ಲಿ ನಾನಾ ಇರುವಂತೆ ಕಾಣುವನೋ ಅವನು) ಮೃತ್ಯುವಿನಮೇಲೆ ಮೃತ್ಯುವನ್ನು ಪಡೆಯುತ್ತಿರುವನು" (ಕ. ೨-೧-೧೦, ಬೃ. ೪-೪-೧೯), "ಇನ್ನು ಎಲ್ಲಿ ಮತ್ತೊಂದನ್ನು ಕಾಣುವನೋ ಅದು ಅಲ್ಪವು" (ಛಾ. ೭-೨೪-೧), "ಈ (ದೇವತೆ) ಬೇರೆ, ನಾನು ಬೇರೆ (ಎಂದು ತನಗಿಂತ ಬೇರೆಯಾದ ದೇವತೆಯನ್ನು ಉಪಾಸನೆಮಾಡುವವನು ಅರಿಯನು)" (ಬೃ. ೧-೪-೧೦), "ಸ್ವಲ್ಪವಾದರೂ ಭೇದವನ್ನು ಮಾಡಿಕೊಂಡರೆ (ಅವನಿಗೆ ಭಯವಾಗುತ್ತದೆ)" (೨-೭). ಇವೇ ಮುಂತಾದ ನೂರಾರು ಶ್ರುತಿಗಳು ಇದಕ್ಕೆ ಪ್ರಮಾಣವು.[4] ಏಕತ್ವವು ಸತ್ಯ(ವಾಗಿರಬೇಕು ಎಂಬುದೂ ಯುಕ್ತವಾಗುತ್ತದೆ).[5] "(ಈ ಅಪ್ರಮೇಯವಾದ ನಿತ್ಯವಸ್ತುವನ್ನು) ಒಂದೆಂದೇ ಕಂಡುಕೊಳ್ಳಬೇಕು" (ಬೃ. ೪-೪-೨೦), "ಎರಡನೆಯದಿಲ್ಲದ ಒಂದೇ" (ಛಾ. ೭-೨೫-೨) "ಇದೆಲ್ಲವೂ ಬ್ರಹ್ಮವೇ" (?)[6] ಇದೆಲ್ಲವೂ ಆತ್ಮನೇ" (ಛಾ. ೭-೨೫-೨) ಮುಂತಾದ ಶ್ರುತಿಗಳು ಇದಕ್ಕೆ ಪ್ರಮಾಣವು. ಸಂಪ್ರದಾನವೇ ಮುಂತಾದ ಕಾರಕವಿಶೇಷಗಳನ್ನು ಕಾಣದೆ ಇರುವಲ್ಲಿ ಕರ್ಮವು ಹೊಂದುವದೂ ಇಲ್ಲ; ವಿದ್ಯಾವಿಷಯದಲ್ಲಿ ಮತ್ತೊಂದನ್ನು ಕಾಣುವದಿಲ್ಲವೆಂದು ಹೇಳುವ ಸಾವಿ

1. ಕರ್ಮವನ್ನು ಹೀಗೂ ಮಾಡಬಹುದು, ಹಾಗೂ ಮಾಡಬಹುದು–ಎಂದು ವಿಕಲ್ಪವಿರಬಹುದು; ಆದರೆ ವಸ್ತುಜ್ಞಾನಗಳೆರಡು ವಿರುದ್ಧವಾಗಿದ್ದರೆ ಅವುಗಳಲ್ಲಿ ಒಂದು ಮಿಥ್ಯೆಯಾಗಿರಲೇಬೇಕು. ಸೂ.ಭಾ ೧-೧-೩ ನೋಡಿ

2. ಅವಿಚಾರದಶೆಯಲ್ಲಿ ಸ್ವಭಾವದಿಂದ ಇರುವ.

3 ಆದ್ದರಿಂದ ಮುಂದೆ ಹೇಳುವ ಶ್ರುತಿಗಳಿಗೆ ಯುಕ್ತಿಯ ಬೆಂಬಲವಿದೆ ಎಂದು ಅಭಿಪ್ರಾಯ.

4. ದ್ವೈತವೇ ಸತ್ಯವಾಗಿದ್ದರೆ ಈ ಶ್ರುತಿಗಳು ದ್ವೈತದೃಷ್ಟಿಯನ್ನು ಹೀಗೆ ನಿಂದಿಸುತ್ತಿರಲಿಲ್ಲವೆಂದು ಭಾವ.

5. ಏಕೆಂದರೆ ನಿರ್ದುಷ್ಟವಾದ ಶ್ರುತಿಯು ಏಕತ್ವವನ್ನು ಅವಧಾರಣಾಪೂರ್ವಕವಾಗಿ ಹೇಳುತ್ತದೆ.

6. ಮುಂಡಕದಲ್ಲಿ "ಬ್ರಹ್ಮೈವೇದಂ ವಿಶ್ವಮ್" ಎಂದಿದೆ. ಇದು ಬೇರೊಂದು ಕಡೆಯಿರುವ ವಾಕ್ಯವೆಂದು ತೋರುತ್ತದೆ. ಗೀ.ಭಾ. ೧೩-೧೪, ಸೂ.ಭಾ. ೧-೪-೨೨ರಲ್ಲಿಯೂ ಈ ವಾಕ್ಯವನ್ನು ಉದಾಹರಿಸಿದೆ. ನೃಸಿಂಹೋತ್ತರತಾಪಿನಿಯಲ್ಲಿ ಈ ವಾಕ್ಯವಿದೆಯಾದರೂ ಆ ಉಪನಿಷತ್ತಿನ ಬೇರೆ ಯಾವ ವಾಕ್ಯವೂ ಪ್ರಸ್ಥಾನತ್ರಯಭಾಷ್ಯದಲ್ಲಿ ಉದಾಹೃತವಾಗಿಲ್ಲ.

ರಾರು (ಶ್ರುತಿಗಳೂ) ಇವೆ. ಆದ್ದರಿಂದ ವಿದ್ಯಾಕರ್ಮಗಳಿಗೆ ವಿರೋಧವಿದೆ. ಆದ್ದರಿಂದ[1] ಸಮುಚ್ಚಯವು ಹೊಂದುವದಿಲ್ಲ(ವೆಂದಾಯಿತು). ಹೀಗಿರುವಲ್ಲಿ ವಿದ್ಯಾಕರ್ಮಗಳೆರಡೂ (ಸಮವಾಗಿ) ಸೇರಿದರೆ (ಅವುಗಳ ಅನುಷ್ಠಾನದಿಂದ) ಮೋಕ್ಷವಾಗುವದೆಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದು ಅಯುಕ್ತ(ವಾಗುತ್ತದೆ).[2]

## ಆತ್ಮೈಕತ್ವಜ್ಞಾನವನ್ನು ತಿಳಿಸುವದಾದರೆ ಶ್ರುತಿಗೆ ಅಪ್ರಾಮಾಣ್ಯವೇನೂ ಇಲ್ಲ

(ಭಾಷ್ಯ)

೭೮. ವಿಹಿತತ್ವಾತ್ ಕರ್ಮಣಾಂ ಶ್ರುತಿವಿರೋಧ ಇತಿ ಚೇತ್ । ಯದಿ ಉಪಮೃದ್ಯ ಕರ್ತ್ರಾದಿಕಾರಕವಿಶೇಷಮ್ ಆತ್ಮೈಕತ್ವವಿಜ್ಞಾನಂ ವಿಧೀಯತೇ ಸರ್ಪಾದಿಭ್ರಾನ್ತಿಜ್ಞಾನೋಪಮರ್ದಕರಜ್ಜ್ವಾದಿವಿಷಯವಿಜ್ಞಾನವತ್ ಪ್ರಾಪ್ತಃ ಕರ್ಮವಿಧಿಶ್ರುತೀನಾಂ ನಿರ್ವಿಷಯತ್ವಾದ್ವಿರೋಧಃ । ವಿಹಿತಾನಿ ಚ ಕರ್ಮಾಣಿ । ಸ ಚ ವಿರೋಧೋ ನ ಯುಕ್ತಃ । ಪ್ರಮಾಣತ್ವಾತ್ ಶ್ರುತೀನಾಮ್ ಇತಿ ಚೇತ್ । ನ । ಪುರುಷಾರ್ಥೋಪದೇಶಪರತ್ವಾತ್ ಶ್ರುತೀನಾಮ್ । ವಿದ್ಯೋಪದೇಶಪರಾ ತಾವತ್ ಶ್ರುತಿಃ ಸಂಸಾರಾತ್ ಪುರುಷೋ ಮೋಕ್ಷಯಿತವ್ಯಃ ಇತಿ ಸಂಸಾರಹೇತೋರವಿದ್ಯಾಯಾಃ ವಿದ್ಯಯಾ ನಿವೃತ್ತಿಃ ಕರ್ತವ್ಯಾ ಇತಿ ವಿದ್ಯಾಪ್ರಕಾಶಕತ್ವೇನ ಪ್ರವೃತ್ತಾ ಇತಿ ನ ವಿರೋಧಃ ॥

(ಭಾಷ್ಯಾರ್ಥ)

(ಆಕ್ಷೇಪ) :—ಕರ್ಮಗಳನ್ನು (ವೇದದಲ್ಲಿ) ವಿಧಿಸುವದರಿಂದ (ಈ ನಿಮ್ಮ ಅಭಿಪ್ರಾಯವು) ಶ್ರುತಿಗೆ ವಿರುದ್ಧವಾಗಿರುತ್ತದೆ. (ಹೇಗೆಂದರೆ) ಕರ್ತೃವೇ ಮುಂತಾದ ಬೇರೆಬೇರೆಯ ಕಾರಕಗಳನ್ನು ಬಾಧಿಸಿ[3] ಹಾವಿನ ಜ್ಞಾನವೇ ಮುಂತಾದ ಭ್ರಾಂತಿ

---

1. ಆತಶ್ಚ ಎಂಬಲ್ಲಿ ಚ ಶಬ್ದವು ಸಮುಚ್ಚಯವಾಚಿಯಲ್ಲ, ಏಕೆಂದರೆ ಹಿಂದೆ ಮತ್ತೆ ಯಾವ ಕಾರಣವನ್ನೂ ಹೇಳಿರುವದಿಲ್ಲ. ವಿದ್ಯಾಕರ್ಮಗಳಿಗೆ ವಿರೋಧವನ್ನು ಉಪಪಾದನೆ ಮಾಡಿದ ಬಳಿಕ ಮೊದಲು ಪ್ರತಿಜ್ಞೆಮಾಡಿದ್ದ ಸಮುಚ್ಚಯಾಭಾವವನ್ನು ಇಲ್ಲಿ ನಿಗಮನ ಮಾಡಿದೆ ಎನ್ನಬಹುದು.

2. ವಾ॥ ಪಾಠದಲ್ಲಿ ಈ ವಾಕ್ಯವು ಮುಂದಿನ ಪೂರ್ವಪಕ್ಷಕ್ಕೆ ಸೇರುವಂತೆ ಬರೆದಿದೆ; " .. ವಿದ್ಯಾಕರ್ಮಭ್ಯಾಂ ಮೋಕ್ಷ ಇತ್ಯೇತದನುಪಪನ್ನಮ್ ಇತಿ, ತದಯುಕ್ತಮ್॥" ಆದರೆ ಆ॥ ಪಾಠವೇ ಸರಿಯೆಂತ ಕಾಣುತ್ತದೆ.

3. ಸತ್ಯವಲ್ಲವೆಂದು ಅಲ್ಲಗಳೆದು.

ಜ್ಞಾನವನ್ನು ಬಾಧಿಸುವ ಹಗ್ಗವೇ ಮುಂತಾದವುಗಳ ವಿಜ್ಞಾನದಂತೆ (ಇರುವ) ಆತ್ಮೈಕತ್ವವಿಜ್ಞಾನವನ್ನು (ಶ್ರುತಿಯಲ್ಲಿ) ಹೇಳುವದಾದರೆ ಕರ್ಮವನ್ನು ವಿಧಿಸುವ ಶ್ರುತಿಗಳಿಗೆ (ಯಾವ) ವಿಷಯವೂ ಇಲ್ಲವಾಗುವದರಿಂದ[1] (ಈ ಅಭಿಪ್ರಾಯವು ಆ ಶ್ರುತಿಗಳೂ) ವಿರುದ್ಧವೆಂದಾಗುವದು. ಕರ್ಮಗಳನ್ನು (ಶ್ರುತಿಯಲ್ಲಿ) ವಿಧಿಸಿಯೂ ಇರುತ್ತದೆ. (ಎಲ್ಲಾ) ಶ್ರುತಿಗಳೂ ಪ್ರಮಾಣವಾಗಿರುವದರಿಂದ ಈ ವಿರೋಧವು ಯುಕ್ತವಾಗುವದಿಲ್ಲವಲ್ಲ !

(ಪರಿಹಾರ) :—ಹಾಗಲ್ಲ. ಏಕೆಂದರೆ ಪುರುಷಾರ್ಥವನ್ನು[2] ತಿಳಿಸಿಕೊಡುವದ ರಲ್ಲಿಯೇ ಶ್ರುತಿಗಳಿಗೆ ತಾತ್ಪರ್ಯವಿರುತ್ತದೆ. (ಇದರ ವಿವರ) :—ಮೊದಲನೆಯ ದಾಗಿ ವಿದ್ಯೆಯನ್ನು ಉಪದೇಶಿಸುವದರಲ್ಲಿ ತಾತ್ಪರ್ಯವುಳ್ಳ ಶ್ರುತಿಯು ಮನುಷ್ಯ ನನ್ನು ಸಂಸಾರದಿಂದ ಬಿಡುಗಡೆಮಾಡಿಸಬೇಕಾಗಿರುವದರಿಂದ ಸಂಸಾರಕ್ಕೆ ಕಾರಣ ವಾಗಿರುವ ಅವಿದ್ಯೆಯನ್ನು ವಿದ್ಯೆಯಿಂದ ಹೋಗಲಾಡಿಸಬೇಕೆಂಬ (ಉದ್ದೇಶದಿಂದ) ವಿದ್ಯೆಯನ್ನು ಬೆಳಗಿ ತೋರುವದಕ್ಕೆ ಹೊರಟಿರುತ್ತದೆ ; ಆದ್ದರಿಂದ (ಆ ಶ್ರುತಿಗೂ ನಮ್ಮ ಅಭಿಪ್ರಾಯಕ್ಕೂ) ವಿರೋಧವಿಲ್ಲ.[3]

(ಭಾಷ್ಯ)

೭೯. ಏವಮಪಿ ಕರ್ತ್ರಾದಿಕಾರಕಸದ್ಭಾವಪ್ರತಿಪಾದನಪರಂ ಶಾಸ್ತ್ರಂ ವಿರುಧ್ಯತ ಏವ ಇತಿ ಚೇತ್ । ನ । ಯಥಾಪ್ರಾಪ್ತಮೇವ ಕಾರಕಾಸ್ತಿತ್ವಮ್ ಉಪಾದಾಯ ಉಪಾತ್ತದುರಿತಕ್ಷಯಾರ್ಥಂ ಕರ್ಮಾಣಿ ವಿದಧತ್ ಶಾಸ್ತ್ರಂ ಮುಮುಕ್ಷೂಣಾಂ ಫಲಾರ್ಥಿನಾಂ ಚ ಫಲಸಾಧನಂ ನ ಕಾರಕಾಸ್ತಿತ್ವೇ ವ್ಯಾಪ್ರಿಯತೇ । ಉಪಚಿತದುರಿತ ಪ್ರತಿಬನ್ಧಸ್ಯ ಹಿ ವಿದ್ಯೋತ್ಪತ್ತಿರ್ನಾವಕಲ್ಪತೇ । ತತ್ಕ್ಷಯೇ ಚ ವಿದ್ಯೋತ್ಪತ್ತಿಃ ಸ್ಯಾತ್ । ತತಶ್ಚ ಅವಿದ್ಯಾನಿವೃತ್ತಿಃ, ತತ ಆತ್ಯನ್ತಿಕ ಸಂಸಾರೋಪಮಃ ॥

1. ಜ್ಞಾನವಾಕ್ಯವು ಪ್ರಮಾಣವಾದರೆ ಕರ್ಮವಾಕ್ಯವು ಅಪ್ರಮಾಣವಾಗುವದು; ಬಂಧ ಮೋಕ್ಷಾದಿಭೇದವನ್ನೊಪ್ಪದೆ ಜ್ಞಾನವಾಕ್ಯವೂ ಹೊರಡಲಾರದಾದ್ದರಿಂದ ನಿಮ್ಮ ಮತದಲ್ಲಿ ಅದೂ ಅಪ್ರಮಾಣವಾಗುವದು ಎಂದು ಪೂರ್ವಪಕ್ಷಿಯ ಭಾವ. ಬೃ. ಭಾ. ೩-೧-೩೦ ರಲ್ಲಿ ಈ ಪೂರ್ವಪಕ್ಷವನ್ನೂ ಪರಿಹಾರವನ್ನೂ ವರ್ಣಿಸಿದೆ.

2. ಪುರುಷಾರ್ಥಕ್ಕೆ ಉಪಾಯವನ್ನು ಎಂದರ್ಥ. "ಪುರುಷಾರ್ಥೋಪಾಯೋಪದೇಶ ಪರತ್ವಾತ್" ಎಂಬ ಪಾಠವಿದ್ದರೆ ಪ್ರಕೃತಕ್ಕೆ ಅನುಕೂಲ. ಇಂಥ ಫಲಕ್ಕೆ ಇಂಥ ಸಾಧನವಿದೆ ಎಂದು ತಿಳಿಸುವದೇ ಶ್ರುತಿಗೆ ಬೇಕಾದದ್ದು. ಇದು ಕರ್ಮವಾಕ್ಯಕ್ಕೂ ಜ್ಞಾನವಾಕ್ಯಕ್ಕೂ ಸಮಾನವಾಗಿದೆ. ಬೃ.ಭಾ. ಅವತರಣಿಕೆಯನ್ನು ನೋಡಿರಿ.

3. ದ್ವೈತವು ಅವಿದ್ಯಾಕೃತವಾಗಿರುವದರಿಂದ ಅದನ್ನು ಶ್ರುತಿಯು ಅಲ್ಲಗಳೆಯುತ್ತದೆ. ಆದ್ದರಿಂದ ಐಕ್ಯವೇ ತತ್ತ್ವವೆಂದು ಬೋಧಿಸುವ ನಮ್ಮ ಸಿದ್ಧಾಂತವು ಆ ಶ್ರುತಿಗೆ ವಿರುದ್ಧವಲ್ಲ.

(ಭಾಷ್ಯಾರ್ಥ)

(ಶಂಕೆ) :—ಇದನ್ನೊಪ್ಪಿದರೂ ಕರ್ತೃವೇ ಮುಂತಾದ ಕಾರಕಗಳು ಇವೆ ಎಂದು ತಿಳಿಸುವದಕ್ಕೆ ಹೊರಟಿರುವ ಶಾಸ್ತ್ರಕ್ಕೆ (ಈ ಅಭಿಪ್ರಾಯವು ವಿರುದ್ಧವೇ ಆಗುವದಿಲ್ಲವೆ ?[1]

(ಪರಿಹಾರ) : - ಇಲ್ಲ. (ಏಕೆಂದರೆ) ಕಾರಕಗಳಿವೆ ಎಂದು ಲೋಕಸಿದ್ಧವಾಗಿರುವದನ್ನೇ[2] ಇಟ್ಟುಕೊಂಡು (ಹಿಂದೆ) ಕೂಡಿಹಾಕಿಕೊಂಡಿರುವ ಪಾಪವನ್ನು ನಾಶಗೊಳಿಸುವದಕ್ಕಾಗಿ[3] ಮುಮುಕ್ಷುಗಳಿಗೆ (ನಿತ್ಯ) ಕರ್ಮಗಳನ್ನೂ ಫಲವನ್ನು ಬಯಸುವವರಿಗೆ ಫಲಸಾಧನವನ್ನೂ[4] ವಿಧಿಸುವದರಿಂದ (ಕರ್ಮ) ಶಾಸ್ತ್ರವು ಕಾರಕಗಳು (ನಿಜವಾಗಿ) ಇರುವವೆಂದು (ತಿಳಿಸುವ) ವ್ಯಾಪಾರವನ್ನೂ ಮಾಡುವದಿಲ್ಲ.[5] ಯಾವನಲ್ಲಿ ಪಾಪವೆಂಬ ಅಡ್ಡಿಯು ಹೆಚ್ಚಾಗಿರುವದೋ ಅವನಿಗೆ ಜ್ಞಾನವು ಉಂಟಾಗಲಾರದು ; ಅದು ನಾಶವಾದರೆ ಜ್ಞಾನವುಂಟಾಗುವದು.[6] ಅದರಿಂದ[7] ಅವಿದ್ಯೆಯು ಹೋಗುವದು ; ಅದರಿಂದ[8] ಸಂಸಾರವು ಆತ್ಯಂತಿಕವಾಗಿ ಇಲ್ಲವಾಗುವದು.

---

1. ಕಾರಕಗಳು ಇಲ್ಲವೆಂಬುದು ಶ್ರುತಿಯ ಅಭಿಪ್ರಾಯವಾದರೆ ಕರ್ಮವನ್ನು ವಿಧಿಸಬಾರದಾಗುವದಲ್ಲ!—ಎಂದು ಭಾವ.

2. ಆತ್ಮಜ್ಞಾನವಿಲ್ಲದ ಸಾಮಾನ್ಯ ಜನರಿಗೆ ಕರ್ತ್ರಾದಿಕಾರಕಗಳು ನಿಜವಾಗಿರುವವೆಂಬ ತಿಳಿವಳಿಕೆಯಿರುವದು; ಆ ತಿಳಿವಳಿಕೆಯನ್ನು ಹಾಗೆಯೇ ಇಟ್ಟುಕೊಂಡು ಕರ್ಮಗಳನ್ನು ಶಾಸ್ತ್ರವು ವಿಧಿಸಿರುತ್ತದೆ.

3. ನಿತ್ಯಕರ್ಮಕ್ಕೆ ಫಲವಿಲ್ಲ, ಅದನ್ನು ಮಾಡದಿದ್ದರೆ ಪ್ರತ್ಯವಾಯವುಂಟು—ಎಂಬ ಮೀಮಾಂಸಕರ ಪಕ್ಷವು ಸಿದ್ಧಾಂತಿಗಳಿಗೆ ಒಪ್ಪಿಲ್ಲ.

4. ಕಾಮ್ಯಕರ್ಮಗಳನ್ನೂ ಎಂದರ್ಥ. ಕಾಮ್ಯಕರ್ಮಗಳನ್ನು ಆಯಾ ಫಲಕ್ಕಾಗಿಯೂ ನಿತ್ಯಕರ್ಮಗಳನ್ನು ಪಾಪಕ್ಷಯಕ್ಕಾಗಿಯೂ ವಿಧಿಸಿರುತ್ತದೆ. ಹಿಂದೆ ಸಂಬಂಧಭಾಷ್ಯದಲ್ಲಿಯೇ ಇದನ್ನು ತಿಳಿಸಿದೆ.

5 ಕರ್ಮವನ್ನು ವಿಧಿಸುವ—ಎಂದರೆ ಇಂಥ ಫಲಕ್ಕೆ ಇಂಥದ್ದು ಸಾಧನ ಎಂದು ತಿಳಿಸುವ—ವ್ಯಾಪಾರವೊಂದಲ್ಲದೆ ಕಾರಕಗಳು ಸತ್ಯವೆಂದು ತಿಳಿಸುವ ಮತ್ತೊಂದು ವ್ಯಾಪಾರವೂ ಕರ್ಮವಾಕ್ಯಕ್ಕೆ ಇರಲಾರದು. ಒಂದು ವಾಕ್ಯಕ್ಕೆ ಒಂದೇ ತಾತ್ಪರ್ಯ.

6. ಪಾಪವೇ ಜ್ಞಾನೋತ್ಪತ್ತಿಗೆ ಇರುವ ಅಡ್ಡಿ

7. ಜ್ಞಾನವುಂಟಾಗುವದರಿಂದ.

8. ಅವಿದ್ಯೆಯು ಹೋಗುವದರಿಂದ.

## ಜ್ಞಾನವು ಕರ್ಮದ ಹಂಗಿಲ್ಲದೆ ಮುಕ್ತಿಯನ್ನು ಕೊಡುತ್ತದೆ

(ಭಾಷ್ಯ)

೮೦. ಅಪಿ ಚ ಅನಾತ್ಮದರ್ಶಿನೋ ಹಿ ಅನಾತ್ಮವಿಷಯಃ ಕಾಮಃ। ಕಾಮಯಮಾನಶ್ಚ ಕರೋತಿ ಕರ್ಮಾಣಿ। ತತಸ್ತತ್ಫಲೋಪಭೋಗಾಯ ಶರೀರಾದ್ಯುಪಾದಾನಲಕ್ಷಣಃ ಸಂಸಾರಃ। ತದ್ವ್ಯತಿರೇಕೇಣ ಆತ್ಮೈಕತ್ವದರ್ಶಿನೋ ವಿಷಯಾಭಾವಾತ್ ಕಾಮಾನುಪಪತ್ತಿಃ। ಆತ್ಮನಿ ಚ ಅನನ್ಯತ್ವಾತ್ ಕಾಮಾನುಪಪತ್ತೌ ಸ್ವಾತ್ಮನ್ಯವಸ್ಥಾನಂ ಮೋಕ್ಷಃ। ಇತ್ಯತೋಽಪಿ ವಿದ್ಯಾಕರ್ಮಣೋರ್ವಿರೋಧಃ। ವಿರೋಧಾದೇವ ಚ ವಿದ್ಯಾ ಮೋಕ್ಷಂ ಪ್ರತಿ ನ ಕರ್ಮಾಣ್ಯಪೇಕ್ಷತೇ ॥

(ಭಾಷ್ಯಾರ್ಥ)

ಇದೂ ಅಲ್ಲದೆ ಯಾವನು ಅನಾತ್ಮವನ್ನು ಕಾಣುತ್ತಿರುವನೋ ಅವನಿಗೆ ಅನಾತ್ಮದಲ್ಲಿ ಬಯಕೆಯುಂಟಾಗುತ್ತದೆ. (ಹಾಗೆ ಅವುಗಳನ್ನು) ಬಯಸಿ (ಅವನು) ಕರ್ಮಗಳನ್ನು ಮಾಡುತ್ತಾನೆ. ಅದರಿಂದ ಆ (ಕರ್ಮಗಳ) ಫಲವನ್ನು ಅನುಭವಿಸುವದಕ್ಕಾಗಿ ಶರೀರವೇ ಮುಂತಾದವನ್ನು ಪಡೆಯುವದೆಂಬ ಸಂಸಾರವು (ಅವನಿಗಾಗುತ್ತದೆ). ಇದಕ್ಕೆ ಬದಲಾಗಿ ಆತ್ಮನು ಒಬ್ಬನೇ ಎಂದು ಅರಿತುಕೊಂಡಾತನಿಗೆ ವಿಷಯುವೇ ಇಲ್ಲದ್ದರಿಂದ ಆಶೆಯುಂಟಾಗುವದಕ್ಕೆ ಕಾರಣವಿರುವದಿಲ್ಲ.[1] (ಆತ್ಮನು ತನಗಿಂತ) ಬೇರೆಯಾಗಿಲ್ಲವಾದ್ದರಿಂದ ಆತ್ಮನ ವಿಷಯದಲ್ಲಿ ಕಾಮವುಂಟಾಗುವದಕ್ಕೆ ಕಾರಣವಿರುವದಿಲ್ಲವಾದ್ದರಿಂದ **ತನ್ನ ಆತ್ಮನಲ್ಲಿ ನೆಲೆ ನಿಲ್ಲುವದೆಂಬ ಮೋಕ್ಷ (ವುಂಟಾಗುವದು).** ಈ ಕಾರಣದಿಂದಲೂ [2] ವಿದ್ಯಾಕರ್ಮಗಳಿಗೆ (ಒಂದಕ್ಕೊಂದಕ್ಕೆ ವಿರೋಧ (ವಿರುತ್ತದೆ). (ಹೀಗೆ) ವಿರೋಧವಿರುವದರಿಂದಲೇ ವಿದ್ಯೆಯು ಮೋಕ್ಷ (ವೆಂಬ ಫಲವನ್ನು ಕೊಡುವದಕ್ಕೆ) ಕರ್ಮಗಳ (ಸಹಾಯುವ)ನ್ನು ಕೋರುವಹಾಗಿಲ್ಲ.

## ಕರ್ಮಗಳು ವಿದ್ಯೋತ್ಪತ್ತಿಗೆ ಕಾರಣ

(ಭಾಷ್ಯ)

೮೧. ಸ್ವಾತ್ಮಲಾಭೇ ತು ಪೂರ್ವೋಪಚಿತದುರಿತಪ್ರತಿಬನ್ಧಾಪನಯನದ್ವಾರೇಣ ವಿದ್ಯಾಹೇತುತ್ವಂ ಪ್ರತಿಪದ್ಯನ್ತೇ ಕರ್ಮಾಣಿ ನಿತ್ಯಾನಿ। ಇತ್ಯತ ಏವ

---

1 ಮುಂ. ಭಾ ೩-೨-೨.

2 ಎರಡನೆಯದೊಂದನ್ನು ಕಾಣುವದು, ಕಾಣದಿರುವದು; ಕಾಮದಿಂದ ಹುಟ್ಟುವದು, ಕಾಮವನ್ನು ತೊಲಗಿಸುವದು; ಸಂಸಾರಕ್ಕೆ ಕಾರಣವಾಗಿರುವದು, ಮೋಕ್ಷಕ್ಕೆ ಕಾರಣವಾಗಿರುವದು—ಹೀಗೆ ಸ್ವರೂಪ, ಹೇತು, ಫಲ ಮೂರರಿಂದಲೂ ಎರಡಕ್ಕೂ ವಿರೋಧ.

ಅಸ್ಮಿನ್ ಪ್ರಕರಣೇ ಉಪನ್ಯಸ್ತಾನಿ ಕರ್ಮಾಣಿ ಇತ್ಯವೋಚಾಮ । ಏವಂ ಚ ಅವಿರೋಧಃ ಕರ್ಮವಿಧಿಶ್ರುತೀನಾಮ್ । ಅತಃ ಕೇವಲಾಯಾ ಏವ ವಿದ್ಯಾಯಾಃ ಪರಂ ಶ್ರೇಯಃ ಇತಿ ಸಿದ್ಧಮ್ ॥

(ಭಾಷ್ಯಾರ್ಥ)

ಆದರೆ ಹಿಂದೆ ಕೂಡಿಕೊಂಡಿರುವ ಪಾಪವೆಂಬ ಅಡ್ಡಿಯನ್ನು ತೊಲಗಿಸುವ ಮೂಲಕ ನಿತ್ಯಕರ್ಮಗಳು ವಿದ್ಯೆಯು ಹುಟ್ಟುವದಕ್ಕೆ ಕಾರಣತ್ವವನ್ನು ಪಡೆದಿರುತ್ತವೆ. ಆದ್ದರಿಂದಲೇ ಈ ಪ್ರಕರಣದಲ್ಲಿ ಕರ್ಮಗಳನ್ನು ಹೇಳಿರುತ್ತದೆ ಎಂದು ಹಿಂದೆ[1] ಹೇಳಿರುತ್ತೇವೆ. ಹೀಗಿರುವದರಿಂದಲೂ ಕರ್ಮವನ್ನು ವಿಧಿಸುವ ಶ್ರುತಿಗಳಿಗೂ (ನಮ್ಮ ಅಭಿಪ್ರಾಯಕ್ಕೂ) ವಿರೋಧವಿರುವದಿಲ್ಲ.

ಆದ್ದರಿಂದ ಕೇವಲ ವಿದ್ಯೆಯಿಂದಲೇ ಪರಮಶ್ರೇಯಸ್ಸು (ಉಂಟಾಗುತ್ತದೆ) ಎಂದು ಸಿದ್ಧವಾಯಿತು.[2]

## ಜ್ಞಾನವುಂಟಾಗುವದಕ್ಕೆ ಗಾರ್ಹಸ್ಥ್ಯಕರ್ಮವೇ ಬೇಕೆಂಬುದಿಲ್ಲ

(ಭಾಷ್ಯ)

೮೨. ಏವಂ ತರ್ಹಿ ಆಶ್ರಮಾನ್ತರಾನುಪಪತ್ತಿಃ । ಕರ್ಮನಿಮಿತ್ತತ್ವಾದ್ ವಿದ್ಯೋತ್ಪತ್ತೇಃ । ಗಾರ್ಹಸ್ಥ್ಯೇ ಚ ವಿಹಿತಾನಿ ಕರ್ಮಾಣಿ । ಇತ್ಯೈಕಾಶ್ರಮ್ಯಮೇವ । ಅತಶ್ಚ ಯಾವಜ್ಜೀವಾದಿಶ್ರುತಯೋಽನುಕೂಲತರಾಃ[3] । ನ । ಕರ್ಮಾನೇಕತ್ವಾತ್ । ನ ಹಿ ಅಗ್ನಿಹೋತ್ರಾದೀನ್ಯೇವ ಕರ್ಮಾಣಿ । ಬ್ರಹ್ಮಚರ್ಯಂ ತಪಃ ಸತ್ಯವದನಂ[4] ಶಮಃ ದಮಃ ಅಹಿಂಸಾ ಇತ್ಯೇವಮಾದೀನ್ಯಪಿ ಕರ್ಮಾಣಿ ಇತರಾಶ್ರಮಪ್ರಸಿದ್ಧಾನಿ ವಿದ್ಯೋತ್ಪತ್ತೌ ಸಾಧಕತಮಾನಿ ಅಸಙ್ಕೀರ್ಣತ್ವಾತ್ ವಿದ್ಯನ್ತೇ ಧ್ಯಾನಧಾರಣಾದಿ

---

1. ಆತ್ಮೈಕತ್ವವನ್ನು ತಿಳಿಸುವದೇ ಶ್ರುತಿಯ ಅಭಿಪ್ರಾಯವಾಗಿದ್ದರೆ ಕರ್ಮವನ್ನೇಕೆ ಶ್ರುತಿಯಲ್ಲಿ ಹೇಳಿದೆ ? ಎಂಬ ಆಕ್ಷೇಪಕ್ಕೆ ಉತ್ತರವಿದು. ಕರ್ಮವನ್ನು ಆತ್ಮೈಕತ್ವಜ್ಞಾನದ ಉತ್ಪತ್ತಿಗಾಗಿಯೇ ಹೇಳಿದೆಯಾದ್ದರಿಂದ ವಿರೋಧವಿಲ್ಲ.

2. ಕರ್ಮಸಾಧ್ಯವಾದದ್ದು ಅನಿತ್ಯವಾಗಿರುವದರಿಂದಲೂ ಕರ್ಮಕ್ಕೂ ಜ್ಞಾನಕ್ಕೂ ವಿರೋಧವಿರುವದರಿಂದ ಅವೆರಡರ ಸಮುಚ್ಚಯವು ಹೊಂದುವಹಾಗಿಲ್ಲವಾದ್ದರಿಂದಲೂ ಜ್ಞಾನವುಂಟಾಗುವದಕ್ಕೆ ಮಾತ್ರ ಕರ್ಮವು ಕಾರಣವಾಗಿರುವದರಿಂದಲೂ ಉಂಟಾದ ಜ್ಞಾನವು ಮುಕ್ತಿಯನ್ನು ಕೊಟ್ಟೇತೀರುವದರಿಂದಲೂ ಬರಿಯ ಜ್ಞಾನದಿಂದಲೇ ಮುಕ್ತಿ ಎಂಬುದು ಸಿದ್ಧಾಂತ. ಸೂ.ಭಾ. ೩-೪-೧; ೩-೪-೧೫, ೧೬; ೩-೪-೨೫.

3. "ಅನುಕೂಲತರಾಃ ಸ್ಯುಃ" ಎಂದು ವಾ॥ ಪಾಠ.

4. "ಸತ್ಯವಚನಮ್" ವಾ॥ ಪಾಠ.

**ಲಕ್ಷಣಾನಿ ಚ । ವಕ್ಷ್ಯತಿ ಚ "ತಪಸಾ ಬ್ರಹ್ಮವಿಜಿಜ್ಞಾಸಸ್ವ" (೩-೨) ಇತಿ । ಜನ್ಮಾನ್ತರಕೃತಕರ್ಮಭ್ಯಶ್ಚ ಪ್ರಾಗಪಿ ಗಾರ್ಹಸ್ಥ್ಯಾದ್ ವಿದ್ಯೋತ್ಪತ್ತಿಸಂಭವಾತ್ ಕರ್ಮಾರ್ಥತ್ವಾಚ್ಚ ಗಾರ್ಹಸ್ಥ್ಯಪ್ರತಿಪತ್ತೇಃ ಕರ್ಮಸಾಧ್ಯಾಯಾಂ ಚ ವಿದ್ಯಾಯಾಂ ಸತ್ಯಾಂ ಗಾರ್ಹಸ್ಥ್ಯ ಪ್ರತಿಪತ್ತಿರನರ್ಥಿಕೈವ । ಲೋಕಾರ್ಥತ್ವಾಚ್ಚ ಪುತ್ರಾದೀನಾಮ್ । ಪುತ್ರಾದಿಸಾಧ್ಯೇಭ್ಯಶ್ಚ ಅಯಂ ಲೋಕಃ, ಪಿತೃಲೋಕಃ, ದೇವಲೋಕ ಇತ್ಯೇತೇಭ್ಯೋ ವ್ಯಾವೃತ್ತಕಾಮಸ್ಯ ನಿತ್ಯಸಿದ್ಧಾತ್ಮಲೋಕದರ್ಶಿನಃ[1] ಕರ್ಮಣಿ ಪ್ರಯೋಜನಮ್ ಅಪಶ್ಯತಃ ಕಥಂ ಪ್ರವೃತ್ತಿರುಪಪದ್ಯತೇ ? ಪ್ರತಿಪನ್ನಗಾರ್ಹಸ್ಥ್ಯಸ್ಯಾಪಿ ವಿದ್ಯೋತ್ಪತ್ತೌ ವಿದ್ಯಾಪರಿಪಾಕಾತ್ ವಿರಕ್ತಸ್ಯ ಕರ್ಮಸು ಪ್ರಯೋಜನಮ್ ಅಪಶ್ಯತಃ ಕರ್ಮಭ್ಯೋ ನಿವೃತ್ತಿರೇವ ಸ್ಯಾತ್ । "ಪ್ರವ್ರಜಿಷ್ಯನ್ ವಾ ಅರೇಽಹಮಸ್ಮಾತ್ ಸ್ಥಾನಾದಸ್ಮಿ" (ಬೃ. ೪-೫-೨) ಇತ್ಯೇವಮಾದಿಶ್ರುತಿಲಿಙ್ಗದರ್ಶನಾತ್ ॥**

(ಭಾಷ್ಯಾರ್ಥ)

(ಪೂರ್ವಪಕ್ಷ) :—ಹೀಗಾದರೆ ಬೇರೆಯ ಆಶ್ರಮವೆಂಬುದೇ ಹೊಂದುವದಿಲ್ಲ; ಏಕೆಂದರೆ ವಿದ್ಯೆಯು ಕರ್ಮವೆಂಬ ನಿಮಿತ್ತದಿಂದಲೇ ಉಂಟಾಗುತ್ತದೆ. ಗೃಹಸ್ಥಾಶ್ರಮ (ವಿಷಯ)ದಲ್ಲಿಯೇ ಕರ್ಮಗಳನ್ನು ವಿಧಿಸಿರುತ್ತದೆಯಾದ್ದರಿಂದ ಒಂದೇ ಆಶ್ರಮವು[2] ಎಂದಾಯಿತು. ಈ ಪಕ್ಷಕ್ಕೆ ಬದುಕಿರುವವರೆಗೂ (ಅಗ್ನಿಹೋತ್ರವನ್ನು ಮಾಡಬೇಕು[3] ಎಂಬುದೇ ಮುಂತಾದ ಶ್ರುತಿಗಳು ಹೆಚ್ಚು ಅನುಕೂಲವಾಗಿಯೂ ಇರುತ್ತವೆ.

(ಸಿದ್ಧಾಂತಿ) :—ಹಾಗಲ್ಲ. ಏಕೆಂದರೆ ಕರ್ಮಗಳು ಅನೇಕ (ವಿಧ)ವಾಗಿರುತ್ತವೆ. **ಅಗ್ನಿಹೋತ್ರವೇ ಮುಂತಾದವುಗಳು ಮಾತ್ರವೇ ಕರ್ಮವೆಂದೇನೂ ಇಲ್ಲ. ಬೇರೆಯ ಆಶ್ರಮಗಳಲ್ಲಿ ಪ್ರಸಿದ್ಧವಾಗಿರುವ ಬ್ರಹ್ಮಚರ್ಯ, ತಪಸ್ಸು, ಸತ್ಯವನ್ನೇ ನುಡಿಯುವದು, ಶಮ, ದಮ, ಅಹಿಂಸೆ[4] ಇವೇ ಮುಂತಾದ (ಕರ್ಮ)**

1. "ನಿತ್ಯಸಿದ್ಧಾತ್ಮದರ್ಶಿನಃ" ಎಂಬ ಪಾ॥ ಪಾಠಕ್ಕಿಂತ ಈ ಆ॥ ಪಾಠವೇ ಉತ್ತಮ.

2. "ಗಾರ್ಹಸ್ಥ್ಯವನ್ನು ಶ್ರುತಿಯು ಪ್ರತ್ಯಕ್ಷವಾಗಿ ವಿಧಿಸಿರುವದರಿಂದ ಆಶ್ರಮವು ಒಂದೇ ಎಂದು ಆಚಾರ್ಯರು ಹೇಳುತ್ತಾರೆ" (ಗೌ. ಧ. ೧-೩-೩೫) ಎಂಬ ಧರ್ಮಸೂತ್ರವನ್ನವಲಂಬಿಸಿ ಪೂರ್ವಪಕ್ಷಿ ಹೊರಟಿರುತ್ತಾನೆ. ಸಂನ್ಯಾಸವೂ ಶ್ರುತಿಯಲ್ಲಿದೆ ಎಂಬುದಕ್ಕೆ ಸೂ. ಭಾ. ೩-೪-೧೮, ೧೯, ೨೦ನ್ನು ನೋಡಿರಿ.

3. ಈ ಶ್ರುತಿಯು ಋಗ್ವೇದದ ಬ್ರಾಹ್ಮಣದಲ್ಲಿದೆ ಎಂದು ಶಾ. ಭಾ. ೨-೪-೫ರಲ್ಲಿದೆ.

4. ಬ್ರಹ್ಮಚರ್ಯ, ತಪಸ್ಸು, ಸತ್ಯ—ಇವುಗಳನ್ನು ಛಾ. ತೈ. ಮುಂ. ಮುಂತಾದ ಶ್ರುತಿಗಳಲ್ಲಿ ವಿಧಿಸಿದೆ; ಶಮದಮಾದಿಗಳನ್ನು ಬೃ. ದಲ್ಲಿ ಹೇಳಿದೆ; ಅಹಿಂಸೆಯನ್ನು ಛಾ. ಮುಂತಾದ ಶ್ರುತಿಗಳಲ್ಲಿ ಹೇಳಿದೆ.

**ಗಳೂ ಧ್ಯಾನ, ಧಾರಣ—ಮುಂತಾದ ರೂಪದ (ಕರ್ಮಗಳೂ) ಇರುತ್ತವೆ. (ಅವು ಹಿಂಸಾದಿ)ಗಳಿಂದ ಕೂಡಿರದೆ ಇರುವದರಿಂದ[1] ವಿದ್ಯೆಯುಂಟಾಗುವ ದಕ್ಕೆ (ಅಗ್ನಿಹೋತ್ರಾದಿಗಳಿಗಿಂತಲೂ) ಹೆಚ್ಚು ಸಾಧಕವಾಗಿರುತ್ತವೆ.**[2] (ಆದ್ದ ರಿಂದಲೇ) ಮುಂದೆ "ತಪಸ್ಸಿನಿಂದ ಬ್ರಹ್ಮವನ್ನು ತಿಳಿಯಲೆಳಸು" (೩-೨) ಎಂದು (ಶ್ರುತಿಯು) ಹೇಳಿಯೂ ಇರುತ್ತದೆ.[3] ಬೇರೆಯ ಜನ್ಮದಲ್ಲಿ ಮಾಡಿದ ಕರ್ಮಗಳಿಂದ[4] ಗೃಹಸ್ಥಾಶ್ರಮವನ್ನು ಸ್ವೀಕರಿಸುವ ಮುಂಚೆಯೇ[5] ವಿದ್ಯೆಯು ಉಂಟಾಗಬಹುದಾಗಿ ರುವದರಿಂದಲೂ ಗಾರ್ಹಸ್ಥ್ಯವನ್ನು ಸ್ವೀಕರಿಸುವದು ಕರ್ಮಕ್ಕಾಗಿಯೇ[6] ಆಗಿರುವದ ರಿಂದಲೂ ಕರ್ಮದಿಂದ ಆಗಬೇಕಾಗಿರುವ ವಿದ್ಯೆಯು (ಇದ್ದೇ) ಇರುವಾಗ (ಮತ್ತೆ ಅದಕ್ಕಾಗಿ) ಗಾರ್ಹಸ್ಥ್ಯವನ್ನು ಸ್ವೀಕರಿಸುವದು ವ್ಯರ್ಥವೇ ಸರಿ. (ಇದಲ್ಲದೆ) ಪುತ್ರನೇ ಮುಂತಾದವುಗಳಿಂದ ಆಗಬೇಕಾಗಿರುವ ಈ ಲೋಕ, ಪಿತೃಲೋಕ, ದೇವಲೋಕ— ಎಂಬಿವುಗಳ ಆಸೆಯನ್ನು ತೊರೆದು ನಿತ್ಯಸಿದ್ಧವಾಗಿರುವ ಆತ್ಮಲೋಕವನ್ನೇ ಕಂಡು ಕೊಂಡಿರುವವನಿಗೆ[7] ಕರ್ಮದಲ್ಲಿ (ಯಾವ) ಪ್ರಯೋಜನವೂ ಕಾಣದಿರುವದ ರಿಂದ (ಅವನು ಕರ್ಮದಲ್ಲಿ) ತೊಡಗುವದೆಂಬುದು ಹೇಗೆ ಹೊಂದೀತು? ಗೃಹಸ್ಥಾ ಶ್ರಮವನ್ನು ಸ್ವೀಕರಿಸಿರುವವನಿಗೆ ಕೂಡ ವಿದ್ಯೆಯುಂಟಾದರೆ ವಿದ್ಯೆಯ ಪರಿಪಾಕ

---

1. ಗೃಹಸ್ಥನಿಗೆ ಹಿಂಸಾದಿಗಳು ಅನಿವಾರ್ಯ. ಪ್ರ.ಭಾ. ೧-೧೬ನ್ನು ನೋಡಿ.

2. ಅಗ್ನಿಹೋತ್ರಾದಿಗಳು ಹೊರಗಿನ ಸಾಧನ, ಇವು ಅಂತರಂಗಸಾಧನ. ಸೂ. ಭಾ. ೩-೪-೨೭.

3. ಅಗ್ನಿಹೋತ್ರಾದಿಗಳಿಗಿಂತ ಬೇರೆಯಾದ ತಪಸ್ಸನ್ನು ಬ್ರಹ್ಮಜ್ಞಾನಕ್ಕೆ ಸಾಧನವಾಗಿ ಹೇಳಿರುತ್ತದೆ.

4. ಈ ಜನ್ಮದಲ್ಲಿ ಮಾಡಿದ ಕರ್ಮಗಳಿಂದಲೇ ಚಿತ್ತಶುದ್ಧಿಯಾಗಿ ಜ್ಞಾನವುಂಟಾಗ ಬೇಕೆಂಬ ನಿಯಮವೇನೂ ಇಲ್ಲ. ವಾಮದೇವಾದಿಗಳಂತೆ ಹಿಂದಿನ ಜನ್ಮಗಳಲ್ಲಿ ಮಾಡಿದ ಕರ್ಮಗಳಿಂದಲೂ ಜ್ಞಾನವುಂಟಾಗಬಹುದು. ಕೇ.ಭಾ.ಭಾ. ೮೬; ಸೂ. ಭಾ. ೪-೧-೧೫, ೪-೧-೧೮, ಗೀ.ಭಾ. ೩-೪.

5. ಬ್ರಹ್ಮಚರ್ಯದಲ್ಲಿಯೇ. ಆದ್ದರಿಂದಲೇ ಜಾಬಾಲಶ್ರುತಿಯಲ್ಲಿ ಬ್ರಹ್ಮಚರ್ಯ ದಿಂದಲೂ ಸಂನ್ಯಾಸಾಶ್ರಮಕ್ಕೆ ಹೋಗಬಹುದೆಂದು ಹೇಳಿದೆ.

6. ಜ್ಞಾನಕಾರಣವಾಗಿರುವ ಕರ್ಮಕ್ಕಾಗಿಯೇ. ಮುಮುಕ್ಷುಗಳ ವಿಷಯವೇ ಇಲ್ಲಿ ಪ್ರಕೃತವಾಗಿರುವದರಿಂದ ಜ್ಞಾನಿಗಳಾದ ಬ್ರಹ್ಮಚಾರಿಗಳಿಗೆ ಗೃಹಸ್ಥಾಶ್ರಮಸ್ವೀಕಾರವು ಅನವಶ್ಯ ಎಂದು ಈ ವಾಕ್ಯಕ್ಕೆ ಆಶಯ.

7. ಬೃ. ೧-೫-೧೬ರಲ್ಲಿ ಹೇಳಿರುವ ಪುತ್ರ, ಕರ್ಮ, ಉಪಾಸನೆ_ಎಂಬಿವು ಲೋಕಕ್ಕೆ ಸಾಧನಗಳು; ಜ್ಞಾನಿಯು ಆತ್ಮನಿಗಿಂತ ಬೇರೆಯಾದ ಲೋಕವನ್ನು ಬಯಸುವದಿಲ್ಲ. ಬೃ. ೪-೪-೨೨, ಕೇ. ಭಾ. ೫ನೆಯ ಭಾ.ಭಾ.ವನ್ನು ನೋಡಿ.

ದಿಂದ[1] ವೈರಾಗ್ಯವುಂಟಾಗಲು ಕರ್ಮಗಳಲ್ಲಿ (ಯಾವ) ಪ್ರಯೋಜನವೂ ಕಾಣದಿರುವದರಿಂದ (ಆವನೂ) ಕರ್ಮಗಳಿಂದ ಹಿಂದಿರುಗಲೇ ಬೇಕಾಗುವದು.[2] "ಎಲೆ (ಮೈತ್ರೇಯಿ), ನಾನು ಈ ಸ್ಥಾನದಿಂದ ಹೊರಟುಹೋಗಿ (ಸಂನ್ಯಾಸಿಯಾಗುವವ)ನಿರುತ್ತೇನೆ." (ಬೃ. ೪-೫-೨, ಎಂಬುದೇ ಮುಂತಾದ ಶ್ರುತಿಯಲ್ಲಿ ಕಾಣುವ ಲಿಂಗವು (ಇದಕ್ಕೆ ಪ್ರಮಾಣವು).

## ಶ್ರುತಿಯಲ್ಲಿ ಕರ್ಮವನ್ನು ಬಹಳವಾಗಿ ಹೇಳಿರುವದೇಕೆ ?

(ಭಾಷ್ಯ)

೮೩. ಕರ್ಮ ಪ್ರತಿ ಶ್ರುತೇರ್ಯತ್ನಾಧಿಕ್ಯದರ್ಶನಾತ್ ಅಯುಕ್ತಮ್ ಇತಿ ಚೇತ್। ಅಗ್ನಿಹೋತ್ರಾದಿಕರ್ಮ ಪ್ರತಿ ಶ್ರುತೇರಧಿಕೋ ಯತ್ನಃ। ಮಹಾಂಶ್ಚ ಕರ್ಮಣಿ ಆಯಾಸಃ। ಅನೇಕಸಾಧನಸಾಧ್ಯತ್ವಾದಗ್ನಿಹೋತ್ರಾದೀನಾಮ್। ತಪೋಬ್ರಹ್ಮಚರ್ಯಾದೀನಾಂ ಚ ಇತರಾಶ್ರಮಕರ್ಮಣಾಂ ಗಾರ್ಹಸ್ಥ್ಯೇಽಪಿ ಸಮಾನತ್ವಾತ್। ಅಲ್ಪಸಾಧನಾಪೇಕ್ಷತ್ವಾಚ್ಚ ಇತರೇಷಾಂ ನ ಯುಕ್ತಸ್ತುಲ್ಯವದ್ವಿಕಲ್ಪಃ ಆಶ್ರಮಿಭಿಸ್ತಸ್ಯ ಇತಿ ಚೇತ್। ನ। ಜನ್ಮಾನ್ತರಕೃತಾನುಗ್ರಹಾತ್। ಯದುಕ್ತಂ "ಕರ್ಮಣಿ ಶ್ರುತೇರಧಿಕೋ ಯತ್ನಃ" ಇತ್ಯಾದಿ। ನಾಸೌ ದೋಷಃ। ಯತೋ ಜನ್ಮಾನ್ತರಕೃತಮಪಿ ಅಗ್ನಿಹೋತ್ರಾದಿಲಕ್ಷಣಂ ಕರ್ಮ ಬ್ರಹ್ಮಚರ್ಯಾದಿಲಕ್ಷಣಂ ಚ ಅನುಗ್ರಾಹಕಂ ಭವತಿ ವಿದ್ಯೋತ್ಪತ್ತಿಂ ಪ್ರತಿ। ಯೇನ[3] ಜನ್ಮನೈವ ವಿರಕ್ತಾ ದೃಶ್ಯನ್ತೇ ಕೇಚಿತ್। ಕೇಚಿತ್ತು ಕರ್ಮಸು ಪ್ರವೃತ್ತಾ ಅವಿರಕ್ತಾ ವಿದ್ಯಾವಿದ್ವೇಷಿಣಃ। ತಸ್ಮಾತ್ ಜನ್ಮಾನ್ತರಕೃತಸಂಸ್ಕಾರೇಭ್ಯೋ ವಿರಕ್ತಾನಾಮ್ ಆಶ್ರಮಾನ್ತರಪ್ರತಿಪತ್ತಿರೇವ ಇಷ್ಯತೇ ॥

(ಭಾಷ್ಯಾರ್ಥ)

(ಪೂರ್ವಪಕ್ಷ):—ಕರ್ಮದ ವಿಷಯಕ್ಕೆ ಶ್ರುತಿಯಲ್ಲಿ ಹೆಚ್ಚಿನ ಪ್ರಯತ್ನವು ಕಾಣಬರುವದರಿಂದ (ನಿಮ್ಮ ಪಕ್ಷವು) ಯುಕ್ತವಲ್ಲ. (ಹೇಗೆಂದರೆ):—ಅಗ್ನಿಹೋತ್ರವೇ ಮುಂತಾದ ಕರ್ಮದ ವಿಷಯಕ್ಕೆ ಶ್ರುತಿಯಲ್ಲಿ ಹೆಚ್ಚಿನ ಪ್ರಯತ್ನವು (ಕಂಡು ಬರು

---

1. ವಿಕ್ಷೇಪಹೇತುಗಳಿಲ್ಲದೆ ಜ್ಞಾನವು ಐಕಾತ್ಮ್ಯದಲ್ಲಿಯೇ ನಿಲ್ಲುವದು ವಿದ್ಯೆಯ ಪರಿಪಾಕವು. "ವಿದ್ಯಾಪರಿಪಾಕಾತ್" ಎಂಬ ಮಾತನ್ನು ವಿದ್ಯಾಪರಿಪಾಕಹೇತೋಃ (ವಿದ್ಯೆಯು ಪರಿಪಾಕವಾಗಲೆಂಬ ಕಾರಣದಿಂದ) ಎಂದು ಅರ್ಥಮಾಡಿ 'ನಿವೃತ್ತಿರೇವ ಸ್ಯಾತ್' (ಹಿಂತಿರುಗಲೇಬೇಕಾಗುವದು) ಎಂಬುದಕ್ಕೂ ಅನ್ವಯಿಸಬಹುದು. ಏಕೆಂದರೆ ಸಂನ್ಯಾಸವು ವಿದ್ಯೆಯ ಪರಿಪಾಕಕ್ಕೆ ಅಂಗವೆಂದು ಸೂ. ಭಾ. ೩-೪-೨೦, ಗೀ. ಭಾ. ೧೮-೫೫ರಲ್ಲಿ ಹೇಳಿದೆ.

2. ಸಂನ್ಯಾಸಿಯಾಗಬೇಕಾಗುವದು.

3. "ಯೇ ನ ಚ" ಎಂದು ವಾ॥ ಪಾಠ.

ತ್ತದೆ). ಮತ್ತು ಕರ್ಮವನ್ನು (ಮಾಡುವದರಲ್ಲಿ) ಬಹಳ ಆಯಾಸವೂ ಆಗುತ್ತದೆ;[1] ಏಕೆಂದರೆ ಅಗ್ನಿಹೋತ್ರವೇ ಮುಂತಾದವುಗಳು ಆಗಬೇಕಾದರೆ ಅನೇಕ ಸಾಧನಗಳು ಬೇಕಾಗುವವು. ಮಿಕ್ಕ ಆಶ್ರಮಗಳಲ್ಲಿ(ರುವವರ) ಕರ್ಮಗಳಾದ ತಪಸ್ಸು, ಬ್ರಹ್ಮಚರ್ಯ-ಮುಂತಾದವು ಗೃಹಸ್ಥಾಶ್ರಮಕ್ಕೂ ಸಮಾನವಾಗಿರುತ್ತವೆ.[2] ಉಳಿದ (ಸಾಧನ) ಗಳನ್ನು ಮಾಡುವದಕ್ಕೆ ಕೆಲವು ಸಾಧನಗಳೇ ಸಾಕು.[3] (ಆದ್ದರಿಂದ ಮಿಕ್ಕ) ಆಶ್ರಮಗಳಂತೆಯೇ (ಗೃಹಸ್ಥನು) ಎಂದು ವಿಕಲ್ಪಿಸುವದು ಸರಿಯಾಗುವದಿಲ್ಲವಲ್ಲ!

(ಸಿದ್ಧಾಂತಿ):—ಹಾಗಲ್ಲ. ಏಕೆಂದರೆ ಇನ್ನೊಂದು ಜನ್ಮದಲ್ಲಿ[4] ಮಾಡಿದ (ಕರ್ಮದಿಂದಲೂ) ಅನುಗ್ರಹವಾಗುತ್ತದೆ. "ಕರ್ಮದ ವಿಷಯಕ್ಕೆ ಶ್ರುತಿಯಲ್ಲಿ ಹೆಚ್ಚಿನ ಪ್ರಯತ್ನವು (ಕಂಡುಬರುತ್ತದೆ)" ಎಂದು ಮುಂತಾದ (ಪೂರ್ವಪಕ್ಷಿ) ಹೇಳಿದ್ದನಷ್ಟೆ; ಅದೇನೂ (ನಮ್ಮ ಪಕ್ಷದಲ್ಲಿ) ದೋಷವಾಗುವದಿಲ್ಲ. ಏಕೆಂದರೆ ಇನ್ನೊಂದು ಜನ್ಮದಲ್ಲಿ ಮಾಡಿದ ಅಗ್ನಿಹೋತ್ರವೇ ಮುಂತಾದ ರೂಪದ ಕರ್ಮವೂ ಬ್ರಹ್ಮಚರ್ಯವೇ ಮುಂತಾದ ರೂಪದ ಕರ್ಮವೂ ವಿದ್ಯೆಯು ಉಂಟಾಗುವದಕ್ಕೆ ಅನುಗ್ರಾಹಕವಾಗುತ್ತದೆ. ಹೀಗಿರುವದರಿಂದಲೇ ಕೆಲವರು ಹುಟ್ಟಿದಂದಿನಿಂದಲೇ ವಿರಕ್ತರಾಗಿರುವದು ಕಂಡು ಬರುತ್ತದೆ; ಆದರೆ ಮತ್ತೆ ಕೆಲವರು ಕರ್ಮಗಳಲ್ಲಿ ತೊಡಗಿ, ವೈರಾಗ್ಯವಿಲ್ಲದವರಾಗಿ, ಜ್ಞಾನವನ್ನು ಹಗೆಮಾಡುತ್ತಾ (ಇರುವದು ಕಂಡುಬರುತ್ತದೆ).[5] ಆದ್ದರಿಂದ ಬೇರೆಂದು ಜನ್ಮದಲ್ಲಿ ಮಾಡಿಕೊಂಡಿರುವ ಸಂಸ್ಕಾರಗಳಿಂದ ವಿರಕ್ತರಾಗಿರುವವರಿಗೆ ಬೇರೆಯ ಆಶ್ರಮವೇ[6] ಬೇಕಾಗುತ್ತದೆ.

---

1. ಆಯಾಸವಿಲ್ಲದೆ ಸಿದ್ಧವಾಗುವ ವಿಷಯಕ್ಕೆ ಆಯಾಸಬಹುಲವಾದ ಕರ್ಮವನ್ನು ವೇದವು ವಿಧಿಸಲಾರದೆಂದು ಭಾವ. ತಂ. ವಾ. ೧-೩-೮ ಪುಟ ೨೮೭ರಲ್ಲಿ ಬರೆದಿರುವದನ್ನೂ ಇದನ್ನೂ ಹೋಲಿಸಿರಿ.

2. ಗೃಹಸ್ಥನ ತಪಸ್ಸು ಮುಂತಾದವು ಉಳಿದ ಆಶ್ರಮಗಳಲ್ಲಿರುವಷ್ಟು ಪೂರ್ಣವಲ್ಲವೆಂಬುದನ್ನು ಪೂರ್ವಪಕ್ಷಿ ಕಡೆಗಣಿಸಿದಾನೆ.

3. ಬ್ರಹ್ಮಚರ್ಯಾದಿಗಳಿಗೆ ಹೆಚ್ಚಿನ ಪ್ರಯತ್ನವೇ ಬೇಕೆಂಬುದನ್ನು ಪೂರ್ವಪಕ್ಷಿ ಕಡೆಗಣಿಸಿರುತ್ತಾನೆ.

4. ಭಾ.ಭಾ. ೮೨ನ್ನೂ ಅದರ ಅನುವಾದಕ್ಕೆ ಪುಟ ೧೦೪ರಲ್ಲಿ ಕೊಟ್ಟಿರುವ 4ನೆಯ ಟಿಪ್ಪಣಿಯನ್ನೂ ನೋಡಿರಿ.

5. ಈ ದೃಷ್ಟಿಭೇದಕ್ಕೆ ಪೂರ್ವಜನ್ಮಸಂಸ್ಕಾರವಲ್ಲದೆ ಮತ್ತೇನನ್ನು ಕಾರಣವಾಗಿ ಹೇಳಬಹುದು?

6. ಸಂನ್ಯಾಸವೇ.

(ಭಾಷ್ಯ)

೮೪. ಕರ್ಮಫಲಬಾಹುಲ್ಯಾಚ್ಚ । ಪುತ್ರಸ್ವರ್ಗಬ್ರಹ್ಮವರ್ಚಸಾದಿಲಕ್ಷಣಸ್ಯ ಕರ್ಮಫಲಸ್ಯ ಅಸಂಖ್ಯೇಯತ್ವಾತ್ ತತ್ ಪ್ರತಿ ಚ ಪುರುಷಾಣಾಂ ಕಾಮಬಾಹುಲ್ಯಾತ್ ತದರ್ಥಃ ಶ್ರುತೇರಧಿಕೋ ಯತ್ನಃ ಕರ್ಮಸು ಉಪಪದ್ಯತೇ । ಆಶಿಷಾಂ ಬಾಹುಲ್ಯದರ್ಶನಾತ್ "ಇದಂ ಮೇ ಸ್ಯಾತ್, ಇದಂ ಮೇ ಸ್ಯಾತ್" ಇತಿ । ಉಪಾಯತ್ವಾಚ್ಚ । ಉಪಾಯಭೂತಾನಿ ಹಿ ಕರ್ಮಾಣಿ ವಿದ್ಯಾಂ ಪ್ರತಿ ಇತ್ಯವೋಚಾಮ । ಉಪಾಯೇ ಚ ಅಧಿಕೋ ಯತ್ನಃ ಕರ್ತವ್ಯಃ ನ ಉಪೇಯೇ ॥

(ಭಾಷ್ಯಾರ್ಥ)

ಕರ್ಮಫಲಗಳು ಬಹಳವಾಗಿರುವದರಿಂದಲೂ[1] (ಕರ್ಮದಲ್ಲಿ ಶ್ರುತಿಗೆ ಹೆಚ್ಚಿನ ಯತ್ನವಿರುವುದು ಸರಿಯಾಗಿದೆ). ಪುತ್ರ, ಸ್ವರ್ಗ, ಬ್ರಹ್ಮವರ್ಚಸ್ಸು ಮುಂತಾದ ರೂಪದ ಕರ್ಮಫಲವೂ ಲೆಕ್ಕವಿಲ್ಲದಷ್ಟು ಇರುವದರಿಂದಲೂ ಅದಕ್ಕಾಗಿ ಮನುಷ್ಯರಿಗೆ (ಉಂಟಾಗುವ) ಕಾಮಗಳೂ ಬಹಳವಾಗಿರುವದರಿಂದಲೂ ಅದಕ್ಕಾಗಿ ಶ್ರುತಿಯಲ್ಲಿ ಹೆಚ್ಚಿನ ಪ್ರಯತ್ನವನ್ನು (ಮಾಡಿರುವದು) ಸರಿಯಾಗಿರುತ್ತದೆ. ಏಕೆಂದರೆ "ಇದು ನನಗೆ ಆಗಲಿ! ಇದು ನನಗೆ ಆಗಲಿ!" ಎಂದು ಆಸೆಗಳು ಬಹಳವಾಗಿರುವದು ಕಂಡುಬರುತ್ತದೆ.[2] (ಕರ್ಮವು) ಸಾಧನವಾಗಿರುವದರಿಂದಲೂ[3] (ಇದು ಯುಕ್ತವಾಗಿರುತ್ತದೆ.) ಕರ್ಮಗಳು ವಿದ್ಯೆಗೆ ಸಾಧನವಾಗಿರುತ್ತವೆಯೆಂದಲ್ಲವೆ, ನಾವು (ಹಿಂದೆ) ಹೇಳಿರುವದು ? ಸಾಧನದ ವಿಷಯದಲ್ಲಿ ಹೆಚ್ಚಿನ ಯತ್ನವನ್ನು ಮಾಡತಕ್ಕದ್ದು (ಸರಿಯೇ) ಹೊರತು ಸಾಧ್ಯವಾದದ್ದರ ವಿಷಯದಲ್ಲಿ (ಮಾಡತಕ್ಕದ್ದು ಯುಕ್ತವಾಗುವದಿಲ್ಲ).

---

1. ಕರ್ಮದ ವಿಷಯಕ್ಕೆ ಶ್ರುತಿಯು ಬಹಳ ಯತ್ನವನ್ನು ಮಾಡಿದೆ ಎಂಬುದು ಕಾಮ್ಯಕರ್ಮದ ವಿಷಯವೊ, ನಿತ್ಯಕರ್ಮದ ವಿಷಯವೊ ? ಕಾಮ್ಯಕರ್ಮಗಳ ವಿಷಯದಲ್ಲಾದರೆ ಕಾಮಗಳು ಬಹಳವಾಗಿರುವದರಿಂದ ಕರ್ಮಗಳೂ ಶ್ರುತಿಯಲ್ಲಿ ಹೆಚ್ಚಾಗಿರುವದು ಸ್ವಾಭಾವಿಕವಾಗಿದೆ. ಅಷ್ಟುಮಾತ್ರದಿಂದ ಕರ್ಮವೇ ಮೋಕ್ಷಕ್ಕೆ ಸಾಧನವೆಂದೇನೂ ಏರ್ಪಡುವದಿಲ್ಲ ಎಂದು ಭಾವ.

2. ಆಸೆಗಳಿಗೆ ತಕ್ಕಂತೆ ಫಲಗಳನ್ನೂ ಕರ್ಮಗಳನ್ನೂ ಶ್ರುತಿ ಹೇಳುತ್ತದೆ. ತೈ. ಸಂ. ೧-೯-೧ ನೋಡಿ.

3. ಇದು ನಿತ್ಯಕರ್ಮಗಳ ವಿಷಯವಾದ ಆಕ್ಷೇಪಕ್ಕೆ ಪರಿಹಾರ. ಹಿಂದೆ ೮೩ ರಲ್ಲಿ ನಿತ್ಯಕರ್ಮವನ್ನು ವಿಧಿಸಿರುವ ಶ್ರುತಿಯ ಬಲದಿಂದ ಗೃಹಸ್ಥಾಶ್ರಮವೊಂದೇ ಮೋಕ್ಷಕ್ಕೆ ಬೇಕಾದ ಸಾಧನ ಎಂಬ ಪೂರ್ವಪಕ್ಷವನ್ನು ಖಂಡಿಸಿತ್ತು. ಈಗ ಕರ್ಮವೊಂದೇ ಮುಕ್ತಿಸಾಧನ ಎಂಬ ಪೂರ್ವಪಕ್ಷವನ್ನು ಖಂಡಿಸಿದೆ.

## ಶ್ರವಣಾದಿಗಳು ವಿದ್ಯೆಗೆ ಸಾಕ್ಷಾತ್ಸಾಧನ

(ಭಾಷ್ಯ)

೮೫. ಕರ್ಮನಿಮಿತ್ತತ್ವಾದ್ ವಿದ್ಯಾಯಾಃ, ಯತ್ನಾನ್ತರಾನರ್ಥಕ್ಯಮ್ ಇತಿ ಚೇತ್ । ಕರ್ಮಭ್ಯ ಏವ ಪೂರ್ವೋಪಚಿತದುರಿತಪ್ರತಿಬನ್ಧಕ್ಷಯಾತ್ ವಿದ್ಯಾ ಉತ್ಪದ್ಯತೇ ಚೇತ್ ಕರ್ಮಭ್ಯಃ ಪೃಥಕ್ ಉಪನಿಷಚ್ಛ್ರವಣಾದಿಯತ್ನೋಽನರ್ಥಕಃ ಇತಿ ಚೇತ್ । ನ । ನಿಯಮಾಭಾವಾತ್ । ನ ಹಿ ಪ್ರತಿಬನ್ಧಕ್ಷಯಾದೇವ ವಿದ್ಯಾ ಉತ್ಪದ್ಯತೇ ನ ತು ಈಶ್ವರಪ್ರಸಾದತಪೋಧ್ಯಾನಾದ್ಯನುಷ್ಠಾನಾತ್ ಇತಿ ನಿಯಮೋಽಸ್ತಿ । ಅಹಿಂಸಾಬ್ರಹ್ಮಚರ್ಯಾದೀನಾಂ ಚ ವಿದ್ಯಾಂ ಪ್ರತ್ಯುಪಕಾರಕತ್ವಾತ್ । ಸಾಕ್ಷಾದೇವ ಚ ಕಾರಣತ್ವಾತ್ ಶ್ರವಣಮನನನಿದಿಧ್ಯಾಸನಾನಾಮ್ ॥

(ಭಾಷ್ಯಾರ್ಥ)

(ಪೂರ್ವಪಕ್ಷ) :— ವಿದ್ಯೆಗೆ ಕರ್ಮವೇ ಕಾರಣವಾಗಿರುವದರಿಂದ ಬೇರೆಯ ಯತ್ನವನ್ನು ಮಾಡುವದು ವ್ಯರ್ಥ. (ಇದರ ವಿವರ):—ಕರ್ಮಗಳಿಂದಲೇ ಹಿಂದೆ ಕೂಡಿಹಾಕಿಕೊಂಡಿರುವ ಪಾಪವೆಂಬ ಅಡ್ಡಿಯನ್ನು ನಾಶಗೊಳಿಸುವದರಿಂದಲೇ ವಿದ್ಯೆಯು ಹುಟ್ಟುವದಾದರೆ ಕರ್ಮಗಳಿಗಿಂತ ಬೇರೆಯಾದ ಉಪನಿಷತ್ತುಗಳ ಶ್ರವಣವೇ ಮುಂತಾದ ಯತ್ನವು ವ್ಯರ್ಥ.

(ಸಿದ್ಧಾಂತ) :—ಹಾಗಲ್ಲ. ಏಕೆಂದರೆ ನಿಯಮವೇನೂ ಇಲ್ಲ. ಅಡ್ಡಿಯನ್ನು ನಾಶಗೊಳಿಸುವದರಿಂದಲೇ ವಿದ್ಯೆಯು ಹುಟ್ಟುವದೇ ಹೊರತು ಈಶ್ವರಪ್ರಸಾದದಿಂದಾಗಲಿ, ತಪಸ್ಸು, ಧ್ಯಾನ–ಮುಂತಾದವುಗಳ[1] ಅನುಷ್ಠಾನದಿಂದಾಗಲಿ (ಹುಟ್ಟುವ)ದಿಲ್ಲ ಎಂಬ ನಿಯಮವೇನೂ ಇರುವದಿಲ್ಲ. ಏಕೆಂದರೆ ಅಹಿಂಸೆ, ಬ್ರಹ್ಮಚರ್ಯ–ಮುಂತಾದವೂ ವಿದ್ಯೆಗೆ ಉಪಕಾರವಾಗಿರುತ್ತವೆ. ಶ್ರವಣ, ಮನನ, ನಿದಿಧ್ಯಾಸನ–ಇವುಗಳು ನೇರಾಗಿಯೇ[2] ಸಾಧನವಾಗಿರುತ್ತವೆ.

---

1. ಈಶ್ವರಪ್ರಸಾದವು ಸಾಧನಗಳಿಗೆಲ್ಲ ಫಲವನ್ನು ಕೊಡಿಸುವ ದ್ವಾರವು. ಕರ್ಮವು ಈ ಜನ್ಮದ್ದಾಗಿರಲಿ, ಹಿಂದಿನ ಜನ್ಮದ್ದಾಗಿರಲಿ, ಪ್ರತಿಬಂಧಕ್ಷಯದ್ವಾರದಿಂದ ಜ್ಞಾನಕಾರಣವು. ಅಹಿಂಸೆಯೇ ಮುಂತಾದವುಗಳು ಅಧರ್ಮವೇ ಮುಂತಾದವುಗಳನ್ನು ತೊಲಗಿಸುವಮೂಲಕವೂ ಜ್ಞಾನಪರಿಪಾಕವನ್ನುಂಟುಮಾಡುವ ಮೂಲಕವೂ ಜ್ಞಾನನಿಷ್ಠೆಗೆ ಕಾರಣವು.

2. ಶ್ರವಣಾದಿಗಳಿಗೆ ಜ್ಞಾನವೇ ಫಲವೆಂಬುದು ಲೋಕದಲ್ಲಿ ಕಂಡಿದೆ. ಸಾಧನಗಳ ತಾರತಮ್ಯದ ವಿಷಯಕ್ಕೆ ಬೃ. ಭಾ. ೧-೪-೨, ಸೂ. ಭಾ. ೩-೪-೫೧, ४-೧-೧೮, ಗೀ. ಭಾ. ೧೦-೧೦, ೧೦-೧೧, ೧೮-೪೫, ४೬ ನೋಡಿ.

(ಭಾಷ್ಯ)

೮೬. ಅತಃ ಸಿದ್ಧಾನ್ಯಾಶ್ರಮಾನ್ತರಾಣಿ । ಸರ್ವೇಷಾಂ ಚಾಧಿಕಾರೋ ವಿದ್ಯಾಯಾಮ್, ಪರಂ ಚ ಶ್ರೇಯಃ ಕೇವಲಾಯಾ ವಿದ್ಯಾಯಾ ಏವ ಇತಿ ಸಿದ್ಧಮ್॥

(ಭಾಷ್ಯಾರ್ಥ)

ಆದ್ದರಿಂದ ಬೇರೆಯ ಆಶ್ರಮಗಳೂ (ಇವೆಯೆಂದು) ಸಿದ್ಧವಾಯಿತು.[1] ಎಲ್ಲರಿಗೂ [2] ವಿದ್ಯೆಯಲ್ಲಿ ಅಧಿಕಾರವಿದೆಯೆಂದೂ ಹೆಚ್ಚಿನ ಶ್ರೇಯಸ್ಸು ಬರಿಯ ವಿದ್ಯೆಯಿಂದಲೇ [3] ಎಂದೂ ಸಿದ್ಧವಾಯಿತು.



## ೧೨. ಶಾಂತಿಪಾಠ

**ಶಂ ನೋ ಮಿತ್ರಃ ಶಂ ವರುಣಃ । ಶಂ ನೋ ಭವತ್ವರ್ಯಮಾ। ಶಂ ನ ಇನ್ದ್ರೋ ಬೃಹಸ್ಪತಿಃ । ಶಂ ನೋ ವಿಷ್ಣುರುರುಕ್ರಮಃ । ನಮೋ ಬ್ರಹ್ಮಣೇ । ನಮಸ್ತೇ ವಾಯೋ । ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ । ತ್ವಾಮೇವ ಪ್ರತ್ಯಕ್ಷಂ ಬ್ರಹ್ಮಾವಾದಿಷಮ್ । ಋತಮವಾದಿಷಮ್ । ಸತ್ಯಮವಾದಿಷಮ್ । ತನ್ಮಾಮಾವೀತ್ । ಆವೀನ್ಮಾಮ್ । ಆವೀದ್ವಕ್ತಾರಮ್ । ಓಂ ಶಾನ್ತಿಃ ಶಾನ್ತಿಃ ಶಾನ್ತಿಃ ॥**

೧೨. ನಮಗೆ ಮಿತ್ರನು ಸುಖ(ವನ್ನುಂಟುಮಾಡಲಿ)! ವರುಣನು ುಖ(ವನ್ನುಂಟುಮಾಡಲಿ)! ಅರ್ಯಮನು ಸುಖ(ವನ್ನುಂಟುಮಾಡುವವ) ಾಗಲಿ! ಉರುಕ್ರಮನಾದ ವಿಷ್ಣು ನಮಗೆ ಸುಖವನ್ನುಂಟುಮಾಡಲಿ! ್ರಹ್ಮಕ್ಕೆ ನಮಸ್ಕಾರ! ವಾಯುವೆ, ನಿನಗೆ ನಮಸ್ಕಾರ! ನೀನೇ ಪ್ರತ್ಯಕ್ಷ

---

1. ಸೂ.ಭಾ. ೩-೪-೨೦.

2. ಎಲ್ಲಾ ಆಶ್ರಮಿಗಳಿಗೂ ಸೂ.ಭಾ. ೩-೪-೨೦, ಮುಂ. ಸಂಬಂಧ ಭಾ., . ಭಾ. ೧೮-೪೫.

3. ಸೂ.ಭಾ. ೩-೪-೧, ೩-೪-೧೭.

ಬ್ರಹ್ಮವಾಗಿರುತ್ತೀಯೆ. ನೀನೇ ಪ್ರತ್ಯಕ್ಷಬ್ರಹ್ಮವೆಂದೆನು, ಋತವೆಂದೆನು, ಸತ್ಯವೆಂದೆನು. ಅದು ನನ್ನನ್ನು ಕಾಪಾಡಿತು, ಅದು ಹೇಳಿಕೊಡುವಾತನನ್ನು ಕಾಪಾಡಿತು, ನನ್ನನ್ನು ಕಾಪಾಡಿತು, ಹೇಳಿಕೊಡುವಾತನನ್ನು ಕಾಪಾಡಿತು. ಓಂ ಶಾಂತಿ! ಶಾಂತಿ! ಶಾಂತಿ![1]



1. ಈ ಶಾಂತಿಪಾಠವು ವೈದಿಕರ ಪಾಠಕ್ರಮದಲ್ಲಿ ಶಿಕ್ಷಾವಲ್ಲಿಯ ಕೊನೆಯಲ್ಲಿರುತ್ತದೆಯಾದರೂ ಅರ್ಥಕ್ರಮದಲ್ಲಿ ಮುಂದೆ ಆನಂದವಲ್ಲಿಯಲ್ಲಿ ಹೇಳುವ ಬ್ರಹ್ಮವಿದ್ಯೆಗೋಸ್ಕರವಾಗಿ ಬಂದಿದೆ ಎಂದು ಆ ವಲ್ಲಿಯ ಸಂಬಂಧಭಾಷ್ಯದಲ್ಲಿ ಬರೆದಿದೆ. ಇಲ್ಲಿ "ಅತೀತವಿದ್ಯಾಪ್ರಾಪ್ತ್ಯುಪಸರ್ಗಶಮನಾರ್ಥಂ ಶಾನ್ತಿಂ ಪಠತಿ—ಶಂನೋ ಮಿತ್ರ ಇತಿ (ಇತ್ಯಾದಿ) । ವ್ಯಾಖ್ಯಾತಮೇತತ್ ಪೂರ್ವಮ್ ॥" ಎಂಬ ಎರಡು ವಾಕ್ಯಗಳನ್ನು ಭಾಷ್ಯವೆಂದು ಮುದ್ರಿತಪುಸ್ತಕಗಳಲ್ಲಿ ತೋರಿಸಿದ್ದರೂ ಅನೇಕ ಮೂಲಕೋಶಗಳಲ್ಲಿ ಅವು ಕಂಡುಬಂದಿರುವದಿಲ್ಲವಾಗಿ ಅವನ್ನು ನಾವು ಗ್ರಂಥಶರೀರದಲ್ಲಿ ಸೇರಿಸಿಲ್ಲ. ಆನಂದವಲ್ಲಿಯ ಶಾಂತಿಪಾಠದ ಭಾಷ್ಯವನ್ನೂ ಅದರ ಟಿಪ್ಪಣಿಯನ್ನೂ ನೋಡಿರಿ.

# ಆನಂದವಲ್ಲಿ



## ಶಾಂತಿಪಾಠ

೮೭. "ಶಂ ನೋ ಮಿತ್ರಃ" ಇತ್ಯಾದ್ಯತೀತವಿದ್ಯಾಪ್ರಾಪ್ತ್ಯುಪಸರ್ಗಪ್ರಶಮನಾರ್ಥಾ ಶಾನ್ತಿಃ ಪಠಿತಾ । ಇದಾನೀಂ ತು ವಕ್ಷ್ಯಮಾಣಬ್ರಹ್ಮವಿದ್ಯಾಪ್ರಾಪ್ತ್ಯುಪಶಮನಾರ್ಥಾ ಶಾನ್ತಿಃ ಪಠ್ಯತೇ "ಶಂ ನೋ ಮಿತ್ರಃ" ಇತಿ, "ಸಹನಾವವತು" ಇತಿ ಚ ||[1]

(ಭಾಷ್ಯಾರ್ಥ)

"ಶಂ ನೋ ಮಿತ್ರಃ" (೧೩) ಎಂದು ಮುಂತಾಗಿರುವ ಶಾಂತಿಯನ್ನು ಹಿಂದಿನ ವಿದ್ಯೆಯನ್ನು[2] ಪಡೆಯುವದಕ್ಕೆ (ಇರಬಹುದಾದ) ಅಡ್ಡಿಗಳು ನಾಶವಾಗುವದಕ್ಕಾಗಿ[3] ಹೇಳಿದ್ದಾಯಿತು. ಈಗಲಾದರೋ ಮುಂದೆ ಹೇಳಲಿರುವ ಬ್ರಹ್ಮವಿದ್ಯೆಯನ್ನು[4] ಪಡೆಯುವದಕ್ಕೆ (ಇರಬಹುದಾದ) ಅಡ್ಡಿಗಳು ನಾಶವಾಗುವದಕ್ಕಾಗಿ "ಶಂ ನೋ ಮಿತ್ರಃ" ಎಂದೂ "ಸ ಹ ನಾವವತು" ಎಂದೂ ಶಾಂತಿಯನ್ನು ಹೇಳಲಾಗುತ್ತದೆ.

---

1 ಇಲ್ಲಿಯವರೆಗಿನ ಭಾಷ್ಯಭಾಗವು ವಾ॥ ಪಾಠದಲ್ಲಿ ಹೀಗಿದೆ:—"ಅತೀತವಿದ್ಯಾಪ್ರಾಪ್ತ್ಯುಪಸರ್ಗಪ್ರಶಮನಾರ್ಥಾ ಶಾನ್ತಿಃ ಪಠಿತಾ । ಇದಾನೀಂ ತು ವಕ್ಷ್ಯಮಾಣ ಬ್ರಹ್ಮವಿದ್ಯಾಪ್ರಾಪ್ತ್ಯುಪಸರ್ಗಪ್ರಶಮನಾರ್ಥಾ ಶಾನ್ತಿಃ ಪಠ್ಯತೇ "ಸಹ ನಾವವತು" ಇತಿ ॥ "ಶಂ ನೋ ಮಿತ್ರಃ" ಇತ್ಯಾದಿಃ ಎಂದಿದ್ದರೆ ಸುಖವಾಗಿ ಅನ್ವಯವಾಗಿರುತ್ತದೆ.

2. ಟೀಕಾಕಾರರ ಮತದಲ್ಲಿ "ಶಂ ನೋ ಮಿತ್ರಃ" ಎಂಬ ಶೀಕ್ಷಾವಲ್ಲಿಯ ಕೊನೆಯಲ್ಲಿರುವ ಶಾಂತಿಯು ಪರಾಪರಬ್ರಹ್ಮಗಳೆರಡರ ವಿದ್ಯೆಗಾಗಿ; "ಸಹ ನಾವವತು" ಎಂಬುದು ಬರಿಯ ಪರಬ್ರಹ್ಮವಿದ್ಯೆಗಾಗಿ. ಆದರೆ ಭಾಷ್ಯಕಾರರು "ಶಂ ನೋ ಮಿತ್ರಃ" ಎಂದು ಶೀಕ್ಷಾವಲ್ಲಿಯ ಮೊದಲಿರುವ ಶಾಂತಿಯು ಅಪರಬ್ರಹ್ಮವಿದ್ಯೆಗೆ, ಕೊನೆಯಲ್ಲಿರುವದು ಪರವಿದ್ಯೆಗೆ ಎಂದು ವಿಭಾಗಮಾಡಿರುತ್ತಾರೆ.

3. "ಅಡ್ಡಿಗಳು ನಾಶವಾಗುವದಕ್ಕಾಗಿ" ಎಂದದ್ದರಿಂದ ಇದು ಶೀಕ್ಷಾವಲ್ಲಿಯ ಮೊದಲಿನ ಶಾಂತಿಯೇ ಎಂದು ಸ್ಪಷ್ಟವಾಗುತ್ತದೆ. ಏಕೆಂದರೆ ಎರಡನೆಯ ಶಾಂತಿಯಲ್ಲಿ "ಆವೀತ್" (ಕಾಪಾಡಿತು) ಎಂದು ವಿದ್ಯಾಪ್ರಾಪ್ತಿಯಾದ ಸೂಚನೆಯನ್ನು ಮಾಡಿದೆ.

4. ಬ್ರಹ್ಮಾತ್ಮಜ್ಞಾನವನ್ನು.

**ಸಹ ನಾವವತು। ಸಹ ನೌ ಭುನಕ್ತು। ಸಹ ವೀರ್ಯಂ ಕರವಾವಹೈ। ತೇಜಸ್ವಿ ನಾವಧೀತಮಸ್ತು ಮಾ ವಿದ್ವಿಷಾವಹೈ । ಓಂ ಶಾನ್ತಿಃ ಶಾನ್ತಿಃ ಶಾನ್ತಿಃ ॥ ೧ ॥**

೧. ನಮ್ಮಿಬ್ಬರನ್ನೂ ಜೊತೆಯಲ್ಲಿ ಕಾಪಾಡಲಿ ! ನಮ್ಮಿಬ್ಬರನ್ನೂ ಜೊತೆಯಲ್ಲಿ ಭೋಗಪಡಿಸಲಿ ! ಜೊತೆಯಲ್ಲಿ (ನಾವಿಬ್ಬರೂ) ವೀರ್ಯವನ್ನು ಮಾಡುವಂತಾಗಲಿ ! ತೇಜಸ್ವಿಗಳಾದ ನಮ್ಮಿಬ್ಬರ ಅಧ್ಯಯನವಾಗಲಿ ! (ನಾವು) ದ್ವೇಷಮಾಡದೆ ಇರುವಂತಾಗಲಿ ! ಓಂ ಶಾಂತಿ ! ಶಾಂತಿ ! ಶಾಂತಿ!

೮೮. "ಶಂ ನೋ ಮಿತ್ರಃ" ಇತ್ಯಾದಿ ಪೂರ್ವವತ್ ಸ್ಪಷ್ಟಮ್ । ಸಹ ನಾವವತು । ನೌ ಶಿಷ್ಯಾಚಾರ್ಯೌ ಸಹೈವ ಅವತು ರಕ್ಷತು । ಸಹ ನೌ ಭುನಕ್ತು ಭೋಜಯತು । ಸಹ ವೀರ್ಯಂ ವಿದ್ಯಾದಿನಿಮಿತ್ತಂ ಸಾಮರ್ಥ್ಯಂ ಕರವಾವಹೈ ನಿರ್ವರ್ತಯಾವಹೈ । ತೇಜಸ್ವಿನೌ ತೇಜಸ್ವಿನೋಃ ಆವಯೋಃ ಅಧೀತಮ್ ಸ್ವಧೀತಮ್ ಅಸ್ತು ಅರ್ಥಜ್ಞಾನಯೋಗ್ಯಮ್ ಅಸ್ತು ಇತ್ಯರ್ಥಃ । ಮಾ ವಿದ್ವಿಷಾವಹೈ । ವಿದ್ಯಾಗ್ರಹಣನಿಮಿತ್ತಂ ಶಿಷ್ಯಸ್ಯ ಆಚಾರ್ಯಸ್ಯ ವಾ ಪ್ರಮಾದಕೃತಾತ್ ಅನ್ಯಾಯಾತ್ ವಿದ್ವೇಷಃ ಪ್ರಾಪ್ತಃ । ತಚ್ಛಮನಾಯ ಇಯಮ್ ಆಶೀಃ–ಮಾ ವಿದ್ವಿಷಾವಹೈ ಇತಿ । ಮೈವ (ನೌ) ಇತರೇತರಂ ವಿದ್ವೇಷಮ್ ಆಪದ್ಯಾವಹೈ । ಶಾನ್ತಿಃ ಶಾನ್ತಿಃ ಶಾನ್ತಿಃ ಇತಿ ತ್ರಿರ್ವಚನಮ್ ಉಕ್ತಾರ್ಥಮ್ ॥

(ಭಾಷ್ಯಾರ್ಥ)

"ಶಂ ನೋ ಮಿತ್ರಃ" ಮುಂತಾದದ್ದು ಹಿಂದಿನಂತೆಯೇ (ವ್ಯಾಖ್ಯಾನಮಾಡಿಕೊಳ್ಳಬಹುದಾಗಿರುವದರಿಂದ) ಸ್ಪಷ್ಟವಾಗಿರುತ್ತದೆ.

"ಸಹ ನಾವವತು" (ಎಂಬುದರ ಅರ್ಥವೇನೆಂದರೆ) :—ನೌ ಶಿಷ್ಯಾಚಾರ್ಯರಾದ ನಮ್ಮಿಬ್ಬರನ್ನೂ ಜೊತೆಯಲ್ಲಿಯೇ 'ಅವತು' ಕಾಪಾಡಲಿ ! ನಮ್ಮಿಬ್ಬರನ್ನೂ ಜೊತೆಯಲ್ಲಿ ಭುನಕ್ತು ಭೋಗಪಡಿಸಲಿ ![1] ಜೊತೆಯಲ್ಲಿ ವೀರ್ಯವನ್ನು ಎಂದರೆ ವಿದ್ಯೆಯೇ ಮುಂತಾದ[2] ನಿಮಿತ್ತದಿಂದ (ಉಂಟಾದ) ಸಾಮರ್ಥ್ಯವನ್ನು (ನಾವಿಬ್ಬರೂ) ಮಾಡುವಂತಾಗಲಿ ![3] ತೇಜಸ್ವಿನೌ=ತೇಜಸ್ವಿನೋಃ ತೇಜೋವಂತರಾದ ನಮ್ಮಿಬ್ಬರ

---

1. ಜ್ಞಾನದ ಫಲವನ್ನು ಅನುಭವಿಸುವಂತೆ ಮಾಡಲಿ !
2. ವಿದ್ಯೆ, ಅದರಿಂದಾಗುವ ಆನಂದ ಮುಂತಾದ.
3. ಗುರುಶಿಷ್ಯರಿಬ್ಬರೂ ಸೇರಿದರೇ ಫಲವುಂಟಾಗುವದು ಎಂದು ಭಾವ.

ಅಧ್ಯಯನವು ಚೆನ್ನಾಗಿ ಅಧ್ಯಯನಮಾಡಿದ್ದು ಆಗಲಿ, ಅರ್ಥವನ್ನರಿಯುವದಕ್ಕೆ ತಕ್ಕದ್ದಾಗಲಿ ![1] ನಾವಿಬ್ಬರೂ ದ್ವೇಷಮಾಡದೆ ಇರುವಂತಾಗಲಿ ! ವಿದ್ಯೆಯನ್ನು ಗ್ರಹಿಸುವ ನಿಮಿತ್ತದಿಂದ ಶಿಷ್ಯನ ಅಥವಾ ಆಚಾರ್ಯನ ಪ್ರಮಾದದಿಂದ ಉಂಟಾಗುವ ಅನ್ಯಾಯದಿಂದ ದ್ವೇಷವುಂಟಾಗಬಹುದು, ಅದನ್ನು ತೊಲಗಿಸುವದಕ್ಕಾಗಿ "ನಾವಿಬ್ಬರೂ ದ್ವೇಷಮಾಡದೆ ಇರುವಂತಾಗಲಿ!" ಎಂಬೀ ಹಾರೈಕೆಯನ್ನು (ತೋರ್ಪಡಿಸಿಕೊಂಡಿರುತ್ತದೆ). ನಾವಿಬ್ಬರೂ ಒಬ್ಬರೊಬ್ಬರಲ್ಲಿ ಎಂದಿಗೂ ದ್ವೇಷವನ್ನು ಹೊಂದದೆ ಇರುವಂತಾಗಲಿ![2] (ಎಂದರ್ಥ). ಶಾಂತಿ ! ಶಾಂತಿ ! ಶಾಂತಿ ! ಎಂದು ಮೂರು ಸಲ ಹೇಳಿರುವದರ ಅರ್ಥವನ್ನು ಹಿಂದೆಯೇ[3] ಹೇಳಿದ್ದಾಗಿರುತ್ತದೆ.

ಛ. ವಕ್ಷ್ಯಮಾಣವಿದ್ಯಾವಿಘ್ನಪ್ರಶಮನಾರ್ಥಾ ಚೇಯಂ ಶಾನ್ತಿಃ । ಅವಿಘ್ನೇನ ಆತ್ಮವಿದ್ಯಾಪ್ರಾಪ್ತಿರಾಶಾಸ್ಯತೇ ತನ್ಮೂಲಂ ಹಿ ಪರಂ ಶ್ರೇಯಃ ಇತಿ ॥

(ಭಾಷ್ಯಾರ್ಥ)

ಮುಂದೆ ಹೇಳಲಾಗುವ ವಿದ್ಯೆಯ ಅಡ್ಡಿಗಳನ್ನು ನಾಶಗೊಳಿಸುವದಕ್ಕೆ ಈ ಶಾಂತಿಯನ್ನು ಹೇಳುತ್ತದೆ. ಯಾವ ಅಡ್ಡಿಯೂ ಇಲ್ಲದೆ ಆತ್ಮವಿದ್ಯೆಯು ದೊರಕಲೆಂದು (ಇಲ್ಲಿ) ಹಾರೈಸಿರುತ್ತದೆ; ಏಕೆಂದರೆ ಹೆಚ್ಚಿನ ಶ್ರೇಯಸ್ಸಿಗೆ ಅದೇ[4] ಕಾರಣವಾಗಿರುತ್ತದೆ.

---

1. "ತೇಜಸ್ವಿನೋಃ ಅಧೀತಂ ತೇಜಸ್ವಿ ಅಸ್ತು" (ತೇಜಸ್ವಿಗಳಾದ ನಮ್ಮಿಬ್ಬರ ಅಧ್ಯಯನವು ತೇಜಸ್ವಿಯಾಗಲಿ !) ಎಂದು ಟೀಕಾಸಮ್ಮತವಾದ ಅನ್ವಯ. ಈ ಶಾಂತಿಗೆ ಕಠೋಪನಿಷತ್ತಿನ ಭಾಷ್ಯದಲ್ಲಿ ಮಾಡಿರುವ ವ್ಯಾಖ್ಯಾನವನ್ನು ನೋಡಿರಿ.

2. ಗುರುವು ಪರಮೇಶ್ವರನಿಗಿಂತ ಬೇರೆಯಲ್ಲ; ಆತನ ಮನಸ್ಸಿಗೆ ಸಮಾಧಾನವುಂಟಾದ ಹೊರತು ವಿದ್ಯೆಯು ಸಫಲವಾಗಲಾರದು. (ತೈ. ವಾ.)

3. ಭಾ. ಭಾ. ೧೩ರಲ್ಲಿ

4. ಬ್ರಹ್ಮವು ನಮ್ಮೆಲ್ಲರ ಆತ್ಮನು ಎಂಬ ವಿದ್ಯೆಯಿಂದಲೇ ಪರಮಶ್ರೇಯಸ್ಸಾಗುವದು. ಆ ವಿದ್ಯೆಗೆ ಅಡ್ಡಿಯಿರುವವರೆಗೆ ನಿಜವಾದ ಮುಕ್ತಿ ಇಲ್ಲ ಆದ್ದರಿಂದ "ಅಪರವಿದ್ಯೆಯಾದ ಉಪಾಸನೆಯನ್ನು ಕೊಟ್ಟು ಬ್ರಹ್ಮವು ನನ್ನನ್ನು ಕಾಪಾಡಿದೆ; ಮುಖ್ಯಮುಕ್ತಿಗೆ ಕಾರಣವಾಗಿರುವ ಪರಬ್ರಹ್ಮವಿದ್ಯೆಯನ್ನು ಎಡರಿಲ್ಲದಂತೆ ಮಾಡಿ ಕಾಪಾಡಲಿ!" ಎಂದು ಇಲ್ಲಿ ಬೇಡಿಕೊಂಡಿದೆ ಎಂದಭಿಪ್ರಾಯ.

# ೧. ಬ್ರಹ್ಮವಿದ್ಯೆಯ ಸಾರ

## ಈ ವಲ್ಲಿಯ ಸಂಬಂಧ

(ಭಾಷ್ಯ)

೯೦. ಸಂಹಿತಾದಿವಿಷಯಾಣಿ ಕರ್ಮಭಿರವಿರುದ್ಧಾನಿ ಉಪಾಸನಾನಿ ಉಕ್ತಾನಿ । ಅನನ್ತರಂ ಚ ಅನ್ತಃ ಸೋಪಾಧಿಕಾತ್ಮದರ್ಶನಮ್ ಉಕ್ತಂ ವ್ಯಾಹೃತಿ ದ್ವಾರೇಣ ಸ್ವಾರಾಜ್ಯಫಲಮ್ । ನ ಚೈತಾವತಾ ಅಶೇಷತಃ ಸಂಸಾರಬೀಜಸ್ಯ ಉಪ ಮರ್ದನಮ್ ಅಸ್ತಿ । ಇತ್ಯತಃ ಅಶೇಷೋಪದ್ರವಬೀಜಸ್ಯ ಅಜ್ಞಾನಸ್ಯ ನಿವೃತ್ತ್ಯ ರ್ಥಮ್ ವಿಧೂತಸರ್ವೋಪಾಧಿವಿಶೇಷಾತ್ಮದರ್ಶನಾರ್ಥಮ್ ಇದಮಾರಭ್ಯತೇ "ಬ್ರಹ್ಮ ವಿದಾಪ್ನೋತಿ ಪರಮ್" ಇತ್ಯಾದಿ ॥

(ಭಾಷ್ಯಾರ್ಥ)

ಸಂಹಿತೆಯೇ ಮುಂತಾದ ವಿಷಯವಾಗಿ ಕರ್ಮಕ್ಕೆ ವಿರುದ್ಧವಲ್ಲದ ಉಪಾಸನೆ ಗಳನ್ನು ಹೇಳಿದ್ದಾಯಿತು. ಆಮೇಲೆ ವ್ಯಾಹೃತಿಗಳ ಮೂಲಕವಾಗಿ ತನ್ನೊಳಗೇ ಉಪಾಧಿಗಳಿಂದೊಡಗೂಡಿದ ಆತ್ಮನನ್ನು (ಧ್ಯಾನಮಾಡಿ) ಸ್ವಾರಾಜ್ಯವೆಂಬ ಫಲ ವನ್ನು (ಪಡೆದುಕೊಳ್ಳುವ) ಉಪಾಸನೆಯನ್ನು ಹೇಳಿದ್ದಾಯಿತು. ಆದರೆ ಇಷ್ಟು ಮಾತ್ರದಿಂದ **ಸಂಸಾರಬೀಜವು**[1] ಒಂದಿಷ್ಟೂ ಉಳಿಯದೆ[2] ನಾಶವಾಗುವದಿಲ್ಲವಾದ್ದ ರಿಂದ ಎಲ್ಲಾ ಕಷ್ಟಗಳಿಗೂ ಕಾರಣವಾಗಿರುವ **ಅಜ್ಞಾನವನ್ನು** ತೊಲಗಿಸುವದಕ್ಕಾಗಿ ಎಲ್ಲಾ ಉಪಾಧಿವಿಶೇಷಗಳನ್ನೂ ಕೊಡವಿಹಾಕಿರುವ ಆತ್ಮನನ್ನು ಕಂಡುಕೊಳ್ಳುವ ಪ್ರಯೋಜನಕ್ಕಾಗಿ[3] ಈ "ಬ್ರಹ್ಮವಿದಾಪ್ನೋತಿ ಪರಮ್" ಮುಂತಾದ (ಗ್ರಂಥಭಾಗ ವನ್ನು) ಪ್ರಾರಂಭಿಸಿರುತ್ತದೆ.

---

1. ಅಜ್ಞಾನವು. ಇದರ ಸ್ವರೂಪವನ್ನು ಇಷ್ಟರಲ್ಲಿಯೇ ವರ್ಣಿಸಲಾಗುವದು.

2. ಬ್ರಹ್ಮಲೋಕಕ್ಕೆ ಹೋಗಿ ಮಹಃ ಎಂಬ ವ್ಯಾಹೃತಿರೂಪನಾದ ಅಪರಬ್ರಹ್ಮವನ್ನು ಪಡೆದುಕೊಂಡರೂ ಸಂಸಾರಬೀಜವು ತೀರ ಹೋಗಿರುವದಿಲ್ಲ. ಅಪರಬ್ರಹ್ಮರೂಪವಾದ ಫಲವು ಒಂದು ಕಲ್ಪದವರೆಗೆ ಇರುವದರಿಂದ ನಿತ್ಯವೆಂದು ಕರೆಯಿಸಿಕೊಳ್ಳುತ್ತದೆಯಾದರೂ ಅದೂ ಅವಿದ್ಯಾಭೂಮಿಯಲ್ಲಿಯೇ ಇರುತ್ತದೆ.

3. ನಿರುಪಾಧಿಕನಾದ ಅದ್ವಿತೀಯಾತ್ಮನೇ ಪರಬ್ರಹ್ಮವು; ಈ ಬ್ರಹ್ಮವನ್ನು ಕಂಡು ಕೊಂಡರೇ ಪರಮಶ್ರೇಯಸ್ಸು ಎಂದು ತಿಳಿಸುವದಕ್ಕಾಗಿ.

# ಅವಿದ್ಯಾನಿವೃತ್ತಿಯೇ ಬ್ರಹ್ಮವಿದ್ಯೆಯ ಪ್ರಯೋಜನ

(ಭಾಷ್ಯ)

೯೧. ಪ್ರಯೋಜನಂ ಚ ಅಸ್ಯಾ ಬ್ರಹ್ಮವಿದ್ಯಾಯಾ ಅವಿದ್ಯಾನಿವೃತ್ತಿಃ, ತತಶ್ಚ ಆತ್ಯನ್ತಿಕಃ ಸಂಸಾರಾಭಾವಃ । ವಕ್ಷ್ಯತಿ ಚ "ವಿದ್ವಾನ್ ನ ಬಿಭೇತಿ ಕುತಶ್ಚನ" (೨-೯) ಇತಿ । ಸಂಸಾರನಿಮಿತ್ತೇ ಚ ಸತಿ "ಅಭಯಂ ಪ್ರತಿಷ್ಠಾಂ[1] ವಿನ್ದತೇ" (೨-೭) ಇತ್ಯನುಪಪನ್ನಮ್। "ಕೃತಾಕೃತೇ ಪುಣ್ಯಪಾಪೇ ನ ತಪತಃ"(೨-೯) ಇತಿ ಚ । ಅತೋಽವಗಮ್ಯತೇ ಅಸ್ಮಾತ್ ವಿಜ್ಞಾನಾತ್ ಸರ್ವಾತ್ಮಬ್ರಹ್ಮವಿಷಯಾತ್ ಆತ್ಯನ್ತಿಕಃ ಸಂಸಾರಾಭಾವಃ ಇತಿ । ಸ್ವಯಮೇವ ಚ ಪ್ರಯೋಜನಮ್ ಆಹ "ಬ್ರಹ್ಮವಿದಾಪ್ನೋತಿ ಪರಮ್" ಇತಿ ಆದಾವೇವ ಸಂಬನ್ಧಪ್ರಯೋಜನಜ್ಞಾಪನಾರ್ಥಮ್ । ನಿಜ್ಞಾತಯೋರ್ಹಿ ಸಮ್ಬನ್ಧಪ್ರಯೋಜನಯೋಃ, ವಿದ್ಯಾಶ್ರವಣಗ್ರಹಣಧಾರಣಾಭ್ಯಾಸಾರ್ಥಂ ಪ್ರವರ್ತತೇ । ಶ್ರವಣಾದಿಪೂರ್ವಕಂ ಹಿ ವಿದ್ಯಾಫಲಮ್ । "ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯಃ" (ಬೃ. ೨-೪-೫) ಇತ್ಯಾದಿಶ್ರುತ್ಯನ್ತರೇಭ್ಯಃ ॥

(ಭಾಷ್ಯಾರ್ಥ)

ಮತ್ತು ಈ ಬಹ್ಮವಿದ್ಯೆಯ **ಪ್ರಯೋಜನವು** ಅವಿದ್ಯಾನಿವೃತ್ತಿಯು, ಮತ್ತು ಅದರಿಂದಾಗುವ ಸಂಪೂರ್ಣವಾದ ಸಂಸಾರಾಭಾವವು.[2] (ಆದ್ದರಿಂದಲೇ) ಮುಂದೆ (ಶ್ರುತಿಯು) "(ಬ್ರಹ್ಮದ ಆನಂದವನ್ನು) ತಿಳಿದವನು ಏತಕ್ಕೂ ಅಂಜುವದಿಲ್ಲ" (೨-೯) ಎಂದು ಹೇಳುವದು. ಸಂಸಾರಕ್ಕೆ ನಿಮಿತ್ತ(ವಾದ[3] ಅಜ್ಞಾನವು) ಇರುತ್ತಿರುವಲ್ಲಿ "ಅಂಜಿಕೆಯಿಲ್ಲದ ನಿಲುಗಡೆಯನ್ನು ಹೊಂದುತ್ತಾನೆ" (೨-೭) ಎಂದೂ 'ಮಾಡಿದ ಮತ್ತು ಮಾಡದೆ ಇರುವ ಪಾಪಪುಣ್ಯಗಳು ತಪಿಸುವದಿಲ್ಲ' (೨-೯)[4] ಎಂದೂ (ಮುಂದೆ ಹೇಳಿರುವದೂ) ಹೊಂದುವಹಾಗಿಲ್ಲ. ಆದ್ದರಿಂದ ಎಲ್ಲರ ಆತ್ಮ

1. ಪ್ರತಿಷ್ಠಾಂ ಚ ಎಂಬ ಅ॥ ಪಾಠಕ್ಕಿಂತ ಈ ವಾ॥ ಪಾಠ ಉತ್ತಮ.

2. ಸಂಸಾರವು ಅವಿದ್ಯೆಯಿಂದ ತೋರುತ್ತಿರುವದರಿಂದ ಅವಿದ್ಯೆಯು ಹೋದರೆ ಅದು ತೀರ ಇಲ್ಲವಾಗುವದು.

3. ಸಂಸಾರಬೀಜವೆಂದರೆ ಸಂಸಾರನಿಮಿತ್ತವೇ ಎಂದು ಸ್ಪಷ್ಟವಾಗಿ ಇಲ್ಲಿ ಹೇಳಿದಂತೆ ಆಯಿತು.

4. ಶ್ರುತಿಯ ಅರ್ಥವನ್ನು ಮಾತ್ರ ಇಲ್ಲಿ ಕೊಟ್ಟಿದೆ. ಅಜ್ಞರಿಗೆ ಆಗುತ್ತಲೇ ಇರುವ ಅಂಜಿಕೆ, ಪಶ್ಚಾತ್ತಾಪ ಮುಂತಾದವು ಆತ್ಮಜ್ಞಾನಿಗೆ ಆಗುವದಿಲ್ಲವೆಂದು ಶ್ರುತಿ ಹೇಳುವದರಿಂದ ಜ್ಞಾನವು ಅಜ್ಞಾನವನ್ನು ತೀರ ತೊಲಗಿಸುತ್ತದೆ ಎಂದು ಸಿದ್ಧವಾಗುತ್ತದೆ.

ನಾಗಿರುವ (ಈ) ಬ್ರಹ್ಮದ ವಿಷಯವಾದ ವಿಜ್ಞಾನದಿಂದ ಸಂಸಾರವು ತೀರ ಇಲ್ಲವಾಗುವದೆಂದು ನಿಶ್ಚಯವಾಗುತ್ತದೆ. "ಬ್ರಹ್ಮವಿದನು ಪರವನ್ನು ಪಡೆದುಕೊಳ್ಳುತ್ತಾನೆ" ಎಂದು (ಬ್ರಹ್ಮವಿದ್ಯೆಯ) ಸಂಬಂಧವನ್ನೂ ಪ್ರಯೋಜನವನ್ನೂ ತಿಳಿಸಿಕೊಡುವದಕ್ಕಾಗಿ ಶ್ರುತಿಯು ತಾನೇ ಪ್ರಯೋಜನವನ್ನು[1] ಮೊದಲೇ ಹೇಳಿರುತ್ತದೆ. ಸಂಬಂಧಪ್ರಯೋಜನಗಳು[2] ತಿಳಿದರೇ ಅಲ್ಲವೆ, ವಿದ್ಯೆಯ ಶ್ರವಣ, ಗ್ರಹಣ, ತನ್ನಲ್ಲಿಟ್ಟುಕೊಳ್ಳುವದು–ಇವುಗಳನ್ನು ಅಭ್ಯಾಸಮಾಡುವದಕ್ಕೆ (ಮುಮುಕ್ಷುವು) ಮುಂದುವರಿಯುತ್ತಾನೆ? ಶ್ರವಣಾದಿಗಳ ಮೂಲಕವೇ ಅಲ್ಲವೆ, ವಿದ್ಯೆಯೆಂಬ ಫಲ(ವುಂಟಾಗುವದು)?[3] "(ಆತ್ಮನನ್ನೇ) ಶ್ರವಣಮಾಡಬೇಕು, ಮನನಮಾಡಬೇಕು, ನಿದಿಧ್ಯಾಸನಮಾಡಬೇಕು" (ಬೃ, ೨-೪-೫) ಮುಂತಾದ ಬೇರೆಯ ಶ್ರುತಿಗಳು ಇದಕ್ಕೆ ಪ್ರಮಾಣವು.

**ಬ್ರಹ್ಮವಿದಾಪ್ನೋತಿ ಪರಮ್ । ತದೇಷಾಭ್ಯುಕ್ತಾ । ಸತ್ಯಂ ಜ್ಞಾನಮನನ್ತಂ ಬ್ರಹ್ಮ । ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ । ಸೋಽಶ್ನುತೇ ಸರ್ವಾನ್ ಕಾಮಾನ್ ಸಹ । ಬ್ರಹ್ಮಣಾ ವಿಪಶ್ಚಿತೇತಿ ॥ ೧ ॥**

೧. ಬ್ರಹ್ಮವಿದನು ಪರವನ್ನು ಪಡೆದುಕೊಳ್ಳುತ್ತಾನೆ. ಅಲ್ಲಿ ಇದು ಹೇಳಲ್ಪಟ್ಟಿರುತ್ತದೆ. ಸತ್ಯವೂ ಜ್ಞಾನವೂ ಅನಂತವೂ (ಆದದ್ದು) ಬ್ರಹ್ಮವು. ಗುಹೆಯಲ್ಲಿ ಪರಮವ್ಯೋಮದಲ್ಲಿ ಇಡಲ್ಪಟ್ಟಿರುವ (ಅದನ್ನು) ಯಾವಾತನು ಅರಿತುಕೊಳ್ಳುವನೋ ಅವನು ಎಲ್ಲಾ ಕಾಮಗಳನ್ನೂ ಒಮ್ಮೆಗೇ ವಿಪಶ್ಚಿತ್ತಾದ ಬ್ರಹ್ಮವಾಗಿ ಪಡೆದುಕೊಳ್ಳುತ್ತಾನೆ.[4]

## ಈ ವಲ್ಲಿಯ ಸೂತ್ರವಾಕ್ಯ

(ಭಾಷ್ಯ)

೬೨. ಬ್ರಹ್ಮವಿತ್ । ಬ್ರಹ್ಮ ಇತಿ ವಕ್ಷ್ಯಮಾಣಲಕ್ಷಣಮ್ ಬೃಹತ್ತಮ

---

1. ಅಜ್ಞಾನವು ಹೋಗುವದರಮೂಲಕ ಸಂಸಾರನಾಶವಾಗುವದೆಂಬ ಪ್ರಯೋಜನವನ್ನು.

2. ಸಂಬಂಧಪ್ರಯೋಜನಗಳಿರುವ ಗ್ರಂಥವನ್ನೇ ಶ್ರೋತೃಗಳು ಶ್ರವಣಮಾಡುದದಕ್ಕೆ ತೊಡಗುತ್ತಾರೆ ಎಂದು ಶ್ಲೋಕವಾರ್ತಿಕಕಾರರು ಹೇಳುತ್ತಾರೆ.

3. ಶ್ರವಣಾದಿಗಳೇ ಆತ್ಮಜ್ಞಾನಕ್ಕೆ ನೇರಾದ ಕಾರಣವೆಂದು ಶ್ರುತಿಯಲ್ಲಿದೆ; ಆತ್ಮಜ್ಞಾನದಿಂದಾಗುವ ಪ್ರಯೋಜನವನ್ನು ತಿಳಿದಹೊರತು ಶ್ರವಣದಲ್ಲಿ ಯಾರೂ ತೊಡಗಲಾರರು.

4. ಈ ವಲ್ಲಿಯಲ್ಲಿರುವ ಅನುವಾಕಗಳನ್ನು ಅರ್ಥಕ್ಕನುಸಾರವಾಗಿ ಖಂಡಗಳಾಗಿ ಒಡೆದುಕೊಂಡಿದೆ. ಅನುವಾಕಸಂಖ್ಯೆಗಳನ್ನು ಮಾತ್ರ ವೈದಿಕಪಾಠದಂತೆಯೇ ಕೊಟ್ಟಿದೆ.

ತ್ವಾತ್ ಬ್ರಹ್ಮ । ತದ್‌ವೇತ್ತಿ ವಿಜಾನಾತಿ ಇತಿ ಬ್ರಹ್ಮವಿತ್ । ಆಪ್ನೋತಿ ಪ್ರಾಪ್ನೋತಿ ಪರಂ ನಿರತಿಶಯಂ ತದೇವ ಬ್ರಹ್ಮ ಪರಮ್ । ನ ಹಿ ಅನ್ಯಸ್ಯ ವಿಜ್ಞಾನಾತ್ ಅನ್ಯಸ್ಯ ಪ್ರಾಪ್ತಿಃ । ಸ್ಪಷ್ಟಂ ಚ ಶ್ರುತ್ಯನ್ತರಂ ಬ್ರಹ್ಮಪ್ರಾಪ್ತಿಮೇವ ಬ್ರಹ್ಮವಿದೋ ದರ್ಶಯತಿ "ಸ ಯೋ ಹ ವೈ ತತ್ ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ" (ಮುಂ. ೩-೨-೯) ಇತ್ಯಾದಿ ॥

(ಭಾಷ್ಯಾರ್ಥ)

ಬ್ರಹ್ಮವಿತ್ ಎಂಬಲ್ಲಿ ಬ್ರಹ್ಮ ಎಂದರೆ ಮುಂದೆ ಹೇಳುವ ಲಕ್ಷಣವುಳ್ಳದ್ದು.[1] ಅತ್ಯಂತವಾಗಿ ದೊಡ್ಡದಾಗಿರುವದರಿಂದ (ಅದು) ಬ್ರಹ್ಮ(ವೆನಿಸುತ್ತದೆ). ಅದನ್ನು ಅರಿತಿರುತ್ತಾನೆ; ತಿಳಿದುಕೊಂಡಿರುತ್ತಾನೆ; ಆದ್ದರಿಂದ (ಅವನಿಗೆ) ಬ್ರಹ್ಮವಿತ್ (ಎಂದು ಹೆಸರು. ಅವನು) ಪರಂ ಎಂದರೆ ಮಿಗಿಲಿಲ್ಲದ್ದನ್ನು ಪಡೆದುಕೊಳ್ಳುತ್ತಾನೆ. (ಇಲ್ಲಿ) ಅದೇ ಬ್ರಹ್ಮ(ವನ್ನೇ) ಪರವೆಂದು (ಕರೆದಿದೆ); ಏಕೆಂದರೆ ಒಂದರ ಜ್ಞಾನದಿಂದ ಇನ್ನೊಂದರ ಪ್ರಾಪ್ತಿಯಾಗಲಾರದು.[2] ಬೇರೊಂದು ಶ್ರುತಿಯಲ್ಲಿ ಬ್ರಹ್ಮವನ್ನರಿತವನಿಗೆ ಬ್ರಹ್ಮಪ್ರಾಪ್ತಿಯೇ (ಫಲವೆಂದು) "ಯಾವನಾದರೆ ಆ ಪರಮ ಬ್ರಹ್ಮವನ್ನು ತಿಳಿದುಕೊಳ್ಳುತ್ತಾನೆಯೋ ಅವನು ಬ್ರಹ್ಮವೇ ಆಗುತ್ತಾನೆ" (ಮು. ೩-೨-೯) ಎಂದು ಮುಂತಾದ (ವಾಕ್ಯದಿಂದ) ಸ್ಪಷ್ಟವಾಗಿ (ತಿಳಿಸಿಯೂ ಇರುತ್ತದೆ).

## ಬ್ರಹ್ಮದ ಪ್ರಾಪ್ತಿಯೆಂಬುದು ಗೌಣ

(ಭಾಷ್ಯ)

೯೩. ನನು ಸರ್ವಗತಂ ಸರ್ವಸ್ಯಚಾತ್ಮಭೂತಂ[3] ಬ್ರಹ್ಮ ವಕ್ಷ್ಯತಿ । ಅತೋ ನಾಪ್ಯಮ್ । ಪ್ರಾಪ್ತಿಶ್ಚ ಅನ್ಯಸ್ಯಾನ್ಯೇನ ಪರಿಚ್ಛಿನ್ನಸ್ಯ ಚ ಪರಿಚ್ಛಿನ್ನೇನ ದೃಷ್ಟಾ । ಅಪರಿಚ್ಛಿನ್ನಂ ಸರ್ವಾತ್ಮಕಂ ಚ ಬ್ರಹ್ಮ[4] ಇತ್ಯತಃ ಪರಿಚ್ಛಿನ್ನವತ್ ಅನಾತ್ಮವಚ್ಚ ತಸ್ಯಾಪ್ತಿಃ ಅನುಪಪನ್ನಾ । ನಾಯಂ ದೋಷಃ । ಕಥಮ್ ? ದರ್ಶನಾದರ್ಶನಾಪೇಕ್ಷ

---

1. ಸತ್ಯ, ಜ್ಞಾನ, ಅನಂತ—ಎಂಬ ಲಕ್ಷಣವುಳ್ಳದ್ದು.

2. ಬ್ರಹ್ಮವು ವೇದ್ಯ, ಬ್ರಹ್ಮವಿದ್ಯೆಯು ಸಾಧನ, ಬ್ರಹ್ಮವೇತ್ತನು ಆತ್ಮ, ಪರಪ್ರಾಪ್ತಿಯು ವೇದನದ ಫಲ—ಎಂದು ಅಕ್ಷರಾರ್ಥವಾಗುತ್ತದೆ. ಆದರೆ ಬ್ರಹ್ಮವೂ ಪರವೂ ಬೇರೆ ಎಂದಾದರೆ ಒಂದನ್ನು ತಿಳಿದದ್ದರಿಂದ ಮತ್ತೊಂದು ಪ್ರಾಪ್ತವಾಗುವದು ಎಂಬ ಅಯುಕ್ತವಾದ ಹೇಳಿಕೆಯು ವೇದಾರ್ಥವಾಗುತ್ತದೆ.

3. 'ಸರ್ವಸ್ಯಾತ್ಮಭೂತಂ' ಎಂಬ ಆ॥ ಪಾಠಕ್ಕಿಂತ ಈ ವಾ॥ ಪಾಠವು ಮೇಲು.

4. "ಯದ್‌ಬ್ರಹ್ಮ" ಎಂಬ ಕಾ॥ ಪಾಠದಲ್ಲಿ ಯದ್ ಹೆಚ್ಚು.

ತ್ವಾತ್ ಬ್ರಹ್ಮಣ ಆಪ್ತ್ಯನಾಪ್ತ್ಯೋಃ । ಪರಮಾರ್ಥತೋ ಬ್ರಹ್ಮರೂಪಸ್ಯಾಪಿ ಸತಃ ಅಸ್ಯ ಜೀವಸ್ಯ ಭೂತಮಾತ್ರಾಕೃತಬಾಹ್ಯಪರಿಚ್ಛಿನ್ನಾನ್ನಮಯಾದ್ಯಾತ್ಮದರ್ಶಿನಃ, ತದಾಸಕ್ತಚೇತಸಃ, ಪ್ರಕೃತಸಂಖ್ಯಾಪೂರಣಸ್ಯ ಆತ್ಮನೋಽವ್ಯವಹಿತಸ್ಯಾಪಿ ಬಾಹ್ಯ ಸಂಖ್ಯೇಯವಿಷಯಾಸಕ್ತಚಿತ್ತತಯಾ ಸ್ವರೂಪಾಭಾವದರ್ಶನವತ್, ಪರಮಾರ್ಥ ಬ್ರಹ್ಮಸ್ವರೂಪಾಭಾವದರ್ಶನಲಕ್ಷಣಯಾ ಅವಿದ್ಯಯಾ ಅನ್ನಮಯಾದೀನ್ ಬಾಹ್ಯಾನ್ ಅನಾತ್ಮನಃ ಆತ್ಮತ್ವೇನ ಪ್ರತಿಪನ್ನತ್ವಾತ್, ಅನ್ನಮಯಾದ್ಯನಾತ್ಮಭ್ಯೋ "ನಾನ್ಯೋಽಹಮಸ್ಮಿ" ಇತ್ಯಭಿಮನ್ಯತೇ । ಏವಮ್ ಅವಿದ್ಯಯಾ ಆತ್ಮಭೂತಮಪಿ ಬ್ರಹ್ಮ ಅನಾಪ್ತಂ ಸ್ಯಾತ್ । ತಸ್ಯ ಏವಮವಿದ್ಯಯಾ ಅನಾಪ್ತಬ್ರಹ್ಮಸ್ವರೂಪಸ್ಯ, ಆತ್ಮನೋಽವಿದ್ಯಯಾ ಅನಾಪ್ತಸ್ಯ ಸತಃ ಕೇನಚಿತ್ ಸ್ಮಾರಿತಸ್ಯ ಪುನಸ್ತಸ್ಯೈವ ವಿದ್ಯಯಾ ಆಪ್ತಿರ್ಯಥಾ, ತಥಾ ಶ್ರುತ್ಯುಪದಿಷ್ಟಸ್ಯ ಸರ್ವಾತ್ಮಬ್ರಹ್ಮಣಃ ಆತ್ಮತ್ವದರ್ಶನೇನ ವಿದ್ಯಯಾ ತದಾಪ್ತಿರುಪಪದ್ಯತೇ ಏವ ॥

(ಭಾಷ್ಯಾರ್ಥ)

(ಆಕ್ಷೇಪ) :—ಬ್ರಹ್ಮವು ಎಲ್ಲೆಲ್ಲಿಯೂ ಇರುವದೆಂದೂ ಎಲ್ಲರಿಗೂ ಆತ್ಮನೆಂದೂ (ಶ್ರುತಿಯು) ಮುಂದೆ ಹೇಳುತ್ತದೆ. ಆದ್ದರಿಂದ (ಅದು) ಆಪ್ಯವಲ್ಲ. ಒಬ್ಬನನ್ನು (ಅಥವಾ ಒಂದನ್ನು) ಮತ್ತೊಬ್ಬನು (ಅಥವಾ), ಒಂದು ಅಳತೆಗೆ ಸಿಕ್ಕಿರುವ ವಸ್ತುವನ್ನು ಇನ್ನೊಂದು ಅಳತೆಗೆ ಸಿಕ್ಕಿರುವ ವಸ್ತು, ಪಡೆಯುವದೆಂಬುದು ಕಂಡಿರುತ್ತದೆ. ಆದರೆ ಬ್ರಹ್ಮವು ಅಳತೆಗೆ ಸಿಕ್ಕದೆ ಇರುವದು, ಮತ್ತು ಎಲ್ಲದರ ಆತ್ಮನಾಗಿಯೂ ಇರುವದು, ಹೀಗಿರುವದರಿಂದ ಅದು ಅಳತೆಗೆ ಸಿಕ್ಕಿರುವದೋ ಎಂಬಂತೆ, ಮತ್ತು ಅದು ತನಗಿಂತ ಬೇರೆಯೋ ಎಂಬಂತೆ, ಅದನ್ನು ಪಡೆಯುವದೆಂಬುದು ಹೊಂದುವದಿಲ್ಲವಲ್ಲ!

(ಪರಿಹಾರ) :—ಇದೇನೂ ತಪ್ಪಲ್ಲ. ಹೇಗೆಂದರೆ ಬ್ರಹ್ಮವನ್ನು ಪಡೆಯುವದು ಅಥವಾ ಪಡೆಯದಿರುವದು–ಇವುಗಳು ದರ್ಶನ ಅಥವಾ ಅದರ್ಶನ ಇವುಗಳನ್ನು ಅವಲಂಬಿಸಿರುತ್ತವೆ. ನಿಜವಾಗಿ ಈ ಜೀವನು ಬ್ರಹ್ಮರೂಪನೇ ಆಗಿರುತ್ತಿದ್ದರೂ ಭೂತಮಾತ್ರೆಗಳಿಂದ[1] ಆಗಿರುವ ಹೊರಗಿನ ಪರಿಚ್ಛಿನ್ನವಾದ ಅನ್ನಮಯಕೋಶವೇ ಮುಂತಾದ ತಾನೆಂದು ತಿಳಿದುಕೊಂಡು ಅವುಗಳಲ್ಲಿ ಆಸಕ್ತಿಯುಳ್ಳ ಚಿತ್ತವುಳ್ಳವನಾಗಿ, **ಪ್ರಕೃತ ಸಂಖ್ಯೆಯನ್ನು ಪೂರಣಮಾಡುವ**[2] **ತಾನು (ತನಗೆ)**

---

1. ಭೂತಾವಯವಗಳಿಂದ; ಅನ್ನಮಯಾದಿಗಳು ಭೌತಿಕವೆಂದು ತಿಳಿಸುವದಕ್ಕಾಗಿ ಈ ವಿಶೇಷಣ.

2. ಹತ್ತೆಂಬ ಸಂಖ್ಯೆಯನ್ನು ಪೂರಣಮಾಡುವ ಎಂದರೆ ಹತ್ತನೆಯವನಾದ.

**ನಡುವೆ ಏನೇನೂ ಇಲ್ಲದೆ ಇದ್ದರೂ ಹೊರಗಿನ ಎಣಿಸಬೇಕಾದ ವಿಷಯಗಳಲ್ಲಿ**[1] **ಆಸಕ್ತಿಯುಳ್ಳ ಚಿತ್ತವುಳ್ಳವನಾಗಿರುವದರಿಂದ ತಾನೇ ಇಲ್ಲವೆಂದು ಅರಿಯುವಂತೆ,** ಪರಮಾರ್ಥವಾದ ಬ್ರಹ್ಮಸ್ವರೂಪವೇ ಇಲ್ಲವೆಂದು ಭಾವಿಸುವ **ಅವಿದ್ಯೆಯಿಂದ** ಅನ್ನಮಯವೇ ಮುಂತಾದ ಹೊರಗಿನ ಅನಾತ್ಮಗಳನ್ನು ಆತ್ಮನೆಂದು ಭಾವಿಸಿಕೊಂಡಿರುವದರಿಂದ ಅನ್ನಮಯವೇ ಮುಂತಾದ ಅನಾತ್ಮಗಳಿಗಿಂತ ನಾನು ಬೇರೆಯಲ್ಲ ಎಂದು (ಅವುಗಳಲ್ಲಿ) ಅಭಿಮಾನಪಡುತ್ತಿರುವನು. **ಹೀಗೆ ತನ್ನ ಸ್ವರೂಪವೇ ಆಗಿರುವದಾದರೂ ಬ್ರಹ್ಮವು ಅವಿದ್ಯೆಯಿಂದ ಪಡೆಯಲ್ಪಡದ್ದಾಗುವದು.** ಹೀಗೆ ಅವಿದ್ಯೆಯಿಂದ ಬ್ರಹ್ಮಸ್ವರೂಪವನ್ನು ಪಡೆಯದೆ ಇರುವ ಆತನು, ಪ್ರಕೃತಸಂಖ್ಯೆಯನ್ನು ಪೂರಣಮಾಡುವ ತಾನೇ ಅವಿದ್ಯೆಯಿಂದ ಅಪ್ರಾಪ್ತನಾಗಿದ್ದು ಯಾರೋ ನೆನಪಿಗೆ ತಂದುಕೊಟ್ಟಾಗ ಮತ್ತೆ ಅವನೇ ಹೇಗೆ ವಿದ್ಯೆಯಿಂದ ಆಪ್ತನಾಗುವನೋ[2] ಹಾಗೆ ಶ್ರುತಿಯಲ್ಲಿ ಉಪದೇಶಮಾಡಿರುವ ಎಲ್ಲರ ಆತ್ಮನಾದ ಬ್ರಹ್ಮವನ್ನು ತನ್ನ (ಸ್ವರೂಪ)ವೆಂದು ಕಂಡುಕೊಳ್ಳುವದರಿಂದ ವಿದ್ಯೆಯಿಂದ ಅದನ್ನು ಪಡೆ(ದಂತೆ ಆಗು)ವದು ಯುಕ್ತವಾಗಿಯೇ ಇದೆ.

## ಸೂತ್ರವಾಕ್ಯದ ವಿವರಣೆಯು ಖುಕ್ಕು ಏತಕ್ಕೆ ?

(ಭಾಷ್ಯ)

೯೪. "ಬ್ರಹ್ಮವಿದಾಪ್ನೋತಿ ಪರಮ್" ಇತಿ ವಾಕ್ಯಂ ಸೂತ್ರಭೂತಂ ಸರ್ವಸ್ಯ ವಲ್ಲ್ಯರ್ಥಸ್ಯ । ಬ್ರಹ್ಮವಿದಾಪ್ನೋತಿ ಪರಮ್ ಇತ್ಯನೇನ ವಾಕ್ಯೇನ ವೇದ್ಯತಯಾ ಸೂತ್ರಿತಸ್ಯ ಬ್ರಹ್ಮಣಃ ಅನಿರ್ಧಾರಿತಸ್ವರೂಪವಿಶೇಷಸ್ಯ ಸರ್ವತೋ ವ್ಯಾವೃತ್ತಸ್ವರೂಪವಿಶೇಷಸಮರ್ಪಣಸಮರ್ಥಸ್ಯ ಲಕ್ಷಣಸ್ಯ ಅಭಿಧಾನೇನ ಸ್ವರೂಪನಿರ್ಧಾರಣಾಯ, ಅವಿಶೇಷೇಣ ಚ ಉಕ್ತವೇದನಸ್ಯ ಬ್ರಹ್ಮಣೋ ವಕ್ಷ್ಯಮಾಣಲಕ್ಷಣಸ್ಯ

---

1. ಒಂಬತ್ತು ಜನರಲ್ಲಿ,

2. ಹತ್ತು ಜನ ದಾರಿಹೋಕರು ನದಿಯನ್ನು ದಾಟಿದಬಳಿಕ ತಾವೆಲ್ಲರೂ ಈಚೆಯ ದಡಕ್ಕೆ ಬಂದೆವೋ ಇಲ್ಲವೋ ಎಂದು ನೋಡುವದಕ್ಕೆ ಹೊರಟು ಒಬ್ಬೊಬ್ಬನೂ ತನ್ನನ್ನು ಬಿಟ್ಟು ಮಿಕ್ಕವರನ್ನೇ ಎಣಿಸುತ್ತಾ ಬಂದದ್ದರಿಂದ ಹತ್ತನೆಯವನೊಬ್ಬನು ನದಿಯಲ್ಲಿ ಮುಳುಗಿ ಹೋಗಿರಬೇಕೆಂದು ಭಾವಿಸಿಕೊಂಡು ದುಃಖಪಡುತ್ತಿದ್ದರಂತೆ. ಆಗ ಅಲ್ಲಿಗೆ ಒಬ್ಬ ವಿವೇಕಿಯು ನೀನೇ ಹತ್ತನೆಯವನು ಎಂದು ಅವರಲ್ಲಿ ಎಲ್ಲರಿಗೂ ತಿಳಿಸಿ ಅವರ ಮೂಢತನವನ್ನು ತೊಲಗಿಸಿದನಂತೆ. ಶ್ರುತಿವಾಕ್ಯದಿಂದ ಆಗುವ ಬ್ರಹ್ಮಾತ್ಮತ್ವಪ್ರಾಪ್ತಿಯು ಇಂಥದ್ದೇ ಎಂದು ಭಾವ. ಮುಂ.ಭಾ. ೧-೧-೫ 'ಅಧಿಗಮ್ಯತೇ' ಎಂಬುದರ ವ್ಯಾಖ್ಯಾನವನ್ನು ನೋಡಿ.

ವಿಶೇಷೇಣ ಪ್ರತ್ಯಗಾತ್ಮತಯಾ ಅನನ್ಯರೂಪೇಣ ವಿಜ್ಞೇಯತ್ವಾಯ, ಬ್ರಹ್ಮವಿದ್ಯಾ ಫಲಂ ಚ ಬ್ರಹ್ಮವಿದೋ ಯತ್ ಪರಬ್ರಹ್ಮಪ್ರಾಪ್ತಿಲಕ್ಷಣಮುಕ್ತಮ್, ಸ ಸರ್ವಾತ್ಮ ಭಾವಃ ಸರ್ವಸಂಸಾರಧರ್ಮಾತೀತಬ್ರಹ್ಮಸ್ವರೂಪತ್ವಮೇವ ನಾನ್ಯತ್ ಇತ್ಯೇ ತತ್ಪ್ರದರ್ಶನಾಯ ಚ ಏಷಾ ಋಗುದಾಹ್ರಿಯತೇ "ತದೇಷಾಭ್ಯುಕ್ತಾ" ಇತಿ ||

(ಭಾಷ್ಯಾರ್ಥ)

"ಬ್ರಹ್ಮವಿದಾಪ್ನೋತಿ ಪರಮ್" (ಬ್ರಹ್ಮವಿದನು ಪರವನ್ನು ಪಡೆದುಕೊಳ್ಳು ತ್ತಾನೆ) ಎಂಬ ವಾಕ್ಯವು (ಈ) ವಲ್ಲಿಯ[1] ಅರ್ಥಕ್ಕೆಲ್ಲ ಸೂತ್ರವಾಗಿರುತ್ತದೆ. ಬ್ರಹ್ಮವಿದನು ಪರವನ್ನು ಪಡೆದುಕೊಳ್ಳುತ್ತಾನೆ ಎಂಬೀ ವಾಕ್ಯದಿಂದ ಅರಿತುಕೊಳ್ಳ ಬೇಕೆಂದು ಸೂತ್ರದಲ್ಲಿ ಹೇಳಿರುವ ಬ್ರಹ್ಮದ ಸ್ವರೂಪವು ಇಂಥದ್ದು ಎಂದು ಗೊತ್ತಾಗಿ ಹೇಳದೆ ಇರುವದರಿಂದ ಅದಕ್ಕೆ ಮತ್ತೆಲ್ಲದಕ್ಕಿಂತಲೂ ಬೇರೆಯಾಗಿರುವ ಗೊತ್ತಾದ ಸ್ವರೂಪವನ್ನು ತಿಳಿಸಿಕೊಡುವ ಲಕ್ಷಣವನ್ನು ಹೇಳಿ (ಅದರ) ಸ್ವರೂಪ ವನ್ನು ಗೊತ್ತುಪಡಿಸುವದಕ್ಕಾಗಿಯೂ, ಬ್ರಹ್ಮವನ್ನು ಅರಿತುಕೊಳ್ಳಬೇಕೆಂದು ಸಾಮಾನ್ಯವಾಗಿ ಹೇಳಿರುವ ಮುಂದೆ ಹೇಳುವ ಲಕ್ಷಣದ ಬ್ರಹ್ಮವನ್ನು ವಿಶೇಷವಾಗಿ ಎಂದರೆ ನಮ್ಮೊಳಗಿನ ಆತ್ಮನೇ, (ನಮಗಿಂತ) ಬೇರೆಯಲ್ಲ ಎಂದು ಅರಿತುಕೊಳ್ಳ ಬೇಕೆಂದು (ತಿಳಿಸುವ)ದಕ್ಕಾಗಿಯೂ, ಮತ್ತು ಬ್ರಹ್ಮವಿದ್ಯೆಯ ಫಲವು ಬ್ರಹ್ಮಜ್ಞಾನಿಗೆ ಆಗುವ ಪರಬ್ರಹ್ಮಪ್ರಾಪ್ತಿರೂಪವೆಂದು ಯಾವದನ್ನು ಹೇಳಲಾಯಿತೋ ಆ ಸರ್ವಾತ್ಮ ಭಾವವೆಂಬುದು ಯಾವ ಸಂಸಾರಧರ್ಮವೂ ಇಲ್ಲದ ಬ್ರಹ್ಮಸ್ವರೂಪವನ್ನು (ಪಡೆದು ಕೊಳ್ಳುವದೇ ಹೊರತು) ಮತ್ತೇನೂ ಅಲ್ಲ ಎಂಬುದನ್ನು ತಿಳಿಸುವದಕ್ಕಾಗಿಯೂ, "ತದೇಷಾಭ್ಯುಕ್ತಾ" ಎಂಬ ಈ ಋಕ್ಕನ್ನು ಉದಾಹರಿಸಲಾಗುವದು[2]:—

## ಬ್ರಹ್ಮದ ಲಕ್ಷಣ

(ಭಾಷ್ಯ)

೯೫. ತತ್ ತಸ್ಮಿನ್ನೇವ ಬ್ರಾಹ್ಮಣವಾಕ್ಯೋಕ್ತೇ ಅರ್ಥೇ ಏಷಾ ಋಕ್ ಅಭ್ಯುಕ್ತಾ ಆಮ್ನಾತಾ । "ಸತ್ಯಂ ಜ್ಞಾನಮನನ್ತಂ ಬ್ರಹ್ಮ" ಇತಿ ಬ್ರಹ್ಮಣೋ ಲಕ್ಷ

1. ಈ ವಲ್ಲಿಗೆ ಬ್ರಹ್ಮವಲ್ಲಿ, ಆನಂದವಲ್ಲಿ, ಬ್ರಹ್ಮಾನಂದವಲ್ಲಿ ಎಂದು ಬೇರೆ ಬೇರೆಯ ಹೆಸರುಗಳಿವೆ; ಭಾಷ್ಯಾನುಸಾರವಾಗಿ ನಾವು ಆನಂದವಲ್ಲಿ ಎಂದೇ ಕರೆದಿರುತ್ತೇವೆ.

2. ಬ್ರಹ್ಮ ವಿದ್ ಆಪ್ನೋತಿ ಪರಮ್ ಎಂಬ ನಾಲ್ಕು ಮಾತುಗಳಲ್ಲಿ ಬ್ರಹ್ಮ ಎಂದರೆ ಲಕ್ಷಣವಾಕ್ಯದಲ್ಲಿ ಹೇಳಿರುವಂತೆ ಸತ್ಯಜ್ಞಾನಾನಂತಸ್ವರೂಪವಾದದ್ದು; ವೇದನ ಎಂದರೆ ತನ್ನ ಆತ್ಮನೇ ಎಂದು ಅರಿತುಕೊಳ್ಳುವದು; ಪರಮ್ ಆಪ್ನೋತಿ ಎಂದರೆ ಸರ್ವಾತ್ಮವಾದ ಬ್ರಹ್ಮ ಸ್ವರೂಪನೇ ಆಗುವದು ಎಂಬ ವಿವರವನ್ನು ಋಕ್ಕಿನಲ್ಲಿ ಕೊಟ್ಟಿದೆ ಎಂದು ಅಭಿಪ್ರಾಯ.

ಣಾರ್ಥಂ ವಾಕ್ಯಮ್ । ಸತ್ಯಾದೀನಿ ಹಿ ತ್ರೀಣಿ ವಿಶೇಷಣಾರ್ಥಾನಿ ಪದಾನಿ ವಿಶೇಷ್ಯಸ್ಯ ಬ್ರಹ್ಮಣಃ । ವಿಶೇಷ್ಯಂ ಬ್ರಹ್ಮ । ವಿವಕ್ಷಿತತ್ವಾದ್ ವೇದ್ಯತಯಾ । ವಿಶೇಷಣವಿಶೇಷ್ಯತ್ವಾದೇವ ಸತ್ಯಾದೀನಿ ಏಕವಿಭಕ್ತ್ಯನ್ತಾನಿ ಪದಾನಿ ಸಮಾನಾಧಿಕರಣಾನಿ । ಸತ್ಯಾದಿಭಿಸ್ತ್ರಿಭಿರ್ವಿಶೇಷ್ಯಮಾಣಂ ಬ್ರಹ್ಮ ವಿಶೇಷ್ಯಾನ್ತರೇಭ್ಯೋ ನಿರ್ಧಾರ್ಯತೇ । ಏವಂ ಹಿ ತಜ್ಜ್ಞಾತಂ ಭವತಿ ಯದನ್ಯೇಭ್ಯೋ ನಿರ್ಧಾರಿತಮ್ ಯಥಾ ಲೋಕೇ ನೀಲಂ ಮಹತ್ ಸುಗನ್ಧಿ ಉತ್ಪಲಮ್ ಇತಿ ॥

(ಭಾಷ್ಯಾರ್ಥ)

ಅಲ್ಲಿ ಎಂದರೆ ಅದೇ ಬ್ರಾಹ್ಮಣವಾಕ್ಯೋಕ್ತವಾದ ವಿಷಯದಲ್ಲಿ ಈ ಋಕ್ಕು ಹೇಳಲ್ಪಟ್ಟಿರುವದು ಎಂದರೆ ಪಠಿಸಲ್ಪಟ್ಟಿರುವದು. "ಸತ್ಯಂ ಜ್ಞಾನಮನನ್ತಂ ಬ್ರಹ್ಮ" ಎಂಬುದು ಬ್ರಹ್ಮದ ಲಕ್ಷಣಕ್ಕಾಗಿ ಕೊಟ್ಟಿರುವ ವಾಕ್ಯವು. ಏಕೆಂದರೆ ಸತ್ಯವೇ ಮುಂತಾದ ಮೂರು ಪದಗಳು ವಿಶೇಷ್ಯವಾದ ಬ್ರಹ್ಮದ ವಿಶೇಷಣವನ್ನು (ತಿಳಿಸುವ)ದಕ್ಕಾಗಿ (ಬಂದಿರುತ್ತವೆ). ಬ್ರಹ್ಮವು ವಿಶೇಷ್ಯವು, ಏಕೆಂದರೆ ಅದನ್ನೇ ಅರಿಯತಕ್ಕದ್ದೆಂದು ಹೇಳುವದರಲ್ಲಿ (ಶ್ರುತಿಯ) ತಾತ್ಪರ್ಯವಿರುತ್ತದೆ. (ಹೀಗೆ) ವಿಶೇಷಣವಿಶೇಷ್ಯಭಾವವಿರುವದರಿಂದಲೇ ಸತ್ಯವೇ ಮುಂತಾದ ಪದಗಳು ಒಂದೇ ವಿಭಕ್ತ್ಯಂತವಾಗಿದ್ದುಕೊಂಡು ಸಮಾನಾಧಿಕರಣವಾಗಿರುತ್ತವೆ.[1] ಸತ್ಯವೇ ಮುಂತಾದ ಮೂರು ವಿಶೇಷಣಗಳಿಂದ ವಿಶೇಷಿಸಲ್ಪಡುವದರಿಂದ ಬ್ರಹ್ಮವನ್ನು ಬೇರೆಯ ವಿಶೇಷ್ಯಗಳಿಂದ (ಬೇರ್ಪಡಿಸಿ) ಗೊತ್ತುಪಡಿಸಿ(ದಂತೆ ಆಗಿ)ರುತ್ತದೆ. ಹೀಗೆಯೇ ಅಲ್ಲವೆ, ಯಾವದನ್ನು ಮಿಕ್ಕ (ವಿಶೇಷ್ಯಗಳಿಂದ ಬೇರ್ಪಡಿಸಿ) ನಿಶ್ಚಯಿಸಿದೆಯೋ ಅದರ ಜ್ಞಾನವುಂಟಾಗುವದು ?[2] ಉದಾಹರಣೆಗೆ ನೀಲವೂ ದೊಡ್ಡದೂ ಸುವಾಸನೆಯುಳ್ಳದ್ದೂ (ಆಗಿರುವದು) ಉತ್ಪಲವು ಎಂಬ ಲೌಕಿಕವಾಕ್ಯದಲ್ಲಿ (ಹೀಗೆ ವಸ್ತುಜ್ಞಾನವಾಗುತ್ತದೆ).

## ಲಕ್ಷ್ಯಲಕ್ಷಣಭಾವದ ಸ್ವರೂಪ

(ಭಾಷ್ಯ)

೯೬. ನನು ವಿಶೇಷ್ಯಂ ವಿಶೇಷಣಾನ್ತರಂ ವ್ಯಭಿಚರದ್ ವಿಶೇಷ್ಯತೇ । ಯಥಾ ನೀಲಂ ರಕ್ತಂ ಚೋತ್ಪಲಮ್ ಇತಿ । ಯದಾ ಹಿ ಅನೇಕಾನಿ ದ್ರವ್ಯಾಣಿ ಏಕಜಾತೀಯಾನಿ ಅನೇಕವಿಶೇಷಣಯೋಗೀನಿ ಚ ತದಾ ವಿಶೇಷಣಸ್ಯ ಅರ್ಥ

---

1. ಒಂದು ಪದಾರ್ಥವನ್ನು ಆಶ್ರಯಿಸಿ ಅದನ್ನು ಹೇಳುವದಕ್ಕೆ ಹೊರಟವಾಗಿವೆ.

2. "ತಜ್ಜ್ಞಾತಂ ಭವತಿ" ಎಂಬ ವಾ॥ಕಾ॥ ಪಾಠದಲ್ಲಿ ಅದು ಜ್ಞಾತವಾಗುತ್ತದೆ, ಅರಿಯಲ್ಪಡುತ್ತದೆ ಎಂದು ಕನ್ನಡಿಸಬೇಕಾಗುವದು.

ವತ್ತ್ವಮ್ । ನ ಹಿ (ತು?) ಏಕಸ್ಮಿನ್ನೇವ ವಸ್ತುನಿ । ವಿಶೇಷಣಾನ್ತರಾಯೋಗಾತ್। ಯಥಾ 'ಅಸಾವೇಕ ಆದಿತ್ಯಃ' ಇತಿ । ತಥಾ ಏಕಮೇವ ಬ್ರಹ್ಮ ನ ಬ್ರಹ್ಮಾನ್ತರಾಣಿ ಯೇಭ್ಯೋ ವಿಶೇಷ್ಯೇತ ನೀಲೋತ್ಪಲವತ್ । ನ । ಲಕ್ಷಣಾರ್ಥತ್ವಾದ್ ವಿಶೇಷಣಾನಾಮ್ । ನಾಯಂ ದೋಷಃ । ಕಸ್ಮಾತ್? ಯಸ್ಮಾತ್ ಲಕ್ಷಣಾರ್ಥಪ್ರಧಾನಾನಿ ವಿಶೇಷಣಾನಿ ನ ವಿಶೇಷಣಪ್ರಧಾನಾನ್ಯೇವ । ಕಃ ಪುನರ್ಲಕ್ಷಣಲಕ್ಷ್ಯಯೋರ್ವಿಶೇಷಣ ವಿಶೇಷ್ಯಯೋರ್ವಾ ವಿಶೇಷಃ ಇತಿ? ಉಚ್ಯತೇ ಸಮಾನಜಾತೀಯೇಭ್ಯ ಏವ ನಿವರ್ತಕಾನಿ ವಿಶೇಷಣಾನಿ ವಿಶೇಷ್ಯಸ್ಯ । ಲಕ್ಷಣಂ ತು ಸರ್ವತ ಏವ । ಯಥಾ ಅವಕಾಶಪ್ರದಾತೃ ಆಕಾಶಮ್ ಇತಿ । ಲಕ್ಷಣಾರ್ಥಂ ಚ ವಾಕ್ಯಮ್ ಇತ್ಯವೋಚಾಮ ॥

(ಭಾಷ್ಯಾರ್ಥ)

(ಆಕ್ಷೇಪ) :—ವಿಶೇಷ್ಯವು ಇನ್ನೊಂದು ವಿಶೇಷಣವನ್ನೂ ಪಡೆಯುವದಕ್ಕೆ ಹೋಗುವಹಾಗಿದ್ದರೆ (ಅದಕ್ಕೆ) ವಿಶೇಷಣವನ್ನು ಕೊಡುತ್ತಾರೆ. ಉದಾಹರಣೆಗೆ ಉತ್ಪಲವು ನೀಲವೂ ಕೆಂಪೂ (ಆಗಿರುತ್ತದೆ); ಆದ್ದರಿಂದ (ಅದಕ್ಕೆ ವಿಶೇಷಣವನ್ನು ಕೊಡಬಹುದು). ಯಾವಾಗ ಒಂದೇ ಜಾತಿಗೆ ಸೇರಿದಂತೆ ಅನೇಕ ದ್ರವ್ಯಗಳು (ಇರುವವೋ) ಅನೇಕ ವಿಶೇಷಣಗಳ ಸಂಬಂಧವುಳ್ಳವುಗಳಾಗಿಯೂ ಇರುವವೋ ಆಗ ವಿಶೇಷಣ(ವನ್ನು ಕೊಟ್ಟದ್ದು) ಸಾರ್ಥಕವಾಗುತ್ತದೆ. ಆದರೆ ಒಂದೇ ವಸ್ತುವಿನಲ್ಲಿ (ಹೀಗೆ ವಿಶೇಷಣವನ್ನು ಕೊಡುವದು ಸಾರ್ಥಕವಾಗುವ)ದಿಲ್ಲ, ಏಕೆಂದರೆ ಅದಕ್ಕೆ ಮತ್ತೊಂದು ವಿಶೇಷಣದ ಸಂಬಂಧವಿರುವದಿಲ್ಲ. ಉದಾಹರಣೆಗೆ ಈ (ನಾವು ನೋಡುವ) ಸೂರ್ಯನು ಒಬ್ಬನೇ (ಆಗಿರುವ)ದರಿಂದ (ಅವನಿಗೆ ವಿಶೇಷಣವನ್ನು ಕೊಡುವದರಿಂದ ಪ್ರಯೋಜನವಿಲ್ಲ). ಹೀಗೆಯೇ ಬ್ರಹ್ಮವು ಒಂದೇ, ಬೇರೆಯ ಬ್ರಹ್ಮಗಳಿಲ್ಲ; (ಹಾಗೆ) ಇದ್ದಿದ್ದರೆ (ಈ ಬ್ರಹ್ಮವನ್ನು) ನೀಲೋತ್ಪಲದಂತೆ ಅವುಗಳಿಂದ ವಿಂಗಡಿಸಿ ವಿಶೇಷಣದಿಂದ ತಿಳಿಸಬಹುದಾಗಿತ್ತು.

(ಪರಿಹಾರ) :—ಹಾಗಲ್ಲ. ಏಕೆಂದರೆ ವಿಶೇಷಣಗಳು ಲಕ್ಷಣವನ್ನು (ತಿಳಿಸುವದ)ಕ್ಕಾಗಿ ಬಂದಿರುತ್ತವೆ. (ಇದರ ವಿವರ) :—ಇದೇನೂ ತಪ್ಪಲ್ಲ. ಏಕೆಂದರೆ (ಈ) ವಿಶೇಷಣಗಳಿಗೆ ಲಕ್ಷಣವೆಂಬ ಪ್ರಯೋಜನವೇ ಮುಖ್ಯವೇ ಹೊರತು (ಬರಿಯ) ವಿಶೇಷಣವನ್ನು ಹೇಳುವದೇ ಮುಖ್ಯವಲ್ಲ.

(ಪ್ರಶ್ನೆ) :—ಹಾಗಾದರೆ ಲಕ್ಷಣಲಕ್ಷ್ಯಗಳಿಗೂ ವಿಶೇಷಣವಿಶೇಷ್ಯಗಳಿಗೂ ಹೆಚ್ಚುಕಡಿಮೆಯೇನು?

(ಉತ್ತರ) :—ಹೇಳುತ್ತೇವೆ (ಕೇಳಿ). ವಿಶೇಷಣಗಳು ವಿಶೇಷ್ಯವನ್ನು

ಸಮಾನಜಾತೀಯವಾದ (ಮಿಕ್ಕ ವಸ್ತುಗಳಿಂದ) ಮಾತ್ರವೇ ಬೇರ್ಪಡಿಸುವವು.[1] ಲಕ್ಷಣವಾದರೋ (ಮಿಕ್ಕ) ಎಲ್ಲಾ (ವಸ್ತು)ಗಳಿಂದಲೂ (ಬೇರ್ಪಡಿಸುವದು). ಉದಾಹರಣೆಗೆ "ಅವಕಾಶವನ್ನು ಕೊಡುವದು ಆಕಾಶವು" (ಎಂಬುದು ಲಕ್ಷಣವನ್ನು ಹೇಳುವ ವಾಕ್ಯವು.)[2] (ಪ್ರಕೃತ) ವಾಕ್ಯವು ಲಕ್ಷಣ(ವನ್ನು ಹೇಳುವದ)ಕ್ಕಾಗಿ (ಬಂದಿದೆ) ಎಂದು (ನಾವು ಆಗಲೆ) ಹೇಳಿರುತ್ತೇವೆ.[3]

## ಸತ್ಯವೇ ಮುಂತಾದ ಪ್ರತಿಯೊಂದೂ ಬ್ರಹ್ಮದ ಲಕ್ಷಣ

(ಭಾಷ್ಯ)

೯೭. ಸತ್ಯಾದಿಶಬ್ದಾಃ ನ ಪರಸ್ಪರಂ ಸಂಬಧ್ಯನ್ತೇ । ಪರಾರ್ಥತ್ವಾತ್ । ವಿಶೇಷ್ಯಾರ್ಥಾ ಹಿ ತೇ । ಅತಃ ಏಕೈಕೋ ವಿಶೇಷಣಶಬ್ದಃ ಪರಸ್ಪರನಿರಪೇಕ್ಷಃ ಬ್ರಹ್ಮಶಬ್ದೇನ ಸಂಬಧ್ಯತೇ "ಸತ್ಯಂ ಬ್ರಹ್ಮ, ಜ್ಞಾನಂ ಬ್ರಹ್ಮ । ಅನನ್ತಂ ಬ್ರಹ್ಮ" ಇತಿ ||

(ಭಾಷ್ಯಾರ್ಥ)

ಸತ್ಯವೇ ಮುಂತಾದ ಶಬ್ದಗಳು ಒಂದಕ್ಕೊಂದಕ್ಕೆ ಸಂಬಂಧಪಟ್ಟಿರುವದಿಲ್ಲ. ಏಕೆಂದರೆ (ಅವು) ಮತ್ತೊಂದಕ್ಕಾಗಿ (ಬಂದಿರುತ್ತವೆ). ವಿಶೇಷ್ಯಕ್ಕಾಗಿಯಲ್ಲವೆ, ಆ (ಶಬ್ದ)ಗಳು (ಪ್ರಯೋಗವಾಗಿರುವದು)? ಆದ್ದರಿಂದ (ಇವುಗಳಲ್ಲಿ) ಒಂದೊಂದು ಶಬ್ದವೂ ಒಂದೊಂದರ ಅಪೇಕ್ಷೆಯಿಲ್ಲದೆ ಬ್ರಹ್ಮಶಬ್ದದೊಡನೆ ಸಂಬಂಧವುಳ್ಳದ್ದಾಗಿರುತ್ತದೆ. (ಹೇಗೆಂದರೆ) ಸತ್ಯವಾದದ್ದು ಬ್ರಹ್ಮವು, ಜ್ಞಾನವಾದದ್ದು ಬ್ರಹ್ಮವು, ಅನಂತವಾದದ್ದು ಬ್ರಹ್ಮವು–ಎಂದು (ನೇರಾಗಿ ಸಂಬಂಧವುಳ್ಳದ್ದಾಗಿರುತ್ತದೆ.)[4]

## ಸತ್ಯವೆಂಬ ವಿಶೇಷಣದ ಅರ್ಥ

(ಭಾಷ್ಯ)

೯೮. 'ಸತ್ಯಮ್' ಇತಿ । ಯದ್ರೂಪೇಣ ಯನ್ನಿಶ್ಚಿತಂ ತದ್ರೂಪಂ ನ

---

1. ಉದಾಹರಣೆಗೆ 'ನೀಲವಾಗಿರುವ ಉತ್ಪಲವು' ಎಂಬಲ್ಲಿ ನೀಲವೆಂಬ ವಿಶೇಷಣವು ಕೆಂಪಾಗಿರುವ ಉತ್ಪಲವಲ್ಲ ಎಂಬುದನ್ನು ತಿಳಿಸುತ್ತದೆ.

2. ಇಲ್ಲಿ ಅವಕಾಶವನ್ನು ಕೊಡುವದೆಂಬ ಧರ್ಮವು ಆಕಾಶವನ್ನು ಬಿಟ್ಟರೆ ಮಿಕ್ಕ ಯಾವ ಪದಾರ್ಥದಲ್ಲಿಯೂ ಇರುವದಿಲ್ಲ.

3. ಆದ್ದರಿಂದ 'ಸತ್ಯಜ್ಞಾನಾನಂತವಾದ ಬ್ರಹ್ಮವು' ಎಂಬಲ್ಲಿ ಸತ್ಯವಲ್ಲದ ಬ್ರಹ್ಮದಿಂದ ಬೇರ್ಪಡಿಸುವದಕ್ಕೆ ಬಂದಿಲ್ಲ; ಸತ್ಯವಲ್ಲದ್ದು ಬ್ರಹ್ಮವಲ್ಲ ಎಂದೇ ತಿಳಿಸಿರುತ್ತದೆ.

4. ಆದ್ದರಿಂದ ಸತ್ಯ, ಜ್ಞಾನ, ಅನಂತ–ಎಂಬುದು ಒಂದೊಂದೂ ಬ್ರಹ್ಮದ ಅಸಾಧಾರಣಸ್ವರೂಪವು.

ವ್ಯಭಿಚರತಿ ತತ್ ಸತ್ಯಮ್, ಯದ್ರೂಪೇಣ ನಿಶ್ಚಿತಂ ಯತ್ ತದ್ರೂಪಂ ವ್ಯಭಿಚರತ್ 'ಅನೃತಮ್' ಇತ್ಯುಚ್ಯತೇ । ಅತೋ ವಿಕಾರೋಽನೃತಮ್ । "ವಾಚಾರಮ್ಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್" (ಛಾ. ೬-೧-೪) ಏವಂ 'ಸದೇವ ಸತ್ಯಮ್' ಇತ್ಯವಧಾರಣಾತ್ । ಅತಃ ಸತ್ಯಂ ಬ್ರಹ್ಮ ಇತಿ ವಿಕಾರಾನ್ನಿವರ್ತಯತಿ ॥

(ಭಾಷ್ಯಾರ್ಥ)

'ಸತ್ಯಮ್' ಎಂಬುದರ (ಅರ್ಥವೇನೆಂದರೆ) :—**ಯಾವ ರೂಪದಿಂದ (ಇರುವದೆಂದು) ಯಾವದು ಗೊತ್ತಾಗಿದ್ದು ಆ ರೂಪವನ್ನು ಬಿಟ್ಟುಹೋಗದೆ ಇರುವದೋ ಅದು ಸತ್ಯವು.**[1] ಯಾವ ರೂಪದಿಂದ (ಕೂಡಿರುವದೆಂದು) ಯಾವದು ಗೊತ್ತಾಗಿದ್ದು ಆ ರೂಪವನ್ನು ಬಿಟ್ಟುಹೋಗುವದೋ ಅದು **ಅನೃತವು**.

ಆದ್ದರಿಂದ ಕಾರ್ಯವಾದದ್ದು ಅನೃತವು.[2] ಏಕೆಂದರೆ (ಶ್ರುತಿಯಲ್ಲಿ) "ವಿಕಾರವು ಹೆಸರು (ಮಾತ್ರ), ಮಾತಿನ ಕಾರ್ಯವು ; ಮಣ್ಣು ಎಂಬುದೇ ಸತ್ಯವು" (ಛಾ. ೬-೧-೪) ಇದರಂತೆ "ಸತ್ತೇ ಸತ್ಯವು"[3] ಎಂದು ಅವಧಾರಣೆಮಾಡಿರುತ್ತದೆ. ಆದ್ದರಿಂದ "ಸತ್ಯವಾದ ಬ್ರಹ್ಮವು" ಎಂಬ (ವಾಕ್ಯವು) ಬ್ರಹ್ಮವನ್ನು ಕಾರ್ಯದಿಂದ ಬೇರೆ ಎಂದು ತಿಳಿಸುತ್ತವೆ.

## ಜ್ಞಾನವೆಂಬ ವಿಶೇಷಣದ ಅರ್ಥ

(ಭಾಷ್ಯ)

೯. ಅತಃ ಕಾರಣತ್ವಂ ಪ್ರಾಪ್ತಂ ಬ್ರಹ್ಮಣಃ । ಕಾರಣಸ್ಯ ಚ ಕಾರಕತ್ವಮ್ ವಸ್ತುತ್ವಾತ್ ಮೃದ್ವತ್ ಅಚಿದ್ರೂಪತಾ ಚ ಪ್ರಾಪ್ತಾ । ಅತಃ ಇದಮುಚ್ಯತೇ "ಜ್ಞಾನಂ ಬ್ರಹ್ಮ" ಇತಿ । ಜ್ಞಾನಂ ಜ್ಞಪ್ತಿಃ ಅವಬೋಧಃ । ಭಾವಸಾಧನೋ ಜ್ಞಾನಶಬ್ದಃ । ಬ್ರಹ್ಮವಿಶೇಷಣತ್ವಾತ್ ಸತ್ಯಾನನ್ತಾಭ್ಯಾಂ ಸಹ । ನ ಹಿ ಸತ್ಯತಾ ಅನನ್ತತಾ

---

1. ಇಂಥ ರೂಪವೆಂದು ನಿಶ್ಚಿತವಾದ ಬಳಿಕ ಆ ರೂಪವನ್ನು ಮಾರ್ಪಡಿಸಿಕೊಳ್ಳದೆ ಇರುವದು ಸತ್ಯವಸ್ತು. ಸತ್ಯವೆಂದರೆ ವ್ಯವಹಾರದಲ್ಲಿ ಮಾತ್ರ ಸತ್ಯವಾಗಿರುವದೆಂದು ತೋರುವದಲ್ಲ, ಎಂದೆಂದಿಗೂ ಸತ್ಯವೇ ಆಗಿರುವದು. ವ್ಯಾವಹಾರಿಕವಾದ ಅಪರಬ್ರಹ್ಮವನ್ನು ಛಾ. ಭಾ. ೪೪ ರಲ್ಲಿ ವರ್ಣಿಸಿದೆ ; ಆದರೆ ಇದು ಪರಮಾರ್ಥ ಸತ್ಯವು.

2. ಏಕೆಂದರೆ ಕಾರ್ಯರೂಪವು ಕಾರಣಕ್ಕಿಂತ ಬೇರೆಯಾಗಿ ನಿಜವಾಗಿರುವದಿಲ್ಲ.

3. ಛಾ. ೬-೪-೪, ೬-೮-೭ ಇವನ್ನು ನೋಡಿರಿ. 'ತತ್ ಸತ್ಯಮ್' ಎಂಬ ಶ್ರುತಿಯ ಅರ್ಥವನ್ನು ಇಲ್ಲಿ ಉದಾಹರಿಸಿರುತ್ತದೆ.

ಚ ಜ್ಞಾನಕರ್ತೃತ್ವೇ ಸತಿ ಉಪಪದ್ಯತೇ । ಜ್ಞಾನಕರ್ತೃತ್ವೇನ ಹಿ ವಿಕ್ರಿಯಮಾಣಂ ಕಥಂ ಸತ್ಯಂ ಭವೇತ್ ಅನನ್ತಂ ಚ? ಯದ್ ಹಿ ನ ಕುತಶ್ಚಿತ್ ಪ್ರವಿಭಜ್ಯತೇ ತತ್ ಅನನ್ತಮ್ । ಜ್ಞಾನಕರ್ತೃತ್ವೇ ಚ ಜ್ಞೇಯಜ್ಞಾನಾಭ್ಯಾಂ ಪ್ರವಿಭಕ್ತಮ್ ಇತಿ ಅನನ್ತತಾ ನ ಸ್ಯಾತ್ । "ಯತ್ರ........ನಾನ್ಯದ್ ವಿಜಾನಾತಿ ಸ ಭೂಮಾ, ಅಥ ಯತ್ರ........ಅನ್ಯದ್ ವಿಜಾನಾತಿ ತದಲ್ಪಮ್" (ಛಾ. ೭-೨೪-೧) ಇತಿ ಶ್ರುತ್ಯನ್ತರಾತ್ ॥

(ಭಾಷ್ಯಾರ್ಥ)

ಆದ್ದರಿಂದ ಬ್ರಹ್ಮವು ಕಾರಣವೆಂದಾಯಿತು; ಕಾರಣವು ಕಾರಕವೆಂದೂ ವಸ್ತುವಾಗಿರುವದರಿಂದ ಮಣ್ಣಿನಂತೆ ಜಡರೂಪವೆಂದೂ ಆಯಿತು.[1] ಆದ್ದರಿಂದ ಈ 'ಜ್ಞಾನಂ ಬ್ರಹ್ಮ' ಎಂಬ (ವಾಕ್ಯ)ವನ್ನು ಹೇಳಿರುತ್ತದೆ. **ಜ್ಞಾನವೆಂದರೆ ಜ್ಞಪ್ತಿ ಅರಿವು.** ಜ್ಞಾನಶಬ್ದವು (ಇಲ್ಲಿ) ಭಾವಾರ್ಥದಲ್ಲಿ[2] (ಪ್ರಯುಕ್ತವಾಗಿರುತ್ತದೆ); ಏಕೆಂದರೆ ಸತ್ಯ, ಅನಂತ–ಎಂಬ ಎರಡರೊಡನೆಯೇ (ಈ ಶಬ್ದವನ್ನು) ಬ್ರಹ್ಮಕ್ಕೆ ವಿಶೇಷಣವಾಗಿ (ಪ್ರಯೋಗಿಸಿರುತ್ತದೆ). ಜ್ಞಾನಕ್ಕೆ ಕರ್ತೃ ಎಂದರೆ (ಬ್ರಹ್ಮವು) ಸತ್ಯವೆಂಬುದಾಗಲಿ ಅನಂತವೆಂಬುದಾಗಲಿ, ಹೊಂದುವದೇ ಇಲ್ಲ; ಏಕೆಂದರೆ ಜ್ಞಾನಕ್ಕೆ ಕರ್ತೃವಾಗಿ ಮಾರ್ಪಡುತ್ತಿರುವದು ಹೇಗೆತಾನೆ ಸತ್ಯವೂ ಅನಂತವೂ ಆದೀತು? **ಯಾವದು ಮತ್ತೆ ಯಾವದರಿಂದಲೂ ವಿಂಗಡವಾಗದೆ ಇರುವದೋ ಅದೇ ಅಲ್ಲವೆ, ಅನಂತವೆಂಬುದು?** (ಬ್ರಹ್ಮವು) ಜ್ಞಾನ(ಕ್ರಿಯೆಗೆ) ಕರ್ತೃ ಎಂದಾದರೆ (ಅದು) ಜ್ಞೇಯ, ಜ್ಞಾನ–(ಈ) ಎರಡರಿಂದಲೂ ವಿಂಗಡವಾಗಿರುತ್ತದೆಯಾದ್ದರಿಂದ ಅನಂತವಾಗಲಾರದು. "ಎಲ್ಲಿ…………ಮತ್ತೊಂದನ್ನು ಅರಿಯುವದಿಲ್ಲವೋ ಅದೇ **ಭೂಮವು;**[3] ಇನ್ನು ಎಲ್ಲಿ…………ಮತ್ತೊಂದನ್ನು ಅರಿಯುತ್ತಾನೋ ಅದು **ಅಲ್ಪವು**[4]" (ಛಾ. ೭-೨೪-೧) ಎಂಬ ಬೇರೆ ಒಂದು ಶ್ರುತಿಯು ಇದಕ್ಕೆ ಪ್ರಮಾಣವು.

---

1. ಕಾರಣವು ಕಾರ್ಯವನ್ನುಂಟುಮಾಡುವ ಕ್ರಿಯೆಗೆ ಆಶ್ರಯವೋ, ಕರಣವೋ, ಅಪಾದಾನವೋ, ಆಗಿರುತ್ತದೆ. ಮತ್ತು ಕಾರ್ಯರೂಪದಿಂದ ಮಾರ್ಪಡುವದಾದರೆ ಜಡವೂ ಆಗಿರುತ್ತದೆ.

2. ಜ್ಞಾನ ಎಂದರೆ ಜ್ಞಾನವೆಂಬ ಕ್ರಿಯೆ, ಅದರ ಕರ್ತೃ, ಕರ್ಮ, ಅಥವಾ ಕರಣ– ಎಂಬ ನಾಲ್ಕು ಅರ್ಥಗಳೂ ಆಗಬಹುದು ಇಲ್ಲಿ ಫಲರೂಪವಾದ ಅರಿವು ಎಂಬುದೇ ಅರ್ಥ.

3. ಅನಂತವಾದದ್ದು, ಬ್ರಹ್ಮವು.

4. ಅಳತೆಯುಳ್ಳದ್ದು, ನಾಶವಾಗುವದು.

(ಭಾಷ್ಯ)

೧೦೦. ನ ' ಅನ್ಯತ್ ' ವಿಜಾನಾತಿ ಇತಿ ವಿಶೇಷಪ್ರತಿಷೇಧಾತ್ ಆತ್ಮಾನಂ ವಿಜಾನಾತಿ ಇತಿ ಚೇತ್ । ನ । ಭೂಮಲಕ್ಷಣವಿಧಿಪರತ್ವಾತ್ ವಾಕ್ಯಸ್ಯ । " ಯತ್ರ ನಾನ್ಯತ್ ಪಶ್ಯತಿ " (ಛಾ. ೭-೨೪-೧) ಇತ್ಯಾದಿ ಭೂಮ್ನೋ ಲಕ್ಷಣವಿಧಿಪರಂ ವಾಕ್ಯಮ್ । ಯಥಾ ಪ್ರಸಿದ್ಧಮೇವ ಅನ್ಯೋಽನ್ಯತ್ ಪಶ್ಯತಿ ಇತ್ಯೇತದುಪಾದಾಯ ಯತ್ರ ತನ್ನಾಸ್ತಿ ಸ ಭೂಮಾ ಇತಿ ಭೂಮಸ್ವರೂಪಂ ತತ್ರ ಜ್ಞಾಪ್ಯತೇ । ಅನ್ಯ ಗ್ರಹಣಸ್ಯ ಪ್ರಾಪ್ತಪ್ರತಿಷೇಧಾರ್ಥತ್ವಾತ್ ನ ಸ್ವಾತ್ಮನಿ ಕ್ರಿಯಾಸ್ತಿತ್ವಪರಂ ವಾಕ್ಯಮ್ । ಸ್ವಾತ್ಮನಿ ಚ ಭೇದಾಭಾವಾತ್ ವಿಜ್ಞಾನಾನುಪಪತ್ತಿಃ । ಆತ್ಮನಶ್ಚ ವಿಜ್ಞೇಯತ್ವೇ ಜ್ಞಾತ್ರಭಾವಪ್ರಸಙ್ಗಃ । ಜ್ಞೇಯತ್ವೇನೈವ ವಿನಿಯುಕ್ತತ್ವಾತ್ । ಏಕ ಏವಾತ್ಮಾ ಜ್ಞೇಯತ್ವೇನ ಜ್ಞಾತೃತ್ವೇನ ಚ ಉಭಯಥಾ ಭವತಿ ಇತಿ ಚೇತ್ । ನ ಯುಗ ಪತ್, ಅನಂಶತ್ವಾತ್ । ನ ಹಿ ನಿರವಯವಸ್ಯ ಯುಗಪತ್ ಜ್ಞೇಯಜ್ಞಾತೃತ್ವೋಪ ಪತ್ತಿಃ । ಆತ್ಮನಶ್ಚ ಘಟಾದಿವದ್ ವಿಜ್ಞೇಯತ್ವೇ ಜ್ಞಾನೋಪದೇಶಾನರ್ಥಕ್ಯಮ್ । ನ ಹಿ ಘಟಾದಿವತ್ ಪ್ರಸಿದ್ಧಸ್ಯ ಜ್ಞಾನೋಪದೇಶೋಽರ್ಥವಾನ್ ॥

(ಆಕ್ಷೇಪ) :—'ಮತ್ತೊಂದನ್ನು' ಅರಿಯುವದಿಲ್ಲವೋ ಎಂದು ಗೊತ್ತಾಗಿರುವ (ಮಿಕ್ಕದ್ದನ್ನು) ಅಲ್ಲಗಳೆಯುವದರಿಂದ ತನ್ನನ್ನು ಅರಿತುಕೊಳ್ಳುತ್ತಾನೆ (ಎಂದರ್ಥ ವನ್ನು ಮಾಡಬೇಕಲ್ಲವೆ) ?

(ಪರಿಹಾರ) :—ಹಾಗಿಲ್ಲ. ಏಕೆಂದರೆ (ಈ) ವಾಕ್ಯವು ಭೂಮದ ಲಕ್ಷಣ ವನ್ನು ತಿಳಿಸುವದರಲ್ಲಿ ತಾತ್ಪರ್ಯವುಳ್ಳದ್ದಾಗಿರುತ್ತದೆ. " ಎಲ್ಲಿ ಮತ್ತೊಂದನ್ನು ಕಾಣುವದಿಲ್ಲವೋ " (ಛಾ. ೭-೨೪-೧) ಎಂದು ಮುಂತಾಗಿರುವ ವಾಕ್ಯವು ಭೂಮದ ಲಕ್ಷಣವನ್ನು (ತಿಳಿಸುವದರಲ್ಲಿ) ತಾತ್ಪರ್ಯವುಳ್ಳದ್ದು. ಒಬ್ಬನು ಮತ್ತೊಬ್ಬನನ್ನು ಕಾಣುತ್ತಾನೆ ಎಂಬುದು (ಲೋಕದಲ್ಲಿ) ಪ್ರಸಿದ್ಧವಾಗಿರುವದನ್ನೇ ಇಟ್ಟುಕೊಂಡು ಎಲ್ಲಿ ಅದು ಇಲ್ಲವೋ ಅದು ಭೂಮವು ಎಂದು ಭೂಮದ ಸ್ವರೂಪವನ್ನು ಆ (ವಾಕ್ಯದಲ್ಲಿ) ತಿಳಿಸಲಾಗಿದೆ. ಮತ್ತೊಬ್ಬನು ಎಂಬ (ಮಾತನ್ನು) ಪ್ರಯೋಗಿಸಿರುವದು (ಲೋಕ ದಲ್ಲಿ) ಗೊತ್ತಿರುವದನ್ನೇ ನಿಷೇಧಮಾಡುವದಕ್ಕೋಸ್ಕರವಾಗಿರುವದರಿಂದ (ಈ ವಾಕ್ಯಕ್ಕೆ ತನ್ನ ಆತ್ಮನಲ್ಲಿ (ಅರಿಯುವದೆಂಬ) ಕ್ರಿಯೆಯುಂಟು ಎಂಬುದನ್ನು (ಹೇಳುವ)ದರಲ್ಲಿ ತಾತ್ಪರ್ಯವಿರುವದಿಲ್ಲ.[1] ಇದಲ್ಲದೆ ತನ್ನ ಆತ್ಮನಲ್ಲಿ ಭೇದವು ಇಲ್ಲದಿರುವದರಿಂದಲೂ (ತನ್ನನ್ನು ತಾನು) ಅರಿಯುವದೆಂಬುದು ಹೊಂದುವದಿಲ್ಲ.

---

1. ಏಕೆಂದರೆ ಒಂದು ವಾಕ್ಯಕ್ಕೆ ಎರಡು ತಾತ್ಪರ್ಯವಿರುವದಿಲ್ಲ.

ಆತ್ಮನು ಅರಿಯಲ್ಪಡುವನಾದರೆ ಅರಿಯುವಾತನೇ ಇಲ್ಲವಾಗುವದು; ಏಕೆಂದರೆ (ಆತ್ಮನು) ಅರಿಯಲ್ಪಡುವವನಾಗಿ ವಿನಿಯೋಗವಾಗಿ ಬಿಟ್ಟಿರುತ್ತಾನೆ.

(ಆಕ್ಷೇಪ):—ಒಬ್ಬನೇ ಆತ್ಮನು ಜ್ಞೇಯನಾಗಿಯೂ ಜ್ಞಾತೃವಾಗಿಯೂ ಎರಡು (ರೂಪ)ದಿಂದಲೂ ಇರಬಹುದಲ್ಲವೆ?[1]

(ಪರಿಹಾರ):—ಒಂದೇ ಕಾಲಕ್ಕೆ ಆಗಲಾರದು. ಏಕೆಂದರೆ (ಆತ್ಮನಲ್ಲಿ) ಯಾವ ಅವಯವಗಳೂ ಇರುವದಿಲ್ಲ. ನಿರವಯವನಾದ (ಒಬ್ಬನೇ ಆತ್ಮನಿಗೆ) ಒಂದೇಕಾಲದಲ್ಲಿ ಜ್ಞೇಯತ್ವವೂ ಜ್ಞಾತೃತ್ವವೂ ಇರಲೇ ಆರದು. ಮತ್ತು ಆತ್ಮನು ಗಡಿಗೆಯೇ ಮುಂತಾದವುಗಳಂತೆ ಜ್ಞೇಯವಾಗಿದ್ದರೆ (ಶ್ರುತಿಯಲ್ಲಿ) ಜ್ಞಾನವನ್ನು ಉಪದೇಶಿಸಿರುವದು ವ್ಯರ್ಥವಾಗುತ್ತದೆ. ಏಕೆಂದರೆ ಗಡಿಗೆಯೇ ಮುಂತಾದವುಗಳಂತೆ ಪ್ರಸಿದ್ಧವಾಗಿರುವದರ ವಿಷಯದಲ್ಲಿ ಜ್ಞಾನೋಪದೇಶವು ಸಪ್ರಯೋಜನವಾಗಿರುವದಿಲ್ಲ[2] ಅಲ್ಲವೆ?

(ಭಾಷ್ಯ)

೧೧೧. ತಸ್ಮಾತ್ ಜ್ಞಾತೃತ್ವೇ ಸತಿ ಆನನ್ತ್ಯಾನುಪಪತ್ತಿಃ । ಸನ್ಮಾತ್ರತ್ವಂ ಚ ಅನುಪಪನ್ನಂ ಜ್ಞಾನಕರ್ತೃತ್ವಾದಿವಿಶೇಷವತ್ತ್ವೇ ಸತಿ । ಸನ್ಮಾತ್ರತ್ವಂ ಚ ಸತ್ಯತ್ವಮ್ । "ತತ್ ಸತ್ಯಮ್" (ಛಾ. ೬-೮-೭) ಇತಿ ಶ್ರುತ್ಯನ್ತರಾತ್ । ತಸ್ಮಾತ್ ಸತ್ಯಾನನ್ತಶಬ್ದಾಭ್ಯಾಂ ಸಹ ವಿಶೇಷಣತ್ವೇನ ಜ್ಞಾನಶಬ್ದಸ್ಯ ಪ್ರಯೋಗಾತ್ ಭಾವಸಾಧನೋ ಜ್ಞಾನಶಬ್ದಃ । "ಜ್ಞಾನಂ ಬ್ರಹ್ಮ" ಇತಿ ಕರ್ತೃತ್ವಾದಿಕಾರಕನಿವೃತ್ತ್ಯರ್ಥಂ ಮೃದಾದಿವದಚಿದ್ರೂಪತಾನಿವೃತ್ತ್ಯರ್ಥಂ ಚ ಪ್ರಯುಜ್ಯತೇ ॥

(ಭಾಷ್ಯಾರ್ಥ)

ಆದ್ದರಿಂದ (ಬ್ರಹ್ಮವು) ಜ್ಞಾತೃವೆಂದಾದರೆ (ಅದು) ಅನಂತವೆಂಬುದು ಹೊಂದುವದಿಲ್ಲ. ಮತ್ತು ಜ್ಞಾನಕರ್ತೃತ್ವವೇ ಮುಂತಾದ ವಿಶೇಷಗಳುಳ್ಳದ್ದಾದರೆ (ಅದು) ಬರಿಯ ಸತ್ತೇ ಎಂಬುದೂ ಹೊಂದುವದಿಲ್ಲ. ಸತ್ಯವೆಂದರೆ ಬರಿಯ ಸತ್ತಾಗಿರುವದೇ; "ಅದು ಸತ್ಯವು" (ಛಾ. ೬-೮-೭) ಎಂಬ ಬೇರೊಂದು ಶ್ರುತಿಯು ಇದಕ್ಕೆ ಪ್ರಮಾಣವಾಗಿರುತ್ತದೆ. ಆದ್ದರಿಂದ ಸತ್ಯ, ಅನಂತ—ಎಂಬೀ ಎರಡು ಶಬ್ದ

1. ಐ. ಒಂದನೆಯ ಅಧ್ಯಾಯದ ಉಪಸಂಹಾರ ಭಾ. ಭಾಗ (೬೪) ವನ್ನು ನೋಡಿ. ಇದು ಮೀಮಾಂಸಕರ ಪಕ್ಷವು.

2. ಪ್ರತ್ಯಕ್ಷಾದಿಗಳಿಂದ ತಿಳಿಯುವ ಜ್ಞೇಯವಾಗಿದ್ದರೆ ಎಂದರ್ಥ. ಅಥವಾ ಜ್ಞಾತೃವಿಗೆ ಉಪದೇಶವಿರಬಹುದು; ಜ್ಞೇಯಕ್ಕೆ ವ್ಯರ್ಥ. ಜ್ಞೇಯನಾದ ಆತ್ಮನಿಗೆ ಉಪದೇಶವೇಕೆ?—ಎಂದಾದರೂ ಅಭಿಪ್ರಾಯವಿರಬಹುದು.

ಗಳೊಡನೆ (ಬ್ರಹ್ಮಕ್ಕೆ) ವಿಶೇಷಣವಾಗಿ ಜ್ಞಾನಶಬ್ದವನ್ನು ಪ್ರಯೋಗಮಾಡಿರುವದರಿಂದ ಜ್ಞಾನಶಬ್ದವು ಭಾವಾರ್ಥದಲ್ಲಿ (ಪ್ರತ್ಯಯವನ್ನು ಪಡೆದು) ಹುಟ್ಟಿದ್ದಾಗಿದೆ. ಕರ್ತೃತ್ವವೇ ಮುಂತಾದ ಕಾರಕಗಳಲ್ಲವೆಂದು ಹೇಳುವದಕ್ಕೂ ಮಣ್ಣು ಮುಂತಾದವುಗಳಂತೆ ಜಡರೂಪವಲ್ಲವೆನ್ನುವದಕ್ಕೂ "ಜ್ಞಾನವು ಬ್ರಹ್ಮವು" ಎಂದು (ಸಮಾನಾಧಿಕರಣವಾಗಿ) ಪ್ರಯೋಗವನ್ನು ಮಾಡಿರುತ್ತದೆ.

## ಅನಂತವೆಂಬ ವಿಶೇಷಣದ ಅರ್ಥ

(ಭಾಷ್ಯ)

೧೦೨. "ಜ್ಞಾನಂ ಬ್ರಹ್ಮ" ಇತಿ ವಚನಾತ್ ಪ್ರಾಪ್ತಮ್ ಅನ್ತವತ್ತ್ವಮ್ ಲೌಕಿಕಸ್ಯ ಜ್ಞಾನಸ್ಯ ಅನ್ತವತ್ತ್ವದರ್ಶನಾತ್ । ಅತಃ ತನ್ನಿವೃತ್ತ್ಯರ್ಥಮಾಹ–ಅನನ್ತಮ್' ಇತಿ ॥

(ಭಾಷ್ಯಾರ್ಥ)

ಜ್ಞಾನವು ಬ್ರಹ್ಮವು ಎಂದು ಹೇಳಿದ್ದರಿಂದ (ಬ್ರಹ್ಮವು) ಅಂತವುಳ್ಳದ್ದೆಂದು ಆಯಿತು; ಏಕೆಂದರೆ ಲೌಕಿಕಜ್ಞಾನಕ್ಕೆ ಅಂತವಿರುವದೆಂದು ಕಂಡುಬರುತ್ತದೆ.[1] ಆದ್ದರಿಂದ ಅದನ್ನು ಪರಿಹರಿಸುವದಕ್ಕಾಗಿ 'ಅನಂತವು' ಎಂಬ (ವಿಶೇಷಣವನ್ನು) ಹೇಳಿರುತ್ತದೆ.

## ಬ್ರಹ್ಮವು ಶೂನ್ಯವಲ್ಲ

(ಭಾಷ್ಯ)

೧೦೩. ಸತ್ಯಾದೀನಾಮ್ ಅನೃತಾದಿಧರ್ಮನಿವೃತ್ತಿಪರತ್ವಾತ್, ವಿಶೇಷ್ಯಸ್ಯ ಬ್ರಹ್ಮಣಃ ಉತ್ಪಲಾದಿವತ್ ಅಪ್ರಸಿದ್ಧತ್ವಾತ್

"ಮೃಗತೃಷ್ಣಾಂಭಸಿ ಸ್ನಾತಃ ಖಪುಷ್ಪಕೃತಶೇಖರಃ
ಏಷ ವನ್ಧ್ಯಾಸುತೋ ಯಾತಿ ಶಶಶೃಙ್ಗಧನುರ್ಧರಃ ॥"

ಇತಿವತ್ ಶೂನ್ಯಾರ್ಥತೈವ ಪ್ರಾಪ್ತಾ ಸತ್ಯಾದಿವಾಕ್ಯಸ್ಯ ಇತಿ ಚೇತ್ । ನ । ಲಕ್ಷಣಾರ್ಥತ್ವಾತ್ । ವಿಶೇಷಣತ್ವೇಽಪಿ ಸತ್ಯಾದೀನಾಂ ಲಕ್ಷಣಾರ್ಥಪ್ರಾಧಾನ್ಯಮ್

---

1. ಜ್ಞಾನವು ಒಂದು ಕಾಲದಲ್ಲಿ ಹುಟ್ಟಿ ನಾಶವಾಗುವದೆಂಬುದು ಲೋಕದಲ್ಲಿ ಪ್ರಸಿದ್ಧವಾಗಿರುತ್ತದೆ. ಆದ್ದರಿಂದ ಬ್ರಹ್ಮವು ಜ್ಞಾನವಾದರೆ ಅನಿತ್ಯವೆಂದಾಯಿತು.

ಇತ್ಯವೋಚಾಮ । ಶೂನ್ಯೇ ಹಿ ಲಕ್ಷ್ಯೇ ಅನರ್ಥಕಂ ಲಕ್ಷಣವಚನಮ್ । ಲಕ್ಷಣಾರ್ಥತ್ವಾತ್ ಮನ್ಯಾಮಹೇ ನ ಶೂನ್ಯಾರ್ಥತಾ ಇತಿ ॥

(ಭಾಷ್ಯಾರ್ಥ)

(ಶಂಕೆ) :—ಸತ್ಯವೇ ಮುಂತಾದ (ಶಬ್ದಗಳಿಗೆ) ಅನೃತವೇ ಮುಂತಾದ ಧರ್ಮಗಳನ್ನು ಅಲ್ಲಗಳೆಯುವದರಲ್ಲಿಯೇ ತಾತ್ಪರ್ಯವಿರುವದರಿಂದಲೂ ವಿಶೇಷ್ಯವಾದ ಬ್ರಹ್ಮವು ಉತ್ಪಲವೇ ಮುಂತಾದವುಗಳಂತೆ ಪ್ರಸಿದ್ಧವಲ್ಲದೆ ಇರುವದರಿಂದಲೂ

ಮೃಗತೃಷ್ಣಾಂಭಸಿ ಸ್ನಾತಃ ಖಪುಷ್ಪಕೃತಶೇಖರಃ ।
ಏಷ ವನ್ಧ್ಯಾಸುತೋ ಯಾತಿ ಶಶಶೃಙ್ಗಧನುರ್ಧರಃ ॥ (?) [1]

(ಬಿಸಿಲುಕುದುರೆಯ ನೀರಿನಲ್ಲಿ ಸ್ನಾನಮಾಡಿಕೊಂಡು ಆಕಾಶದ ಹೂಗಳನ್ನು ಜುಟ್ಟಿನಲ್ಲಿ ಮುಡಿದುಕೊಂಡು, ಇಗೋ ಈ ಬಂಜೆಯ ಮಗನು ಮೊಲದ ಕೊಂಬಿನ ಬಿಲ್ಲನ್ನು ಹಿಡಿದುಕೊಂಡು ಹೋಗುತ್ತಿದಾನೆ) ಎಂಬ (ವಾಕ್ಯದ)ಂತೆ ಈ 'ಸತ್ಯ' ಮುಂತಾದ ವಾಕ್ಯಕ್ಕೆ ಶೂನ್ಯವೇ ಅರ್ಥವೆಂದಾಯಿತಲ್ಲ ! [2]

(ಪರಿಹಾರ) : —ಹಾಗಲ್ಲ. ಏಕೆಂದರೆ (ಇಲ್ಲಿ) ಲಕ್ಷಣವೇ ಪ್ರಯೋಜನವಾಗಿರುತ್ತದೆ. ಸತ್ಯವೇ ಮುಂತಾದ ಶಬ್ದಗಳು ವಿಶೇಷಣಗಳೇ ಆಗಿರುತ್ತವೆಯಾದರೂ (ಅವಕ್ಕೆ) ಲಕ್ಷಣವೆಂಬ ಪ್ರಯೋಜನವೇ ಮುಖ್ಯವಾಗಿರುತ್ತದೆ ಎಂದು (ಹಿಂದೆ) ಹೇಳಿರುತ್ತೇವೆ.[3] ಲಕ್ಷ್ಯವಾದದ್ದು ಶೂನ್ಯವಾಗಿದ್ದರೆ ಲಕ್ಷಣವಾಕ್ಯವು ವ್ಯರ್ಥವಾಗು

---

1. ಈ ಶ್ಲೋಕವು ಎಲ್ಲಿಯದೆಂಬುದು ತಿಳಿಯಲಿಲ್ಲ.

2. ಪ್ರತಿಯೊಂದು ಶಬ್ದವೂ ಬೇರೊಂದರ ಅಭಾವವನ್ನೇ ಹೇಳುತ್ತದೆ ಎಂದು ಬೌದ್ಧರು ಹೇಳುತ್ತಾರೆ. ಇದಕ್ಕೆ **ಅಪೋಹವಾದವೆಂದು** ಹೆಸರು. ಸತ್ಯವೆಂದರೆ ಅನೃತದ ಅಭಾವ; ಜ್ಞಾನವೆಂದರೆ ಅಜ್ಞಾನದ ಅಭಾವ; ಅನಂತವೆಂದರೆ ಅಂತವುಳ್ಳದ್ದರ ಅಭಾವ, ಹೀಗೆ ಒಂದೊಂದು ವಿಶೇಷಣವೂ ಶೂನ್ಯವನ್ನೇ ಹೇಳುತ್ತದೆ. ಬ್ರಹ್ಮಶಬ್ದವು ಯಾವ ಪದಾರ್ಥವನ್ನೂ ಹೇಳುವದೇ ಇಲ್ಲ; ಏಕೆಂದರೆ ಲೋಕದಲ್ಲಿ ಬ್ರಹ್ಮವೆಂಬ ವಸ್ತುವೇ ಇಲ್ಲ. ಆದ್ದರಿಂದ ಯಾವ ವಸ್ತುವನ್ನೂ ಹೇಳಿದಂತೆ ಆಗಲಿಲ್ಲವಲ್ಲ! ಎಂದು ಶಂಕೆ.

3. ೯೩ನೆಯ ಭಾ. ಭಾ. ದಲ್ಲಿ.

ತ್ತಿತ್ತು.[1] (ಆದ್ದರಿಂದ)[2] ಲಕ್ಷಣವೇ (ಇಲ್ಲಿ) ಪ್ರಯೋಜನವಾಗಿರುವದರಿಂದ (ವಾಕ್ಯಕ್ಕೆ) ಶೂನ್ಯವೇ ಅರ್ಥವೆಂಬುದು (ಸರಿ)ಯಲ್ಲ ಎಂದು ನಮ್ಮ ಅಭಿಪ್ರಾಯವು.

(ಭಾಷ್ಯ)

೧೦೪. ವಿಶೇಷಣಾರ್ಥತ್ವೇ ಪಿ ಚ ಸತ್ಯಾದೀನಾಂ ಸ್ವಾರ್ಥಾಪರಿತ್ಯಾಗ ಏವ । ಶೂನ್ಯಾರ್ಥತ್ವೇ ಹಿ ಸತ್ಯಾದಿಶಬ್ದಾನಾಂ ವಿಶೇಷ್ಯನಿಯನ್ತೃತ್ವಾನುಪಪತ್ತಿಃ । ಸತ್ಯಾದ್ಯರ್ಥೈರರ್ಥವತ್ತ್ವೇ ತು ತದ್ವಿಪರೀತಧರ್ಮವದ್ಭ್ಯೋ ವಿಶೇಷ್ಯೇಭ್ಯೋ ಬ್ರಹ್ಮಣೋ ವಿಶೇಷ್ಯಸ್ಯ ನಿಯನ್ತೃತ್ವಮ್ ಉಪಪದ್ಯತೇ । ಬ್ರಹ್ಮಶಬ್ದೋಽಪಿ ಸ್ವಾರ್ಥೇನ ಅರ್ಥವಾನೇವ । ತತ್ರ ಅನನ್ತಶಬ್ದೋಽನ್ತವತ್ತ್ವಪ್ರತಿಷೇಧದ್ವಾರೇಣ ವಿಶೇಷಣಮ್ । ಸತ್ಯಜ್ಞಾನಶಬ್ದೌ ತು ಸ್ವಾರ್ಥಸಮರ್ಪಣೇನೈವ ವಿಶೇಷಣೇ ಭವತಃ ॥

(ಭಾಷ್ಯಾರ್ಥ)

ಸತ್ಯವೇ ಮುಂತಾದ (ಶಬ್ದಗಳು) ವಿಶೇಷಣವೆಂಬ ಪ್ರಯೋಜನಕ್ಕಾಗಿ (ಪ್ರಯೋಗಿಸಲ್ಪಟ್ಟಿವೆ) ಎಂಬ ಪಕ್ಷದಲ್ಲಿಯೂ (ಅವುಗಳು) ತಮ್ಮ ಅರ್ಥವನ್ನು ಬಿಡುವಹಾಗೇ ಇಲ್ಲ.[3] ಏಕೆಂದರೆ ಸತ್ಯವೇ ಮುಂತಾದ ಶಬ್ದಗಳಿಗೆ ಶೂನ್ಯವೇ ಅರ್ಥವಾದರೆ (ಅವು) ವಿಶೇಷ್ಯವನ್ನು ಗೊತ್ತುಪಡಿಸಲೇ ಆರವು. ಆದರೆ (ಅವಕ್ಕೆ) ಸತ್ಯವೇ ಮುಂತಾದ ಅರ್ಥಗಳು ಇವೆ ಎಂಬ ಪಕ್ಷದಲ್ಲಿಯೋ ಎಂದರೆ ಆ (ಅರ್ಥಗಳಿಗೆ) ವಿರುದ್ಧವಾದ ಧರ್ಮಗಳುಳ್ಳ ವಿಶೇಷ್ಯಗಳಿಂದ ಬ್ರಹ್ಮವೆಂಬ ವಿಶೇಷ್ಯವನ್ನು

---

1. ಲಕ್ಷಣವು ಏತರದ್ದು ? ಎಂಬ ಆಶಂಕೆ ಇದ್ದೇ ಇರುವದರಿಂದ ಇಲ್ಲಿರುವದು ಲಕ್ಷಣವಾಕ್ಯವಾಗಿರುವದರಿಂದಲೇ ಲಕ್ಷ್ಯವು ಇರಬೇಕೆಂದು ಏರ್ಪಡುತ್ತದೆ ಎಂದು ಭಾವ. ಶೂನ್ಯವಾದ ವಿಶೇಷ್ಯಕ್ಕೆ ಶೂನ್ಯವಿಶೇಷಣವು ಸೇರಿ ಲಕ್ಷಣವಾಕ್ಯವಾಗಲಾರದು.

2. ಅತಃ ಎಂಬ ಮಾತು ಆ॥ ಪಾಠದಲ್ಲಿಲ್ಲ; ಕಾ॥ವಾ॥ ಪಾಠಗಳಲ್ಲಿದೆ.

3 ವಿಶೇಷಣವೆಂದರೆ ತನ್ನ ಅರ್ಥಕ್ಕೆ ವಿರುದ್ಧವಾದ ಅರ್ಥವನ್ನು ತೊಲಗಿಸುವದು; ಹೀಗಿರುವಾಗ ಸತ್ಯವೇ ಮುಂತಾದ ಶಬ್ದಗಳು ತಮ್ಮ ಅರ್ಥವನ್ನು ಹೇಳದೆ ವಿರುದ್ಧಾರ್ಥದ ಅಭಾವವನ್ನು ಹೇಳುವದಾದರೂ ಹೇಗೆ ?

(ಬೇರ್ಪಡಿಸಿ) ಗೊತ್ತುಪಡಿಸುವದೆಂಬುದು ಹೊಂದುತ್ತದೆ.[1] ಬ್ರಹ್ಮಶಬ್ದಕ್ಕೂ ತನ್ನ ಅರ್ಥವಿರುವದರಿಂದ (ಅದೂ) ಅರ್ಥವಂತ (ಶಬ್ದವಾಗಿ)ಯೇ ಇರುತ್ತದೆ.[2] ಈ (ವಿಶೇಷಣಗಳೊಳಗೆ) ಅನಂತ ಎಂಬ ಮಾತು ಅಂತವುಳ್ಳದ್ದಾಗಿರುವಿಕೆ (ಎಂಬ ಧರ್ಮವನ್ನು) ಅಲ್ಲಗಳೆಯುವ ಮೂಲಕವಾಗಿ (ಬ್ರಹ್ಮಕ್ಕೆ) ವಿಶೇಷಣವಾಗಿರುತ್ತದೆ. ಸತ್ಯ, ಜ್ಞಾನ ಎಂಬ ಶಬ್ದಗಳೆರಡೂ ಮಾತ್ರ ತಮ್ಮ ತಮ್ಮ ಅರ್ಥವನ್ನು ಸಮರ್ಪಣೆಮಾಡುವದರಿಂದಲೇ[3] ವಿಶೇಷಣಗಳಿರುತ್ತವೆ.

## ಆತ್ಮನೇ ಬ್ರಹ್ಮವು

(ಭಾಷ್ಯ)

೧೦೫. "ತಸ್ಮಾದ್ವಾ ಏತಸ್ಮಾದಾತ್ಮನಃ" (೨-೧) ಇತಿ ಬ್ರಹ್ಮಣ್ಯೇವ ಆತ್ಮಶಬ್ದಪ್ರಯೋಗಾತ್ ವೇದಿತುರಾತ್ಮಾ ಬ್ರಹ್ಮ । "ಏತಮಾನನ್ದಮಯಮಾತ್ಮಾನಮುಪಸಙ್ಕ್ರಾಮತಿ" (೧-೮) ಇತಿ ಚ ಆತ್ಮತಾಂ ದರ್ಶಯತಿ । ತತ್ಪ್ರವೇಶಾಚ್ಚ । "ತತ್ ಸೃಷ್ಟ್ವಾ ತದೇವಾನುಪ್ರಾವಿಶತ್" (೨-೬) ಇತಿ ಚ ತಸ್ಯೈವ ಜೀವರೂಪೇಣ ಶರೀರೇ ಪ್ರವೇಶಂ ದರ್ಶಯತಿ । ಅತೋ ವೇದಿತುಃ ಸ್ವರೂಪಂ ಬ್ರಹ್ಮ ॥

(ಭಾಷ್ಯಾರ್ಥ)

"ಆ ಈ ಆತ್ಮನಿಂದಲೇ" (೨-೧) ಎಂದು ಬ್ರಹ್ಮದಲ್ಲಿಯೇ ಆತ್ಮಶಬ್ದವನ್ನು ಪ್ರಯೋಗಮಾಡಿರುವದರಿಂದ ಅರಿಯುವಾತನ ಆತ್ಮನೇ ಬ್ರಹ್ಮವು. "ಈ ಆನಂದಮಯನೆಂಬ ಆತ್ಮನನ್ನು ಉಪಸಂಕ್ರಮಿಸುತ್ತಾನೆ" (೨-೮) ಎಂದೂ (ಬ್ರಹ್ಮವು)

1 ವಿಶೇಷಣಕ್ಕೆ ಶೂನ್ಯವೇ ಅರ್ಥವಾದರೆ ಯಾವ ಅರ್ಥವನ್ನೂ ಹೇಳದ ಶಬ್ದವು ವಿಶೇಷ್ಯದ ನಿಯಾಮಕವಾಗುವದು ಹೇಗೆ? ಆದ್ದರಿಂದಲೂ ಸತ್ಯಾದಿಗಳಿಗೆ ಅರ್ಥವಿದೆ.

2. ವಿಶೇಷಣಗಳನ್ನು ಹೇಳುವ ಶಬ್ದಗಳು ಅರ್ಥವುಳ್ಳವಾಗಿರುವಂತೆ ವಿಶೇಷ್ಯವನ್ನು ಹೇಳುವ ಬ್ರಹ್ಮಶಬ್ದವೂ ಅರ್ಥವಂತವಾಗಿದೆ. ಬ್ರಹ್ಮ ಎಂದರೆ ದೊಡ್ಡದು ಎಂದು ಲೋಕದಲ್ಲಿ ಅದಕ್ಕೆ ಅರ್ಥವು ಪ್ರಸಿದ್ಧವಾಗಿಯೇ ಇದೆ.

3. 'ವಿಶೇಷ್ಯವಾದ ಬ್ರಹ್ಮವು ಸತ್ಯರೂಪವಾದದ್ದು, ಜ್ಞಾನರೂಪವಾದದ್ದು ಎಂದು ತಿಳಿಸುವದೇ ಶಬ್ದದ ಕೃತ್ಯ; ಅನೃತವಲ್ಲ, ಜಡವಲ್ಲ ಎಂಬುದು ಆರ್ಥಿಕ. ಆದ್ದರಿಂದ ವಾಕ್ಯವು ಶೂನ್ಯವನ್ನು ಹೇಳುತ್ತದೆ ಎಂಬುದೂ ಸರಿಯಲ್ಲ.

ಆತ್ಮನೆಂದು[1] (ಶ್ರುತಿಯು) ತಿಳಿಸುತ್ತದೆ. ಅದರ ಪ್ರವೇಶ(ವನ್ನು ಹೇಳಿರುವ)ದರಿಂದಲೂ (ಆತ್ಮನೇ ಬ್ರಹ್ಮವು). "ಈ ಆನಂದಮಯನೆಂಬ ಆತ್ಮನನ್ನು ಉಪಸಂಕ್ರಮಿಸುತ್ತಾನೆ" (೨-೮) ಎಂದೂ (ಬ್ರಹ್ಮವು) ಆತ್ಮನೆಂದು (ಶ್ರುತಿಯು) ತಿಳಿಸುತ್ತದೆ. ಅದರ ಪ್ರವೇಶ(ವನ್ನು ಹೇಳಿರುವ)ದರಿಂದಲೂ (ಆತ್ಮನೇ ಬ್ರಹ್ಮವು) "ಅದನ್ನು ಸೃಷ್ಟಿಸಿ ಅದನ್ನೇ ಪ್ರವೇಶಿಸಿದನು" (೨-೬) ಎಂಬ (ವಾಕ್ಯದಿಂದ)ಲೂ ಅದೇ (ಬ್ರಹ್ಮವೇ) ಜೀವರೂಪದಿಂದ ಶರೀರವನ್ನು ಹೊಕ್ಕಿತು ಎಂದು ತಿಳಿಸುತ್ತದೆ. ಆದ್ದರಿಂದ ಅರಿಯುವಾತನ ಆತ್ಮನೇ ಬ್ರಹ್ಮವು.[2]

## ಬ್ರಹ್ಮವು ಜ್ಞಾತೃವೂ ಅಲ್ಲ, ವೃತ್ತಿಜ್ಞಾನವೂ ಅಲ್ಲ

(ಭಾಷ್ಯ)

೧೦೬. ಏವಂ ತರ್ಹಿ ಆತ್ಮತ್ವಾತ್ ಜ್ಞಾನಕರ್ತೃತ್ವಮ್ । ಆತ್ಮಾ ಜ್ಞಾತಾ ಇತಿ ಹಿ ಪ್ರಸಿದ್ಧಮ್ । "ಸೋಽಕಾಮಯತ" (೨-೬) ಇತಿ ಚ ಕಾಮಿನೋ ಜ್ಞಾನಕರ್ತೃತ್ವಪ್ರಸಿದ್ಧಿಃ । ಅತೋ ಜ್ಞಾನಕರ್ತೃತ್ವಾತ್ ಜ್ಞಪ್ತಿರ್ಬ್ರಹ್ಮ ಇತ್ಯಯುಕ್ತಮ್ । ಅನಿತ್ಯತ್ವಪ್ರಸಂಗಾಚ್ಚ । ಯದಿ ನಾಮ ಜ್ಞಪ್ತಿರ್ಜ್ಞಾನಮ್ ಇತಿ ಭಾವರೂಪತಾ ಬ್ರಹ್ಮಣಃ ತಥಾಪಿ ಅನಿತ್ಯತ್ವಂ ಪ್ರಸಜ್ಯೇತ । ಪಾರತಂತ್ರ್ಯಂ ಚ । ಧಾತ್ವರ್ಥಾನಾಂ ಕಾರಕಾಪೇಕ್ಷತ್ವಾತ್ । ಜ್ಞಾನಂ ಚ ಧಾತ್ವರ್ಥಃ । ಅತೋಽಸ್ಯ ಅನಿತ್ಯತ್ವಮ್ ಪರತಂತ್ರತಾ ಚ । ನ । ಸ್ವರೂಪಾವ್ಯತಿರೇಕೇಣ ಕಾರ್ಯತ್ವೋಪಚಾರಾತ್ । ಆತ್ಮನಃ ಸ್ವರೂಪಂ ಜ್ಞಪ್ತಿಃ ನ ತತೋ ವ್ಯತಿರಿಚ್ಯತೇ । ಅತೋ ನಿತ್ಯೈವ । ತಥಾಪಿ ಬುದ್ಧೇರುಪಾಧಿಲಕ್ಷಣಾಯಾಃ ಚಕ್ಷುರಾದಿದ್ವಾರೈರ್ವಿಷಯಾಕಾರೇಣ ಪರಿಣಾಮಿನ್ಯಾಃ ಯೇ ಶಬ್ದಾದ್ಯಾಕಾರಾವಭಾಸಾಃ ತೇ ಆತ್ಮವಿಜ್ಞಾನಸ್ಯ ವಿಷಯಭೂತಾಃ ಉತ್ಪದ್ಯಮಾನಾ

---

1 ಆನಂದಮಯಾತ್ಮನು ಭೋಕ್ತೃಸ್ವರೂಪನು; ಅವನನ್ನು ಉಪಸಂಕ್ರಮಿಸುತ್ತಾನೆ ಎಂದು ಹೇಳುವದರ ಮೂಲಕ ಬ್ರಹ್ಮಪ್ರಾಪ್ತಿಯನ್ನು ಹೇಳುವದರಿಂದ ಆತ್ಮನೇ ಬ್ರಹ್ಮ.

2. ಆತ್ಮನೇ ಬ್ರಹ್ಮವು ಎಂಬುದು ಇಲ್ಲಿ ಏಕೆ ಬಂದಿರುವದೆಂಬುದು ಭಾಷ್ಯದಲ್ಲಿ ಸ್ಪಷ್ಟವಾಗಿಲ್ಲ. ಆನಂತ್ಯವನ್ನು ಸ್ಥಾಪಿಸುವದಕ್ಕೆ ಎಂದು ವಾರ್ತಿಕವ್ಯಾಖ್ಯಾನದಲ್ಲಿದೆ; ಆನಂತ್ಯವೆಂದರೆ ಐಕ್ಯವೇ ಎಂಬುದನ್ನು ತಿಳಿಸುವದಕ್ಕೆ ಎಂದು ಉಪನಿಷದ್ವ್ಯಾಖ್ಯಾನದಲ್ಲಿದೆ. ಬ್ರಹ್ಮಶಬ್ದವು ಅರ್ಥವುಳ್ಳ ಶಬ್ದವಾಗಿರುವದರಿಂದ ಮಾತ್ರವೇ ಅಲ್ಲದೆ ಬ್ರಹ್ಮವು ಆತ್ಮನೇ ಆಗಿರುವದರಿಂದಲೂ ಬ್ರಹ್ಮವು ಶೂನ್ಯವಲ್ಲ ಎಂದು ಪ್ರಕೃತಕ್ಕೆ ಇದನ್ನು ಹೊಂದಿಸಿಕೊಳ್ಳುವದು ಯುಕ್ತವೆಂದು ತೋರುತ್ತದೆ. ಸೂ. ಭಾ. ೧-೧-೧ರಲ್ಲಿ ಬ್ರಹ್ಮದ ಪ್ರಸಿದ್ಧಿಯನ್ನು ಕುರಿತ ಚರ್ಚೆಯನ್ನು ನೋಡಿ.

ಏವ ಆತ್ಮವಿಜ್ಞಾನೇನ ವ್ಯಾಪ್ತಾ ಉತ್ಪದ್ಯನ್ತೇ । ತಸ್ಮಾತ್ ಆತ್ಮವಿಜ್ಞಾನಾವಭಾಸ್ಯಾಶ್ಚ[1] ತೇ ವಿಜ್ಞಾನಶಬ್ದವಾಚ್ಯಾಶ್ಚ ಧಾತ್ವರ್ಥಭೂತಾಃ ಆತ್ಮನ ಏವ ಧರ್ಮಾಃ ವಿಕ್ರಿಯಾರೂಪಾಃ ಇತ್ಯವಿವೇಕಿಭಿಃ ಪರಿಕಲ್ಪ್ಯನ್ತೇ । ಯತ್ತು ಬ್ರಹ್ಮಣೋ ವಿಜ್ಞಾನಂ ತತ್ ಸವಿತೃಪ್ರಕಾಶವತ್ ಅಗ್ನ್ಯುಷ್ಣವಚ್ಚ ಬ್ರಹ್ಮಸ್ವರೂಪಾವ್ಯತಿರಿಕ್ತಂ ಸ್ವರೂಪಮೇವ ತತ್ । ನ ತತ್ ಕಾರಣಾನ್ತರಸವ್ಯಪೇಕ್ಷಮ್ । ನಿತ್ಯಸ್ವರೂಪತ್ವಾತ್ । ಸರ್ವಭಾವಾನಾಂ ಚ ತೇನಾವಿಭಕ್ತದೇಶಕಾಲತ್ವಾತ್ ಕಾಲಾಕಾಶಾದಿಕಾರಣತ್ವಾತ್ ನಿರತಿಶಯಸೂಕ್ಷ್ಮತ್ವಾಚ್ಚ ನ ತಸ್ಯ ಅನ್ಯದ್ ಅವಿಜ್ಞೇಯಂ ಸೂಕ್ಷ್ಮಂ ವ್ಯವಹಿತಂ ವಿಪ್ರಕೃಷ್ಟಂ ಭೂತಂ ಭವತ್ ಭವಿಷ್ಯದ್ ವಾ ಅಸ್ತಿ । ತಸ್ಮಾತ್ ಸರ್ವಜ್ಞಂ ಬ್ರಹ್ಮ । ಮನ್ತ್ರವರ್ಣಾಚ್ಚ "ಅಪಾಣಿಪಾದೋ ಜವನೋ ಗ್ರಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ । ಸ ವೇತ್ತಿ ವೇದ್ಯಂ ನ ಚ ತಸ್ಯಾಸ್ತಿ ವೇತ್ತಾ ತಮಾಹುರಗ್ರ್ಯಂ ಪುರುಷಂ ಮಹಾನ್ತಮ್" (ಶ್ವೇ. ೩-೧೯) ಇತಿ । "ನ ಹಿ ವಿಜ್ಞಾತುರ್ವಿಜ್ಞಾತೇರ್ವಿಪರಿಲೋಪೋ ವಿದ್ಯತೇಽವಿನಾಶಿತ್ವಾನ್ನ ತು ತದ್ದ್ವಿತೀಯಮಸ್ತಿ ।" (ಬೃ. ೪-೩-೩೦) ಇತ್ಯಾದಿಶ್ರುತೇಶ್ಚ । ವಿಜ್ಞಾತೃಸ್ವರೂಪಾವ್ಯತಿರೇಕಾತ್ ಕರಣಾದಿನಿಮಿತ್ತಾನಪೇಕ್ಷತ್ವಾಚ್ಚ ಬ್ರಹ್ಮಣೋ ಜ್ಞಾನಸ್ವರೂಪತ್ವೇಽಪಿ ನಿತ್ಯತ್ವಪ್ರಸಿದ್ಧಿಃ । ಅತೋ ನೈವ ಧಾತ್ವರ್ಥಸ್ತತ್ ಅಕ್ರಿಯಾರೂಪತ್ವಾತ್ । ಅತ ಏವ ಚ ನ ಜ್ಞಾನಕರ್ತೃ ॥

(ಭಾಷಾರ್ಥ)

(ಆಕ್ಷೇಪ) : ಹೀಗಾದರೆ (ಬ್ರಹ್ಮವು) ಆತ್ಮನಾಗಿರುವದರಿಂದ ಜ್ಞಾನಕರ್ತೃವೆಂದಾಯಿತು. ಆತ್ಮನು ಜ್ಞಾತೃವೆಂದಲ್ಲವೆ, ಪ್ರಸಿದ್ಧವಾಗಿದೆ? "ಅವನು ಕಾಮಿಸಿದನು" (೨-೬) ಎಂಬ (ಶ್ರುತಿಯಿಂದಲೂ) ಕಾಮಿಯಾಗಿರುವ (ಬ್ರಹ್ಮವು) ಜ್ಞಾನಕರ್ತೃವೆಂದು ಸಿದ್ಧವಾಗುತ್ತದೆ.[2] ಆದ್ದರಿಂದ ಜ್ಞಾನಕರ್ತೃವಾಗಿರುವದರಿಂದ ಬ್ರಹ್ಮವು ಜ್ಞಪ್ತಿ ಎಂದು (ಶ್ರುತಿಗೆ ಅರ್ಥಮಾಡಿದ್ದು)[3] ಸರಿಯಲ್ಲ.[4] (ಬ್ರಹ್ಮವು) ಅನಿತ್ಯವಾಗುವದರಿಂದಲೂ (ಈ ಅರ್ಥವು ಸರಿಯಲ್ಲ). ಹೇಗೆಂದರೆ: - ಒಂದು ವೇಳೆ ಜ್ಞಾನವೆಂದರೆ ಜ್ಞಪ್ತಿಯು ಎಂದು (ಅರ್ಥಮಾಡಿ) ಬ್ರಹ್ಮವು ಭಾವರೂಪವೆಂದು (ಇಟ್ಟು

1 "ಆತ್ಮವಿಜ್ಞಾನಾವಭಾಸಾಶ್ಚ" ಎಂದು ಆ॥ ಪಾಠ.

2 ವಿಜ್ಞಾನಾತ್ಮನಾದ ಜೀವನೇ ಬ್ರಹ್ಮ ಎಂದು ಪೂರ್ವಪಕ್ಷಿ ತಿಳಿದಿರುತ್ತಾನೆ.

3 ೯೯ನೆಯ ಭಾಭಾ ದಲ್ಲಿ

4 "ಜ್ಞಾನಂ ಬ್ರಹ್ಮ" ಎಂದರೆ ಜ್ಞಾನವುಳ್ಳದ್ದು ಬ್ರಹ್ಮವು ಎಂದೇ ಅರ್ಥಮಾಡಬೇಕೆಂದು ಭಾವ.

ಕೊಂಡರೂ ಅದು) ಅನಿತ್ಯವು ಎಂದಾಗುತ್ತದೆ. (ಅದು) ಪರತಂತ್ರವೆಂದೂ (ಆಗುತ್ತದೆ). ಏಕೆಂದರೆ ಧಾತುವಿನ ಅರ್ಥ (ವಾದ ಕ್ರಿಯೆ) ಗಳು ಕಾರಕಗಳನ್ನು ಬಯಸುತ್ತವೆ.[1] ಜ್ಞಾನವೆಂಬುದು ಧಾತುವಿನ ಅರ್ಥವಾಗಿರುತ್ತದೆ ; ಆದ್ದರಿಂದ ಇದು ಅನಿತ್ಯವೆಂದೂ ಪರತಂತ್ರವೆಂದೂ (ಆಯಿತು).

(ಪರಿಹಾರ) :- - ಹಾಗಲ್ಲ. (ಅದು ಬ್ರಹ್ಮದ) ಸ್ವರೂಪಕ್ಕಿಂತ ಬೇರೆಯಲ್ಲ ವಾದ್ದರಿಂದ, (ಅದು) ಕಾರ್ಯವೆಂದು ಉಪಚಾರಕ್ಕೆ ಕರೆದಿರುತ್ತದೆ.[2] ಎಂಬುದು ಆತ್ಮನ ಸ್ವರೂಪವೇ ಹೊರತು ಅದಕ್ಕಿಂತ ಬೇರೆಯಾಗಿರುವದಿಲ್ಲ. ಆದ್ದರಿಂದ (ಅದು) ನಿತ್ಯವೇ (ಆಗಿರುತ್ತದೆ). ಹೀಗಿದ್ದರೂ ಉಪಾಧಿರೂಪವಾದ ಬುದ್ಧಿಯು[3] ಚಕ್ಷು ರಿಂದ್ರಿಯವೇ ಮುಂತಾದವುಗಳ ಮೂಲಕ (ಹೊರಟು) ವಿಷಯಗಳ ಆಕಾರವಾಗಿ ಪರಿಣಮಿಸುವಾಗ ಅದಕ್ಕೆ ಯಾವ ಶಬ್ದಾದಿಗಳ ಆಕಾರವಾಗಿ ತೋರುವ (ಪ್ರತ್ಯಯ ಗಳಿರುವುವೋ)[4] ಅವು ಆತ್ಮವಿಜ್ಞಾನಕ್ಕೆ ವಿಷಯವಾಗಿ ಹುಟ್ಟುವಾಗಲೇ ಆತ್ಮ ವಿಜ್ಞಾನದಿಂದ ವ್ಯಾಪ್ತವಾಗಿ ಹುಟ್ಟುತ್ತವೆ. ಆದ್ದರಿಂದ ಆತ್ಮವಿಜ್ಞಾನದಿಂದ ಬೆಳಗುವವೂ[5] ವಿಜ್ಞಾನವೆಂಬ ಶಬ್ದಕ್ಕೆ ವಾಚ್ಯವಾದವೂ ಆಗಿರುವ ಧಾತ್ವರ್ಥ ಗಳಾದ ಆ ಪ್ರತ್ಯಯಗಳು ಆತ್ಮನಿಗೇ ಸೇರಿದ ವಿಕಾರರೂಪವಾದ ಧರ್ಮಗಳು ಎಂದು[6] ಅವಿವೇಕಿಗಳು ಕಲ್ಪಿಸಿರುತ್ತಾರೆ. ಆದರೆ ಯಾವದು ಬ್ರಹ್ಮದ ವಿಜ್ಞಾ ನವೋ ಅದು ಸೂರ್ಯನ ಬೆಳಕಿನಂತೆಯೂ ಬೆಂಕಿಯ ಬಿಸಿಯಂತೆಯೂ ಬ್ರಹ್ಮದ

---

1. ಕಾರಕಗಳಿಲ್ಲದೆ ಕ್ರಿಯೆಗಳು ಹುಟ್ಟುವದಿಲ್ಲ.

2. ನಿತ್ಯವಾದ ಬ್ರಹ್ಮದ ಸ್ವರೂಪವು ಮುಖ್ಯಾರ್ಥದಲ್ಲಿ ಕಾರ್ಯವಾಗಲಾರದು, ಏಕೆಂ ದರೆ ಸ್ವರೂಪವು ಹುಟ್ಟುವದಲ್ಲ.

3. ಅಂತಃಕರಣವು. ಆತ್ಮನು ಅಂತಃಕರಣವೆಂಬ ಉಪಾಧಿಯಿಂದಲೇ ಜ್ಞಾತೃವೆನಿ ಸಿರುತ್ತಾನೆ.

4. ಈ ಪ್ರತಿಯೊಂದು ಪ್ರತ್ಯಯವೂ ಅಂತಃಕರಣದ ಧರ್ಮವಾದರೂ ಬೆಂಕಿಯಿಂದ ಕಾಸಿದ ಕಬ್ಬಿಣವು ಕೆಂಪಗೆ ಕಾಣಿಸುವಂತೆಯೂ ಸುಡುವಂತೆಯೂ ಜ್ಞಾನರೂಪನಾದ ಆತ್ಮನ ಸನ್ನಿಧಿಯಿಂದ ಜ್ಞಾನವೇ ಎಂಬಂತೆ ತೋರುತ್ತಿರುವದು. ನಿಜವಾಗಿ ಇದು ಜ್ಞಾನಾಭಾಸ, ಜ್ಞಾನದಂತೆ ತೋರುವದು, ಜ್ಞಾನವಲ್ಲ.

5. "ಆತ್ಮವಿಜ್ಞಾನಾವಭಾಸಾಶ್ಚ" ಎಂಬ ಆ॥ ಪಾಠದಲ್ಲಿ 'ಆತ್ಮವಿಜ್ಞಾನದಂತೆ ತೋರುವವುಗಳೂ' ಎಂದು ಕನ್ನಡಿಸಿಕೊಳ್ಳಬೇಕು.

6. ಆತ್ಮನ ಧರ್ಮಗಳಾದ ಜ್ಞಾನಗಳು ಹುಟ್ಟಿ ನಾಶವಾಗುತ್ತವೆ ಎಂದು.

ಸ್ವರೂಪಕ್ಕಿಂತ ಬೇರೆಯಲ್ಲ, ಅದು (ಅದರ) ಸ್ವರೂಪವೇ (ಆಗಿರುತ್ತದೆ). ಅದು ಮತ್ತೊಂದು ಕಾರಣವನ್ನು ಬಯಸುವದಿಲ್ಲ, ಏಕೆಂದರೆ ನಿತ್ಯವಾಗಿರುತ್ತದೆ. **ಯಾವ ಪದಾರ್ಥಗಳೂ ಅದಕ್ಕಿಂತ ಬೇರೆಯಾದ ದೇಶದಲ್ಲಾಗಲಿ ಕಾಲದಲ್ಲಾಗಲಿ ಇರುವಹಾಗಿಲ್ಲವಾದ್ದರಿಂದಲೂ[1] ಕಾಲ ಆಕಾಶ ಮುಂತಾದವುಗಳಿಗೆ (ಅದು) ಕಾರಣವಾಗಿರುವದರಿಂದಲೂ[2] ಮಿಗಿಲಿಲ್ಲದಷ್ಟು ಸೂಕ್ಷ್ಮವಾಗಿರುವದರಿಂದಲೂ[3] ಅದಕ್ಕೆ ಅರಿಯಲಾಗದ, ಸೂಕ್ಷ್ಮವಾದ, ನಡುವೆ ವ್ಯವಧಾನವುಳ್ಳ, ದೂರವಿರುವ, ಹಿಂದಿನ ಕಾಲದ ಅಥವಾ ಈಗಿನ ಕಾಲದ, ಅಥವಾ ಮುಂದಿನಕಾಲದ ಬೇರೊಂದು (ವಸ್ತು ಯಾವದೂ) ಇರುವದಿಲ್ಲ.[4]** ಆದ್ದರಿಂದ ಬ್ರಹ್ಮವು **ಸರ್ವಜ್ಞವು.** "ಕೈಕಾಲುಗಳಿಲ್ಲದೆ ವೇಗವಾಗಿ ನಡೆಯುವನು, ಹಿಡಿದುಕೊಳ್ಳುವನು ; ಕಣ್ಣಿಲ್ಲದೆ ನೋಡುವನು, ಆತನು ಕಿವಿಯಿಲ್ಲದೆ ಕೇಳುವನು, ಆತನೇ ಅರಿಯತಕ್ಕದ್ದನ್ನೆಲ್ಲ ಅರಿಯುತ್ತಾನೆ, ಆದರೆ ಆತನನ್ನು ಅರಿಯುವವನು (ಮತ್ತೊಬ್ಬನು) ಇಲ್ಲ. ಆತನನ್ನೇ ಮೊದಲಿನ ಪುರುಷನು, ಮಹಾಂತನು ಎನ್ನುವರು." (ಶ್ವೇ. ೩-೧೯) ಎಂಬ **ಮಂತ್ರವರ್ಣವೂ** "ಅರಿಯುವಾತನ ಅರಿವಿಗೆ ಲೋಪವೆಂಬುದಿಲ್ಲ, ಏಕೆಂದರೆ (ಅದು) ವಿನಾಶವಾಗುವದಿಲ್ಲ ; ಆದರೆ (ಅಲ್ಲಿ ತನಗಿಂತ ಬೇರೆಯಾದ) ಎರಡನೆಯ ವಸ್ತುವಿಲ್ಲ" (ಬೃ. ४-೩-೩೦) ಮುಂತಾದ ಶ್ರುತಿಗಳು ಇದಕ್ಕೆ ಪ್ರಮಾಣವು. (ಹೀಗೆ) ಅರಿಯುವಾತನ ಸ್ವರೂಪಕ್ಕಿಂತ (ಜ್ಞಾನವು) ಬೇರೆಯಾಗಿಲ್ಲವಾದ್ದರಿಂದಲೂ ಕರಣಗಳೇ ಮುಂತಾದ ನಿಮಿತ್ತವನ್ನು ಬಯಸುವದಿಲ್ಲವಾದ್ದರಿಂದಲೂ ಬ್ರಹ್ಮವು ಜ್ಞಾನಸ್ವರೂಪವು ಎಂದರೂ (ಅದು) ನಿತ್ಯವೆಂದು ಸಿದ್ಧವಾಗುತ್ತದೆ. ಆದ್ದರಿಂದ ಅದು ಧಾತ್ವರ್ಥವಲ್ಲವೇ ಅಲ್ಲ.[5] ಆದ್ದರಿಂದ ಜ್ಞಾನಕ್ರಿಯೆಯ ಕರ್ತೃವೂ ಅಲ್ಲ.[6]

---

1. ಏಕೆಂದರೆ ದೇಶಕಾಲಗಳನ್ನೆಲ್ಲಾ ಅದು ವ್ಯಾಪಿಸಿಕೊಂಡಿರುತ್ತದೆ.

2. ಆದ್ದರಿಂದ ಕಾಲಾಕಾಶಾದಿಗಳನ್ನೂ ಅದು ಬೆಳಗಬಲ್ಲದು.

3. ಆದ್ದರಿಂದ ಅತ್ಯಂತ ಸೂಕ್ಷ್ಮವಾದ ವಸ್ತುಗಳನ್ನು ಅರಿಯಬಲ್ಲದು.

4. ವ್ಯವಧಾನವುಳ್ಳ ಎಂದರೆ ಕಾಲದಿಂದ ಹಿಂದೆ ಅಥವಾ ಮುಂದೆ ಇರುವ ಎಂದರ್ಥ. ದೂರವಿರುವ ಎಂದರೆ ದೇಶದಿಂದ ಸಂಬಂಧಪಡದ ಎಂದರ್ಥ ಬ್ರಹ್ಮದ ಸ್ವರೂಪಜ್ಞಾನವು ಅಂತಃಕರಣದ ವೃತ್ತಿರೂಪವಾದ ಜ್ಞಾನಕ್ಕಿಂತ ಅತ್ಯಂತ ವಿಲಕ್ಷಣವೆಂಬುದನ್ನು ಇಲ್ಲಿರುವ ವಿಶೇಷಣಗಳು ತಿಳಿಸುತ್ತವೆ

5. ಆದ್ದರಿಂದ ಪರತಂತ್ರವೂ ಅಲ್ಲ.

6. ಏಕೆಂದರೆ ಜ್ಞಾತೃವಾದ ಜೀವನಂತೆ ಸ್ವರೂಪಕ್ಕಿಂತ ಬೇರೆಯಾದ ಜ್ಞಾನಕ್ಕೆ ಆಶ್ರಯವಲ್ಲ.

## ಬ್ರಹ್ಮಸ್ವರೂಪವು ಶಬ್ದಕ್ಕೆ ಸಿಲುಕದು

(ಭಾಷ್ಯ)

೧೦೭. ತಸ್ಮಾದೇವ ಚ ನ ಜ್ಞಾನಶಬ್ದವಾಚ್ಯಮಪಿ ತದ್ ಬ್ರಹ್ಮ । ತಥಾಪಿ ತದಾಭಾಸವಾಚಕೇನ ಬುದ್ಧಿಧರ್ಮವಿಷಯೇಣ ಜ್ಞಾನಶಬ್ದೇನ ತಲ್ಲಕ್ಷ್ಯತೇ । ನ ತು ಉಚ್ಯತೇ । ಶಬ್ದಪ್ರವೃತ್ತಿಹೇತುಜಾತ್ಯಾದಿಧರ್ಮರಹಿತತ್ವಾತ್ । ತಥಾ ಸತ್ಯಶಬ್ದೇನಾಪಿ । ಸರ್ವವಿಶೇಷಪ್ರತ್ಯಸ್ತಮಿತಸ್ವರೂಪತ್ವಾದ್ ಬ್ರಹ್ಮಣಃ । ಬಾಹ್ಯಸತ್ತಾಸಾಮಾನ್ಯವಿಷಯೇಣ ಸತ್ಯಶಬ್ದೇನ ಲಕ್ಷ್ಯತೇ "ಸತ್ಯಂ ಬ್ರಹ್ಮ" ಇತಿ । ನ ತು ಸತ್ಯಶಬ್ದವಾಚ್ಯಮೇವ ಬ್ರಹ್ಮ । ಏವಂ ಸತ್ಯಾದಿಶಬ್ದಾಃ ಇತರೇತರಸನ್ನಿಧೌ[1] ಅನ್ಯೋನ್ಯನಿಯಮ್ಯನಿಯಾಮಕಾಃ ಸನ್ತಃ ಸತ್ಯಾದಿಶಬ್ದವಾಚ್ಯಾತ್ ತನ್ನಿವರ್ತಕಾಃ ಬ್ರಹ್ಮಣೋ ಲಕ್ಷಣಾರ್ಥಾಶ್ಚ ಭವನ್ತಿ । ಇತ್ಯತಃ ಸಿದ್ಧಂ "ಯತೋ ವಾಚೋ ನಿವರ್ತನ್ತೇ । ಅಪ್ರಾಪ್ಯಮನಸಾ ಸಹ" (೨-೪), "ಅನಿರುಕ್ತೇಽನಿಲಯನೇ" (೨-೭) ಇತಿ ಚ ಅವಾಚ್ಯತ್ವಂ ನೀಲೋತ್ಪಲವತ್ ಅವಾಕ್ಯಾರ್ಥತ್ವಂ ಚ ಬ್ರಹ್ಮಣಃ ॥

(ಭಾಷ್ಯಾರ್ಥ)

ಆದ್ದರಿಂದಲೇ ಆ ಬ್ರಹ್ಮವು ಜ್ಞಾನಶಬ್ದದ ವಾಚ್ಯಾರ್ಥವೂ ಅಲ್ಲ. ಹಾಗಿದ್ದರೂ ಆ (ಆತ್ಮನ) ಆಭಾಸಕ್ಕೆ ವಾಚಕವಾಗಿಯೂ ಬುದ್ಧಿಯ ಧರ್ಮವನ್ನು ವಿಷಯೀಕರಿಸುವದಾಗಿಯೂ[2] ಇರುವ ಜ್ಞಾನ' ಎಂಬ ಶಬ್ದದಿಂದ ಅದು ಲಕ್ಷಿತವಾಗಿರುತ್ತದೆ;[3] ಆದರೆ (ಅದಕ್ಕೆ) ವಾಚ್ಯವಾಗಿರುವದಿಲ್ಲ, ಏಕೆಂದರೆ ಶಬ್ದಪ್ರವೃತ್ತಿಗೆ ನಿಮಿತ್ತವಾದ ಜಾತಿಯೇ ಮುಂತಾದ ಯಾವ ಧರ್ಮವೂ (ಅದರಲ್ಲಿ)ರುವದಿಲ್ಲ.[4] ಇದರಂತೆ ಸತ್ಯಶಬ್ದಕ್ಕೂ (ಅದು ವಾಚ್ಯವಲ್ಲ, ಲಕ್ಷ್ಯವಾಗಿರುತ್ತದೆ). ಬ್ರಹ್ಮವು ಎಲ್ಲಾ ಬಗೆಯ ವಿಶೇಷಗಳೂ ಮರೆಯಾಗಿರುವ ಸ್ವರೂಪವಾದ್ದರಿಂದ

---

1. "ಇತರೇತರಸಂನಿಧಾನಾತ್" ಎಂದು ಪಾ॥ಕಾ॥ ಪಾಠ.

2. ಚಿದಾಭಾಸಯುಕ್ತವಾಗಿರುವ ಅಂತಃಕರಣವೃತ್ತಿಯು ಜ್ಞಾನ ಎಂಬ ಶಬ್ದಕ್ಕೆ ವಾಚ್ಯವಾಗಿರುತ್ತದೆ.

3. ಜ್ಞಾನಾಭಾಸಕ್ಕೆ ಮೂಲವಾಗಿರುವದರಿಂದ ಇದನ್ನು ಲಕ್ಷಣೆಯಿಂದ ಜ್ಞಾನವೆಂದೇ ಕರೆಯುವರು.

4. ಜಾತಿ, ದ್ರವ್ಯ, ಗುಣ, ಕ್ರಿಯೆ, ಸಂಬಂಧ-ಎಂಬ ಧರ್ಮಗಳು. ಮಾ. ಭಾ. ೭, ಕೇ. ಭಾ. ೧-೩, ಗೀ. ಭಾ. ೧೩-೧೨.

ಹೊರಗಿನ **ಸತ್ತಾಸಾಮಾನ್ಯವನ್ನು**[1] ತಿಳಿಸುವ ಸತ್ಯಶಬ್ದದಿಂದ ಲಕ್ಷಿತವಾಗಿ "ಸತ್ಯವಾದದ್ದು ಬ್ರಹ್ಮವು" ಎನಿಸಿಕೊಳ್ಳುತ್ತದೆ; ಅಷ್ಟೇ ಹೊರತು ಬ್ರಹ್ಮವು ಸತ್ಯಶಬ್ದಕ್ಕೆ ವಾಚ್ಯವೇ (ಎನ್ನುವದ)ಕ್ಕಿಲ್ಲ.

ಈ ರೀತಿಯಲ್ಲಿ ಸತ್ಯವೇ ಮುಂತಾದ ಶಬ್ದಗಳು ಒಂದೊಂದೂ (ಮಿಕ್ಕವುಗಳ) ಸನ್ನಿಧಿಯಲ್ಲಿರುವದರಿಂದ[2] ಒಂದಕ್ಕೊಂದು ನಿಯಮ್ಯವಾಗಿಯೂ ನಿಯಾಮಕವಾಗಿಯೂ ಇರುವವುಗಳಾಗಿ ಸತ್ಯವೇ ಮುಂತಾದ (ಶಬ್ದಗಳ) ವಾಚ್ಯಾರ್ಥಗಳಿಂದ ಆ (ಬ್ರಹ್ಮವನ್ನು) ಬೇರ್ಪಡಿಸುತ್ತಾ[3] ಬ್ರಹ್ಮದ ಲಕ್ಷಣವನ್ನು (ತಿಳಿಸುವ) ಪ್ರಯೋಜನವನ್ನು(ಂಟುಮಾಡುವ)ವಾಗಿರುತ್ತವೆ. ಹೀಗಿರುವದರಿಂದ "ಯಾವದರಿಂದ ವಾಕ್ಕುಗಳು ಮನಸ್ಸಿನೊಡನೆ (ಅದನ್ನು) ಹೊಂದಲಾರದೆ ಹಿಂದಿರುಗುವವೋ" (೨-೪) "ನಿರ್ವಚನಮಾಡಿ ಹೇಳಲಾಗದ (ತನಗೆ ಮತ್ತೊಂದು) ಆಸರೆಯಿಲ್ಲದ (ಬ್ರಹ್ಮದಲ್ಲಿ ಅಭಯಪ್ರತಿಷ್ಠೆಯನ್ನು ಬೊಂದುತ್ತಾನೆ)" (೨-೭) ಎಂಬ (ಶ್ರುತಿಯಲ್ಲಿರುವಂತೆ) ಬ್ರಹ್ಮವು ಅವಾಚ್ಯವೆಂದೂ **ನೀಲೋತ್ಪಲದಂತೆ ವಾಕ್ಯಾರ್ಥವಲ್ಲವೆಂದೂ**[4] ಸಿದ್ಧವಾಗುತ್ತದೆ.

## ಬ್ರಹ್ಮವನ್ನು ಹೇಗೆ ಅರಿತುಕೊಳ್ಳಬೇಕು ?

(ಭಾಷ್ಯ)

೧೦೮. **ತದ್ ಯಥಾವ್ಯಾಖ್ಯಾತಂ ಬ್ರಹ್ಮ ಯೋ ವೇದ ವಿಜಾನಾತಿ ನಿಹಿತಂ**

---

1. ದ್ರವ್ಯಗುಣಕರ್ಮಗಳಲ್ಲಿ **ಸತ್ತಾಸಾಮಾನ್ಯ** (ಇರವು) ಎಂಬ **ಜಾತಿ** ಇರುವದೆಂದು ವೈಶೇಷಿಕರು ಬಗೆಯುತ್ತಾರೆ.

2. ಜ್ಞಾನ, ಅನಂತ ಎಂಬ ಶಬ್ದಗಳ ಸನ್ನಿಧಿಯಲ್ಲಿರುವದರಿಂದ **ಕಾರಣತ್ವವಾಗಲಿ** ಜಡರೂಪವಾಗಲಿ ಇಲ್ಲದ ಕೂಟಸ್ಥಸತ್ಯ ಎಂಬ ಅರ್ಥವನ್ನು ಸತ್ಯ ಶಬ್ದವು **ತಿಳಿಸುತ್ತದೆ**. ತನ್ನ ವಾಚ್ಯಾರ್ಥವಾದ ಸತ್ತಾಸಾಮಾನ್ಯವಲ್ಲವೆಂದೂ **ತಿಳಿಸುತ್ತದೆ**. ಸತ್ಯ, ಅನಂತ–ಇವುಗಳ ಸನ್ನಿಧಿಯಿಂದ ಜ್ಞಾನವು ತನ್ನ ವಾಚ್ಯವಾದ ಅನಿತ್ಯಜ್ಞಾನದಿಂದ ಬೇರ್ಪಡಿಸಿ ಜ್ಞಪ್ತಿಮಾತ್ರವೆಂದು ತಿಳಿಸುತ್ತದೆ. ಸತ್ಯಜ್ಞಾನಶಬ್ದಗಳ ಸನ್ನಿಧಿಯಿಂದ ಅನಂತವೆಂಬುದು ತನ್ನ ವಾಚ್ಯಾರ್ಥವಾದ **ಕಾಲಾದಿಗಳನ್ನು ಮೀರಿದ ಅದ್ವಿತೀಯ ವಸ್ತು ಎಂದು ತಿಳಿಸುತ್ತದೆ**.

3. **ವಾಚ್ಯಾರ್ಥಕ್ಕಿಂತ ಬ್ರಹ್ಮವು ಬೇರೆ ಎಂದು ತಿಳಿಸುತ್ತಾ**.

4. ನೀಲತ್ವ **ಉತ್ಪಲತ್ವ** ಎಂಬ ಎರಡು ಧರ್ಮಗಳ **ಸಂಸರ್ಗವನ್ನು** ನೀಲಮ್ ಉತ್ಪಲಮ್ ಎಂಬ **ವಾಕ್ಯವು ಹೇಳುವಂತೆ ಸತ್ಯತ್ವವೇ ಮುಂತಾದ ಮೂರು ಧರ್ಮಗಳ ಸೇರುವೆಯ ಸಂಬಂಧವನ್ನು ಸತ್ಯಂ ಜ್ಞಾನಮನಂತಂ ಬ್ರಹ್ಮ ಎಂಬ ವಾಕ್ಯವು ಹೇಳುವದಿಲ್ಲ ಅಥವಾ ಅನೀಲ, ಅನುತ್ಪಲಗಳಿಂದ ಭಿನ್ನವೆಂದು ನೀಲೋತ್ಪಲವಾಕ್ಯವು ಹೇಳುವಂತೆ ಭೇದವನ್ನೂ ಈ ವಾಕ್ಯವು ಹೇಳುವದಿಲ್ಲ**. ಆದ್ದರಿಂದ ಬ್ರಹ್ಮವು **ಅವಾಕ್ಯಾರ್ಥವು**.

**ಸ್ಥಿತಂ ಗುಹಾಯಾಮ್** । ಗೂಹತೇಃ ಸಂವರಣಾರ್ಥಸ್ಯ ನಿಗೂಢಾಃ ಅಸ್ಯಾಂ ಜ್ಞಾನ ಜ್ಞೇಯಜ್ಞಾತೃಪದಾರ್ಥಾಃ ಇತಿ **ಗುಹಾ ಬುದ್ಧಿಃ** । ಗೂಢೌ ಅಸ್ಯಾಂ ಭೋಗಾಪ ವರ್ಗೌ ಪುರುಷಾರ್ಥೌ ಇತಿ ವಾ । **ತಸ್ಯಾಂ ಪರಮೇ ಪ್ರಕೃಷ್ಟೇ ವ್ಯೋಮನ್ ವ್ಯೋಮ್ನಿ ಆಕಾಶೇ ಅವ್ಯಾಕೃತಾಖ್ಯೇ** । ತದ್ ಹಿ ಪರಮಂ ವ್ಯೋಮ "ಏತಸ್ಮಿನ್ ಖಲ್ವಕ್ಷರೇ ಗಾರ್ಗ್ಯಾಕಾಶಃ" (ಬೃ. ೩-೮-೧೧) ಇತಿ ಅಕ್ಷರಸಂನಿಕರ್ಷಾತ್ । "ಗುಹಾಯಾಂ ವ್ಯೋಮ್ನಿ" ಇತಿ ವಾ ಸಾಮಾನಾಧಿಕರಣ್ಯಾತ್ **ಅವ್ಯಾಕೃತಾಕಾಶ ಮೇವ ಗುಹಾ** । ತತ್ರಾಪಿ ನಿಗೂಢಾಃ ಸರ್ವೇ ಪದಾರ್ಥಾಃ ತ್ರಿಷು ಕಾಲೇಷು ಕಾರಣತ್ವಾತ್, ಸೂಕ್ಷ್ಮತರತ್ವಾಚ್ಚ ತಸ್ಮಿನ್ ಅನ್ತಃ ನಿಹಿತಂ ಬ್ರಹ್ಮ **ಹಾರ್ದ ಮೇವ ತು ಪರಮಂ ವ್ಯೋಮ ಇತಿ ನ್ಯಾಯ್ಯಮ್** । ವಿಜ್ಞಾನಾಙ್ಗತ್ವೇನ ವ್ಯೋಮ್ನೋ ವಿವಕ್ಷಿತತ್ವಾತ್ । "ಯೋ ವೈ ಸ ಬಹಿರ್ಧಾ ಪುರುಷಾದಾಕಾಶಃ" "ಯೋ ವೈ ಸೋಽನ್ತಃ ಪುರುಷ ಆಕಾಶಃ", "ಯೋಽಯಮನ್ತರ್ಹೃದಯ ಆಕಾಶಃ" (ಛಾ. ೩-೧೨-೭, ೮, ೯) ಇತಿ ಶ್ರುತ್ಯನ್ತರಾತ್ ಪ್ರಸಿದ್ಧಂ ಹಾರ್ದಸ್ಯ ವ್ಯೋಮ್ನಃ ಪರಮತ್ವಮ್ । ತಸ್ಮಿನ್ ಹಾರ್ದೇ ವ್ಯೋಮ್ನಿ ಯಾ ಬುದ್ಧಿರ್ಗುಹಾ ತಸ್ಯಾಂ ನಿಹಿತಂ ಬ್ರಹ್ಮ । ತದ್ವೃತ್ತ್ಯಾ[1] ವಿವಿಕ್ತತಯಾ ಉಪಲಭ್ಯತೇ ಇತಿ । ನ ಹಿ ಅನ್ಯಥಾ ವಿಶಿಷ್ಟ ದೇಶಕಾಲಸಂಬನ್ಧೋಽಸ್ತಿ ಬ್ರಹ್ಮಣಃ । ಸರ್ವಗತತ್ವಾತ್ ನಿರ್ವಿಶೇಷತ್ವಾಚ್ಚ ॥

(ಭಾಷ್ಯಾರ್ಥ)

ಆಮೇಲೆ ವಿವರಿಸಿದ[2] ಬ್ರಹ್ಮವನ್ನು ಯಾವನು ಗುಹೆಯಲ್ಲಿ (ಆಕಾಶದಲ್ಲಿ) ನಿಹಿತವಾಗಿರುವದೆಂದು ಇದೆ ಎಂದು ಅರಿತುಕೊಳ್ಳುವನೋ ಅನುಭವಕ್ಕೆ ತಂದು ಕೊಳ್ಳುವನೋ ಎಂದು ಅರ್ಥ. ಗುಹೂ ಸಂವರಣೇ ಎಂಬ ಮುಚ್ಚು ಎಂಬರ್ಥದ **ಗುಹೂ** ಧಾತುವಿನಿಂದ (ಬಂದಿರುವ ರೂಪವಿದು). ಇದರಲ್ಲಿ ಜ್ಞಾನ, ಜ್ಞೇಯ, ಜ್ಞಾತೃ–ಎಂಬ ಪದಾರ್ಥಗಳು ಅಡಗಿಕೊಂಡಿರುವವು[3]; ಆದ್ದರಿಂದ **ಗುಹೆ ಎಂದರೆ (ಈ) ಬುದ್ಧಿಯೇ.** ಅಥವಾ ಇದರಲ್ಲಿ ಭೋಗ ಅಪವರ್ಗ[4]–ಈ ಎರಡೂ ಗೂಢ ವಾಗಿರುವವು[5] ಎಂಬ (ಕಾರಣದಿಂದ)ಲಾದರೂ (ಬುದ್ಧಿಯು ಗುಹೆ ಎನಿಸಿರುವದು). ಆ (ಬುದ್ಧಿಯಲ್ಲಿರುವ) ಪರಮವಾದ ಎಂದರೆ ಅತ್ಯುತ್ತಮವಾದ (ವ್ಯೋಮನ್ - ವ್ಯೋಮ್ನಿ) **ವ್ಯೋಮದಲ್ಲಿ ಎಂದರೆ ಅವ್ಯಾಕೃತವೆಂಬ ಆಕಾಶದಲ್ಲಿ** (ಎಂದರ್ಥ).

1. 'ತದ್ವ್ಯಾವೃತ್ತ್ಯಾ' ಎಂದು ವಾ॥ಕಾ॥ ಪಾಠ.
2. ಸತ್ಯಜ್ಞಾನಾನಂತವೆಂದು ಹೇಳಿದ
3. ಏಕೆಂದರೆ ಈ ಮೂರೂ ಅಲ್ಲಿ ತಿಳಿಯಬರುವವು. ಗೀ ಭಾ. ೧೩-೧೭.
4. ಮುಕ್ತಿ.
5. ಬುದ್ಧಿಯೇ ಎಂದರೆ ಅಂತಃಕರಣವೇ ಬಂಧಮೋಕ್ಷಗಳಿಗೆ ಕಾರಣ

ಏಕೆಂದರೆ "ಗಾರ್ಗಿಯೇ ಈ ಅಕ್ಷರದಲ್ಲಿಯೇ ಅಲ್ಲವೆ, ಆಕಾಶವು (ಓತವಾಗಿಯೂ ಪ್ರೋತವಾಗಿಯೂ ಇದೆ) ಎಂದು (ಬೃ. ೩-೮-೧೧ ರಲ್ಲಿ) ಹೇಳಿರುವಂತೆ ಅದು ಅಕ್ಷರಕ್ಕೆ ಸಮೀಪವಾಗಿರುತ್ತದೆ.[1] "ಗುಹೆ ಎಂಬ ವ್ಯೋಮದಲ್ಲಿ" ಎಂದು ಸಾಮಾನಾಧಿಕರಣ್ಯವನ್ನು ಅಂಗೀಕರಿಸಿ **ಅವ್ಯಾಕೃತಾಕಾಶವೇ ಗುಹೆ**[2] ಎಂದಾದರೂ ಅರ್ಥ ಮಾಡಬಹುದು.) ಆ (ಅವ್ಯಾಕೃತದಲ್ಲಿಯೂ) ಎಲ್ಲಾ ಪದಾರ್ಥಗಳೂ ಮೂರು ಕಾಲಗಳಲ್ಲಿಯೂ ಅಡಕವಾಗಿರುವವು; ಏಕೆಂದರೆ ಅದು (ಎಲ್ಲಕ್ಕೂ) ಕಾರಣವಾಗಿರುತ್ತದೆ, ಮತ್ತು (ಎಲ್ಲಕ್ಕಿಂತಲೂ) ಸೂಕ್ಷ್ಮವಾಗಿರುತ್ತದೆ. ಆ (ಗುಹೆಯಲ್ಲಿ) ಬ್ರಹ್ಮವು ಇಡಲ್ಪಟ್ಟಿರುತ್ತದೆ (ಎಂದರ್ಥ).[3]

ಆದರೆ (ಇಲ್ಲಿ) '**ಪರಮವಾದ ವ್ಯೋಮ**' ಎಂಬುದು **ಹೃದಯದ (ಆಕಾಶವೇ) ಎಂಬುದು ಯುಕ್ತ**; ಏಕೆಂದರೆ (ಈ) ವ್ಯೋಮವನ್ನು ಅರಿವಿಗೆ ಅಂಗವಾಗಿ[4] ಹೇಳಬೇಕೆಂದು (ಶ್ರುತಿಯು) ಹೊರಟಿರುತ್ತದೆ. "(ಆ ಬ್ರಹ್ಮವಿದೆಯಲ್ಲ) ಅದು ಶರೀರದ ಹೊರಗೆ ಯಾವ ಆಕಾಶವಿದೆಯೋ ಅದೇ", "ಶರೀರದ ಒಳಗೆ ಯಾವ ಆಕಾಶವಿದೆಯೋ ಅದೇ" (ಛಾ. ೩-೧೨-೭, ೮, ೯) ಎಂಬ ಬೇರೊಂದು ಶ್ರುತಿಯ ಪ್ರಮಾಣದಿಂದ ಹೃದಯದ ವ್ಯೋಮವು ಪರಮವಾಗಿದೆ[5] ಎಂದು ಪ್ರಸಿದ್ಧವಾಗಿರು

---

1. ವ್ಯಾಕೃತವಾದ ಜಗತ್ತು ಯಾತರಲ್ಲಿ ಹೆಣೆದುಕೊಂಡಿರುವದು? ಎಂಬ ಪ್ರಶ್ನೆಗೆ ಆಕಾಶದಲ್ಲಿ ಎಂದು ಉತ್ತರವನ್ನು ಕೊಟ್ಟ ಬಳಿಕ "ಆಕಾಶವು ಏನನ್ನು ಆಶ್ರಯಿಸಿಕೊಂಡಿದೆ?" ಎಂದು ಗಾರ್ಗಿ ಕೇಳಲು ಯಾಜ್ಞವಲ್ಕ್ಯನು "ಅಕ್ಷರದಲ್ಲಿ" ಎಂದು ಉತ್ತರವನ್ನು ಕೊಟ್ಟಿರುತ್ತಾನೆ. ಆದ್ದರಿಂದ ಭೂತಾಕಾಶಕ್ಕಿಂತಲೂ ಅವ್ಯಾಕೃತಾಕಾಶವು ಬ್ರಹ್ಮಕ್ಕೆ ಹತ್ತಿರವೆಂದಾಯಿತು.

2. "ಗುಹಾಯಾಂ ವ್ಯೋಮನ್" ಎಂಬ ಮಾತುಗಳು ಬೇರೆಬೇರೆಯ ಪದಾರ್ಥಗಳನ್ನು ತಿಳಿಸುತ್ತವೆ ಎಂದು ಇಟ್ಟುಕೊಂಡು ಅರ್ಥವನ್ನು ಮಾಡಿತ್ತು; ಈಗ ಅವುಗಳೆರಡೂ ಒಂದೇ ವಸ್ತುವನ್ನು ಹೇಳುತ್ತವೆ ಎಂದು ಇಟ್ಟುಕೊಂಡು ಅವ್ಯಾಕೃತ ಗುಹೆಎಂಬ ಆಕಾಶದಲ್ಲಿ ಎಂದು ಅರ್ಥವನ್ನು ಮಾಡಿರುತ್ತದೆ.

3. ಅವ್ಯಾಕೃತವು ಕಾರಣವು; ಅದರಿಂದಾಚೆಗೆ ನೋಡಿದರೆ ಕಾರ್ಯಕಾರಣಗಳೆರಡನ್ನೂ ಮೀರಿದ ಬ್ರಹ್ಮವು ಉಳಿಯುವದು ಎಂದರ್ಥ.

4. ಬ್ರಹ್ಮವನ್ನು ಅರಿತುಕೊಳ್ಳುವದು ಹೇಗೆ? ಎಂಬುದನ್ನು ತಿಳಿಸುವಾಗ ಪ್ರತ್ಯಕ್ಷಕ್ಕೆ ಬರುವದನ್ನೇ ತಿಳಿಸಬೇಕು. ಅವ್ಯಾಕೃತದಲ್ಲಿದೆ ಎಂದರೆ ಕಾರಣವೇ ಪರೋಕ್ಷವಾಗಿರುವದರಿಂದ ಬ್ರಹ್ಮವೂ ಪರೋಕ್ಷವೆಂದಾಗುತ್ತದೆ.

5. ಛಾಂದೋಗ್ಯದಲ್ಲಿ ಹೃದಯಾಕಾಶವನ್ನು ಬ್ರಹ್ಮವೆಂದು ಉಪಾಸನೆಮಾಡುವದಕ್ಕೆ ಕಾರಣವನ್ನು ಹೇಳುವಾಗ ಆ ಆಕಾಶವು ಎಲ್ಲಕ್ಕೂ ಉತ್ಕೃಷ್ಟವೆಂದು ತಿಳಿಸಿದೆ.

ತ್ತದೆ(ಯಲ್ಲವೆ)? ಆ ಹೃದಯದ ವ್ಯೋಮದಲ್ಲಿ ಯಾವ ಬುದ್ಧಿ ಎಂಬ ಗುಹೆಯುಂಟೋ ಅದರಲ್ಲಿ ಬ್ರಹ್ಮವು ಇಡಲ್ಪಟ್ಟಿರುತ್ತದೆ. ಅದರ ವೃತ್ತಿಯಿಂದ ವಿಂಗಡವಾಗಿ[1] ತಿಳಿಯಬರುತ್ತದೆಯಾದ್ದರಿಂದ (ಅದರಲ್ಲಿಡಲ್ಪಟ್ಟಿದೆ ಎಂದು ಹೇಳಿದೆ). ಹಾಗಲ್ಲದೆ ಇದ್ದರೆ ಬ್ರಹ್ಮಕ್ಕೆ ಒಂದಾನೊಂದು ಗೊತ್ತಾದ ದೇಶದ ಅಥವಾ ಕಾಲದ ಸಂಬಂಧವು ಇರುವಹಾಗೆಯೇ ಇಲ್ಲ; ಏಕೆಂದರೆ ಅದು ಎಲ್ಲೆಲ್ಲಿಯೂ ಇದ್ದುಕೊಂಡಿರುತ್ತದೆ ಯಾವ ವಿಶೇಷಗಳೂ ಇಲ್ಲದ್ದಾಗಿರುತ್ತದೆ.[2]

## ಬ್ರಹ್ಮಜ್ಞಾನದ ಫಲ

(ಭಾಷ್ಯ)

೧೦೯. ಸಃ ಏವಂ ಬ್ರಹ್ಮವಿಜ್ಞಾನನ್ ಕಿಮ್ ಇತಿ? ಆಹ–ಅಶ್ನುತೇ ಭುಙ್ಕ್ತೇ ಸರ್ವಾನ್ ನಿರವಶೇಷಾನ್[3] ಕಾಮಾನ್ (ಕಾಮ್ಯ)[4] ಭೋಗಾನ್ ಇತ್ಯರ್ಥಃ। ಕಿಮ್ ಅಸ್ಮದಾದಿವತ್ ಪುತ್ರಸ್ವರ್ಗಾದೀನ್ ಪರ್ಯಾಯೇಣ? ನೇತ್ಯಾಹ–ಸಹ ಯುಗಪತ್ ಏಕಕ್ಷಣೋಪಾರೂಢಾನೇವ ಏಕಯಾ ಉಪಲಬ್ಧ್ಯಾ ಸವಿತೃಪ್ರಕಾಶವನ್ನಿತ್ಯಯಾ ಬ್ರಹ್ಮಸ್ವರೂಪಾವ್ಯತಿರಿಕ್ತಯಾ ಯಾಮ್ ಅವೋಚಾಮ ಸತ್ಯಂ ಜ್ಞಾನಮನನ್ತಮ್ ಇತಿ। ಏತತ್ ತದುಚ್ಯತೇ "ಬ್ರಹ್ಮಣಾ ಸಹ" ಇತಿ। ಬ್ರಹ್ಮಭೂತೋ ವಿದ್ವಾನ್ ಬ್ರಹ್ಮಸ್ವರೂಪೇಣೈವ ಸರ್ವಾನ್ ಕಾಮಾನ್ ಸಹ ಅಶ್ನುತೇ। ನ ಯಥಾ ಉಪಾಧಿಕೃತೇನ ಸ್ವರೂಪೇಣ ಆತ್ಮನೋ[5] ಜಲಸೂರ್ಯಕಾದಿವತ್ ಪ್ರತಿಬಿಮ್ಬ

---

1. ನಿಹಿತಮ್ ಎಂದರೆ ಬುದ್ಧಿವೃತ್ತಿಯಿಂದ ತಿಳಿಯಬರುವದು ಎಂದು ಅರ್ಥಮಾಡದೆ ಇಡಲ್ಪಟ್ಟಿರುವದು, ಇರುವದು–ಎಂದು ಅಕ್ಷರಾರ್ಥವನ್ನೇ ಇಟ್ಟುಕೊಂಡರೆ ಸರ್ವಗತವೂ ನಿರ್ವಿಶೇಷವೂ ಆದದ್ದು ಹೃದಯದಲ್ಲಿದೆ, ಒಂದು ಗೊತ್ತಾದ ವಿಶೇಷವುಳ್ಳದ್ದು ಎಂದು ಶ್ರುತಿಯು ತನಗೆ ತಾನೇ ವಿರುದ್ಧವಾಗಿ ಹೇಳಿದಂತೆ ಆಗುತ್ತದೆ ಎಂದಭಿಪ್ರಾಯ. ಮುಂ. ಭಾ. ೨೨-೬ ರಲ್ಲಿ ಬ್ರಹ್ಮಪುರೇ ಎಂಬುದರ ವ್ಯಾಖ್ಯಾನವನ್ನು ನೋಡಿ.

2. ಪರಮೇ ವ್ಯೋಮನ್ ಗುಹಾಯಾಂ ನಿಹಿತಮ್–ಉತ್ಕೃಷ್ಟವಾದ ಹೃದಯವೆಂಬ ವ್ಯೋಮದಲ್ಲಿರುವ ಬುದ್ಧಿ ಎಂಬ ಗುಹೆಯಲ್ಲಿ ಸಾಕ್ಷಿಯಾಗಿ ತಿಳಿಯಬರುತ್ತದೆ. ಎಂದು ಅನ್ವಯಮಾಡಿಕೊಳ್ಳಬೇಕೆಂದು ಭಾವ, ಕೇ. ಭಾ. ಭಾ. ೫೨. ೫೪, "ಪ್ರತಿಬೋಧವಿದಿತಮ್" ಎಂಬುದರ ವಿವರವನ್ನು ನೋಡಿರಿ.

3. "ನಿರವಶಿಷ್ಟಾನ್" ಅ|| ಪಾಠ.

4. ಕಾಮ್ಯ ಎಂಬ ಮಾತು ವಾ|| ಪಾಠದಲ್ಲಿ ಮಾತ್ರ ಇದೆ.

5. "ಆತ್ಮನಾ" ಅ|| ಎಂಬ ಪಾಠಕ್ಕಿಂತ ಈ ವಾ|| ಕಾ|| ಪಾಠವೇ ಉತ್ತಮ.

ಭೂತೇನ ಸಾಂಸಾರಿಕೇಣ ಧರ್ಮಾದಿನಿಮಿತ್ತಾಪೇಕ್ಷಾನ್ ಚಕ್ಷುರಾದಿಕರಣಾಪೇಕ್ಷಾಂಶ್ಚ ಕಾಮಾನ್ ಪರ್ಯಾಯೇಣ ಅಶ್ನುತೇ ಲೋಕಃ, ಕಥಂ ತರ್ಹಿ? ಯಥೋಕ್ತೇನ ಪ್ರಕಾರೇಣ ಸರ್ವಜ್ಞೇನ ಸರ್ವಗತೇನ ಸರ್ವಾತ್ಮನಾ ನಿತ್ಯಬ್ರಹ್ಮಾತ್ಮಸ್ವರೂಪೇಣ ಧರ್ಮಾದಿನಿಮಿತ್ತಾನಪೇಕ್ಷಾನ್ ಚಕ್ಷುರಾದಿಕರಣನಿರಪೇಕ್ಷಾಂಶ್ಚ ಸರ್ವಾನ್ ಕಾಮಾನ್ ಸಹೈವ ಅಶ್ನುತೇ ಇತ್ಯರ್ಥಃ। ವಿಪಶ್ಚಿತಾ ಮೇಧಾವಿನಾ ಸರ್ವಜ್ಞೇನ। ತದ್ ಹಿ ವೈಪಶ್ಚಿತ್ಯಮ್ ಯತ್ ಸರ್ವಜ್ಞತ್ವಮ್। ತೇನ ಸರ್ವಜ್ಞಸ್ವರೂಪೇಣ ಬ್ರಹ್ಮಣಾ ಅಶ್ನುತೇ ಇತಿ। ಇತಿ ಶಬ್ದೋ ಮನ್ತ್ರಪರಿಸಮಾಪ್ತ್ಯರ್ಥಃ॥

(ಭಾಷ್ಯಾರ್ಥ)

ಅವನು ಎಂದರೆ ಹೀಗೆ[1] ಬ್ರಹ್ಮವನ್ನು ಅರಿಯುವಾತನು. (ಅರಿಯುವಾತನು) ಏನು? ಎಂದರೆ (ಶ್ರುತಿ) ಹೇಳುತ್ತದೆ. (ಅವನು) ಎಲ್ಲಾ ಒಂದೂ ಉಳಿಯದಂತೆ ಕಾಮುಗಳನ್ನು ಎಂದರೆ (ಎಲ್ಲಾ) ಬಯಸತಕ್ಕ ಭೋಗಗಳನ್ನು ಪಡೆದುಕೊಳ್ಳುತ್ತಾನೆ, ಅನುಭವಿಸುತ್ತಾನೆ ಎಂದರ್ಥ. ನಮ್ಮಂಥವರು[2] ಮಕ್ಕಳು, ಸ್ವರ್ಗ–ಮುಂತಾದ (ಭೋಗ)ಗಳನ್ನು (ಅನುಭವಿಸುವಂತೆ) ಒಂದೊಂದಾಗಿ ಅನುಭವಿಸುತ್ತಾನೇನು? ಎಂದರೆ (ಶ್ರುತಿಯು) ಇಲ್ಲ (ಎಂದು ಉತ್ತರವನ್ನು) ಹೇಳುತ್ತದೆ. ಸಹ ಎಂದರೆ ಒಂದೇ ಕಾಲದಲ್ಲಿ ಒಂದೇ ಕ್ಷಣದಲ್ಲಿ ಸೇರಿರುವ (ಕಾಮು)ಗಳನ್ನೇ ಒಂದೇ ಅರಿವಿನಿಂದ, ಯಾವದನ್ನು (ಹಿಂದೆ) "ಸತ್ಯಂ ಜ್ಞಾನಮನನ್ತಮ್" ಎಂದು ಹೇಳಿದ್ದೆವೋ[3] (ಆ) ಸೂರ್ಯನ ಬೆಳಕಿನಂತೆ ನಿತ್ಯವಾಗಿರುವ ಬ್ರಹ್ಮಸ್ವರೂಪಕ್ಕಿಂತ ಬೇರೆಯಲ್ಲದ[4] (ಒಂದೇ ಅರಿವಿನಿಂದ ಅನುಭವಿಸುತ್ತಾನೆ). "ಬ್ರಹ್ಮಣಾ ಸಹ" (ಬ್ರಹ್ಮವಾಗಿ ಒಮ್ಮೆಗೇ) ಎಂಬುದರ ಅರ್ಥವಿದು.[5] ಜ್ಞಾನಿಯು ಬ್ರಹ್ಮವಾಗಿ ಬ್ರಹ್ಮಸ್ವರೂಪ

---

1. ಬುದ್ಧಿಗೆ ಸಾಕ್ಷಿಯಾಗಿರುವದರಿಂದ ಅರಿಯುವಾತನ ಆತ್ಮನೇ ಎಂದು.

2. ಜ್ಞಾನಿಗಳಲ್ಲದ ಎಲ್ಲಾ ಜೀವರುಗಳೂ,

3. ಜ್ಞಾನವೆಂದರೆ ಜ್ಞಪ್ತಿಯು, ಅದು ಬ್ರಹ್ಮಸ್ವರೂಪವೇ ಎಂದು ಹಿಂದೆ ಭಾ. ಭಾ. ೯೯ ರಲ್ಲಿ ಹೇಳಿತ್ತು.

4. ವೃತ್ತಿಜ್ಞಾನವಾಗಿದ್ದರೆ ವಿಷಯದ ಆಕಾರವಾಗಿ ಮಾರ್ಪಡಬೇಕಾಗಿತ್ತು; ಬ್ರಹ್ಮಸ್ವರೂಪವೇ ಆಗಿರುವದರಿಂದ ಇದು ನಿತ್ಯವಾಗಿದೆ.

5. ಬ್ರಹ್ಮನೊಡನೆ ಎಂದರ್ಥವಲ್ಲ; ಏಕೆಂದರ ಇದು ಭೇದವನ್ನೊಪ್ಪುವ ಉಪಾಸನಾ ಪ್ರಕರಣವಲ್ಲ.

ದಿಂದಲೇ ಎಲ್ಲಾ ಕಾಮಗಳನ್ನೂ ಒಟ್ಟಿಗೆ ಪಡೆದುಕೊಳ್ಳುತ್ತಾನೆ. ಉಪಾಧಿಯಿಂದಾಗಿದ್ದು ಜಲಸೂರ್ಯಕವೇ[1] ಮುಂತಾದ್ದರಂತೆ ಆತ್ಮನ ಪ್ರತಿಬಿಂಬವಾಗಿರುವ ಸಂಸಾರಿಸ್ವರೂಪದಿಂದ ಧರ್ಮವೇ ಮುಂತಾದ ನಿಮಿತ್ತಗಳನ್ನು ಬಯಸುವ ಮತ್ತು ಚಕ್ಷುರಾದೀಂದ್ರಿಯಗಳನ್ನು ಬಯಸುವ[2] ಕಾಮಗಳನ್ನು ಒಂದೊಂದಾಗಿ ಜನರು ಹೇಗೆ ಅನುಭವಿಸುತ್ತಾರೋ ಹಾಗಲ್ಲ. ಮತ್ತೆ ಹೇಗೆ? ಎಂದರೆ ಹಿಂದೆ ಹೇಳಿದ ಸರ್ವಜ್ಞವೂ ಸರ್ವಗತವೂ ಸರ್ವಾತ್ಮವೂ ಆಗಿರುವ ನಿತ್ಯವಾದ ಬ್ರಹ್ಮಸ್ವರೂಪದಿಂದ ಧರ್ಮವೇ ಮುಂತಾದ ನಿಮಿತ್ತಗಳನ್ನು ಬಯಸದ ಮತ್ತು ಚಕ್ಷುರಾದೀಂದ್ರಿಯಗಳನ್ನು ಬಯಸದ ಎಲ್ಲಾ ಕಾಮಗಳನ್ನೂ ಒಂದೇ ಕಾಲದಲ್ಲಿಯೇ ಅನುಭವಿಸುತ್ತಾನೆ ಎಂದರ್ಥ. ವಿಪಶ್ಚಿತನಾದ ಎಂದರೆ ಜಾಣನಾದ, ಸರ್ವಜ್ಞರೂಪವಾದ; ಏಕೆಂದರೆ ಸರ್ವಜ್ಞವಾಗಿರುವದೇ ಜಾಣತನವು.[3] ಆ ಸರ್ವಜ್ಞಸ್ವರೂಪವಾದ ಬ್ರಹ್ಮವಾಗಿ (ಕಾಮಗಳನ್ನೆಲ್ಲ ಒಮ್ಮೆಗೇ) ಪಡೆದುಕೊಳ್ಳುತ್ತಾನೆ ಎಂದು (ಅರ್ಥ). ಇತಿ ಶಬ್ದವನ್ನು ಉಪಯೋಗಿಸಿರುವದು ಮಂತ್ರವು (ಇಲ್ಲಿಗೆ) ಮುಗಿಯಿತೆಂದು ತಿಳಿಸುವದಕ್ಕೆ.

---

## ೨. ಬ್ರಹ್ಮದ ಆನಂತ್ಯ

### ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೧೧೦. ಸರ್ವ ಏವ ವಲ್ಲ್ಯರ್ಥೋ "ಬ್ರಹ್ಮವಿದಾಪ್ನೋತಿ ಪರಮ್" ಇತಿ

---

1. ನೀರಿನಲ್ಲಿ ಕಾಣುವ ಸೂರ್ಯನ ಪ್ರತಿಬಿಂಬ. ಈ ದೃಷ್ಟಾಂತವನ್ನು ಜೀವನಿಗೆ ಭಾಷ್ಯದಲ್ಲಿ ಆಗಾಗ್ಗೆ ಕೊಡುವುದುಂಟು. ಜೀವತ್ವವು ಕಲ್ಪಿತವೆಂದೂ ಜೀವನು ನಿಜವಾಗಿ ಬ್ರಹ್ಮಕ್ಕಿಂತ ಬೇರೆಯಲ್ಲವೆಂದೂ ಇದರಿಂದ ಸ್ಫುಟವಾಗುತ್ತದೆ. ಪ್ರ. ಭಾ. ೪-೧೦, ಗೀ. ಭಾ. ೧೫-೭. ಸೂ. ಭಾ. ೨-೩-೪೬, ೨-೩-೫೦, ೩-೨-೧೮, ಛಾ. ಭಾ. ೬-೩-೨, ಬೃ. ಭಾ. ೧-೪-೭.

2. ಜೀವನು ಹಿಂದೆ ತಾನು ಮಾಡಿದ ಕರ್ಮಕ್ಕನುಗುಣವಾಗಿ ತನ್ನ ಕರಣಗಳನ್ನು ಉಪಯೋಗಿಸಿಕೊಂಡೇ ಫಲವನ್ನುಣ್ಣಬೇಕಾಗಿರುವದರಿಂದ ಒಂದೊಂದಾಗಿಯೇ ಭೋಗಗಳನ್ನು ಅನುಭವಿಸಬೇಕು.

3. ಯಾವ ಜ್ಞಾನವು ಸ್ವಲ್ಪ ವಿಷಯಗಳನ್ನೇ ಬೆಳಗುವದೋ, ಅದೂ ಕ್ರಮಕ್ರಮವಾಗಿ ಬೆಳಗುವದೋ, ಅದು ನಿಜವಾದ ಜ್ಞಾನವಲ್ಲ. ಆದ್ದರಿಂದ ಸರ್ವಜ್ಞನಾದ ಬ್ರಹ್ಮಚೈತನ್ಯವನ್ನು ವಿಪಶ್ಚಿತ್ ಎಂದು ಕರೆದಿದೆ ಎಂದರ್ಥ.

ಬ್ರಾಹ್ಮಣವಾಕ್ಯೇನ ಸೂತ್ರಿತಃ । ಸ ಚ ಸೂತ್ರಿತೋಽರ್ಥಃ ಸಂಕ್ಷೇಪತೋ ಮನ್ತ್ರೇಣ ವ್ಯಾಖ್ಯಾತಃ । ಪುನಸ್ತಸ್ಯೈವ ವಿಸ್ತರೇಣ ಅರ್ಥನಿರ್ಣಯಃ ಕರ್ತವ್ಯಃ ಇತಿ ಉತ್ತರಃ ತದ್ವೃತ್ತಿಸ್ಥಾನೀಯೋ ಗ್ರನ್ಥಃ ಆರಭ್ಯತೇ "ತಸ್ಮಾದ್ವಾ ಏತಸ್ಮಾತ್" ಇತ್ಯಾದಿಃ ॥

(ಭಾಷ್ಯಾರ್ಥ)

(ಈ) ಇಡಿಯ ವಲ್ಲಿಯ ಅರ್ಥವನ್ನು "ಬ್ರಹ್ಮವನ್ನು ಬಲ್ಲವನು ಪರವನ್ನು ಪಡೆದುಕೊಳ್ಳುತ್ತಾನೆ" ಎಂಬ **ಬ್ರಾಹ್ಮಣವಾಕ್ಯ**'ದಿಂದ ಸೂತ್ರರೂಪವಾಗಿ ಹೇಳಲಾಗಿದೆ. ಆ ಸೂತ್ರಿತವಾದ ವಿಷಯವನ್ನು ('ಸತ್ಯವೂ ಜ್ಞಾನವೂ ಅನಂತವೂ ಆದ ಬ್ರಹ್ಮವು' ಎಂಬ) **ಮಂತ್ರ**ದಿಂದ ಸಂಕ್ಷೇಪವಾಗಿ ವಿವರಿಸಿದ್ದಾಗಿದೆ.[2] ಮತ್ತೂ ಅದರ[3] ಅರ್ಥವನ್ನೇ ವಿಸ್ತಾರವಾಗಿ ನಿರ್ಣಯಮಾಡಬೇಕಾಗಿರುವದರಿಂದ ಮುಂದಿನ ಅದರ ಮೇಲಿನ **ವೃತ್ತಿ**ಯಂತಿರುವ[4]–"ತಸ್ಮಾದ್ವಾ ಏತಸ್ಮಾತ್" ಮುಂತಾದ ಗ್ರಂಥವನ್ನು ಆರಂಭಿಸಿರುತ್ತದೆ.

## ಬ್ರಹ್ಮವು ಅನಂತವೆಂಬುದು ಹೇಗೆ?

೧೧೧. ತತ್ರ ಚ "ಸತ್ಯಂ ಜ್ಞಾನಮನನ್ತಂ ಬ್ರಹ್ಮ" ಇತ್ಯುಕ್ತಂ ಮನ್ತ್ರಾದೌ । ತತ್ ಕಥಂ ಸತ್ಯಂ (ಜ್ಞಾನಮ್)[5] ಅನನ್ತಂ ಚೇತಿ ? ಅತ ಆಹ– ತತ್ರ[6] ತ್ರಿವಿಧಂ ಹಿ ಆನನ್ತ್ಯಮ್ ದೇಶತಃ, ಕಾಲತಃ, ವಸ್ತುತಶ್ಚ ಇತಿ । ತದ್ ಯಥಾ ದೇಶತೋಽನನ್ತ ಆಕಾಶಃ । ನ ಹಿ ದೇಶತಃ ತಸ್ಯ ಪರಿಚ್ಛೇದೋಽಸ್ತಿ । ನ ತು ಕಾಲತಶ್ಚ ಆನನ್ತ್ಯಮ್ ವಸ್ತುತಶ್ಚ ಆಕಾಶಸ್ಯ । ಕಸ್ಮಾತ್ ? ಕಾರ್ಯತ್ವಾತ್।

1. ಬ್ರಹ್ಮಾನಂದವಲ್ಲಿಯು ತೈತ್ತಿರೀಯಬ್ರಾಹ್ಮಣಕ್ಕೆ ಸೇರಿದ್ದು.

2. ಮಂತ್ರವನ್ನು ಉದಾಹರಿಸಿ ಸ್ಪಷ್ಟಗೊಳಿಸಿದೆ.

3. ಸೂತ್ರವಾಕ್ಯದ.

4. ಭಾಷ್ಯದಂತಿರುವ ಸೂತ್ರವಾಕ್ಯಕ್ಕಿಂತ ಮಂತ್ರವು ವಿಸ್ತಾರವಾಗಿದೆ ; ಮುಂದಿನ ಗ್ರಂಥಭಾಗವು ಇನ್ನೂ ವಿಸ್ತಾರವಾಗಿ ಅದನ್ನು ವಿವರಿಸುತ್ತದೆ.

5. "ಜ್ಞಾನಮ್" ಎಂಬ ಮಾತು ವಾ॥ ಪಾಠದಲ್ಲಿಲ್ಲ. ಈ ಭಾಷ್ಯಭಾಗದಲ್ಲಿ ಜ್ಞಾನದ ವಿಚಾರವನ್ನು ಮಾಡಿಲ್ಲವೆಂಬ ಕಾರಣದಿಂದ ಬರೆದವರು ಇದನ್ನು ಕೈಬಿಟ್ಟಿರುವರೋ ಮೂಲಭಾಷ್ಯದಲ್ಲಿಯೇ ಅದು ಇರಲಿಲ್ಲವೋ, ತಿಳಿಯದು. ಸತ್ಯಾನಂತ್ಯಗಳ ವಿಚಾರವು ಜ್ಞಾನಕ್ಕೂ ಉಪಲಕ್ಷಣವೆಂದು ಭಾವಿಸುವದಕ್ಕೂ ಬರುತ್ತದೆ.

6. ಈ ಮಾತು ವಾ॥ ಪಾಠದಲ್ಲಿಲ್ಲ.

ನೈವಂ ಬ್ರಹ್ಮಣಃ ಆಕಾಶವತ್ ಕಾಲತೋಽಪಿ ಅನ್ತವತ್ತ್ವಮ್ । ಅಕಾರ್ಯತ್ವಾತ್। ಕಾರ್ಯಂ ಹಿ ವಸ್ತು ಕಾಲೇನ ಪರಿಚ್ಛಿದ್ಯತೇ । ಅಕಾರ್ಯಂ ಚ ಬ್ರಹ್ಮ । ತಸ್ಮಾತ್ ಕಾಲತೋಽಸ್ಯಾನನ್ತ್ಯಮ್ । ತಥಾ ವಸ್ತುತಃ। ಕಥಂ ಪುನಃ ವಸ್ತುತಃ ಆನನ್ತ್ಯಮ್ ? ಸರ್ವಾನನ್ಯತ್ವಾತ್ । ಭಿನ್ನಂ ಹಿ ವಸ್ತು ವಸ್ತ್ವನ್ತರಸ್ಯ ಅನ್ತೋ ಭವತಿ । ವಸ್ತ್ವನ್ತರಬುದ್ಧಿರ್ಹಿ ಪ್ರಸಕ್ತಾದ್[1] ವಸ್ತ್ವನ್ತರಾತ್ ನಿವರ್ತತೇ । ಯತೋ ಯಸ್ಯ ಬುದ್ಧೇರ್ನಿವೃತ್ತಿಃ ಸ ತಸ್ಯಾನ್ತಃ । ತದ್ ಯಥಾ ಗೋತ್ವಬುದ್ಧಿಃ ಅಶ್ವತ್ವಾತ್ ನಿವರ್ತತೇ ಇತಿ ಅಶ್ವತ್ವಾನ್ತಂ ಗೋತ್ವಮ್ ಇತಿ ಅನ್ತವದೇವ ಭವತಿ । ಸಚ ಅನ್ತಃ ಭಿನ್ನೇಷು ವಸ್ತುಷು ದೃಷ್ಟಃ। ನೈವಂ ಬ್ರಹ್ಮಣೋ ಭೇದಃ । ಅತೋ ವಸ್ತುತೋಽಪಿ ಆನನ್ತ್ಯಮ್ ॥

(ಭಾಷ್ಯಾರ್ಥ)

ಅದರಲ್ಲಿಯೂ ಮಂತ್ರದ ಮೊದಲಿನಲ್ಲಿ ಬ್ರಹ್ಮವು ಸತ್ಯವೂ ಜ್ಞಾನವೂ ಅನಂತವೂ ಆಗಿರುವದೆಂದು ಹೇಳಿದೆ(ಯಷ್ಟೆ) ; ಅದು ಸತ್ಯವೂ(ಜ್ಞಾನವೂ)ಅನಂತವೂ ಎಂಬುದು ಹೇಗೆ ? ಎಂಬುದಕ್ಕೆ (ಈ ಉತ್ತರವನ್ನು ಶ್ರುತಿ) ಹೇಳುತ್ತದೆ.[2] ಇವುಗಳಲ್ಲಿ[3] ಆನಂತ್ಯವೆಂಬುದು ದೇಶದಿಂದ, ಕಾಲದಿಂದ, ವಸ್ತುವಿನಿಂದ ಎಂದು ಮೂರು ಬಗೆಯಾಗಿರುತ್ತದೆ. ಅದು ಹೇಗೆಂದರೆ, ಆಕಾಶವು ದೇಶದಿಂದ ಅನಂತವಾಗಿರುತ್ತದೆ ; ಏಕೆಂದರೆ ದೇಶದಿಂದ ಅದಕ್ಕೆ (ಇಷ್ಟೆಂಬ) ಅಳತೆ ಇರುವದಿಲ್ಲ.[4] ಆದರೆ ಆಕಾಶಕ್ಕೆ ಕಾಲದಿಂದಲೂ ವಸ್ತುವಿನಿಂದಲೂ ಆನಂತ್ಯವಿರುವದಿಲ್ಲ. ಏಕೆಂದರೆ ಅದು ಕಾರ್ಯವಾಗಿರುತ್ತದೆ.[5] (ಆದರೆ) ಹೀಗೆ ಆಕಾಶದಂತೆ ಬ್ರಹ್ಮವು ಕಾಲದಿಂದಲೂ ಅಂತವುಳ್ಳದ್ದಾಗಿರುವದಿಲ್ಲ ; ಏಕೆಂದರೆ ಅದು ಕಾರ್ಯವಲ್ಲ.[6] ಕಾರ್ಯವಾದ ವಸ್ತುವೇ

---

1. " ಪ್ರಸಕ್ತಾ " ಎಂದು ಆ|| ಪಾಠ.

2. ಸೃಷ್ಟಿಶ್ರುತಿಗೆ ಬ್ರಹ್ಮಸ್ವರೂಪವನ್ನು ತಿಳಿಸುವದರಲ್ಲಿಯೇ ತಾತ್ಪರ್ಯ ; ಸೃಷ್ಟಿಯಲ್ಲಿ ತಾತ್ಪರ್ಯವಿಲ್ಲ ಎಂದು ಭಾವ. ಸೂ. ಭಾ. ೧-೪-೧೪, ೪-೩-೧೪.

3. ಸತ್ಯತ್ವ, ಜ್ಞಾನತ್ವ, ಆನಂತ್ಯ-ಎಂಬ ಮೂರರಲ್ಲಿ.

4. ಆಕಾಶವು ಇಂಥಲ್ಲಿ ಇಲ್ಲ ಎಂಬುದಿಲ್ಲ, ಅದು ಸರ್ವಗತವಾಗಿದೆ.

5. ಆಕಾಶಕ್ಕೂ ಉತ್ಪತ್ತಿಯುಂಟೆಂಬುದು ಸೂ. ಭಾ. ೧-೩-೬ರಲ್ಲಿ ಉಪಪಾದಿತವಾಗಿದೆ.

6. ಬ್ರಹ್ಮವು ಕಾರ್ಯವಲ್ಲವೆಂಬುವನ್ನು ಸೂ. ಭಾ. ೨-೩-೭ರಲ್ಲಿ ನಿರ್ಣಯಿಸಿದೆ. ಕಾರ್ಯವು ತನ್ನ ರೂಪದಿಂದ ಹುಟ್ಟುವ ಮುಂಚೆಯೂ ನಾಶವಾದಬಳಿಕವೂ ಇರುವದಿಲ್ಲವಾದ್ದರಿಂದ ಅದಕ್ಕೆ ಕಾಲದಿಂದ ಅಂತವುಂಟು.

ಅಲ್ಲವೆ, ಕಾಲದಿಂದ (ಎಲ್ಲಿಗೆ ಮುಗಿಯಿತೆಂಬ) ಅಳತೆಯುಳ್ಳದ್ದಾಗಿರುತ್ತದೆ ? ಆದರೆ ಬ್ರಹ್ಮವು ಕಾರ್ಯವಲ್ಲ. ಆದ್ದರಿಂದ (ಬ್ರಹ್ಮಕ್ಕೆ) ಕಾಲದಿಂದಲೂ ಆನಂತ್ಯವಿದೆ. ಹಾಗೆಯೇ ವಸ್ತುವಿನಿಂದಲೂ (ಆನಂತ್ಯವಿದೆ). ಇನ್ನು (ಬ್ರಹ್ಮಕ್ಕೆ) ವಸ್ತುವಿನಿಂದ ಆನಂತ್ಯ(ವಿದೆ) ಎಂಬುದು ಹೇಗೆ ? (ಎಂದು ಕೇಳಿದರೆ), ಅದು ಎಲ್ಲದರೊಡನೆಯೂ ಅನನ್ಯವಾಗಿರುವದರಿಂದ. (ತಾನೇ) ಬೇರೆಯಾಗಿರುವ ವಸ್ತುವೇ ಮತ್ತೊಂದು ವಸ್ತುವಿನ ಅಂತವಾಗುತ್ತದೆ. (ಅದು) ಮತ್ತೊಂದು ವಸ್ತು ಎಂಬ ಬುದ್ಧಿಯೇ ಪ್ರಸಕ್ತವಾದ ಮತ್ತೊಂದು ವಸ್ತುವನ್ನು[1] ಬಿಟ್ಟುಹೋಗುವದು. ಯಾವ (ವಸ್ತು)ವಿನ ಬುದ್ಧಿಯು ಯಾವ (ವಸ್ತು)ವನ್ನು ಬಿಟ್ಟುಹೋಗುವದೋ ಅದು ಅದರ ಅಂತವು. ಅದು ಹೇಗೆಂದರೆ ಎತ್ತೆಂಬ ಬುದ್ಧಿಯು ಕುದುರೆಯನ್ನು ಬಿಟ್ಟುಹೋಗುತ್ತದೆ; ಆದ್ದರಿಂದ ಗೋತ್ವ ಎಂಬುದು ಅಶ್ವತ್ವದಲ್ಲಿ ಕೊನೆಗಾಣುವಕಾರಣ (ಅದು) ಅಂತವುಳ್ಳದ್ದೇ ಆಗಿರುತ್ತದೆ. ಇಂಥ ಅಂತವೆಂಬುದು ಬೇರೆ (ಬೇರೆ)ಯಾಗಿರುವ ವಸ್ತುಗಳಲ್ಲಿ(ರುವದು) ಕಂಡುಬರುತ್ತದೆ.[2] (ಆದರೆ) ಹಾಗೆ ಬ್ರಹ್ಮಕ್ಕೆ ಭೇದವಿರುವದಿಲ್ಲ.[3] ಆದ್ದರಿಂದ (ಅದಕ್ಕೆ) ವಸ್ತುವಿನಿಂದಲೂ ಆನಂತ್ಯ(ವಿದೆ).

(ಭಾಷ್ಯ)

೧೧೨. ಕಥಂ ಪುನಃ ಸರ್ವಾನನ್ಯತ್ವಂ ಬ್ರಹ್ಮಣ ಇತಿ ? ಉಚ್ಯತೇ । ಸರ್ವವಸ್ತುಕಾರಣತ್ವಾತ್ । ಸರ್ವೇಷಾಂ ಹಿ ವಸ್ತೂನಾಂ ಕಾಲಾಕಾಶಾದೀನಾಂ ಕಾರಣಂ ಬ್ರಹ್ಮ । ಕಾರ್ಯಾಪೇಕ್ಷಯಾ ವಸ್ತುತೋಽನ್ತವತ್ತ್ವಮ್ ಇತಿ ಚೇತ್ । ನ । ಅನೃತತ್ವಾತ್ ಕಾರ್ಯವಸ್ತುನಃ । ನ ಹಿ ಕಾರಣವ್ಯತಿರೇಕೇಣ ಕಾರ್ಯಂ ನಾಮ ವಸ್ತುತೋಽಸ್ತಿ ಯತಃ ಕಾರಣಬುದ್ಧಿರ್ವಿನಿವರ್ತೇತ । " ವಾಚಾರಮ್ಭಣಂ

---

1. ಅ॥ ಪಾಠದಲ್ಲಿ " ಪ್ರಸಕ್ತವಾದ ' ಮತ್ತೊಂದು ವಸ್ತು' ಎಂಬ ಬುದ್ಧಿಯೇ ಇನ್ನೊಂದನ್ನು ಬಿಟ್ಟುಹೋಗುತ್ತದೆ " ಎಂದು ಅರ್ಥ.

2. ಎತ್ತೆಂಬುದು ಅಶ್ವಾದಿಪ್ರಾಣಿಗಳಲ್ಲಿ ಒಂದೂ ಅಲ್ಲ, ಮನುಷ್ಯದೇವಾದಿಗಳೂ ಅಲ್ಲ, ಜಡವಸ್ತುಗಳೂ ಅಲ್ಲ. ಗೋತ್ವಬುದ್ಧಿಯು ಅನೇಕ ವಸ್ತುಗಳಲ್ಲಿ ಉಂಟಾಗುವದಿಲ್ಲವಾದ್ದರಿಂದ ಗೋತ್ವಕ್ಕೆ ವಸ್ತುವಿನಿಂದ ಅಂತವುಂಟು. ಹೀಗೆಯೇ ಮಿಕ್ಕ ಭಿನ್ನ ವಸ್ತುಗಳಿಗೂ ಅರಿಯಬೇಕು.

3. ಬ್ರಹ್ಮವು ಎಲ್ಲಕ್ಕೂ ಕಾರಣವಾಗಿರುವದರಿಂದ ಅದೇ ಎಲ್ಲವೂ ಆಗಿರುತ್ತದೆ. ಆದ್ದರಿಂದ ಇದು ಬ್ರಹ್ಮವಲ್ಲ ಎಂಬ ಬುದ್ಧಿ ಯಾವ ವಸ್ತುವಿನಲ್ಲಿಯೂ ತಿಳಿದವರಿಗೆ ಉಂಟಾಗುವದಿಲ್ಲ. ಆದ್ದರಿಂದ ಅದಕ್ಕೆ ವಸ್ತುವಿನಿಂದಲೂ ಅಂತವಿಲ್ಲ.

ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್" (ಛಾ. ೬-೧-೪) ಏವಂ 'ಸದೇವ ಸತ್ಯಮ್' ಇತಿ ಶ್ರುತ್ಯನ್ತರಾತ್ ॥

(ಭಾಷ್ಯ)

ಇನ್ನು ಬ್ರಹ್ಮವು ಎಲ್ಲದರೊಡನೆಯೂ ಅನನ್ಯವಾಗಿರುತ್ತದೆ ಎಂಬುದು ಹೇಗೆ? ಎಂದರೆ ಹೇಳುತ್ತೇವೆ (ಕೇಳಿ). ಅದು ಎಲ್ಲಾ ವಸ್ತುಗಳಿಗೂ ಕಾರಣವಾಗಿರುವದ ರಿಂದ (ಎಲ್ಲದರೊಡನೆಯೂ ಅನನ್ಯವಾಗಿದೆ). ಬ್ರಹ್ಮವು, ಕಾಲ, ಆಕಾಶ–ಮುಂತಾದ [1] ಎಲ್ಲಾ ವಸ್ತುಗಳಿಗೂ ಕಾರಣವಾಗಿರುತ್ತದೆ.

(ಆಕ್ಷೇಪ):—(ಹಾಗಾದರೆ) ಕಾರ್ಯಕ್ಕೆ ಹೋಲಿಸಿದರೆ (ಬ್ರಹ್ಮವು) ಅಂತ ವುಳ್ಳ(ದ್ದೆಂದಾಯಿತಲ್ಲ)!

(ಪರಿಹಾರ):—ಹಾಗಲ್ಲ. ಏಕೆಂದರೆ ಕಾರ್ಯವೆಂಬ ವಸ್ತು ಅನೃತವಾಗಿರು ತ್ತದೆ. ಕಾರಣಕ್ಕಿಂತ ಬೇರೆಯಾಗಿ ಕಾರ್ಯವೆಂಬುದು ನಿಜವಾಗಿ ಇರುವದೇ ಇಲ್ಲ. ಹಾಗಿದ್ದರೆತಾನೆ ಅದರಿಂದ ಕಾರಣಬುದ್ಧಿಯು (ಅದನ್ನು ಬಿಟ್ಟು) ಹೋದೀತು? [2] "ವಿಕಾರವು ಹೆಸರುಮಾತ್ರ, ಮಾತಿನ ಕಾರ್ಯವು; ಮಣ್ಣು ಎಂಬುದೇ ಸತ್ಯವು" (ಛಾ. ೬-೧-೪) ಇದರಂತೆ "ಸತ್ತೇ ಸತ್ಯವು" ಎಂಬ ಬೇರೊಂದು ಶ್ರುತಿ ಇದಕ್ಕೆ ಪ್ರಮಾಣವು.[3]

(ಭಾಷ್ಯ)

೧೧೩. ತಸ್ಮಾತ್ ಆಕಾಶಾದಿಕಾರಣತ್ವಾತ್ ದೇಶತಸ್ತಾವದನನ್ತಂ ಬ್ರಹ್ಮ। ಆಕಾಶೋ ಹಿ ಅನನ್ತಃ ಇತಿ ಪ್ರಸಿದ್ಧಂ ದೇಶತಃ। ತಸ್ಯೇದಂ ಕಾರಣಮ್। ತಸ್ಮಾತ್ ಸಿದ್ಧಂ ದೇಶತ ಆತ್ಮನ ಆನನ್ತ್ಯಮ್। ನ ಹಿ ಅಸರ್ವಗತಾತ್ ಸರ್ವಗತಮ್ ಉತ್ಪದ್ಯಮಾನಂ ಲೋಕೇ ಕಿಂಚಿದ್ ದೃಶ್ಯತೇ। ಅತೋ ನಿರತಿಶಯಮ್ ಆತ್ಮನ ಆನನ್ತ್ಯಂ ದೇಶತಃ। ತಥಾ ಅಕಾರ್ಯತ್ವಾತ್ ಕಾಲತಃ। ತದ್ಭಿನ್ನವಸ್ತ್ವನ್ತರಾ ಭಾವಾಚ್ಚ ವಸ್ತುತಃ। ಅತ ಏವ ನಿರತಿಶಯಸತ್ಯತ್ವಮ್ ॥

---

1. ಕಾಲ, ಆಕಾಶ–ಮುಂತಾದವುಗಳೆಲ್ಲವೂ ಕಾರ್ಯವಾಗಬಹುದೆನ್ನುವದಕ್ಕೆ ಅವು ವಿಭಕ್ತವಾಗಿರುವದೇ ಹೇತುವೆಂದು ಸೂ.ಭಾ. ೨-೩-೭ರಲ್ಲಿ ಹೇಳಿದೆ. ಕಾಲವೂ ಕಾರ್ಯ ವೆಂದದ್ದರಿಂದ ತಾರ್ಕಿಕರು ಹೇಳುವಂತೆ ಕಾರ್ಯನಿಯತಪೂರ್ವವೃತ್ತಿಯಾದದ್ದು ಕಾರಣವೆಂಬು ದನ್ನು ಒಪ್ಪುವುದಿಲ್ಲವೆಂದಂತೆಯೇ ಆಯಿತು.

2. ಕಾರ್ಯವಾದ ಜಗತ್ತು ಕಾರಣವಾದ ಬ್ರಹ್ಮಕ್ಕಿಂತ ಬೇರೆಯಾಗಿಲ್ಲವೆಂಬುದನ್ನು ಸೂ.ಭಾ. ೨-೧-೧೪ ರಲ್ಲಿ ಸ್ಪಷ್ಟಗೊಳಿಸಿದೆ. ಈ ವಾದವನ್ನು ವಿವರ್ತವಾದ ಎನ್ನುತ್ತಾರೆ.

3. ಈ ಶ್ರುತಿಯನ್ನು ಹಿಂದೆ ಛಾ.ಭಾ. ೯೮ರಲ್ಲಿ ಬ್ರಹ್ಮವು ಸತ್ಯವೆಂಬುದಕ್ಕೆ ಪ್ರಮಾಣ ವಾಗಿ ಉದಾಹರಿಸಿತ್ತು; ಈಗ ಕಾರ್ಯವು ಅಸತ್ಯ, ಕಾರಣಕ್ಕಿಂತ ಬೇರೆಯಾಗಿ ಇಲ್ಲ ಎಂಬು ದಕ್ಕೆ ಪ್ರಮಾಣವಾಗಿ ಉದಾಹರಿಸಿದೆ.

(ಭಾಷ್ಯಾರ್ಥ)

ಆದ್ದರಿಂದ ಆಕಾಶವೇ ಮುಂತಾದದ್ದಕ್ಕೂ ಕಾರಣವಾಗಿರುವದರಿಂದ ಮೊದಲನೆಯದಾಗಿ ಬ್ರಹ್ಮವು ದೇಶದಿಂದ ಅನಂತ(ವೆಂದಾಯಿತು.) ಆಕಾಶವು ದೇಶದಿಂದ ಅನಂತವೆಂಬುದು ಪ್ರಸಿದ್ಧವಾಗಿದೆಯಷ್ಟೆ. ಅದಕ್ಕೆ ಈ (ಬ್ರಹ್ಮವು) ಕಾರಣವು. ಆದ್ದರಿಂದ ದೇಶದಿಂದ ಆತ್ಮನಿಗೆ ಆನಂತ್ಯವು ಸಿದ್ಧವಾಯಿತು. ಸರ್ವಗತವಲ್ಲದ್ದರಿಂದ ಸರ್ವಗತವಾದದ್ದು ಯಾವದೂ ಉಂಟಾಗುವದು ಕಂಡಿಲ್ಲವೇ ಇಲ್ಲ.[1] ಆದ್ದರಿಂದ ಆತ್ಮನಿಗೆ ದೇಶದಿಂದ ಆನಂತ್ಯವು ಮಿಗಿಲಿಲ್ಲದಂಥದ್ದು (ಎಂದಾಗುತ್ತದೆ). ಹಾಗೂ (ಅದು) ಕಾರ್ಯವಲ್ಲದ್ದರಿಂದ ಕಾಲದಿಂದ(ಆನಂತ್ಯವೂ ಸಿದ್ಧವಾಗುತ್ತದೆ). ಅದಕ್ಕಿಂತ ಬೇರೆಯಾದ ಮತ್ತೊಂದು ವಸ್ತುವಿಲ್ಲದ್ದರಿಂದ ವಸ್ತುವಿನಿಂದ (ಆನಂತ್ಯವೂ ಸಿದ್ಧವಾಗುತ್ತದೆ). ಆದ್ದರಿಂದಲೇ [2](ಬ್ರಹ್ಮಕ್ಕೆ) ಮಿಗಿಲಿಲ್ಲದ ಸತ್ಯತ್ವವೂ ಸಿದ್ಧವಾಯಿತು.

**ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಮ್ಭೂತಃ । ಆಕಾಶಾದ್ವಾಯುಃ । ವಾಯೋರಗ್ನಿಃ । ಅಗ್ನೇರಾಪಃ । ಅದ್ಭ್ಯಃ ಪೃಥಿವೀ । ಪೃಥಿವ್ಯಾ ಓಷಧಯಃ । ಓಷಧೀಭ್ಯೋಽನ್ನಮ್ । ಅನ್ನಾತ್ ಪುರುಷಃ ॥ ೨ ॥**

೨. ಆ ಈ ಆತ್ಮನಿಂದಲೇ ಆಕಾಶವು ಉಂಟಾಯಿತು. ಆಕಾಶದಿಂದ ವಾಯು; ವಾಯುವಿನಿಂದ ಅಗ್ನಿ; ಅಗ್ನಿಯಿಂದ ಅಪ್ಪು; ಅಪ್ಪಿನಿಂದ ಪೃಥ್ವಿ; ಪೃಥ್ವಿಯಿಂದ ಓಷಧಿಗಳು; ಓಷಧಿಗಳಿಂದ ಅನ್ನವು; ಅನ್ನದಿಂದ ಪುರುಷನು.

## ಸೃಷ್ಟಿಕ್ರಮ

(ಭಾಷ್ಯ)

೧೧೪. ತಸ್ಮಾತ್ ಇತಿ ಮೂಲವಾಕ್ಯಸೂತ್ರಿತಂ ಬ್ರಹ್ಮ ಪರಾಮೃಶ್ಯತೇ । ಏತಸ್ಮಾತ್ ಇತಿ ಮನ್ತ್ರವಾಕ್ಯೇನ ಅನನ್ತರಂ ಯಥಾಲಕ್ಷಿತಮ್ । ಯದ್ ಬ್ರಹ್ಮ

---

1. ಪರಿಚ್ಛಿನ್ನವಾದ ಕಾರಣದಿಂದ ಪರಿಚ್ಛಿನ್ನವಸ್ತುಗಳೇ ಹುಟ್ಟುವದು ಕಂಡಿದೆ; ಅಪರಿಚ್ಛಿನ್ನವಸ್ತುಗಳು ಹುಟ್ಟಿದ್ದನ್ನು ನಾವು ಕಂಡಿಲ್ಲ. ಸರ್ವಗತವಾದ ಆಕಾಶಾದಿಗಳು ಬ್ರಹ್ಮದಿಂದ ಹುಟ್ಟುವವೆಂದು ಶ್ರುತಿಯು ಹೇಳುವದರಿಂದ ಬ್ರಹ್ಮವು ಎಲ್ಲಕ್ಕಿಂತಲೂ ಸರ್ವಗತವಾಗಿ ಅನಂತವಾಗಿರಬೇಕೆಂದು ಸಿದ್ಧವಾಗುತ್ತದೆ ಎಂದರ್ಥ.

2. ಅನಂತವಾದ ನಿರವಯವವಾದ ಬ್ರಹ್ಮಕ್ಕೆ ವಿಕಾರವಿರಲಾರದಾದ್ದರಿಂದಲೇ.

ಆದೌ ಬ್ರಾಹ್ಮಣವಾಕ್ಯೇನ ಸೂತ್ರಿತಮ್, ಯಚ್ಚ ಸತ್ಯಂ ಜ್ಞಾನಮನನ್ತಂ ಬ್ರಹ್ಮ ಇತಿ ಅನನ್ತರಮೇವ ಲಕ್ಷಿತಮ್, ತಸ್ಮಾತ್ ಏತಸ್ಮಾತ್ ಬ್ರಹ್ಮಣಃ । ಆತ್ಮನಃ ಆತ್ಮ ಶಬ್ದವಾಚ್ಯಾತ್ । ಆತ್ಮಾ ಹಿ ತತ್ ಸರ್ವಸ್ಯ । "ತತ್ ಸತ್ಯಂ ಸ ಆತ್ಮಾ" (ಛಾ. ೬-೮-೭) ಇತಿ ಶ್ರುತ್ಯನ್ತರಾತ್ । ಅತೋ ಬ್ರಹ್ಮ ಆತ್ಮಾ । ತಸ್ಮಾತ್ ಏತಸ್ಮಾತ್ ಬ್ರಹ್ಮಣಃ ಆತ್ಮಸ್ವರೂಪಾತ್ ಆಕಾಶಃ ಸಂಭೂತಃ ಸಮುತ್ಪನ್ನಃ । ಆಕಾಶೋ ನಾಮ ಶಬ್ದಗುಣಃ, ಅವಕಾಶಕರೋ ಮೂರ್ತದ್ರವ್ಯಾಣಾಮ್ । ತಸ್ಮಾತ್ ಆಕಾಶಾತ್ ಸ್ವೇನ ಸ್ಪರ್ಶಗುಣೇನ ಪೂರ್ವೇಣ ಚ ಆಕಾಶಗುಣೇನ[1] ಶಬ್ದೇನ ದ್ವಿಗುಣಃ ವಾಯುಃ । ಸಂಭೂತಃ ಇತ್ಯನುವರ್ತತೇ । ವಾಯೋಶ್ಚ ಸ್ವೇನ ರೂಪಗುಣೇನ ಪೂರ್ವಾಭ್ಯಾಂ ಚ ತ್ರಿಗುಣಃ ಅಗ್ನಿಃ 'ಸಂಭೂತಃ' । ಅಗ್ನೇಃ ಸ್ವೇನ ರಸಗುಣೇನ ಪೂರ್ವೈಶ್ಚ ತ್ರಿಭಿಃ ಚತುರ್ಗುಣಾ ಆಪಃ ಸಂಭೂತಾಃ । ಅದ್ಭ್ಯಃ ಸ್ವೇನ ಗನ್ಧಗುಣೇನ ಪೂರ್ವೈಶ್ಚ ಚತುರ್ಭಿಃ ಪಞ್ಚಗುಣಾ ಪೃಥಿವೀ ಸಂಭೂತಾ । ಪೃಥಿವ್ಯಾಃ ಓಷಧಯಃ । ಓಷಧೀಭ್ಯಃ ಅನ್ನಮ್ । ಅನ್ನಾತ್ ರೇತೋರೂಪೇಣ ಪರಿಣತಾತ್ ಪುರುಷಃ ಶಿರಃ ಪಾಣ್ಯಾದ್ಯಾಕೃತಿಮಾನ್ ॥

(ಭಾಷ್ಯಾರ್ಥ)

'ಆ' ಎಂಬ (ಮಾತಿನಿಂದ) ಮೂಲವಾಕ್ಯದಲ್ಲಿ ಸೂತ್ರಿತವಾಗಿರುವ ಬ್ರಹ್ಮವನ್ನು ಪರಾಮರ್ಶಿಸಿರುತ್ತದೆ; 'ಈ' ಎಂಬ (ಮಾತಿನಿಂದ) ಆ ಬಳಿಕ ಲಕ್ಷಣವನ್ನು ಹೇಳಿದ ಬ್ರಹ್ಮವನ್ನು ಪರಾಮರ್ಶಿಸಿರುತ್ತದೆ. ಯಾವ ಬ್ರಹ್ಮವು ಮೊದಲು ಬ್ರಾಹ್ಮಣವಾಕ್ಯದಿಂದ[2] ಸೂತ್ರಿತವಾಗಿತ್ತೋ, ಮತ್ತು ಯಾವದು "ಸತ್ಯಂ ಜ್ಞಾನಮನನ್ತಂ ಬ್ರಹ್ಮ" ಎಂಬ (ಮಂತ್ರದಿಂದ) ಆ ಬಳಿಕವೇ ಲಕ್ಷಣದಿಂದ ಹೇಳಲ್ಪಟ್ಟಿತೋ, ಆ ಈ ಬ್ರಹ್ಮದಿಂದ (ಎಂದರ್ಥ). ಆತ್ಮನಃ ಎಂದರೆ ಆತ್ಮಶಬ್ದಕ್ಕೆ ವಾಚ್ಯವಾಗಿರುವ ಬ್ರಹ್ಮದಿಂದ[3] (ಎಂದರ್ಥ). ಏಕೆಂದರೆ ಅದು ಎಲ್ಲಕ್ಕೂ ಆತ್ಮನೇ ಆಗಿರುತ್ತದೆ. "ಅದು ಸತ್ಯವು; ಅದೇ ಆತ್ಮನು" (ಛಾ. ೬-೮-೭) ಎಂಬ ಬೇರೊಂದು ಶ್ರುತಿಯು ಇದಕ್ಕೆ ಪ್ರಮಾಣವು. ಆದ್ದರಿಂದ ಬ್ರಹ್ಮವು

---

1. ಇದು ವಾ॥ ಪಾಠ; 'ಕಾರಣಗುಣೇನ' ಎಂದು ಆ॥ ಪಾಠ.
2. "ಬ್ರಹ್ಮವಿದಾಪ್ನೋತಿ ಪರಮ್" ಎಂಬ ವಾಕ್ಯದಿಂದ.
3. ಬ್ರಹ್ಮವು ಆತ್ಮಶಬ್ದಕ್ಕೆ ವಾಚ್ಯವೆಂಬುದೂ ಪರಮಸಿದ್ಧಾಂತವಲ್ಲ; ಏಕೆಂದರೆ ಅದರಲ್ಲಿ ಜಾತಿಯೇ ಮುಂತಾದ ಪ್ರವೃತ್ತಿನಿಮಿತ್ತಗಳಿರುವದಿಲ್ಲ. ಛಾ. ಭಾ. ೧೦೭ನ್ನು ನೋಡಿರಿ. ಅವಾಚ್ಯವಾದ ಆತ್ಮವಸ್ತುವನ್ನು ಆತ್ಮಾದಿಶಬ್ದಗಳು ಹೇಗೆ ತಿಳಿಸುವವೆಂಬುದನ್ನು ಛಾ. ಭಾ. ೭-೨-೪ರಲ್ಲಿ ವಿವರಿಸಿದೆ.

ಆತ್ಮನು. ಆ ಈ ಆತ್ಮಸ್ವರೂಪವಾದ ಬ್ರಹ್ಮದಿಂದ **ಆಕಾಶವು** ಉಂಟಾಯಿತು, ಹುಟ್ಟಿತು. ಆಕಾಶವೆಂದರೆ ಶಬ್ದವೆಂಬ ಗುಣವುಳ್ಳದ್ದಾಗಿ ಮೂರ್ತದ್ರವ್ಯಗಳಿಗೆ ಅವಕಾಶವನ್ನುಂಟುಮಾಡುವ (ಭೂತವು).[1] ಆ ಆಕಾಶದಿಂದ[2] ತನ್ನ ಸ್ಪರ್ಶಗುಣ ದಿಂದಲೂ ಹಿಂದಿನ ಆಕಾಶಗುಣವಾದ ಶಬ್ದದಿಂದಲೂ[3] (ಕೂಡಿ) ಎರಡು ಗುಣವುಳ್ಳ **ವಾಯು** 'ಉಂಟಾಯಿತು' ಎಂದು (ಹಿಂದಿನ ಶಬ್ದವು ಇಲ್ಲಿಗೂ) ಸೇರಿಕೊಳ್ಳುತ್ತದೆ. ಮತ್ತು (ಆ) ವಾಯುವಿನಿಂದ ತನ್ನದಾದ ರೂಪಗುಣದಿಂದಲೂ ಹಿಂದಿನ ಎರಡು ಗುಣಗಳಿಂದಲೂ ಕೂಡಿ ಮೂರು ಗುಣವುಳ್ಳ ಅಗ್ನಿ ಉಂಟಾಯಿತು. ಅಗ್ನಿಯಿಂದ ತನ್ನದಾದ ರಸಗುಣದಿಂದಲೂ ಹಿಂದಿನ ಮೂರು (ಗುಣ)ಗಳಿಂದಲೂ ನಾಲ್ಕು ಗುಣ ಗಳುಳ್ಳ **ಅಪ್ಪು** ಉಂಟಾಯಿತು. ಅಪ್ಪಿನಿಂದ ತನ್ನದಾದ ಗಂಧಗುಣದಿಂದಲೂ ಹಿಂದಿನ ನಾಲ್ಕು (ಗುಣ)ಗಳಿಂದಲೂ (ಕೂಡಿ) ಐದು ಗುಣಗಳುಳ್ಳ ಪೃಥ್ವಿಯು (ಉಂಟಾಯಿತು). ಪೃಥ್ವಿಯಿಂದ ಓಷಧಿಗಳು,[4] ಓಷಧಿಗಳಿಂದ ಅನ್ನವು; ಅನ್ನ ದಿಂದ (ಅದು) ರೇತಸ್ಸಿನ ರೂಪದಿಂದ ಪರಿಣಾಮವಾದ ಬಳಿಕ ಪುರುಷನು, ಎಂದರೆ ತಲೆ, ಕೈ ಮುಂತಾದ ಆಕಾರವುಳ್ಳ (ಮನುಷ್ಯನು[5] ಹುಟ್ಟಿದನು).

## ೩. ಅನ್ನಮಯಾತ್ಮ

### ಅನ್ನಮಯಾತ್ಮನ ವರ್ಣನೆ

**ಸ ವಾ ಏಷ ಪುರುಷೋಽನ್ನರಸಮಯಃ । ತಸ್ಯೇದಮೇವ ಶಿರಃ ಅಯಂ ದಕ್ಷಿಣಃ ಪಕ್ಷಃ । ಅಯಮುತ್ತರಃ ಪಕ್ಷಃ । ಅಯ ಮಾತ್ಮಾ ಇದಂ ಪುಚ್ಛಂ ಪ್ರತಿಷ್ಠಾ** ॥ ೩ ॥

೩. ಅದೇ ಈ ಪುರುಷನು ಅನ್ನರಸಮಯನು. ಅವನಿಗೆ ಇದೇ ತಲೆ; ಇದು ದಕ್ಷಿಣ ಪಕ್ಷವು; ಇದು ಉತ್ತರ ಪಕ್ಷವು; ಇದು ಆತ್ಮನು; ಇದು ಪುಚ್ಛವು, ಪ್ರತಿಷ್ಠೆಯು.

---

1. ಅದು ಏನೂ ಇಲ್ಲದ್ದೆಂಬ ಅಭಾವರೂಪವಲ್ಲ.
2. ಆಕಾಶಾದಿಗಳು ವಾಯ್ವಾದಿಗಳಿಗೆ ಕಾರಣವೆನ್ನುವಾಗ ಬ್ರಹ್ಮವೇ ಆಯಾ ರೂಪದಿಂದ ಆಯಾ ಭೂತಗಳನ್ನು ಸೃಷ್ಟಿಸುತ್ತದೆ ಎಂಬರ್ಥ. ಸೂ. ಭಾ. ೨-೩-೧೬.
3. ಮುಂ. ಭಾ. ೨-೧-೩, ಪ್ರ. ಭಾ, ೬-೪ರಲ್ಲಿಯೂ ಈ ಪ್ರಕ್ರಿಯೆ ಇದೆ.
4. ಮರ, ಗಿಡ, ಪೈರು, ಪಚ್ಚೆ, ಮುಂತಾದವು
5. ಪುರುಷನೆಂದರೆ ಗಂಡುಸು ಎಂದು ಅರ್ಥವಲ್ಲ.

(ಭಾಷ್ಯ)

೧೧೫. ಸ ವೈ ಏಷ ಪುರುಷಃ ಅನ್ನರಸಮಯಃ ಅನ್ನರಸವಿಕಾರಃ । ಪುರುಷಾಕೃತಿಭಾವಿತಂ ಹಿ " ಸರ್ವೇಭ್ಯೋಽಙ್ಗೇಭ್ಯಸ್ತೇಜಸ್ಸಂಭೂತಂ'' ರೇತೋಬೀಜಮ್। ತಸ್ಮಾತ್ ಯೋ ಜಾಯತೇ ಸೋಽಪಿ ತಥಾ ಪುರುಷಾಕೃತಿರೇವ ಸ್ಯಾತ್ । ಸರ್ವಜಾತಿಷು ಜಾಯಮಾನಾನಾಂ ಜನಕಾಕೃತಿನಿಯಮದರ್ಶನಾತ್ ॥

(ಭಾಷ್ಯಾರ್ಥ)

ಅದೇ ಈ ಪುರುಷನು ಅನ್ನರಸಮಯನು, ಅನ್ನರಸದ ಕಾರ್ಯವು.[1] ಪುರುಷಾಕೃತಿಭಾವಿತವಾಗಿಯೇ ಅಲ್ಲವೆ, ರೇತಸ್ಸೆಂಬ ಬೀಜವು '' ಎಲ್ಲಾ ಅಂಗಗಳಿಂದಲೂ ತೇಜಸ್ಸಾಗಿ ಉಂಟಾಗುತ್ತದೆ ?[2] ಆದ್ದರಿಂದ ಯಾವನು ಹುಟ್ಟುತ್ತಾನೋ ಅವನೂ ಹಾಗೆಯೇ ಪುರುಷಾಕೃತಿಯುಳ್ಳವನೇ ಆಗುವನು. ಏಕೆಂದರೆ ಯಾವ ಜಾತಿಗಳಲ್ಲಿಯೇ ಆಗಲಿ ಹುಟ್ಟುವ ಪ್ರಾಣಿಗಳು (ಹುಟ್ಟಿಸಿದ) ತಂದೆಯ ಆಕೃತಿಯುಳ್ಳವುಗಳಾಗಿಯೇ ಇರುವವೆಂಬ ನಿಯಮವು ಕಂಡುಬರುತ್ತದೆ.

## ಅನ್ನಮಯಪ್ರಾಣಿಗಳಲ್ಲಿ ಪುರುಷನ ವಿಶೇಷ

(ಭಾಷ್ಯ)

೧೧೬. ಸರ್ವೇಷಾಮಪಿ ಅನ್ನರಸವಿಕಾರತ್ವೇ ಬ್ರಹ್ಮವಂಶ್ಯತ್ವೇ ಚ ಅವಿಶಿಷ್ಟೇ ಕಸ್ಮಾತ್ ಪುರುಷ ಏವ ಗೃಹ್ಯತೇ ? ಪ್ರಾಧಾನ್ಯಾತ್ । ಕಿಂ ಪುನಃ ಪ್ರಾಧಾನ್ಯಮ್ ? ಕರ್ಮಜ್ಞಾನಾಧಿಕಾರಃ । ಪುರುಷ ಏವ ಹಿ ಶಕ್ತತ್ವಾತ್, ಅರ್ಥಿತ್ವಾತ್, ಅಪರ್ಯುದಸ್ತತ್ವಾಚ್ಚ (ಅರ್ಥೀ ವಿದ್ವಾನ್ ಸಮರ್ಥಃ)[3] ಕರ್ಮಜ್ಞಾನಯೋರಧಿಕ್ರಿಯತೇ । '' ಪುರುಷೇ ತ್ವೇವಾವಿಸ್ತರಾಮಾತ್ಮಾ ಸ ಹಿ ಪ್ರಜ್ಞಾನೇನ ಸಂಪನ್ನತಮೋ ವಿಜ್ಞಾತಂ ವದತಿ ವಿಜ್ಞಾತಂ ಪಶ್ಯತಿ ವೇದ ಶ್ವಸ್ತನಂ ವೇದ ಲೋಕಾಲೋಕೌ ಮರ್ತ್ಯೇನಾಮೃತಮೀಪ್ಸತೀತ್ಯೇವಂ (ಮೀಪ್ಸತ್ಯೇವಂ) ಸಂಪನ್ನಃ ॥ ಅಥೇತ

---

1. ರಸ, ರಕ್ತ, ಮಾಂಸ, ಮೇದಸ್ಸು, ಅಸ್ಥಿ, ಮಜ್ಜೆ–ಈ ಕ್ರಮದಿಂದ ಪರಿಣಾಮವಾಗಿ ರೇತಸ್ಸುಂಟಾಗಿ ಅದರಿಂದ ಶರೀರವು ಏರ್ಪಡುತ್ತದೆ.

2. ರೇತಸ್ಸು ರಸಾದಿಕ್ರಮದಿಂದ ವುಂಟಾಗುತ್ತದೆ ಎಂಬುದಕ್ಕೆ ಐ. ೨-೧-೧ರ ಪ್ರಮಾಣದ ಸೂಚನೆ.

3. ಕಂಸದಲ್ಲಿರುವ ಈ ಭಾಗವು ವಾ॥ ಪಾಠದಲ್ಲಿಲ್ಲ ; ಇಲ್ಲದಿದ್ದರೂ ಹಿಂದಿನ ವಾಕ್ಯಭಾಗದಿಂದಲೇ ಬೇಕಾದ ಅಭಿಪ್ರಾಯವು ಆಗುತ್ತದೆ.

ರೇಷಾಂ ಪಶೂನಾಮಶನಾಪಿಪಾಸೇ ಏವಾಭಿವಿಜ್ಞಾನಂ ” (ಐ. ಆ. ೨-೩-೨) ಇತ್ಯಾದಿಶ್ರುತ್ಯನ್ತರದರ್ಶನಾತ್ ॥

(ಭಾಷ್ಯಾರ್ಥ)

(ಪ್ರಶ್ನೆ) :—ಎಲ್ಲಾ (ಪ್ರಾಣಿಗಳೂ ಸಮವಾಗಿಯೇ) ಅನ್ನರಸದ ಕಾರ್ಯವಾಗಿರುವಲ್ಲಿ ಮತ್ತು (ಎಲ್ಲರೂ) ಸಮವಾಗಿಯೇ ಬ್ರಹ್ಮವಂಶದವರಾಗಿರುವಲ್ಲಿ ಪುರುಷನನ್ನೇ (ಈ ಮಂತ್ರದಲ್ಲಿ) ಹಿಡಿದು (ಹೇಳಿರುವದು) ಏತಕ್ಕೆ ?

(ಉತ್ತರ) :—(ಅವನ) ಮುಖ್ಯತ್ವದಿಂದ.

(ಪ್ರಶ್ನೆ) :—(ಅವನ) ಮುಖ್ಯತ್ವವಾದರೂ ಏನು ?

(ಉತ್ತರ) :—ಕರ್ಮಜ್ಞಾನಗಳಲ್ಲಿ (ಅವನಿಗಿರುವ) ಅಧಿಕಾರವು. ಶಕ್ತನಾಗಿರುವದರಿಂದಲೂ ಫಲವನ್ನು ಬಯಸುವದರಿಂದಲೂ ನಿಷೇಧಮಾಡಿಲ್ಲವಾದ್ದರಿಂದಲೂ ಪುರುಷನೇ (ಅರ್ಥಿಯೂ ಬಲ್ಲವನೂ ಸಮರ್ಥನೂ ಆಗಿರುವದರಿಂದ)[1] ಕರ್ಮಜ್ಞಾನಗಳಿಗೆ ಅಧಿಕಾರಿಯಾಗಿರುತ್ತಾನೆ.[2] “ಆದರೆ ಪುರುಷನಲ್ಲಿಯೇ ಆತ್ಮನು ಹೆಚ್ಚಾಗಿ ಪ್ರಕಟವಾಗಿರುತ್ತಾನೆ ; ಏಕೆಂದರೆ ಅವನನ್ನು ಮಿಗಿಲಿಲ್ಲದಷ್ಟು ಪ್ರಜ್ಞಾನದಿಂದ ಕೂಡಿದವನಾಗಿರುತ್ತಾನೆ, ಅರಿತುಮಾತನಾಡುತ್ತಾನೆ ಅರಿತು ನೋಡುತ್ತಾನೆ. ನಾಳೆಯದನ್ನು ಬಲ್ಲನು, ಲೋಕಾಲೋಕಗಳನ್ನು ಬಲ್ಲನು, ಮರ್ತ್ಯದಿಂದ ಅಮೃತವನ್ನು ಪಡೆಯಲೆಳಸುತ್ತಾನೆ.[3] ಇಂಥ (ಗುಣಗಳಿಂದ) ಕೂಡಿದವನು. ಇನ್ನು ಮಿಕ್ಕ ಪಶುಗಳಿಗೆ ಹಸಿವುಬಾಯಾರಿಕೆಗಳೇ ಅರಿವು....” (ಐ. ಆ. ೨-೩-೨) ಎಂದು ಮುಂತಾಗಿ ಬೇರೊಂದು ಶ್ರುತಿಯಲ್ಲಿ ಹೇಳಿರುತ್ತದೆ.

(ಭಾಷ್ಯ)

೧೧೭. ಸ ಹಿ ಪುರುಷಃ ಇಹ ವಿದ್ಯಯಾ ಅನ್ತರತಮಂ ಬ್ರಹ್ಮ ಸಂಕ್ರಾಮಯಿತುಮ್ ಇಷ್ಟಃ । ತಸ್ಯ ಚ ಬಾಹ್ಯಾಕಾರವಿಶೇಷೇಷು ಅನಾತ್ಮಸು ಆತ್ಮಭಾವಿತಾ

---

1 ಈ ಭಾಗವು ಇಲ್ಲದಿದ್ದರೂ ಸಾಗುತ್ತದೆ.

2. ಜೈ ಸೂ. ೬-೧೨-೫ರಿಂದ ೪೨ರ ವರೆಗಿನ ಸೂತ್ರಭಾಷ್ಯದಲ್ಲಿ ಕರ್ಮಾಧಿಕಾರವನ್ನು ವಿಚಾರಮಾಡಿದೆ. ಇಲ್ಲಿ ಹೇಳಿರುವದು ವೈದಿಕಶಕ್ತಿಯು. ಜ್ಞಾನಕ್ಕೂ ಕರ್ಮದಂತೆಯೇ ಅಧಿಕಾರವಿಚಾರವನ್ನು ಸೂ. ಭಾ. ೧-೧-೧, ೧-೩-೩೩ರಿಂದ ೩೮, ೩-೪-೩೬ ಮುಂತಾದ ಕಡೆಗಳಲ್ಲಿ ಮಾಡಿದೆ. ಜ್ಞಾನವೆಂದರೆ ಉಪಾಸನೆ ಮತ್ತು ಜ್ಞಾನ.-ಎರಡನ್ನೂ ಇಟ್ಟುಕೊಳ್ಳಬೇಕು.

3. ಮರ್ತ್ಯವಾದ ಕರ್ಮೋಪಾಸನೆಗಳಿಂದ ಅಮೃತವನ್ನು ಎಂದು ಬಹುಕಾಲವಿರುವ ಫಲವನ್ನು ಪಡೆಯುವದಕ್ಕೆ ಮಿಥ್ಯಾರೂಪವಾದ ವೃತ್ತಿಜ್ಞಾನದಿಂದ ಸತ್ಯವಾದ ಅಮೃತತ್ವವನ್ನು ಪಡೆಯುವದಕ್ಕೂ ಯತ್ನಿಸುತ್ತಾನೆ.

ಬುದ್ಧಿಃ ವಿನಾ ಆಲಮ್ಬನವಿಶೇಷಂ[1] ಕಂಚಿತ್ ಸಹಸಾ ಅನ್ತರತಮಪ್ರತ್ಯಗಾತ್ಮ ವಿಷಯಾ ನಿರಾಲಮ್ಬನಾ ಚ ಕರ್ತುಮಶಕ್ಯಾ ಇತಿ ದೃಷ್ಟಶರೀರಾತ್ಮಸಾಮಾನ್ಯಕಲ್ಪ ನಯಾ ಶಾಖಾಚನ್ದ್ರನಿದರ್ಶನವತ್ ಅನ್ತಃ ಪ್ರವೇಶಯನ್ನಾಹ–ತಸ್ಯ ಇದಮೇವ ಶಿರಃ । ತಸ್ಯ ಅಸ್ಯ ಪುರುಷಸ್ಯ ಅನ್ನರಸಮಯಸ್ಯ ಇದಮೇವ ಶಿರಃ ಪ್ರಸಿದ್ಧಮ್ । ಪ್ರಾಣಮಯಾದಿಷು ಅಶಿರಸಾಂ ಶಿರಸ್ತ್ವದರ್ಶನಾತ್ ಇಹಾಪಿ ತತ್ಪ್ರಸಙ್ಗೋ ಮಾ ಭೂತ್ ಇತಿ "ಇದಮೇವ ಶಿರಃ" ಇತ್ಯುಚ್ಯತೇ । ಏವಂ ಪಕ್ಷಾದಿಷು ಯೋಜನಾ । ಅಯಂ ದಕ್ಷಿಣೋ ಬಾಹುಃ ಪೂರ್ವಾಭಿಮುಖಸ್ಯ ದಕ್ಷಿಣಃ ಪಕ್ಷಃ । ಅಯಂ ಸವ್ಯೋ ಬಾಹುಃ ಉತ್ತರಃ ಪಕ್ಷಃ । ಅಯಂ ಮಧ್ಯಮೋ ದೇಹಭಾಗಃ ಆತ್ಮಾ ಅಙ್ಗಾನಾಮ್ । "ಮಧ್ಯಂ ಹ್ಯೇಷಾಮಙ್ಗಾನಾಮಾತ್ಮಾ" (ಐ.ಆ. ೨-೩-೫) ಇತಿ ಶ್ರುತೇಃ । 'ಇದಮ್' ಇತಿ ನಾಭೇರಧಸ್ತಾತ್ ಯದಙ್ಗಂ ತತ್ ಪುಚ್ಛಂ ಪ್ರತಿಷ್ಠಾ । ಪ್ರತಿತಿಷ್ಠತಿ ಅನಯಾ ಇತಿ ಪ್ರತಿಷ್ಠಾ ಪುಚ್ಛಮಿವ ಪುಚ್ಛಮ್ । ಅಧೋಲಮ್ಬನಸಾಮಾನ್ಯಾತ್ । ಯಥಾ ಗೋಃ ಪುಚ್ಛಮ್ ॥ ಏತತ್ ಪ್ರಕೃತ್ಯ ಉತ್ತರೇಷಾಂ ಪ್ರಾಣಮಯಾದೀನಾಂ ರೂಪಕತ್ವಸಿದ್ಧಿಃ । ಮೂಷಾನಿಷಿಕ್ತದ್ರುತತಾಮ್ರಪ್ರತಿಮಾವತ್ ॥

(ಭಾಷ್ಯಾರ್ಥ)

ಆ ಪುರುಷನನ್ನೇ ಇಲ್ಲಿ ಜ್ಞಾನದಿಂದ ಅತ್ಯಂತವಾಗಿ (ಅವನ) ಒಳಗೇ ಇರುವ ಬ್ರಹ್ಮವನ್ನು ಸೇರಿಸಬೇಕೆಂದು (ಶ್ರುತಿಯು) ಅಭಿಪ್ರಾಯಪಟ್ಟಿರುತ್ತದೆ. ಮತ್ತು ಹೊರಗಿನ ಬೇರೆ ಬೇರೆಯ ಆಕಾರಗಳಲ್ಲಿ (ಅವು) ಅನಾತ್ಮವಾಗಿದ್ದರೂ ಆತ್ಮನೆಂಬ ಭಾವನೆಯಿಂದ ತುಂಬಿರುವ, ಅವನ ಬುದ್ಧಿಯನ್ನು ಯಾವದಾದರೊಂದು ಗೊತ್ತಾದ ಆಲಂಬನೆಯಿಲ್ಲದೆ[2] ತಟ್ಟನೆ ಎಲ್ಲಕ್ಕೂ ಒಳಗಿರುವ ಪ್ರತ್ಯಗಾತ್ಮನನ್ನೇ ವಿಷಯವಾಗಿಸಿಕೊಂಡು (ಬೇರೆ) ಯಾವ ವಿಷಯವೂ ಇಲ್ಲದಂತೆ ಮಾಡುವದು ಆಗಲಾರದಾದ್ದರಿಂದ[3] (ಈಗ ಅವನ ಅನುಭವದಲ್ಲಿ) ಕಂಡಿರುವ ಶರೀರವೆಂಬ ಆತ್ಮನಿಗೆ ಸಾದೃಶ್ಯ

---

1. "ಅನಾಲಮ್ಬ್ಯ ವಿಶೇಷಂ" ಎಂದು ಆ॥ ಪಾಠ.

2. ಕುಂಟನಿಗೆ ಊರುಗೋಲೆಂಬ ಆಲಂಬನೆಯು ಬೇಕಾಗಿರುವಂತೆ ಸಾಮಾನ್ಯರಿಗೆ ಆತ್ಮಬುದ್ಧಿಯನ್ನು ಮಾಡುವದಕ್ಕೆ ಶರೀರವೇ ಮುಂತಾದ ಯಾವದಾದರೊಂದು ಆಲಂಬನೆ ಬೇಕು. 'ಅನಾಲಂಬ್ಯ ವಿಶೇಷಂ ಕಂಚಿತ್" ಎಂಬ ಆ॥ ಪಾಠಕ್ಕೆ ಯಾವದಾದರೊಂದು ವಿಶೇಷವನ್ನು ಅವಲಂಬಿಸದೆ ಎಂದು ಅರ್ಥ.

3. ಆತ್ಮನು ವಿಷಯನಲ್ಲವಾದ್ದರಿಂದ ವಿಷಯವಾದದ್ದೊಂದನ್ನು ಆರೋಪಿಸಿಕೊಳ್ಳದೆ ನೇರಾಗಿ ಆತ್ಮನನ್ನು ಅರಿಯುವದು ಸಾಮಾನ್ಯರಿಗೆ ಆಗಲಾರದು.

ವನ್ನು ಕಲ್ಪಿಸಿ ಕೊಂಬೆಯ ಚಂದ್ರನನ್ನು ತೋರಿಸುವಂತೆ[1] ಒಳಕ್ಕೆ ಹೊಗಿಸುವದ ಕ್ಕಾಗಿ (ವೇದವು) " ಅವನಿಗೆ ಇದೇ ತಲೆ " (ಎಂದು ಮುಂತಾಗಿ) ಹೇಳುತ್ತಿದೆ.

ಅವನಿಗೆ ಎಂದರೆ ಈ ಅನ್ನರಸಮಯನಾದ ಪುರುಷನಿಗೆ ಇದೇ ಎಂದರೆ (ಎಲ್ಲರಿಗೂ) ಗೊತ್ತಿರುವ (ಈ ತಲೆಯೇ) ತಲೆ. (ಮುಂದೆ) ಪ್ರಾಣಮಯನೇ ಮುಂತಾದ (ಆತ್ಮರು) ಗಳ ವಿಷಯದಲ್ಲಿ ತಲೆಯಲ್ಲದವುಗಳನ್ನು[2] ತಲೆಯೆಂದು (ಕರೆದಿರುವದು) ಕಂಡುಬರುವದರಿಂದ ಇಲ್ಲಿಯೂ ಹಾಗೆಯೇ ಎಂದಾಗಬಾರದು ಎಂಬ ಉದ್ದೇಶದಿಂದ " ಇದೇ ತಲೆ " ಎಂದಿರುತ್ತದೆ. ಹೀಗೆಯೇ ಪಕ್ಷವೇ ಮುಂತಾದವು ಗಳ (ವಿಷಯ) ದಲ್ಲಿಯೂ ಹೊಂದಿಸಿಕೊಳ್ಳಬೇಕು. ಇದು (ಎಂದರೆ) ಪೂರ್ವಕ್ಕೆ ಎದುರಾಗಿರುವವನ (ಈ) ಬಲತೋಳು ದಕ್ಷಿಣ ಪಕ್ಷವು; ಇದು ಎಂದರೆ ಎಡತೋಳು ಉತ್ತರ ಪಕ್ಷವು, ಈ ನಡುವಿನ ದೇಹಭಾಗವು ಅಂಗಗಳಿಗೆ ಆತ್ಮನು. " ಈ ಅಂಗಗಳಿಗೆ ನಡುವಿನದೇ ಆತ್ಮನು " (ಐ. ಆ. ೨-೩-೫) ಎಂಬ ಶ್ರುತಿಯು ಇದಕ್ಕೆ ಪ್ರಮಾಣವು. ಇದು ಎಂದರೆ ಹೊಕ್ಕುಳಿನ ಕೆಳಭಾಗದಲ್ಲಿರುವ ಅಂಗವಿದೆಯಲ್ಲ, ಅದು ಪುಚ್ಛವು; ಪ್ರತಿಷ್ಠೆಯು. ಇದರಿಂದ (ಮನುಷ್ಯನು) ನಿಲ್ಲುತ್ತಾನಾದ್ದರಿಂದ (ಇದಕ್ಕೆ) ಪ್ರತಿಷ್ಠೆಯೆಂದು ಹೆಸರು; ಪುಚ್ಛದಂತೆ ಇರುವದಾದ್ದರಿಂದ (ಇದನ್ನು) ಪುಚ್ಛ (ವೆಂದು ಕರೆದಿದೆ); ಎತ್ತಿನ ಬಾಲದಂತೆ ಕೆಳಕ್ಕೆ ಇಳಿಯಬಿದ್ದಿರುವದೆಂಬ ಸಾದೃಶ್ಯದಿಂದ (ಇದು ಪುಚ್ಛವು).[3] ಈ (ಅನ್ನಮಯಾತ್ಮನನ್ನು) ಮೂಲವಾಗಿಟ್ಟುಕೊಂಡು ಇನ್ನು ಮುಂದೆ ಬರುವ ಪ್ರಾಣಮಯನೇ ಮುಂತಾದವರಿಗೂ (ತಲೆಯೇ ಮುಂತಾದವು) ಗಳನ್ನು ಕಲ್ಪಿಸಿರುವದರಿಂದ ರೂಪಕವು ಸಿದ್ಧವಾಗುತ್ತದೆ. ಮೂಸೆಯಲ್ಲಿ ಸುರಿದಿರುವ ಕರಗಿದ ತಾಮ್ರದ ಪ್ರತಿಮೆಯು (ಹೇಗೆ ಅದೇ ಆಕಾರವನ್ನು ತಳೆಯುವದೋ) ಅದರಂತೆ[4].

---

1. ಕೊಂಬೆಯ ತುದಿಯನ್ನು ತೋರಿಸಿ ಅದರ ಮೂಲಕ ಚಂದ್ರನನ್ನು ತೋರಿಸುವಂತೆ ಅನ್ನಮಯಾದಿಕೋಶಗಳ ಮೂಲಕ ಆತ್ಮನನ್ನು ತಿಳಿಸಬೇಕಾಗಿದೆ. ಚಂದ್ರನಿಗೆ ಕೊಂಬೆಯ ಸೋಂಕು ಇಲ್ಲದಿರುವಂತೆ ಆತ್ಮನಿಗೂ ಕೋಶಗಳ ಸಂಬಂಧವು ಇರುವದಿಲ್ಲ.

2. ಪ್ರಾಣ, ಯಜುಸ್ಸು-ಮುಂತಾದವುಗಳನ್ನು ಮುಂದೆ ತಲೆ ಎಂದಿದೆ.

3. ಪಕ್ಷ, ಪುಚ್ಛ-ಮುಂತಾದವುಗಳನ್ನು ಕೊಟ್ಟು ಹಕ್ಕಿಯ ಆಕೃತಿಯನ್ನು ಕಲ್ಪಿಸಿರುತ್ತದೆ ಎಂದೂ ಹೇಳಬಹುದು. ಐ-ಆ. ೧-೪-೩ನ್ನು ಹೋಲಿಸಿರಿ.

4. ಕರಗಿದ ತಾಮ್ರಕ್ಕೆ ಆಕಾರವಿಲ್ಲದಿದ್ದರೂ ಮೂಸೆಯ ಆಕಾರವನ್ನು ಅದು ಹೊಂದುವಂತೆ ಪ್ರಾಣಮಯಾದಿಗಳಿಗೆ ತಲೆ ಮುಂತಾದ ಅವಯವಗಳಿಲ್ಲದಿದ್ದರೂ ದೇಹವನ್ನನುಸರಿಸಿ ಅವುಗಳಿಗೂ ಕಲ್ಪಿಸಿರುತ್ತದೆ. ಆತ್ಮನು ಅನ್ನಮಯನಿಗಿಂತ ಬೇರೆಯಾಗಿರುವಂತೆ ಅವುಗಳಿಗಿಂತಲೂ ಬೇರೆ ಎಂಬುದೇ ಶ್ರುತಿಯ ಅಭಿಪ್ರಾಯ.

## ಅನ್ನಮಯಾತ್ಮನ ಮಹಿಮೆ

**ತದಪ್ಯೇಷ ಶ್ಲೋಕೋ ಭವತಿ ॥ ೪ ॥**

[ಇತಿ ಪ್ರಥಮೋಽನುವಾಕಃ]

**ಅನ್ನಾದ್ವೈ ಪ್ರಜಾಃ ಪ್ರಜಾಯನ್ತೇ। ಯಾಃ ಕಾಶ್ಚ ಪೃಥಿವೀಗ್ಂ ಶ್ರಿತಾಃ । ಅಥೋ ಅನ್ನೇನೈವ ಜೀವನ್ತಿ । ಅಥೈನದಪಿ ಯನ್ತ್ಯನ್ತತಃ । ಅನ್ನಗ್ಂ ಹಿ ಭೂತಾನಾಂ ಜ್ಯೇಷ್ಠಮ್ । ತಸ್ಮಾತ್ ಸರ್ವೌಷಧಮುಚ್ಯತೇ । ಸರ್ವಂ ವೈ ತೇಽನ್ನಮಾಪ್ನುವನ್ತಿ । ಯೇಽನ್ನಂ ಬ್ರಹ್ಮೋಪಾಸತೇ । ಅನ್ನಗ್ಂ ಹಿ ಭೂತಾನಾಂ ಜ್ಯೇಷ್ಠಮ್ । ತಸ್ಮಾತ್ ಸರ್ವೌಷಧಮುಚ್ಯತೇ । ಅನ್ನಾದ್ಭೂತಾನಿ ಜಾಯನ್ತೇ । ಜಾತಾನ್ಯನ್ನೇನ ವರ್ಧನ್ತೇ । ಅದ್ಯತೇಽತ್ತಿ ಚ ಭೂತಾನಿ । ತಸ್ಮಾದನ್ನಂ ತದುಚ್ಯತ ಇತಿ ॥ ೧ ॥**

೪. ಅದೇ (ವಿಷಯದಲ್ಲಿಯೇ) ಈ ಶ್ಲೋಕವಿರುವದು :

[ಒಂದನೆಯ ಅನುವಾಕವು ಮುಗಿಯಿತು.][1]

೧. ಅನ್ನದಿಂದಲೇ ಪ್ರಜೆಗಳು ಹುಟ್ಟುತ್ತವೆ ; ಯಾವ ಯಾವ (ಪ್ರಜೆಗಳು) ಭೂಮಿಯನ್ನಾಶ್ರಯಿಸಿರುವವೋ (ಅವೆಲ್ಲ) ಇನ್ನು ಅನ್ನದಿಂದಲೇ ಜೀವಿಸಿರುತ್ತವೆ. ಮತ್ತು ಇದನ್ನೇ ಕಡೆಯಲ್ಲಿ ಒಳಹೊಗುತ್ತವೆ. ಅನ್ನವೇ ಭೂತಗಳಲ್ಲಿ ಹಿರಿಯದಲ್ಲವೆ ? ಆದ್ದರಿಂದ ಎಲ್ಲಕ್ಕೂ ಔಷಧವೆನಿಸುತ್ತದೆ. ಯಾರು ಅನ್ನವನ್ನು ಬ್ರಹ್ಮವೆಂದು ಉಪಾಸನೆಮಾಡುವರೋ ಅವರು ಅನ್ನವೆಲ್ಲವನ್ನೂ ಪಡೆದುಕೊಳ್ಳುತ್ತಾರೆ. ಅನ್ನವೇ ಭೂತಗಳಲ್ಲಿ ಹಿರಿಯದಲ್ಲವೆ ? ಆದ್ದರಿಂದ ಎಲ್ಲಕ್ಕೂ ಔಷಧವೆನಿಸುತ್ತದೆ. ಅನ್ನದಿಂದ ಭೂತಗಳು ಹುಟ್ಟುತ್ತವೆ ; ಹುಟ್ಟಿದವು ಅನ್ನದಿಂದ ಬೆಳೆಯುತ್ತವೆ. ತಿನ್ನಲ್ಪಡುತ್ತದೆ ಮತ್ತು ಭೂತಗಳನ್ನು ತಿನ್ನುತ್ತದೆ ; ಆದ್ದರಿಂದ ಅದು ಅನ್ನವೆನಿಸುತ್ತದೆ.

---

1. ಹೀಗೆ ಅನುವಾಕಗಳನ್ನು ಅಧ್ಯಯನಮಾಡುವವರು ವಿಂಗಡಿಸಿಕೊಂಡಿರುತ್ತಾರೆ. ಆದರೆ ಈ ವಿಭಾಗದ ವಿಷಯಕ್ಕೆ ಭಾಷ್ಯವಾರ್ತಿಕಗಳಲ್ಲಿ ಏನೂ ಹೇಳಿಲ್ಲ; ವಿಭಾಗವು ಅರ್ಥಕ್ಕೂ ಹೊಂದುವದಿಲ್ಲ. ಆದ್ದರಿಂದ ನಾವು ಅರ್ಥಕ್ಕನುಗುಣವಾಗಿಯೇ ವಲ್ಲಿಯನ್ನು ವಿಂಗಡಿಸಿಕೊಂಡು ಬರೆಯುತ್ತಾ ಬಂದಿದೇವೆ.

(ಭಾಷ್ಯ)

೧೧೮. ತತ್ ತಸ್ಮಿನ್ನೇವ ಅರ್ಥೇ ಬ್ರಾಹ್ಮಣೋಕ್ತೇ ಅನ್ನಮಯಾತ್ಮಪ್ರಕಾಶಕಃ ಏಷ ಶ್ಲೋಕಃ ಮನ್ತ್ರಃ ಭವತಿ ॥

(ಭಾಷ್ಯಾರ್ಥ)

ಅಲ್ಲಿ ಎಂದರೆ ಬ್ರಾಹ್ಮಣದಲ್ಲಿ ಹೇಳಿರುವ ಅದೇ ವಿಷಯದಲ್ಲಿ ಅನ್ನಮಯಾತ್ಮನನ್ನು ತಿಳಿಸುವ ಈ ಶ್ಲೋಕವು ಎಂದರೆ ಮಂತ್ರವು ಇರುವದು.

(ಭಾಷ್ಯ)

೧೧೯. ಅನ್ನಾತ್ ರಸಾದಿಭಾವಪರಿಣತಾತ್ । ವೈ ಇತಿ ಸ್ಮರಣಾರ್ಥಃ । ಪ್ರಜಾಃ ಸ್ಥಾವರಜಙ್ಗಮಾತ್ಮಕಾಃ ಪ್ರಜಾಯನ್ತೇ । ಯಾಃ ಕಾಶ್ಚ ಅವಿಶಿಷ್ಟಾಃ ಪೃಥಿವೀಂ ಶ್ರಿತಾಃ ಪೃಥಿವೀಮ್ ಆಶ್ರಿತಾಃ, ತಾಃ ಸರ್ವಾ ಅನ್ನಾದೇವ ಪ್ರಜಾಯನ್ತೇ ಅಥೋ ಅಪಿ ಜಾತಾಃ ಅನ್ನೇನೈವ ಜೀವನ್ತಿ ಪ್ರಾಣಾನ್ ಧಾರಯನ್ತಿ । ವರ್ಧನ್ತೇ ಇತ್ಯರ್ಥಃ । ಅಥ ಅಪಿ ಏನತ್ ಅನ್ನಮ್ ಅಪಿಯನ್ತಿ ಅಪಿ ಗಚ್ಛನ್ತಿ । ಅಪಿಶಬ್ದಃ ಪ್ರತಿಶಬ್ದಾರ್ಥೇ ಅನ್ನಂ ಪ್ರತಿ ಪ್ರಲೀಯನ್ತೇ ಇತ್ಯರ್ಥಃ । ಅನ್ತತಃ ಅನ್ತೇ ಜೀವನಲಕ್ಷಣಾಯಾ ವೃದ್ಧೇಃ ಪರಿಸಮಾಪ್ತೌ। ಕಸ್ಮಾತ್ ? ಅನ್ನಂ ಹಿ ಭೂತಾನಾಂ ಪ್ರಾಣಿನಾಂ ಜ್ಯೇಷ್ಠಂ ಪ್ರಥಮಜಮ್ । ಅನ್ನಮಯಾದೀನಾಂ ಹಿ ಇತರೇಷಾಂ ಭೂತಾನಾಂ ಕಾರಣಮ್ ಅನ್ನಮ್ । ಅತಃ ಅನ್ನಪ್ರಭವಾಃ ಅನ್ನಜೀವನಾಃ ಅನ್ನಪ್ರಲಯಾಶ್ಚ ಸರ್ವಾಃ ಪ್ರಜಾಃ । ಯಸ್ಮಾಚ್ಚ ಏವಮ್ ತಸ್ಮಾತ್ ಸರ್ವೌಷಧಮ್ ಸರ್ವಪ್ರಾಣಿನಾಂ ದೇಹದಾಹಪ್ರಶಮನಮ್ ಅನ್ನಮ್ ಉಚ್ಯತೇ ॥

(ಭಾಷ್ಯಾರ್ಥ)

ರಸವೇ ಮುಂತಾದ ರೂಪದಿಂದ ಪರಿಣಮಿಸುವ [1] ಅನ್ನದಿಂದ ವೈ ಎಂಬುದು ನೆನಪಿಗೆ ತಂದುಕೊಂಡಿರುವ ಅರ್ಥದ (ನಿಪಾತವು). ಪ್ರಜೆಗಳು ಸ್ಥಾವರ ಜಂಗಮ– (ಈ) ರೂಪವಾಗಿರುವ (ಪ್ರಾಣಿಗಳು ಅನ್ನದಿಂದಲೇ ಹುಟ್ಟುತ್ತವೆ). ಯಾವಯಾವ (ಪ್ರಜೆಗಳು), ಇಂಥವೆಂಬ ನಿಯಮವಿಲ್ಲದೆ(ಯಾವಯಾವವು) ಪೃಥಿವಿಯಲ್ಲಿರುವವೋ ಪೃಥಿವಿಯನ್ನಾಶ್ರಯಿಸಿಕೊಂಡಿರುವವೋ ಅವೆಲ್ಲ ಅನ್ನದಿಂದಲೇ ಹುಟ್ಟುತ್ತವೆ. ಅಥೋ

---

1. ಅನ್ನವು ರಸಾದಿರೂಪವಾಗಿ ಪರಿಣಮಿಸಿ ರೇತಸ್ಸಾಗಿ ಶರೀರವಾಗುತ್ತದೆ. ಐ. ಭಾ ೨-೧, ಛಾ. ಭಾ. ೬-೫-೧.

ಇನ್ನು ಎಂದರೆ) ಮತ್ತು ಹುಟ್ಟಿದವು ಅನ್ನದಿಂದಲೇ ಜೀವಿಸಿರುತ್ತವೆ. ಪ್ರಾಣ ವನ್ನು ಧರಿಸಿರುತ್ತವೆ ; ಬೆಳೆಯುತ್ತಿರುತ್ತವೆ ಎಂದರ್ಥ. ಅಥ (ಮತ್ತು) ಇದಲ್ಲದೆ ಇದನ್ನು (ಈ) ಅನ್ನವನ್ನು (ಅಪಿಯನ್ತಿ = ಅಪಿಗಚ್ಛನ್ತಿ) ಕುರಿತು ಹೋಗುತ್ತವೆ. ಇಲ್ಲಿ) ಅಪಿ ಎಂಬ ಶಬ್ದಕ್ಕೆ ಪ್ರತಿ ಎಂಬ ಶಬ್ದದ ಅರ್ಥವಿರುತ್ತದೆ. ಅನ್ನದಲ್ಲಿ ಹೋಗಿ ಅಡಗುತ್ತವೆ ಎಂದರ್ಥ. ಕಡೆಯಲ್ಲಿ ಎಂದರೆ ಕೊನೆಯಲ್ಲಿ ಜೀವನರೂಪದ ಬೆಳವಣಿಗೆಯು ಮುಗಿದಮೇಲೆ (ಅಡಗುತ್ತವೆ). ಅದೇಕೆ? ಎಂದರೆ (ಹೇಳಲಾಗು ತ್ತದೆ) 'ಹಿ' ಏಕೆಂದರೆ ಅನ್ನವು ಭೂತಗಳಿಗೆ ಎಂದರೆ ಪ್ರಾಣಿಗಳಿಗೆ ಹಿರಿಯದು, ಅವುಗಳಿಗಿಂತ) ಮೊದಲು ಹುಟ್ಟಿರುವದು.[1] ಅನ್ನಮಯವೇ ಮುಂತಾದ ಉಳಿದ ಭೂತಗಳಿಗೆ ಅನ್ನವು ಕಾರಣವಲ್ಲವೆ? ಆದ್ದರಿಂದ ಎಲ್ಲಾ ಪ್ರಜೆಗಳೂ ಅನ್ನದಿಂದ ಹುಟ್ಟಿ ಅನ್ನದಿಂದ ಬದುಕಿಕೊಂಡಿದ್ದು ಅನ್ನದಲ್ಲಿಯೇ ಅಡಗುವವು. ಹೀಗಿರುವ ದಲ್ಲವೆ? ಆದಕಾರಣ[2] ಅನ್ನವು ಸರ್ವೌಷಧವು, ಎಲ್ಲಾ ಪ್ರಾಣಿಗಳಿಗೂ ದೇಹವನ್ನು ಸುಡುವ (ಹಸಿವನ್ನು) ಶಾಂತಿಗೊಳಿಸತಕ್ಕದ್ದು ಎನಿಸಿರುತ್ತದೆ.

(ಭಾಷ್ಯ)

೧೨೦. ಅನ್ನಬ್ರಹ್ಮವಿದಃ ಫಲಮುಚ್ಯತೇ । ಸರ್ವಂ ವೈ ತೇ (ಅನ್ನಂ?) ಸಮಸ್ತಮ್ ಅನ್ನಜಾತಮ್ ಆಪ್ನುವನ್ತಿ । ಕೇ? ಯೇ ಅನ್ನಂ ಬ್ರಹ್ಮ ಯಥೋ ಕ್ತಮ್ ಉಪಾಸತೇ । ಕಥಮ್? "ಅನ್ನಜಃ, ಅನ್ನಾತ್ಮಾ, ಅನ್ನಪ್ರಲಯೋಽಹಮ್। ತಸ್ಮಾತ್ ಅನ್ನಂ ಬ್ರಹ್ಮ" ಇತಿ । ಕುತಃ ಪುನಃ ಸರ್ವಾನ್ನಪ್ರಾಪ್ತಿಫಲಮ್ ಅನ್ನಾ ತ್ಮೋಪಾಸನಮ್ ಇತಿ? ಉಚ್ಯತೇ । ಅನ್ನಂ ಹಿ ಭೂತಾನಾಂ ಜ್ಯೇಷ್ಠಮ್ । ಭೂತೇಭ್ಯಃ ಪೂರ್ವಮುತ್ಪನ್ನತ್ವಾತ್[3] ಜ್ಯೇಷ್ಠಂ ಹಿ ಯಸ್ಮಾತ್, ತಸ್ಮಾತ್ ಸರ್ವೌ ಷಧಮುಚ್ಯತೇ । ತಸ್ಮಾತ್ ಉಪಪನ್ನಾ (ಸರ್ವಾ)ನ್ನಾತ್ಮೋಪಾಸಕಸ್ಯ ಸರ್ವಾನ್ನ ಪ್ರಾಪ್ತಿಃ । "ಅನ್ನಾದ್ ಭೂತಾನಿ ಜಾಯನ್ತೇ । ಜಾತಾನ್ಯನ್ನೇನ ವರ್ಧನ್ತೇ" ಇತಿ ಉಪಸಂಹಾರಾರ್ಥಂ ಪುನರ್ವಚನಮ್ ॥

---

1. ಮೊದಲು ಹುಟ್ಟಿದಕಾರಣವಾದ್ದರಿಂದ ಅದರಿಂದ ಬಂದು, ಅದರಲ್ಲಿದ್ದು, ಅದ ರಲ್ಲಿಯೇ ಅಡಗುತ್ತವೆ.

2. ಮಣ್ಣಿನಿಂದಾಗುವ ಗೋಡೆಗೆ ಮಣ್ಣನ್ನು ಮೆತ್ತಿಯೇ ಸರಿಪಡಿಸಬೇಕಾಗಿರುವಂತೆ ಅನ್ನದಿಂದಾಗುವ ದೇಹದಾಹವನ್ನು ಅನ್ನದಿಂದಲೇ ಅಡಗಿಸಬೇಕು.

3. "ನಿಷ್ಪನ್ನತ್ವಾತ್" ಅ॥ ಪಾಠ.

(ಭಾಷ್ಯಾರ್ಥ)

ಅನ್ನಬ್ರಹ್ಮವನ್ನು ಬಲ್ಲವನಿಗೆ ಫಲವನ್ನು (ಈಗ) ಹೇಳಲಾಗುತ್ತದೆ. ಅವರು ಎಲ್ಲಾ (ಅನ್ನವನ್ನೂ) ಎಂದರೆ ಒಟ್ಟು ಅನ್ನಸಮೂಹವನ್ನೇ ಪಡೆದುಕೊಳ್ಳುತ್ತಾರೆ. ಯಾರು? ಯಾರು ಅನ್ನವನ್ನು ಮೇಲೆ ಹೇಳಿದಂತೆ ಬ್ರಹ್ಮವೆಂದು ಉಪಾಸನೆ ಮಾಡುತ್ತಾರೋ[1] ಅವರು. ಹೇಗೆಂದರೆ "ನಾನು ಅನ್ನದಿಂದ ಹುಟ್ಟಿ, ಅನ್ನಸ್ವರೂಪನಾಗಿ, ಅನ್ನದಲ್ಲಿ ಅಡಗುವೆನು; ಆದ್ದರಿಂದ ಅನ್ನವು ಬ್ರಹ್ಮವು." (ಹೀಗೆ) ಅನ್ನಾತ್ಮನನ್ನು[2] ಉಪಾಸನೆಮಾಡಿದರೆ ಸರ್ವಾನ್ನವೂ ದೊರೆಯುವದೆಂಬ ಫಲವಾಗುವದಕ್ಕೆ ಕಾರಣವೇನು? ಎಂದರೆ (ಶ್ರುತಿ) ಹೇಳುತ್ತದೆ. (ಏಕೆಂದರೆ) ಅನ್ನವೇ ಭೂತಗಳಿಗೆ ಹಿರಿಯದಲ್ಲವೆ? ಭೂತಗಳಿಗಿಂತ ಮೊದಲು ಅನ್ನವು ಉಂಟಾಗಿರುವದರಿಂದ ಹಿರಿಯದು. 'ಹಿ' ಎಂದರೆ ಯಾವ ಕಾರಣದಿಂದ (ಹಿರಿಯದೋ) ಆದ ಕಾರಣ ಎಲ್ಲಕ್ಕೂ ಔಷಧವೆನಿಸಿರುತ್ತದೆ. ಆದ್ದರಿಂದ (ಸರ್ವ?) ಅನ್ನಾತ್ಮನನ್ನು ಉಪಾಸನೆಮಾಡುವಾತನಿಗೆ ಸರ್ವಾನ್ನವೂ ದೊರೆಯುವದು ಯುಕ್ತವಾಗಿರುತ್ತದೆ. "ಅನ್ನದಿಂದ ಭೂತಗಳು ಹುಟ್ಟುತ್ತವೆ; ಹುಟ್ಟಿದವು ಅನ್ನದಿಂದ ಬೆಳೆಯುತ್ತವೆ" ಎಂದು ಮತ್ತೆ ಹೇಳಿರುವದು ಉಪಸಂಹಾರಕ್ಕಾಗಿ.[3]

(ಭಾಷ್ಯ)

೧೨೧. ಇದಾನೀಮ್ ಅನ್ನನಿರ್ವಚನಮ್ ಉಚ್ಯತೇ । ಅದ್ಯತೇ ಭುಜ್ಯತೇ ಚೈವ ಯದ್ ಭೂತೈರನ್ನಮ್[4], ಅತ್ತಿ ಚ ಭೂತಾನಿ ಸ್ವಯಮ್, ತಸ್ಮಾತ್

---

1. ಇಲ್ಲಿ ಅನ್ನಾದಿಗಳನ್ನು ಉಪಾಸನೆಮಾಡಬೇಕೆಂದು ವಿಧಿಸಿರುವದು ಮುಖ್ಯವಲ್ಲ, ಏಕೆಂದರೆ ಇದು ಜ್ಞಾನಪ್ರಕರಣ. ಆದ್ದರಿಂದ ಅನ್ನಾದಿಗಳ ಉಪಾಸನೆಯನ್ನು ಫಲಕೀರ್ತನದಿಂದ ಹೊಗಳಿ ಕ್ರಮಕ್ರಮವಾಗಿ ಆತ್ಮಜ್ಞಾನಕ್ಕೆ ಅಣಿಮಾಡಿದೆ ಎಂದು ಹೇಳಬೇಕು. ಆದರೂ ಶ್ರುತಿಯ ಪ್ರಾಮಾಣ್ಯದಿಂದ ಆಯಾ ಅವಾಂತರಫಲಗಳೂ ಆಗಬಹುದಾಗಿದೆ; ಅಥವಾ ಬೇರೊಂದು ಶ್ರುತಿಯಲ್ಲಿ ವಿಧಿಸಿರುವ ಉಪಾಸನೆಯನ್ನು ಇಲ್ಲಿ ಅನುವಾದಮಾಡಿಕೊಂಡಿದೆ ಎಂದಾದರೂ ಕಲ್ಪಿಸಬಹುದು.

2. ವಿರಾಟ್ಪುರುಷನನ್ನು.

3. ಪ್ರಕೃತವಾಗಿರುವದು ಅನ್ನಮಯಾತ್ಮನ ವರ್ಣನೆ; ಉಪಾಸನೆಯ ವಿಚಾರವು ಬಂದಿರುವದು ಅದರ ಮಹಿಮೆಯನ್ನು ತಿಳಿಸುವದಕ್ಕಾಗಿ. ಆದ್ದರಿಂದ ಪ್ರಕೃತವಾದ ಅನ್ನಮಯನು ವಿರಾಡ್ರೂಪದಿಂದ ಭೂತಗಳ ಉತ್ಪತ್ತಿಸ್ಥಿತಿಲಯಗಳಿಗೆ ಕಾರಣನಾಗಿರುತ್ತಾನೆ ಎಂದು ಉಪಸಂಹಾರಮಾಡಿರುತ್ತದೆ. ಭೂತಗಳೆಂದರೆ ಸ್ಥೂಲಶರೀರೋಪಾಧಿಯ ಜೀವರು.

4. "ಅನ್ನಮ್" ಎಂಬ ಮಾತು ವಾ|| ಪಾಠದಲ್ಲಿಲ್ಲ; ಇಲ್ಲದಿದ್ದರೂ ಸಾಗುತ್ತದೆ.

ಭೂತೈರ್ಭುಜ್ಯಮಾನತ್ವಾತ್, ಭೂತಭೋಕ್ತೃತ್ವಾಚ್ಚ ಅನ್ನಂ ತತ್ ಉಚ್ಯತೇ ।
ಇತಿಶಬ್ದಃ ಪ್ರಥಮಕೋಶಪರಿಸಮಾಪ್ತ್ಯರ್ಥಃ ॥

(ಭಾಷ್ಯಾರ್ಥ)

ಈಗ ಅನ್ನ (ಎಂಬ ಶಬ್ದದ) ನಿರ್ವಚನವನ್ನು (ಶ್ರುತಿಯು) ಹೇಳುತ್ತದೆ. ಅನ್ನವು ಯಾವ ಕಾರಣದಿಂದ ಭೂತಗಳಿಂದ 'ಅದ್ಯತೇ' ತಿನ್ನಲ್ಪಡುತ್ತಲೂ ಎಂದರೆ ಭೋಗಿಸಲ್ಪಡುತ್ತಲೂ ಇದೆಯೋ, ಆ ತಾನು ಭೂತಗಳನ್ನು ತಿನ್ನುತ್ತದೆಯೋ, ಕಾರಣ ದಿಂದ ಎಂದರೆ ಭೂತಗಳಿಂದ ಅನುಭವಿಸಲ್ಪಡುತ್ತಿರುವದರಿಂದಲೂ ಭೂತಗಳನ್ನು ಅನುಭವಿಸುತ್ತಿರುವದರಿಂದಲೂ[1] ಅದು "ಅನ್ನ" ಎನಿಸಿಕೊಂಡಿರುತ್ತದೆ. "ಇತಿ" ಎಂಬ ಶಬ್ದವು ಮೊದಲನೆಯ **ಕೋಶದ**[2] (ವಿವರವು) ಮುಗಿಯಿತೆಂದು ತಿಳಿಸುವದಕ್ಕೆ.

# ೪. ಪ್ರಾಣಮಯಾತ್ಮ

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೧೨೨. ಅನ್ನಮಯಾದಿಭ್ಯಃ ಆನನ್ದಮಯಾನ್ತೇಭ್ಯಃ ಆತ್ಮಭ್ಯಃ ಅಭ್ಯನ್ತರ ತಮಂ ಬ್ರಹ್ಮವಿದ್ಯಯಾ ಪ್ರತ್ಯಗಾತ್ಮತ್ವೇನ ದಿದರ್ಶಯಿಷು ಶಾಸ್ತ್ರಮ್ ಅವಿದ್ಯಾಕೃತ ಪಞ್ಚಕೋಶಾಪನಯನೇನ ಅನೇಕತುಷಕೋದ್ರವವಿತುಷೀಕರಣೇನೇವ ತಣ್ಡುಲಾನ್ ಪ್ರಸ್ತೌತಿ "ತಸ್ಮಾದ್ವಾ ಏತಸ್ಮಾದನ್ನರಸಮಯಾತ್" ಇತ್ಯಾದಿ ॥

(ಭಾಷ್ಯಾರ್ಥ)

ಅನ್ನಮಯನು ಮೊದಲಾಗಿ ಆನಂದಮಯನವರೆಗಿನ ಆತ್ಮರುಗಳಿಗಿಂತ[3] ತೀರ ಒಳಗಿರುವ ಬ್ರಹ್ಮವನ್ನು ಅವಿದ್ಯಾಕಲ್ಪಿತವಾದ **ಐದುಕೋಶ**ಗಳನ್ನೂ ತೆಗೆದುಹಾಕಿ– ಅನೇಕ ಹೊಟ್ಟಿರುವ ಪೊರೆಗಳುಳ್ಳ ಕೋದ್ರವವನ್ನು[4] ಹೊಟ್ಟು ಕಳಚಿ ಅದರೊಳಗಿನ

---

1. ಪ್ರಾಣಿಗಳು ಬದುಕಿರುವಾಗ ಅನ್ನವನ್ನು ತಿನ್ನುತ್ತವೆ; ಸಾಯುವಾಗ ಅವನ್ನು ಅನ್ನವೇ ತಿನ್ನುತ್ತದೆ.

2. ನಿಜವಾಗಿ ದೇಹವೇ ಅನ್ನಮಯವು; ಆದರೂ ಅಜ್ಞಾನದಿಂದ ತಾವೇ ಅನ್ನ ಮಯರೆಂದು ಸಾಮಾನ್ಯರು ಭಾವಿಸುತ್ತಾರೆ.

3. ಆತ್ಮರೆಂದು ಸಾಮಾನ್ಯರು ಭಾವಿಸಿರುವವುಗಳಿಗಿಂತ.

4. ನವಣೆ, ಬರಗು-ಮುಂತಾದ ಜಾತಿಯ ಕೀಳುಧಾನ್ಯ.

ಅಕ್ಕಿಯ ಕಾಳನ್ನು (ತೋರಿಸುವಂತೆ)—ವಿದ್ಯೆಯಿಂದ[1] ಒಳಗಿನ ಆತ್ಮನೆಂದು ತೋರಿಸಬೇಕೆಂದು ಶಾಸ್ತ್ರವು " ತಸ್ಮಾದ್ವಾ ಏತಸ್ಮಾದನ್ನರಸಮಯಾತ್ " ಎಂದು ಮುಂತಾಗಿ ಪ್ರಾರಂಭಿಸಿರುತ್ತದೆ ;

**ತಸ್ಮಾದ್ವಾ ಏತಸ್ಮಾದನ್ನರಸಮಯಾತ್ ।**
**ಅನ್ಯೋಽನ್ತರ ಆತ್ಮಾ ಪ್ರಾಣಮಯಃ । ತೇನೈಷ ಪೂರ್ಣಃ ।**

೨. ಆ ಈ ಅನ್ನರಸಮಯನಾದ ಆತ್ಮನಿಗಿಂತಲೂ[4] ಒಳಗಿನ ಇನ್ನೊಬ್ಬ ಪ್ರಾಣಮಯನಾದ ಆತ್ಮ(ನಿರುವನು). ಆತನಿಂದ ಇವನು ತುಂಬಿಕೊಂಡಿರುವನು.

## ಪ್ರಾಣಮಯಾತ್ಮನ ವರ್ಣನೆ

(ಭಾಷ್ಯ)

೧೨೩. ತಸ್ಮಾತ್ ವೈ ಏತಸ್ಮಾತ್ ಯಥೋಕ್ತಾತ್ ಅನ್ನರಸಮಯಾತ್ ಪಿಣ್ಡಾತ್ ಅನ್ಯಃ ವ್ಯತಿರಿಕ್ತಃ ಅನ್ತರಃ ಅಭ್ಯನ್ತರಃ ಆತ್ಮಾ ಪಿಣ್ಡವದೇವ ಮಿಥ್ಯಾಪರಿಕಲ್ಪಿತಃ ಆತ್ಮತ್ವೇನ ಪ್ರಾಣಮಯಃ ಪ್ರಾಣಃ ವಾಯುಃ ತನ್ಮಯಃ ತತ್ಪ್ರಾಯಃ । ತೇನ ಪ್ರಾಣಮಯೇನ ಏಷಃ ಅನ್ನರಸಮಯಃ ಆತ್ಮಾ ಪೂರ್ಣಃ ವಾಯುನಾ ಇವ ದೃತಿಃ। ಸ ವೈ ಏಷ ಪ್ರಾಣಮಯಃ ಆತ್ಮಾ ಪುರುಷವಿಧ ಏವ ಪುರುಷಾಕಾರ ಏವ ಶಿರಃ-ಪಕ್ಷಾದಿಭಿಃ । ಕಿಂ ಸ್ವತ ಏವ? ನೇತ್ಯಾಹ-ಪ್ರಸಿದ್ಧಂ ತಾವತ್ ಅನ್ನರಸಮಯಸ್ಯ ಆತ್ಮನಃ ಪುರುಷವಿಧತ್ವಮ್ । ತಸ್ಯ ಅನ್ನರಸಮಯಸ್ಯ ಪುರುಷವಿಧತಾಂ ಪುರುಷಾಕಾರತಾಮ್ ಅನು ಅಯಂ ಪ್ರಾಣಮಯಃ ಪುರುಷವಿಧಃ ಮೂಷಾನಿಷಿಕ್ತಪ್ರತಿಮಾವತ್, ನ ಸ್ವತ ಏವ । ಏವಂ ಪೂರ್ವಸ್ಯ ಪೂರ್ವಸ್ಯ ಪುರುಷವಿಧತಾಮ್ ಅನು ಉತ್ತರೋತ್ತರಃ ಪುರುಷವಿಧೋ ಭವತಿ । ಪೂರ್ವಪೂರ್ವಶ್ಚ ಉತ್ತರೋತ್ತರೇಣ ಪೂರ್ಣಃ ॥

---

1. ವಿದ್ಯೆಯಿಂದ ಆತ್ಮನೆಂದು ತಿಳಿದುಬರುವದೇ ನಿಜವಾದ ಆತ್ಮನು ; ಮಿಕ್ಕದ್ದೆಲ್ಲವೂ ಕಲ್ಪಿತಾತ್ಮ.

4. " ತಸ್ಮಾದ್ ವಾ " ಎಂಬಲ್ಲಿ ಪ್ರಸಿದ್ಧಾರ್ಥವನ್ನು ಹೇಳುವ ವೈ ಎಂಬ ಮಾತನ್ನು ಕನ್ನಡಿಸಿಲ್ಲ. ಮುಂದೂ ಹೀಗೆಯೇ.

(ಭಾಷ್ಯಾರ್ಥ)

ಆ ಈ ಮೇಲೆ ಹೇಳಿರುವ ಅನ್ನರಸಮಯನಾಗಿರುವ ಶರೀರಕ್ಕಿಂತಲೂ ಇನ್ನೊಬ್ಬ ಬೇರೆಯಾದ ಒಳಗಿನ ಇನ್ನೂ ಒಳಗಿರುವ ಆತ್ಮನು, ಶರೀರದಂತೆಯೇ ಆತ್ಮನೆಂದು ತಪ್ಪಾಗಿ ಕಲ್ಪಿತನಾಗಿರುವವನು, ಪ್ರಾಣಮಯನಾದವನು-ಪ್ರಾಣವೆಂದರೆ[1] ವಾಯು, ತನ್ಮಯನಾಗಿರುವವನು ಎಂದರೆ ಅದೇ ಹೆಚ್ಚಾಗಿರುವವನು- (ಉಂಟು). ಆ ಪ್ರಾಣಮಯನಿಂದ ಇವನು ; (ಈ) ಅನ್ನರಸಮಯನಾದ ಆತ್ಮನು ತುಂಬಿಕೊಂಡಿರುವನು ; ತಿದಿಯು ಗಾಳಿಯಿಂದ (ತುಂಬಿಕೊಂಡಿರು)ವಂತೆ (ತುಂಬಿಕೊಂಡಿರುವನು). ಆ ಈ ಪ್ರಾಣಮಯನಾದ ಆತ್ಮನು ಪುರುಷವಿಧನೇ, ಪುರುಷಾಕಾರನಾಗಿಯೇ ತಲೆ, ಪಕ್ಷ, ಮುಂತಾದವುಗಳಿಂದ (ಕೂಡಿಯೇ) ಇರುತ್ತಾನೆ. ತಾನೇ (ಸ್ವತಂತ್ರವಾಗಿ ಪುರುಷವಿಧ)ನಾಗಿರುತ್ತಾನೇನು ? ಎಂದರೆ ಇಲ್ಲ ಎಂದು (ಶ್ರುತಿಯು ಮುಂದಿನ ವಾಕ್ಯವನ್ನು) ಹೇಳಿರುತ್ತದೆ. ಅನ್ನರಸಮಯನಾದ ಆತ್ಮನು ಪುರುಷವಿಧವಾಗಿರುತ್ತಾನೆಂಬುದಂತು ಪ್ರಸಿದ್ಧ (ವಾಗಿಯೇ ಇದೆ). ಆ ಅನ್ನರಸಮಯ (ನಾದ ಆತ್ಮನ) ಪುರುಷವಿಧತ್ವವನ್ನು ಎಂದರೆ ಪುರುಷಾಕಾರತ್ವವನ್ನು ಅನುಸರಿಸಿ ಈ ಪ್ರಾಣಮಯನು ಪುರುಷವಿಧನಾಗಿರುತ್ತಾನೆ, ಮೂಸೆಯಲ್ಲಿ ಸುರಿದ (ಕರಗಿಸಿದ ತಾಮ್ರದ) ಪ್ರತಿಮೆಯಂತೆ (ಅದೇ ಆಕಾರದಲ್ಲಿರುತ್ತಾನೆ)[2], ತಾನೇ (ಪುರುಷಾಕಾರ) ನಲ್ಲ[3], ಇದೇ ರೀತಿಯಲ್ಲಿ ಹಿಂದು ಹಿಂದಿನ (ಆತ್ಮನ) ಪುರುಷವಿಧತ್ವವನ್ನು ಅನುಸರಿಸಿ ಮುಂದುಮುಂದಿನ (ಆತ್ಮನು) ಪುರುಷವಿಧನಾಗಿರುತ್ತಾನೆ ; ಮತ್ತು ಹಿಂದುಹಿಂದಿನ (ಆತ್ಮನು) ಮುಂದುಮುಂದಿನ ಆತ್ಮನಿಂದ ತುಂಬಿಕೊಂಡಿರುತ್ತಾನೆ.

## ಪ್ರಾಣಮಯಾತ್ಮನ ಅವಯವಗಳು

**ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷವಿಧತಾಮ್ । ಅನ್ವಯಂ ಪುರುಷವಿಧಃ । ತಸ್ಯ ಪ್ರಾಣ ಏವ ಶಿರಃ । ವ್ಯಾನೋ ದಕ್ಷಿಣಃ ಪಕ್ಷಃ । ಅಪಾನ ಉತ್ತರಃ ಪಕ್ಷಃ । ಆಕಾಶ ಆತ್ಮಾ । ಪೃಥಿವೀ ಪುಚ್ಛಂ ಪ್ರತಿಷ್ಠಾ ॥ ೩ ॥**

---

1. " ಪುರುಷವಿಧತಾ,; ತಾಮ್ ಅನು " ಎಂಬ ವಾ॥ ಪಾಠಕ್ಕಿಂತ ಇದೇ ಉತ್ತಮ.
2. ಭಾ. ಭಾ. ೧೧೭ರಲ್ಲಿ ಈ ದೃಷ್ಟಾಂತದ ವಿವರವನ್ನು ಟಿಪ್ಪಣಿಯಲ್ಲಿ ವಿವರಿಸಿದೆ.
3. ಪ್ರಾಣಮಯಾದಿಗಳಿಗೇ ಸ್ವಂತವಾದ ಪುರುಷಾಕಾರವು ಇಲ್ಲದಮೇಲೆ ನಿಜವಾದ ಆತ್ಮನಿಗೆ ಇಲ್ಲವೆಂದು ಹೇಳುವದೇನಿದೆ ? ಎಂದು ಭಾವ.

೩. ಆ ಈತನು ಪುರುಷವಿಧನಾಗಿಯೇ (ಇರುವನು). ಆತನ ಪುರುಷವಿಧತ್ವವನ್ನು ಅನುಸರಿಸಿ ಇವನು ಪುರುಷವಿಧ(ನಾಗಿರುತ್ತಾನೆ). ಅವನಿಗೆ ಪ್ರಾಣವೇ ತಲೆ; ವ್ಯಾನವು ದಕ್ಷಿಣಪಕ್ಷ; ಅಪಾನವು ಉತ್ತರ ಪಕ್ಷ; ಆಕಾಶವು ಆತ್ಮ ; ಪೃಥಿವಿಯು ಪುಚ್ಛವು, ಪ್ರತಿಷ್ಠೆಯು ॥

(ಭಾಷ್ಯ)

೧೨೪. ಕಥಂ ಪುನಃ ಪುರುಷವಿಧತಾ ಅಸ್ಯ ಇತಿ? ಉಚ್ಯತೇ । ತಸ್ಯ ಪ್ರಾಣಮಯಸ್ಯ ಪ್ರಾಣ ಏವ ಶಿರಃ । ಪ್ರಾಣಮಯಸ್ಯ ವಾಯುವಿಕಾರಸ್ಯ ಪ್ರಾಣಃ ಮುಖನಾಸಿಕಾನಿಸ್ಸರಣೋ ವೃತ್ತಿವಿಶೇಷಃ ಶಿರಃ ಇತಿ ಕಲ್ಪ್ಯತೇ[1] ವಚನಾತ್ । ಸರ್ವತ್ರ ವಚನಾದೇವ ಪಕ್ಷಾದಿಕಲ್ಪನಾ । ವ್ಯಾನಃ ವ್ಯಾನವೃತ್ತಿಃ ದಕ್ಷಿಣಃ ಪಕ್ಷಃ । ಅಪಾನಃ ಉತ್ತರಃ ಪಕ್ಷಃ । ಆಕಾಶಃ ಆತ್ಮಾ । ಯ ಆಕಾಶಸ್ಥೋ ವೃತ್ತಿವಿಶೇಷಃ ಸಮಾನಾಖ್ಯಃ ಸ ಆತ್ಮೇವ ಆತ್ಮಾ । ಪ್ರಾಣವೃತ್ತ್ಯಧಿಕಾರಾತ್ । ಮಧ್ಯಸ್ಥತ್ವಾತ್ ಇತರಾಃ ಪರ್ಯನ್ತಾ ವೃತ್ತೀರಪೇಕ್ಷ್ಯ ಆತ್ಮಾ । "ಮಧ್ಯಂ ಹ್ಯೇಷಾಮಙ್ಗಾನಾಮಾತ್ಮಾ" (ಐ.ಆ. ೨-೩-೫) ಇತಿ ಶ್ರುತಿಪ್ರಸಿದ್ಧಂ ಮಧ್ಯಮಸ್ಥಸ್ಯ ಆತ್ಮತ್ವಮ್ । ಪೃಥಿವೀ ಪುಚ್ಛಂ ಪ್ರತಿಷ್ಠಾ । 'ಪೃಥಿವೀ' ಇತಿ ಪೃಥಿವೀ ದೇವತಾ ಆಧ್ಯಾತ್ಮಿಕಸ್ಯ ಪ್ರಾಣಸ್ಯ ಧಾರಯಿತ್ರೀ । ಸ್ಥಿತಿಹೇತುತ್ವಾತ್ । "ಸೈಷಾ ಪುರುಷಸ್ಯಾಪಾನಮವಷ್ಟಭ್ಯ" (ಪ್ರ. ೩-೮) ಇತಿ ಹಿ ಶ್ರುತ್ಯನ್ತರಮ್ । ಅನ್ಯಥಾ ಉದಾನವೃತ್ತ್ಯಾ ಊರ್ಧ್ವಗಮನಂ ಗುರುತ್ವಾತ್ ಪತನಂ ವಾ ಸ್ಯಾತ್ ಶರೀರಸ್ಯ । ತಸ್ಮಾತ್ ಪೃಥಿವೀ ದೇವತಾ ಪುಚ್ಛಂ ಪ್ರತಿಷ್ಠಾ ಪ್ರಾಣಮಯಸ್ಯ ಆತ್ಮನಃ ॥

(ಭಾಷ್ಯಾರ್ಥ)

ಇವನಿಗೆ ಪುರುಷನ ಆಕಾರವಿದೆ ಎಂಬುದಾದರೂ ಹೇಗೆ? ಎಂದರೆ (ಶ್ರುತಿ) ಹೇಳುತ್ತದೆ: —"ಆ ಪ್ರಾಣಮಯನಿಗೆ ಪ್ರಾಣವೇ ತಲೆ" ಪ್ರಾಣಮಯನಾದ ವಾಯುವಿನ ಕಾರ್ಯವಾಗಿರುವ ಆ (ಆತ್ಮನಿಗೆ) ಪ್ರಾಣವು ಎಂದರೆ ಬಾಯಿ ಮತ್ತು ಮೂಗು ಇವುಗಳೊಳಗಿಂದ ಹೊರಗೆ ಬರುತ್ತಿರುವ (ಪ್ರಾಣದ) ಒಂದಾನೊಂದು ವೃತ್ತಿಯು ತಲೆ ಎಂದು ವಚನದ ಪ್ರಾಮಾಣ್ಯದಿಂದ ಕಲ್ಪಿಸಲಾಗಿದೆ.[2] (ಇನ್ನು ಮುಂದೆ) ಎಲ್ಲಾ ಸಂದರ್ಭಗಳಲ್ಲಿಯೂ ಪಕ್ಷವೇ ಮುಂತಾದವುಗಳನ್ನು ಕಲ್ಪಿಸಿರುವದು ವಚನ (ಬಲ)ದಿಂದಲೇ ಆಗಿರುತ್ತದೆ. ವ್ಯಾನವು ಎಂದರೆ ವ್ಯಾನವೃತ್ತಿಯು

1. 'ಏವ ಪರಿಕಲ್ಪ್ಯತೇ ಎಂದು ಆ॥ ಪಾಠ.

2. ಅನ್ನಮಯನಂತೆ ಪ್ರಾಣಮಯಾದಿಗಳಿಗೆ ಪ್ರಸಿದ್ಧವಾದ ತಲೆ, ಪಕ್ಷ-ಮುಂತಾದ ವಿಲ್ಲ. ಇವನ್ನು ಚೆನ್ನಾಗಿ ಚಿಂತನೆಮಾಡುವದರಿಂದ ಮುಂದುಮುಂದಿನ ಒಳಗಿನ ಆತ್ಮನನ್ನು ಅರಿತುಕೊಳ್ಳುವದಕ್ಕೆ ಸಹಾಯವಾಗುತ್ತದೆ. (ತೈ. ವಾ. ೨-೨-೪೪)

ದಕ್ಷಿಣಪಕ್ಷವು ; ಅಪಾನವು ಉತ್ತರಪಕ್ಷವು. ಆಕಾಶವು ಆತ್ಮನು. ಎಂದರೆ ಸಮಾನ ವೆಂಬ ಹೆಸರಿನ ಯಾವ ಒಂದಾನೊಂದು ವೃತ್ತಿಯು ಆಕಾಶದಲ್ಲಿರುವದೋ[1] ಅದು ಆತ್ಮನಂತೆ ಇರುವದರಿಂದ ಆತ್ಮನು. ಪ್ರಾಣವೃತ್ತಿಗಳನ್ನು ಕುರಿತ ಪ್ರಕರಣದಲ್ಲಿರು ವದರಿಂದ (ಇಲ್ಲಿ ಆಕಾಶವೆಂದರೆ ಸಮಾನವೆಂದೇ ಅರ್ಥವನ್ನು ಮಾಡಬೇಕು). (ಆಚೆಗೂ ಈಚೆಗೂ) ನೆರೆಯಲ್ಲಿರುವ ಮಿಕ್ಕ ವೃತ್ತಿಗಳಿಗೆ ಹೋಲಿಸಿದರೆ (ಇದು) ನಡುವೆ ಇರುವದರಿಂದ[2] ಆತ್ಮ (ನೆನಿಸುತ್ತದೆ). "ಈ ಅಂಗಗಳ ನಡುವೆಯೇ ಆತ್ಮನು" (ಐ.ಆ. ೨-೩-೫) ಎಂದು (ಹೇಳಿರುವದರಿಂದ) ನಡುವೆ ಇರುವದು ಆತ್ಮನೆಂಬುದು ಶ್ರುತಿಪ್ರಸಿದ್ಧವಾಗಿರುತ್ತದ. ಪೃಥಿವಿಯು ಪೃಚ್ಛವು, ಪ್ರತಿಷ್ಠೆಯು.'' "ಪೃಥಿವಿ" ಎಂದರೆ (ಇಲ್ಲಿ) ಪೃಥಿವೀದೇವತೆ; (ಇದು) ಆಧ್ಯಾತ್ಮಿಕವಾದ ಪ್ರಾಣವನ್ನು ಹಿಡಿ ದಿಟ್ಟಿರುವದಾಗಿದೆ, ಏಕೆಂದರೆ (ಅದು ಎಲ್ಲವೂ) ನಿಂತಿರುವದಕ್ಕೆ ಕಾರಣವಾಗಿರುತ್ತದೆ. "ಆ ಈ (ಪೃಥಿವೀದೇವತೆಯು) ಪುರುಷನ ಅಪಾನವೃತ್ತಿಯನ್ನು ಹಿಡಿದಿಟ್ಟುಕೊಂಡು (ಇರುತ್ತದೆ)'' (ಪ್ರ. ೩-೮) ಎಂದಲ್ಲವೆ, ಬೇರೊಂದು ಶ್ರುತಿಯಲ್ಲಿದೆ? ಹಾಗಿಲ್ಲದೆ ಇದ್ದರೆ ಉದಾನವೃತ್ತಿಯಿಂದ ಶರೀರವು ಮೇಲಕ್ಕೆ ಹೋಗಿಬಿಡುವದೋ ಅಥವಾ ಭಾರದಿಂದ ಕೆಳಕ್ಕೆ ಬೀಳುವದೋ ಆಗಿಬಿಡುತ್ತಿತ್ತು.[3] ಆದ್ದರಿಂದ ಪೃಥಿವೀದೇವತೆಯು ಪ್ರಾಣಮಯಾತ್ಮನಿಗೆ ಮೇಲಕ್ಕೆತ್ತಿ ಹಿಡಿದುಕೊಂಡಿರುವ ಪುಚ್ಛವು.

## ಪ್ರಾಣಮಯಾತ್ಮನ ಮಹಿಮೆ

**ತದಪ್ಯೇಷ ಶ್ಲೋಕೋ ಭವತಿ ॥ ೪ ॥**

[ಇತಿ ದ್ವಿತೀಯೋಽನುವಾಕಃ]

**ಪ್ರಾಣಂ ದೇವಾ ಅನುಪ್ರಾಣನ್ತಿ । ಮನುಷ್ಯಾಃ ಪಶವಶ್ಚ ಯೇ । ಪ್ರಾಣೋ ಹಿ ಭೂತಾನಾಮಾಯುಃ । ತಸ್ಮಾತ್ ಸರ್ವಾಯುಷ ಮುಚ್ಯತೇ । ಸರ್ವಮೇವ ತ ಆಯುರ್ಯನ್ತಿ । ಯೇ ಪ್ರಾಣಂ ಬ್ರಹ್ಮೋಪಾಸತೇ । ಪ್ರಾಣೋ ಹಿ ಭೂತಾನಾಮಾಯುಃ । ತಸ್ಮಾತ್ ಸರ್ವಾಯುಷಮುಚ್ಯತ ಇತಿ ॥ ೧ ॥**

೪. ಅದೇ (ವಿಷಯದಲ್ಲಿ) ಈ ಶ್ಲೋಕವಿರುವದು :—

[ಎರಡನೆಯ ಅನುವಾಕವು ಮುಗಿಯಿತು.]

---

1. ಮಂಚಿಕೆಯು ಕೂಗುತ್ತದೆ ಎಂದರೆ ಮಂಚಿಕೆಯ ಮೇಲಿರುವವನು ಕೂಗುತ್ತಾನೆ ಎಂದು ಅರ್ಥವಾಗುವಂತೆ ಲಕ್ಷಣಾವೃತ್ತಿಯಿಂದ ಇದಕ್ಕೆ ಆಕಾಶವೆಂದು ಹೆಸರು ಎಂದಭಿಪ್ರಾಯ.
2. ಪ್ರ. ೩-೫ನ್ನು ನೋಡಿ.
3. ಪ್ರಶ್ನಭಾಷ್ಯದಲ್ಲಿರುವ ಪ್ರಾಣವೃತ್ತಿಗಳ ವಿವರಣೆಯನ್ನು ಇದಕ್ಕೆ ಹೋಲಿಸಿರಿ.

೧. "ಪ್ರಾಣವನ್ನು ಅನುಸರಿಸಿ ದೇವತೆಗಳು ಜೀವಿಸಿರುವರು. ಮನುಷ್ಯರೂ ಪಶುಗಳೂ ಯಾವವಿರುವವೋ (ಅವೂ ಹಾಗೆಯೇ). ಪ್ರಾಣವೇ ಭೂತಗಳಿಗೆ ಆಯುಸ್ಸು; ಆದ್ದರಿಂದ ಸರ್ವಾಯುಷವೆನಿಸಿರುತ್ತದೆ. ಯಾರು ಪ್ರಾಣವನ್ನು ಬ್ರಹ್ಮವೆಂದು ಉಪಾಸನೆಮಾಡುವರೋ ಅವರು ಇಡಿಯ ಆಯುಸ್ಸನ್ನೇ ಹೊಂದುತ್ತಾರೆ. ಪ್ರಾಣನೇ ಭೂತಗಳಿಗೆ ಆಯುಸ್ಸು; ಆದ್ದರಿಂದ ಸರ್ವಾಯುಷವೆನಿಸಿರುತ್ತದೆ.

(ಭಾಷ್ಯ)

೧೨೫. ತತ್ ತಸ್ಮಿನ್ನೇವಾರ್ಥೇ ಪ್ರಾಣಮಯಾತ್ಮವಿಷಯಃ ಏಷ ಶ್ಲೋಕಃ ಭವತಿ—

(ಭಾಷ್ಯಾರ್ಥ)

ಅಲ್ಲಿ ಎಂದರೆ ಅದೇ ವಿಷಯದಲ್ಲಿ ಪ್ರಾಣಮಯಾತ್ಮನನ್ನು ಕುರಿತ ಈ ಶ್ಲೋಕವು ಇರುತ್ತದೆ:—

(ಭಾಷ್ಯ)

೧೨೬. ಪ್ರಾಣಂ ದೇವಾ ಅನು ಪ್ರಾಣನ್ತಿ । ದೇವಾಃ ಅಗ್ನ್ಯಾದಯಃ ಪ್ರಾಣಂ ವಾಯ್ವಾತ್ಮಾನಂ ಪ್ರಾಣನಶಕ್ತಿಮನ್ತಮ್ ಅನು ತದಾತ್ಮಭೂತಾಃ ಸನ್ತಃ ಪ್ರಾಣನ್ತಿ ಪ್ರಾಣನಕರ್ಮ ಕುರ್ವನ್ತಿ । ಪ್ರಾಣನಕ್ರಿಯಯಾ ಕ್ರಿಯಾವನ್ತೋ ಭವನ್ತಿ । ಅಧ್ಯಾತ್ಮಾಧಿಕಾರಾತ್ ದೇವಾಃ ಇನ್ದ್ರಿಯಾಣಿ ಪ್ರಾಣಮ್ ಅನು ಪ್ರಾಣನ್ತಿ ಮುಖ್ಯಪ್ರಾಣಮ್ ಅನು ಚೇಷ್ಟನ್ತೇ ಇತಿ ವಾ । ತಥಾ ಮನುಷ್ಯಾಃ ಪಶವಶ್ಚ ಯೇ ತೇ ಪ್ರಾಣನಕರ್ಮಣೈವ ಚೇಷ್ಟಾವನ್ತೋ ಭವನ್ತಿ ॥

(ಭಾಷ್ಯಾರ್ಥ)

"ಪ್ರಾಣನನ್ನು ಅನುಸರಿಸಿ ದೇವತೆಗಳು ಜೀವಿಸಿರುವರು" ದೇವತೆಗಳು ಎಂದರೆ ಅಗ್ನಿಯೇ ಮುಂತಾದವರು ಪ್ರಾಣನನ್ನು ಎಂದರೆ ಪ್ರಾಣನಶಕ್ತಿಯಿಂದ ಕೂಡಿರುವ[1] ವಾಯ್ವಾತ್ಮನನ್ನು ಅನುಸರಿಸಿ ಅವನ ಸ್ವರೂಪವನ್ನೇ ಹೊಂದಿದವರಾಗಿ ಜೀವಿಸಿರುವರು, ಪ್ರಾಣನ ಎಂಬ ಕ್ರಿಯೆಯನ್ನು ಮಾಡುತ್ತಾರೆ, ಪ್ರಾಣನವೆಂಬ ಕ್ರಿಯೆಯಿಂದ ಕ್ರಿಯಾವಂತರಾಗಿರುತ್ತಾರೆ.[2] ಅಥವಾ ಈ ಪ್ರಕರಣವು ಅಧ್ಯಾತ್ಮ (ವಿಷಯುಗಳನ್ನು) ಕುರಿತದ್ದಾಗಿರುವದರಿಂದ **ದೇವತೆಗಳು ಎಂದರೆ ಇಂದ್ರಿಯಗಳು** ಪ್ರಾಣವನ್ನು ಅನುಸರಿಸಿ ಜೀವಿಸಿರುವವು, ಮುಖ್ಯಪ್ರಾಣವನ್ನು

1. ವಾಯುವು ಅಥವಾ ಸೂತ್ರಾತ್ಮನು ಕ್ರಿಯಾಶಕ್ತಿಯಿಂದ ಕೂಡಿರುವನು. ಬೃ. ೩-೭-೨.

2. ದೇವತೆಗಳ ಸಮಷ್ಟಿಯೇ ಪ್ರಾಣನು ಅಥವಾ ವಾಯು. ಅದ್ದರಿಂದ ವಾಯ್ವಾತ್ಮರೂಪದಿಂದಲೇ ಅವರ ವ್ಯಾಪಾರವು ನಡೆಯುತ್ತಿರುವದು.

ಅನುಸರಿಸಿ (ತಮ್ಮ) ವ್ಯಾಪಾರವನ್ನು ಮಾಡುತ್ತವೆ ಎಂದಾದರೂ (ಅರ್ಥವನ್ನು ಮಾಡಬಹುದು)[1] ಹಾಗೂ ಯಾವಯಾವ ಮನುಷ್ಯರಿರುವರೋ ಪಶುಗಳಿರುವವೋ ಅವೆಲ್ಲ ಪ್ರಾಣನಕರ್ಮದಿಂದಲೇ ವ್ಯಾಪಾರವಂತರಾಗಿರುತ್ತವೆ.[2]

(ಭಾಷ್ಯ)

೧೨೭. ಅತಶ್ಚ ನಾನ್ನಮಯೇನೈವ ಪರಿಚ್ಛಿನ್ನೇನ ಆತ್ಮನಾ ಆತ್ಮವನ್ತಃ ಪ್ರಾಣಿನಃ । ಕಿಂ ತರ್ಹಿ ತದನ್ತರ್ಗತೇನ[3] ಪ್ರಾಣಮಯೇನಾಪಿ ಸಾಧಾರಣೇನೈವ ಸರ್ವಪಿಣ್ಡವ್ಯಾಪಿನಾ ಆತ್ಮವನ್ತೋ ಮನುಷ್ಯಾದಯಃ । ಏವಂ ಮನೋಮಯಾದಿಭಿಃ ಪೂರ್ವಪೂರ್ವವ್ಯಾಪಿಭಿಃ ಉತ್ತರೋತ್ತರೈಃ ಸೂಕ್ಷ್ಮೈಃ ಆನನ್ದಮಯಾನ್ತೈಃ ಆಕಾಶಾದಿಭೂತಾರಬ್ಧೈಃ ಅವಿದ್ಯಾಕೃತೈಃ ಆತ್ಮವನ್ತಃ ಸರ್ವೇ ಪ್ರಾಣಿನಃ । ತಥಾ ಸ್ವಾಭಾವಿಕೇನಾಪಿ ಆಕಾಶಾದಿಕಾರಣೇನ ನಿತ್ಯೇನ ಅವಿಕೃತೇನ ಸತ್ಯಜ್ಞಾನಾನನ್ತಲಕ್ಷಣೇನ ಪಞ್ಚಕೋಶಾತಿಗೇನ ಸರ್ವಾತ್ಮನಾ ಆತ್ಮವನ್ತಃ । ಸ ಹಿ ಪರಮಾರ್ಥತ ಆತ್ಮಾ ಸರ್ವೇಷಾಮ್ ಇತ್ಯೇತದಪಿ ಅರ್ಥಾತ್ ಉಕ್ತಂ ಭವತಿ ॥

(ಭಾಷ್ಯಾರ್ಥ)

ಹೀಗಿರುವದರಿಂದಲೇ[4] ಪ್ರಾಣಿಗಳು ಅಳತೆಯ ಕಟ್ಟುಳ್ಳ[5] ಬರಿಯ ಅನ್ನಮಯನಿಂದಲೇ ಆತ್ಮವಂತರಾಗಿಲ್ಲ, ಮತ್ತೇನೆಂದರೆ ಆ (ಅನ್ನಮಯನ) ಒಳಗಿರುವ (ಎಲ್ಲರಿಗೂ) ಸಾಧಾರಣನಾಗಿ[6] ಎಲ್ಲಾ ಶರೀರಗಳನ್ನೂ ವ್ಯಾಪಿಸಿಕೊಂಡಿರುವ ಪ್ರಾಣಮಯನಿಂದಲೂ ಮನುಷ್ಯಾದಿಗಳು ಆತ್ಮವಂತರಾಗಿರುವರು. ಇದರಂತೆ ಹಿಂದುಹಿಂದಿನ (ಆತ್ಮನನ್ನು) ವ್ಯಾಪಿಸಿಕೊಂಡಿರುವ ಮುಂದುಮುಂದಿನ ಸೂಕ್ಷ್ಮವಾಗಿರುವ ಮನೋಮಯನು ಮೊದಲಾಗಿ ಆನಂದಮಯನವರೆಗಿರುವ ಆಕಾಶಾದಿಭೂತಗಳಿಂದ

---

1. ಆಧ್ಯಾತ್ಮವಾಗಿ ವಾಗಾದಿಗಳಾಗಿರುವ ದೇವತೆಗಳೇ ಅಧಿದೈವವಾಗಿ ಅಗ್ನ್ಯಾದಿಗಳಾಗಿರುವರು. ಬೃ. ೧-೩-೧೨ ರಿಂದ ೧೫ರವರೆಗಿನ ಗ್ರಂಥವನ್ನು ನೋಡಿರಿ.

2. ಪ್ರಾಣನ ಬಲದಿಂದಲೇ ಮನುಷ್ಯಾದಿಗಳ ಶರೀರೇಂದ್ರಿಯಸಂಘಾತಗಳು ಕೆಲಸ ಮಾಡುತ್ತಿರುವವು ಎಂದರ್ಥ.

3. "ತದನ್ತರ್ಗತಪ್ರಾಣಮಯೇನಾಪಿ" ಎಂದು ವಾ॥ ಪಾಠ.

4. ಎಲ್ಲಾ ಶರೀರಗಳೂ ಪ್ರಾಣಮಯನ ಅಧೀನರಾಗಿ ವ್ಯಾಪಾರಮಾಡುತ್ತಾ ಅವನಿಂದ ವ್ಯಾಪ್ತರಾಗಿರುವದರಿಂದಲೇ.

5. ಒಬ್ಬೊಬ್ಬರಿಗೆ ಒಂದೊಂದು ಅನ್ನಮಯವಾದ ಶರೀರವಿರುವದರಿಂದ ಅನ್ನಮಯಾತ್ಮನು ಅಳತೆಗೆ ಸಿಕ್ಕುವನು, ಸರ್ವಸಾಧಾರಣನಲ್ಲ.

6. ಪ್ರಾಣಮಯನು ಅನ್ನಮಯಶರೀರದಿಂದಲೇ ಆಕಾರವುಳ್ಳವನಂತೆ ತೋರುವನು; ಆದರೆ ನಿಜವಾಗಿ ಅವನಿಗೆ ಇಷ್ಟೆಂಬ ಅಳತೆಯಿಲ್ಲ, ಅವನು ಎಲ್ಲಾ ಪ್ರಾಣಿಗಳಿಗೂ ಸಾಧಾರಣವಾಗಿರುತ್ತಾನೆ.

ಆಗಿರುವ ಅವಿದ್ಯಾಕಲ್ಪಿತವಾದ[1] (ಆತ್ಮರು)ಗಳಿಂದಲೂ ಪ್ರಾಣಿಗಳೆಲ್ಲ ಆತ್ಮವಂತವಾಗಿರುವವು. ಹಾಗೂ ಸ್ವಾಭಾವಿಕವಾಗಿರುವ[2] **ಆಕಾಶವೇ ಮುಂತಾದವುಗಳಿಗೆ ಕಾರಣವಾಗಿರುವ ನಿತ್ಯನಾದ ಯಾವ ವಿಕಾರವೂ ಇಲ್ಲದ ಸರ್ವಗತನಾಗಿರುವ ಐದು ಕೋಶಗಳನ್ನೂ ಮೀರಿರುವ ಎಲ್ಲರಿಗೂ ಆತ್ಮನಾಗಿರುವ ಸತ್ಯಜ್ಞಾನಾನಂತನೆಂಬ ಲಕ್ಷಣವುಳ್ಳ (ಬ್ರಹ್ಮದಿಂದ) ಆತ್ಮವಂತವಾಗಿರುವವು.** ಏಕೆಂದರೆ ಆ (ಆತ್ಮನೇ) ನಿಜವಾಗಿ ಎಲ್ಲರಿಗೂ ಆತ್ಮನಾಗಿರುವನು ಎಂಬುದನ್ನೂ (ಶಬ್ದದ) ಅರ್ಥ (ವಶ)ದಿಂದ ಹೇಳಿದಂತೆಯೇ ಆಯಿತು.[3]

(ಭಾಷ್ಯ)

೧೨೮. **ಪ್ರಾಣಂ ದೇವಾ ಅನು ಪ್ರಾಣನ್ತಿ ಇತ್ಯುಕ್ತಮ್ । ತತ್ ಕಸ್ಮಾದಿತಿ?** ಆಹ-ಪ್ರಾಣೋ ಹಿ ಯಸ್ಮಾತ್ ಭೂತಾನಾಂ ಆಯುಃ ಜೀವನಮ್ । "ಯಾವದ್ಧ್ಯಸ್ಮಿಞ್ಶರೀರೇ ಪ್ರಾಣೋ ವಸತಿ ತಾವದಾಯುಃ" (ಕೌ. ೩-೨) ಇತಿ ಶ್ರುತ್ಯನ್ತರಾತ್ । ಸರ್ವಾಯುಷಮ್ । ಸರ್ವೇಷಾಮ್ ಆಯುಃ ಸರ್ವಾಯುಃ । ಸರ್ವಾಯುರೇವ ಸರ್ವಾಯುಷಮ್ ಇತಿ ಉಚ್ಯತೇ । ಪ್ರಾಣಾಪಗಮೇ ಮರಣಪ್ರಸಿದ್ಧೇಃ ಪ್ರಸಿದ್ಧಂ ಹಿ ಲೋಕೇ ಸರ್ವಾಯುಷ್ಟ್ವಂ ಪ್ರಾಣಸ್ಯ ॥

(ಭಾಷ್ಯಾರ್ಥ)

ಪ್ರಾಣವನ್ನು ಅನುಸರಿಸಿ ದೇವತೆಗಳು ಜೀವಿಸಿರುವರು ಎಂದು ಹೇಳಲಾಯಿತಷ್ಟೆ. ಅದೇಕೆ? ಎಂದರೆ (ಶ್ರುತಿ) ಹೇಳುತ್ತದೆ:—ಹಿ ಏಕೆಂದರೆ ಭೂತಗಳಿಗೆ ಎಂದರೆ ಪ್ರಾಣಿಗಳಿಗೆ ಪ್ರಾಣವೇ ಆಯುಸ್ಸು, ಎಂದರೆ ಬದುಕು(ವ ಸಾಧನವು). "ಎಲ್ಲಿಯವರೆಗೆ ಈ ಶರೀರದಲ್ಲಿ ಪ್ರಾಣವು ಇರುತ್ತದೆಯೋ ಅಲ್ಲಿಯವರೆಗೇ ಆಯುಸ್ಸು" (ಕೌ. ೩-೨) ಎಂಬ ಮತ್ತೊಂದು ಶ್ರುತಿ ಇದಕ್ಕೆ ಪ್ರಮಾಣವು. ಆದ್ದರಿಂದ (ಅದು) ಸರ್ವಾಯುಷವು. ಸರ್ವರ ಆಯುಸ್ಸು ಸರ್ವಾಯುಸ್ಸು; ಸರ್ವಾಯುಸ್ಸೇ ಸರ್ವಾಯುಷವು[4] ಎಂದು ಎನಿಸಿಕೊಳ್ಳುತ್ತದೆ. ಪ್ರಾಣವು ಹೋದರೆ ಸಾವು ಸಿದ್ಧವಾಗಿರುವ

---

1. ಅನಂದಮಯನವರೆಗಿನ ಆತ್ಮರುಗಳಲ್ಲಿ ಹಿಂದಿನದಕ್ಕಿಂತ ಮುಂದಿನದು ಸೂಕ್ಷ್ಮವೂ ವ್ಯಾಪಕವೂ ಆಗಿರುವದರಿಂದ ಆತ್ಮನು. ಆದರೆ ನಿಜವಾಗಿ ಅದು ಆತ್ಮನಲ್ಲ, ತಪ್ಪು ತಿಳಿವಳಿಕೆಯಿಂದ ಆತ್ಮನೆಂದು ತೋರುತ್ತಿರುತ್ತದೆ. ಗೀ. ಭಾ. ೧೫-೧೭ "ಪರಮಾತ್ಮಾ" ಎಂಬುದರ ವ್ಯಾಖ್ಯಾನವನ್ನು ನೋಡಿ. "ಆನಂದಮಯ" ವೆಂಬುದು ಕಾರಣಾವಿದ್ಯೆಯೆಂದು ಹೇಳುವ ಕೆಲವರು ವೇದಾಂತಿಗಳ ಅಭಿಪ್ರಾಯವು ಇಲ್ಲಿರುವ ಭಾಷ್ಯಕ್ಕೆ ವಿರುದ್ಧವಾಗಿದೆ ಎಂಬುದು ಸ್ಪಷ್ಟ.

2. ಸ್ವರೂಪವೇ ಆಗಿರುವ.

3. ಏಕೆಂದರೆ ಕಲ್ಪಿತವಾದದ್ದಕ್ಕೆ ಅಧಿಷ್ಠಾನವೊಂದಿರಲೇ ಬೇಕು.

4. ಸರ್ವಾಯುಃ ಎಂಬುದಕ್ಕೆ ಸ್ವಾರ್ಥದಲ್ಲಿ ಪ್ರತ್ಯಯವು ಸೇರಿ ಸರ್ವಾಯುಷಮ್ ಎಂದು ಶಬ್ದರೂಪವಾಗಿದೆ ಎಂದರ್ಥ.

ದೆಂಬ ಕಾರಣದಿಂದ ಪ್ರಾಣವು ಸರ್ವಾಯುಸ್ಸೆಂದು ಲೋಕದಲ್ಲಿ ಪ್ರಸಿದ್ಧವಾಗಿದೆ ಯಲ್ಲವೆ ?[1]

(ಭಾಷ್ಯ)

೧೫. ಅತಃ ಅಸ್ಮಾತ್ ಬಾಹ್ಯಾತ್ ಅಸಾಧಾರಣಾತ್ ಅನ್ನಮಯಾತ್ ಆತ್ಮನಃ ಅಪಕ್ರಮ್ಯ ಅನ್ತಃ ಸಾಧಾರಣಂ ಪ್ರಾಣಮಯಮ್ ಆತ್ಮಾನಮ್ ಬ್ರಹ್ಮ ಉಪಾಸತೇ ಯೇ "ಅಹಮಸ್ಮಿ ಪ್ರಾಣಃ ಸರ್ವಭೂತಾನಾಮ್ ಆತ್ಮಾ ಆಯುಃ ಜೀವನಹೇತುತ್ವಾತ್" ಇತಿ ತೇ ಸರ್ವಮೇವ ಆಯುಃ ಅಸ್ಮಿನ್ ಲೋಕೇ ಯನ್ತಿ । ನಾಪಮೃತ್ಯುನಾ ಮ್ರಿಯನ್ತೇ ಪ್ರಾಕ್ ಪ್ರಾಪ್ತಾದಾಯುಷಃ ಇತ್ಯರ್ಥಃ । ಶತಂ ವರ್ಷಾಣಿ ಇತಿ ತು ಯುಕ್ತಮ್ । "ಸರ್ವಮಾಯುಃ" ( ? )[2] ಇತಿ ಶ್ರುತಿ ಪ್ರಸಿದ್ಧೇಃ । ಕಿಂ ಕಾರಣಮ್ ? ಪ್ರಾಣೋ ಹಿ ಭೂತಾನಾಮ್ ಆಯುಃ ತಸ್ಮಾತ್ ಸರ್ವಾಯುಷಮುಚ್ಯತ ಇತಿ । ಯೋ ಯದ್ಗುಣಕಂ ಬ್ರಹ್ಮ ಉಪಾಸ್ತೇ ಸ ತದ್ಗುಣ ಭಾಗ್ ಭವತಿ ಇತಿ ವಿದ್ಯಾಫಲಪ್ರಾಪ್ತೇಃ ಹೇತ್ವರ್ಥಃ ಪುನರ್ವಚನಂ "ಪ್ರಾಣೋ ಹಿ" ಇತ್ಯಾದಿ ॥

(ಭಾಷ್ಯಾರ್ಥ)

ಆದ್ದರಿಂದ ಈ ಹೊರಗಿನ ಸಾಧಾರಣನಲ್ಲದ ಅನ್ನಮಯನಾದ ಆತ್ಮನನ್ನು ಬಿಟ್ಟು (ಇವನ) ಒಳಗೆ (ಎಲ್ಲರಿಗೂ) ಸಾಧಾರಣನಾಗಿರುವ ಪ್ರಾಣಮಯನೆಂಬ ಆತ್ಮನನ್ನು ಬ್ರಹ್ಮವೆಂದು ಯಾರು ಉಪಾಸನೆಮಾಡುತ್ತಾರೋ "ಎಲ್ಲಾ ಭೂತ ಗಳಿಗೂ ಆತ್ಮನಾದ ಪ್ರಾಣನು ನಾನು, (ಎಲ್ಲರಿಗೂ) ಬದುಕಿರುವದಕ್ಕೆ ಕಾರಣವಾ ಗಿರುವದರಿಂದ ಆಯುಸ್ಸು (ಆಗಿರುತ್ತೇನೆ)" ಎಂದು (ಉಪಾಸನೆಮಾಡುತ್ತಾರೋ) ಅವರು ಎಲ್ಲಾ ಆಯುಸ್ಸನ್ನೂ (ಈ) ಲೋಕದಲ್ಲಿ ಪಡೆದುಕೊಳ್ಳುತ್ತಾರೆ. (ತಾವು) ಪಡೆದುಕೊಂಡಿರುವ ಆಯುಸ್ಸಿಗಿಂತ ಮುಂಚೆಯೇ ಅಪಮೃತ್ಯುವಿನಿಂದ ಸಾಯುವ ದಿಲ್ಲ[3] ಎಂದರ್ಥ. ಆದರೆ (ಇಲ್ಲಿ) ನೂರುವರ್ಷಗಳ (ಆಯುಸ್ಸನ್ನೂ ಪಡೆದು ಕೊಳ್ಳುತ್ತಾರೆ) ಎಂದು (ಅರ್ಥಮಾಡುವದು ಹೆಚ್ಚು) ಯುಕ್ತವಾಗಿರುತ್ತದೆ. ಏಕೆಂ ದರೆ "ಇಡಿಯ ಆಯುಸ್ಸು" (?) ಎಂದು ಶ್ರುತಿಪ್ರಸಿದ್ಧವಾಗಿರುತ್ತದೆ.[4] (ಪ್ರಾಣೋ

1. ಹೀಗೆ ಲೋಕಪ್ರಸಿದ್ಧವಾದ ವಿಷಯವಿದೆಂಬುದನ್ನು 'ಹಿ' ಎಂಬ ಮಾತು ತಿಳಿಸು ತ್ತದೆ ಎಂದು ಭಾವ.

2. "ಸರ್ವಮಾಯುರೇತಿ" ಎಂದು ವಾ॥ ಪಾಠ.

3. ಕರ್ಮಾನುಸಾರವಾಗಿ ಪಡೆದುಕೊಂಡಿರುವಷ್ಟು ಆಯುಸ್ಸು ದೊರಕುತ್ತದೆ ; ಅಧರ್ಮಾದಿಗಳಿಂದ ಕಡಿಮೆಯಾಗಿ ಅಪಮೃತ್ಯುವಿಗೆ ತುತ್ತಾಗುವದಿಲ್ಲ.

4. ಪುರುಷನಿಗೆ ನೂರು ವರ್ಷವು ಆಯುಸ್ಸು ಎಂದು ತೈತ್ತಿರೀಯ, ಐತರೇಯ, ಮುಂತಾದ ಬ್ರಾಹ್ಮಣಗಳಲ್ಲಿ ವಾಕ್ಯಗಳಿವೆ. "ಸರ್ವಮಾಯುಃ" ಎಂಬ ಒಂದು ಶ್ರುತಿವಚನ ವಿದೆಯೋ ಇಲ್ಲವೋ ತಿಳಿಯದು. ಛಾ. ಭಾ. ೨-೧೧-೨ ನೋಡಿ,

ಪಾಸಕರು ಇಡಿಯ ಆಯುಸ್ಸನ್ನು ಪಡೆದುಕೊಳ್ಳುತ್ತಾರೆಂಬುದಕ್ಕೆ) ಕಾರಣವೇನು ? (ಎಂದರೆ) "ಪ್ರಾಣವೇ ಭೂತಗಳಿಗೆ ಆಯುಸ್ಸು ; ಆದ್ದರಿಂದ (ಅದು) ಸರ್ವಾಯುಷವೆನಿಸಿರುತ್ತದೆ." ಯಾವನು ಯಾವ ಗುಣದಿಂದ ಕೂಡಿದ್ದೆಂದು ಬ್ರಹ್ಮವನ್ನು ಉಪಾಸನೆಮಾಡುವನೋ ಅವನು ಆ ಗುಣವನ್ನುಹೊಂದುವನು ಎಂಬ(ನ್ಯಾಯದಿಂದ)[1] ಉಪಾಸನೆಯ ಫಲವು ದೊರಕುವ ಕಾರಣವನ್ನು (ತಿಳಿಸುವ)ದಕ್ಕಾಗಿ "ಪ್ರಾಣೋ ಹಿ" ಮುಂತಾದ ವಾಕ್ಯವನ್ನು ಮತ್ತೊಮ್ಮೆ ಹೇಳಿರುತ್ತದೆ.

## ಪ್ರಾಣಮಯಪ್ರಕರಣದ ಉಪಸಂಹಾರ

**ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ ॥ ೨ ॥**

೨. ಆ ಹಿಂದಿನವನಿಗೆ ಇವನೇ ಶಾರೀರನಾದ ಆತ್ಮನು.

(ಭಾಷ್ಯ)

೧೩೦. ತಸ್ಯ ಪೂರ್ವಸ್ಯ ಅನ್ನಮಯಸ್ಯ ಏಷ ಏವ ಶರೀರೇ ಅನ್ನಮಯೇ ಭವಃ ಶಾರೀರಃ ಆತ್ಮಾ । ಕಃ ? ಯ ಏಷ ಪ್ರಾಣಮಯಃ ॥

(ಭಾಷ್ಯಾರ್ಥ)

ಆ ಹಿಂದಿನ ಅನ್ನಮಯನಿಗೆ ಇವನೇ ಅನ್ನಮಯವಾದ ಶರೀರದಲ್ಲಿರುವದರಿಂದ ಶಾರೀರನಾದ ಆತ್ಮನು. (ಇವನು ಎಂದರೆ) ಯಾರು ? ಎಂದರೆ ಯಾವ ಈ ಪ್ರಾಣಮಯನಿದಾನಲ್ಲ, (ಇವನೇ).[2]

# ೫. ಮನೋಮಯಾತ್ಮ

## ಮನೋಮಯಾತ್ಮನ ವರ್ಣನೆ

**ತಸ್ಮಾದ್ ವಾ ಏತಸ್ಮಾತ್ ಪ್ರಾಣಮಯಾತ್ । ಅನ್ಯೋಽನ್ತರ ಆತ್ಮಾ ಮನೋಮಯಃ । ತೇನೈಷ ಪೂರ್ಣಃ ॥ ೩ ॥**

೩. ಆ ಈ ಪ್ರಾಣಮಯನಿದಾನಲ್ಲ, ಇವನಿಗಿಂತ ಇನ್ನೊಬ್ಬ ಮನೋಮಯನಾದ ಒಳಗಿನ ಆತ್ಮ(ನಿರುವನು). ಆತನಿಂದ ಇವನು ತುಂಬಿರುವನು.

---

1. ಅವನನ್ನು ಹೇಗೆಹೇಗೆ ಉಪಾಸನೆಮಾಡುವರೋ ಹಾಗೆಹಾಗೆ ಫಲವಾಗುವದು ಎಂದು ಶತಪಥಬ್ರಾಹ್ಮಣದಲ್ಲಿದೆ.

2. ಯಾವನು ಹಿಂದಿನವನಿಗೆ ಆತ್ಮನೋ ಅವನೇ ಇವನಿಗೂ ಆತ್ಮನು ; ಎಲ್ಲರಿಗೂ ಪರಮಾರ್ಥವಾದ ಆತ್ಮನೇ ಎಂಬ ಅರ್ಥವನ್ನು ವ್ಯಾಖ್ಯಾನಕಾರರು ತೆಗೆದಿರುತ್ತಾರೆ.

(ಭಾಷ್ಯ)

೧೩೧. "ತಸ್ಮಾದ್ವಾ ಏತಸ್ಮಾತ್...." ಇತಿ ಉಕ್ತಾರ್ಥಮ್ ಅನ್ಯತ್ । "ಅನ್ಯೋಽನ್ತರ ಆತ್ಮಾ ಮನೋಮಯಃ" । ಮನ ಇತಿ ಸಙ್ಕಲ್ಪಾದ್ಯಾತ್ಮಕಮ್ ಅನ್ತಃಕರಣಮ್। ತನ್ಮಯಃ ಮನೋಮಯಃ । ಯಥಾ ಅನ್ನಮಯಃ । ಸೋಽಯಂ ಪ್ರಾಣಮಯಸ್ಯ ಅಭ್ಯನ್ತರ ಆತ್ಮಾ ॥

(ಭಾಷ್ಯಾರ್ಥ)

"ಆ ಈ (ಪ್ರಾಣಮಯನಿದಾನಲ್ಲ), ಇವನಿಗಿಂತ" ಎಂಬ ಮಿಕ್ಕ ವಾಕ್ಯಕ್ಕೆ ಅರ್ಥವನ್ನು ಹಿಂದೆಯೇ ಹೇಳಿದೆ. "ಇನ್ನೊಬ್ಬ ಮನೋಮಯನಾದ ಒಳಗಿನ ಆತ್ಮನು" ಎಂಬಲ್ಲಿ ಮನಸ್ಸೆಂದರೆ ಸಂಕಲ್ಪವೇ ಮುಂತಾದ ರೂಪದಲ್ಲಿರುವ[1] **ಅಂತಃಕರಣವು**. ತನ್ಮಯನಾಗಿರುವದರಿಂದ (ಇವನು) ಮನೋಮಯ(ನೆನಿಸುತ್ತಾನೆ). 'ಅನ್ನಮಯ' ಎಂಬಂತೆಯೇ[2] (ಇದನ್ನು ಅರಿಯಬೇಕು). ಆ ಈ (ಮನೋಮಯನು) ಪ್ರಾಣಮಯನಿಗೆ ಒಳಗಿನ ಆತ್ಮನು.

## ಮನೋಮಯಾತ್ಮನ ಅವಯವಗಳು

**ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷವಿಧತಾಮ್ । ಅನ್ವಯಂ ಪುರುಷವಿಧಃ । ತಸ್ಯ ಯಜುರೇವ ಶಿರಃ । ಋಗ್ ದಕ್ಷಿಣಃ ಪಕ್ಷಃ । ಸಾಮೋತ್ತರಃ ಪಕ್ಷಃ । ಆದೇಶ ಆತ್ಮಾ । ಅಥರ್ವಾಙ್ಗಿರಸಃ ಪುಚ್ಛಂ ಪ್ರತಿಷ್ಠಾ ॥ ೪ ॥**

೪. ಆ ಈತನು ಪುರುಷವಿಧನಾಗಿಯೇ ಇರುವನು. ಆತನ ಪುರುಷವಿಧತ್ವವನ್ನು ಅನುಸರಿಸಿ ಇವನು ಪುರುಷವಿಧ(ನಾಗಿರುತ್ತಾನೆ). ಅವನಿಗೆ ಯಜುಸ್ಸೇ ತಲೆ ; ಋಕ್ಕು ದಕ್ಷಿಣಪಕ್ಷವು ; ಸಾಮವು ಉತ್ತರಪಕ್ಷವು ; ಆದೇಶವು ಆತ್ಮ ; ಅಥರ್ವಾಂಗಿರಸವು ಪುಚ್ಛವು, ಪ್ರತಿಷ್ಠೆಯು.

(ಭಾಷ್ಯ)

೧೩೨. ತಸ್ಯ ಯಜುರೇವ ಶಿರಃ । ಯಜುಃ ಇತಿ ಅನಿಯತಾಕ್ಷರಪಾದಾವಸಾನೋ ಮನ್ತ್ರವಿಶೇಷಃ । ತಜ್ಜಾತೀಯವಚನೋ ಯಜುಃಶಬ್ದಃ । ತಸ್ಯ ಶಿರಸ್ತ್ವಂ ಪ್ರಾಧಾನ್ಯಾತ್ । ಪ್ರಾಧಾನ್ಯಂ ಚ ಯಾಗಾದೌ ಸಂನಿಪತ್ಯೋಪಕಾರಕತ್ವಾತ್ । ಯಜುಷಾ ಹಿ ಹವಿರ್ದೀಯತೇ ಸ್ವಾಹಾಕಾರಾದಿನಾ । ವಾಚನಿಕೀ ವಾ ಶಿರಆದಿ

1. ಸಂಕಲ್ಪವಿಕಲ್ಪಗಳೆಂಬ ವೃತ್ತಿಗಳಿಂದೊಡಗೂಡಿದ ಎಂದರ್ಥ. ಅಂತಃಕರಣಕ್ಕೆ ಬೇರೆಬೇರೆಯ ವೃತ್ತಿಗಳಿಂದ ಬೇರೆಬೇರೆಯ ಹೆಸರುಗಳು ಬರುತ್ತವೆ.

2. ಅನ್ನಮಯನೆಂದರೆ ಅನ್ನವಿಕಾರವಾಗಿರುವಂತೆ, ಮನೋಮಯನು, ಮನೋವಿಕಾರರೂಪನು ; ಅವನಂತೆ ಇವನೂ ಅವಿದ್ಯಾಕಲ್ಪಿತನಾದ ಆತ್ಮನು.

ಕಲ್ಪನಾ ಸರ್ವತ್ರ । ಮನಸೋ ಹಿ ಸ್ಥಾನಪ್ರಯತ್ನನಾದಸ್ವರವರ್ಣಪದವಾಕ್ಯ ವಿಷಯಾ ತತ್ಸಂಕಲ್ಪಾತ್ಮಿಕಾ ತದ್ಭಾವಿತಾ ವೃತ್ತಿಃ ಶ್ರೋತ್ರಾದಿಕರಣದ್ವಾರಾ ಯಜುಃ ಸಂಕೇತವಿಶಿಷ್ಟಾ ಯಜುಃ ಇತ್ಯುಚ್ಯತೇ । ಏವಮ್ ಋಕ್, ಏವಂ ಸಾಮ । ಏವಂ ಚ ಮನೋವೃತ್ತಿತ್ವೇ ಮನ್ತ್ರಾಣಾಮ್ ವೃತ್ತಿರೇವ ಆವರ್ತ್ಯತೇ ಇತಿ ಮಾನಸೋ ಜಪಃ ಉಪಪದ್ಯತೇ । ಅನ್ಯಥಾ ಅವಿಷಯತ್ವಾತ್ ಮನ್ತ್ರೋ ನಾವರ್ತಯಿತುಂ ಶಕ್ಯಃ ಘಟಾದಿವತ್ ಇತಿ ಮಾನಸೋ ಜಪೋ ನೋಪಪದ್ಯತೇ । ಮನ್ತ್ರಾವೃತ್ತಿಶ್ಚ ಚೋದ್ಯತೇ ಬಹುಶಃ ಕರ್ಮಸು ॥

(ಭಾಷ್ಯಾರ್ಥ)

ಅವನಿಗೆ ಯಜುಸ್ಸೇ ತಲೆ. ಯಜುಸ್ಸು ಎಂದರೆ ಇಷ್ಟೆಂಬ ಅಕ್ಷರಗಳ ನಿಯಮವಿಲ್ಲದೆ ಇರುವ ಪಾದದಲ್ಲಿ ಕೊನೆಗಾಣುವ ಒಂದಾನೊಂದು ಮಂತ್ರವು. (ಇಲ್ಲಿ) ಯಜುಸ್ಸು ಎಂಬ ಶಬ್ದವು ಆ (ಮಂತ್ರದ) ಜಾತಿಗೆ[1] (ಸೇರಿದ ಮಂತ್ರಗಳನ್ನು) ಹೇಳುತ್ತದೆ. ಆ (ಯಜುಸ್ಸು) ತಲೆಯೆಂದಿರುವದು (ಅದಕ್ಕಿರುವ) ಮುಖ್ಯತ್ವದಿಂದ. (ಆ) ಮುಖ್ಯತ್ವವೆಂಬುದೂ (ಯಜುಸ್ಸು) ಯಾಗಾದಿಗಳಲ್ಲಿ ನೇರಾಗಿ[2] ಉಪಯೋಗವಾಗುವದರಿಂದ (ಉಂಟಾದದ್ದು); ಏಕೆಂದರೆ ಸ್ವಾಹಾಕಾರವೇ ಮುಂತಾದವುಗಳಿಂದ[3] ಹವಿಸ್ಸನ್ನು ಯಜುಸ್ಸಿನಿಂದಲೇ ಕೊಡುತ್ತಾರೆ. ಅಥವಾ ವಚನಬಲದಿಂದಲೇ ಎಲ್ಲಾ ಕಡೆಯಲ್ಲಿಯೂ ತಲೆ ಮುಂತಾದವುಗಳನ್ನು ಕಲ್ಪಿಸಿರುತ್ತದೆ (ಎಂದಾದರೂ ಇಟ್ಟುಕೊಳ್ಳಬಹುದು.) **ಸ್ಥಾನ, ಪ್ರಯತ್ನ, ನಾದ, ಸ್ವರ, ವರ್ಣ, ಪದ, ವಾಕ್ಯ, ಇವುಗಳ ವಿಷಯವಾದ ಅವುಗಳ ಸಂಕಲ್ಪರೂಪವಾದ ಆ ಭಾವನೆಯಿಂದ ಕೂಡಿದ ಮನಸ್ಸಿನ ವೃತ್ತಿಯೇ**[4] **ಶ್ರೋತ್ರವೇ ಮುಂತಾದ**

---

1. "**ಯಜುಃ**" ಎಂಬ ಏಕವಚನವನ್ನು ಉಪಯೋಗಿಸಿರುವದು ಒಂದಾನೊಂದು ಗೊತ್ತಾದ ಯಜುಸ್ಸನ್ನು ತಿಳಿಸುವದಕ್ಕಲ್ಲ; ಯಜುಸ್ಸಿನ ಜಾತಿಯ ಮಂತ್ರಗಳನ್ನೆಲ್ಲ ತಿಳಿಸುವದಕ್ಕೆ ಎಂದರ್ಥ.

2. ಸಂನಿಪತ್ಯೋಪಕಾರಕವೆಂದರೆ ನೇರಾಗಿ ಉಪಯೋಗವಾಗುವದು; ಆರಾದುಪಕಾರಕವೆಂದರೆ ಪರಂಪರೆಯಿಂದ ಉಪಯೋಗವಾಗುವದು. ಹವಿರ್ದಾನಕ್ಕೆ ಯಜುಸ್ಸೇ ನೇರಾಗಿ ಉಪಯೋಗವಾಗುತ್ತದೆ.

3. ಮುಂತಾದ ಎಂದರೆ **ಸ್ವಧಾ, ವಷಟ್** ಇವುಗಳು.

4. ಶಬ್ದವಾದ ಯಜುಸ್ಸು ಮನೋಮಯನಿಗೆ ತಲೆ ಎಂಬುದು ಹೇಗೆ? ಎಂಬ **ಶಂಕೆಗೆ ಸಮಾಧಾನವಿದು.** ಆಯಾ ಯಜುಸ್ಸನ್ನುಚ್ಚರಿಸುವ ಮುಂಚೆ ಅದರ **ಸಮಾನವಾದ ವೃತ್ತಿಯಾಗುತ್ತದೆ; ಬಳಿಕ ಕಂಠಾದಿಸ್ಥಾನಗಳಿಂದ ನಾದ, ಸ್ವರ** ಇವುಗಳಿಂದ ಕೂಡಿದ **ವರ್ಣ**ಗಳೂ, ಅವುಗಳ ಸಂಯೋಗದಿಂದ **ಪದ**ಗಳೂ ಪದಗಳು ಸೇರಿ **ವಾಕ್ಯವೂ ಹೊರತೋರಿಕೊಂಡು ಶ್ರೋತ್ರೇಂದ್ರಿಯಕ್ಕೆ ವಿಷಯವಾಗುವವು. ವೃತ್ತಿಯೇ ಮೊದಲು ಉಂಟಾಗುವದರಿಂದ ಅದನ್ನೇ ಇಲ್ಲಿ "ಯಜುಸ್ಸು" ಎಂದು ಕರೆದಿದೆ.**

ಕರಣಗಳ ದ್ವಾರವಾಗಿ ಯಜುಸ್ಸು ಎಂಬ ಸಂಕೇತದಿಂದ ಕೂಡಿದ್ದಾಗಿ ಯಜುಸ್ಸು, ಎನಿಸುತ್ತದೆ. ಋಕ್ಕೆಂಬುದೂ ಹೀಗೆಯೇ, ಸಾಮವೆಂಬುದೂ ಹೀಗೆಯೇ.[1] ಹೀಗೆ ಮಂತ್ರಗಳು ಮನೋವೃತ್ತಿಗಳಾಗಿರುವದರಿಂದಲೇ[2] ವೃತ್ತಿಯನ್ನು ಮಾತ್ರ ಆವರ್ತನೆಮಾಡಬಹುದಾದ್ದರಿಂದ (ಅವುಗಳನ್ನು) ಮನಸ್ಸಿನಲ್ಲಿ ಜಪಮಾಡಬಹುದು ಎಂಬುದು ಹೊಂದುತ್ತದೆ. ಹಾಗಿಲ್ಲದಿದ್ದರೆ[3] ಮಂತ್ರವು ಗಡಿಗೆಯೇ ಮುಂತಾದವುಗಳಂತೆ ಆವರ್ತನೆಮಾಡುವದಕ್ಕೆ ಬರುವಹಾಗಿಲ್ಲವಾದ್ದರಿಂದ (ಮಂತ್ರಗಳ) ಮಾನಸಜಪ ಎಂಬುದೇ ಹೊಂದದೆಹೋಗುತ್ತದೆ. ಆದರೆ ಕರ್ಮಗಳಲ್ಲಿ ಮಂತ್ರಗಳನ್ನು ಆವೃತ್ತಿಮಾಡಬೇಕು ಎಂದು ಬಹುವಾಗಿ ವಿಧಿಸಿರುತ್ತದೆ.[4]

(ಭಾಷ್ಯ)

೧೩೩. ಅಕ್ಷರವಿಷಯಸ್ಮೃತ್ಯಾವೃತ್ತ್ಯಾ ಮನ್ತ್ರಾವೃತ್ತಿಃ ಸ್ಯಾತ್ ಇತಿ ಚೇತ್ । ನ । ಮುಖ್ಯಾರ್ಥಾಸಂಭವಾತ್, "ತ್ರಿಃ ಪ್ರಥಮಾಮನ್ವಾಹ ತ್ರಿರುತ್ತಮಾಮ್" (ತೈ.ಸಂ. ೨-೫-೭) ಇತಿ ಋಗಾವೃತ್ತಿಃ ಶ್ರೂಯತೇ । ತತ್ರ ಋಚೋಽವಿಷಯತ್ವೇ ತದ್ವಿಷಯಸ್ಮೃತ್ಯಾವೃತ್ತೌ ಚ ಕ್ರಿಯಮಾಣಾಯಾಮ್ "ತ್ರಿಃ ಪ್ರಥಮಾಮನ್ವಾಹ" (ತೈ. ಸಂ.) ಇತಿ ಋಗಾವೃತ್ತಿರ್ಮುಖ್ಯೋಽರ್ಥಶ್ಚೋದಿತಃ ಪರಿತ್ಯಕ್ತಃ ಸ್ಯಾತ್ । ತಸ್ಮಾತ್ ಮನೋವೃತ್ತ್ಯುಪಾಧಿಪರಿಚ್ಛಿನ್ನಂ ಮನೋವೃತ್ತಿನಿಷ್ಠಮ್ ಆತ್ಮಚೈತನ್ಯಮ್ ಅನಾದಿನಿಧನಂ ಯಜುಃಶಬ್ದವಾಚ್ಯಮ್ ಆತ್ಮವಿಜ್ಞಾನಂ ಮನ್ತ್ರಾಃ ಇತಿ ॥

(ಭಾಷ್ಯಾರ್ಥ)

(ಶಂಕೆ) :—(ಮಂತ್ರದ) ಅಕ್ಷರಗಳ[5] ವಿಷಯದ ಸ್ಮೃತಿಯನ್ನು, ಆವರ್ತನಮಾಡುವದರಿಂದ(ಲೇ) ಮಂತ್ರದ ಆವೃತ್ತಿಯು ಆಗಬಹುದಲ್ಲ !

(ಪರಿಹಾರ) :—ಆಗಲಾರದು. ಏಕೆಂದರೆ (ಆಗ) ಮುಖ್ಯಾರ್ಥವನ್ನು

---

1. ಗೊತ್ತಾದ ಇಂತಿಷ್ಟು ವರ್ಣಗಳ ಇಂತಿಷ್ಟು ಪಾದಗಳುಳ್ಳದ್ದು ಋಕ್ಕು ; ಗೀತರೂಪವಾಗಿರುವ ಋಕ್ಕು ಸಾಮವು. ಇವೆರಡಕ್ಕೂ ಯಜುಸ್ಸಿನಂತೆ ವೃತ್ತಿಯೇ ಮೂಲವಾಗಿರುವದರಿಂದ ಇವುಗಳನ್ನು ಮನೋಮಯದ ಪಕ್ಷಗಳೆಂದು ಕರೆದಿದೆ ಎಂದರ್ಥ,

2. ವೃತ್ತಿಗಳು ನಮ್ಮ ಅಧೀನವಾಗಿರುವದರಿಂದ ಅವನ್ನು ಎಷ್ಟು ಸಲವಾದರೂ ಉಂಟುಮಾಡಿಕೊಳ್ಳಬಹುದು ; ಅಷ್ಟರಿಂದಲೇ ಮಂತ್ರದ ಜಪವಾದಂತಾಗುತ್ತದೆ.

3. ಮಂತ್ರವು ಹೊರಗಿನ ಶಬ್ದಮಾತ್ರವಾಗಿದ್ದರೆ.

4. ಮಂತ್ರಗಳನ್ನು ಜಪಮಾಡಬೇಕು ಎಂದು ಕರ್ಮಗಳಲ್ಲಿ ವಿಧಿಸಿರುವದು ಮಂತ್ರಗಳೆಂದರೆ ವೃತ್ತಿಗಳೆಂದು ಇಟ್ಟುಕೊಂಡ ಹೊರತು ಹೊಂದುವದಿಲ್ಲ ಎಂದರ್ಥ. ಮಾನಸಜಪವು ಶಬ್ದೋಚ್ಚಾರಣೆಗಿಂತ ಹೆಚ್ಚಿನದೆಂಬ ಸ್ಮೃತಿಗೂ ಈ ಅಭಿಪ್ರಾಯದಿಂದ ಬೆಂಬಲವು ದೊರಕುತ್ತದೆ ಎಂದು ತಿಳಿಯಬೇಕು.

5. ಮಾತುಗಳ.

(ತೆಗೆದುಕೊಂಡಂತೆ) ಆಗುವದಿಲ್ಲ. "ಮೊದಲನೆಯ ಋಕ್ಕನ್ನು ಮೂರುಸಲ ಜಪಿಸಲಿ, ಕೊನೆಯದನ್ನು ಮೂರುಸಲ (ಜಪಿಸಲಿ)!" (ತೈ.ಸಂ.೨-೫-೭) ಎಂದು ಋಕ್ಕನ್ನು ಆವರ್ತನೆಮಾಡಬೇಕೆಂದು ಶ್ರುತಿಯಲ್ಲಿ (ಹೇಳಿ)ದೆ. ಅಲ್ಲಿ ಋಕ್ಕು (ಆವೃತ್ತಿಗೆ) ವಿಷಯವಲ್ಲವೆಂದಿಟ್ಟುಕೊಂಡು ಅದರ ವಿಷಯವಾದ ಸ್ಮೃತಿಯ ಆವೃತ್ತಿಯನ್ನೇ ಮಾಡುವದಾದರೆ "ಮೊದಲನೆಯ (ಋಕ್ಕನ್ನು) ಮೂರು ಸಲ ಜಪಿಸಲಿ!" (ತೈ.ಸಂ.) ಎಂದು ಋಕ್ಕನ್ನೇ ಆವರ್ತನೆಮಾಡಬೇಕೆಂದು ವಿಧಿಸಿರುವ ಮುಖ್ಯಾರ್ಥವನ್ನು ಬಿಟ್ಟಂತೆ ಆಗುವದು. **ಆದಕಾರಣ ಮನೋವೃತ್ತಿಯೆಂಬ ಉಪಾಧಿಗೆ ಕಟ್ಟುಬಿದ್ದಿರುವ ಮನೋವೃತ್ತಿಯಲ್ಲಿರುವ, ಆದ್ಯಂತಗಳಿಲ್ಲದ, ಆತ್ಮಚೈತನ್ಯವೇ[1] 'ಯಜುಸ್ಸು' ಎಂಬ ಶಬ್ದದಿಂದ ಹೇಳಲ್ಪಡುತ್ತದೆ, (ಆ) ಆತ್ಮವಿಜ್ಞಾನವೇ ಮಂತ್ರಗಳು ಎಂದು (ನಿಶ್ಚಯಿಸಬೇಕು).[2]**

(ಭಾಷ್ಯ)

೧೩೪. ಏವಂ ಚ ನಿತ್ಯತ್ವೋಪಪತ್ತಿರ್ವೇದಾನಾಮ್। ಅನ್ಯಥಾ ವಿಷಯತ್ವೇ ರೂಪಾದಿವತ್ ಅನಿತ್ಯತ್ವಂ ಚ ಸ್ಯಾತ್। ನೈತದ್ ಯುಕ್ತಮ್। "ಸರ್ವೇ ವೇದಾ ಯತ್ರೈಕಂ ಭವನ್ತಿ ಸ ಮಾನಸೀನ ಆತ್ಮಾ" (ತೈ.ಆ. ೩-೧೧-೧) ಇತಿ ಚ ಶ್ರುತಿಃ ನಿತ್ಯಾತ್ಮನಾ ಏಕತ್ವಂ ಬ್ರುವತೀ ಋಗಾದೀನಾಂ ನಿತ್ಯತ್ವೇ ಸಮಞ್ಜಸಾ ಸ್ಯಾತ್। "ಋಚೋ ಅಕ್ಷರೇ ಪರಮೇ ವ್ಯೋಮನ್ ಯಸ್ಮಿನ್ ದೇವಾ ಅಧಿ ವಿಶ್ವೇ ನಿಷೇದುಃ" (ಋ. ೨-೩-೨೧, ಶ್ವೇ. ೪-೮) ಇತಿ ಚ ಮನ್ತ್ರವರ್ಣಃ ॥

(ಭಾಷ್ಯಾರ್ಥ)

ಮತ್ತು ಹೀಗೆ (ಒಪ್ಪಿದರೇ) ವೇದಗಳು ನಿತ್ಯವೆಂಬುದು ಹೊಂದುತ್ತದೆ. ಹಾಗಿಲ್ಲದೆ (ಅವು) ವಿಷಯವೆಂದಾದರೆ[3] ರೂಪವೇ ಮುಂತಾದವುಳಂತೆ (ಅವು) ಅನಿತ್ಯವೆಂದೂ ಆಗಿಬಿಡುವದು. ಅದು ಸರಿಯಲ್ಲ. "ಎಲ್ಲಾ ವೇದಗಳೂ ಯಾವನಲ್ಲಿ ಒಂದಾಗುವವೋ....ಅವನೇ (ಜನರ) ಮನಸ್ಸಿನಲ್ಲಿರುವ ಆತ್ಮನು" (ತೈ.ಆ. ೩-೧೧-೧) ಎಂದು (ವೇದಗಳಿಗೆ) ನಿತ್ಯನಾದ ಆತ್ಮನೊಡನೆ ಐಕ್ಯವನ್ನು ಹೇಳುವ

1. ಹಿಂದೆ ಯಜುಸ್ಸು, ಋಕ್ಕು-ಮುಂತಾದವುಗಳು ವೃತ್ತಿಗಳು ಎಂದು ಹೇಳಿದ್ದರೂ ಚಿದ್ವ್ಯಾಪ್ತವಾಗಿಯೇ ಅವಕ್ಕೆ ಆ ಹೆಸರು ಸಲ್ಲುತ್ತದೆ; ಆದ್ದರಿಂದ ಅವು ನಿಜವಾಗಿ ಚಿದ್ರೂಪವೇ ಆಗಿರುವವೆಂದು ತಿಳಿಯಬೇಕು.

2. ಆದ್ದರಿಂದಲೇ ಅವುಗಳಿಗೆ ಪ್ರಾಮಾಣ್ಯವು ಬರುತ್ತದೆ. ಯಾವ ವೃತ್ತಿಯಾದರೂ ಚಿದ್ವ್ಯಾಪ್ತವೇ ಆಗಿರುತ್ತದೆಯಾದರೂ ಮಿಕ್ಕ ವೃತ್ತಿಗಳು ತಮ್ಮ ತಮ್ಮ ವಿಷಯವನ್ನು ಬೆಳಗುವದಕ್ಕೆ ಎದ್ದವುಗಳಾಗಿವೆ. ಆದರೆ ವೇದರೂಪವಾದ ವೃತ್ತಿಯು ಆತ್ಮನನ್ನು ತಿಳಿಸುವದಕ್ಕೆ ಬಂದಿರುತ್ತದೆ ಎಂಬ ವಿಶೇಷವಿದೆ.

3. ಬರಿಯ ಜಡವಾದ ಶಬ್ದವೆಂದಾದರೆ.

ಶ್ರುತಿಯು ಋಗಾದಿಗಳು ನಿತ್ಯವಾದರೇ ಸಮಂಜಸವಾಗುತ್ತದೆ.[1] "ಯಾವದರಲ್ಲಿ ಎಲ್ಲಾ ದೇವತೆಗಳೂ ಕುಳಿತಿರುವರೋ ಆ ನಾಶರಹಿತವಾದ ಪರಮಾಕಾಶದಲ್ಲಿ ಋಕ್ಕುಗಳಿರುವವು" (ಶ್ವೇ. ೪-೮, ಋ. ೨-೩-೨೧) ಎಂಬ **ಮಂತ್ರವರ್ಣವೂ** (ಸಮಂಜಸವಾಗುತ್ತದೆ).[2]

(ಭಾಷ್ಯ)

೧೩೫. ಆದೇಶಃ ಅತ್ರ ಬ್ರಾಹ್ಮಣಮ್ । ಆದೇಷ್ಟವ್ಯವಿಶೇಷಾನ್ ಆದಿಶತಿ[3] ಇತಿ । ಅಥರ್ವಣಾ ಅಙ್ಗಿರಸಾ ಚ ದೃಷ್ಟಾ ಮನ್ತ್ರಾಃ ಬ್ರಾಹ್ಮಣಂ ಚ ಶಾನ್ತಿಕ ಪೌಷ್ಟಿಕಾದಿಪ್ರತಿಷ್ಠಾಹೇತುಕರ್ಮಪ್ರಧಾನತ್ವಾತ್ ಪುಚ್ಛಂ ಪ್ರತಿಷ್ಠಾ ॥

(ಭಾಷ್ಯಾರ್ಥ)

'ಆದೇಶವು' ಎಂದರೆ ಇಲ್ಲಿ ಬ್ರಾಹ್ಮಣವು; ಯಾವ ಯಾವ (ಕರ್ಮಗಳನ್ನು) ಅಪ್ಪಣೆಮಾಡಿ (ವಿಧಿಸ)ಬೇಕೋ ಅವುಗಳನ್ನು ಅಪ್ಪಣೆಮಾಡುತ್ತದೆಯಾದ್ದರಿಂದ (ಅದಕ್ಕೆ) 'ಆದೇಶ' ಎಂದು ಹೆಸರು. 'ಅಥರ್ವಾಙ್ಗಿರಸಃ' (ಎಂದರೆ) **ಅಥರ್ವನೂ ಅಂಗಿರಸ್ಸೂ** ಕಂಡುಹಿಡಿದಿರುವ ಮಂತ್ರಗಳೂ ಬ್ರಾಹ್ಮಣವೂ; ಶಾಂತಿಯನ್ನೂ ಪುಷ್ಟಿಯನ್ನೂ (ಕೊಡುವ ಕರ್ಮಗಳೇ) ಮುಂತಾದ ಪ್ರತಿಷ್ಠೆಗೆ ಹೇತುವಾಗಿರುವ ಕರ್ಮಗಳೇ (ಅವಕ್ಕೆ) ಮುಖ್ಯವಾಗಿರುವದರಿಂದ ಅವು 'ಪುಚ್ಛವು, ಪ್ರತಿಷ್ಠೆಯು' (ಎಂದಿದೆ).

## ಮನೋಮಯಾತ್ಮನ ಮಹಿಮೆ

**ತದಪ್ಯೇಷ ಶ್ಲೋಕೋ ಭವತಿ ॥ ೫ ॥**

[ಇತಿ ತೃತೀಯೋಽನುವಾಕಃ]

**ಯತೋ ವಾಚೋ ನಿವರ್ತನ್ತೇ । ಅಪ್ರಾಪ್ಯ ಮನಸಾ ಸಹ ।**
**ಆನನ್ದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕದಾಚನೇತಿ ॥೧॥**

೫. ಅದೇ ವಿಷಯದಲ್ಲಿ ಈ ಶ್ಲೋಕವಿರುವದು :—

[ಮೂರನೆಯ ಅನುವಾಕವು ಮುಗಿಯಿತು]

---

1. ಇಲ್ಲವಾದರೆ ಅನಿತ್ಯವಾದ ವೇದಗಳಿಗೆ ನಿತ್ಯನಾದ ಆತ್ಮನೊಡನೆ ಐಕ್ಯವನ್ನು ಹೇಳುವದು ಸರಿಯಾಗುವದಿಲ್ಲ.

2. ಋಕ್ಕುಗಳೂ ಪರಮಾಕಾಶರೂಪನಾದ ಆತ್ಮನೂ ಒಂದೆಂದು ಈ ಮಂತ್ರದಲ್ಲಿ ಹೇಳಿರುತ್ತದೆ.

3. "ಅತಿದೇಷ್ಟವ್ಯಾನ್ ಅತಿದಿಶತಿ" ಎಂಬ ಆ॥ ಪಾಠಕ್ಕಿಂತ ಈ ವಾ॥ ಪಾಠವು ಉತ್ತಮ.

೧. ಯಾವದರಿಂದ ವಾಕ್ಕುಗಳು ಮನಸ್ಸಿನೊಡನೆ (ಅದನ್ನು) ಮುಟ್ಟದೆ ಹಿಂತಿರುಗುವವೋ, (ಆ) ಬ್ರಹ್ಮದ ಆನಂದವನ್ನು ಅರಿತುಕೊಂಡವನು ಎಂದಿಗೂ ಹೆದರುವದಿಲ್ಲ.

(ಭಾಷ್ಯ)

೧೩೬. ತದಪಿ ಏಷ ಶ್ಲೋಕಃ ಭವತಿ । ಮನೋಮಯಾತ್ಮಪ್ರಕಾಶಕಃ ಪೂರ್ವವತ್ । ಯತೋ ವಾಚೋ ನಿವರ್ತನ್ತೇ ಅಪ್ರಾಪ್ಯ ಮನಸಾ ಸಹ ಇತ್ಯಾದಿ ॥

(ಭಾಷ್ಯಾರ್ಥ)

ಅದೇ ವಿಷಯದಲ್ಲಿ ಈ ಮನೋಮಯನನ್ನು ತಿಳಿಸಿಕೊಡುವ ಶ್ಲೋಕವು ಇರುವದು. (ಇದನ್ನು) ಹಿಂದಿನಂತೆಯೇ (ವ್ಯಾಖ್ಯಾನಮಾಡಬೇಕು). ಯಾವದರಿಂದ ವಾಕ್ಕುಗಳು ಮನಸ್ಸಿನೊಡನೆ (ಅದನ್ನು) ಮುಟ್ಟಲಾರದೆ ಹಿಂತಿರುಗುವವೋ ಮುಂತಾದ (ಮಂತ್ರದ ಅರ್ಥವು ಸ್ಪಷ್ಟವಾಗಿರುತ್ತದೆ).[1]

## ಮನೋಮಯಪ್ರಕರಣದ ಉಪಸಂಹಾರ

**ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ ॥ ೨ ॥**

೨. ಆ ಹಿಂದಿನವನಿಗೆ ಇವನೇ ಶಾರೀರನಾದ ಆತ್ಮನು.

(ಭಾಷ್ಯ)

೧೩೭. ತಸ್ಯ ಪೂರ್ವಸ್ಯ ಪ್ರಾಣಮಯಸ್ಯ ಏಷ ಏವ ಆತ್ಮಾ ಶಾರೀರಃ । ಶರೀರೇ ಪ್ರಾಣಮಯೇ ಭವಃ ಶಾರೀರಃ । ಕಃ ? ಯ ಏಷ ಮನೋಮಯಃ ॥

(ಭಾಷ್ಯಾರ್ಥ)

ಆ ಹಿಂದಿನ ಪ್ರಾಣಮಯನಿಗೆ ಇವನೇ ಶಾರೀರನಾದ ಆತ್ಮನು. ಪ್ರಾಣಮಯನೆಂಬ ಶರೀರದಲ್ಲಿರುವದರಿಂದ (ಇವನು) ಶಾರೀರ(ನೆನಿಸುವನು)....ಯಾರು ? ಎಂದರೆ ಯಾವ ಈ ಮನೋಮಯನಿರುವನಲ್ಲ, (ಇವನೇ).

# ೬. ವಿಜ್ಞಾನಮಯಾತ್ಮ

## ವಿಜ್ಞಾನಮಯಾತ್ಮನ ವರ್ಣನೆ

**ತಸ್ಮಾದ್ವಾ ಏತಸ್ಮಾನ್ಮನೋಮಯಾತ್ । ಅನ್ಯೋಽನ್ತರ ಆತ್ಮಾ ವಿಜ್ಞಾನಮಯಃ । ತೇನೈಷ ಪೂರ್ಣಃ ॥ ೩ ॥**

---

1. "ಅಪ್ರಾಪ್ಯ ಮನಸಾ ಸಹ ಇತ್ಯಾದಿಃ" ಎಂಬ ಪಾಠದಲ್ಲಿ "ಯತೋ ವಾಚೋ ನಿವರ್ತನ್ತೇ । ಅಪ್ರಾಪ್ಯ ಮನಸಾ ಸಹ" ಮುಂತಾದ ಶ್ಲೋಕವು ಇದೆ-ಎಂದು ಕನ್ನಡಿಸಬೇಕಾಗುವದು. ಮನಸ್ಸಿಗೂ ಇಂದ್ರಿಯಗಳಿಗೂ ವಿಷಯಗಳು ಗೋಚರವಾಗುತ್ತವೆಯೇ ಹೊರತು ಅವು ತಮಗೆ ತಾವೇ ಗೋಚರವಾಗಲಾರವು. ಆದ್ದರಿಂದ ಮನೋಮಯಾತ್ಮನು ಮನಸ್ಸಿಗೂ ವಾಗಾದಿಗಳಿಗೂ ಅವಿಷಯನೆಂದು ಮಂತ್ರದಲ್ಲಿ ವರ್ಣಿಸಿದೆ.

೯. ಆ ಈ ಮನೋಮಯನಿದಾನಲ್ಲ, ಇವನಿಗಿಂತ ಇನ್ನೊಬ್ಬ ವಿಜ್ಞಾನಮಯನಾದ ಒಳಗಿನ ಆತ್ಮ(ನಿರುವನು). ಆತನಿಂದ ಇವನು ತುಂಬಿರುವನು.

(ಭಾಷ್ಯ)

೧೩೮. ತಸ್ಮಾದ್ವಾ ಏತಸ್ಮಾತ್ ಇತ್ಯಾದಿ ಪೂರ್ವವತ್ । ಅನ್ಯೋಽನ್ತರ ಆತ್ಮಾ ವಿಜ್ಞಾನಮಯಃ । ಮನೋಮಯಸ್ಯ ಅಭ್ಯನ್ತರೋ ವಿಜ್ಞಾನಮಯಃ । ಮನೋಮಯೋ ವೇದಾತ್ಮಾ ಉಕ್ತಃ । ವೇದಾರ್ಥವಿಷಯಾ ಬುದ್ಧಿಃ ನಿಶ್ಚಯಾತ್ಮಿಕಾ ವಿಜ್ಞಾನಮ್ । ತಚ್ಚ ಅಧ್ಯವಸಾಯಲಕ್ಷಣಮ್ ಅನ್ತಃಕರಣಸ್ಯ ಧರ್ಮಃ । ತನ್ಮಯಃ ನಿಶ್ಚಯವಿಜ್ಞಾನೈಃ ಪ್ರಮಾಣಸ್ವರೂಪೈಃ ನಿರ್ವರ್ತಿತ ಆತ್ಮಾ ವಿಜ್ಞಾನಮಯಃ । ಪ್ರಮಾಣವಿಜ್ಞಾನಪೂರ್ವಕೋ ಹಿ ಯಜ್ಞಾದಿಃ ತಾಯತೇ । ಯಜ್ಞಾದಿಹೇತುತ್ವಂ ಚ ವಕ್ಷ್ಯತಿ ಶ್ಲೋಕೇನ ॥

(ಭಾಷ್ಯಾರ್ಥ)

"ತಸ್ಮಾದ್ವಾ ಏತಸ್ಮಾತ್" (ಆ ಈ ಮನೋಮಯನಿದಾನಲ್ಲ, ಇವನಿಗಿಂತ) ಎಂದು ಮುಂತಾಗಿರುವ (ವಾಕ್ಯವನ್ನು) ಹಿಂದಿನಂತೆಯೇ[1] (ಅರ್ಥಮಾಡಿಕೊಳ್ಳಬೇಕು). "(ಇವನಿಗಿಂತ) ಇನ್ನೊಬ್ಬ ವಿಜ್ಞಾನಮಯನಾದ ಒಳಗಿನ ಆತ್ಮ(ನಿರುವನು)." ಮನೋಮಯನ ಒಳಗೆ ಇರುವವನು ವಿಜ್ಞಾನಮಯನು. ಮನೋಮಯನಾದ ವೇದಾತ್ಮನನ್ನು (ಹಿಂದೆ) ಹೇಳಿರುತ್ತದೆ(ಯಷ್ಟೆ). ವೇದಾರ್ಥವಿಷಯದಲ್ಲಿ (ಉಂಟಾಗುವ) ನಿಶ್ಚಯರೂಪವಾದ ಬುದ್ಧಿಗೆ ವಿಜ್ಞಾನವೆಂದು ಹೆಸರು. ಆ (ವಿಜ್ಞಾನವು) ನಿಶ್ಚಯರೂಪವಾಗಿರುವದರಿಂದ ಅಂತಃಕರಣದ ಧರ್ಮವಾಗಿರುತ್ತದೆ. ತನ್ಮಯನಾಗಿರುವ ಎಂದರೆ ಪ್ರಮಾಣಸ್ವರೂಪವಾದ ನಿಶ್ಚಯವಿಜ್ಞಾನಗಳಿಂದ ಉಂಟಾಗಿರುವ ಆತ್ಮನು ವಿಜ್ಞಾನಮಯ (ನೆನಿಸುತ್ತಾನೆ).[2] ಏಕೆಂದರೆ ಪ್ರಮಾಣವಿಜ್ಞಾನವನ್ನಿಟ್ಟುಕೊಂಡೇ ಅಲ್ಲವೆ, ಯಜ್ಞವೇ ಮುಂತಾದ (ಕರ್ಮವನ್ನು) ಮಾಡುತ್ತಾರೆ? (ವಿಜ್ಞಾನವು) ಯಜ್ಞವೇ ಮುಂತಾದದ್ದಕ್ಕೆ ಕಾರಣವಾಗಿರುವದೆಂಬುದನ್ನು ಮುಂದೆ ಶ್ಲೋಕದಿಂದ ಹೇಳಿಯೂ ಇರುತ್ತದೆ.

---

1. ಮನೋಮಯನಿಗಿಂತ ಸೂಕ್ಷ್ಮವಾಗಿ ಅವನನ್ನು ವ್ಯಾಪಿಸಿಕೊಂಡು ಅವನಂತೆಯೇ ಪುರುಷಾಕಾರನಾಗಿರುವ ಆತ್ಮನು ವಿಜ್ಞಾನಮಯನು ಎಂದು ಅರ್ಥಮಾಡಬೇಕು.

2. ವೇದರೂಪವಾದ ವೃತ್ತಿಗಳಿಂದ ಆಗಿರುವವನು ಮನೋಮಯನು; ವೇದಾರ್ಥವನ್ನು ನಿಶ್ಚಯಿಸುವ ವಿಜ್ಞಾನಗಳಿಂದ ಆಗಿರುವವನು ವಿಜ್ಞಾನಮಯನು.

# ವಿಜ್ಞಾನಮಯಾತ್ಮನ ಅವಯವಗಳು

**ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷವಿಧತಾಮ್ । ಅನ್ವಯಂ ಪುರುಷವಿಧಃ । ತಸ್ಯ ಶ್ರದ್ಧೈವ ಶಿರಃ । ಋತಂ ದಕ್ಷಿಣಃ ಪಕ್ಷಃ, ಸತ್ಯಮುತ್ತರಃ ಪಕ್ಷಃ । ಯೋಗ ಆತ್ಮಾ । ಮಹಃ ಪುಚ್ಛಂ ಪ್ರತಿಷ್ಠಾ ॥ ೪ ॥**

೪. ಆ ಈತನು ಪುರುಷವಿಧನಾಗಿಯೇ (ಇರುವನು). ಅವನು ಪುರುಷವಿಧತ್ವವನ್ನು ಅನುಸರಿಸಿ ಇವನು ಪುರುಷವಿಧ(ನಾಗಿರುತ್ತಾನೆ). ಅವನಿಗೆ ಶ್ರದ್ಧೆಯೇ ತಲೆ ; ಋತವು ದಕ್ಷಿಣಪಕ್ಷವು ; ಸತ್ಯವು ಉತ್ತರಪಕ್ಷವು ; ಯೋಗವು ಆತ್ಮ ; ಮಹಃ (ಎಂಬುದು) ಪುಚ್ಛವು, ಪ್ರತಿಷ್ಠೆಯು.

(ಭಾಷ್ಯ)

೧೩೭. ನಿಶ್ಚಯವಿಜ್ಞಾನವತೋ ಹಿ ಕರ್ತವ್ಯೇಷು ಅರ್ಥೇಷು ಪೂರ್ವಂ ಶ್ರದ್ಧಾ ಉತ್ಪದ್ಯತೇ ।[1] ಸಾ ಸರ್ವಕರ್ತವ್ಯಾನಾಂ ಪ್ರಾಥಮ್ಯಾತ್ ಶಿರ ಇವ ಶಿರಃ । ಋತಸತ್ಯೇ ಯಥಾವ್ಯಾಖ್ಯಾತೇ ಏವ। ಯೋಗಃ ಯುಕ್ತಿಃ ಸಮಾಧಾನಮ್ ಆತ್ಮೇವ[2] ಆತ್ಮಾ । ಆತ್ಮವತೋ ಹಿ ಯುಕ್ತಸ್ಯ ಸಮಾಧಾನವತಃ ಅಙ್ಗಾನೀವ ಶ್ರದ್ಧಾದೀನಿ ಯಥಾರ್ಥಪ್ರತಿಪತ್ತಿಕ್ಷಮಾಣಿ ಭವನ್ತಿ । ತಸ್ಮಾತ್ ಸಮಾಧಾನಂ ಯೋಗಃ ಆತ್ಮಾ ವಿಜ್ಞಾನಮಯಸ್ಯ । ಮಹಃ ಪುಚ್ಛಂ ಪ್ರತಿಷ್ಠಾ । ಮಹಃ ಇತಿ ಮಹತ್ತತ್ತ್ವಂ ಪ್ರಥಮಜಮ್ । "ಮಹದ್ಯಕ್ಷಂ ಪ್ರಥಮಜಮ್"[3] (ಬೃ. ೫-೪-೧) ಇತಿ ಶ್ರುತ್ಯನ್ತರಾತ್ ಪುಚ್ಛಂ ಪ್ರತಿಷ್ಠಾ ಕಾರಣತ್ವಾತ್ । ಕಾರಣಂ ಹಿ ಕಾರ್ಯಾಣಾಂ ಪ್ರತಿಷ್ಠಾ । ಯಥಾ ವೃಕ್ಷವೀರುಧಾಂ ಪೃಥಿವೀ । ಸರ್ವಬುದ್ಧಿವಿಜ್ಞಾನಾನಾಂ ಚ ಮಹತ್ತತ್ತ್ವಂ ಕಾರಣಮ್। ತೇನ ತತ್ ವಿಜ್ಞಾನಮಯಸ್ಯ ಆತ್ಮನಃ ಪ್ರತಿಷ್ಠಾ ॥

(ಭಾಷ್ಯಾರ್ಥ)

(ವೇದದರ್ಥದ) ನಿಶ್ಚಯವಾದ ವಿಜ್ಞಾನವನ್ನುಂಟುಮಾಡಿಕೊಂಡಿರುವವನಿಗೆ ಮಾಡಬೇಕಾದ ಪದಾರ್ಥಗಳಲ್ಲಿ ಮೊದಲು ಶ್ರದ್ಧೆಯು ಉಂಟಾಗುತ್ತದೆಯಲ್ಲವೆ ?

---

1. "ಉಪಪದ್ಯತೇ" ಎಂಬ ವಾ॥ ಪಾಠಕ್ಕಿಂತ ಈ ಆ॥ ಪಾಠವೇ ಉತ್ತಮ.
2. "ಆತ್ಮೈವ" ಎಂದು ವಾ॥ ಪಾಠ; ಆದರೆ ಈ ಆ॥ ಪಾಠವೇ ಸರಿ.
3. "ಪ್ರಥಮಜಂ ವೇದ" ಎಂದು ವಾ॥ ಪಾಠ; ಅದೂ ಆಗಬಹುದು.

ಆ (ಶ್ರದ್ಧೆಯು) ಮಾಡಬೇಕಾದ (ಕ್ರಿಯೆಗಳಿಗೆ)ಲ್ಲ ಮೊದಲು (ಉಂಟಾಗಬೇಕಾಗಿರುವದರಿಂದ ಈ ವಿಜ್ಞಾನಮಯನಿಗೆ) ತಲೆಯಂತಿರುವದರಿಂದ[1] ತಲೆ (ಎನಿಸುತ್ತದೆ.) **ಋತ, ಸತ್ಯ**–ಇವುಗಳೆರಡೂ ಹಿಂದೆ[2] ವಿವರಿಸಿದವುಗಳೇ (ಆಗಿರುತ್ತವೆ). **ಯೋಗ**ವೆಂದರೆ, ಕೂಡಿಸುವಿಕೆ, (ಮನಸ್ಸನ್ನು) ಸಮಾಧಾನ(ದಲ್ಲಿಟ್ಟುಕೊಳ್ಳುವದು. ಅದು) ಆತ್ಮನಂತೆ ಇರುವದರಿಂದ[3] ಆತ್ಮನು (ಎನಿಸುತ್ತದೆ. ಮನಸ್ಸನ್ನು) ಕೂಡಿಸಿಕೊಂಡು ಆತ್ಮವಂತನಾಗಿರುವ ಸಮಾಧಾನವಂತನಿಗೆ ಶ್ರದ್ಧಾದಿಗಳು ಅಂಗಗಳಂತೆ ಇದ್ದದ್ದನ್ನು ಇದ್ದಂತೆ ಅರಿಯುವದಕ್ಕೆ ಶಕ್ತವಾಗುತ್ತವೆ.[4] ಆದ್ದರಿಂದ ಸಮಾಧಾನ ರೂಪವಾದ ಯೋಗವು ವಿಜ್ಞಾನಮಯನ ಆತ್ಮವು. ಮಹಃ' (ಎಂಬುದು) ಪುಚ್ಛವು, ಪ್ರತಿಷ್ಠೆಯು–(ಎಂಬಲ್ಲಿ) ಮಹಃ ಎಂದರೆ ಮೊದಲು ಹುಟ್ಟಿದ **ಮಹತ್ತತ್ತ್ವವು**.[5] "ಯಾವನು) ಮೊದಲು ಹುಟ್ಟಿದ ದೊಡ್ಡ ಯಕ್ಷನನ್ನು (ಅರಿತುಕೊಳ್ಳುವನೋ)" (ಬೃ. ೫-೪-೧) ಎಂಬ ಬೇರೊಂದು ಶ್ರುತಿಯು ಇದಕ್ಕೆ ಪ್ರಮಾಣವು. (ಆ ಮಹತ್ತು ವಿಜ್ಞಾನಮಯನ) ಪುಚ್ಛವು, ಪ್ರತಿಷ್ಠೆಯು ; ಏಕೆಂದರೆ (ಅದು ಇದಕ್ಕೆ) ಕಾರಣವಾಗಿರುತ್ತದೆ. ಕಾರಣವೇ ಅಲ್ಲವೆ, ಕಾರ್ಯಗಳಿಗೆ ಪ್ರತಿಷ್ಠೆ (ಯಾಗಿರುವದು)? ಉದಾಹರಣೆಗೆ (ಕಾರಣವಾದ) ಭೂಮಿಯು (ಕಾರ್ಯವಾದ) ಮರ (ಗಿಡ) ಬಳ್ಳಿಗಳಿಗೆ (ಒತ್ತಾಸೆಯಾಗಿರುತ್ತದೆ). ಬುದ್ಧಿಯ ಎಲ್ಲಾ ವಿಜ್ಞಾನಗಳಿಗೂ ಮಹತ್ತತ್ತ್ವವು ಕಾರಣವಾಗಿರುತ್ತದೆ; ಆದ್ದರಿಂದ ಆ (ಮಹತ್ತು) ವಿಜ್ಞಾನಮಯನೆಂಬ ಆತ್ಮನಿಗೆ ಪ್ರತಿಷ್ಠೆಯು.

---

1. ವಚನಬಲದಿಂದಲೇ ತಲೆ ಮುಂತಾದವನ್ನು ಕಲ್ಪಿಸಬಹುದಾದರೂ ಯುಕ್ತಿಯನ್ನೂ ಜೋಡಿಸಬಹುದು ಎಂದು ಹಿಂದಿನ ಕೋಶಗಳ ವಿವರಣೆಯಲ್ಲಿ ಹೇಳಿದ್ದಷ್ಟು ಇದಕ್ಕೂ ಅನ್ವಯಿಸುತ್ತದೆ.

2. ಶಿಕ್ಷಾವಲ್ಲಿಯ ಶಾಂತಿಮಂತ್ರ ಭಾ. ಭಾ. ೧೪ರಲ್ಲಿ.

3. ನಡುವಿನ ಶರೀರಭಾಗದಂತೆ ಇರುವದರಿಂದ ಎಂದರ್ಥ. ಮನಸ್ಸಮಾಧಾನವಿಲ್ಲದೆ ಶ್ರದ್ಧಾದಿಗಳಾಗಲಿ ಶ್ರದಾ ದಿಗಳಿಲ್ಲದೆ ಮಾಡತಕ್ಕದ್ದರ ನಿಶ್ಚಯವಾಗಲಿ ಆಗುವಹಾಗಿಲ್ಲ. ಕ. ಭಾ. ೧-೨-೪ ನೋಡಿ.

4. ಆತ್ಮನ ಆಧೀನವಾಗಿ ಅಂಗಗಳು ಕೆಲಸಮಾಡುವಂತೆ ಸಮಾಧಾನವುಳ್ಳವನಿಗೆ ಅಧೀನವಾಗಿ ಶ್ರದ್ಧಾದಿಗಳು ಕೆಲಸಮಾಡಿ ಮಾಡಬೇಕಾದ ಕರ್ಮದ ಸ್ವರೂಪವನ್ನು ಸರಿಯಾಗಿ ತಿಳಿಯುವದಕ್ಕೆ ಅನುಕೂಲವಾಗುತ್ತವೆ. ಇದರಂತೆ ಸಮಾಧಾನವು ವಿಚಾರಕ್ಕೂ ಆವಶ್ಯವಾಗಿರುತ್ತದೆ.

5. ಇದೇ ಪ್ರಾಣನೆಂಬ ಅಪರಬ್ರಹ್ಮವಾದ ಹಿರಣ್ಯಗರ್ಭನ ಬುದ್ಧಿ. ಪ್ರ. ಭಾ. ೫-೨, ತ. ಭಾ. ೧-೩-೧೦, ಸೂ. ಭಾ. ೧-೪-೩.

## ವಿಜ್ಞಾನಮಯಾತ್ಮನ ಮಹಿಮೆ

**ತದಪ್ಯೇಷ ಶ್ಲೋಕೋ ಭವತಿ ॥ ೫ ॥**

[ಇತಿ ಚತುರ್ಥೋಽನುವಾಕಃ]

**ವಿಜ್ಞಾನಂ ಯಜ್ಞಂ ತನುತೇ । ಕರ್ಮಾಣಿ ತನುತೇಽಪಿ ಚ । ವಿಜ್ಞಾನಂ ದೇವಾಃ ಸರ್ವೇ । ಬ್ರಹ್ಮ ಜ್ಯೇಷ್ಠಮುಪಾಸತೇ । ವಿಜ್ಞಾನಂ ಬ್ರಹ್ಮ ಚೇದ್ ವೇದ । ತಸ್ಮಾಚ್ಚೇನ್ನ ಪ್ರಮಾದ್ಯತಿ । ಶರೀರೇ ಪಾಪ್ಮನೋ ಹಿತ್ವಾ । ಸರ್ವಾನ್ ಕಾಮಾನ್ತ್ಸಮಶ್ನುತ ಇತಿ ॥ ೧ ॥**

೫. ಅದೇ ವಿಷಯದಲ್ಲಿ ಈ ಶ್ಲೋಕವಿರುವದು :—

[ನಾಲ್ಕನೆಯ ಅನುವಾಕವು ಮುಗಿಯಿತು]

೧. "ವಿಜ್ಞಾನವು ಯಜ್ಞವನ್ನು ಮಾಡುತ್ತದೆ, ಕರ್ಮಗಳನ್ನೂ ಮಾಡುತ್ತದೆ. ವಿಜ್ಞಾನವನ್ನೇ ದೇವತೆಗಳೆಲ್ಲರೂ ಜ್ಯೇಷ್ಠವಾದ ಬ್ರಹ್ಮವೆಂದು ಉಪಾಸನೆಮಾಡುತ್ತಾರೆ. ವಿಜ್ಞಾನವನ್ನು ಬ್ರಹ್ಮವೆಂದು ತಿಳಿಯುತ್ತಾನಾದರೆ, ಅದರಿಂದ ಪ್ರಮಾದವನ್ನು ಮಾಡುವದಿಲ್ಲವಾದರೆ, ಶರೀರದಲ್ಲಿ ಪಾಪಗಳನ್ನು ಬಿಟ್ಟು ಸರ್ವ ಕಾಮಗಳನ್ನೂ ಪಡೆಯುತ್ತಾನೆ."

(ಭಾಷ್ಯ)

೧೪೯. ತದಪ್ಯೇಷ ಶ್ಲೋಕೋ ಭವತಿ ಪೂರ್ವವತ್ । ಯಥಾ ಅನ್ನಮಯಾದೀನಾಂ ಬ್ರಾಹ್ಮಣೋಕ್ತಾನಾಂ ಪ್ರಕಾಶಕಾಃ ಶ್ಲೋಕಾಃ, ಏವಂ ವಿಜ್ಞಾನಮಯಸ್ಯಾಪಿ ॥

(ಭಾಷ್ಯಾರ್ಥ)

"ಅದೇ ವಿಷಯದಲ್ಲಿ ಈ ಶ್ಲೋಕವಿರುವದು" (ಎಂಬುದಕ್ಕೆ) ಹಿಂದಿನಂತೆ (ವ್ಯಾಖ್ಯಾನಮಾಡಬೇಕು). ಹೇಗೆ ಬ್ರಾಹ್ಮಣದಲ್ಲಿ ಹೇಳಿದ ಅನ್ನಮಯನೇ ಮುಂತಾದವುಗಳನ್ನು ತಿಳಿಸುವ ಶ್ಲೋಕಗಳು (ಹಿಂದೆ ಬಂದಿರುವವೋ) ಹಾಗೆಯೇ ವಿಜ್ಞಾನಮಯನನ್ನು (ತಿಳಿಸುವದಕ್ಕೂ ಶ್ಲೋಕವು ಬಂದಿದೆ ಎಂದರ್ಥ).

(ಭಾಷ್ಯ)

೧೫೦. "ವಿಜ್ಞಾನಂ ಯಜ್ಞಂ ತನುತೇ । ವಿಜ್ಞಾನವಾನ್ ಹಿ ಯಜ್ಞಂ ತನೋತಿ ಶ್ರದ್ಧಾದಿಪೂರ್ವಕಮ್ । ಅತೋ ವಿಜ್ಞಾನಸ್ಯ ಕರ್ತೃತ್ವಂ 'ತನುತೇ' ಇತಿ । ಕರ್ಮಾಣಿ ಚ ತನುತೇ । ಯಸ್ಮಾದ್ ವಿಜ್ಞಾನಕರ್ತೃಕಂ ಸರ್ವಮ್, ಯುಕ್ತಂ ವಿಜ್ಞಾನಮಯ ಆತ್ಮಾ ಬ್ರಹ್ಮ ಇತಿ । ಕಿಂ ಚ ವಿಜ್ಞಾನಂ ಬ್ರಹ್ಮ ಸರ್ವೇ

ದೇವಾಃ ಇನ್ದ್ರಾದಯಃ ಜ್ಯೇಷ್ಠಂ ಪ್ರಥಮಜತ್ವಾತ್, ಸರ್ವಪ್ರವೃತ್ತೀನಾಂ[1] ವಾ ತತ್ಪೂರ್ವಕತ್ವಾತ್, ಪ್ರಥಮಜಂ ವಿಜ್ಞಾನಂ ಬ್ರಹ್ಮ ಉಪಾಸತೇ ಧ್ಯಾಯನ್ತಿ । ತಸ್ಮಿನ್ ವಿಜ್ಞಾನಮಯೇ ಬ್ರಹ್ಮಣಿ ಅಭಿಮಾನಂ ಕೃತ್ವಾ ಉಪಾಸತೇ ಇತ್ಯರ್ಥಃ । ತಸ್ಮಾತ್ ತೇ ಮಹತೋ ಬ್ರಹ್ಮಣಃ ಉಪಾಸನಾತ್ ಜ್ಞಾನೈಶ್ವರ್ಯವನ್ತೋ ಭವನ್ತಿ ॥

(ಭಾಷ್ಯಾರ್ಥ)

"ವಿಜ್ಞಾನವು ಯಜ್ಞವನ್ನು ಮಾಡುತ್ತದೆ." ವಿಜ್ಞಾನವುಳ್ಳಾತನಲ್ಲವೆ, ಶ್ರದ್ಧೆಯೇ ಮುಂತಾದವುಗಳಿಂದ (ಕೂಡಿ) ಯಜ್ಞವನ್ನು ಮಾಡುತ್ತಾನೆ? ಆದ್ದರಿಂದ ('ಯಜ್ಞವನ್ನು) ಮಾಡುತ್ತದೆ' ಎಂದು ವಿಜ್ಞಾನಕ್ಕೆ (ಯಜ್ಞಕ್ರಿಯೆಯ) ಕರ್ತೃತ್ವ ವನ್ನು (ಹೇಳಿರುತ್ತದೆ).[2] ಮತ್ತು (ಅದು ಮಿಕ್ಕ) ಕರ್ಮಗಳನ್ನೂ[3] ಮಾಡುತ್ತದೆ. (ಹೀಗೆ) ಎಲ್ಲವೂ ವಿಜ್ಞಾನವೆಂಬ ಕರ್ತೃವುಳ್ಳದ್ದಾಗಿರುವದರಿಂದ, ವಿಜ್ಞಾನಮಯನಾದ ಆತ್ಮನು ಬ್ರಹ್ಮವು ಎಂಬುದು ಯುಕ್ತವಾಗಿರುತ್ತದೆ. ಮತ್ತು ವಿಜ್ಞಾನವೆಂಬ ಬ್ರಹ್ಮ ವನ್ನು ದೇವತೆಗಳೆಲ್ಲರೂ ಎಂದರೆ ಇಂದ್ರನೇ ಮೊದಲಾದವರು, ಜ್ಯೇಷ್ಠವಾದ (ಬ್ರಹ್ಮವೆಂದು) ಮೊದಲು (ಸೃಷ್ಟಿಯಲ್ಲಿ) ಹುಟ್ಟಿರುವದರಿಂದ[4] ಅಥವಾ ಎಲ್ಲಾ ಪ್ರವೃತ್ತಿಗಳೂ ಆ (ವಿಜ್ಞಾನದ ಮೂಲಕವಾಗಿಯೇ) ಉಂಟಾಗುವದರಿಂದ[5] ಮೊದಲು ಹುಟ್ಟಿರುವ ವಿಜ್ಞಾನವನ್ನು ಬ್ರಹ್ಮವಾಗಿ ಉಪಾಸನೆಮಾಡುತ್ತಾರೆ, ಧ್ಯಾನಮಾಡು ತ್ತಾರೆ. ಆ ವಿಜ್ಞಾನಮಯವಾದ ಬ್ರಹ್ಮದಲ್ಲಿ (ತಾವೆಂಬ) ಅಭಿಮಾನವನ್ನು ಮಾಡಿಕೊಂಡು ಉಪಾಸನೆಮಾಡುತ್ತಾರೆ ಎಂದರ್ಥ. ಆದ್ದರಿಂದ ಅವರು ದೊಡ್ಡ ದಾದ ಬ್ರಹ್ಮವನ್ನು ಉಪಾಸನೆಮಾಡಿದ್ದರಿಂದ ಜ್ಞಾನ, ಐಶ್ವರ್ಯ–ಇವುಗಳಿಂದ ಕೂಡಿರುತ್ತಾರೆ.[6]

---

1. "ವೃತ್ತೀನಾಂ" ಎಂದು ವಾ॥ ಪಾಠಕ್ಕಿಂತ ಈ ಆ॥ ಪಾಠವೇ ಉತ್ತಮ

2. ವಿಜ್ಞಾನವು ಕರಣವಾಗಿದ್ದರೂ "ಲೇಖಿನಿಯು ಬರೆಯುತ್ತದೆ" ಎಂಬಂತೆ ಅದನ್ನು ಕರ್ತೃವಾಗಿ ಉಪಚಾರಕ್ಕೆ ಹೇಳಿರುವದೇಕೆಂದರೆ ವಿಜ್ಞಾನವುಳ್ಳವರೇ ಕರ್ಮವನ್ನು ಮಾಡುತ್ತಾರಾದ್ದರಿಂದ. ಸೂ. ಭಾ. ೨-೩-೩೬.

3. ಯಜ್ಞವಲ್ಲದ ಶಾಸ್ತ್ರೀಯಕರ್ಮಗಳನ್ನೂ; ಲೌಕಿಕಕರ್ಮಗಳನ್ನೂ ಮಾಡುವ ದಕ್ಕೂ ವಿಜ್ಞಾನವೇ ಬೇಕಾದರೂ ಇಲ್ಲಿ ಶಾಸ್ತ್ರೀಯಕರ್ಮಗಳೇ ವಿವಕ್ಷಿತ.

4. ಹಿರಣ್ಯಗರ್ಭನು ಸೃಷ್ಟಿಯಲ್ಲಿ ಮೊದಲು ಹುಟ್ಟಿದವನು. ಅವನ ಉಪಾಧಿಯಾದ ಮಹತ್ತತ್ತ್ವವೆಂಬ ಸಮಷ್ಟಿಬುದ್ಧಿಯು ಮೊದಲು ಹುಟ್ಟಿದ್ದೆಂಬ ಕಾರಣದಿಂದಲೇ ಅವನು ಪ್ರಥಮಜನೆನಿಸಿರುತ್ತಾನೆ.

5. ಎಲ್ಲಾ ಪ್ರವೃತ್ತಿಗಳೂ ಬುದ್ಧಿಪೂರ್ವಕವಾಗಿಯೇ ಉಂಟಾಗುವವು.

6. ಧರ್ಮಜ್ಞಾನವೈರಾಗ್ಯೈಶ್ವರ್ಯಗಳಿಂದ ಕೂಡಿದ ಹಿರಣ್ಯಗರ್ಭನ ಉಪಾಸನೆ ಯಿಂದ ದೇವತೆಗಳಿಗೂ ಆ ಗುಣಗಳು ಉಂಟಾಗುತ್ತವೆ.

(ಭಾಷ್ಯ)

೧೪೧. ತಚ್ಚ ವಿಜ್ಞಾನಂ ಬ್ರಹ್ಮ ಚೇತ್ ಯದಿ ವೇದ ವಿಜಾನಾತಿ ನ ಕೇವಲಂ ವೇದ್ಯೈವ ತಸ್ಮಾತ್ ಬ್ರಹ್ಮಣಃ ಚೇತ್ ನ ಪ್ರಮಾದ್ಯತಿ । ಬಾಹ್ಯೇಷು ಅನಾತ್ಮಸು ಆತ್ಮ(ತ್ವ?) ಭಾವಿತತ್ವಾತ್ [1] ಪ್ರಾಪ್ತಂ ವಿಜ್ಞಾನಮಯೇ ಬ್ರಹ್ಮಣಿ ಆತ್ಮ ಭಾವನಾಯಾಃ ಪ್ರಮದನಮ್ । ತನ್ನಿವೃತ್ತ್ಯರ್ಥಮ್ ಉಚ್ಯತೇ "ತಸ್ಮಾಚ್ಚೇನ್ನ ಪ್ರಮಾದ್ಯತಿ" ಇತಿ । ಅನ್ನಮಯಾದಿಷು ಆತ್ಮಭಾವಂ ಹಿತ್ವಾ ಕೇವಲೇ ವಿಜ್ಞಾನ ಮಯೇ ಬ್ರಹ್ಮಣಿ ಆತ್ಮತ್ವಂ ಭಾವಯನ್ ಆಸ್ತೇ ಚೇತ್ ಇತ್ಯರ್ಥಃ । ತತಃ ಕಿಂ ಸ್ಯಾತ್ ಇತಿ ? ಉಚ್ಯತೇ । ಶರೀರೇ ಪಾಪ್ಮನೋ ಹಿತ್ವಾ । ಶರೀರಾಭಿಮಾನನಿಮಿತ್ತಾ ಹಿ ಸರ್ವೇ ಪಾಪ್ಮಾನಃ । ತೇಷಾಂ ಚ ವಿಜ್ಞಾನಮಯೇ ಬ್ರಹ್ಮಣಿ ಆತ್ಮಾಭಿ ಮಾನಾತ್ ನಿಮಿತ್ತಾಪಾಯೇ ಹಾನಮ್ ಉಪಪದ್ಯತೇ । ಛತ್ರಾಪಾಯೇ ಇವ ಛಾಯಾಪಾಯಃ । ತಸ್ಮಾತ್ ಶರೀರಾಭಿಮಾನನಿಮಿತ್ತಾನ್ ಸರ್ವಾನ್ ಪಾಪ್ಮನಃ ಶರೀರಪ್ರಭವಾನ್ ಶರೀರೇ ಏವ ಹಿತ್ವಾ ವಿಜ್ಞಾನಮಯಬ್ರಹ್ಮಸ್ವರೂಪಾಪನ್ನಃ ತತ್ಸ್ಥಾನ್ ಸರ್ವಾನ್ ಕಾಮಾನ್ ವಿಜ್ಞಾನಮಯೇನೈವ ಆತ್ಮನಾ ಸಮಶ್ನುತೇ ಸಮ್ಯಗ್ ಭುಙ್ಕ್ತೇ ಇತ್ಯರ್ಥಃ ॥

(ಭಾಷ್ಯಾರ್ಥ)

ಮತ್ತು ಆ ವಿಜ್ಞಾನವನ್ನು ಬ್ರಹ್ಮವೆಂದು ತಿಳಿಯುತ್ತಾನಾದರೆ ಅರಿತುಕೊಳ್ಳು ತ್ತಾನಾದರೆ; ಸುಮ್ಮನೆ ಅರಿತುಕೊಳ್ಳುತ್ತಾನೆಂಬುದಿಷ್ಟೇ ಅಲ್ಲ, ಆ ಬ್ರಹ್ಮದಿಂದ ಪ್ರಮಾದವನ್ನು ಮಾಡುವದಿಲ್ಲವಾದರೆ ; ಹೊರಗಿನ ಅನಾತ್ಮಗಳಲ್ಲಿ ತಾನೆಂಬ ಭಾವ ನೆಯು (ತುಂಬಿರುವದ)ರಿಂದ [2] ವಿಜ್ಞಾನಮಯಬ್ರಹ್ಮದಲ್ಲಿ (ಅದೇ) ತಾನೆಂಬ ಭಾವನೆಯು ತಪ್ಪುವ ಸಂಭವವುಂಟಾಗುತ್ತದೆ. ಅದು ಕೂಡದೆಂದು (ಹೇಳುವುದ ಕ್ಕಾಗಿ "ಅದರಿಂದ ಪ್ರಮಾದವನ್ನು ಮಾಡುವದಿಲ್ಲವಾದರೆ'' ಎಂದು ಹೇಳಿರುತ್ತದೆ. ಅನ್ನಮಯಾದಿಗಳಲ್ಲಿ ಅವೇ ತಾವೆಂಬ ಭಾವನೆಯನ್ನು ಬಿಟ್ಟು ಬರಿಯ ವಿಜ್ಞಾನಮಯ ಬ್ರಹ್ಮದಲ್ಲಿ ತಾನೆಂದು ಭಾವನೆಯನ್ನು ಮಾಡುತ್ತಾ ಇರುತ್ತಾನಾದರೆ ಎಂದರ್ಥ. [3] ಅದರಿಂದೇನಾಗುವದು ? ಎಂದರೆ (ಶ್ರುತಿ) ಹೇಳುತ್ತದೆ : "ಶರೀರದಲ್ಲಿ ಪಾಪಗಳನ್ನು

---

1. ಆತ್ಮಾ ಭಾವಿತಃ ತಸ್ಮಾತ್" ಎಂತು ವಾ॥ಕಾ॥ ಪಾಠ.

2. ಆಯಾ ಕೋಶವನ್ನು ತಾನು ಎಂದುಕೊಂಡಾಗ ಹಿಂದಿನ ಕೋಶಗಳು ಅನಾತ್ಮ ವೆಂದು ತಿಳಿಯುವದು.

3. ಶರೀರವು, ಅಥವಾ ಪ್ರಾಣವು, ಅಥವಾ ಮನಸ್ಸು ತಾನೆಂಬ ದೃಢಭಾವನೆಯಿರು ವಂತೆ ವಿಜ್ಞಾನಮಯನೇ ತಾನೆಂಬ ದೃಢನಿಶ್ಚಯವುಳ್ಳವನಾದರೆ ಎಂದರ್ಥ.

ಬಿಟ್ಟು" ಶರೀರ(ವೇ ತಾನೆಂಬ) ಅಭಿಮಾನದ ನಿಮಿತ್ತದಿಂದಲೇ ಅಲ್ಲವೆ, ಎಲ್ಲಾ ಪಾಪಗಳೂ ಉಂಟಾಗುವವು? ಅವುಗಳನ್ನು ಬಿಡುವದೆಂಬುದು ವಿಜ್ಞಾನಮಯವಾದ ಬ್ರಹ್ಮವೇ ತಾನೆಂಬ ಅಭಿಮಾನದಿಂದ (ಪಾಪಗಳ) ನಿಮಿತ್ತವು ಹೋಗುವದರಿಂದ ಸಾಧ್ಯವಾಗುತ್ತದೆ. ಕೊಡೆಯು ಹೋದರೆ (ಅದರಿಂದಾಗಿದ್ದ) ನೆರಳೂ ಹೋಗುವಂತೆಯೇ (ಇದು.)[1] ಆದ್ದರಿಂದ ಶರೀರದ ಅಭಿಮಾನದ ನಿಮಿತ್ತದಿಂದ (ತನಗೆ ಉಂಟಾಗಿರುವ) ಶರೀರದಿಂದ ಹುಟ್ಟುವ ಪಾಪಗಳನ್ನೆಲ್ಲ ಶರೀರದಲ್ಲಿಯೇ ಬಿಟ್ಟು ವಿಜ್ಞಾನಮಯ ಬ್ರಹ್ಮದ ಸ್ವರೂಪವನ್ನು ಹೊಂದಿದವನಾಗಿ ಅದರಲ್ಲಿರುವ ಎಲ್ಲಾ ಕಾಮುಗಳನ್ನೂ[2] ವಿಜ್ಞಾನಮಯವೇ ಆಗಿರುವ ಸ್ವರೂಪದಿಂದ[3] 'ಸಮಶ್ನುತೇ' (ಪಡೆಯುತ್ತಾನೆ) ಎಂದರೆ ಚೆನ್ನಾಗಿ ಅನುಭವಿಸುತ್ತಾನೆ ಎಂದರ್ಥ.[4]

## ವಿಜ್ಞಾನಮಯಪ್ರಕರಣದ ಉಪಸಂಹಾರ

**ತಸ್ಯೈಷ ಏವ ಶಾರೀರ ಆತ್ಮಾ ಯಃ ಪೂರ್ವಸ್ಯ ॥ ೨ ॥**

೨. ಆ ಹಿಂದಿನವನಿಗೆ ಇವನೇ ಶಾರೀರನಾದ ಆತ್ಮನು.

(ಭಾಷ್ಯ)

೧೪೨. ತಸ್ಯ ಪೂರ್ವಸ್ಯ ಮನೋಮಯಸ್ಯ ಆತ್ಮಾ ಏಷ ಏವ ಶರೀರೇ ಮನೋಮಯೇ ಭವಃ ಶಾರೀರಃ । ಕಃ? ಯ ಏಷ ವಿಜ್ಞಾನಮಯಃ ॥

(ಭಾಷ್ಯಾರ್ಥ)

ಆ ಹಿಂದಿನ ಮನೋಮಯನಿಗೆ ಆತ್ಮನು ಇವನೇ ಶಾರೀರನು, ಎಂದರೆ ಮನೋಮಯವೆಂಬ ಶರೀರದಲ್ಲಿರುವ (ಆತ್ಮನು). ಯಾರು? ಎಂದರೆ ಯಾವ ಈ ವಿಜ್ಞಾನಮಯನಿದಾನಲ್ಲ, (ಇವನೇ).

---

1. ಯಾವ ನಿಮಿತ್ತದಿಂದ ಯಾವದು ಆಗಿರುವದೋ ಆ ನಿಮಿತ್ತವು ಇಲ್ಲವಾದರೆ ಅದು ತಾನೂ ಇಲ್ಲವಾಗುವದು ಎಂಬುದು ನ್ಯಾಯ.

2. ಎಲ್ಲಾ ಬಾಹ್ಯಭೋಗಗಳನ್ನೂ. ಅವನು ಸಂಕಲ್ಪಿಸಿದ ಭೋಗಗಳು ಅವನಿಗೆ ದೊರೆಯುತ್ತವೆ ಎಂದರ್ಥ.

3. ಹಿರಣ್ಯಗರ್ಭನ ರೂಪದಿಂದ.

4. ವಿರಾಡ್ರೂಪ ಅನ್ನಾತ್ಮನ ಉಪಾಸಕನಿಗೆ ಸರ್ವಾನ್ನಪ್ರಾಪ್ತಿ, ಪ್ರಾಣಾತ್ಮನ ಉಪಾಸಕನಿಗೆ ಸರ್ವಾಯುಃಪ್ರಾಪ್ತಿ, ಮನಆತ್ಮೋಪಾಸಕನಿಗೆ ಸರ್ವದಾ ಅಭಯಪ್ರಾಪ್ತಿ; ಇದರಂತೆ ವಿಜ್ಞಾನೋಪಾಸಕನಿಗೆ ಸರ್ವಭೋಗಪ್ರಾಪ್ತಿ.

# ೭. ಆನಂದಮಯಾತ್ಮ

## ಆನಂದಮಯಾತ್ಮನ ವರ್ಣನೆ

**ತಸ್ಮಾದ್ವಾ ಏತಸ್ಮಾದ್ವಿಜ್ಞಾನಮಯಾತ್ ।**
**ಅನ್ಯೋಽನ್ತರ ಆತ್ಮಾನನ್ದಮಯಃ ತೇನೈಷ ಪೂರ್ಣಃ ॥ ೩ ॥**

೩. ಆ ಈ ವಿಜ್ಞಾನಮಯನಿದ್ದಾನಲ್ಲ, ಇವನಿಗಿಂತ ಇನ್ನೊಬ್ಬ ಆನಂದಮಯನಾದ ಒಳಗಿನ ಆತ್ಮ(ನಿರುವನು). ಆತನಿಂದ ಇವನು ತುಂಬಿರುವನು.

(ಭಾಷ್ಯ)

೧೪೩. "ತಸ್ಮಾದ್ವಾ ಏತಸ್ಮಾತ್" ಇತಿ ಉಕ್ತಾರ್ಥಮ್ ॥

(ಭಾಷ್ಯಾರ್ಥ)

"ಆ ಈ (ವಿಜ್ಞಾನಮಯನಿದ್ದಾನಲ್ಲ) ಇವನಿಗಿಂತ"........ಎಂಬುದರ ಅರ್ಥವನ್ನು ಹಿಂದೆ ಹೇಳಿದಂತೆ (ತಿಳಿಯಬೇಕು).

## ಆನಂದಮಯಾತ್ಮನು ಬ್ರಹ್ಮವಲ್ಲ

(ಭಾಷ್ಯ)

೧೪೪. 'ಆನನ್ದಮಯಃ' ಇತಿ ಕಾರ್ಯಾತ್ಮಪ್ರತೀತಿಃ । ಅಧಿಕಾರಾತ್, ಮಯಟ್‌ಶಬ್ದಾಚ್ಚ । ಅನ್ನಾದಿಮಯಾ ಹಿ ಕಾರ್ಯಾತ್ಮಾನೋ ಭೌತಿಕಾ ಇಹ ಅಧಿಕೃತಾಃ । ತದಧಿಕಾರಪತಿತಶ್ಚ ಅಯಮ್ ಆನನ್ದಮಯಃ । ಮಯಟ್ ಚ ಅತ್ರ ವಿಕಾರಾರ್ಥೇ ದೃಷ್ಟಃ । ಯಥಾ 'ಅನ್ನಮಯಃ' ಇತ್ಯತ್ರ । ತಸ್ಮಾತ್ ಕಾರ್ಯಾತ್ಮಾ ಆನನ್ದಮಯಃ ಪ್ರತ್ಯೇತವ್ಯಃ । ಸಂಕ್ರಮಣಾಚ್ಚ । "ಆನನ್ದಮಯಮಾತ್ಮಾನಮುಪಸಂಕ್ರಾಮತಿ । ಇತಿ" ವಕ್ಷ್ಯತಿ । ಕಾರ್ಯಾತ್ಮನಾಂ ಚ ಸಂಕ್ರಮಣಮ್ ಅನಾತ್ಮನಾಂ[1] ದೃಷ್ಟಮ್ । ಸಂಕ್ರಮಣಕರ್ಮತ್ವೇನ ಚ ಆನನ್ದಮಯ ಆತ್ಮಾ ಶ್ರೂಯತೇ । ಯಥಾ "ಅನ್ನಮಯಮಾತ್ಮಾನಮುಪಸಂಕ್ರಾಮತಿ ಇತಿ । ನ ಚ ಆತ್ಮನ ಏವ ಉಪಸಂಕ್ರಮಣಮ್ । ಅಧಿಕಾರವಿರೋಧಾತ್ । ಅಸಂಭವಾಚ್ಚ । ನ ಹಿ ಆತ್ಮನೈವ ಆತ್ಮನ ಉಪಸಂಕ್ರಮಣಂ ಸಂಭವತಿ ! ಸ್ವಾತ್ಮನಿ ಭೇದಾಭಾವಾತ್ । ಆತ್ಮಭೂತಂ ಚ ಬ್ರಹ್ಮ ಸಂಕ್ರಮಿತುಃ । ಶಿರಆದಿಕಲ್ಪನಾನುಪಪತ್ತೇಶ್ಚ । ನ ಹಿ ಯಥೋಕ್ತಲಕ್ಷಣೇ ಆಕಾಶಾದಿಕಾರಣೇ ಅಕಾರ್ಯಪತಿತೇ ಶಿರಆದ್ಯವಯವರೂಪಕಲ್ಪನಾ ಉಪಪದ್ಯತೇ ।

1. "ಅನ್ನಾತ್ಮನಾಮ್" ಎಂಬ ವಾ॥ ಪಾಠವು ಸರಿಯಲ್ಲ.

"ಅದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇ" (೨-೭), "ಅಸ್ಥೂಲಮನಣು.................." (ಬೃ ೩-೮-೮), "ನೇತಿ ನೇತ್ಯಾತ್ಮಾ" (ಬೃ. ೩-೯-೨೬) ಇತ್ಯಾದಿವಿಶೇಷಾಪೋಹ ಶ್ರುತಿಭ್ಯಶ್ಚ । ಮನ್ತ್ರೋದಾಹರಣಾನುಪಪತ್ತೇಶ್ಚ । ನ ಹಿ ಪ್ರಿಯಶಿರಆದ್ಯವಯವ ವಿಶಿಷ್ಟೇ ಪ್ರತ್ಯಕ್ಷತೋಽನುಭೂಯಮಾನೇ ಆನನ್ದಮಯೇ ಆತ್ಮನಿ ಬ್ರಹ್ಮಣಿ ನಾಸ್ತಿ ಬ್ರಹ್ಮ ಇತ್ಯಾಶಙ್ಕಾಭಾವಾತ್ "ಅಸನ್ನೇವ ಸ ಭವತಿ । ಅಸದ್ಬ್ರಹ್ಮೇತಿ ವೇದ ಚೇತ್" (೨-೬) ಇತಿ ಮನ್ತ್ರೋದಾಹರಣಮ್ ಉಪಪದ್ಯತೇ । "ಬ್ರಹ್ಮ ಪುಚ್ಛಂ ಪ್ರತಿಷ್ಠಾ" ಇತ್ಯಪಿ ಚ ಅನುಪಪನ್ನಮ್ ಪೃಥಗ್ ಬ್ರಹ್ಮಣಃ ಪ್ರತಿಷ್ಠಾತ್ವೇನ ಗ್ರಹಣಮ್ । ತಸ್ಮಾತ್ ಕಾರ್ಯಪತಿತ ಏವ ಆನನ್ದಮಯಃ ನ ಪರ ಏವಾತ್ಮಾ ॥

(ಭಾಷ್ಯಾರ್ಥ)

"ಆನಂದಮಯನು" ಎಂಬಲ್ಲಿ ಕಾರ್ಯಾತ್ಮನನ್ನೇ ಅರಿಯಬೇಕು. ಏಕೆಂದರೆ (ಇದು ಆ) ಪ್ರಕರಣವಾಗಿರುತ್ತದೆ, ಮತ್ತು ಮಯಟ್ ಶಬ್ದವನ್ನು ಉಪಯೋಗಿಸಿರುತ್ತದೆ. ಹೇಗೆಂದರೆ, ಅನ್ನಮಯನೇ ಮುಂತಾದ ಭೌತಿಕವಾದ ಕಾರ್ಯಾತ್ಮರೇ ಈ ಪ್ರಕರಣದಲ್ಲಿ ಹೇಳಿರುವ (ಆತ್ಮರು); ಆ ಪ್ರಕರಣದಲ್ಲಿಯೇ ಈ ಆನಂದಮಯನೂ ಸೇರಿಕೊಂಡಿರುತ್ತಾನೆ. ಮತ್ತು ಮಯಟ್ (ಎಂಬ ಪ್ರತ್ಯಯ) ವನ್ನು ಇಲ್ಲಿ 'ವಿಕಾರ' ವೆಂಬ ಅರ್ಥದಲ್ಲಿ[1] (ಉಪಯೋಗಿಸಿರುವದು) ಕಂಡುಬರುತ್ತದೆ. ಉದಾಹರಣೆಗೆ 'ಅನ್ನಮಯ' ಎಂಬಲ್ಲಿ (ಮಯಟ್ ಪ್ರತ್ಯಯವನ್ನು ಹೀಗೆ ವಿಕಾರಾರ್ಥದಲ್ಲಿ ಉಪಯೋಗಿಸಿರುತ್ತದೆ), ಆದ್ದರಿಂದ[2] ಆನಂದಮಯನೆಂದರೆ ಕಾರ್ಯಾತ್ಮನೆಂದೇ ತಿಳಿಯಬೇಕು.

(ಇಲ್ಲಿ) 'ಸಂಕ್ರಮಣ'(ವನ್ನು ಹೇಳುವ ವಾಕ್ಯ) ವಿರುವದರಿಂದಲೂ (ಹೀಗೆಂದು ತಿಳಿಯಬೇಕು). "ಆನಂದಮಯನೆಂಬ ಆತ್ಮನನ್ನು ಉಪಸಂಕ್ರಮಿಸುತ್ತಾನೆ" (೨-೮) ಎಂದು (ಶ್ರುತಿಯು) ಮುಂದೆ ಹೇಳುತ್ತದೆ. ಅನಾತ್ಮರಾದ ಕಾರ್ಯಾತ್ಮರು

---

1. ಮಯ ಎಂಬ ಪ್ರತ್ಯಯವನ್ನು ಅದರ ವಿಕಾರ (ಅದರ ಕಾರ್ಯ) ಎಂಬರ್ಥದಲ್ಲಿಯೇ ಅಲ್ಲದೆ ಅದು ಪ್ರಚುರವಾಗಿರುವದು ಎಂಬುವೇ ಮುಂತಾದ ಅರ್ಥಗಳಲ್ಲಿಯೂ ಉಪಯೋಗಿಸುವದುಂಟು ; ಆದರೆ ಪ್ರಕೃತದಲ್ಲಿ ಅದು ವಿಕಾರಾರ್ಥದಲ್ಲಿಯೇ ಉಪಯೋಗಿಸಲ್ಪಟ್ಟಿದೆ.

2. ಕಾರ್ಯರೂಪವಾದ ಅನ್ನಮಯಾದಿಗಳ ಪ್ರಕರಣವಾಗಿರುವದರಿಂದ ಮತ್ತು ಕಾರ್ಯವನ್ನು ಹೇಳುವ ಪ್ರತ್ಯಯವಿರುವದರಿಂದ.

ಗಳನ್ನು ಸಂಕ್ರಮಿಸುವದೆಂಬುದು[1] ಕಂಡುಬಂದಿದೆ. ಆನಂದಮಯನಾದ ಆತ್ಮನು ಸಂಕ್ರಮಣವೆಂಬ (ಕ್ರಿಯೆಗೆ) ವಿಷಯವೆಂದು ಶ್ರುತಿಯಲ್ಲಿ (ಹೇಳಿಯೂ) ಇದೆ. "ಅನ್ನಮಯನಾದ ಆತ್ಮನನ್ನು ಉಪಸಂಕ್ರಮಿಸುತ್ತಾನೆ" ಎಂದು ಹೇಳಿರುವಂತೆಯೇ (ಇಲ್ಲಿಯೂ ಹೇಳಿರುತ್ತದೆ). ಆತ್ಮನನ್ನೇ ಉಪಸಂಕ್ರಮಿಸಬಹುದಲ್ಲ![2] ಎನ್ನುವದಕ್ಕಿಲ್ಲ. ಏಕೆಂದರೆ (ಹಾಗೆನ್ನುವದು) ಪ್ರಕರಣಕ್ಕೆ ವಿರುದ್ಧವಾಗುತ್ತದೆ.[3] ಇದಲ್ಲದೆ (ಆತ್ಮನನ್ನು ಉಪಸಂಕ್ರಮಿಸುವದೆನ್ನುವದು) ಸಂಭವಿಸುವದೂ ಇಲ್ಲ. ತಾನೇ ತನ್ನನ್ನು ಉಪಸಂಕ್ರಮಿಸುವದು ಆಗುವ ಹಾಗೆಯೇ ಇಲ್ಲ. ಏಕೆಂದರೆ ಆತ್ಮನಲ್ಲಿ (ಯಾವ) ಭೇದವೂ ಇರುವದಿಲ್ಲ.[4] ಯಾವನು ಸಂಕ್ರಮಣವನ್ನು ಮಾಡಬೇಕೋ ಅವನಿಗೆ ಬ್ರಹ್ಮವು ಆತ್ಮನೇ ಆಗಿರುತ್ತದೆ.[5]

ತಲೆಯೇ ಮುಂತಾದವುಗಳ ಕಲ್ಪನೆಯು ಹೊಂದುವದಿಲ್ಲವಾದ್ದರಿಂದಲೂ (ಹೀಗೆಂದು ತಿಳಿಯಬೇಕು). ಹಿಂದೆ ಹೇಳಿರುವ ಲಕ್ಷಣವುಳ್ಳ[6], ಆಕಾಶವೇ ಮುಂತಾದವುಗಳಿಗೂ ಕಾರಣನಾಗಿರುವ, ಕಾರ್ಯಗಳಲ್ಲಿ ಸೇರದೆ ಇರುವ[7] (ಆತ್ಮನಲ್ಲಿ) ತಲೆಯೇ ಮುಂತಾದ ಅವಯವಗಳುಳ್ಳ ರೂಪವನ್ನು ಕಲ್ಪಿಸುವದು ಸರಿಯಾಗಲೇ ಆರದು. "ಅದೃಶ್ಯನಾದ, ಅನಾತ್ಮ್ಯನಾದ, ಅನಿರುಕ್ತನಾದ, ಅನಿಲಯನಾದ" (೨-೭), "ಸ್ಥೂಲವಲ್ಲ, ಅಣುವಲ್ಲ'' (ಬೃ. ೩-೮-೮), "ಇದಲ್ಲ, ಇದಲ್ಲ, ಆತ್ಮನು" (ಬೃ. ೩-೯-೨೬) ಎಂಬಿವೇ ಮುಂತಾದ (ಬ್ರಹ್ಮದಲ್ಲಿ) ವಿಶೇಷಗಳನ್ನು ಅಲ್ಲಗಳೆಯುವ ಶ್ರುತಿಗಳ ಪ್ರಾಮಾಣ್ಯದಿಂದಲೂ ಬ್ರಹ್ಮದಲ್ಲಿ ಕಲ್ಪನೆಯು ಹೊಂದುವದಿಲ್ಲ.

---

1. ಸಂಕ್ರಮಣವೆಂದರೆ ಪ್ರಾಪ್ತಿ (ಬಂದು ಸೇರುವದು) ದಾಟುವದು-ಎಂದು ಎರಡರ್ಥಗಳನ್ನು ಮಾಡಬಹುದು. ಈ ಎರಡೂ ಅನಾತ್ಮಕ್ಕೆ ಮಾತ್ರ ಹೊಂದುತ್ತವೆ.

2. ಆನಂದಮಯನು ಆತ್ಮನು ಆಗಲಿ, ಸಂಕ್ರಮಣಕ್ಕೆ ವಿಷಯನೂ ಆಗಲಿ!_ಎಂದು ಪೂರ್ವಪಕ್ಷಿಯ ಆಶಯ.

3. ಅನಾತ್ಮರನ್ನೇ ಸಂಕ್ರಮಿಸುವದನ್ನು ಹೇಳುವದಕ್ಕೆ ಹೊರಟ ಶ್ರುತಿಯು ಆತ್ಮನನ್ನು ಸಂಕ್ರಮಿಸುವದೆಂದು ಹೇಳಿದರೆ ಪ್ರಕರಣಕ್ಕೆ ವಿರೋಧವಾಗುವದು.

4. ತನ್ನನ್ನು ತಾನೇ ಸೇರುವದು, ಅಥವಾ ದಾಟುವದು ಅವಯವಭೇದವುಳ್ಳ ಹಾವು ಮುಂತಾದ ಪ್ರಾಣಿಗಳಿಗೆ ಆಗುತ್ತದೆ. ಆದರೆ ನಿರವಯವನಾದ ಆತ್ಮನಿಗೆ ಅದು ಆಗುವ ಹಾಗಿಲ್ಲ.

5. ಆದ್ದರಿಂದ ತನ್ನ ಸ್ವರೂಪವನ್ನೇ ತಾನು ಸೇರುವದು ಅಥವಾ ದಾಟುವದು ಆಗಲಾರದು.

6. ಸತ್ಯಜ್ಞಾನಾನಂತಸ್ವರೂಪನಾದ ಆತ್ಮನಲ್ಲಿ ತಲೆ ಮುಂತಾದವುಗಳು ಹೇಗೆ ಇದ್ದಾವು?

7. ಆಕಾಶ, ಕಾಲ ಇವುಗಳಿಗೇ ಅವಯವಗಳಿಲ್ಲ; ಇವಕ್ಕೂ ಕಾರಣವಾದ ಆತ್ಮನಿಗೆ ಹೇಗೆ ಇದ್ದಾವು?

ಮಂತ್ರವನ್ನು ಉದಾಹರಿಸಿರುವದು ಹೊಂದುವದಿಲ್ಲವಾದ್ದರಿಂದಲೂ( ಹೀಗೆಂದು ತಿಳಿಯಬೇಕು). ಪ್ರಿಯವೆಂಬ ತಲೆಯೇ ಮುಂತಾದ ಅವಯವಗಳಿಂದೊಡಗೂಡಿದ ಆನಂದಮಯಾತ್ಮನೆಂಬ ಬ್ರಹ್ಮವು ಪ್ರತ್ಯಕ್ಷವಾಗಿ ಅನುಭವದಲ್ಲಿ ಕಂಡುಬರುತ್ತಿರುವಲ್ಲಿ "ಬ್ರಹ್ಮವು ಇಲ್ಲ" ಎಂಬ ಶಂಕೆಯು (ಉಂಟಾಗ)ಲಾರದಾಗಿ "ಬ್ರಹ್ಮವು ಇಲ್ಲವೆಂದು ತಿಳಿಯುತ್ತಾನಾದರೆ, ಆವನು ಇಲ್ಲವೇ ಆಗುವನು" (೨-೬) ಎಂಬ ಮಂತ್ರವನ್ನು ಉದಾಹರಿಸಿರುವದು ಹೊಂದಲೇ ಆರದು.

ಇದೂ ಅಲ್ಲದೆ "ಬ್ರಹ್ಮವು ಪುಚ್ಛವು, ಪ್ರತಿಷ್ಠೆಯು" ಎಂದು ಬ್ರಹ್ಮವನ್ನು (ಆನಂದಮಯಕ್ಕೆ) ಪ್ರತಿಷ್ಠೆ ಎಂತ ಬೇರೆಯಾಗಿ ಹೇಳಿರುವದೂ (ಆನಂದಮಯವೇ ಬ್ರಹ್ಮವೆಂಬ ಪಕ್ಷದಲ್ಲಿ) ಹೊಂದುವದಿಲ್ಲ.

ಆದ್ದರಿಂದ ಆನಂದಮಯನು ಕಾರ್ಯಗಳಲ್ಲಿ ಸೇರಿದವನೇ; (ಅವನು ಪರಮಾತ್ಮನೇ (ಎಂಬುದು ಸರಿ) ಯಲ್ಲ.[1]

## ಆನಂದಮಯನೆಂದರೆ ಯಾರು ?

(ಭಾಷ್ಯ)

೧೪೫. 'ಆನನ್ದಃ' ಇತಿ ವಿದ್ಯಾಕರ್ಮಣೋಃ ಫಲಮ್ । ತದ್ವಿಕಾರಃ ಆನನ್ದಮಯಃ । ಸ ಚ ವಿಜ್ಞಾನಮಯಾತ್ ಆನ್ತರಃ । ಯಜ್ಞಾದಿಹೇತೋಃ ರ್ವಿಜ್ಞಾನಮಯಾತ್ ಅಸ್ಯ[2] ಅನ್ತರತ್ವಶ್ರುತೇಃ । ಜ್ಞಾನಕರ್ಮಣೋರ್ಹಿ ಫಲಂ ಭೋಕ್ತ್ರರ್ಥತ್ವಾತ್ ಅನ್ತರತಮಂ ಸ್ಯಾತ್ । ಅನ್ತರತಮಶ್ಚ ಆನನ್ದಮಯ ಆತ್ಮಾ ಪೂರ್ವೇಭ್ಯಃ । ವಿದ್ಯಾಕರ್ಮಣೋಃ ಪ್ರಿಯಾದ್ಯರ್ಥತ್ವಾಚ್ಚ । ಪ್ರಿಯಾದಿಪ್ರಯುಕ್ತೇ ಹಿ ವಿದ್ಯಾಕರ್ಮಣೀ । ತಸ್ಮಾತ್ ಪ್ರಿಯಾದೀನಾಂ ಫಲರೂಪಾಣಾಮ್ ಆತ್ಮಸಂನಿಕರ್ಷಾತ್ ವಿಜ್ಞಾನಮಯಾತ್ ಅಸ್ಯ ಅಭ್ಯನ್ತರತ್ವಮ್ ಉಪಪದ್ಯತೇ । ಪ್ರಿಯಾದಿವಾಸನಾನಿರ್ವರ್ತ್ಯೋ[3] ಹಿ ಆತ್ಮಾ ಆನನ್ದಮಯೋ ವಿಜ್ಞಾನಮಯಾಶ್ರಿತಃ ಸ್ವಪ್ನೇ ಉಪಲಭ್ಯತೇ॥

---

1. ಸೂ. ಭಾ. ೧-೧-೧೨ ರಿಂದ ೧೯ ರಲ್ಲಿ ಇದೇ ವಿಚಾರವು ವಿಸ್ತಾರವಾಗಿದೆ.
2. ಇದು ವಾ॥ಪಾಠ;
3. "ನಿರ್ವರ್ತಿತೋ" ಎಂದು ವಾ॥ ಪಾಠ.

(ಭಾಷ್ಯಾರ್ಥ)

'ಆನಂದ' ಎಂದರೆ ಜ್ಞಾನ[1] ಮತ್ತು ಕರ್ಮ–ಇವುಗಳ ಫಲವು; ಅದರಿಂದುಂಟಾಗುವವನು ಆನಂದಮಯನು. ಅವನು ವಿಜ್ಞಾನಮಯನಿಗಿಂತ ಒಳಗೆ (ಇರುತ್ತಾನೆ). ಯಜ್ಞವೇ ಮುಂತಾದದ್ದಕ್ಕೆ ಕಾರಣವಾಗಿರುವ ವಿಜ್ಞಾನಮಯನಿಗಿಂತ (ಇವನು) ಒಳಗೆ ಇರುವನೆಂದು ಶ್ರುತಿ ಹೇಳುವದರಿಂದ (ಇದು ಸಿದ್ಧವಾಗುತ್ತದೆ.) ಜ್ಞಾನಕರ್ಮಗಳ ಫಲವು ಭೋಕ್ತೃವಿಗಾಗಿ ಇರುವದರಿಂದ ಎಲ್ಲಕ್ಕೂ ಒಳಗಿರಬೇಕಷ್ಟೆ. ಆನಂದಮಯನೂ ಹಿಂದಿನ (ಅನ್ನಮಯಾದಿ) ಗಳಿಗಿಂತ ಒಳಗೆ ಇರುತ್ತಾನೆ. ಜ್ಞಾನಕರ್ಮಗಳು ಪ್ರಿಯವೇ ಮುಂತಾದವುಗಳಿಗಾಗಿ (ಉಂಟಾಗುತ್ತವೆ)ಯಾದ್ದರಿಂದಲೂ (ಆನಂದಮಯನು ಒಳಗಿನವನು). ಜ್ಞಾನಕರ್ಮಗಳು ಪ್ರಿಯವೇ ಮುಂತಾದವುಗಳಿಗಾಗಿ ಅಲ್ಲವೆ, (ಉಂಟಾಗುವದು)? ಆದ್ದರಿಂದ ಫಲರೂಪವಾಗಿರುವ ಪ್ರಿಯವೇ ಮುಂತಾದವುಗಳು ಆತ್ಮನಿಗೆ ಹತ್ತಿರವಾಗಿರುವದರಿಂದ ಈ (ಆನಂದಮಯನು) ವಿಜ್ಞಾನಮಯನಿಗಿಂತಲೂ ಒಳಗಿ(ರುವ)ನೆಂಬುದು ಯುಕ್ತವಾಗಿರುತ್ತದೆ. ಪ್ರಿಯವೇ ಮುಂತಾದವುಗಳ ವಾಸನೆಯಿಂದ ಉಂಟಾಗಿರುವ ಆನಂದಮಯಾತ್ಮನು ವಿಜ್ಞಾನಮಯನನ್ನು ಆಶ್ರಯಿಸಿಕೊಂಡು ಕನಸಿನಲ್ಲಿ[2] ತೋರಿಕೊಳ್ಳುತ್ತಾನಲ್ಲವೆ? (ಆದ್ದರಿಂದಲೂ ವಿಜ್ಞಾನಮಯನಿಗಿಂತ ಒಳಗಿನವನು.)

## ಆನಂದಮಯಾತ್ಮನ ಅವಯವಗಳು

**ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷವಿಧತಾಮ್ ।**
**ಅನ್ವಯಂ ಪುರುಷವಿಧಃ । ತಸ್ಯ ಪ್ರಿಯಮೇವ ಶಿರಃ ।**
**ಮೋದೋ ದಕ್ಷಿಣಃ ಪಕ್ಷಃ । ಪ್ರಮೋದ ಉತ್ತರಃ ಪಕ್ಷಃ ।**
**ಆನನ್ದ ಆತ್ಮಾ । ಬ್ರಹ್ಮ ಪುಚ್ಛಂ ಪ್ರತಿಷ್ಠಾ ॥ ೪ ॥**

೪. ಆ ಈತನು ಪುರುಷವಿಧನಾಗಿಯೇ (ಇರುವನು.) ಆವನ ಪುರುಷವಿಧತ್ವವನ್ನು ಅನುಸರಿಸಿ ಇವನು ಪುರುಷವಿಧ(ನಾಗಿರುತ್ತಾನೆ.) ಅವನಿಗೆ ಪ್ರಿಯವೇ ತಲೆ; ಮೋದವೇ ದಕ್ಷಿಣಪಕ್ಷವು; ಪ್ರಮೋದವೇ ಉತ್ತರಪಕ್ಷವು; ಆನಂದವು ಆತ್ಮನು; ಬ್ರಹ್ಮವು ಪುಚ್ಛವು, ಪ್ರತಿಷ್ಠೆಯು.

---

1. ಉಪಾಸನೆ.

2. ಕರ್ತೃತ್ವವು ಎಚ್ಚರದಲ್ಲಿರುವದೆಂದೂ ಕನಸಿನಲ್ಲಿ ಅದರ ವಾಸನೆಯಿಂದಾದ ಫಲಭೋಗವು ಮಾತ್ರ ಇರುವದೆಂದೂ ಎಣಿಸುವ ವ್ಯಾವಹಾರಿಕರ ಅನುಭವವನ್ನು ಇಲ್ಲಿ ಉದಾಹರಿಸಿದೆ. ಬೃ. ಭಾ. ೪-೩-೧೫ "ಅನನ್ವಾಗತಃ" ಎಂಬುವರ ವ್ಯಾಖ್ಯಾನವನ್ನು ನೋಡಿ.

(ಭಾಷ್ಯ)

೧೮೬. ತಸ್ಯ ಆನನ್ದಮಯಸ್ಯ ಆತ್ಮನಃ ಇಷ್ಟಪುತ್ರಾದಿದರ್ಶನಜಂ ಪ್ರಿಯಂ ಶಿರ ಇವ ಶಿರಃ । ಪ್ರಾಧಾನ್ಯಾತ್ । ಮೋದಃ ಇತಿ ಪ್ರಿಯಲಾಭನಿಮಿತ್ತೋ ಹರ್ಷಃ । ಸ ಏವ ಚ ಪ್ರಕೃಷ್ಟೋ ಹರ್ಷಃ ಪ್ರಮೋದಃ । ಆನನ್ದಃ ಇತಿ ಸುಖಸಾಮಾನ್ಯಮ್ ಆತ್ಮಾ ಪ್ರಿಯಾದೀನಾಂ ಸುಖಾವಯವಾನಾಮ್ । ತೇಷು ಅನುಸ್ಯೂತತ್ವಾತ್ ॥

(ಭಾಷ್ಯಾರ್ಥ)

ಆ ಆನಂದಮಯಾತ್ಮನಿಗೆ ಇಷ್ಟವಾಗಿರುವ ಮಗನೇ ಮುಂತಾದವರನ್ನು ಕಂಡದ್ದರಿಂದಾದ **ಪ್ರಿಯವು**[1] ತಲೆಯಂತಿರುವುದರಿಂದ ತಲೆ; ಏಕೆಂದರೆ (ಅದೇ) ಮುಖ್ಯವಾಗಿರುತ್ತದೆ. **ಮೋದವು** ಎಂದರೆ ಪ್ರಿಯವಾದದ್ದು ದೊರೆತಕಾರಣದಿಂದಾಗುವ ಹರ್ಷವು. ಆ ಹರ್ಷವೇ ಹೆಚ್ಚಾಗಿ ಆದರೆ ಪ್ರಮೋದವು. **ಆನಂದವು** ಎಂದರೆ ಸುಖಸಾಮಾನ್ಯವು ಪ್ರಿಯವೇ ಮುಂತಾದ ಸುಖದ ಅವಯವಗಳಿಗೆ ಆತ್ಮನು; ಏಕೆಂದರೆ (ಅದು) ಅವುಗಳ(ಲ್ಲೆಲ್ಲ) ಹೊಂದಿಕೊಂಡೇ ಇರುತ್ತದೆ.

(ಭಾಷ್ಯ)

೧೮೭. ಆನನ್ದಃ ಇತಿ ಪರಂ ಬ್ರಹ್ಮ । ತದ್ ಹಿ ಶುಭಕರ್ಮಣಾ ಪ್ರತ್ಯುಪಸ್ಥಾಪ್ಯಮಾನೇ ಪುತ್ರಮಿತ್ರಾದಿವಿಷಯವಿಶೇಷೋಪಾಧೌ ಅನ್ತಃಕರಣವೃತ್ತಿವಿಶೇಷೇ ತಮಸಾ ಅಪ್ರಚ್ಛಾದ್ಯಮಾನೇ ಪ್ರಸನ್ನೇ ಅಭಿವ್ಯಜ್ಯತೇ । ತದ್ ವಿಷಯಸುಖಮ್ ಇತಿ ಪ್ರಸಿದ್ಧಂ ಲೋಕೇ । ತದ್ವೃತ್ತಿವಿಶೇಷಪ್ರತ್ಯುಪಸ್ಥಾಪಕಸ್ಯ ಕರ್ಮಣಃ ಅನವಸ್ಥಿತತ್ವಾತ್ ಸುಖಸ್ಯ ಕ್ಷಣಿಕತ್ವಮ್ । ತದ್ ಯದಾ ಅನ್ತಃಕರಣಂ ತಪಸಾ ತಮೋಘ್ನೇನ ವಿದ್ಯಯಾ ಬ್ರಹ್ಮಚರ್ಯೇಣ ಶ್ರದ್ಧಯಾ ಚ ನಿರ್ಮಲತ್ವಮ್ ಆಪದ್ಯತೇ ಯಾವದ್ಯಾವತ್ ತಾವತ್ತಾವತ್[2] ವಿವಿಕ್ತೇ ಪ್ರಸನ್ನೇ ಅನ್ತಃಕರಣೇ ಆನನ್ದವಿಶೇಷಃ ಉತ್ಕೃಷ್ಯತೇ ವಿಪುಲೀಭವತಿ । ವಕ್ಷ್ಯತಿ ಚ "ರಸೋ ವೈ ಸಃ। ರಸಗ್ಂ ಹ್ಯೇವಾಯಂ ಲಬ್ಧ್ವಾ ಆನನ್ದೀ ಭವತಿ । ಏಷ ಹ್ಯೇವಾನನ್ದಯಾತಿ" (೨-೭) (ಇತಿ[3])। "ಏತಸ್ಯೈವಾನನ್ದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವನ್ತಿ" (ಬೃ. ೪-೩-೩೧) ಇತಿ ಶ್ರುತ್ಯನ್ತರಾತ್ । ಏವಂ ಚ ಕಾಮೋಪಶಮೋತ್ಕರ್ಷಾಪೇಕ್ಷಯಾ ಶತಗುಣೋತ್ತರೋತ್ತರೋತ್ಕರ್ಷಃ ಆನನ್ದಸ್ಯ ವಕ್ಷ್ಯತೇ ॥

---

1. ಇಲ್ಲಿ ಪ್ರಿಯವಾದ ವಸ್ತುಗಳನ್ನು ಕಂಡರೆ ಆಗುವ ಸಂತೋಷವನ್ನು ಪ್ರಿಯವೆಂದೇ ಕರೆದಿದೆ.
2. "ಯಾವತ್ ತಾವತ್" ಎಂದಿಷ್ಟೇ ಪಾ॥ ಪಾಠ.
3. ಇತಿ ಎಂಬ ಮಾತು ಇಲ್ಲಿ ಅಚ್ಚಿನ ಪುಸ್ತಕಗಳಲ್ಲಿಲ್ಲವಾದರೂ ಅವಶ್ಯ.

(ಭಾಷ್ಯಾರ್ಥ)

("ಆನಂದವು ಆತ್ಮನು" ಎಂಬಲ್ಲಿ) **ಆನಂದ ಎಂಬುದು ಪರಬ್ರಹ್ಮವು**[1]. ಅದು ಪುಣ್ಯಕರ್ಮದಿಂದ ಮಗನು, ಗೆಳೆಯನು-ಮುಂತಾದ ಆಯಾ ವಿಷಯವೆಂಬ ಉಪಾಧಿಯು ಮುಂದಕ್ಕೆ ಒಡ್ಡಲ್ಪಟ್ಟಾಗ ಅಂತಃಕರಣದ ಒಂದಾನೊಂದು ವೃತ್ತಿಯು ತಮಸ್ಸಿನಿಂದ ಮರೆಯಾಗದೆ ತಿಳಿಯಾಗಿರುವಾಗ ಹೊರತೋರಿಕೊಳ್ಳುತ್ತದೆ. ಅದು **ವಿಷಯಸುಖವು**[2] ಎಂದು ಲೋಕದಲ್ಲಿ ಪ್ರಸಿದ್ಧವಾಗಿರುತ್ತದೆ. ಆ ಗೊತ್ತಾದ ವೃತ್ತಿಯನ್ನು ತಂದೊಡ್ಡುವ ಕರ್ಮವು ಹಾಗೆಯೇ ನಿಂತಿರುವದಿಲ್ಲವಾದ್ದರಿಂದ (ಆ) ಸುಖವು ಕ್ಷಣಿಕವಾಗಿರುತ್ತದೆ[3]. **ಆ ಅಂತಃಕರಣವು ಯಾವಾಗ ತಪಸ್ಸಿನಿಂದಲೂ ತಮಸ್ಸನ್ನು ನಾಶಗೊಳಿಸುವ[4] ಜ್ಞಾನದಿಂದಲೂ ಬ್ರಹ್ಮಚರ್ಯೆಯಿಂದಲೂ ಶ್ರದ್ಧೆಯಿಂದಲೂ ಎಷ್ಟೆಷ್ಟು ಮಟ್ಟಿಗೆ ನಿರ್ಮಲತೆಯನ್ನು ಹೊಂದುವದೋ ಅಷ್ಟಷ್ಟುಮಟ್ಟಿಗೆ ಅಂತಃಕರಣವು ಪ್ರಸನ್ನವಾಗಿ (ಅದ)ರಲ್ಲಿ ಬೇರೆಬೇರೆಯ ಆನಂದವು ಹೆಚ್ಚುವದು, ವಿಸ್ತರಿಸುವದು.** ಆದ್ದರಿಂದಲೇ "ಆತನು ರಸವೇ, ಈ (ಜೀವನು) ರಸವನ್ನೇ ಹೊಂದಿ ಆನಂದಿಯಾಗುವನು, ಈತನೇ ಆನಂದವನ್ನುಂಟುಮಾಡುತ್ತಾನೆ" (೨-೬) (ಎಂದು ಈ ಶ್ರುತಿಯಲ್ಲಿ) ಮುಂದೆ ಹೇಳಿರುತ್ತದೆ. "ಇದೇ ಆನಂದದ ಒಂದಂಶವನ್ನು ಮಿಕ್ಕ ಭೂತಗಳು ಉಪಜೀವಿಸಿಕೊಂಡಿರುವವು." (ಬೃ. ೪-೩-೩೨) ಎಂಬ ಬೇರೊಂದು ಶ್ರುತಿಯು (ಇದಕ್ಕೆ ಪ್ರಮಾಣವು). ಹೀಗಿರುವದರಿಂದಲೇ ಕಾಮವನ್ನು ತೊಲಗಿಸಿಕೊಳ್ಳುವದು ಹೆಚ್ಚುಹೆಚ್ಚಾದಂತೆಲ್ಲ ಆನಂದವೂ ನೂರು ಪಾಲು ಮುಂದುಮುಂದಕ್ಕೆ ಹೆಚ್ಚಾಗುವದೆಂದು ಮುಂದೆ ಹೇಳಲಾಗುವದು.

---

1. ಆನಂದಮಯ ಎಂಬುದು ಭೋಕ್ತೃತ್ವವನ್ನು ತಿಳಿಸುವದರಿಂದ ಜೀವನನ್ನೇ ಹೇಳುತ್ತದೆ. ಆದರೆ ಸ್ವರೂಪಾನಂದವು ಬ್ರಹ್ಮವೇ.

2. ವಿಷಯವು ಬಂದ ನಿಮಿತ್ತದಿಂದ ಕಾಣಿಸಿಕೊಳ್ಳುವದರಿಂದ ಅದು ವಿಷಯಸುಖವೆನಿಸುವದು; ವಿಷಯದಿಂದ ಹುಟ್ಟಿದ್ದೆಂದು ಭಾವಿಸಲಾಗದು. ಮುಂದೆ ೭ ನೆಯ ಅನುವಾಕಭಾಷ್ಯದಲ್ಲಿ ಆನಂದಶಬ್ದಾರ್ಥವನ್ನೂ ೮ ನೆಯ ಅನುವಾಕಭಾಷ್ಯದಲ್ಲಿ ಲೌಕಿಕಾನಂದ ವಿಚಾರವನ್ನೂ ನೋಡಿ.

3. ವೃತ್ತಿಯು ಕ್ಷಣಿಕವಾಗಿರುವದರಿಂದ ಅದರಲ್ಲಿ ತೋರಿಕೊಳ್ಳುವ ಸುಖವು ಕ್ಷಣಿಕವಾಗಿ ತೋರುತ್ತದೆ. ನಿಜವಾಗಿ ಸುಖವು ಕ್ಷಣಿಕವಲ್ಲ, ಅದು ಆತ್ಮನ ಸ್ವರೂಪವೇ ಆಗಿರುವದರಿಂದ ನಿತ್ಯವಾಗಿರುತ್ತದೆ.

4. ಈ ವಿಶೇಷಣವನ್ನು ಹಿಂದಕ್ಕೂ ಮುಂದಕ್ಕೂ ಇಲ್ಲಿ ಹೇಳಿರುವ ಸಾಧನಗಳಿಗೆಲ್ಲ ಅನ್ವಯಿಸಿಕೊಳ್ಳಬಹುದು.

(ಭಾಷ್ಯ)

೧೮೮. ಏವಂ ಚ ಉತ್ಕ್ರಮಿಷ್ಯಮಾಣಸ್ಯ ಆನನ್ದಮಯಸ್ಯಾತ್ಮನಃ ಪರಮಾರ್ಥ ಬ್ರಹ್ಮವಿಜ್ಞಾನಾಪೇಕ್ಷಯಾ ಬ್ರಹ್ಮ ಪರಮೇವ ಯತ್ ಪ್ರಕೃತಂ ಸತ್ಯಜ್ಞಾನಾನನ್ತ ಲಕ್ಷಣಮ್, ಯಸ್ಯ ಚ ಪ್ರತಿಪತ್ತ್ಯರ್ಥಂ ಪಞ್ಚ ಅನ್ನಮಯಾದಿಕೋಶಾ ಉಪ ನ್ಯಸ್ತಾಃ, ಯಚ್ಚ ತೇಭ್ಯೋಽನ್ತರಮ್, ಯೇನ ಚ ತೇ ಸರ್ವೇ ಆತ್ಮವನ್ತಃ, ತದ್ ಬ್ರಹ್ಮ ಪುಚ್ಛಂ ಪ್ರತಿಷ್ಠಾ ||

(ಭಾಷ್ಯಾರ್ಥ)

ಮತ್ತು ಈ ರೀತಿಯಲ್ಲಿ ಹೆಚ್ಚಾಗುತ್ತಿರುವ ಆನಂದಮಯಾತ್ಮನಿಗೆ, ಪರ ಮಾರ್ಥಬ್ರಹ್ಮದ ಅರಿವಿನ ದೃಷ್ಟಿಯಿಂದ ನೋಡಿದರೆ, ಬ್ರಹ್ಮವು-ಎಂದರೆ ಯಾವದು ಸತ್ಯ, ಜ್ಞಾನ, ಅನಂತವೆಂಬ ಲಕ್ಷಣವುಳ್ಳದ್ದೆಂದು (ಇಲ್ಲಿ) ಪ್ರಕೃತವಾಗಿರುತ್ತದೆಯೋ[1] ಯಾವದರ ಅರಿವು (ಉಂಟಾಗಲೆಂದು) ಅನ್ನಮಯವೇ ಮುಂತಾದ ಐದು ಕೋಶ ಗಳನ್ನು ಇಲ್ಲಿ ಹೇಳಲಾಗಿದೆಯೋ,[2] ಯಾವದು ಅವುಗಳೆಲ್ಲಕ್ಕೂ ಒಳಗಿರುವದೋ,[3] ಮತ್ತು ಯಾವದರಿಂದಲೇ ಅವುಗಳೆಲ್ಲವೂ ಆತ್ಮವುಳ್ಳವುಗಳೆನಿಸಿರುವವೋ[4] ಆ ಬ್ರಹ್ಮವು ಪುಚ್ಛವು,[5] ಪ್ರತಿಷ್ಠೆಯು.

---

1. ಬ್ರಹ್ಮವಿದಾಪ್ನೋತಿ ಪರಮ್ ಎಂಬಲ್ಲಿ ಹೇಳಿರುವ, ಸತ್ಯಜ್ಞಾನಾನಂತಸ್ವರೂಪ ವಾದದ್ದೆಂಬ ಲಕ್ಷಣದಿಂದ ತಿಳಿಸಿರುವ ಬ್ರಹ್ಮನೇ ಆನಂದಮಯನ ಪುಚ್ಛವು; ವೇದ, ಮಹಃ ಎಂಬ ವ್ಯಾಹೃತಿ, ಅಪರಬ್ರಹ್ಮ-ಇವು ಯಾವವನ್ನೂ ಇಲ್ಲಿ ಪುಚ್ಛವೆಂದಿಲ್ಲ.

2. ಅನ್ನಮಯಾದಿಕೋಶಗಳನ್ನು ಹೇಳಿರುವದು ಅವುಗಳಿಗೋಸ್ಕರವಲ್ಲ, ಬ್ರಹ್ಮ ವಿಜ್ಞಾನಕ್ಕಾಗಿ, ಆ ಸ್ವಪ್ರಧಾನವಾದ ಬ್ರಹ್ಮವನ್ನೇ ಇಲ್ಲಿ ಪುಚ್ಛವೆಂದು ಕರೆದಿರುವದು.

3. 'ಇನ್ನೊಬ್ಬ ಒಳಗಿನ (ಆತ್ಮನು)" ಎಂದು ಒಬ್ಬನಿಗಿಂತ ಒಬ್ಬನು ಒಳಗಿರುತ್ತಾ ನೆಂದು ಶ್ರುತಿ ಹೇಳುತ್ತಾ ಬಂದಿರುತ್ತದೆ.

4. ಆನಂದಮಯನಿಗೂ ಆತ್ಮನಾಗಿರುವ ಬ್ರಹ್ಮವು ಆನಂದಮಯಕೋಶಕ್ಕಿಂತ ಒಳಗಿರುತ್ತದೆ. ಆದ್ದರಿಂದ ಎಲ್ಲಕ್ಕೂ ಒಳಗಿನ ಆತ್ಮನಾಯಿತು. ಅನ್ನಮಯಾದಿಗಳನ್ನು ಆತ್ಮನೆಂದು ಕರೆದಿದ್ದರೂ ಎಲ್ಲಕ್ಕೂ ಆತ್ಮನು ಬ್ರಹ್ಮವು. ಆದ್ದರಿಂದ ಈ ಆತ್ಮನಿಲ್ಲದೆ ಅವಕ್ಕೆ ಸ್ವರೂಪವೇ ಇಲ್ಲ.

5. ಇಲ್ಲಿ ಪುಚ್ಛವೆಂದರೆ ಆಧಾರವು, ಅವಯವವೆಂದರ್ಥವಲ್ಲ. ಸೂ. ಭಾ. ೧-೧-೧೯ ನೋಡಿ.

## ಬ್ರಹ್ಮದ ಅಸ್ತಿತ್ವ

**ತದಪ್ಯೇಷ ಶ್ಲೋಕೋ ಭವತಿ ॥ ೬ ॥**

[ಇತಿ ಪಞ್ಚಮೋಽನುವಾಕಃ]

**ಅಸನ್ನೇವ ಸ ಭವತಿ । ಅಸದ್ ಬ್ರಹ್ಮೇತಿ ವೇದ ಚೇತ್ । ಅಸ್ತಿ ಬ್ರಹ್ಮೇತಿ ಚೇದ್ ವೇದ । ಸನ್ತಮೇನಂ ತತೋ ವಿದುರಿತಿ ॥ ೧ ॥**

೫. ಅದೇ ವಿಷಯದಲ್ಲಿ ಈ ಶ್ಲೋಕವಿರುವದು ;—

(ಐದನೆಯ ಅನುವಾಕವು ಮುಗಿಯಿತು.)

೧. ಅಸತ್ತಾಗಿಯೇ ಅವನು ಆಗುತ್ತಾನೆ, ಬ್ರಹ್ಮವು ಅಸತ್ತು ಎಂದು ತಿಳಿಯುತ್ತಾನಾದರೆ. ಬ್ರಹ್ಮವು ಇದೆ ಎಂದು ತಿಳಿಯುತ್ತಾನಾದರೆ ಇವನನ್ನು ಸತ್ತೆಂದು ಅದರಿಂದ ತಿಳಿಯುವರು.

(ಭಾಷ್ಯ)

೧೪೯. ತದೇವ ಚ ಚ ಸರ್ವಸ್ಯ ಅವಿದ್ಯಾಕಲ್ಪಿತಸ್ಯ ದ್ವೈತಸ್ಯ ಅವಸಾನ ಭೂತಮ್ ಅದ್ವೈತಂ ಬ್ರಹ್ಮ ಪ್ರತಿಷ್ಠಾ । ಆನನ್ದಮಯಸ್ಯ ಏಕತ್ವಾವಸಾನತ್ವಾತ್ । ಅಸ್ತಿ ತದೇಕಮ್ ಅವಿದ್ಯಾಕಲ್ಪಿತಸ್ಯ ದ್ವೈತಸ್ಯ ಅವಸಾನಭೂತಮ್ ಅದ್ವೈತಂ ಬ್ರಹ್ಮ ಪ್ರತಿಷ್ಠಾ ಪುಚ್ಛಮ್ । ತತ್ ಏತಸ್ಮಿನ್ ಅಪಿ ಅರ್ಥೇ ಏಷ ಶ್ಲೋಕೋ ಭವತಿ ॥

(ಭಾಷ್ಯಾರ್ಥ)

ಅದೇ ಅವಿದ್ಯೆಯಿಂದ ಕಲ್ಪಿತವಾಗಿರುವ ದ್ವೈತಕ್ಕೆಲ್ಲ ಕೊನೆಯಾಗಿರುವ, ಅದ್ವೈತ ಬ್ರಹ್ಮವೇ, ಪ್ರತಿಷ್ಠೆಯು. ಏಕೆಂದರೆ ಆನಂದಮಯನು ಏಕತ್ವದಲ್ಲಿ ಕೊನೆಗಂಡಿರುತ್ತಾನೆ.[1] ಅವಿದ್ಯೆಯಿಂದ ಕಲ್ಪಿತವಾಗಿರುವ ದ್ವೈತಕ್ಕೆ ಅವಸಾನವಾಗಿರುವ ಪ್ರತಿಷ್ಠೆಯಾಗಿರುವ ಪುಚ್ಛವಾಗಿ ಅದ್ವೈತಬ್ರಹ್ಮವು[2] (ಇದ್ದೇ) ಇದೆ. ಇದೇ ವಿಷಯದಲ್ಲಿ ಈ ಶ್ಲೋಕವಿರುತ್ತದೆ :--

---

1 ಆನಂದಮಯನಿಗೆ ಸತ್ಯಜ್ಞಾನಾನಂತರೂಪವಾದ ಬ್ರಹ್ಮವೇ ಪ್ರತಿಷ್ಠೆಯೆಂದೂ ಅದು ಆನಂದಸ್ವರೂಪವೆಂದೂ ಹೇಳಿರುತ್ತದೆ. ದ್ವೈತವು ಯಾವ ಆಧಾರವೂ ಇಲ್ಲದೆ ತೋರಿಕೊಳ್ಳಲಾರದು ; ಆ ಆಧಾರವಾದ ಬ್ರಹ್ಮವು ಇರಬೇಕೆಂದು ಇದರಿಂದಲೇ ಸಿದ್ಧವಾಗುತ್ತದೆ. ಯಾವ ಆಧಾರವೂ ಇಲ್ಲದೆ ಜಗತ್ತು ತೋರಿಕೊಳ್ಳುವದೆಂದು ಕಲ್ಪಿಸುವ ವಾದವು ಶ್ರುತಿವಿರುದ್ಧವೂ ಯುಕ್ತಿವಿರುದ್ಧವೂ ಆಗಿದೆ.

2. ದ್ವೈತಕ್ಕೆ ದ್ವೈತವೇ ಅಧಿಷ್ಠಾನವಾಗಲಾರದು ; ಆದ್ದರಿಂದ ಇದಕ್ಕೆ ಆಧಾರವಾಗಿರುವ ಅದ್ವೈತಬ್ರಹ್ಮವು ಇದೆ ಎಂದಾಯಿತು, ಇದನ್ನೇ ಮುಂದಿನ ಶ್ಲೋಕವೂ ತಿಳಿಸುತ್ತದೆ ಎಂದರ್ಥ.

(ಭಾಷ್ಯ)

೧೫೦. ಅಸನ್ ಏವ ಅಸತ್ಸಮ ಏವ, ಯಥಾ ಅಸನ್ ಅಪುರುಷಾರ್ಥಸಂಬನ್ಧೀ ಏವಂ ಸ ಭವತಿ ಅಪುರುಷಾರ್ಥಸಂಬನ್ಧೀ । ಕೋಽಸೌ ? ಯಃ ಅಸತ್ ಅವಿದ್ಯಮಾನಂ ಬ್ರಹ್ಮ ಇತಿ ವೇದ ವಿಜಾನಾತಿ । ಚೇತ್ ಯದಿ । ತದ್ವಿಪರ್ಯಯೇಣ ಯತ್ ಸರ್ವವಿಕಲ್ಪಾಸ್ಪದಂ ಸರ್ವಪ್ರವೃತ್ತಿಬೀಜಂ ಸರ್ವವಿಶೇಷಪ್ರತ್ಯಸ್ತಮಿತಮಪಿ ಅಸ್ತಿ ತದ್ ಬ್ರಹ್ಮ ಇತಿ ವೇದ ಚೇತ್ । ಕುತಃ ಪುನರಾಶಙ್ಕಾ ತನ್ನಾಸ್ತಿತ್ವೇ ? ವ್ಯವಹಾರಾತೀತತ್ವಂ ಬ್ರಹ್ಮಣ ಇತಿ ಬ್ರೂಮಃ । ವ್ಯವಹಾರವಿಷಯೇ ಹಿ ವಾಚಾರಮ್ಭಣಮಾತ್ರೇ ಅಸ್ತಿತ್ವಭಾವಿತಾ ಬುದ್ಧಿಃ ತದ್ವಿಪರೀತೇ ವ್ಯವಹಾರಾತೀತೇ ನಾಸ್ತಿತ್ವಮಪಿ ಪ್ರತಿಪದ್ಯತೇ । ಯಥಾ ಘಟಾದಿಃ ವ್ಯವಹಾರವಿಷಯತಯಾ ಉಪಪನ್ನಃ ಸನ್, ತದ್ವಿಪರೀತಃ ಅಸನ್ ಇತಿ ಪ್ರಸಿದ್ಧಮ್ । ಏವಂ ತತ್ಸಾಮಾನ್ಯಾತ್ ಇಹಾಪಿ ಸ್ಯಾದ್ ಬ್ರಹ್ಮಣೋ ನಾಸ್ತಿತ್ವಂ ಪ್ರತ್ಯಾಶಙ್ಕಾ । ತಸ್ಮಾತ್ ಉಚ್ಯತೇ "ಅಸ್ತಿ ಬ್ರಹ್ಮೇತಿ ಚೇದ್ ವೇದ" ಇತಿ । ಕಿಂ ಪುನಃ ಸ್ಯಾತ್ ತದಸ್ತಿ ಇತಿ ವಿಜಾನತಃ ಇತಿ ? ತದಾಹ । ಸನ್ತಂ ವಿದ್ಯಮಾನಂ ಬ್ರಹ್ಮ ಸ್ವರೂಪೇಣ ಪರಮಾರ್ಥಸದಾತ್ಮಾಪನ್ನಮ್ ಏನಮ್ ಏವಂವಿದಂ ವಿದುಃ ಬ್ರಹ್ಮವಿದಃ । ತತಃ ತಸ್ಮಾತ್ ಅಸ್ತಿತ್ವವೇದನಾತ್ ಸಃ ಅನ್ಯೇಷಾಂ ಬ್ರಹ್ಮವತ್ ವಿಜ್ಞೇಯೋ ಭವತಿ ಇತ್ಯರ್ಥಃ ॥

(ಭಾಷ್ಯಾರ್ಥ)

ಅಸತ್ತಾಗಿಯೇ ಎಂದರೆ ಇಲ್ಲದಿರುವವನಿಗೆ ಸಮವಾಗಿಯೇ–ಹೇಗೆ ಇಲ್ಲದವನು ಪುರುಷಾರ್ಥಕ್ಕೆ ಸಂಬಂಧವಿಲ್ಲದವನಾಗುವನೋ ಹಾಗೆ–ಅವನು ಪುರುಷಾರ್ಥಸಂಬಂಧವಿಲ್ಲದವನಾಗುವನು. ಯಾವನು ? ಎಂದರೆ, ಯಾವನು ಬ್ರಹ್ಮವು ಅಸತ್ತು ಇರುವದಲ್ಲ ಎಂದು ತಿಳಿಯುತ್ತಾನೋ ಅರಿಯುತ್ತಾನೋ (ಅವನು). ಚೇತ್ (ಹಾಗೆಂದು ತಿಳಿಯುತ್ತಾ)ನಾದರೆ (ಎಂದರ್ಥ). ಇದಕ್ಕೆ ಬದಲಾಗಿ ಯಾವನು ಎಲ್ಲಾ ಬಗೆಯ ವಿಕಲ್ಪಗಳಿಗೂ ಆಧಾರವಾಗಿ,[1] ಎಲ್ಲಾ ಬಗೆಯ ಪ್ರವೃತ್ತಿಗಳಿಗೂ ಕಾರಣವಾಗಿ,[2] ಯಾವದೊಂದು ವಿಶೇಷವೂ ತನ್ನಲ್ಲಿಲ್ಲದ್ದಾದರೂ ಆ ಬ್ರಹ್ಮವು ಇದೆ ಎಂದು ತಿಳಿಯುತ್ತಾನಾದರೆ—

---

1. ಇದೆ, ಇಲ್ಲ ಎಂದು ಮುಂತಾಗಿ ಬಗೆಬಗೆಯಾಗಿರುವ ವಿಕಲ್ಪಗಳಿಗೆ ಆಧಾರವಾಗಿ ಐಂ. ಭಾ. ಭಾ. ೭೧.

2. ಪ್ರಾಣಿಗಳ ವ್ಯಾಪಾರರೂಪವಾದ ಅಥವಾ ಉತ್ಪತ್ತಿರೂಪವಾದ ಪ್ರವೃತ್ತಿ ಗೀ. ಭಾ. ೧೮-೪೬, ಈ ಎರಡು ವಿಶೇಷಣಗಳೂ ಬ್ರಹ್ಮವು ಇದೆ ಎಂಬುದಕ್ಕೆ ಸಾಧಕವು; ಏಕೆಂದರೆ ಕಲ್ಪಿತಕ್ಕೆ ಅಧಿಷ್ಠಾನವಿರಲೇ ಬೇಕು, ಪ್ರವೃತ್ತಿಗೆ ಕಾರಣವಿರಲೇ ಬೇಕು.

(ಪ್ರಶ್ನೆ) :—ಅದು ಇಲ್ಲವೆಂದು ಶಂಕಿಸುವದಾದರೂ ಏಕೆ ?

(ಉತ್ತರ) :—ಬ್ರಹ್ಮವು ವ್ಯವಹಾರವನ್ನು ಮೀರಿರುವದೇ (ಕಾರಣವು) ಎಂದು ಹೇಳುತ್ತೇವೆ.[1] ಯಾವದು ವ್ಯವಹಾರಕ್ಕೆ ವಿಷಯವಾಗಿ ಬರಿಯ ಮಾತಿನಿಂದಾಗಿರುವ (ಕಾರ್ಯವಾಗಿರುವದೋ)[2] ಅದರಲ್ಲಿ ಇದೆ ಎಂದು ಭಾವನೆ ಮಾಡಿಕೊಂಡಿರುವ ಬುದ್ಧಿಯು ಅದಕ್ಕೆ ವಿರುದ್ಧವಾಗಿ ವ್ಯವಹಾರವನ್ನು ಮೀರಿರುವದರ ವಿಷಯದಲ್ಲಿ ಅದು ಇಲ್ಲವೆಂದೂ ಬಗೆಯುತ್ತದೆ. ಉದಾಹರಣೆಗೆ ವ್ಯವಹಾರಕ್ಕೆ ವಿಷಯವೆಂದು ತೋರುವ ಗಡಿಗೆಯೇ ಮುಂತಾದವುಗಳು ಸತ್ತೆಂದೂ ಅದಕ್ಕೆ ವಿರುದ್ಧವಾಗಿ (ವ್ಯವಹಾರಕ್ಕೆ ಗೋಚರವಾಗದ್ದು) ಅಸತ್ತೆಂದೂ (ಲೋಕದಲ್ಲಿ) ಪ್ರಸಿದ್ಧವಾಗಿರುತ್ತದೆ. ಇದರಂತೆ ಇಲ್ಲಿಯೂ ಬ್ರಹ್ಮವು ಇಲ್ಲವೆಂಬ ಶಂಕೆಯು ಉಂಟಾಗಬಹುದು. ಆದ್ದರಿಂದ " ಆ ಬ್ರಹ್ಮವು ಇದೆ ಎಂದು ತಿಳಿಯುತ್ತಾನಾದರೆ " ಎಂದು (ಶ್ರುತಿಯಲ್ಲಿ) ಹೇಳಿರುತ್ತದೆ.

ಅದು ಇದೆ ಎಂದು ತಿಳಿಯುವಾತನಿಗೆ ಏನಾಗುವದು ? ಎಂದರೆ (ಶ್ರುತಿ) ಅದನ್ನು ಹೇಳುತ್ತದೆ. ಇವನನ್ನು ಎಂದರೆ ಹೀಗೆಂದು ತಿಳಿದವನನ್ನು ಸತ್ತೆಂದು ಎಂದರೆ ಬ್ರಹ್ಮಸ್ವರೂಪದಿಂದ ಇರುವನೆಂದು ಪರಮಾರ್ಥ ಸ್ವರೂಪ ಸತ್ತಿನ[3] ರೂಪವನ್ನೇ ಪಡೆದವನೆಂದು, ಬ್ರಹ್ಮಜ್ಞಾನಿಗಳು ತಿಳಿಯುವರು. ಆದರಿಂದ ಎಂದರೆ ಆ (ಬ್ರಹ್ಮವು) ಇದೆ ಎಂಬ ಅರಿವಿನಿಂದ, ಅವನು ಮಿಕ್ಕವರಿಗೆ ಬ್ರಹ್ಮದಂತೆ ವಿಜ್ಞೇಯನಾಗುವನು[4] ಎಂದರ್ಥ.

(ಭಾಷ್ಯ)

೧೫೧. ಅಥ ವಾ ಯಃ ನಾಸ್ತಿ ಬ್ರಹ್ಮ ಇತಿ ಮನ್ಯತೇ ಸಃ ಸರ್ವಸ್ಯೈವ ಸನ್ಮಾರ್ಗಸ್ಯ ವರ್ಣಾಶ್ರಮಾದಿವ್ಯವಸ್ಥಾಲಕ್ಷಣಸ್ಯ ಅಶ್ರದ್ದಧಾನತಯಾ ನಾಸ್ತಿತ್ವಂ

---

1. ಕೇ. ಭಾ ಸಂಬಂಧಭಾಷ್ಯ, ಮಾಂ ಭಾ. ತುರೀಯಭಾಷ್ಯ-ಇವನ್ನು ನೋಡಿ. ವ್ಯವಹಾರವೆಂದರೆ ಅರಿಯುವದು, ಮಾತಿನಿಂದ ತಿಳಿಸುವದು-ಎರಡನ್ನೂ ತೆಗೆದುಕೊಳ್ಳಬೇಕು ಇಲ್ಲಿ ''ವ್ಯವಹಾರಾತೀತತ್ವಮ್'' ಎಂಬದರ ಬದಲು ವ್ಯವಹಾರಾತೀತತ್ವಾತ್ ಎಂದಿದ್ದರೆ ಸರಳವಾಗಿ ಅನ್ವಯವಾಗುತ್ತದೆ.

2. ನಿಜವಾಗಿ ಅದು ಅನೃತವಾಗಿದ್ದರೂ ವ್ಯವಹಾರಗೋಚರವಾಗಿರುವದರಿಂದ ಇದೆ ಎಂಬ ಅರಿವಾಗಿದೆ.

3. ನಿಜವಾದ ಇರವಾದ ಬ್ರಹ್ಮದ ವ್ಯವಹಾರದಲ್ಲಿ ಇರುವದೆಂದು ತೋರುವ ಅನಃಮಯಾದಿಗಳೂ ಆತ್ಮನ ಇರವಿನ ಆಧಾರದಿಂದಲೇ ಇರುವಂತೆ ತೋರುತ್ತಿರುವವು.

4. ಬ್ರಹ್ಮಜ್ಞಾನಿಯ ಮೂಲಕವೇ ಬ್ರಹ್ಮವನ್ನು ಅರಿತುಕೊಳ್ಳಬೇಕಾಗಿರುವದರಿಂದ ಜ್ಞಾನಿಯನ್ನು ಮುಮುಕ್ಷುಗಳು ಆದರದಿಂದ ಹುಡುಕುತ್ತಿರುವರು.

ಪ್ರತಿಪದ್ಯತೇ। ಬ್ರಹ್ಮಪ್ರತಿಪತ್ತ್ಯರ್ಥತ್ವಾತ್ ತಸ್ಯ। ಅತಃ ನಾಸ್ತಿಕಃ ಸಃ ಅಸತ್ ಅಸಾಧುಃ ಉಚ್ಯತೇ ಲೋಕೇ । ತದ್ವಿಪರೀತಃ ಸತ್ । ಯಃ ಅಸ್ತಿ ಬ್ರಹ್ಮ ಇತಿ ಚೇತ್ ವೇದ ಸಃ ತದ್ಬ್ರಹ್ಮಪ್ರತಿಪತ್ತಿಹೇತುಂ ಸನ್ಮಾರ್ಗಂ ವರ್ಣಾಶ್ರಮಾದಿವ್ಯವಸ್ಥಾಲಕ್ಷಣಂ ಶ್ರದ್ದಧಾನತಯಾ ಯಥಾವತ್ ಪ್ರತಿಪದ್ಯತೇ ಯಸ್ಮಾತ್ ತತಃ ತಸ್ಮಾತ್ ಸನ್ತಂ ಸಾಧುಮಾರ್ಗಸ್ಥಮ್ ಏನಂ ವಿದುಃ ಸಾಧವಃ । ತಸ್ಮಾತ್ ಅಸ್ತಿ ಇತ್ಯೇವ ಬ್ರಹ್ಮ ಪ್ರತಿಪತ್ತವ್ಯಮ್ ಇತಿ ವಾಕ್ಯಾರ್ಥಃ ||

(ಭಾಷ್ಯಾರ್ಥ)

ಅಥವಾ (ಶ್ರುತಿಗೆ ಇನ್ನೊಂದು ಅರ್ಥವನ್ನೂ ಮಾಡಬಹುದು) :—ಯಾವನು ಬ್ರಹ್ಮವು ಇಲ್ಲ ಎಂದು ಬಗೆಯುತ್ತಾನೋ ಅವನು ವರ್ಣ, ಆಶ್ರಮ-ಮುಂತಾದವುಗಳ ವ್ಯವಸ್ಥೆಯೆಂಬ ಯಾವ ಸನ್ಮಾರ್ಗದಲ್ಲಿಯೂ ಶ್ರದ್ಧೆಯಿಲ್ಲದೆ (ಅಂಥ ಮಾರ್ಗವು) ಇಲ್ಲವೆಂದೇ ತಿಳಿಯುತ್ತಾನೆ. ಏಕೆಂದರೆ ಆ (ಮಾರ್ಗವು) ಬ್ರಹ್ಮದ ಜ್ಞಾನಕ್ಕಾಗಿಯೇ ಇರತಕ್ಕದ್ದು.[1] ಆದ್ದರಿಂದ ನಾಸ್ತಿಕನಾದ ಅವನು ಅಸಂತನು, ಸಾಧುವಲ್ಲದವನು[2] ಎಂದು ಲೋಕದಲ್ಲಿ ಎನಿಸಿಕೊಳ್ಳುತ್ತಾನೆ. ಅವನಿಗೆ ವಿರುದ್ಧವಾಗಿರುವವನು ಸಂತನು. ಯಾವನು ಬ್ರಹ್ಮವು ಇದೆ ಎಂದು ನಂಬುತ್ತಾನೋ ಅವನು ಆ ಬ್ರಹ್ಮವನ್ನು ಅರಿಯುವದಕ್ಕೆ ಕಾರಣವಾಗಿರುವ ವರ್ಣ, ಆಶ್ರಮ-ಮುಂತಾದವುಗಳ ವ್ಯವಸ್ಥೆ ಎಂಬ ಸನ್ಮಾರ್ಗದಲ್ಲಿ ಶ್ರದ್ಧೆಯುಳ್ಳವನಾಗಿ (ಅದನ್ನು) ಸರಿಯಾಗಿ ನಂಬಿ(ನಡೆ)ಯುತ್ತಾನೆ. ಹೀಗಿರುತ್ತದೆಯಷ್ಟೆ. ಅದರಿಂದ ಆ (ನಂಬಿಕೆ)ಯಿಂದ ಇವನನ್ನು ಸತ್ಪುರುಷರು ಸಂತನು, ಸರಿಯಾದ ಮಾರ್ಗದಲ್ಲಿರುವವನು ಎಂದು ತಿಳಿಯುವರು. ಆದ್ದರಿಂದ ಬ್ರಹ್ಮವು ಇದೆ ಎಂದೇ ತಿಳಿಯಬೇಕು[4]-ಎಂಬುದು (ಒಟ್ಟು) ವಾಕ್ಯದ ಅರ್ಥವು.

---

1. ವೇದವಿಹಿತವಾದ ಕರ್ಮವನ್ನು ಜ್ಞಾನಾರ್ಥವಾಗಿ ಮಾಡತಕ್ಕದ್ದು ಎಂದು ಶೀಕ್ಷಾವಲ್ಲಿಯ ಅನುವಾಕದ ಭಾಷ್ಯದಲ್ಲಿ ಹೇಳಿರುವದನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬೇಕು. ಬ್ರಹ್ಮವು ಇದೆ ಎಂದು ನಂಬಿದವನು ಅದನ್ನು ಹೊಂದುವ ಮಾರ್ಗವನ್ನೂ ಶ್ರದ್ಧೆಯಿಂದ ಅನುಸರಿಸಲಾರನು-ಎಂದು ಭಾವ. ಗೀ. ಭಾ. ೧೬-೨೦.

2. ಅಸನ್, ಸನ್-ಎಂಬ ಮಾತುಗಳಿಗೆ ಇಲ್ಲದವನು, ಇರುವವನು ಎಂದು ಮೊದಲನೆಯ ವ್ಯಾಖ್ಯಾನದಲ್ಲಿ ಅರ್ಥವನ್ನು ಮಾಡಿತ್ತು ; ಕೆಟ್ಟವನು, ಶಿಷ್ಟನು ಎಂದು ಈಗ ಅರ್ಥವನ್ನು ಮಾಡಿದೆ.

3. ಮೊದಲನೆಯ ವ್ಯಾಖ್ಯಾನವು ಸಾಧ್ಯವಾದ ಜ್ಞಾನವನ್ನು ಗುರಿಯಲ್ಲಿಟ್ಟಿದೆ ; ಎರಡನೆಯದು ಸಾಧನವಾದ ಕರ್ಮಾಚರಣೆಯನ್ನು ಕುರಿತದ್ದು.

4. ಇದೆ ಎಂದು ನಂಬಿ ವರ್ಣಾಶ್ರಮಕರ್ಮಗಳನ್ನು ಮಾಡಿ ಚಿತ್ತಶುದ್ಧಿಯಿಂದ ಜ್ಞಾನವನ್ನು ಪಡೆದುಕೊಳ್ಳಬೇಕು.

# ಆನಂದಮಯಪ್ರಕರಣದ ಉಪಸಂಹಾರ

**ತಸ್ಯೈಷ ಏಷ ಶಾರೀರ ಆತ್ಮಾ । ಯಃ ಪೂರ್ವಸ್ಯ ॥ ೨ ॥**

೨. ಆ ಹಿಂದಿನವನಿಗೆ ಇವನೇ ಶಾರೀರ ಆತ್ಮನು.

(ಭಾಷ್ಯ)

೧೫೨. ತಸ್ಯ ಪೂರ್ವಸ್ಯ ವಿಜ್ಞಾನಮಯಸ್ಯ ಏಷ ಏವ ಶರೀರೇ ವಿಜ್ಞಾನಮಯೇ ಭವಃ ಶಾರೀರ ಆತ್ಮಾ । ಕೋಽಸೌ ? ಯ ಏಷ ಆನನ್ದಮಯಃ । ತಂ ಪ್ರತಿ ನಾಸ್ತ್ಯಾಶಙ್ಕಾ ನಾಸ್ತಿತ್ವೇ । ಅಪೋಢಸರ್ವವಿಶೇಷತ್ವಾತ್ತು ಬ್ರಹ್ಮಣೋ ನಾಸ್ತಿತ್ವಂ ಪ್ರತಿ ಆಶಙ್ಕಾ ಯುಕ್ತಾ । ಸರ್ವಸಾಮಾನ್ಯಾಚ್ಚ[1] ಬ್ರಹ್ಮಣಃ ॥

(ಭಾಷ್ಯಾರ್ಥ)

ಆ ಹಿಂದಿನ ವಿಜ್ಞಾನಮಯನಿಗೆ ಇವನೇ ಶಾರೀರನಾದ ಆತ್ಮನು; ಶರೀರದಲ್ಲಿ ಎಂದರೆ ವಿಜ್ಞಾನಮಯವೆಂಬ (ಶರೀರ)ದಲ್ಲಿ ಇರುವದರಿಂದ (ಶಾರೀರನೆನಿಸಿರುವನು). ಅವನು ಯಾರು? ಎಂದರೆ ಯಾವ ಈ ಆನಂದಮಯನಿದಾನಲ್ಲ, (ಇವನೇ). ಇವನ ವಿಷಯದಲ್ಲಿ (ಅವನು) ಇಲ್ಲವೆಂಬ ಆ ಶಂಕೆಯು (ಉಂಟಾಗುವ) ಹಾಗಿಲ್ಲ.[2] ಆದರೆ ಬ್ರಹ್ಮವು ಯಾವ ವಿಶೇಷಗಳೂ ಇಲ್ಲದ್ದಾದ್ದರಿಂದ ಅದು ಇಲ್ಲವೆಂಬ (ಆಶಂಕೆಯುಂಟಾಗುವದು ಯುಕ್ತವಾಗಿದೆ.) ಬ್ರಹ್ಮವು ಎಲ್ಲರಿಗೂ ಸಮಾನವಾಗಿರುವದರಿಂಇಲೂ (ಈ ಶಂಕೆಯುಂಟಾಗುವದು ಯುಕ್ತವಾಗಿದೆ).

---

1. "ಸರ್ವಸಾಮ್ಯಾಚ್ಚ" ಎಂಬ ವಾ॥ ಪಾಠವು ಸರಿಯಲ್ಲ.

2. "ಅಸನ್ನೇವ ಸ ಭವತಿ" ಎಂಬ ಮಂತ್ರದಲ್ಲಿ ಹೇಳಿರುವದು ಆನಂದಮಯನ ವಿಷಯವೊ, ಅಥವಾ ಆನಂದಮಯನಿಗೆ ಪುಚ್ಛವೆಂದು ವರ್ಣಿಸಿರುವ ಬ್ರಹ್ಮದ ವಿಷಯವೊ ?- ಎಂಬ ಸಂಶಯವುಂಟಾದರೆ ಅದು ಬ್ರಹ್ಮದ ವಿಷಯವೇ, ಆನಂದಮಯನ ವಿಷಯವಲ್ಲ. ಪ್ರಿಯ, ಮೋದ-ಮುಂತಾದ ವಿಶೇಷಗಳು ನಮ್ಮೆಲ್ಲರ ಅನುಭವದಲ್ಲಿರುವದರಿಂದ ಆನಂದಮಯನು ಇದಾನೊ, ಇಲ್ಲವೊ ? ಎಂಬ ಸಂಶಯವುಂಟಾಗಲು ಕಾರಣವಿಲ್ಲ.

3. ಪ್ರಿಯಾದಿವಿಶೇಷಗಳಲ್ಲಿ ತಾರತಮ್ಯವುಂಟು; ಆದರೆ ಬ್ರಹ್ಮವು ಪ್ರಿಯಾದಿಗಳು ಇಲ್ಲದ ನಿರ್ವಿಶೇಷಸ್ವರೂಪವಾಗಿರುತ್ತದೆ. ಎಲ್ಲರಿಗೂ ಆತ್ಮನಾಗಿರುವ ನಿರ್ವಿಶೇಷಬ್ರಹ್ಮವು ಇದೆಯೆ ? ಎಂಬ ಸಂಶಯವುಂಟಾಬಹುದು ಎಂದು ಅಭಿಪ್ರಾಯ.

# ೮. ಶಿಷ್ಯನ ಪ್ರಶ್ನೆಗಳು

**ಅಥಾತೋಽನುಪ್ರಶ್ನಾಃ। ಉತಾವಿದ್ವಾನಮುಂ ಲೋಕಂ ಪ್ರೇತ್ಯ। ಕಶ್ಚನ ಗಚ್ಛತೀ೩। ಆಹೋ ವಿದ್ವಾನಮುಂ ಲೋಕಂ ಪ್ರೇತ್ಯ। ಕಶ್ಚಿತ್ಸಮಶ್ನುತಾ೩ ಉ ॥ ೩ ॥**

೩. ಇನ್ನು ಆದ್ದರಿಂದ (ಈ) ಅನುಪ್ರಶ್ನೆಗಳು :—ಯಾವನಾದರೂ ಅಜ್ಞಾನಿಯು ಹೊರಟುಹೋದಬಳಿಕ ಆ ಲೋಕಕ್ಕೆ ಹೋಗುತ್ತಾನೆಯೆ? ಅಥವಾ ಯಾವನಾದರೂ ಜ್ಞಾನಿಯು ಹೊರಟುಹೋದಬಳಿಕ ಆ ಲೋಕವನ್ನು ಪಡೆಯುತ್ತಾನೆಯೆ?

## ಪ್ರಶ್ನೆಗಳಿಗೆ ಕಾರಣ

(ಭಾಷ್ಯ)

೧೫೨. ಯಸ್ಮಾದೇವಮ್ ಅತಃ ತಸ್ಮಾತ್ ಅಥ ಅನನ್ತರಂ ಶ್ರೋತುಃ ಶಿಷ್ಯಸ್ಯ ಅನುಪ್ರಶ್ನಾಃ ಆಚಾರ್ಯೋಕ್ತಿಮ್ ಅನು ಏತೇ ಪ್ರಶ್ನಾಃ ಅನುಪ್ರಶ್ನಾಃ ॥

(ಭಾಷ್ಯಾರ್ಥ)

ಹೀಗಿರುತ್ತದೆಯಷ್ಟೆ, ಆದ್ದರಿಂದ[1] ಆ ಕಾರಣದಿಂದ ಇನ್ನು (ಗುರು ಹೇಳಿದ) ಬಳಿಕ ಕೇಳುವ ಶಿಷ್ಯನ ಅನುಪ್ರಶ್ನೆಗಳು (ಎದ್ದುಕೊಳ್ಳುತ್ತವೆ). ಆಚಾರ್ಯನು ಹೇಳಿದ್ದರ ಬಳಿಕ ಈ ಪ್ರಶ್ನೆಗಳು (ಉಂಟಾಗುವವಾದ್ದರಿಂದ ಇವು) ಅನುಪ್ರಶ್ನೆಗಳು.

## ಪ್ರಶ್ನೆಗಳ ವಿಂಗಡ

(ಭಾಷ್ಯ)

೧೫೪. ಸಾಮಾನ್ಯಂ ಹಿ ಬ್ರಹ್ಮ ಆಕಾಶಾದಿಕಾರಣತ್ವಾತ್ ವಿದುಷಃ, ಅವಿದುಷಶ್ಚ। ತಸ್ಮಾತ್ ಅವಿದುಷೋಽಪಿ ಬ್ರಹ್ಮಪ್ರಾಪ್ತಿಃ ಆಶಙ್ಕ್ಯತೇ। ಉತ ಅಪಿ ಅವಿದ್ವಾನ್ ಅಮುಂ ಲೋಕಂ ಪರಮಾತ್ಮಾನಮ್ ಇತಃ ಪ್ರೇತ್ಯ ಕಶ್ಚನ। ಚ ನ ಶಬ್ದಃ ಅಪ್ಯರ್ಥೇ। ಅವಿದ್ವಾನಪಿ ಗಚ್ಛತಿ ಪ್ರಾಪ್ನೋತಿ ಕಿಂ ವಾ ನ ಗಚ್ಛತಿ ಇತಿ ದ್ವಿತೀಯೋಽಪಿ ಪ್ರಶ್ನೋ ದ್ರಷ್ಟವ್ಯಃ। ಅನುಪ್ರಶ್ನಾಃ ಇತಿ ಬಹುವಚನಾತ್।

---

1. ಬ್ರಹ್ಮದ ವಿಷಯದಲ್ಲಿ ಶಂಕೆಯುಂಟಾಗುವದು ಸಹಜವಾಗಿರುವದರಿಂದ.

ವಿದ್ವಾಂಸಂ ಪ್ರತಿ ಅನ್ಯೌ ಪ್ರಶ್ನೌ । ಯದಿ ಅವಿದ್ವಾನ್ ಸಾಮಾನ್ಯಂ ಕಾರಣಮಪಿ ಬ್ರಹ್ಮ ನ ಗಚ್ಛತಿ ತತೋ ವಿದುಷೋಽಪಿ ಬ್ರಹ್ಮಾಗಮನಮ್ ಆಶಙ್ಕ್ಯತೇ । ಅತಸ್ತಂ ಪ್ರತಿ ಪ್ರಶ್ನಃ–"ಆಹೋ ವಿದ್ವಾನ್" ಇತಿ । ವಿದ್ವಾನ್ ಬ್ರಹ್ಮವಿದಪಿ ಕಶ್ಚಿತ್ ಇತಃ ಪ್ರೇತ್ಯ ಅಮುಂ ಲೋಕಮ್ (ಸಮಶ್ನುತೇ ಪ್ರಾಪ್ನೋತಿ)[1]। 'ಸಮಶ್ನುತೇ ಉ' ಇತ್ಯೇವಂ ಸ್ಥಿತೇ ಅಯಾದೇಶೇ ಯಲೋಪೇ ಚ ಕೃತೇ ಅಕಾರಸ್ಯ ಪ್ಲುತಿಃ ಸಮಶ್ನುತಾ ೩ ಉ ಇತಿ । ಉಕಾರಂ ಚ ವಕ್ಷ್ಯಮಾಣಮ್ ಅಧಸ್ತಾತ್ ಅಪಕೃಷ್ಯ ತಕಾರಂ ಚ ಪೂರ್ವಸ್ಮಾತ್ ಉತಶಬ್ದಾತ್ ವ್ಯಾಸಜ್ಯ 'ಆಹೋ' ಇತ್ಯೇತಸ್ಮಾತ್ ಪೂರ್ವಮ್ ಉತಶಬ್ದಂ ಸಂಯೋಜ್ಯ ಪೃಚ್ಛ್ಯತೇ "ಉತಾಹೋ ವಿದ್ವಾನ್" ಇತಿ । ವಿದ್ವಾನ್ ಸಮಶ್ನುತೇ ಅಮುಂ ಲೋಕಮ್ ಕಿಂ ವಾ ಯಥಾ ಅವಿದ್ವಾನ್ ಏವಂ ವಿದ್ವಾನಪಿ ನ ಸಮಶ್ನುತೇ ? ಇತ್ಯಪರಃ ಪ್ರಶ್ನಃ ॥

(ಭಾಷ್ಯಾರ್ಥ)

ಬ್ರಹ್ಮವು ಆಕಾಶವೇ ಮುಂತಾದವುಗಳಿಗೆ ಕಾರಣವಾಗಿರುವದರಿಂದ ಜ್ಞಾನಿಗೂ ಅಜ್ಞಾನಿಗೂ ಸಮಾನವಾಗಿರುತ್ತದೆಯಷ್ಟೆ. ಆದ್ದರಿಂದ ಅಜ್ಞಾನಿಗೂ ಬ್ರಹ್ಮಪ್ರಾಪ್ತಿಯಾಗಬಹುದಲ್ಲ! ಎಂದು (ಶಿಷ್ಯನು) ಶಂಕಿಸಿರುತ್ತಾನೆ. (ಉತ – ಅಪಿ) ಅಜ್ಞಾನಿಯು ಆ **ಲೋಕ**ವನ್ನು ಎಂದರೆ ಪರಮಾತ್ಮನನ್ನು [3] ಇಲ್ಲಿಂದ ಹೊರಟುಹೋದ ಬಳಿಕ [4]–ಕಶ್ಚನ (ಯಾವನಾದರೂ); ಇಲ್ಲಿ ಚನ ಎಂಬ ಶಬ್ದವನ್ನು ಅಪಿ (ಕೂಡ) ಎಂಬರ್ಥದಲ್ಲಿ ಉಪಯೋಗಿಸಿರುತ್ತದೆ. ಅಜ್ಞನುಕೂಡ (ಪರಮಾತ್ಮನಲ್ಲಿಗೆ) ಹೋಗುತ್ತಾನೊ "ಅಥವಾ ಇಲ್ಲವೊ ?" ಎಂದು ಎರಡನೆಯ ಪ್ರಶ್ನೆಯನ್ನೂ ಕಲ್ಪಿಸಬೇಕು ; ಏಕೆಂದರೆ 'ಅನುಪ್ರಶ್ನಾಃ' ಎಂದು ಬಹುವಚನವನ್ನು[5] (ಇಲ್ಲ ಉಪಯೋಗಿಸಿರುತ್ತದೆ.

---

1-2. "ಇಲ್ಲಿ ವಿದ್ವಾನ್ ಬ್ರಹ್ಮವಿದಪಿ" ಎಂಬಲ್ಲಿಂದ "ಉತಾಹೋ ವಿದ್ವಾನ್ ಇತಿ" ಎಂಬವರೆಗಿನ ಗ್ರಂಥಭಾಗವು ವಾ॥ ಗೋ॥ ಪಾಠಗಳಲ್ಲಿ ಬೇರೆಯಾಗಿದೆ. ಅರ್ಥದಲ್ಲಿ ಹೆಚ್ಚುಕಡಿಮೆಯೇನೂ ಇಲ್ಲ. ನಾವು ಆ॥ ಪಾಠವನ್ನೇ ಅಂಗೀಕರಿಸಿರುತ್ತೇವೆ. "ಸಮಶ್ನುತೇ ಪ್ರಾಪ್ನೋತಿ" ಎಂಬ ಮಾತುಗಳು ಕಾ॥ ಗೋ॥ ಪಾಠಗಳಲ್ಲಿವೆ.

3. ಪರಮಾತ್ಮನನ್ನು ಲೋಕವೆಂದೂ ಕರೆಯುವದುಂಟು ಐ. ೨-೬, ಛಾ. ೮-೩-೨, ಬೃ. ೧-೪-೧೫, ಮುಂ. ೩-೨-೬.

4. ಶರೀರವನ್ನು ಬಿಟ್ಟುಹೋದ ಬಳಿಕ.

5. ಅಜ್ಞಾನಿಯು ಪಡೆಯುತ್ತಾನೆಯೊ, ಇಲ್ಲವೊ ?–ಎಂದು ಎರಡು ಪ್ರಶ್ನೆಗಳು ; ಜ್ಞಾನಿಯು ಪಡೆಯುತ್ತಾನೆಯೊ, ಇಲ್ಲವೊ ?–ಎಂದು ಎರಡು ಪ್ರಶ್ನೆಗಳು ; ಹೀಗೆ ನಾಲ್ಕು ಪ್ರಶ್ನೆಗಳಿರುವದರಿಂದ ಬಹುವಚನವನ್ನುಪಯೋಗಿಸಿವೆ, ಹಾಗಿಲ್ಲದಿದ್ದರೆ ಅನುಪ್ರಶ್ನೌ ಎಂದು ದ್ವಿವಚನವನ್ನುಪಯೋಗಿಸಬೇಕಾಗಿತ್ತು ಎಂದು ಭಾವ.

ಮಿಕ್ಕೆರಡು ಪ್ರಶ್ನೆಗಳು ಜ್ಞಾನಿಯನ್ನು ಕುರಿತವುಗಳು. ಅಜ್ಞನು (ಇಬ್ಬರಿಗೂ) ಸಮಾನವಾಗಿರುವ ಬ್ರಹ್ಮವನ್ನು ಕೂಡ ಹೋಗಿ (ಸೇರು)ವದಿಲ್ಲವಾದರೆ ಆಗ ಜ್ಞಾನಿಯುಕೂಡ ಬ್ರಹ್ಮವನ್ನು ಹೋಗಿ (ಸೇರು)ವದಿಲ್ಲವೆಂದೇ ಶಂಕಿಸಬಹುದಾಗಿರುತ್ತದೆ. ಆದ್ದರಿಂದ ಅವನನ್ನು ಕುರಿತು "ಆಹೋ ವಿದ್ವಾನ್" (ಅಥವಾ ಜ್ಞಾನಿಯು ಯಾವನಾದರೂ ಆ ಲೋಕವನ್ನು ಪಡೆಯುತ್ತಾನೆಯೆ?) ಎಂಬ ಪ್ರಶ್ನೆಯನ್ನು (ಹಾಕಿರುತ್ತದೆ). ಜ್ಞಾನಿಯು ಎಂದರೆ ಬ್ರಹ್ಮವನ್ನು ಅರಿತವನು ಕೂಡ ಇಲ್ಲಿಂದ ಹೊರಟುಹೋದಬಳಿಕ ಆ ಲೋಕವನ್ನು ಪಡೆಯುತ್ತಾನೆಯೆ, ಸೇರುತ್ತಾನೆಯೆ? 'ಸಮಶ್ನುತೇ ಉ' ಎಂದಿಂತು ಇರುವಲ್ಲಿ (ಏಕಾರಕ್ಕೆ) ಅಯ (ಎಂಬ) ಆದೇಶವನ್ನೂ ಯಕಾರಲೋಪವನ್ನೂ ಮಾಡಿದ ಬಳಿಕ ಅಕಾರಕ್ಕೆ ಪ್ಲುತವಾಗಿ "ಸಮಶ್ನುತಾ ೩ ಉ" ಎಂದಾಗಿರುತ್ತದೆ. ಮುಂದೆ ಬರುವ ಉಕಾರವನ್ನು ಇತ್ತಲಾಗಿ ಎಳೆದುಕೊಂಡು (ಉತಾವಿದ್ವಾನ್ ಎಂಬಲ್ಲಿ) ಹಿಂದೆ ಇರುವ ಉತ ಎಂಬ ಶಬ್ದದಿಂದ ತಕಾರವನ್ನು ಬಿಡಿಸಿಕೊಂಡು (ಆದ) ಉತ ಎಂಬ ಶಬ್ದವನ್ನು ಆಹೋ ಎಂಬುದರ ಹಿಂದೆ ಸೇರಿಕೊಂಡು "ಉತಾಹೋ ವಿದ್ವಾನ್" ಎಂದು ಪ್ರಶ್ನೆಯನ್ನು ಮಾಡಿರುತ್ತದೆ. ಜ್ಞಾನಿಯು ಆ ಲೋಕವನ್ನು ಪಡೆಯುತ್ತಾನೆಯೊ, ಅಥವಾ ಅಜ್ಞಾನಿಯಂತೆಯೇ ಜ್ಞಾನಿಯುಕೂಡ ಪಡೆಯುವದಿಲ್ಲವೊ?–ಎಂಬುದು ಮತ್ತೊಂದು ಪ್ರಶ್ನೆ.

(ಭಾಷ್ಯ)

೧೫೫. ದ್ವಾವೇವ ವಾ ಪ್ರಶ್ನೌ ವಿದ್ವದವಿದ್ವದ್ವಿಷಯೌ । ಬಹುವಚನಂ ತು ಸಾಮರ್ಥ್ಯಪ್ರಾಪ್ತಪ್ರಶ್ನಾನ್ತರಾಪೇಕ್ಷಯಾ ಘಟತೇ । "ಅಸದ್ ಬ್ರಹ್ಮೇತಿ ವೇದ ಚೇತ್" "ಅಸ್ತಿ ಬ್ರಹ್ಮೇತಿ ಚೇದ್ವೇದ" ಇತಿ ಶ್ರವಣಾತ್ ಅಸ್ತಿ ನಾಸ್ತೀತಿ ಸಂಶಯಃ । ತತಃ ಅರ್ಥಪ್ರಾಪ್ತಃ "ಕಿಮ್ ಅಸ್ತಿ ನಾಸ್ತಿ?" ಇತಿ ಪ್ರಥಮೋಽನುಪ್ರಶ್ನಃ । ಬ್ರಹ್ಮಣಃ ಅಪಕ್ಷಪಾತಿತ್ವಾತ್ "ಅವಿದ್ವಾನ್ ಗಚ್ಛತಿ ನ ಗಚ್ಛತಿ" ಇತಿ ದ್ವಿತೀಯಃ । ಬ್ರಹ್ಮಣಃ ಸಮತ್ವೇಽಪಿ ಅವಿದುಷ ಇವ ವಿದುಷೋಽಪಿ ಅಗಮನಮಾಶಙ್ಕ್ಯ[1] "ಕಿಂ ವಿದ್ವಾನ್ ಸಮಶ್ನುತೇ" ಇತಿ ತೃತೀಯೋಽನುಪ್ರಶ್ನಃ ॥

(ಭಾಷ್ಯಾರ್ಥ)

ಅಥವಾ ಜ್ಞಾನಿಯನ್ನು ಕುರಿತದ್ದು ಮತ್ತು ಅಜ್ಞಾನಿಯನ್ನು ಕುರಿತದ್ದು–ಎಂದು ಎರಡೇ ಪ್ರಶ್ನೆಗಳು[2] ಎಂದಾದರೂ (ವಿವರಿಸಬಹುದು). ('ಅನುಪ್ರಶ್ನಾಃ'

---

1. ವಾ॥ ಪಾಠ.

2. ಪಡೆಯುತ್ತಾನೊ, ಇಲ್ಲವೊ?–ಎಂಬುದನ್ನು ಎರಡು ಪ್ರಶ್ನೆಗಳಾಗಿ ಎಣಿಸುವದಕ್ಕಿಂತ ಒಂದೆಂತ ಭಾವಿಸುವದೇ ಯುಕ್ತ; ಏಕೆಂದರೆ ಇದಕ್ಕೆ ಒಂದೇ ಉತ್ತರವು ಬರಬೇಕಾಗಿದೆ. ಆದ್ದರಿಂದ ಇಲ್ಲಿರುವದು ಎರಡೇ ಪ್ರಶ್ನೆಗಳು.

ಎಂಬ) ಬಹುವಚನವೋ ಎಂದರೆ (ಶಬ್ದ) ಸಾಮರ್ಥ್ಯದಿಂದ ತೋರುವ ಮತ್ತೊಂದು ಪ್ರಶ್ನೆಯ ಅಪೇಕ್ಷೆಯಿಂದ ಹೊಂದುತ್ತದೆ (ಎಂದೂ ಹೇಳಬಹುದಾಗಿದೆ). ಅದು ಹೇಗೆಂದರೆ:—"ಬ್ರಹ್ಮವು ಇಲ್ಲವೆಂದು ತಿಳಿಯುತ್ತಾನಾದರೆ", "ಬ್ರಹ್ಮವು ಇದೆ ಎಂದು ತಿಳಿಯುತ್ತಾನಾದರೆ"–ಎಂದು ಶ್ರುತಿಯಿರುವದರಿಂದ (ಬ್ರಹ್ಮವು) ಇದೆಯೊ, ಇಲ್ಲವೊ?–ಎಂಬ ಸಂಶಯ(ವುಂಟಾಗುತ್ತದೆ). ಆದ್ದರಿಂದ (ಅದು) ಇದೆಯೊ, ಇಲ್ಲವೊ?–ಎಂಬ **ಮೊದಲನೆಯ ಅನುಪ್ರಶ್ನೆಯು** ಅರ್ಥದಿಂದಲೇ ಪ್ರಾಪ್ತವಾಗಿರುತ್ತದೆ. ಬ್ರಹ್ಮವು (ಯಾರೊಬ್ಬರ)ಪಕ್ಷವನ್ನೂ ಹಿಡಿಯದೆ (ಎಲ್ಲರಿಗೂ) ಸಮಾನ)ವಾಗಿರುವದರಿಂದ ಅಜ್ಞನು (ಅಲ್ಲಿಗೆ) ಹೋಗುತ್ತಾನೊ, ಇಲ್ಲವೊ? ಎಂಬುದು **ಎರಡನೆಯ (ಅನು) (ಪ್ರಶ್ನವು)**. ಬ್ರಹ್ಮವು (ಇಬ್ಬರಿಗೂ) ಸಮವಾಗಿ ಅಜ್ಞಾನಿಯು (ಅದನ್ನು ಪಡೆಯದಿರು) ವಂತೆ ಜ್ಞಾನಿಯೂ (ಅದನ್ನು) ಪಡೆಯದೆ ಇರಲಿ!–ಎಂಬ ಶಂಕೆಯಿಂದ ಜ್ಞಾನಿಯು ಅದನ್ನು ಪಡೆಯುತ್ತಾನೊ, ಇಲ್ಲವೊ?–ಎಂಬ **ಮೂರನೆಯ ಅನು ಪ್ರಶ್ನವು** (ಬಂದಿರುತ್ತದೆ).

# ೯. ಬ್ರಹ್ಮವು ಸೃಷ್ಟಿಕರ್ತೃವಾದ್ದರಿಂದ ಇದೆ

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೧೫೭. ಏತೇಷಾಂ ಪ್ರತಿವಚನಾರ್ಥಮ್ [1] ಉತ್ತರಗ್ರನ್ಥ [2] ಆರಭ್ಯತೇ । ತತ್ರ ಅಸ್ತಿತ್ವಮೇವ ತಾವದುಚ್ಯತೇ । ಯಚ್ಚೋಕ್ತಮ್ "ಸತ್ಯಂ ಜ್ಞಾನಮನನ್ತಂ ಬ್ರಹ್ಮ" ಇತಿ ತತ್ರ (ಚ)[3] ಕಥಂ ಸತ್ಯತ್ವಮ್" ಇತ್ಯೇತದ್ ವಕ್ತವ್ಯಮ್ ಇತಿ ಇದಮುಚ್ಯತೇ । ಸತ್ತ್ವೋಕ್ತ್ಯೈವ ಸತ್ಯತ್ವಮುಚ್ಯತೇ । ಉಕ್ತಂ ಹಿ "ಸದೇವ ಸತ್ಯಮ್" ಇತಿ । ತಸ್ಮಾತ್ ಸತ್ತ್ವೋಕ್ತ್ಯೈವ ಸತ್ಯತ್ವಮುಚ್ಯತೇ ॥

---

1. "ಪ್ರತಿವಚನಾರ್ಥಃ" ಎಂದು ವಾ॥ ಪಾಠ.

2. "ಉತ್ತರೋ ಗ್ರನ್ಥಃ" ಎಂದು ವಾ॥ ಪಾಠ.

3. "ತಚ್ಚ" ಎಂದು ಆ॥ ಪಾಠ; ಇಲ್ಲಿ ಕೊಟ್ಟಿರುವದು ವಾ॥ ಪಾಠ. ಇಲ್ಲಿ 'ತತ್ರ' ಎಂದಿಷ್ಟೇ ಇದ್ದರೂ ಸಾಕು.

(ಭಾಷ್ಯಾರ್ಥ)

ಈ (ಪ್ರಶ್ನೆಗಳಿ)ಗೆ ಉತ್ತರವನ್ನು ಹೇಳುವದಕ್ಕಾಗಿ ಮುಂದಿನ ಗ್ರಂಥವನ್ನು ಪ್ರಾರಂಭಿಸಿರುತ್ತದೆ. ಅದರಲ್ಲಿಯೂ[1] (ಬ್ರಹ್ಮದ) ಇರುವಿಕೆಯನ್ನೇ ಮೊದಲು ಹೇಳಲಾಗುತ್ತದೆ. ಇದಲ್ಲದೆ "ಸತ್ಯವೂ ಜ್ಞಾನವೂ ಅನಂತವೂ ಆದದ್ದು ಬ್ರಹ್ಮವು" (೨-೧) ಎಂದು ಹಿಂದೆ ಹೇಳಿತ್ತಷ್ಟೆ, ಅಲ್ಲಿ (ಬ್ರಹ್ಮವು) ಸತ್ಯವೆಂಬುದು ಹೇಗೆ? ಎಂಬುದನ್ನು ಹೇಳಬೇಕಾಗಿರುತ್ತದೆ. (ಇಲ್ಲಿ) ಸತ್ತ್ವವನ್ನು (ಇರುವಿಕೆಯನ್ನು) ಹೇಳಿರುವದರಿಂದಲೇ (ಅದು) ಸತ್ಯವೆಂದು ಹೇಳಿದಂತಾಯಿತು. "ಸತ್ತೇ ಸತ್ಯವು" ಎಂದು ಹೇಳಿದೆಯಲ್ಲವೆ?[2] ಆದ್ದರಿಂದ (ಅದು) ಸತ್ತೆಂದು ಹೇಳುವದರಿಂದಲೇ (ಅದು) ಸತ್ಯವೆಂದು ಹೇಳಿದಂತೆ ಆಯಿತು.

(ಭಾಷ್ಯ)

೧೫೭. ಕಥಮ್ ಏವಮರ್ಥತಾ ಅವಗಮ್ಯತೇ ಅಸ್ಯ ಗ್ರನ್ಥಸ್ಯ? ಶಬ್ದಾನುಗಮಾತ್ । ಅನೇನೈವ ಹಿ ಅರ್ಥೇನ ಅನ್ವಿತಾನಿ ಉತ್ತರಾಣಿ ವಾಕ್ಯಾನಿ[3] "ತತ್ಸತ್ಯಮಿತ್ಯಾಚಕ್ಷತೇ" (೩-೬), "ಯದೇಷ ಆಕಾಶ ಆನನ್ದೋ ನ ಸ್ಯಾತ್" (೨-೭) ಇತ್ಯಾದೀನಿ ॥

(ಭಾಷ್ಯಾರ್ಥ)

(ಪ್ರಶ್ನೆ) :—ಈ ಗ್ರಂಥಕ್ಕೆ ಇದೇ ಅರ್ಥವೆಂದು ಹೇಗೆ ನಿಶ್ಚಯಿಸಬೇಕು?

(ಉತ್ತರ) :—ಶಬ್ದಗಳಲ್ಲಿ (ಇದು) ಹೊಂದಿಕೊಂಡು ಬಂದಿರುವದರಿಂದ. ಈ ಅರ್ಥವೇ ಮುಂದೆ ಬರುವ "ಅದು ಸತ್ಯವೆಂದು ಹೇಳುತ್ತಾರೆ" (೦-೬), "ಈ ಆಕಾಶದಲ್ಲಿರುವ ಆನಂದವು ಇಲ್ಲದಿದ್ದರೆ (ಯಾವನು ಕೆಲಸಮಾಡಿಯಾನು)? ಮುಂತಾದ ವಾಕ್ಯಗಳಲ್ಲಿ ಹೊಂದಿಕೊಂಡು ಬಂದಿರುತ್ತದೆ.

## ಬ್ರಹ್ಮವು ಜಗತ್ಕಾರಣವಾದ್ದರಿಂದ ಇದೆ

(ಭಾಷ್ಯ)

೧೫೮. ತತ್ರ ಅಸದೇವ ಬ್ರಹ್ಮ ಇತ್ಯಾಶಙ್ಕ್ಯತೇ । ಕಸ್ಮಾತ್? ಯದಸ್ತಿ ತದ್ವಿಶೇಷತೋ ಗೃಹ್ಯತೇ ಯಥಾ ಘಟಾದಿ । ಯನ್ನಾಸ್ತಿ ತನ್ನೋಪಲಭ್ಯತೇ ಯಥಾ

---

1 ಇರುವಿಕೆ, ಅಜ್ಞರಿಗೆ ಬ್ರಹ್ಮಪ್ರಾಪ್ತಿ, ಜ್ಞಾನಿಗಳಿಗೆ ಬ್ರಹ್ಮಪ್ರಾಪ್ತಿ-ಈ ಮೂರು ವಿಷಯಗಳೊಳಗೆ.

2. ಭಾ ೬-೮-೭: ಹಿಂದೆ ಭಾ. ಭಾ ೯೮ ನೋಡಿ.

3. 'ಉತ್ತರವಾಕ್ಯಾನಿ' ಎಂದು ವಾ॥ ಪಾಠ.

ಶಶವಿಷಾಣಾದಿ । ತಥಾ ನೋಪಲಭ್ಯತೇ ಬ್ರಹ್ಮ । ತಸ್ಮಾತ್ ವಿಶೇಷತೋಽಗ್ರಹಣಾತ್ ನಾಸ್ತಿ ಇತಿ । ತನ್ನ । ಆಕಾಶಾದಿಕಾರಣತ್ವಾದ್ ಬ್ರಹ್ಮಣಃ । ನ ನಾಸ್ತಿ ಬ್ರಹ್ಮ । ಕಸ್ಮಾತ್ ? ಆಕಾಶಾದಿ ಹಿ ಸರ್ವಂ ಕಾರ್ಯಂ ಬ್ರಹ್ಮಣೋ ಜಾತಂ ಗೃಹ್ಯತೇ । ಯಸ್ಮಾಚ್ಚ ಜಾಯತೇ ಕಿಂಚಿತ್ ತದಸ್ತೀತಿ ದೃಷ್ಟಂ ಲೋಕೇ ಯಥಾ ಘಟಾಙ್ಕುರಾದಿಕಾರಣಂ ಮೃದ್ಬೀಜಾದಿ । ತಸ್ಮಾದ್ ಆಕಾಶಾದಿಕಾರಣತ್ವಾತ್ ಅಸ್ತಿ ಬ್ರಹ್ಮ ॥

(ಭಾಷ್ಯಾರ್ಥ)

(ಆಕ್ಷೇಪ) :—ಇಲ್ಲಿ ಬ್ರಹ್ಮವು ಇರುವದೇ ಇಲ್ಲ ಎಂದು ಶಂಕಿಸಬಹುದಾಗಿದೆ. ಏಕೆಂದರೆ ಯಾವದು ಇರುತ್ತದೆಯೋ ಅದು ವಿಶೇಷರೂಪದಿಂದ [1] ತಿಳಿಯಬರುತ್ತದೆ; ಉದಾಹರಣೆಗೆ ಗಡಿಗೆಯೇ ಮುಂತಾದದ್ದು (ಹಾಗೆ ವಿಶೇಷರೂಪದಿಂದ ತಿಳಿಯಬರುತ್ತದೆ.) ಯಾವದು ಇರುವದಿಲ್ಲವೋ ಅದು (ಹಾಗೆ) ತಿಳಿಯಬರುವದಿಲ್ಲ ; ಉದಾಹರಣೆಗೆ ಮೊಲದ ಕೊಂಬು (ವಿಶೇಷರೂಪದಿಂದ ತಿಳಿಯಬರುವದಿಲ್ಲ). ಅದರಂತೆ ಬ್ರಹ್ಮವೂ ತಿಳಿಯಬರುವದಿಲ್ಲ. ಆದ್ದರಿಂದ ವಿಶೇಷರೂಪದಿಂದ ತಿಳಿಯಬಾರದಿರುವದರಿಂದ (ಅದು) ಇಲ್ಲ.

(ಪರಿಹಾರ) : – ಇದು ಸರಿಯಲ್ಲ. ಏಕೆಂದರೆ (ಬ್ರಹ್ಮವು) ಆಕಾಶಾದಿಗಳಿಗೆ ಕಾರಣವಾಗಿರುತ್ತದೆ. ಬ್ರಹ್ಮವು ಇಲ್ಲವೆಂಬುದು ಸರಿಯಲ್ಲ. ಏಕೆಂದರೆ ಆಕಾಶವೇ ಮುಂತಾದ ಬ್ರಹ್ಮದಿಂದ ಹುಟ್ಟಿರುವ ಕಾರ್ಯವೆಲ್ಲವೂ ಕಂಡುಬರುತ್ತಿದೆ. ಯಾವದರಿಂದ ಏನಾದರೂ ಹುಟ್ಟಿರುವದೋ ಅದು ಇರುವದೆಂದು ಲೋಕದಲ್ಲಿ ಕಂಡುಬರುತ್ತದೆ. ಉದಾಹರಣೆಗೆ ಗಡಿಗೆ, ಮೊಳಕೆ–ಮುಂತಾದವುಗಳಿಗೆ ಕಾರಣವಾಗಿರುವ ಮಣ್ಣು, ಬೀಜ ಮುಂತಾದವುಗಳು (ಇರುತ್ತವೆ).[2] ಆದ್ದರಿಂದ ಆಕಾಶವೇ ಮುಂತಾದವುಗಳಿಗೆ ಕಾರಣವಾಗಿರುವದರಿಂದ ಬ್ರಹ್ಮವು ಇದೆ.

## ಜಗತ್ತಿಗೆ ಅಸತ್ತು ಕಾರಣವಲ್ಲ

(ಭಾಷ್ಯ)

೧೫೫. ನ ಚಾಸತೋ ಜಾತಂ ಕಿಂಚಿದ್ ಗೃಹ್ಯತೇ ಲೋಕೇ ಕಾರ್ಯಮ್ । ಅಸತಶ್ಚೇತ್ ನಾಮರೂಪಾದಿಕಾರ್ಯಂ ನಿರಾತ್ಮಕತ್ವಾನ್ನೋಪಲಭ್ಯೇತ । ಉಪ

1. ಇಂಥದ್ದೆಂದು

2. ಇಲ್ಲಿ ಮಣ್ಣು, ಬೀಜ ಮುಂತಾದವುಗಳು ಸತ್ಯವೆಂಬುದನ್ನು ಹೇಳುವದಕ್ಕೆ ಬಂದಿಲ್ಲ; ಕಾರ್ಯದಲ್ಲಿ ತೋರುವ ಇರವು ಕಾರಣದಿಂದಲೇ ಬಂದಿರುತ್ತದೆ ಎಂಬುದು ಇಲ್ಲಿ ಮುಖ್ಯಾಶಯ. ಗೀ. ಭಾ. ೨-೧೬ ನೋಡಿ.

ಲಭ್ಯತೇ ತು । ತಸ್ಮಾತ್ ಅಸ್ತಿ ಬ್ರಹ್ಮ । ಅಸತಶ್ಚೇತ್ ಕಾರ್ಯಂ ಗೃಹ್ಯಮಾಣಮಪಿ ಅಸದನ್ವಿತಮೇವ ತತ್[1] ಸ್ಯಾತ್ । ನ ಚೈವಮ್ । ತಸ್ಮಾತ್ ಅಸ್ತಿ ಬ್ರಹ್ಮ । ತತ್ರ "ಕಥಮಸತಃ ಸಜ್ಜಾಯೇತ" (ಛಾ. ೬-೨-೨) ಇತಿ ಶ್ರುತ್ಯನ್ತರಮ್ ಅಸತಃ ಸಜ್ಜನ್ಮಾಸಂಭವಮ್ ಅನ್ವಾಚಷ್ಟೇ ನ್ಯಾಯತಃ । ತಸ್ಮಾತ್ ಸದೇವ ಬ್ರಹ್ಮ ಇತಿ ಯುಕ್ತಮ್ ॥

(ಭಾಷ್ಯಾರ್ಥ)

ಯಾವ ಕಾರ್ಯವೇ ಆಗಲಿ, ಅಸತ್ತಿನಿಂದ ಹುಟ್ಟಿರುವದು ಲೋಕದಲ್ಲಿ ಕಂಡುಬರುವದಿಲ್ಲ.[1] ನಾಮ, ರೂಪ-ಮುಂತಾದ[2] ಕಾರ್ಯವು ಅಸತ್ತಿನಿಂದ ಬಂದಿದ್ದರೆ (ಅದಕ್ಕೆ) ಆತ್ಮವೇ[3] ಇಲ್ಲದ್ದರಿಂದ (ಅದು) ಕಾಣಬರುತ್ತಲೇ ಇರಲಿಲ್ಲ ; ಆದರೆ ಕಾಣಬರುತ್ತಿದೆ. ಆದ್ದರಿಂದ ಬ್ರಹ್ಮವು ಇದೆ. ಕಾರ್ಯವು ಅಸತ್ತಿನಿಂದ ಕೂಡಿಕೊಂಡೇ ಕಾಣಬೇಕಾಗುತ್ತಿತ್ತು.[4] ಆದರೆ ಹಾಗಿಲ್ಲ. ಆದ್ದರಿಂದ ಬ್ರಹ್ಮವು ಇದೆ. ಇಲ್ಲಿ "ಅಸತ್ತಿನಿಂದ ಸತ್ತು ಹೇಗೆ ಹುಟ್ಟೀತು ?" (ಛಾ. ೬-೨-೨) ಎಂಬ ಬೇರೊಂದು ಶ್ರುತಿಯು ಅಸತ್ತಿನಿಂದ ಸತ್ತು ಹುಟ್ಟಲಾರದೆಂಬ ಯುಕ್ತಿಸಿದ್ಧವಾದ (ವಿಷಯವನ್ನು) ಅನುವಾದಮಾಡಿ ಹೇಳಿರುತ್ತದೆ. ಆದ್ದರಿಂದ ಬ್ರಹ್ಮವು ಸತ್ತೇ ಎಂಬುದು ಯುಕ್ತವಾಗಿರುತ್ತದೆ.[5]

## ಬ್ರಹ್ಮವು ಚೇತನರೂಪವಾಗಿರುತ್ತದೆ

(ಭಾಷ್ಯ)

೧೬೦. ತದ್ ಯದಿ ಮೃದ್ಬೀಜಾದಿವತ್ ಕಾರಣಂ ಸ್ಯಾತ್ ಅಚೇತನಂ ತರ್ಹಿ। ನ। ಕಾಮಯಿತೃತ್ವಾತ್ । ನ ಹಿ ಕಾಮಯಿತೃ ಅಚೇತನಮ್ ಅಸ್ತಿ ಲೋಕೇ । ಸರ್ವಜ್ಞಂ ಹಿ ಬ್ರಹ್ಮ ಇತ್ಯವೋಚಾಮ । ಅತಃ ಕಾಮಯಿತೃತ್ವೋಪಪತ್ತಿಃ ॥

---

1. ಸೂ. ಭಾ. ೨-೨-೨೬ ರಲ್ಲಿ ಅಸತ್ತಿನಿಂದಲೂ ಕಾರ್ಯವಾಗಬಹುದೆಂಬ ವಾದವನ್ನು ಖಂಡಿಸಿದೆ.

2. ಕರ್ಮವನ್ನು ಮುಂತಾದ ಎಂಬ ಮಾತಿನಿಂದ ಗ್ರಹಿಸಬೇಕು.

3. ಸ್ವರೂಪವೇ.

4. ಮಣ್ಣಿನಿಂದ ಹುಟ್ಟಿದ ಕಾರ್ಯಗಳಲ್ಲಿ ಮಣ್ಣು ಸೇರಿಕೊಂಡೇ ಇರುವಂತೆ ಅಸತ್ತಿನಿಂದ ಆಗಿರುವ ಕಾರ್ಯಗಳಲ್ಲಿ ಅಸತ್ತೇ ಇರಬೇಕಾಗುವದು, ಯಾವ ವಸ್ತುವೂ ಇದೆ ಎಂದು ತಿಳಿಯಬರಬಾರದಾಗುವದು. ಆದರೆ ಅನುಭವದಲ್ಲಿ ತೋರುವದೆಲ್ಲ ಇದೆ ಎಂದೇ ತಿಳಿಯಬರುತ್ತದೆ. ಛಾ. ಭಾ. ೬-೨-೨.

5. "ಬ್ರಹ್ಮವು ಎಲ್ಲವನ್ನೂ ಸೃಷ್ಟಿಸಿತು" ಎಂಬ ವಾಕ್ಯದಿಂದ ಅದು ಸತ್ತೇ ಎಂದು ಹೇಳಿದಂತೆ ಆಗುತ್ತದೆ ಎಂದಭಿಪ್ರಾಯ.

(ಭಾಷ್ಯಾರ್ಥ)

(ಆಕ್ಷೇಪ) :—ಹಾಗಾದರೆ ಮಣ್ಣು, ಬೀಜ-ಮುಂತಾದವುಗಳಂತೆ ಕಾರಣವಾಗಿದ್ದರೆ (ಬ್ರಹ್ಮವು) ಅಚೇತನವೆಂದಾಯಿತು.

(ಪರಿಹಾರ) :—ಹಾಗಲ್ಲ. ಏಕೆಂದರೆ (ಅದು) ಕಾಮವನ್ನು ಮಾಡುವದಾಗಿರುತ್ತದೆ. ಲೋಕದಲ್ಲಿ ಕಾಮಿಸುವದಾಗಿರುವ ಅಚೇತನವು ಇಲ್ಲವಷ್ಟೆ.[1] ಬ್ರಹ್ಮವು ಸರ್ವಜ್ಞವಾಗಿರುತ್ತದೆ ಎಂದಲ್ಲವೆ, (ನಾವು) ಹಿಂದೆ ಹೇಳಿರುವದು ? ಆದ್ದರಿಂದ (ಅದು) ಕಾಮಿಸುವದಾಗಿರಬಹುದಾಗಿದೆ.[2]

## ಬ್ರಹ್ಮವು ಕಾಮಕ್ಕೆ ವಶವಲ್ಲ

(ಭಾಷ್ಯ)

೧೬೧. ಕಾಮಯಿತೃತ್ವಾತ್ ಅಸ್ಮದಾದಿವತ್ ಅನಾಪ್ತಕಾಮಮ್ ಇತಿ ಚೇತ್ । ನ । ಸ್ವಾತನ್ತ್ರ್ಯಾತ್ । ಯಥಾ ಅನ್ಯಾನ್ ಪರವಶೀಕೃತ್ಯ ಕಾಮಾದಿದೋಷಾಃ ಪ್ರವರ್ತಯನ್ತಿ ನ ತಥಾ ಬ್ರಹ್ಮಣಃ ಪ್ರವರ್ತಕಾಃ ಕಾಮಾಃ । ಕಥಂ ತರ್ಹಿ ? ಸತ್ಯಜ್ಞಾನಲಕ್ಷಣಾಃ ಸ್ವಾತ್ಮಭೂತತ್ವಾದ್ ವಿಶುದ್ಧಾಃ ನ ತೈರ್ಬ್ರಹ್ಮ ಪ್ರವರ್ತ್ಯತೇ । ತೇಷಾಂ ತು ತತ್ ಪ್ರವರ್ತಕಂ ಬ್ರಹ್ಮ ಪ್ರಾಣಿಕರ್ಮಾಪೇಕ್ಷಯಾ । ತಸ್ಮಾತ್ ಸ್ವಾತನ್ತ್ರ್ಯಂ ಕಾಮೇಷು ಬ್ರಹ್ಮಣಃ । ಅತೋ ನ ಅನಾಪ್ತಕಾಮಂ ಬ್ರಹ್ಮ ॥

(ಭಾಷ್ಯಾರ್ಥ)

(ಶಂಕೆ) : (ಅದು) ಕಾಮಿಸುವದಾದ್ದರಿಂದ ನಮ್ಮಗಳಂತೆ ಪಡೆಯದೆ ಇರುವ ಕಾಮಗಳೂ (ಅದಕ್ಕೆ) ಉಂಟು (ಎಂದಾಯಿತಲ್ಲ) !

(ಪರಿಹಾರ) :—ಹಾಗಲ್ಲ. ಏಕೆಂದರೆ (ಅದಕ್ಕೆ) ಸ್ವಾತಂತ್ರ್ಯವಿರುತ್ತದೆ. ಮಿಕ್ಕವರನ್ನು ಕಾಮವೇ ಮುಂತಾದ ದೋಷಗಳು[3] ಹೇಗೆ ತಮ್ಮ ಅಧೀನಕ್ಕೆ ತಂದುಕೊಂಡು (ವಿಷಯಗಳಲ್ಲಿ) ತೊಡಗಿಸುತ್ತವೆಯೋ ಹಾಗೆ ಕಾಮಗಳು ಬ್ರಹ್ಮವನ್ನು ತೊಡಗಿಸುವದಿಲ್ಲ. ಮತ್ತೆ ಹೇಗೆ? ಎಂದರೆ, (ಅವು) ಸತ್ಯಜ್ಞಾನರೂಪ

---

1 ಇಚ್ಛೆಯು ಚೇತನದ ಧರ್ಮ.

2 ಬ್ರಹ್ಮವು ಸರ್ವಜ್ಞವೆಂದು ಹೇಳಿದ್ದರಿಂದ ಅದು ಚೇತನವೆಂದಂತೆ ಆಯಿತು ಆದ್ದರಿಂದ ಅದರಲ್ಲಿ ಇಚ್ಛೆಯೂ ಇರಬಹುದು. ಅಚೇತನವಾಗಿದ್ದಿದ್ದರೆ ಇದುಹೊಂದುತ್ತಿರಲಿಲ್ಲ.

3 ರಾಗದ್ವೇಷಮೋಹಗಳೆಂಬ ದೋಷಗಳೇ ಪ್ರವೃತ್ತಿಗೆ ಕಾರಣ. ನ್ಯಾ. ಸೂ. ೧-೧-೧೮ ನೋಡಿ.

ವಾಗಿರುತ್ತವೆ; ಅದರ ಆತ್ಮವೇ ಆಗಿರುವದರಿಂದ[1] ಬಹು ಶುದ್ಧವಾಗಿರುತ್ತವೆ. ಅವುಗಳಿಂದ ಬ್ರಹ್ಮವು ತೊಡಗಿಸಲ್ಪಡುವದಿಲ್ಲ; ಆದರೆ ಅವುಗಳನ್ನೇ ಆ ಬ್ರಹ್ಮವು ಪ್ರಾಣಿಗಳ ಕರ್ಮಕ್ಕೆ ತಕ್ಕಂತೆ[2] ತೊಡಗಿಸುತ್ತದೆ. ಆದ್ದರಿಂದ ಕಾಮಗಳ ವಿಷಯದಲ್ಲಿ ಬ್ರಹ್ಮಕ್ಕೆ ಸ್ವಾತಂತ್ರ್ಯವಿರುತ್ತದೆ. ಆದ್ದರಿಂದ ಬ್ರಹ್ಮವು ಪಡೆಯದೆ ಇರುವ ಕಾಮಗಳಿಲ್ಲ.

(ಭಾಷ್ಯ)

೧೬೨. ಸಾಧನಾನ್ತರಾನಪೇಕ್ಷತ್ವಾಚ್ಚ । ಕಿಂ[3] ಚ ಯಥಾ ಅನ್ಯೇಷಾಮ್ ಅನಾತ್ಮಭೂತಾಃ ಧರ್ಮಾದಿನಿಮಿತ್ತಾಪೇಕ್ಷಾಃ ಕಾಮಾಃ ಸ್ವಾತ್ಮವ್ಯತಿರಿಕ್ತಕಾರ್ಯಕರಣಸಾಧನಾನ್ತರಾಪೇಕ್ಷಾಶ್ಚ, ನ ತಥಾ ಬ್ರಹ್ಮಣಃ[4] । ಕಿಂ ತರ್ಹಿ? ಸ್ವಾತ್ಮನೋಽನನ್ಯಾಃ । ತದೇತದಾಹ—

(ಭಾಷ್ಯಾರ್ಥ)

ಮತ್ತೊಂದು ಸಾಧನವನ್ನು ಬಯಸದಿರುವದರಿಂದಲೂ (ಹೀಗೆಂದು ತಿಳಿಯಬೇಕು). ಇದಲ್ಲದೆ ಮಿಕ್ಕವರಿಗೆ ಕಾಮಗಳು ಅವರುಗಳ ಆತ್ಮ (ರೂಪ)ವಲ್ಲದೆ ಧರ್ಮವೇ ಮುಂತಾದ ನಿಮಿತ್ತವನ್ನು ಬಯಸುವವುಗಳಾಗಿಯೂ[5] ಅವರ ಸ್ವರೂಪಕ್ಕಿಂತ ಬೇರೆಯಾಗಿರುವ ದೇಹ, ಇಂದ್ರಿಯಗಳು (ಎಂಬ) ಬೇರೆಯ ಸಾಧನಗಳನ್ನು ಬಯಸುವವಾಗಿಯೂ ಹೇಗೆ ಇರುವವೋ, ಬ್ರಹ್ಮದ ಕಾಮಗಳು) ಹಾಗೆ ಇರುವದಿಲ್ಲ. ಮತ್ತೇನೆಂದರೆ ಅದರ ಸ್ವರೂಪಕ್ಕಿಂತ ಅನ್ಯವಲ್ಲದೆ ಇರುತ್ತವೆ. ಆ ಇದನ್ನು (ಮುಂದಿನ ಶ್ರುತಿಯು ಹೇಳುತ್ತದೆ :

---

1. ಸೃಷ್ಟಿಗೆ ಪೂರ್ವದಲ್ಲಿ ನಾಮರೂಪಗಳೆಲ್ಲವೂ ಆತ್ಮನೇ ಆಗಿರುವದರಿಂದ ಕಾಮಗಳೂ ಪರಮಾತ್ಮನೇ ಆಗಿರುತ್ತವೆ.

2. ನೀರಿನಿಂದ ನೊರೆ ಹುಟ್ಟುವಂತೆ ಕಾಮಗಳೂ ಸೃಷ್ಟಿಯೂ ಈಶ್ವರನಿಂದ ಹೊರಕ್ಕೆ ಬರುವದು ಜೀವರ ಕರ್ಮಕ್ಕೆ ಫಲವಾಗುವದಕ್ಕಾಗಿ. ಪ್ರಪಂಚವು ಅನಾದ್ಯನಂತವಾಗಿರುವದರಿಂದ ಕರ್ಮವೂ ಅದರ ವಾಸನೆಗಳೂ ಅನಾದ್ಯನಂತವಾಗಿರುವವು. ಆದರೆ ಪರಮಾರ್ಥದೃಷ್ಟಿಯಿಂದ ಅವುಗಳು ಯಾವವೂ ಆತ್ಮನಿಗಿಂತ ಬೇರೆಯಾಗಿರುವದಿಲ್ಲ.

3. "ಕಿಂ ಚ"– ಎಂಬುದು ವಾ॥ ಪಾಠದಲ್ಲಿಲ್ಲ.

4. "ಬ್ರಹ್ಮಣಃ" ಎಂಬ ಮಾತಾದ ಮೇಲೆ "ನಿಮಿತ್ತಾದ್ಯಪೇಕ್ಷತ್ವಮ್" ಎಂಬ ಮಾತು ಅಚ್ಚಿನ ಪುಸ್ತಕದಲ್ಲಿದ್ದರೂ ಬೇಕಿಲ್ಲ.

5. ತನ್ನ ಸ್ವರೂಪಕ್ಕಿಂತ ಬೇರೆಯಾಗಿದ್ದು ಧರ್ಮಾಧರ್ಮಗಳಿಂದ ಸಂಪಾದಿಸಬೇಕಾಗಿರುವ ಕಾಮಗಳು ಸಾಧನೆಯ ಕೊರತೆಯಿಂದ ದೊರೆಯದೆಯೂ ಹೋಗಬಹುದು. ತನ್ನ ಸ್ವರೂಪವೇ ಆಗಿರುವ ಕಾಮಗಳು ಹಾಗಲ್ಲ ಅವು ನಿತ್ಯಪ್ರಾಪ್ತವಾಗಿರುತ್ತವೆ. ಭಾ. ಭಾ. ೮-೧-೫, ೮-೩-೧.

**ಸೋಽಕಾಮಯತ । ಬಹು ಸ್ಯಾಂ ಪ್ರಜಾಯೇಯೇತಿ ಸ ತಪೋಽತಪ್ಯತ ॥ ೪ ॥**

೪. ಅವನು " ಬಹುವಾಗುವೆನು ; ಹುಟ್ಟುವೆನು " ಎಂದು ಕಾಮಿಸಿದನು. ಅವನು ತಪಸ್ಸನ್ನು ಮಾಡಿದನು.

(ಭಾಷ್ಯ)

೧೬೩. ಸೋಽಕಾಮಯತ । ಸಃ ಆತ್ಮಾ ಯಸ್ಮಾತ್ ಆಕಾಶಃ ಸಂಭೂತಃ ಅಕಾಮಯತ ಕಾಮಿತವಾನ್ । ಕಥಮ್ ? ಬಹು ಸ್ಯಾಂ ಬಹು ಪ್ರಭೂತಂ ಸ್ಯಾಂ ಭವೇಯಮ್ ॥

(ಭಾಷ್ಯಾರ್ಥ)

" ಸೋಽಕಾಮಯತ " (ಅವನು ಕಾಮಿಸಿದನು). ಅವನು ಎಂದರೆ ಯಾವನಿಂದ ಆಕಾಶವು ಉಂಟಾಯಿತೋ (ಆ) ಆತ್ಮನು[1] ಕಾಮಿಸಿದನು, ಎಂದರೆ ಇಚ್ಛೆಯನ್ನು ಮಾಡಿದನು. ಏನೆಂದು ? ಬಹುವಾಗುವೆನು, ಬಹು ಎಂದರೆ ಹೇರಳವಾಗಿ ಆಗುವೆನು, (ನಾನು) ಆಗಬೇಕು (ಎಂದು).

## ಆತ್ಮನು ಬಹುವಾಗುವ ಬಗೆ

(ಭಾಷ್ಯ)

೧೬೪. ಕಥಮೇಕಸ್ಯ ಅರ್ಥಾನ್ತರಾನನುಪ್ರವೇಶೇ ಬಹುತ್ವಂ ಸ್ಯಾತ್ ಇತಿ? ಉಚ್ಯತೇ । ಪ್ರಜಾಯೇಯ ಉತ್ಪದ್ಯೇಯ । ನ ಹಿ ಪುತ್ರೋತ್ಪತ್ತಿರಿವ ಅರ್ಥಾನ್ತರವಿಷಯಂ ಬಹುಭವನಮ್ । ಕಥಂ ತರ್ಹಿ ? ಆತ್ಮಸ್ಥಾನಭಿವ್ಯಕ್ತನಾಮರೂಪಾಭಿವ್ಯಕ್ತ್ಯಾ । ಯದಾ ಆತ್ಮಸ್ಥೇ ಅನಭಿವ್ಯಕ್ತೇ ನಾಮರೂಪೇ ವ್ಯಾಕ್ರಿಯೇತೇ ತದಾ ಆತ್ಮಸ್ವರೂಪಾಪರಿತ್ಯಾಗೇನೈವ ಬ್ರಹ್ಮಣಃ ಅಪ್ರವಿಭಕ್ತದೇಶಕಾಲೇ ಸರ್ವಾವಸ್ಥಾಸು ವ್ಯಾಕ್ರಿಯೇತೇ । ತದಾ ತನ್ನಾಮರೂಪವ್ಯಾಕರಣಂ ಬ್ರಹ್ಮಣೋ ಬಹುಭವನಮ್ । ನಾನ್ಯಥಾ ನಿರವಯವಸ್ಯ ಬ್ರಹ್ಮಣೋ ಬಹುತ್ವಾಪತ್ತಿರುಪಪದ್ಯತೇ ಅಲ್ಪತ್ವಂ ವಾ । ಯಥಾ ಆಕಾಶಸ್ಯ ಅಲ್ಪತ್ವಂ ಬಹುತ್ವಂ ಚ ವಸ್ತ್ವನ್ತರಕೃತಮೇವ । ಅತಃ ತದ್ದ್ವಾರೇಣೈವ ಆತ್ಮಾ ಬಹು ಭವತಿ ॥

---

1. ಆನಂದಮಯನಿಗಿಂತ ಬೇರೆಯಾಗಿ ಬ್ರಹ್ಮವಿದ್ದರೆ ಬ್ರಹ್ಮಶಬ್ದವು ನಪುಂಸಕವಾದ್ದರಿಂದ ಅದನ್ನು ಸಃ ಎಂಬ ಪುಲ್ಲಿಂಗದಿಂದ ಪರಾಮರ್ಶಿಸಿದ್ದು ಸರಿಯಾಗುವದಿಲ್ಲ ಎಂಬ ಶಂಕೆಗೆ ಪರಿಹಾರವಿದು. ಸೂ. ಭಾ. ೧-೧-೧೯ ಆತ್ಮಶಬ್ದವು ಪುಲ್ಲಿಂಗ.

(ಭಾಷ್ಯಾರ್ಥ)

(ಪ್ರಶ್ನೆ) :—ಒಬ್ಬನೇ (ಆಗಿರುವ ಆತ್ಮನು) ಮತ್ತೊಂದು ಪದಾರ್ಥವು ಸೇರಿಕೊಳ್ಳದೆ ಇರುವಲ್ಲಿ ಬಹುವಾಗುವದು ಹೇಗೆ?

(ಉತ್ತರ) :—ಇದಕ್ಕೆ ಉತ್ತರವನ್ನು (ಶ್ರುತಿಯಲ್ಲಿ) ಹೇಳಲಾಗುತ್ತದೆ: "ಹುಟ್ಟುವೆನು, ಉಂಟಾಗುವೆನು." ಮಗನು ಹುಟ್ಟಿ (ಬಹುವಾಗುವಂತೆ) ಬೇರೆಯ ಪದಾರ್ಥಗಳನ್ನು ಸೃಷ್ಟಿಸುವದಲ್ಲ, ಬಹುವಾಗುವದೆಂದರೆ; ಮತ್ತೆ ಹೇಗೆ? ಎಂದರೆ, ತನ್ನಲ್ಲಿ ಅಭಿವ್ಯಕ್ತವಾಗದೆ ಇರುವ ನಾಮರೂಪಗಳನ್ನು ವ್ಯಕ್ತಗೊಳಿಸುವದರಿಂದ. ತನ್ನಲ್ಲಿ ವ್ಯಕ್ತವಾಗದೆ ಇದ್ದ ನಾಮರೂಪಗಳು ಯಾವಾಗ ವ್ಯಾಕೃತವಾಗುವವೋ ಆಗ (ಅವು) ಆತ್ಮನ ಸ್ವರೂಪವನ್ನು ಬಿಡದೆಯೇ[1] ಬ್ರಹ್ಮಕ್ಕಿಂತ ಬೇರೆಯಾದ ದೇಶಕಾಲಗಳಲ್ಲಿರದೆಯೇ[2] ಎಲ್ಲಾ ಅವಸ್ಥೆಗಳಲ್ಲಿಯೂ ವ್ಯಾಕೃತವಾಗುವವು. ಆಗ ಆ ನಾಮರೂಪಗಳನ್ನು ವಿಂಗಡಿಸುವದೇ[3] ಬ್ರಹ್ಮವು ಬಹುವಾಗುವ(ದೆಂಬುದು). ಅವಯವಗಳಿಲ್ಲದ ಬ್ರಹ್ಮವು ಬಹುವಾಗುವದೆಂಬುದಾಗಲಿ ಅಲ್ಪವಾಗುವದೆಂಬುದಾಗಲಿ ಬೇರೆಯ ರೀತಿಯಿಂದ ಹೊಂದುವದಿಲ್ಲ. ಹೇಗೆ ಆಕಾಶವು ಅಲ್ಪವಾಗಿರುವದಾಗಲಿ ಬಹುವಾಗಿರುವದಾಗಲಿ ಮತ್ತೊಂದು ವಸ್ತುವಿನಿಂದಲೇ ಆಗಿರುವದೋ (ಹಾಗೆಯೇ ಇದು).[4] ಆದ್ದರಿಂದ ಆ (ನಾಮರೂಪಗಳ)ದ್ವಾರದಿಂದಲೇ ಆತ್ಮನು ಬಹುವಾಗುತ್ತಾನೆ.

(ಭಾಷ್ಯ)

೧೬೫. ನ ಹಿ ಆತ್ಮನೋಽನ್ಯತ್ ಅನಾತ್ಮಭೂತಂ ತತ್ಪ್ರವಿಭಕ್ತದೇಶಕಾಲಂ ಸೂಕ್ಷ್ಮಂ ವ್ಯವಹಿತಂ ವಿಪ್ರಕೃಷ್ಟಂ ಭೂತಂ ಭವತ್ ಭವಿಷ್ಯದ್ವಾ ವಸ್ತು ವಿದ್ಯತೇ। ಅತೋ ನಾಮರೂಪೇ ಸರ್ವಾವಸ್ಥೇ ಬ್ರಹ್ಮಣೈವ ಆತ್ಮವತೀ। ನ ಬ್ರಹ್ಮ ತದಾತ್ಮಕಮ್।

---

1. ನಾಮರೂಪಗಳು ಪರಮಾರ್ಥವಾಗಿ ಯಾವಾಗಲೂ ಆತ್ಮನೇ ಆಗಿರುತ್ತವೆ. ಐ. ಭಾ. ೧-೧ ನೋಡಿರಿ.

2. ನಾಮರೂಪಗಳು ಯಾವ ದೇಶದಲ್ಲಿ ಯಾವ ಕಾಲದಲ್ಲಿ ವ್ಯಾಕೃತವಾಗಿ ಎಂದರೆ ಬಿಡಿಬಿಡಿಯಾಗಿ ವಿಂಗಡವಾಗಿ ತೋರಿದರೂ ಅಲ್ಲಿ ಬ್ರಹ್ಮವು ಇದ್ದೇ ಇರುವದು. ಅವು ಬ್ರಹ್ಮವನ್ನು ಬಿಟ್ಟು ಇರಲಾರವು.

3. ಸೂ. ಭಾ. ೨-೧-೨೭, ೨-೪-೨೦.

4. ಆಕಾಶಕ್ಕೆ ಗಡಿಗೆಯೇ ಮುಂತಾದ ಉಪಾಧಿಗಳಿಂದ ಹುಟ್ಟುಹೊಂದುಗಳೂ ಬೇರೆಬೇರೆಯ ನಾಮರೂಪಕಾರ್ಯಗಳೂ ಉಂಟಾಗುವವು. ಮಾಂ. ಕಾ. ೩-೩; ೪-೬. ಇದರಂತೆ ಆತ್ಮನು ಬಹುವಾಗುವದೂ ನಾಮರೂಪಗಳಿಂದ.

**ತೇ ತತ್ಪ್ರತ್ಯಾಖ್ಯಾನೇ ನ ಸ್ತ ಏವ ಇತಿ ತದಾತ್ಮಕೇ ಉಚ್ಯೇತೇ । ತಾಭ್ಯಾಂ ಚ ಉಪಾಧಿಭ್ಯಾಂ ಜ್ಞಾತೃಜ್ಞೇಯಜ್ಞಾನಶಬ್ದಾರ್ಥಾದಿಸರ್ವಸಂವ್ಯವಹಾರಭಾಗ್ ಬ್ರಹ್ಮ ॥**

(ಭಾಷ್ಯಾರ್ಥ)

ಆತ್ಮನಿಗಿಂತ ಬೇರೆಯಾಗಿ ಅನಾತ್ಮವಾಗಿರುವ, ಅದಕ್ಕಿಂತ ಬೇರೆಯಾದ ದೇಶದಲ್ಲಿ ಅಥವಾ ಕಾಲದಲ್ಲಿ ಇರುವ, ಸೂಕ್ಷ್ಮವಾಗಿರುವ, ನಡುವೆ ಮರೆಯುಳ್ಳ, ದೂರವಾಗಿರುವ, ಹಿಂದಿನ, ಈಗಿನ ಅಥವಾ ಮುಂದಿನ (ಕಾಲದ) ವಸ್ತು ಇರುವದೇ ಇಲ್ಲ. ಆದ್ದರಿಂದ ನಾಮರೂಪಗಳು (ತಮ್ಮ) ಎಲ್ಲಾ ಅವಸ್ಥೆಗಳಲ್ಲಿಯೂ ಬ್ರಹ್ಮದಿಂದಲೇ ಸ್ವರೂಪವುಳ್ಳವಾಗಿರುತ್ತವೆ[1], ಆದರೆ ಬ್ರಹ್ಮವು ಅವುಗಳ ಸ್ವರೂಪವಾಗಿರುವದಿಲ್ಲ.[2] ಅದನ್ನು ಇಲ್ಲವೆಂದರೆ ಅವೆರಡೂ ಇರುವದೇ ಇಲ್ಲವಾಗಿ[3] ಅದರ ಸ್ವರೂಪವಾಗಿಯೇ ಇರುವವೆಂದು ಹೇಳಲಾಗಿದೆ. ಆ (ಎರಡು) ಉಪಾಧಿಗಳಿಂದ ಬ್ರಹ್ಮವು ಜ್ಞಾತೃ, ಜ್ಞೇಯ, ಜ್ಞಾನ, ಶಬ್ದ, ಅರ್ಥ ಮುಂತಾದ ಎಲ್ಲಾ ವ್ಯವಹಾರಗಳನ್ನೂ ಪಡೆಯುತ್ತಿರುತ್ತದೆ.[4]

## ಬ್ರಹ್ಮವು ಸೃಷ್ಟಿಗಾಗಿ ಮಾಡುವ ತಪಸ್ಸು

(ಭಾಷ್ಯ)

೧೬೬. ನ ಆತ್ಮಾ ಏವಂಕಾಮಃ ಸನ್ ತಪಃ ಅತಪ್ಯತ । ತಪಃ ಇತಿ ಜ್ಞಾನಮುಚ್ಯತೇ । "ಯಸ್ಯ ಜ್ಞಾನಮಯಂ ತಪಃ" (ಮುಂ. ೧-೧-೯) ಇತಿ ಶ್ರುತ್ಯನ್ತರಾತ್।

---

1. ನಾಮರೂಪವಾಗಿ ತೋರುವ ಕಾಲದಲ್ಲಿಯೂ ಬ್ರಹ್ಮವೇ ; ನೀರುನೊರೆಯುಲ್ಲವಾದರೂ ನೊರೆಯು ನೀರೇ ಆಗಿರುವಂತೆ. ಐ. ಭಾ. ೧-೧, ಬೃ. ಭಾ. ೧-೪-೭, ೨-೪-೧೦ ಛಾ. ಭಾ. ೮-೧೪-೧.

2. ಬ್ರಹ್ಮವು ತಾನು ಇರುವಂತೆಯೇ ಇದ್ದು ಅವಿದ್ಯೆಯಿಂದ ನಾಮರೂಪಗಳಾಗಿ ತೋರುತ್ತಿರುವದು.

3. ನೀರನ್ನು ಬಿಟ್ಟು ನೊರೆಯಿಲ್ಲದಂತೆಯೂ ಮಣ್ಣನ್ನು ಬಿಟ್ಟು ಬೇರೆಯಾಗಿ ಮಡಕೆ ಇಲ್ಲದಂತೆಯೂ ಬ್ರಹ್ಮವನ್ನು ಬಿಟ್ಟು ನಾಮರೂಪಗಳು ಇರುವದೇ ಇಲ್ಲ. ಬೃ. ಭಾ. ೩-೫-೧.

4. ಆದರೆ ತನ್ನ ರೂಪದಿಂದ ನಿರ್ವಿಶೇಷವಾಗಿಯೇ ಇದ್ದುಕೊಂಡಿರುತ್ತದೆ.

**ಆಪ್ತಕಾಮತ್ವಾಚ್ಚ ಇತರಸ್ಯ ಅಸಂಭವ ಏವ ತಪಸಃ । ತತ್ ತಪಃ ಅತಪ್ಯತ ತಪ್ತ ವಾನ್। ಸೃಜ್ಯಮಾನಜಗದ್ರಚನಾದಿವಿಷಯಾಮ್ ಆಲೋಚನಾಮ್ ಅಕರೋದಾತ್ಮಾ ಇತ್ಯರ್ಥಃ ||**

(ಭಾಷ್ಯಾರ್ಥ)

ಆ ಆತ್ಮನು ಹೀಗೆ (ಬಹುವಾಗಬೇಕೆಂಬ) ಕಾಮವುಳ್ಳವನಾಗಿ ತಪಸ್ಸನ್ನು ತಪಿಸಿದನು. ತಪಸ್ಸು ಎಂದು ಇಲ್ಲಿ ಜ್ಞಾನವನ್ನು ಹೇಳಿದೆ. "ಯಾವಾತನ ತಪಸ್ಸು ಜ್ಞಾನಮಯವಾಗಿರುವದೋ" (ಆವನಿಂದ ನಾಮರೂಪಗಳ ಜಗತ್ತು ಉಂಟಾಗುತ್ತದೆ. ಮುಂ. ೧-೧-೯) ಎಂಬ ಬೇರೊಂದು ಶ್ರುತಿಯು ಇದಕ್ಕೆ ಪ್ರಮಾಣವು. (ಬ್ರಹ್ಮವು) ಎಲ್ಲಾ ಕಾಮಗಳನ್ನೂ ಪಡೆದುಕೊಂಡಿರುವದರಿಂದ ಬೇರೆಯ ಬಗೆಯ ತಪಸ್ಸು[1] (ಅದಕ್ಕೆ) ಹೊಂದುವಹಾಗೆಯೇ ಇಲ್ಲ.[2] ಆ ತಪಸ್ಸನ್ನು ತಪಿಸಿದನು, ತಪಸ್ಸು ಮಾಡಿದನು ; ಎಂದರೆ ಸೃಷ್ಟಿಮಾಡಬೇಕಾಗಿರುವ ಜಗತ್ತಿನ ರಚನೆಯೇ ಮುಂತಾದವುಗಳ ವಿಷಯದ ಆಲೋಚನೆಯನ್ನು[3] ಆತ್ಮನು ಮಾಡಿದನು ಎಂದರ್ಥ.

## ಬ್ರಹ್ಮವು ಜಗತ್ತನ್ನು ಸೃಷ್ಟಿಸಿದ್ದು

**ಸ ತಪಸ್ತಪ್ತ್ವಾ । ಇದಗ್ಂ ಸರ್ವಮಸೃಜತ । ಯದಿದಂ ಕಿಂಚ ||೫||**

೫. ಅವನು ತಪಸ್ಸನ್ನು ತಪಿಸಿದ ಬಳಿಕ ಇದೆಲ್ಲವನ್ನೂ ಏನೇನಿದೆಯೋ (ಇದೆಲ್ಲವನ್ನೂ) ಸೃಷ್ಟಿಸಿದನು.

(ಭಾಷ್ಯ)

೧೬೭. ಸಃ **ಏವಮ್ ಆಲೋಚ್ಯ** ತಪಃ ತಪ್ತ್ವಾ **ಪ್ರಾಣಿಕರ್ಮಾದಿ** ನಿಮಿತ್ತಾನುರೂಪಂ ಇದಂ ಸರ್ವಂ ಜಗತ್ ದೇಶತಃ ಕಾಲತಃ ನಾಮ್ನಾರೂಪೇಣ ಚ ಯಥಾನುಭವಂ ಸರ್ವೈಃ ಪ್ರಾಣಿಭಿಃ ಸರ್ವಾವಸ್ಥೈಃ ಅನುಭೂಯಮಾನಮ್ ಅಸೃಜತ ಸೃಷ್ಟವಾನ್ ಯದಿದಂ ಕಿಂ ಚ । ಯತ್ಕಿಂಚ ಇದಮ್ ಅವಿಶಿಷ್ಟಮ್ ||

---

1. ಕೃಚ್ಛ್ರ, ಚಾಂದ್ರಾಯಣ ಮುಂತಾದ ತಪಸ್ಸನ್ನು ಮಾಡುವವರು ಹೊಸದಾಗಿ ಪಡೆದುಕೊಳ್ಳಬೇಕಾದ ಕಾಮಗಳಿರುವವು.

2. ಅದಕ್ಕೆ ಬಯಕೆಯಿಲ್ಲ, ತನಗಿಂತ ಬೇರೆಯಾಗಿರುವ ಕಾಮಗಳೂ ಇರುವದಿಲ್ಲ.

3. ಆಲೋಚನೆಯನ್ನು ಮಾಡಿತು ಎಂದದ್ದರಿಂದ ಬ್ರಹ್ಮವು ಜಡವಲ್ಲವೆಂದು ಹೇಳಿದಂತೆ ಆಯಿತು. ಸೂ. ಭಾ. ೧-೧-೫, ಹೀಗೆಯೇ ಪ್ರತಿಯೊಂದು ಉಪನಿಷತ್ತಿನಲ್ಲಿಯೂ ಆಲೋಚನಾ ಪೂರ್ವಕವಾಗಿಯೇ ಬ್ರಹ್ಮವು ಸೃಷ್ಟಿಸಿತು ಎಂದು ಹೇಳಿದೆ.

(ಭಾಷ್ಯಾರ್ಥ)

ಅವನು ತಪಸ್ಸನ್ನು ಮಾಡಿ ಎಂದರೆ ಹೀಗೆ ಆಲೋಚಿಸಿಕೊಂಡು[1] ಪ್ರಾಣಿಗಳ ಕರ್ಮವೇ ಮುಂತಾದ ನಿಮಿತ್ತಕ್ಕೆ ತಕ್ಕಂತೆ ಇದೆಲ್ಲವನ್ನೂ ಎಂದರೆ ದೇಶದಿಂದ, ಕಾಲ ದಿಂದ, ನಾಮದಿಂದ, ಮತ್ತು ರೂಪದಿಂದ ಅನುಭವದಲ್ಲಿರುವಂಥ (ಈ) ಜಗತ್ತನ್ನು, ಎಲ್ಲಾ ಪ್ರಾಣಿಗಳೂ ತಮ್ಮ (ಬೇರೆ ಬೇರೆಯ) ಅವಸ್ಥೆಗಳಲ್ಲೆಲ್ಲ ಅನುಭವಿಸುತ್ತಿರುವ ಇದೆಲ್ಲವನ್ನೂ ಇಂಥದ್ದೆಂಬ ನಿಯಮವೇನೂ ಇಲ್ಲದೆ (ಎಲ್ಲವನ್ನೂ) ಸೃಷ್ಟಿಸಿದನು, ಸೃಷ್ಟಿಮಾಡಿದವನಾದನು.[2]

# ೧೦. ಬ್ರಹ್ಮವು ಜೀವರೂಪದಿಂದ ಸೃಷ್ಟಿಯಲ್ಲಿ ಹೊಕ್ಕಿರುವದರಿಂದ ಇದೆ

**ತತ್ ಸೃಷ್ಟ್ವಾ । ತದೇವಾನುಪ್ರಾವಿಶತ್ ॥ ೬ ॥**

೬. ಅದನ್ನು ಸೃಷ್ಟಿಸಿ ಅದನ್ನೇ ಅನುಪ್ರವೇಶಮಾಡಿದನು.

(ಭಾಷ್ಯ)

೧೬೮. ತತ್ ಇದಂ ಜಗತ್ ಸೃಷ್ಟ್ವಾ ಕಿಮಕರೋತ್ ಇತಿ? ಉಚ್ಯತೇ ತದೇವ ಸೃಷ್ಟಂ ಜಗತ್ ಅನುಪ್ರಾವಿಶತ್ ಇತಿ ॥

(ಭಾಷ್ಯಾರ್ಥ)

ಅದನ್ನು ಎಂದರೆ ಈ ಜಗತ್ತನ್ನು ಸೃಷ್ಟಿಸಿ ಏನು ಮಾಡಿದನು? ಎಂದರೆ (ಶ್ರುತಿ) ಹೇಳುತ್ತದೆ. ಅದನ್ನೇ ಸೃಷ್ಟಿಸಿದ ಜಗತ್ತನ್ನೇ ಅನುಪ್ರವೇಶಮಾಡಿದನು.

## ಪ್ರವೇಶಶ್ರುತಿಯ ವಿಷಯಕ್ಕೆ ಆಕ್ಷೇಪ

(ಭಾಷ್ಯ)

೧೬೯. ತತ್ರ ಏತಚ್ಚಿನ್ತ್ಯಮ್ ಕಥಮ್ ಅನುಪ್ರಾವಿಶತ್ ಇತಿ । ಕಿಂ ಯಃ ಸ್ರಷ್ಟಾ ಸ ತೇನೈವಾತ್ಮನಾ ಅನುಪ್ರಾವಿಶತ್ ಉತ ಅನ್ಯೇನ ಇತಿ? ಕಿಂ ತಾವತ್

---

1. ತಪಃ ತಪ್ತ್ವಾ ಏವಮ್ ಆಲೋಚ್ಯ ಎಂದು ಕ್ರಮವನ್ನು ಇಟ್ಟುಕೊಳ್ಳಬೇಕು.

2. ಸೃಷ್ಟಿಸಿರುವದರಿಂದ ಬ್ರಹ್ಮವು ಇದೆ ಎಂದು ಅಭಿಪ್ರಾಯ. ಬ್ರಹ್ಮವು ಬಹುವಾಗು ವನೆಂದು ಕಾಮಿಸಿದ್ದು, ಜಗತ್ತಿನ ವಿಷಯವಾಗಿ ಆಲೋಚಿಸಿದ್ದು, ಅದನ್ನು ಸೃಷ್ಟಿಸಿದ್ದು-ಇದ ಲ್ಲವೂ ಜಗತ್ಕಾರಣವು ಸತ್ಯವಾಗಿದ್ದರೆ ಮಾತ್ರ ಸಂಭವಿಸುತ್ತದೆ. ಜಗತ್ಕಾರಣವಾಗಿರುವ ಬ್ರಹ್ಮವು ಚೇತನವಾಗಿರುವದರಿಂದ ಅದು ಇದೆ ಎಂದು ತಿಳಿಯಬೇಕು ಎಂಬುದು ಒಟ್ಟರ್ಥ.

ಯುಕ್ತಮ್ ? ಕ್ತ್ವಾಪ್ರತ್ಯಯಶ್ರವಣಾತ್ ಯಃ ಸ್ರಷ್ಟಾ ಸ ಏವಾನುಪ್ರಾವಿಶತ್ ಇತಿ । ನನು ನ ಯುಕ್ತಮ್ । ಮೃದ್ವಚ್ಚೇತ್ ಕಾರಣಂ ಬ್ರಹ್ಮ ತದಾತ್ಮಕತ್ವಾತ್ ಕಾರ್ಯಸ್ಯ । ಕಾರಣಮೇವ ಹಿ ಕಾರ್ಯಾತ್ಮನಾ ಪರಿಣತಮ್ ಇತ್ಯತಃ ಅಪ್ರವಿಷ್ಟಸ್ಯೇವ ಕಾರ್ಯೋತ್ಪತ್ತೇರೂರ್ಧ್ವಂ ಪೃಥಕ್ ಕಾರಣಸ್ಯ ಪುನಃ ಪ್ರವೇಶೋಽನುಪಪನ್ನಃ । ನ ಹಿ ಘಟಪರಿಣಾಮವ್ಯತಿರೇಕೇಣ ಮೃದೋ ಘಟೇ ಪ್ರವೇಶೋಽಸ್ತಿ ॥

(ಭಾಷ್ಯಾರ್ಥ)

ಇಲ್ಲಿ ಇದನ್ನು ವಿಚಾರಮಾಡಬೇಕಾಗಿದೆ: (ಅವನು) ಹೇಗೆ ಅನುಪ್ರವೇಶ ಮಾಡಿದನು? ಯಾವನು ಸೃಷ್ಟಿಸಿದನೋ ಅವನು ಅದೇ ರೂಪದಿಂದ ಪ್ರವೇಶಮಾಡಿದನೆ, ಅಥವಾ ಮತ್ತೊಂದು ರೂಪದಿಂದ ಪ್ರವೇಶಮಾಡಿದನೆ?

ಇಲ್ಲಿ ಯಾವ (ಪಕ್ಷವು) ಯುಕ್ತವೆಂದು ಮೊದಲು ತೋರುತ್ತದೆ? ಎಂದರೆ ಕ್ತ್ವಾಪ್ರತ್ಯಯವು[1] ಶ್ರುತಿಯಲ್ಲಿರುವದರಿಂದ ಯಾವನು ಸೃಷ್ಟಿಸಿದನೋ ಅವನೇ ಪ್ರವೇಶಮಾಡಿದನು ಎಂಬುದು (ಸರಿ).

(ಆಕ್ಷೇಪ):—ಇದು ಯುಕ್ತವಲ್ಲ. ಏಕೆಂದರೆ ಮಣ್ಣಿನಂತೆ ಬ್ರಹ್ಮವು ಕಾರಣವಾದರೆ ಕಾರ್ಯವು ಅದರ ರೂಪವಾಗಿಯೇ ಇರುತ್ತದೆ. ಕಾರಣವೇ ಕಾರ್ಯರೂಪವಾಗಿ ಪರಿಣಮಿಸಿರುತ್ತದೆಯಾದ್ದರಿಂದ ಅದು ಮೊದಲು ಪ್ರವೇಶಿಸಿರಲಿಲ್ಲವೋ ಎಂಬಂತೆ ಕಾರ್ಯವು ಹುಟ್ಟಿದಮೇಲೆ ಬೇರೆಯಾಗಿ ಕಾರಣವು ಮತ್ತೆ ಪ್ರವೇಶಮಾಡಿತೆನ್ನುವದು ಹೊಂದಲಾರದು. ಗಡಿಗೆಯಾಗಿ ಪರಿಣಮಿಸುವದಲ್ಲದೆ ಮಣ್ಣು ಗಡಿಗೆಯಲ್ಲಿ ಬೇರೆಯಾಗಿ ಪ್ರವೇಶಿಸುವದೆಂಬುದು ಇಲ್ಲವಷ್ಟೆ?

(ಭಾಷ್ಯ)

೧೭೦. ಯಥಾ ಘಟೇ ಚೂರ್ಣಾತ್ಮನಾ ಮೃದೋಽನುಪ್ರವೇಶಃ ಏವಮ್ ಅನ್ಯೇನ ಆತ್ಮನಾ ನಾಮರೂಪಕಾರ್ಯೇ ಅನುಪ್ರವೇಶ ಆತ್ಮನಃ ಇತಿ ಚೇತ್ । ಶ್ರುತ್ಯನ್ತರಾಚ್ಚ "ಅನೇನ ಜೀವೇನಾತ್ಮನಾನುಪ್ರವಿಶ್ಯ" (ಛಾ. ೬-೩-೨) ಇತಿ । ನೈವಂ ಯುಕ್ತಮ್ । ಏಕತ್ವಾತ್ ಬ್ರಹ್ಮಣಃ । ಮೃದಾತ್ಮನಸ್ತು ಅನೇಕತ್ವಾತ್ ಸಾವಯವತ್ವಾಚ್ಚ ಯುಕ್ತೋ ಘಟೇ ಮೃದಶ್ಚೂರ್ಣಾತ್ಮನಾ ಅನುಪ್ರವೇಶಃ ।

---

1. "ಸೃಷ್ಟ್ವಾ" (ಸೃಷ್ಟಿಸಿ) ಎಂಬಲ್ಲಿರುವ ಭೂತಕೃದಂತಪ್ರತ್ಯಯಕ್ಕೆ ಕ್ತ್ವಾಪ್ರತ್ಯಯವೆಂದು ಹೆಸರು. ಇದು ಸೃಷ್ಟಿ, ಪ್ರವೇಶ–ಎಂಬೆರಡು ಕ್ರಿಯೆಗಳಿಗೂ ಒಬ್ಬನೇ ಕರ್ತೃವೆಂದು ಹೇಳುವದು.

ಮೃದಶ್ಚೂರ್ಣಸ್ಯ ಅಪ್ರವಿಷ್ಟದೇಶತ್ವಾಚ್ಚ । ನ ತು ಆತ್ಮನ ಏಕತ್ವೇ ಸತಿ ನಿರವಯತ್ವಾತ್, ಅಪ್ರವಿಷ್ಟದೇಶಾಭಾವಾಚ್ಚ ಪ್ರವೇಶ ಉಪಪದ್ಯತೇ ॥

(ಭಾಷ್ಯಾರ್ಥ)

(ಒಂದು ಸಮಾಧಾನ) :—ಮಣ್ಣು ಹುಡಿಯ ರೂಪದಿಂದ ಹೇಗೆ ಗಡಿಗೆಯೊಳಕ್ಕೆ ಪ್ರವೇಶಿಸಬಹುದೋ, ಹಾಗೆಯೇ ಆತ್ಮನು ಮತ್ತೊಂದು ರೂಪದಿಂದ ನಾಮರೂಪಗಳೆಂಬ ಕಾರ್ಯದಲ್ಲಿ ಪ್ರವೇಶಿಸಿರುತ್ತಾನೆ. ಇದಕ್ಕೆ ಬೇರೊಂದು ಶ್ರುತಿಯಲ್ಲಿ "ಈ ಜೀವನ ರೂಪದಿಂದ ಒಳಹೊಕ್ಕು (ನಾಮರೂಪಗಳನ್ನು ವಿಂಗಡಿಸುವೆನು)" (ಛಾ. ೬-೩-೨) ಎಂದು ಹೇಳಿರುವದೂ ಪ್ರಮಾಣವಾಗಿರುತ್ತದೆ.[1]

(ಆಕ್ಷೇಪ) :—ಹೀಗಾದರೆ ಯುಕ್ತವಾಗುವದಿಲ್ಲ. ಏಕೆಂದರೆ ಬ್ರಹ್ಮವು ಒಂದೇ (ಆಗಿರುತ್ತದೆ). ಮಣ್ಣಿನರೂಪದ (ಕಾರಣ)ವಾದರೋ ಅನೇಕವಾಗಿರುವದರಿಂದಲೂ ಅವಯವಗಳಿಂದ ಕೂಡಿರುವದರಿಂದಲೂ ಮಣ್ಣು ಗಡಿಗೆಯಲ್ಲಿ ಹುಡಿಯ ರೂಪದಿಂದ ಪ್ರವೇಶಮಾಡುವದೆಂಬುದು ಸರಿಯಾಗುತ್ತದೆ. ಮಣ್ಣಿನ ಹುಡಿಯು ಪ್ರವೇಶಮಾಡದೆ ಇರುವ ಸ್ಥಲವು ಇರುವದರಿಂದಲೂ (ಇದು ಸರಿಯಾಗುತ್ತದೆ). ಆದರೆ ಆತ್ಮನು ಒಬ್ಬನೇ ಆಗಿ ಯಾವ ಅವಯವಗಳೂ ಇಲ್ಲದವನಾಗಿರುವದರಿಂದಲೂ (ಅವನು) ಪ್ರವೇಶಮಾಡದ ಇರುವ ಸ್ಥಲವು ಇಲ್ಲದಿರುವದರಿಂದಲೂ (ಅವನು ಪ್ರಪಂಚವನ್ನು) ಪ್ರವೇಶಿಸುವನೆಂಬುದು ಹೊಂದುವದಿಲ್ಲ.

(ಭಾಷ್ಯ)

೧೭೧. ಕಥಂ ತರ್ಹಿ ಪ್ರವೇಶಃ ಸ್ಯಾತ್ ? ಯುಕ್ತಶ್ಚ ಪ್ರವೇಶಃ । ಶ್ರುತತ್ವಾತ್ "ತದೇವಾನುಪ್ರಾವಿಶತ್" ಇತಿ । ಸಾವಯವಮೇವಾಸ್ತು ತರ್ಹಿ । ಸಾವಯವತ್ವಾತ್ ಮುಖೇ ಹಸ್ತಪ್ರವೇಶವತ್ ನಾಮರೂಪಕಾರ್ಯೇ ಜೀವಾತ್ಮನಾ ಅನುಪ್ರವೇಶೋ ಯುಕ್ತ ಏವ ಇತಿ ಚೇತ್ । ನ ಅಶೂನ್ಯದೇಶತ್ವಾತ್[2] । ನ ಹಿ ಕಾರ್ಯಾತ್ಮನಾ ಪರಿಣತಸ್ಯ ನಾಮರೂಪಕಾರ್ಯದೇಶವ್ಯತಿರೇಕೇಣ ಆತ್ಮಶೂನ್ಯಃ ಪ್ರದೇಶೋಽಸ್ತಿ ಯಂ ಪ್ರವಿಶೇತ್ ಜೀವಾತ್ಮನಾ । ಕಾರಣಮೇವ ಚೇತ್ ಪ್ರವಿಶೇತ್ ಜೀವಾತ್ಮತ್ವಂ ಜಹ್ಯಾತ್ । ಯಥಾ ಘಟೋ ಮೃತ್ಪ್ರವೇಶೇ ಘಟತ್ವಂ

1 ಬ್ರಹ್ಮವು ಜೀವರೂಪದಿಂದ ಮಾರ್ಪಟ್ಟು ಶರೀರದೊಳಗೆ ಹೊಕ್ಕಿರುವದೆಂದೂ ಧ್ಯಾನಾದಿಗಳಿಂದ ಮತ್ತೆ ಬ್ರಹ್ಮಭಾವವನ್ನು ಹೊಂದುವದೆಂದೂ ಹೇಳುವ ವಾದಿಗಳ ಮತವಿದು ಇದನ್ನು ಸೂ. ಭಾ. ೧-೧-೩೨, ಗೀ ಭಾ. ೧೩-೨, ಮಾಂ ಭಾ. ೩-೧ ಇವುಗಳಲ್ಲಿ ಖಂಡಿಸಿದೆ.

2. "ಅಶೂನ್ಯತ್ವಾತ್" ಎಂಬ ಆ॥ ಪಾಠಕ್ಕಿಂತ ಈ ವಾ॥ ಪಾಠವು ಉತ್ತಮ.

ಜಹಾತಿ । "ತದೇವಾನುಪ್ರಾವಿಶತ್" ಇತಿ ಚ ಶ್ರುತೇರ್ನ ಕಾರಣಾನುಪ್ರವೇಶೋ ಯುಕ್ತಃ ॥

(ಭಾಷ್ಯಾರ್ಥ)

(ಪ್ರಶ್ನೆ) :—ಹಾಗಾದರೆ ಪ್ರವೇಶವು ಹೇಗೆ ಆಗಬೇಕು? ಪ್ರವೇಶವು (ಆಯಿತೆಂಬುದು) ಯುಕ್ತವಾಗಿರುತ್ತದೆ; ಏಕೆಂದರೆ "ಅದನ್ನೇ ಅನುಪ್ರವೇಶಮಾಡಿದನು" ಎಂದು ಶ್ರುತಿಯಲ್ಲಿ ಹೇಳಿರುತ್ತದೆ.

(ಒಂದು ಸಮಾಧಾನ):- ಹಾಗಾದರೆ (ಬ್ರಹ್ಮವು) ಸಾವಯವವೆಂದೇ ಆಗಲಿ. ಸಾವಯವವಾಗಿರುವದರಿಂದ ಬಾಯಿಯಲ್ಲಿ ಕೈಯು ಪ್ರವೇಶಿಸುವಂತೆ ನಾಮರೂಪಗಳೆಂಬ ಕಾರ್ಯದೊಳಕ್ಕೆ (ಬ್ರಹ್ಮವು) ಜೀವರೂಪದಿಂದ ಒಳಹೊಕ್ಕಿತೆಂಬುದು ಯುಕ್ತವೇ ಆಗುತ್ತದೆಯಲ್ಲವೆ? [1]

(ಆಕ್ಷೇಪ) :—ಹಾಗಲ್ಲ. ಏಕೆಂದರೆ ಅದಿಲ್ಲದ ಸ್ಥಲವೇ ಇಲ್ಲ. ಕಾರ್ಯರೂಪವಾಗಿ ಪರಿಣಮಿಸಿರುವ (ಬ್ರಹ್ಮಕ್ಕೆ) ನಾಮರೂಪಗಳೆಂಬ ಕಾರ್ಯವಿರುವ ಸ್ಥಲವನ್ನು ಬಿಟ್ಟರೆ ಬೇರೆಯಾಗಿ ತಾನಿಲ್ಲದ ಪ್ರದೇಶವೇ ಇರುವದಿಲ್ಲ.[2] ಹಾಗಿದ್ದಿದ್ದರೆ (ಅದನ್ನು) ಜೀವರೂಪದಿಂದ ಪ್ರವೇಶಮಾಡಬಹುದಾಗಿತ್ತು. "ಕಾರಣವನ್ನೇ ಪ್ರವೇಶಿಸಲಿ" ಎಂದರೆ ಜೀವರೂಪವನ್ನು ಬಿಟ್ಟುಬಿಡಬೇಕಾಗುವದು. ಹೇಗೆ ಗಡಿಗೆಯು ಮಣ್ಣನ್ನು ಹೊಕ್ಕರೆ (ತನ್ನ) ಘಟತ್ವವನ್ನು ಬಿಟ್ಟುಬಿಡುತ್ತದೆಯೋ ಹಾಗೆ. ಇದಲ್ಲದೆ "ಅ (ಕಾರ್ಯವನ್ನೇ) ಅನುಪ್ರವೇಶಮಾಡಿದನು" ಎಂದು ಶ್ರುತಿ ಹೇಳುತ್ತಿರುವದರಿಂದ ಕಾರಣವನ್ನು ಪ್ರವೇಶಿಸುವದೆಂಬುದೂ ಹೊಂದುವದಿಲ್ಲ.

(ಭಾಷ್ಯ)

೧೭೨. ಕಾರ್ಯಾನ್ತರಮೇವ ಸ್ಯಾತ್ ಇತಿ ಚೇತ್ । "ತದೇವಾನುಪ್ರಾವಿಶತ್" ಇತಿ ಜೀವಾತ್ಮರೂಪಂ ಕಾರ್ಯಂ ನಾಮರೂಪಪರಿಣತಂ ಕಾರ್ಯಾನ್ತರಮೇವ ಆಪದ್ಯತೇ ಇತಿ ಚೇತ್ । ನ । ವಿರೋಧಾತ್ । ನ ಹಿ ಘಟೋ ಘಟಾನ್ತರಮಾಪದ್ಯತೇ । ವ್ಯತಿರೇಕಶ್ರುತಿವಿರೋಧಾಚ್ಚ । ಜೀವಸ್ಯ ನಾಮರೂಪಕಾರ್ಯವ್ಯತಿರೇಕವಾದಿನ್ಯಃ[3] ಶ್ರುತಯೋ ವಿರುಧ್ಯೇರನ್ । ತದಾಪತ್ತೌ ಮೋಕ್ಷಾಸಂಭಾವಾಚ್ಚ ।

1. ಪ್ರವೇಶಕ್ಕೆ ಸಾವಯವತ್ವವು ಆವಶ್ಯವಾಗಿರುವದರಿಂದ ಶ್ರುತಿಪ್ರಾಮಾಣ್ಯದಿಂದ ಬ್ರಹ್ಮವು ಸಾವಯವವೆಂದೂ ಜೀವರೂಪದಿಂದಲೂ ನಾಮರೂಪಗಳ ರೂಪದಿಂದಲೂ ಪರಿಣಮಿಸುತ್ತದೆ ಎಂದೂ ಕಲ್ಪಿಸೋಣ ಎಂದು ಬ್ರಹ್ಮಪರಿಣಾಮವಾದಿಯೊಬ್ಬನು ಈ ಸಮಾಧಾನವನ್ನು ತೆಗೆದಿರುತ್ತಾನೆ.

2. ಹಾಗಿದ್ದರೆ ಹೊರಗಿನಿಂದ ನಾಮರೂಪಗಳೊಳಕ್ಕೆ ಹೊಕ್ಕಿತೆಂದು ಕಲ್ಪಿಸಬಹುದಾಗಿತ್ತು.

3. "ಅನುವಾದಿನ್ಯಃ" ಎಂಬ ಪಾಠದಲ್ಲಿ 'ಅನು' ಹೆಚ್ಚು.

ನ ಹಿ ಯತೋ ಮುಚ್ಯಮಾನಃ ತದೇವಾಪದ್ಯತೇ । ನ ಹಿ ಶೃಙ್ಖಲಾಪತ್ತಿರ್ಬದ್ಧಸ್ಯ ತಸ್ಕರಾದೇಃ ॥

(ಭಾಷ್ಯಾರ್ಥ)

(ಮತ್ತೊಂದು ಸಮಾಧಾನ) :—ಮತ್ತೊಂದು ಕಾರ್ಯವನ್ನೇ (ಹೊಕ್ಕನು) ಎಂದಾಗಲಿ ! "ಅದನ್ನೇ ಪ್ರವೇಶಿಸಿದನು" ಎಂದರೆ ಜೀವಾತ್ಮರೂಪವಾದ ಕಾರ್ಯವು ನಾಮರೂಪಗಳಾಗಿ ಪರಿಣಮಿಸಿ ಮತ್ತೊಂದು ಕಾರ್ಯವಾಗುತ್ತದೆ (ಎಂದರ್ಥ).[1]

(ಆಕ್ಷೇಪ) :—ಹಾಗಲ್ಲ. ಏಕೆಂದರೆ ವಿರೋಧವಾಗುತ್ತದೆ. ಗಡಿಗೆಯು ಮತ್ತೊಂದು ಗಡಿಗೆಯಾಗುವದಿಲ್ಲವಷ್ಟೆ ? (ಬೇರೆ ಎಂದು ಹೇಳುವ ಶ್ರುತಿಗಳಿಗೆ) ವಿರೋಧವಾಗುವದರಿಂದಲೂ (ಈ ಪಕ್ಷವು ಸರಿಯಲ್ಲ). ಜೀವನು ನಾಮರೂಪಗಳೆಂಬ ಕಾರ್ಯಕ್ಕಿಂತಲೂ ಬೇರೆ ಎಂದು ಹೇಳುವ ಶ್ರುತಿಗಳು[2] (ಈ ಪಕ್ಷಕ್ಕೆ) ವಿರುದ್ಧವಾಗುವವು. ಆ (ನಾಮರೂಪಗಳೇ) ಆದರೆ ಮೋಕ್ಷವು ಆಗಲೇ ಆರದಾದ್ದರಿಂದಲೂ (ಈ ಪಕ್ಷವು ಸರಿಯಲ್ಲ). ಯಾವದರಿಂದ (ಯಾವನು) ಬಿಡುಗಡೆಯಾಗಬೇಕಾಗಿರುವದೋ (ಅವನು) ಅದೇ ಆಗುವದಿಲ್ಲ ; ಕಟ್ಟುಬಿದ್ದಿರುವ ಕಳ್ಳನೇ ಮುಂತಾದವರು (ತಾವು ಕಟ್ಟುಬಿದ್ದಿರುವ) ಸರಪಳಿಯಾಗುವದಿಲ್ಲವಷ್ಟೆ ?

(ಭಾಷ್ಯ)

೧೭೩. ಬಾಹ್ಯಾನ್ತರ್ಭೇದೇನ ಪರಿಣತಮ್ ಇತಿ ಚೇತ್ । ತದೇವ ಕಾರಣಂ ಬ್ರಹ್ಮ ಶರೀರಾದ್ಯಾಧಾರತ್ವೇನ ತದನ್ತರ್ಜೀವಾತ್ಮನಾ ಆಧೇಯತ್ವೇನ ಚ ಪರಿಣತಮ್ ಇತಿ ಚೇತ್ । ನ । ಬಹಿಷ್ಠಸ್ಯ ಪ್ರವೇಶೋಪಪತ್ತೇಃ । ನ ಹಿ ಯೋ ಯಸ್ಯ ಅನ್ತಃಸ್ಥಃ । ಸ ಏವ ತತ್ ಪ್ರವಿಷ್ಟ ಉಚ್ಯತೇ । ಬಹಿಷ್ಠಸ್ಯ ಅನುಪ್ರವೇಶಃ ಸ್ಯಾತ್ । ಪ್ರವೇಶಶಬ್ದಾರ್ಥಸ್ಯ ಏವಂ ದೃಷ್ಟತ್ವಾತ್ । ಯಥಾ ಗೃಹಂ ಕೃತ್ವಾ ಪ್ರಾವಿಶತ್ ಇತಿ ॥

---

1. ಜೀವ, ನಾಮರೂಪ-ಎಂಬ ಎರಡು ಅಂಗಗಳುಳ್ಳ ಕಾರ್ಯವಾಗಿ ಬ್ರಹ್ಮವು ಪರಿಣಮಿಸುತ್ತದೆ ಎಂಬ ಪಕ್ಷವನ್ನು ಬಿಟ್ಟು ಪರಿಣಾಮವಾದಿಯು ಬ್ರಹ್ಮವು ಮೊದಲು ಜೀವನಾಗುತ್ತದೆ, ಆಮೇಲೆ ಜೀವನು ನಾಮರೂಪವಾಗಿ ಪರಿಣಮಿಸುತ್ತಾನೆ ಎಂಬ ವಾದವನ್ನು ಈಗ ಒಡ್ಡಿರುತ್ತಾನೆ. ಚೇತನನಾದ ಜೀವನು ಅಚೇತನವಾಗುವದು ಅಸಂಭವವೆಂಬ ದೋಷವು ಈ ವಾದದಲ್ಲಿ ಸ್ಪಷ್ಟ.

2. "ಜೀವರೂಪದಿಂದ ನಾಮರೂಪಗಳನ್ನು ವಿಂಗಡಿಸುವೆನು" (ಛಾ) ಮುಂತಾದ ಶ್ರುತಿಗಳು.

(ಭಾಷ್ಯಾರ್ಥ)

(ಮತ್ತೊಂದು ಸಮಾಧಾನ) :—ಹೊರಗೆ, ಒಳಗೆ–ಎಂದು ಬೇರೆ ಬೇರೆಯಾಗಿ (ಎರಡು ವಿಧದಿಂದ ಬ್ರಹ್ಮವು) ಪರಿಣಮಿಸಿರುವದು (ಎನ್ನೋಣ). ಆದೇ ಕಾರಣವಾದ ಬ್ರಹ್ಮವು ಶರೀರವೇ ಮುಂತಾದ ಆಧಾರವಾಗಿಯೂ ಅದರೊಳಗಿನ ಜೀವರೂಪದಿಂದ ಆಧೇಯವಾಗಿಯೂ ಪರಿಣಮಿಸಿರುತ್ತದೆ (ಎನ್ನಬಹುದಲ್ಲ) !

(ಆಕ್ಷೇಪ) :—ಹಾಗಲ್ಲ. ಏಕೆಂದರೆ ಹೊರಗೆ ಇರುವವನಿಗೆ (ಮಾತ್ರ) ಪ್ರವೇಶವೆಂಬುದು ಹೊಂದುತ್ತದೆ. ಯಾವನು ಯಾವದರ ಒಳಗೆ ಇರುತ್ತಾನೋ ಅವನೇ ಅದನ್ನು ಪ್ರವೇಶಿಸಿದನು ಎಂದು (ಯಾರೂ) ಹೇಳುವದಿಲ್ಲ. ಹೊರಗೆ ಇರುವವನಿಗೆ (ಮಾತ್ರ) ಒಳಹೊಗುವದೆಂಬುದು ಆದೀತು. ಏಕೆಂದರೆ ಪ್ರವೇಶ (ಒಳಹೊಗುವದು) ಎಂಬ ಶಬ್ದಕ್ಕೆ ಅರ್ಥವು ಹೀಗೆಯೇ ಇರುವದು ಕಂಡುಬಂದಿರುತ್ತದೆ. ಉದಾಹರಣೆಗೆ " ಮನೆಯನ್ನು ಮಾಡಿಕೊಂಡು ಪ್ರವೇಶಿಸಿದನು " ಎಂಬಲ್ಲಿ (ಹೀಗೆ ಅರ್ಥವಿರುತ್ತದೆ).

(ಭಾಷ್ಯ)

೧೭೪. ಜಲಸೂರ್ಯಕಾದಿಪ್ರತಿಬಿಮ್ಬವತ್ ಪ್ರವೇಶಃ ಸ್ಯಾತ್ ಇತಿ ಚೇತ್ । ನ । ಅಪರಿಚ್ಛಿನ್ನತ್ವಾತ್, ಅಮೂರ್ತತ್ವಾಚ್ಚ । ಪರಿಚ್ಛಿನ್ನಸ್ಯ ಮೂರ್ತಸ್ಯ ಅನ್ಯಸ್ಯ ಅನ್ಯತ್ರ ಪ್ರಸಾದಸ್ವಭಾವಕೇ ಜಲಾದೌ ಸೂರ್ಯಕಾದಿಪ್ರತಿಬಿಮ್ಬೋದಯಃ ಸ್ಯಾತ್ । ನ ತ್ವಾತ್ಮನಃ । ಅಮೂರ್ತತ್ವಾತ್ । ಆಕಾಶಾದಿಕಾರಣಸ್ಯ ಆತ್ಮನಃ ವ್ಯಾಪಕತ್ವಾತ್ ತದ್ವಿಪ್ರಕೃಷ್ಟದೇಶಪ್ರತಿಬಿಮ್ಬಾಧಾರವಸ್ತ್ವನ್ತರಾಭಾವಾಚ್ಚ ಪ್ರತಿಬಿಮ್ಬವತ್ ಪ್ರವೇಶೋ ನ ಯುಕ್ತಃ ॥

(ಭಾಷ್ಯಾರ್ಥ)

(ಇನ್ನೊಂದು ಸಮಾಧಾನ) :—(ಈ) ಪ್ರವೇಶವು ನೀರಿನಲ್ಲಿ (ಕಾಣುವ) ಸೂರ್ಯನ ಪ್ರತಿಬಿಂಬವೇ ಮುಂತಾದವುಗಳಂತೆ ಇರಬಹುದಲ್ಲ!

(ಆಕ್ಷೇಪ) :—ಹಾಗಲ್ಲ. ಏಕೆಂದರೆ (ಬ್ರಹ್ಮವು) ಪರಿಚ್ಛಿನ್ನವಾಗಿರುವದಲ್ಲ ; ಮೂರ್ತ(ದ್ರವ್ಯವೂ) ಅಲ್ಲ. ಪರಿಚ್ಛಿನ್ನವಾಗಿ ಮೂರ್ತವಾಗಿರುವ ಒಂದು ವಸ್ತುವಿಗೆ ನಿರ್ಮಲಸ್ವಭಾವವುಳ್ಳ ಮತ್ತೊಂದು (ವಸ್ತು)ವಾದ ನೀರೇ ಮುಂತಾದ್ದರಲ್ಲಿ ಸೂರ್ಯನ ಪ್ರತಿಬಿಂಬವೇ ಮುಂತಾದ್ದರಂತೆ ಪ್ರತಿಬಿಂಬವು ಮೂಡಿಕೊಳ್ಳಬಹುದು. ಆದರೆ ಆತ್ಮನಿಗೆ (ಪ್ರತಿಬಿಂಬ)ವುಂಟಾಗಲಾರದು ; ಏಕೆಂದರೆ (ಅವನು) ಮೂರ್ತನಲ್ಲ.

ಆಕಾಶವೇ ಮುಂತಾದವುಗಳಿಗೂ ಕಾರಣವಾಗಿರುವ ಆತ್ಮನು ವ್ಯಾಪಕನಾಗಿರುವದ ರಿಂದಲೂ ಅವನಿಗಿಂತ ದೂರಪ್ರದೇಶದಲ್ಲಿ ಪ್ರತಿಬಿಂಬಕ್ಕೆ ಆಧಾರವಾಗಿರುವ (ನೀರಿನಂಥ) ವಸ್ತು ಮತ್ತೊಂದು ಇಲ್ಲದ್ದರಿಂದಲೂ ಪ್ರತಿಬಿಂಬದಂತೆ ಪ್ರವೇಶವೆಂಬುದು ಸರಿಯಾ ಗುವದಿಲ್ಲ.

## ಪ್ರವೇಶಶ್ರುತಿಯ ನಿಜವಾದ ಅರ್ಥ

(ಭಾಷ್ಯ)

೧೭೫. ಏವಂ ತರ್ಹಿ ನೈವಾಸ್ತಿ ಪ್ರವೇಶಃ । ನ ಚ ಗತ್ಯನ್ತರಮ್ ಉಪ ಲಭಾಮಹೇ "ತದೇವಾನುಪ್ರಾವಿಶತ್" ಇತಿ [1] ಶ್ರುತೇಃ । ಶ್ರುತಿಶ್ಚ ನೋಽತ ತೀನ್ದ್ರಿಯವಿಷಯೇ ವಿಜ್ಞಾನೋತ್ಪತ್ತೌ ನಿಮಿತ್ತಮ್ । ನ ಚ ಅಸ್ಮಾದ್ ವಾಕ್ಯಾತ್ ಯತ್ನವತಾಮಪಿ ವಿಜ್ಞಾನಮ್ ಉತ್ಪದ್ಯತೇ । ಹನ್ತ ತರ್ಹಿ ಅನರ್ಥಕತ್ವಾತ್ ಅಪೋಹ್ಯಮೇತದ್ ವಾಕ್ಯಮ್ 'ತತ್ ಸೃಷ್ಟ್ವಾ ತದೇವಾನುಪ್ರವಿಶತ್" ಇತಿ ॥

(ಭಾಷ್ಯಾರ್ಥ)

(ವಾಕ್ಯಪ್ರಾಮಾಣ್ಯವಿಷಯಕ್ಕೆ ಆಕ್ಷೇಪ):--ಹೀಗಾದರೆ ಪ್ರವೇಶವೆಂಬುದೇ ಇಲ್ಲವೆಂದಾಯಿತು. "ತದೇವಾನು ಪ್ರಾವಿಶತ್" ಎಂಬ ಶ್ರುತಿಗೆ [1] ಮತ್ತೆ ಯಾವ ಗತಿಯೂ ನಮಗೆ ಕಾಣುವದೂ ಇಲ್ಲ. ಅತೀಂದ್ರಿಯವಾದ (ವಸ್ತುವಿನ) ವಿಷಯದಲ್ಲಿ ನಮಗೆ ತಿಳಿವಳಿಕೆಯುಂಟಾಗುವದಕ್ಕೆ ಶ್ರುತಿಯೇ ಕಾರಣವು. ಈ ವಾಕ್ಯದಿಂದ (ನಾವು) ಯತ್ನವನ್ನು ಮಾಡಿದರೂ ತಿಳಿವಳಿಕೆಯು ಉಂಟಾಗುವದಿಲ್ಲ. ಸರಿ, ಹಾಗಾ ದರೆ ಯಾವ ಅರ್ಥವೂ ಇಲ್ಲದ್ದರಿಂದ "ತತ್ ಸೃಷ್ಟ್ವಾ ತದೇವಾನು ಪ್ರಾವಿಶತ್" ಎಂಬೀ ವಾಕ್ಯವನ್ನು ಬಿಟ್ಟುಬಿಡಬೇಕೆಂದಾಯಿತು.

(ಭಾಷ್ಯ)

೧೭೬. ನ । ಅನ್ಯಾರ್ಥತ್ವಾತ್ । ಕಿಮರ್ಥಮ್ ಅಸ್ಥಾನೇ ಚರ್ಚಾ ? ಪ್ರಕೃತೋ ಹಿ ಅನ್ಯೋ ವಿವಕ್ಷಿತೋಽಸ್ಯ ವಾಕ್ಯಸ್ಯ ಅರ್ಥೋಽಸ್ತಿ । ಸ ಸ್ಮರ್ತವ್ಯಃ । "ಬ್ರಹ್ಮವಿದಾಪ್ನೋತಿ ಪರಮ್....ಸತ್ಯಂ ಜ್ಞಾನಮನನ್ತಂ ಬ್ರಹ್ಮ । ಯೋ ವೇದ ನಿಹಿತಂ ಗುಹಾಯಾಮ್" ಇತಿ (೨-೧೧) । ತದ್ವಿಜ್ಞಾನಂ ಚ ವಿವಕ್ಷಿತಮ್ ।

1. 'ಇತಿ ಚ ಶ್ರುತೇಃ" ಎಂಬ ಆ॥ ಪಾಠದಲ್ಲಿ ಚ ಹೆಚ್ಚು.

ಪ್ರಕೃತಂ ಚ ತತ್ । ಬ್ರಹ್ಮಸ್ವರೂಪಾನುಗಮಾಯ ಚ ಆಕಾಶಾದ್ಯನ್ನಮಯಾನ್ತಂ ಕಾರ್ಯಂ ಪ್ರದರ್ಶಿತಮ್ । ಬ್ರಹ್ಮಾನುಗಮಶ್ಚ[1] ಆರಬ್ಧಃ । ತತ್ರ ಅನ್ನಮಯಾದಾತ್ಮನೋಽನ್ತರ ಆತ್ಮಾ ಪ್ರಾಣಮಯಃ, ತದನ್ತರ್ಮನೋಮಯಃ ವಿಜ್ಞಾನಮಯಃ ಇತಿ ವಿಜ್ಞಾನಗುಹಾಯಾಂ ಪ್ರವೇಶಿತಃ । ತತ್ರ ಚ ಆನನ್ದಮಯೋ ವಿಶಿಷ್ಟ ಆತ್ಮಾ ಪ್ರದರ್ಶಿತಃ । ಅತಃ ಪರಮ್ ಆನನ್ದಮಯಲಿಙ್ಗಾಧಿಗಮದ್ವಾರೇಣ ಆನನ್ದವಿವೃದ್ಧ್ಯವಸಾನ ಆತ್ಮಾ ಬ್ರಹ್ಮ ಪುಚ್ಛಂ ಪ್ರತಿಷ್ಠಾ ಸರ್ವವಿಕಲ್ಪಾಸ್ಪದೋ ನಿರ್ವಿಕಲ್ಪೋಽಸ್ಯಾಮೇವ ಗುಹಾಯಾಮ್ ಅಧಿಗನ್ತವ್ಯಃ ಇತಿ ತತ್ಪ್ರವೇಶಃ ಪ್ರಕಲ್ಪ್ಯತೇ । ನ ಹಿ ಅನ್ಯತ್ರೋಪಲಭ್ಯತೇ ಬ್ರಹ್ಮ । ನಿರ್ವಿಶೇಷತ್ವಾತ್ । ವಿಶೇಷಸಂಬನ್ಧೋ ಹಿ ಉಪಲಬ್ಧಿಹೇತುರ್ದೃಷ್ಟಃ । ಯಥಾ ರಾಹೋಶ್ಚನ್ದ್ರಾರ್ಕವಿಶೇಷಸಂಬನ್ಧಃ । ಏವಮ್ ಅನ್ತಃಕರಣಗುಹಾಸಂಬನ್ಧೋ[2] ಬ್ರಹ್ಮಣ ಉಪಲಬ್ಧಿಹೇತುಃ । ಸಂನಿಕರ್ಷಾತ್, ಅವಭಾಸಾತ್ಮಕತ್ವಾಚ್ಚಾನ್ತಃಕರಣಸ್ಯ । ಯಥಾ ಚ ಆಲೋಕವಿಶಿಷ್ಟಾ ಘಟಾದ್ಯುಪಲಬ್ಧಿಃ, ಏವಂ ಬುದ್ಧಿಪ್ರತ್ಯಯಾಲೋಕವಿಶಿಷ್ಟಾ ಆತ್ಮೋಪಲಬ್ಧಿಃ ಸ್ಯಾತ್ । ತಸ್ಮಾತ್ ಉಪಲಬ್ಧಿಹೇತೌ ಗುಹಾಯಾಂ ನಿಹಿತಮ್ ಇತಿ ಪ್ರಕೃತಮೇವ । ತದ್ವೃತ್ತಿಸ್ಥಾನೀಯೋ ತು ಇಹ ಪುನಃ "ತತ್ ಸೃಷ್ಟ್ವಾ ತದೇವಾನುಪ್ರಾವಿಶತ್" ಇತ್ಯುಚ್ಯತೇ॥

(ಭಾಷ್ಯಾರ್ಥ)

ಹಾಗಲ್ಲ. ಏಕೆಂದರೆ ಇದಕ್ಕೆ ಬೇರೆ (ಒಂದು) ಅರ್ಥವಿದೆ. ಪ್ರಕೃತಕ್ಕೆ ಹೊಂದದ ಚರ್ಚೆ ಏತಕ್ಕೆ? ಈ ವಾಕ್ಯಕ್ಕೆ ವಿವಕ್ಷಿತವಾಗಿರುವ ಪ್ರಕೃತವಾದ ಬೇರೆ (ಒಂದು) ಅರ್ಥವಿದೆ. ಅದನ್ನು ನೆನಪಿಗೆ ತಂದುಕೊಳ್ಳಬೇಕು- "ಬ್ರಹ್ಮವನ್ನರಿತವನು ಪರವನ್ನು ಪಡೆದುಕೊಳ್ಳುತ್ತಾನೆ ...ಸತ್ಯವೂ ಜ್ಞಾನವೂ ಅನಂತವೂ (ಆದ) ಬ್ರಹ್ಮವು ಗುಹೆಯಲ್ಲಿ ಇಡಲ್ಪಟ್ಟಿರುವದನ್ನು ಯಾವಾತನು ಅರಿತುಕೊಳ್ಳುವನೋ...." ಎಂದು (ಉಪಕ್ರಮದಲ್ಲಿ ಹೇಳಿತ್ತು). ಆ (ಬ್ರಹ್ಮದ) ಜ್ಞಾನವೇ ವಿವಕ್ಷಿತವಾಗಿರುತ್ತದೆ; ಅದು ಪ್ರಕೃತವೂ ಆಗಿರುತ್ತದೆ. ಬ್ರಹ್ಮದ ಸ್ವರೂಪವನ್ನು ಹಿಂಬಾಲಿಸಿ (ತಿಳಿಯುವದಕ್ಕಾಗಿ)[3] ಆಕಾಶವೇ ಮುಂತಾಗಿ ಅನ್ನಮಯದವರೆಗಿನ ಕಾರ್ಯವನ್ನು

---

1. "ಬ್ರಹ್ಮಾವಗಮಶ್ಚ" ಎಂದು ವಾ॥ ಪಾಠ.

2. "ಗುಹಾತ್ಮಸಂಬನ್ಧೋ" ಎಂಬಲ್ಲಿ "ಆತ್ಮ" ಎಂಬ ಮಾತು ಹೆಚ್ಚು.

3. "ಅನುಗಮಾಯ" ಎಂಬ ಆ॥ ಪಾಠವನ್ನನುಸರಿಸಿ ಕನ್ನಡಿಸಿದೆ. ಬ್ರಹ್ಮಸ್ವರೂಪವಾದ ಸತ್ಯತ್ವವು ಆಕಾಶಾದಿಗಳಲ್ಲಿಯೂ ಅನ್ನಮಯಾದಿಗಳಲ್ಲಿಯೂ ಅನುಗತವಾಗಿರುತ್ತದೆ. ಅವುಗಳ ಮೂಲಕ ಬ್ರಹ್ಮವನ್ನು ಅರಿತುಕೊಳ್ಳಬೇಕು.

ತಿಳಿಸಿದ್ದಾಯಿತು. ಬ್ರಹ್ಮದ ಅನುಗಮನವನ್ನು ಪ್ರಾರಂಭಿಸಿದ್ದೂ ಆಯಿತು. ಅಲ್ಲಿ ಅನ್ನಮಯನಾದ ಆತ್ಮನಿಗಿಂತ ಬೇರೆಯಾದ ಒಳಗಿನ ಆತ್ಮನಾದ ಪ್ರಾಣಮಯನು, ಅವನ ಒಳಗೆ ಮನೋಮಯನು, (ಅವನೊಳಗೆ) ವಿಜ್ಞಾನಮಯನು (ಇರುತ್ತಾನೆ) ಎಂದು (ಆತ್ಮನನ್ನು) ವಿಜ್ಞಾನದ ಗುಹೆಯಲ್ಲಿ ಹೊಗಿಸಿದ್ದಾಯಿತು. ಮತ್ತು ಅಲ್ಲಿ ಆನಂದಮಯನೆಂಬ ಅಸಾಧಾರಣ[1] ಆತ್ಮನನ್ನು ತೋರಿಸಿಕೊಟ್ಟದ್ದಾಯಿತು. ಅಲ್ಲಿಂದ ಮುಂದಕ್ಕೆ ಆನಂದಮಯನೆಂಬ ಗುರುತನ್ನು ಅರಿತುಕೊಳ್ಳುವ ಮೂಲಕವಾಗಿ[2] ಆನಂದವು ಹೆಚ್ಚುವದರ ಕೊನೆಯಾಗಿರುವ ಆತ್ಮನು, (ಆನಂದಮಯನಿಗೆ) ಪುಚ್ಛವೂ ಪ್ರತಿಷ್ಠೆಯೂ ಆಗಿರುವ ಬ್ರಹ್ಮವು, ಎಲ್ಲಾ ವಿಕಲ್ಪಗಳಿಗೂ ಆಶ್ರಯವಾಗಿರುವ ನಿರ್ವಿಕಲ್ಪವು[3], ಇದೇ ಗುಹೆಯಲ್ಲಿ ಅರಿತುಕೊಳ್ಳತಕ್ಕದ್ದು ಎಂದು ಅದರ ಪ್ರವೇಶವನ್ನು (ಇಲ್ಲಿ) ಕಲ್ಪಿಸಿರುತ್ತದೆ. ಬ್ರಹ್ಮವು ಮತ್ತೆಲ್ಲಿಯೂ ಕಾಣಬರುವದಿಲ್ಲ. ಏಕೆಂದರೆ (ಅದು) ಯಾವ ವಿಶೇಷವೂ ಇಲ್ಲದ್ದಾಗಿರುತ್ತದೆ. ವಿಶೇಷ (ವಸ್ತುವಿನ) ಸಂಬಂಧವೇ (ನಿರ್ವಿಶೇಷವಾದದ್ದನ್ನು) ಅರಿಯುವದಕ್ಕೆ ಕಾರಣವಾಗುವದೆಂಬುದು (ಲೋಕದಲ್ಲಿ) ಕಂಡುಬಂದಿರುತ್ತದೆ. ಉದಾಹರಣೆಗೆ ರಾಹುವಿಗೆ ಚಂದ್ರ, ಸೂರ್ಯ-ಎಂಬ ವಿಶೇಷ (ವಸ್ತುಗಳ) ಸಂಬಂಧ(ವುಂಟಾಗುವದು ಅದನ್ನು ಅರಿಯುವದಕ್ಕೆ ಕಾರಣವಾಗುತ್ತದೆ). ಇದೇ ರೀತಿಯಲ್ಲಿ **ಅಂತಃಕರಣವೆಂಬ ಗುಹೆಯ ಸಂಬಂಧವು ಬ್ರಹ್ಮವನ್ನು ಅರಿತುಕೊಳ್ಳುವದಕ್ಕೆ ಕಾರಣವಾಗಿರುತ್ತದೆ. ಏಕೆಂದರೆ ಅಂತಃಕರಣವು (ಆತ್ಮನಿಗೆ) ಹತ್ತಿರವಿರುತ್ತದೆ, ಮತ್ತು ಪ್ರಕಾಶಾತ್ಮಕವಾಗಿರುತ್ತದೆಯಾದ್ದರಿಂದ (ಹೀಗೆಂದು ತಿಳಿಯಬೇಕು).** ಮತ್ತು ಹೇಗೆ ಬೆಳಕಿನಿಂದ ಕೂಡಿದರೇ ಗಡಿಗೆಯೇ ಮುಂತಾದವುಗಳ ಅರಿವು ಉಂಟಾಗುವದೋ ಹಾಗೆಯೇ ಬುದ್ಧಿಯ ಪ್ರತ್ಯಯವೆಂಬ ಬೆಳಕಿನಿಂದ ಕೂಡಿದರೆ ಆತ್ಮನ ಅರಿವು ಉಂಟಾ

---

1. ಭೋಕ್ತೃತ್ವವು ಒಬ್ಬೊಬ್ಬನಿಗೆ ಒಂದೊಂದು ಬಗೆ ; ಎಲ್ಲರಿಗೂ ಒಂದೇ ಬೋಗವಿರುವದಿಲ್ಲ.

2. ಹೊಗೆಯಿಂದ ಬೆಂಕಿಯನ್ನು ಊಹಿಸುವಂತೆ ಆನಂದಮಯನಿಂದ ಪರಮಾತ್ಮನನ್ನು ಊಹಿಸಬೇಕು.

3. ಅತ್ಯಂತನಿರತಿಶಯವಾದ ಆನಂದವೇ ಪರಮಾತ್ಮನು, ಬ್ರಹ್ಮವು; ಆನಂದಮಯನು ಯಾತರ ಬಲದಿಂದ ಆನಂದಮಯನೆನಿಸಿಕೊಂಡಿರುವನೋ ಅದು ಬ್ರಹ್ಮವು; ಅಂಥದ್ದು, ಇಂಥದ್ದು ಎಂದು ನಾವು ಕಲ್ಪಿಸುವ ವಿಶೇಷಗಳಿಗೆಲ್ಲಾ ಆಧಾರವಾಗಿರುವ ನಿರ್ವಿಕಲ್ಪವೇ ಬ್ರಹ್ಮವು ಎಂದು ಅರಿತುಕೊಳ್ಳಬೇಕು. ಆ ಬ್ರಹ್ಮವನ್ನು ಹೃದಯಗುಹೆಯಲ್ಲಿಯೇ ಅರಿತುಕೊಳ್ಳಬೇಕು.

ಗುತ್ತದೆ.[1] ಆದ್ದರಿಂದ ಅರಿವಿಗೆ ಕಾರಣವಾಗಿರುವ (ಅಂತಃಕರಣವೆಂಬ) ಗುಹೆಯಲ್ಲಿ ಇಡಲ್ಪಟ್ಟಿದೆ ಎಂಬುದು ಪ್ರಕೃತವೇ ಆಗಿರುತ್ತದೆ. ಆ (ವಾಕ್ಯದ) ವೃತ್ತಿಯಂತಿರುವ ಈ (ವಾಕ್ಯದಲ್ಲಿ)ಯೋ ಎಂದರೆ "ಅದನ್ನು ಸೃಷ್ಟಿಮಾಡಿ ಅದನ್ನೇ ಒಳಹೊಕ್ಕಿತು" ಎಂದಿರುತ್ತದೆ.[2]

## ಉಪಸಂಹಾರ

(ಭಾಷ್ಯ)

೧೭೬. ತದೇವೇದಮ್ ಆಕಾಶಾದಿಕಾರಣಂ ಕಾರ್ಯಂ ಸೃಷ್ಟ್ವಾ ತದನು ಪ್ರವಿಷ್ಟಮಿವ ಅನ್ತರ್ಗುಹಾಯಾಂ ಬುದ್ಧೌ ದ್ರಷ್ಟೃ ಶ್ರೋತೃ ಮನ್ತೃ ವಿಜ್ಞಾತೃ ಇತ್ಯೇವಂ ವಿಶೇಷವದುಪಲಭ್ಯತೇ । ಸ ಏವ ತಸ್ಯ ಪ್ರವೇಶಃ । ತಸ್ಮಾತ್ ಅಸ್ತಿ ತತ್ ಕಾರಣಂ ಬ್ರಹ್ಮ । ಅತಃ ಅಸ್ತಿತ್ವಾತ್ ಅಸ್ತಿ ಇತ್ಯೇವೋಪಲಬ್ಧವ್ಯಂ ತತ್ ॥

(ಭಾಷ್ಯಾರ್ಥ)

ಆಕಾಶಾದಿಗಳಿಗೆ ಕಾರಣವಾಗಿರುವ ಅದೇ ಈ (ಬ್ರಹ್ಮವು) ಕಾರ್ಯವನ್ನು ಸೃಷ್ಟಿಸಿ ಅದರೊಳಕ್ಕೆ ಅನುಪ್ರವೇಶಮಾಡಿರುವಂತೆ ಒಳಗಿನ ಗುಹೆಯಾದ ಬುದ್ಧಿಯಲ್ಲಿ ದ್ರಷ್ಟೃ (ನೋಡುವದು), ಶ್ರೋತೃ (ಕೇಳುವದು), ಮನ್ತೃ (ಆಲೋಚಿಸುವದು), ವಿಜ್ಞಾತೃ (ಅರಿಯುವದು)-ಎಂದೀ ಪರಿಯಲ್ಲಿ ವಿಶೇಷ(ರೂಪ)ಗಳುಳ್ಳದ್ದಾಗಿ ಕಂಡು ಬರುತ್ತಿದೆ.[3] ಇದೇ ಅದರ ಪ್ರವೇಶವು. ಆದ್ದರಿಂದ ಆ ಕಾರಣವಾದ ಬ್ರಹ್ಮವು ಇದೆ ; ಆದ್ದರಿಂದ (ಹೀಗೆ) ಇರುವದರಿಂದ ಅದು ಇದೆ ಎಂದೇ ತಿಳಿಯತಕ್ಕದ್ದು.[4]

---

1. ನಿಜವಾಗಿ ನೋಡಿದರೆ ಅಂತಃಕರಣಕ್ಕೆ ಆತ್ಮನು ವಿಷಯವಾಗುವದಿಲ್ಲ. ಆದರೂ ಅದು ತಪಸ್ಸು ಮುಂತಾದ ಪುಣ್ಯಕರ್ಮಗಳಿಂದ ಶುದ್ಧವಾದಾಗ ಅದರಲ್ಲಿ ಆತ್ಮನು ಹೊಳೆದು ತೋರುತ್ತಾನೆ. ಆದ್ದರಿಂದ ಆತ್ಮನನ್ನು ಅರಿಯುವದಕ್ಕೆ ಮನಸ್ಸೇ ಬೆಳಕಾಯಿತು. ಈ ವಿಷಯಕ್ಕೆ ಕ. ಭಾ. ೨-೧-೧ ಭಾ. ಭಾ. ೧೨೧ ; ಗೀ. ಭಾ. ೨-೨೧ ; ಬೃ. ಭಾ. ೪-೪-೧೯ ನೋಡಿ.

2. ಬ್ರಹ್ಮವು ಅಂತಃಕರಣದೊಳಗೆ ಹೊಕ್ಕಿರುವಂತೆ ಕಾಣುತ್ತಿದೆ ಎಂದೇ ಅಭಿಪ್ರಾಯ ; ಹೊರಗಿನಿಂದ ನಿಜವಾಗಿ ಒಳಹೊಕ್ಕಿತು ಎಂಬುದೇನೂ ಅರ್ಥವಲ್ಲ.

3. ಬುದ್ಧಿಯಲ್ಲಿ ಪ್ರವೇಶಮಾಡಿದಂತೆ ಬುದ್ಧಿಯ ವೃತ್ತಿಗಳಾದ ದೃಷ್ಟಿ, ಶ್ರವಣ, ಮನನ, ವಿಜ್ಞಾನ-ಇವುಗಳಲ್ಲಿ ಕಂಡುಬರುತ್ತಿರುವದು. ಗೀ. ೧೫-೧೦.

4. ಈ ಮೂಲಕ ಅದನ್ನು ತತ್ತ್ವರೂಪದಿಂದ ಅರಿಯುವದಕ್ಕೆ ಪ್ರಯತ್ನಿಸಬೇಕು ಕ. ೨-೩-೧೩.

# ೧೧. ಹೊರಗಿನ ಪದಾರ್ಥಗಳ ರೂಪದಲ್ಲಿರುವದರಿಂದ ಬ್ರಹ್ಮವು ಇದೆ

**ತದನುಪ್ರವಿಶ್ಯ । ಸಚ್ಚ ತ್ಯಚ್ಚಾಭವತ್ । ನಿರುಕ್ತಂ ಚಾನಿರುಕ್ತಂ ಚ । ನಿಲಯನಂ ಚಾನಿಲಯನಂ ಚ । ವಿಜ್ಞಾನಂ ಚಾವಿಜ್ಞಾನಂ ಚ । ಸತ್ಯಂ ಚಾನೃತಂ ಚ ಸತ್ಯಮಭವತ್ । ಯದಿದಂ ಕಿಂ ಚ । ತತ್ ಸತ್ಯಮಿತ್ಯಾಚಕ್ಷತೇ ॥ ೭ ॥**

೭. ಅದನ್ನು ಒಳಹೊಕ್ಕು ಸತ್ತೂ ತ್ಯತ್ತೂ ಆಯಿತು. ನಿರುಕ್ತವೂ ಅನಿರುಕ್ತವೂ, ನಿಲಯನವೂ ಅನಿಲಯನವೂ, ವಿಜ್ಞಾನವೂ ಅವಿಜ್ಞಾನವೂ, ಸತ್ಯವೂ ಅನೃತವೂ ಸತ್ಯವು ಆಯಿತು. ಇದು ಏನೇನಿದೆಯೋ (ಎಲ್ಲವೂ ಆಯಿತು). ಅದನ್ನು ಸತ್ಯವೆಂದು ಕರೆಯುತ್ತಾರೆ.

## ಮೂರ್ತಾಮೂರ್ತಗಳು ಬ್ರಹ್ಮವೇ

(ಭಾಷ್ಯ)

೧೭೮. ತತ್ ಕಾರ್ಯಮ್ ಅನುಪ್ರವಿಶ್ಯ । ಕಿಮ್ ? ಸಚ್ಚ ಮೂರ್ತಂ ತ್ಯಚ್ಚ ಅಮೂರ್ತಮ್ ಅಭವತ್ । ಮೂರ್ತಾಮೂರ್ತೇ ಹಿ ಅವ್ಯಾಕೃತನಾಮರೂಪೇ ಆತ್ಮಸ್ಥೇ ಅನ್ತರ್ಗತೇನ ಆತ್ಮನಾ ವ್ಯಾಕ್ರಿಯೇತೇ, ವ್ಯಾಕೃತೇ ಚ ಮೂರ್ತಾಮೂರ್ತಶಬ್ದವಾಚ್ಯೇ । ತೇ ಆತ್ಮನಾ ತ್ವಪ್ರವಿಭಕ್ತದೇಶಕಾಲೇ ಇತಿ ಕೃತ್ವಾ ಆತ್ಮಾ ತೇ ಅಭವತ್ ಇತ್ಯುಚ್ಯತೇ ಕಿಂ ಚ ನಿರುಕ್ತಂ ಚ ಅನಿರುಕ್ತಂ ಚ । ನಿರುಕ್ತಂ ನಾಮ ನಿಷ್ಕೃಷ್ಯ ಸಮಾನಾಸಮಾನಜಾತೀಯೇಭ್ಯಃ ದೇಶಕಾಲವಿಶಿಷ್ಟತಯಾ ಇದಂ ತತ್ ಇತ್ಯುಕ್ತಮ್ । ಅನಿರುಕ್ತಂ ತದ್ವಿಪರೀತಮ್ । ನಿರುಕ್ತಾನಿರುಕ್ತೇ ಅಪಿ ಮೂರ್ತಾಮೂರ್ತಯೋರೇವ ವಿಶೇಷಣೇ । ಯಥಾ ಸಚ್ಚ ತ್ಯಚ್ಚ ಪ್ರತ್ಯಕ್ಷಪರೋಕ್ಷೇ । ತಥಾ ನಿಲಯನಂ ಚಾನಿಲಯನಂ ಚ । ನಿಲಯನಂ ನೀಡಮ್ ಆಶ್ರಯಃ, ಮೂರ್ತಸ್ಯೈವ ಧರ್ಮಃ । ಅನಿಲಯನಂ ತದ್ವಿಪರೀತಂ ಅಮೂರ್ತಸ್ಯೈವ ಧರ್ಮಃ । ತ್ಯದನಿರುಕ್ತಾನಿಲಯನಾನಿ ಅಮೂರ್ತಧರ್ಮತ್ವೇಽಪಿ ವ್ಯಾಕೃತವಿಷಯಾಣ್ಯೇವ । ಸರ್ಗೋತ್ತರಕಾಲಭಾವಶ್ರವಣಾತ್ । ತ್ಯತ್ ಇತಿ ಪ್ರಾಣಾದಿ । ಅನಿರುಕ್ತಂ ತದೇವ, ಅನಿಲಯನಂ ಚ । ಅತೋ ವಿಶೇಷಣಾನಿ ಅಮೂರ್ತಸ್ಯ ವ್ಯಾಕೃತವಿಷಯಾಣ್ಯೇವೈತಾನಿ ॥

(ಭಾಷ್ಯಾರ್ಥ)

ಅದು ಕಾರ್ಯವನ್ನು ಒಳಹೊಕ್ಕು ಏನು (ಮಾಡಿತು)? ಎಂದರೆ ಸತ್ತೂ ಎಂದರೆ ಮೂರ್ತವೂ ತ್ಯತ್ತೂ ಎಂದರೆ ಅಮೂರ್ತವೂ ಆಯಿತು. ಮೂರ್ತಾಮೂರ್ತಗಳು ಅವ್ಯಾಕೃತವಾದ ನಾಮರೂಪಗಳಾಗಿ ಆತ್ಮನಲ್ಲಿದ್ದು ಒಳಗಿರುವ ಆತ್ಮನಿಂದ ವ್ಯಾಕೃತವಾಗಿ ಮಾಡಲ್ಪಡುತ್ತವೆ.[1] ವ್ಯಾಕೃತವಾದ ಬಳಿಕ ಅವು ಮೂರ್ತ, ಅಮೂರ್ತ- ಎಂಬ ಶಬ್ದದಿಂದ ಹೇಳಲ್ಪಡುವವು.[2] ಅವು ಆತ್ಮನಿಗಿಂತ ಬೇರೆಯಾಗಿರುವ ದೇಶದಲ್ಲಾಗಲಿ ಕಾಲದಲ್ಲಾಗಲಿ ಇರುವದಿಲ್ಲವಾಗಿ ಆತ್ಮನು ಅವೆರಡೂ ಆದನು ಎನ್ನಿಸಿಕೊಳ್ಳುತ್ತಾನೆ.[3] ಮತ್ತು ನಿರುಕ್ತವೂ ಅನಿರುಕ್ತವೂ ಆದನು). **ನಿರುಕ್ತ** ಎಂದರೆ (ತನಗೆ) ಸಮಾನವಾದ ಮತ್ತು ಸಮಾನವಲ್ಲದ ಜಾತಿಯ (ಪದಾರ್ಥ)ಗಳಿಂದ ವಿಂಗಡಿಸಿ ಗೊತ್ತುಮಾಡಿ ದೇಶ, ಕಾಲ-ಇವುಗಳಿಂದ ಕೂಡಿ 'ಅದು ಇದು' ಎಂದು ಉಕ್ತವಾಗಿರುವದು. **ಅನಿರುಕ್ತ**ವೆಂದರೆ ಅದಕ್ಕೆ ವಿರುದ್ಧವಾದದ್ದು. (ಈ) ನಿರುಕ್ತ, ಅನಿರುಕ್ತ-ಎಂಬಿವೂ ಮೂರ್ತಾಮೂರ್ತಗಳ ವಿಶೇಷಣಗಳೇ.[4] ಹೇಗೆ ಸತ್ತು, ತ್ಯತ್ತು-ಎಂದರೆ ಪ್ರತ್ಯಕ್ಷವಾದದ್ದು, ಪರೋಕ್ಷವಾದದ್ದು[5] (ಇವೆರಡೂ ಮೂರ್ತಾಮೂರ್ತಗಳ ಧರ್ಮಗಳೋ ಇವೂ ಹಾಗೆಯೇ).[6] ಇದರಂತೆ ನಿಲಯನವೂ ಅನಿಲಯನವೂ (ಆದನು) ನಿಲಯನವೆಂದರೆ ಗೂಡು, ಆಶ್ರಯ; (ಇದೂ) ಮೂರ್ತದ್ದೇ ಧರ್ಮವು. ಅನಿಲಯವೆಂದರೆ ಅದಕ್ಕೆ ವಿರುದ್ಧವಾದದ್ದು; (ಇದೂ)

---

1. ಹಿಂದೆ ಭಾ. ಭಾ. ೧೬೪ ರಲ್ಲಿ "ಬಹು ಭವನದ" ವಿಷಯದಲ್ಲಿ ನಾಮರೂಪಗಳ ವಿವರವನ್ನು ಕೊಟ್ಟಿರುವದನ್ನು ನೋಡಿರಿ.

2. ಮೊದಲು ಆತ್ಮ ಎಂಬ ಶಬ್ದದಿಂದಲೇ ಹೇಳಲ್ಪಡುತ್ತವೆ. ಐ. ಭಾ. ೧-೧ ಭಾ. ಭಾ. ೨೮) "ಆಸೀತ್" ಎಂಬುದರ ವ್ಯಾಖ್ಯಾನವನ್ನು ನೋಡಿರಿ.

3. ಆತ್ಮನು ಕೂಟಸ್ಥನಾಗಿರುವದರಿಂದ ಅವನು ನಿಜವಾಗಿ ನಾಮರೂಪಗಳಾಗಿಯೇ ಪರಿಣಮಿಸಿದನೆಂದೇನೂ ಅಭಿಪ್ರಾಯವಿಲ್ಲ.

4. ಮೂರ್ತಾಮೂರ್ತಗಳಾದ ವಿವರವನ್ನು ಬೃ. ೨-೩-೧ ರಿಂದ ೬ ರಲ್ಲಿ ವರ್ಣಿಸಿರುವದನ್ನು ನೋಡಿರಿ.

5. ಎದುರಿಗೆ ಇರುವದನ್ನು 'ಸತ್' (ಇರುವದು) ಎಂದೂ ದೂರದಲ್ಲಿ ಕಾಣದಂತಿರುವದನ್ನು ತ್ಯತ್ (ಅದು) ಎಂದೂ ಕರೆಯುವರು; ಇಲ್ಲಿ ಮೂರ್ತವನ್ನು 'ಸತ್' ಎಂದೂ ಅಮೂರ್ತವನ್ನು 'ತ್ಯತ್' ಎಂದೂ ಕರೆದಿದೆ ಎಂದು ಅಭಿಪ್ರಾಯ.

6. ಅನಿರುಕ್ತ ಎಂಬುದು ಅವ್ಯಾಕೃತದ ವಿಶೇಷಣವೆಂದೂ ನಿರುಕ್ತವೆಂಬುದು ವ್ಯಾಕೃತದ ವಿಶೇಷಣವೆಂದೂ ತಿಳಿಯಬಾರದು ಎಂದು ಭಾವ. ಈ ವಾಕ್ಯವನ್ನು "ಆತ್ಮನು ಸತ್ತು, ತ್ಯತ್ತು ಇವೆರಡೂ ಹೇಗೆ ಆದನೋ ಹಾಗೆಯೇ ನಿರುಕ್ತಾನಿರುಕ್ತಗಳೂ ಆದನು" ಎಂದೂ ಅರ್ಥಮಾಡಬಹುದಾಗಿದೆ.

ಅಮೂರ್ತಕ್ಕೇ ಧರ್ಮವು (ಹೀಗೆ) ತ್ಯತ್, ಅನಿರುಕ್ತ, ಅನಿಲಯನ-ಎಂಬಿವು ಅಮೂರ್ತಕ್ಕೆ ಧರ್ಮವಾದರೂ ವ್ಯಾಕೃತ (ಅಮೂರ್ತಕ್ಕೇ) ಸಂಬಂಧಪಟ್ಟಿರುತ್ತವೆ. (ಎಂದು ತಿಳಿಯಬೇಕು).[1] ಏಕೆಂದರೆ (ಅವು) ಸೃಷ್ಟಿಯಾದ ಬಳಿಕ ಉಂಟಾಗುವವೆಂದು ಶ್ರುತಿಯಲ್ಲಿ ಹೇಳಿರುತ್ತದೆ. ತ್ಯತ್ ಎಂದರೆ ಪ್ರಾಣವೇ ಮುಂತಾದದ್ದು[2]; ಅನಿರುಕ್ತವೆಂದರೂ ಅದೇ, ಅನಿಲಯನವೆಂದರೂ (ಅದೇ). ಆದ್ದರಿಂದ ಈ ಅಮೂರ್ತದ ವಿಶೇಷಣಗಳು ವ್ಯಾಕೃತಕ್ಕೆ ಸಂಬಂಧಪಟ್ಟವುಗಳೇ (ಆಗಿರುತ್ತವೆ).

## ಚೇತನಾಚೇತನಗಳೂ ಸತ್ಯಾನೃತಗಳೂ ಬ್ರಹ್ಮವೇ

(ಭಾಷ್ಯ)

೧೭೯. ವಿಜ್ಞಾನಂ ಚೇತನಮ್, ಅವಿಜ್ಞಾನಂ ತದ್ರಹಿತಮ್ ಅಚೇತನಮ್ ಪಾಷಾಣಾದಿ । ಸತ್ಯಂ ಚ ವ್ಯವಹಾರವಿಷಯಮ್ ಅಧಿಕಾರಾತ್ । ನ ಪರಮಾರ್ಥಸತ್ಯಮ್ । ಏಕಮೇವ ಹಿ ಪರಮಾರ್ಥಸತ್ಯಂ ಬ್ರಹ್ಮ । ಇಹ ಪುನರ್ವ್ಯವಹಾರವಿಷಯಮ್ ಆಪೇಕ್ಷಿಕಂ ಸತ್ಯಮ್ ಮೃಗತೃಷ್ಣಿಕಾದ್ಯನೃತಾಪೇಕ್ಷಯಾ ಉದಕಾದಿ ಸತ್ಯಮ್ ಉಚ್ಯತೇ । ಅನೃತಂ ಚ ತದ್ವಿಪರೀತಮ್ । ಕಿಂ ಪುನರೇತತ್ ಸರ್ವಮಭವತ್? ಪರಮಾರ್ಥಸತ್ಯಮ್ । ಕಿಂ ಪುನಸ್ತತ್? ಬ್ರಹ್ಮ । "ಸತ್ಯಂ ಜ್ಞಾನಮನನ್ತಂ ಬ್ರಹ್ಮ" (೨-೧) ಇತಿ ಪ್ರಕೃತತ್ವಾತ್ ॥

(ಭಾಷ್ಯಾರ್ಥ)

ವಿಜ್ಞಾನವೆಂದರೆ ಚೇತನವು; ಅವಿಜ್ಞಾನವೆಂದರೆ ಅದಿಲ್ಲದ್ದು ಅಚೇತನವು, ಕಲ್ಲು ಮುಂತಾದದ್ದು.[1] ಸತ್ಯವು ಎಂದರೆ ವ್ಯವಹಾರವಿಷಯವಾದ ಸತ್ಯವು; ಏಕೆಂದರೆ (ವ್ಯವಹಾರದ ವಿಷಯದ್ದೇ) ಈ ಪ್ರಕರಣವು. (ಇದು) ಪರಮಾರ್ಥಸತ್ಯವಲ್ಲ; ಏಕೆಂದರೆ **ಪರಮಾರ್ಥಸತ್ಯವಾದ** ಬ್ರಹ್ಮವು ಒಂದೇ. ಇಲ್ಲಿಯೋ ಎಂದರೆ ವ್ಯವಹಾರ ವಿಷಯವಾದ ಬಿಸಿಲುಕುದುರೆಯ (ನೀರೇ) ಮುಂತಾದ **ಅನೃತಕ್ಕೆ** ಹೋಲಿ

1. ಇವು ಅವ್ಯಾಕೃತದ ಧರ್ಮಗಳೆಂದು ಭಾವಿಸಬೇಕಾದದ್ದಿಲ್ಲ.

2. ಪ್ರಾಣ, ಶರೀರದೊಳಗಿನ ಆಕಾಶ-ಇವುಗಳು ಅಧ್ಯಾತ್ಮವಾದ ಅಮೂರ್ತ. ಮೂರ್ತಾಮೂರ್ತಗಳು ಅಧಿದೈವತ, ಅಧ್ಯಾತ್ಮ-ಎರಡೂ ರೂಪದಿಂದಿರುತ್ತವೆ. ಬೃ. ೨-೩-೪.

2. ಕಲ್ಲು ಮುಂತಾದ ಜಡವಸ್ತುಗಳೂ ಚೇತನವಾದ ಬ್ರಹ್ಮದ ಕಾರ್ಯವೇ ಆದರೂ ಅವುಗಳಲ್ಲಿ ಚೈತನ್ಯವು ಸ್ಫುಟವಾಗಿ ತೋರುತ್ತಿಲ್ಲ. ಸೂ. ಭಾ. ೨-೧-೬.

ಸಿದರೆ (ಸತ್ಯ)ವಾಗುವ **ಆಪೇಕ್ಷಿಕಸತ್ಯ**ವಾಗಿರುವ[1] ನೀರು ಮುಂತಾದದ್ದನ್ನೇ ಸತ್ಯ ಎಂದು ಕರೆದಿರುತ್ತದೆ. ಮತ್ತು ಇದಕ್ಕೆ ವಿರುದ್ಧವಾಗಿರುವ, ಅನೃತವು.

(ಪ್ರಶ್ನೆ) :—ಇದೆಲ್ಲವೂ ಆದದ್ದು ಯಾವದು ?

(ಉತ್ತರ):—ಪರಮಾರ್ಥಸತ್ಯವು.

(ಪ್ರಶ್ನೆ):—ಆ (ಪರಮಾರ್ಥ ಸತ್ಯ)ವೆಂಬುದಾದರೂ ಯಾವದು?

(ಉತ್ತರ):—ಬ್ರಹ್ಮವೇ. ಸತ್ಯವೂ ಜ್ಞಾನವೂ ಅನಂತವೂ ಆದ ಬ್ರಹ್ಮವು" (೨-೧) ಎಂದು ಪ್ರಕೃತವಾಗಿರುವದರಿಂದ ಬ್ರಹ್ಮವೇ (ಆ ಪರಮಾರ್ಥಸತ್ಯವು).

## ಬ್ರಹ್ಮಕ್ಕೆ ಸತ್ಯವೆಂದು ಹೆಸರು

(ಭಾಷ್ಯ)

೧೪೦. ಯಸ್ಮಾತ್ ಸತ್ತ್ಯದಾದಿಕಂ ಮೂರ್ತಾಮೂರ್ತಧರ್ಮಜಾತಂ ಯತ್ಕಿಂಚೇದಂ ಸರ್ವಮ್ ಅವಿಶಿಷ್ಟಂ ವಿಕಾರಜಾತಮ್ ಏಕಮೇವ ಸಚ್ಛಬ್ದವಾಚ್ಯಂ ಬ್ರಹ್ಮ ಅಭವತ್, ತದ್ವ್ಯತಿರೇಕೇಣ ಅಭಾವಾತ್ ನಾಮರೂಪವಿಕಾರಸ್ಯ ತಸ್ಮಾತ್ ತದ್ ಬ್ರಹ್ಮ 'ಸತ್ಯಮ್' ಇತಿ ಆಚಕ್ಷತೇ ಬ್ರಹ್ಮವಿದಃ ||

(ಭಾಷ್ಯಾರ್ಥ)

ಸತ್ತು, ತ್ಯತ್ತು ಮುಂತಾದ ಮೂರ್ತಾಮೂರ್ತಗಳ ಧರ್ಮಸಮೂಹವೆಲ್ಲವೂ, ಯಾವ ಯಾವ ಈ ಕಾರ್ಯಸಮೂಹವೆಂಬುದಿದೆಯೋ ಇದೆಲ್ಲವೂ ಒಂದನ್ನೂ ಬಿಡದೆ ಎಲ್ಲವೂ, ಆ (ಬ್ರಹ್ಮಕ್ಕಿಂತ) ಬೇರೆಯಾಗಿ ನಾಮರೂಪಕಾರ್ಯವು ಇಲ್ಲದಿರುವದರಿಂದ, ಸತ್ ಎಂಬ ಶಬ್ದಕ್ಕೆ ವಾಚ್ಯವಾಗಿರುವ ಆ ಬ್ರಹ್ಮವೊಂದೇ (ಎಲ್ಲವೂ) ಆಯಿತಷ್ಟೆ ; ಆ ಕಾರಣದಿಂದ ಅದನ್ನು (ಆ) ಬ್ರಹ್ಮವನ್ನು '**ಸತ್ಯವು**' ಎಂದು ಬ್ರಹ್ಮಜ್ಞಾನಿಗಳು ಕರೆಯುತ್ತಾರೆ.

1. **ಹೋಲಿಕೆಯ ಸತ್ಯ.** ನೀರು ಬಾಯಾರಿಕೆಯನ್ನು ಹಿಂಗಿಸುತ್ತದೆ; ಬಿಸಿಲು ಕುದುರೆಯ ನೀರು ಹಿಂಗಿಸುವದಿಲ್ಲ ; ಆದ್ದರಿಂದ ನೀರು **ಆಪೇಕ್ಷಿಕ ಸತ್ಯ**, ಬಿಸಿಲುಕುದುರೆಯ ನೀರು **ಅನೃತ**.

## ಬ್ರಹ್ಮದ ಅಸ್ತಿತ್ವದ ಉಪಸಂಹಾರ

**ತದಪ್ಯೇಷ ಶ್ಲೋಕೋ ಭವತಿ ॥ ೮ ॥**

(ಇತಿ ಷಷ್ಠೋಽನುವಾಕಃ)

**ಅಸದ್ವಾ ಇದಮಗ್ರ ಆಸೀತ್ ತತೋ ವೈ ಸದಜಾಯತ**
**ತದಾತ್ಮಾನಗ್ಂ ಸ್ವಯಮಕುರುತ ।**
**ತಸ್ಮಾತ್ ತತ್ಸುಕೃತಮುಚ್ಯತ ಇತಿ ॥ ೧ ॥**

(ಆರನೆಯ ಅನುವಾಕವು ಮುಗಿಯಿತು)

೧. ಇದು ಮೊದಲು ಅಸತ್ತೇ ಆಗಿತ್ತು. ಅದರಿಂದಲೇ ಸತ್ತು ಹುಟ್ಟಿತು, ಅದು ತನ್ನನ್ನು ತಾನೇ ಉಂಟುಮಾಡಿತು. ಆದ್ದರಿಂದ ಅದು ಸುಕೃತ ಎನಿಸುತ್ತದೆ.

(ಭಾಷ್ಯ)

೧೮೧. ಅಸ್ತಿ, ನಾಸ್ತಿ-ಇತ್ಯನುಪ್ರಶ್ನಃ ಪ್ರಕೃತಃ । ತಸ್ಯ ಪ್ರತಿವಚನವಿಷಯೇ ಏತದುಕ್ತಮ್—"ಆತ್ಮಾ ಅಕಾಮಯತ ಬಹು ಸ್ಯಾಮ್" ಇತಿ । ಸ ಯಥಾಕಾಮಂ ಚ ಆಕಾಶಾದಿಕಾರ್ಯಂ ಸತ್ತ್ಯದಾದಿಲಕ್ಷಣಂ ಸೃಷ್ಟ್ವಾ ತದನುಪ್ರವಿಶ್ಯ ಪಶ್ಯನ್ ಶೃಣ್ವನ್ ಮನ್ವಾನೋ ವಿಜಾನನ್ ಬಹ್ವಭವತ್। ತಸ್ಮಾತ್ ತದೇವೇದಮ್ ಆಕಾಶಾದಿ ಕಾರಣಂ ಕಾರ್ಯಸ್ಥಂ ಪರಮೇ ವ್ಯೋಮನ್ ಹೃದಯಗುಹಾಯಾಂ ನಿಹಿತಂ ತತ್ಪ್ರತ್ಯಯಾವಭಾಸವಿಶೇಷೇಣ ಉಪಲಭ್ಯಮಾನಮ್ ಅಸ್ತಿ ಇತ್ಯೇವಂ ವಿಜಾನೀಯಾತ್ ಇತ್ಯುಕ್ತಂ ಭವತಿ । ತದ್ ಏತಸ್ಮಿನ್ ಅರ್ಥೇ ಬ್ರಾಹ್ಮಣೋಕ್ತೇ ಏಷ ಶ್ಲೋಕಃ ಮನ್ತ್ರಃ ಭವತಿ । ಯಥಾ ಪೂರ್ವೇಷು ಅನ್ನಮಯಾದ್ಯಾತ್ಮಪ್ರಕಾಶಕಾಃ ಪಞ್ಚಸ್ವಪಿ, ಏವಂ ಸರ್ವಾನ್ತರತಮಾಸ್ತಿತ್ವಪ್ರಕಾಶಕೋಽಪಿ ಮನ್ತ್ರಃ ಕಾರ್ಯದ್ವಾರೇಣ ಭವತಿ ॥

(ಭಾಷ್ಯಾರ್ಥ)

(ಬ್ರಹ್ಮವು) ಇದೆಯೊ, ಇಲ್ಲವೊ?–ಎಂಬ ಅನುಪ್ರಶ್ನೆಯು ಪ್ರಕೃತವಾಗಿತ್ತು. ಅದಕ್ಕೆ ಉತ್ತರವನ್ನು ಹೇಳುವ ಸಂದರ್ಭದಲ್ಲಿ "ಆತ್ಮನು ಬಹುವಾಗುವೆನು ಎಂದು ಕಾಮಿಸಿದನು" ಎಂದು ಹೇಳಲಾಯಿತು. ಅವನು (ಈ) ಕಾಮಕ್ಕೆ ಅನುಗುಣವಾಗಿ ಸತ್ತು, ತ್ಯತ್ತು-ಎಂದು ಮುಂತಾಗಿರುವ[1] ಸ್ವಭಾವದ ಆಕಾಶವೇ ಮುಂತಾದ ಕಾರ್ಯ

---

1. ಸತ್ತು, ತ್ಯತ್ತು ; ನಿರುಕ್ತ, ಅನಿರುಕ್ತ ; ನಿಲಯನ, ಅನಿಲಯನ ; ಸತ್ಯ, ಅನೃತ- ಈ ಜೋಡಿಗಳನ್ನು ಹೇಳಿರುವದು ಇಡಿಯ ಪ್ರಪಂಚದ ಸ್ವಭಾವವನ್ನು ವಿವರಿಸುವದಕ್ಕೆ.

ವನ್ನು ಸೃಷ್ಟಿಸಿ ಅದರೊಳಗೆ ಹೊಕ್ಕು ನೋಡುವವನಾಗಿ, ಕೇಳುವವನಾಗಿ, ಆಲೋಚಿಸುವವನಾಗಿ, ಅರಿತುಕೊಳ್ಳುವವನಾಗಿ ಬಹುವಾದನು. ಆದ್ದರಿಂದ ಆಕಾಶವೇ ಮುಂತಾದದ್ದಕ್ಕೆ ಕಾರಣವಾಗಿರುವ ಅದೇ ಈ (ಬ್ರಹ್ಮವು) ಕಾರ್ಯದಲ್ಲಿದ್ದುಕೊಂಡು ಪರಮಾಕಾಶದಲ್ಲಿರುವ ಹೃದಯಗುಹೆಯಲ್ಲಿ ಇಡಲ್ಪಟ್ಟು ಆ (ಹೃದಯದ) ಪ್ರತ್ಯಯಗಳ ಆಯಾ ಹೊಳಪಿನ ಬಲದಿಂದ[2] ಕಂಡುಬರುವದರಿಂದ (ಅದು) ಇದೆ ಎಂದೇ ತಿಳಿಯಬೇಕು ಎಂದು ಹೇಳಿದಂತೆ ಆಗುತ್ತು. ಬ್ರಾಹ್ಮಣದಲ್ಲಿ ಹೇಳಿರುವ ಅದೇ ಈ ವಿಷಯದಲ್ಲಿ ಈ ಶ್ಲೋಕವು ಎಂದರೆ ಮಂತ್ರವು(ತೊಡಗಿ)ರುತ್ತದೆ. ಹಿಂದಿನ ಐದು(ಪರ್ಯಾಯ)ಗಳಲ್ಲಿಯೂ ಹೇಗೆ ಅನ್ನಮಯನೇ ಮುಂತಾದ ಆತ್ಮರನ್ನು ಪ್ರಕಾಶಗೊಳಿಸುವ (ಮಂತ್ರಗಳು ಬಂದಿದ್ದವೋ) ಹಾಗೆಯೇ ಎಲ್ಲಕ್ಕೂ ತೀರ ಒಳಗಿರುವ ಆತ್ಮನು ಇರುವನೆಂಬುದನ್ನು ಕಾರ್ಯದ್ವಾರದಿಂದ ತಿಳಿಸುವ (ಈ) ಮಂತ್ರವೂ (ಬಂದಿ)ರುತ್ತದೆ(ಎಂದರ್ಥ).

## ೧೨. ಸುಕೃತಪ್ರಸಿದ್ಧಿಯಿಂದ ಬ್ರಹ್ಮವು ಇದೆ

### ಅವ್ಯಾಕೃತವು ವ್ಯಾಕೃತವಾಗಿರುತ್ತದೆ

೧೮೭. ಅಸದ್ವಾ ಇದಮಗ್ರ ಆಸೀತ್ । ಅಸತ್ ಇತಿ ವ್ಯಾಕೃತನಾಮರೂಪವಿಶೇಷವಿಪರೀತರೂಪಮ್ ಅವಿಕೃತಂ ಬ್ರಹ್ಮ ಉಚ್ಯತೇ । ನ ಪುನಃ ಅತ್ಯನ್ತಮೇವ ಅಸತ್ । ನ ಹಿ ಅಸತಃ ಸಜ್ಜನ್ಮಾಸ್ತಿ । ಇದಮ್ ಇತಿ ನಾಮರೂಪವಿಶೇಷವದ್ ವ್ಯಾಕೃತಂ ಜಗತ್ ಅಗ್ರೇ ಪೂರ್ವಂ ಪ್ರಾಗುತ್ಪತ್ತೇಃ ಬ್ರಹ್ಮೈವ ಅಸಚ್ಛಬ್ದವಾಚ್ಯಮ್ ಆಸೀತ್ । ತತಃ ಅಸತಃ ವೈ ಸತ್ ಪ್ರವಿಭಕ್ತನಾಮರೂಪವಿಶೇಷಮ್ ಅಜಾಯತ ಉತ್ಪನ್ನಮ್ । ಕಿಂ ತತಃ ಪ್ರವಿಭಕ್ತಂ ಕಾರ್ಯಮ್ ಇತಿ ಪಿತುರಿವ ಪುತ್ರಃ ? ನ ಇತ್ಯಾಹ । ತತ್ ಅಸಚ್ಛಬ್ದವಾಚ್ಯಂ ಸ್ವಯಮೇವ ಆತ್ಮಾನಮೇವ ಅಕುರುತ ಕೃತವತ್ ॥

---

1. ಆಯಾ ವಿಷಯದ ಆಕಾರದಲ್ಲಿರುವ ಪ್ರತ್ಯಯಗಳಲ್ಲಿ ಆತ್ಮನ ಬೆಳಕು ಮಾರುಹೊಳೆಯುವದರಿಂದ ತೋರುವ ಹೊಳಪುಗಳು. ಭಾ. ಭಾ. ೧೦೬ ರಲ್ಲಿ ಜ್ಞಾನಶಬ್ದದ ವ್ಯಾಖ್ಯಾನದಲ್ಲಿ ಇವುಗಳ ವಿವರವನ್ನು ಕೊಟ್ಟಿದೆ. ಈ ಆಭಾಸಗಳಿಂದ ಜ್ಞಾನರೂಪನಾದ ಆತ್ಮನನ್ನು ಅರಿತುಕೊಳ್ಳಬಹುದು.

2. ಈ ಪರ್ಯಾಯಗಳಲ್ಲಿ ಬರಿಯ ಕೋಶಗಳನ್ನೇ ವಿವರಿಸಿಲ್ಲ. ಕೊನೆಯ ಪರ್ಯಾಯದ "ಅಸನ್ನೇವ ಸ ಭವತಿ" ಎಂಬ ಶ್ಲೋಕಕ್ಕೆ ಅವತರಣಿಕೆಯಾಗಿರುವ ಭಾ. ಭಾ. ೧೪೯ ನ್ನು ನೋಡಿರಿ.

(ಭಾಷ್ಯಾರ್ಥ)

'ಅಸತ್ತೇ' ಇದು ಮೊದಲು ಆಗಿತ್ತು. 'ಅಸತ್ತು' ಎಂದರೆ ಬಿಡಿಯಾಗಿರುವ ನಾಮರೂಪಗಳೆಂಬ ವಿಶೇಷ (ರೂಪಕ್ಕೆ) ವಿರುದ್ಧವಾದ ರೂಪವುಳ್ಳ ವಿಕಾರವಾಗದೆ ಇರುವ[1] ಬ್ರಹ್ಮದ ಹೆಸರು. (ಇಷ್ಟೇ ಹೊರತು) ಅತ್ಯಂತವಾಗಿ ಅಸತ್ತೇ (ಇಲ್ಲದ್ದೇ) ಎಂದ(ರ್ಥ)ವಲ್ಲ. ಏಕೆಂದರೆ ಅಸತ್ತಿನಿಂದ ಸತ್ತು ಹುಟ್ಟಲಾರದು.[2] 'ಇದು' ಎಂದರೆ ನಾಮರೂಪಗಳೆಂಬ ವಿಶೇಷ(ರೂಪ)ವುಳ್ಳ ವ್ಯಾಕೃತವಾದ ಜಗತ್ತು; ಮೊದಲು ಎಂದರೆ ಮುಂಚೆ, ಸೃಷ್ಟಿಗೆ ಪೂರ್ವದಲ್ಲಿ ಅಸತ್ತೆಂಬ ಶಬ್ದಕ್ಕೆ ವಾಚ್ಯವಾದ ಬ್ರಹ್ಮವೇ ಆಗಿತ್ತು.[3] ಅದರಿಂದ(ಲೇ) ಎಂದರೆ (ಆ) ಅಸತ್ತಿನಿಂದಲೇ ಸತ್ತು ಎಂದರೆ ನಾಮರೂಪ ಎಂಬ ವಿಶೇಷರೂಪಗಳಿಂದ ವಿಂಗಡವಾಗಿರುವ (ಜಗತ್ತು) ಹುಟ್ಟಿತು, ಉಂಟಾಯಿತು. ತಂದೆಗಿಂತ (ಬೇರೆಯಾಗಿ) ಮಗನು (ಹುಟ್ಟುವಂತೆ) ಅದಕ್ಕಿಂತ ತೀರ ಬೇರೆಯಾಗಿ (ಹುಟ್ಟಿ)ತೇನು ? ಎಂದರೆ ಹಾಗಲ್ಲ–ಎಂದು (ಶ್ರುತಿ) ಹೇಳುತ್ತಿದೆ : ಅದು (ಆ) ಅಸತ್ ಎಂಬ ಶಬ್ದದಿಂದ ಹೇಳಲ್ಪಡುವ (ಬ್ರಹ್ಮವು) ತಾನೇ ತನ್ನನ್ನೇ ಮಾಡಿತು, ಮಾಡಿಕೊಂಡಿತು.

(ಭಾಷ್ಯ)

೧೮೩. ಯಸ್ಮಾತ್ ಏವಮ್, ತಸ್ಮಾದ್ ತತ್ ಬ್ರಹ್ಮೈವ ಸುಕೃತಂ ಸ್ವಯಂ ಕರ್ತೃ ಉಚ್ಯತೇ । ಸ್ವಯಂ ಕರ್ತೃ ಬ್ರಹ್ಮ ಇತಿ ಪ್ರಸಿದ್ಧಂ ಲೋಕೇ ಸರ್ವಕಾರಣತ್ವಾತ್ । ಯಸ್ಮಾದ್ ವಾ ಸ್ವಯಮ್ ಅಕರೋತ್ ಸರ್ವಂ ಸರ್ವಾತ್ಮನಾ ತಸ್ಮಾತ್ ಪುಣ್ಯರೂಪೇಣಾಪಿ ತದೇವ ಬ್ರಹ್ಮ ಕಾರಣಂ ಸುಕೃತಮ್ ಉಚ್ಯತೇ । ಸರ್ವಥಾಪಿ ತು ಫಲಸಂಬನ್ಧಾದಿಕಾರಣಂ ಸುಕೃತಶಬ್ದವಾಚ್ಯಂ ಪ್ರಸಿದ್ಧಂ ಲೋಕೇ । ಯದಿ ಪುಣ್ಯಂ ಯದಿ ವಾ ಅನ್ಯತ್ ಸಾ ಪ್ರಸಿದ್ಧಿಃ ನಿತ್ಯೇ ಚೇತನವತ್ಕಾರಣೇ ಸತಿ ಉಪಪದ್ಯತೇ । ತಸ್ಮಾತ್ ಅಸ್ತಿ ತದ್ ಬ್ರಹ್ಮ । ಸುಕೃತಪ್ರಸಿದ್ಧೇಃ ॥

---

1. "ಅವ್ಯಾಕೃತಂ" ಎಂಬ ವಾ॥ ಪಾಠವಲ್ಲಿ ವಿಂಗಡವಾಗಿರುವ ಎಂದು ಕನ್ನಡಿಸಬೇಕು.

2. ಛಾ. ೬-೨-೨ ರ ಸೂಚನೆ. ಈ ಶ್ರುತಿಯಲ್ಲಿಯೂ ಛಾ. ೩-೧೯-೧ ರಲ್ಲಿಯೂ ಅಸತ್ತೆಂದರೆ ಅವ್ಯಾಕೃತನಾಮರೂಪಗಳ ಬೀಜವಾದ ಬ್ರಹ್ಮವೇ ಎಂದು ಸೂ.ಭಾ. ೧-೪-೧೫ರಲ್ಲಿ ನಿಶ್ಚಯಿಸಿದೆ. ಗೀ. ಭಾ. ೯-೧೯ರಲ್ಲಿ ಸತ್ ಅಸತ್ ಎಂಬ ಶಬ್ದಗಳ ವ್ಯಾಖ್ಯಾನವನ್ನು ನೋಡಿರಿ.

3. ಈಗಲೂ ಬ್ರಹ್ಮವೇ, ಆದರೆ ವ್ಯಾಕೃತವೂ ಆಗಿದೆ. ಐ.ಭಾ. ೧-೧(ಛಾ.ಭಾ. ೨೮) ನೋಡಿ.

(ಭಾಷ್ಯಾರ್ಥ)

ಹೀಗಿರುತ್ತದೆಯಷ್ಟೆ. ಈ ಕಾರಣದಿಂದ ಅದು ಎಂದರೆ ಬ್ರಹ್ಮವೇ ಸುಕೃತವು ಎಂದರೆ ಸ್ವಯಂ ಕರ್ತೃ[1] ಎಂದು ಎನಿಸಿಕೊಳ್ಳುತ್ತದೆ. ಬ್ರಹ್ಮವು ಎಲ್ಲಕ್ಕೂ ಕಾರಣವಾಗಿರುವದರಿಂದ ಸ್ವಯಂಕರ್ತೃ ಎಂದು ಲೋಕದಲ್ಲಿ[2] ಪ್ರಸಿದ್ಧವಾಗಿರುತ್ತದೆ. ಅಥವಾ (ಬ್ರಹ್ಮವು) ತಾನೇ ಎಲ್ಲವನ್ನೂ ಎಲ್ಲದರ ರೂಪದಿಂದ[3] ಮಾಡಿತಾದ್ದರಿಂದ ಪುಣ್ಯರೂಪದಿಂದಲೂ ಅದೇ ಬ್ರಹ್ಮವೇ ಕಾರಣವಾಗಿರುತ್ತದೆಯಾಗಿ[4] ಸುಕೃತ ಎನಿಸಿಕೊಳ್ಳುತ್ತದೆ. ಹೇಗೇ ಆಗಿರಲಿ, ಫಲಸಂಬಂಧವೇ ಮುಂತಾದದ್ದಕ್ಕೆ[5] ಕಾರಣವಾಗಿ ಸುಕೃತ ಎಂಬ ಶಬ್ದಕ್ಕೆ ವಾಚ್ಯವಾಗಿರುವ ಪದಾರ್ಥವು ಲೋಕದಲ್ಲಿ ಪ್ರಸಿದ್ಧವಾಗಿರುತ್ತದೆ.[6] (ಅಲ್ಲಿ ಸುಕೃತವೆಂದರೆ) ಪುಣ್ಯವೇ ಆಗಲಿ ಅಥವಾ ಮತ್ತೊಂದೇ ಆಗಿರಲಿ,[7] ಆ ಪ್ರಸಿದ್ಧಿಯು ನಿತ್ಯವಾಗಿರುವ ಚೇತನವುಳ್ಳ ಕಾರಣವೊಂದಿದ್ದರೇ ಹೊಂದುತ್ತದ. ಆದ್ದರಿಂದ ಆ ಬ್ರಹ್ಮವು ಇದೆ; ಏಕೆಂದರೆ ಸುಕೃತವು (ಇದೆ) ಎಂಬ ಪ್ರಸಿದ್ಧಿಯಿರುತ್ತದೆ.

1. ತಾನೇ ಸ್ವತಂತ್ರವಾಗಿ ಮಾಡುವದು, ಮತ್ತೊಂದರ ಪ್ರೇರಣೆಯಿಂದ ಅಥವಾ ಸಹಾಯದಿಂದ ಮಾಡತಕ್ಕದ್ದಲ್ಲ. ಸುಕೃತ ಎಂಬಲ್ಲಿ ಕ್ತ ಎಂಬ ಪ್ರತ್ಯಯವನ್ನು ಕರ್ತ್ರರ್ಥದಲ್ಲಿ ಉಪಯೋಗಿಸಿರುವದು ವೈದಿಕಪ್ರಯೋಗ.

2. ಶಾಸ್ತ್ರಜ್ಞರ ಲೋಕದಲ್ಲಿ.

3. ಜಗತ್ತಿನಲ್ಲಿ ಕಾರ್ಯವನ್ನುಂಟುಮಾಡುವ ಕಾರಣವೆಲ್ಲ ಬ್ರಹ್ಮವೇ; ಆದ್ದರಿಂದ ಪುಣ್ಯರೂಪದಿಂದ ಕಾರಣವಾಗಿರುವದೂ ಬ್ರಹ್ಮವೇ. ಸೂ. ಭಾ. ೨-೩-೧೩; ಛಾ. ೬-೪-೩ ("ತತ್ತೇಜ ಐಕ್ಷತ" ಎಂಬುದರ ವ್ಯಾಖ್ಯಾನ)–ಇವುಗಳಲ್ಲಿ ವ್ಯಾವಹಾರಿಕಕಾರಣರೂಪವಾಗಿಯೂ ಬ್ರಹ್ಮವೇ ಇರುವದೆಂದು ಹೇಳಿದೆ. ಸೂ. ಭಾ. ೧-೪-೨೬ ರಲ್ಲಿ ಬ್ರಹ್ಮವು ಎಲ್ಲವರ ರೂಪದಿಂದ ಉಂಟಾಗುವದೆಂದೂ ಹೇಳಿದೆ.

4. ಪುಣ್ಯಫಲವನ್ನು ಕೊಡುತ್ತದೆಯಾಗಿ.

5. ಫಲವನ್ನು ಸೇರಿಸುವದಲ್ಲದೆ ಆದರ ಭೋಗ, ಸುಖ ಇವುಗಳಿಗೆ.

6. ಸುಕೃತವಿಶೇಷದಿಂದ ಇಂಥ ಫಲವು ಬಂದಿದೆ ಎಂದು ಜನರು ಅನ್ನುವರು.

7. ಕರ್ಮವಲ್ಲದೆ ಆದರ ಫಲವಾಗಿ ಅದೃಷ್ಟ, ಅಪೂರ್ವ ಎಂಬುದೊಂದು ಉತ್ಪನ್ನವಾಗಿ ಫಲವನ್ನು ಕೊಡುವದೆಂದು ಮೀಮಾಂಸಕರೆನ್ನುತ್ತಿದ್ದರು. ಪುಣ್ಯವೆಂದರೆ ಕರ್ಮವೇ ಆಗಲಿ ಅಪೂರ್ವವೇ ಆಗಲಿ ಚೇತನರೂಪನಾದ ಈಶ್ವರನ ಅನುಗ್ರಹವಿಲ್ಲದೆ ಫಲವನ್ನು ಕೊಡಲಾರದು ಎಂದು ಅಭಿಪ್ರಾಯ. ಸೂ. ಭಾ. ೩-೩-೪೧; ಬೃ. ಭಾ. ೩-೮-೯. "ದದತೋ ಮನುಷ್ಯಾಃ ಪ್ರಶಂಸನ್ತಿ" ಎಂಬುದರ ವ್ಯಾಖ್ಯಾನವನ್ನು ನೋಡಿ.

# ೧೩. ಆನಂದಹೇತುವಾದ್ದರಿಂದ ಬ್ರಹ್ಮವು ಇದೆ

(ಭಾಷ್ಯ)

೧೮೪. ಇತಶ್ಚಾಸ್ತಿ । ಕುತಃ? ರಸತ್ವಾತ್ । ಕುತೋ ರಸತ್ವಪ್ರಸಿದ್ಧಿ ರ್ಬ್ರಹ್ಮಣ ಇತಿ? ಅತ ಆಹ—

(ಭಾಷ್ಯಾರ್ಥ)

ಈ ಕಾರಣದಿಂದಲೂ (ಬ್ರಹ್ಮವು) ಇದೆ. ಯಾವ ಕಾರಣದಿಂದ? ಎಂದರೆ ರಸವಾಗಿರುವದರಿಂದ. ಬ್ರಹ್ಮವು ರಸವೆಂದು ಹೇಗೆ ಗೊತ್ತಾಗುತ್ತದೆ? ಎಂದರೆ ಅದಕ್ಕೆ (ಶ್ರುತಿ) ಹೇಳುತ್ತದೆ:—

**ಯದ್ವೈ ತತ್ ಸುಕೃತಮ್ । ರಸೋ ವೈ ಸಃ । ರಸಗ್ಂ ಹ್ಯೇ ವಾಯಂ ಲಬ್ಧ್ವಾನನ್ದೀ ಭವತಿ ॥ ೨ ॥**

೨. ಆ ಸುಕೃತವೆಂಬುದು ಇದೆಯಲ್ಲ, ಅದು ರಸವೇ. ರಸವನ್ನು ಪಡೆದೇ ಅಲ್ಲವೆ, ಇವನು ಆನಂದಿಯಾಗುತ್ತಾನೆ?

(ಭಾಷ್ಯ)

೧೮೫. ಯದ್ವೈ ತತ್ ಸುಕೃತಮ್, ರಸೋ ವೈ ಸಃ । ರಸೋ ನಾಮ ತೃಪ್ತಿಹೇತುಃ ಆನನ್ದಕರಃ ಮಧುರಾಮ್ಲಾದಿಃ ಪ್ರಸಿದ್ಧೋ ಲೋಕೇ । ರಸಮೇವ ಹಿ[1] ಅಯಂ ಲಬ್ಧ್ವಾ ಪ್ರಾಪ್ಯ ಆನನ್ದೀ ಸುಖೀ ಭವತಿ । ನಾಸತಃ ಆನನ್ದಹೇತುತ್ವಂ ದೃಷ್ಟಂ ಲೋಕೇ । ಬಾಹ್ಯಾನನ್ದಸಾಧನರಹಿತಾ ಅಪಿ ಅನೀಹಾ ನಿರೇಷಣಾ ಬ್ರಾಹ್ಮಣಾಃ ಬಾಹ್ಯರಸಲಾಭಾದಿವ ಸಾನನ್ದಾ ದೃಶ್ಯನ್ತೇ ವಿದ್ವಾಂಸಃ । ನೂನಂ ಬ್ರಹ್ಮೈವ ರಸಸ್ತೇಷಾಮ್ । ತಸ್ಮಾತ್ ಅಸ್ತಿ ತತ್ ತೇಷಾಮಾನನ್ದಕಾರಣಂ ರಸವದ್ ಬ್ರಹ್ಮ ॥

(ಭಾಷ್ಯಾರ್ಥ)

ಆ ಸುಕೃತವೆಂಬುದಿದೆಯಲ್ಲ, ಅದು ರಸವೇ. ರಸ ಎಂದರೆ ತೃಪ್ತಿಗೆ ಕಾರಣವಾಗಿ ಆನಂದವನ್ನುಂಟುಮಾಡುವ ಸಿಹಿ, ಹುಳಿ–ಮುಂತಾದದ್ದೆಂದು ಲೋಕದಲ್ಲಿ ಪ್ರಸಿದ್ಧವಾಗಿರುತ್ತದೆ. ರಸವನ್ನೇ ಈ (ಮನುಷ್ಯನು) ಪಡೆದುಕೊಂಡರೆ, ದೊರಕಿಸಿ

---

1. 'ಹಿ' ಎಂಬ ಮಾತು ಆ॥ ಪಾಠದಲ್ಲಿ ಬಿಟ್ಟುಹೋಗಿದೆ.

ಕೊಂಡರೆ, ಆನಂದಿಯಾಗುವನು, ಸುಖಿ(ಯಾಗುವನು). ಇಲ್ಲದಿರುವ (ಪದಾರ್ಥವು) ಆನಂದಕ್ಕೆ ಕಾರಣವಾಗಿರುವದು ಲೋಕದಲ್ಲಿ ಕಂಡುಬಂದಿರುವದಿಲ್ಲ. ಹೊರಗಿನ ಆನಂದಸಾಧನವು ಇಲ್ಲದಿದ್ದರೂ, ಯಾವ ಕೆಲಸವನ್ನೂ ಮಾಡದೆ ಯಾವ ಬಯಕೆಯೂ ಇಲ್ಲದೆ(ಯೇ) ಜ್ಞಾನಿಗಳಾದ ಬ್ರಾಹ್ಮಣರು[1] ಹೊರಗಿನ ರಸವನ್ನು ಪಡೆದುಕೊಂಡಂತೆ ಆನಂದದಿಂದೊಡಗೂಡಿರುವದು ಕಂಡುಬರುತ್ತದೆ. (ಆದ್ದರಿಂದ) ಅವರಿಗೆ ನಿಜವಾಗಿಯೂ ಬ್ರಹ್ಮವೇ ರಸ(ವಾಗಿರಬೇಕೆಂದಾಯಿತು). ಆದ್ದರಿಂದ ಅವರಿಗೆ ರಸದಂತೆ ಆನಂದಕ್ಕೆ ಕಾರಣವಾಗಿರುವ ಆ ಬ್ರಹ್ಮವು ಇದೆ (ಎಂದು ಸಿದ್ಧವಾಯಿತು).

## ೧೪. ಪ್ರಾಣಿಗಳ ಪ್ರವೃತ್ತಿಗೆ ಕಾರಣವಾಗಿರುವದರಿಂದ ಬ್ರಹ್ಮವು ಇದೆ

(ಭಾಷ್ಯ)

೧೮೬. ಇತಶ್ಚಾಸ್ತಿ । ಕುತಃ? ಪ್ರಾಣನಾದಿಕ್ರಿಯಾದರ್ಶನಾತ್ । ಅಯಮಪಿ ಹಿ ಪಿಣ್ಡೋ ಜೀವತಃ ಪ್ರಾಣೇನ ಪ್ರಾಣಿತಿ ಅಪಾನೇನ ಅಪಾನಿತಿ । ಏವಂ ವಾಯವೀಯಾ ಐನ್ದ್ರಿಯಕಾಶ್ಚ ಚೇಷ್ಟಾಃ ಸಂಹತೈಃ ಕಾರ್ಯಕರಣೈರ್ನಿರ್ವರ್ತ್ಯಮಾನಾ ದೃಶ್ಯನ್ತೇ । ತಚ್ಚ ಏಕಾರ್ಥವೃತ್ತಿತ್ವೇನ ಸಂಹನನಂ ನಾನ್ತರೇಣ ಚೇತನಮ್ ಅಸಂಹತಂ ಸಂಭವತಿ । ಅನ್ಯತ್ರಾದರ್ಶನಾತ್ । ತದಾಹ --

(ಭಾಷ್ಯಾರ್ಥ)

ಈ ಕಾರಣದಿಂದಲೂ (ಬ್ರಹ್ಮವು) ಇದೆ. ಯಾವ ಕಾರಣದಿಂದ? ಪ್ರಾಣವೇ ಮುಂತಾದ ಕ್ರಿಯೆಗಳು ಕಂಡುಬರುವದರಿಂದ. ಹೇಗೆಂದರೆ : ಬದುಕಿರುವಾತನ ಈ ಶರೀರವುಕೂಡ ಪ್ರಾಣ(ವಾಯುವಿ)ನಿಂದ ಉಸಿರುಬಿಡುತ್ತದೆ, ಅಪಾನ(ವಾಯುವಿ)ನಿಂದ ಉಸಿರನ್ನು ಎಳೆದುಕೊಳ್ಳುತ್ತದೆ. ಹೀಗೆ ವಾಯುವಿನ ಮತ್ತು ಇಂದ್ರಿಯಗಳ ವ್ಯಾಪಾರಗಳು ಒಂದಕ್ಕೊಂದು **ಸಂಹತ**ವಾಗಿರುವ ದೇಹೇಂದ್ರಿಯಗಳಿಂದ ನಡೆಸಲ್ಪಡುತ್ತಿರುವದು ಕಂಡುಬರುತ್ತದೆ. ಒಂದೇ ಪ್ರಯೋಜನಕ್ಕಾಗಿ ಕೆಲಸಮಾಡಲು ಹಾಗೆ ಸೇರಿಕೊಂಡಿರುವದೆಂಬುದು **ಅಸಂಹತ**ನಾದ ಚೇತನವಿಲ್ಲದೆ ಆಗಲೇ ಆರದು.[2]

---

1. ಬ್ರಹ್ಮದ ಚಿಂತನೆಯಲ್ಲಿ ನಿರತರಾದವರು.

2. ಸಂಹತವಾಗಿ (ಒಟ್ಟಿಗೆ ಸೇರಿ) ಕೆಲಸಮಾಡುವದೆಂಬುದು ಅಸಂಹತವಾದ ಸ್ವತಂತ್ರವಾದದ್ದರ ಪ್ರಯೋಜನಕ್ಕಾಗಿ. ಕೇ.ಭಾ. ೧-೨ (ಭಾ. ಭಾ. ೧೬); ಕ. ಭಾ. ೨-೨-೧ (ಭಾ. ಭಾ. ೧೩೧); ಐ. ಭಾ. ೧-೩-೧೧ (ಭಾ. ಭಾ. ೫೧); ಪ್ರ. ಭಾ. ೪-೧.

ಏಕೆಂದರೆ ಬೇರೆಯ ಕಡೆಯಲ್ಲಿ (ಹಾಗೆ ತಾವೇ ಸಂಹತವಾಗಿರುವದು) ಕಂಡಿಲ್ಲ. ಅದನ್ನು (ಈ ಶ್ರುತಿ) ಹೇಳುತ್ತದೆ:—

**ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ । ಯದೇಷ ಆಕಾಶ ಆನನ್ದೋ ನ ಸ್ಯಾತ್ । ಏಷ ಹ್ಯೇವಾನನ್ದಯಾತಿ ॥ ೩ ॥**

೩. ಈ ಆಕಾಶದಲ್ಲಿ ಆನಂದವು ಇಲ್ಲದೆ ಇದ್ದರೆ ಯಾವನುತಾನೆ ಉಸಿರು ತೆಗೆದುಕೊಂಡಾನು, ಯಾವನು ಉಸಿರುಬಿಟ್ಟಾನು? ಈತನೇ ಅಲ್ಲವೆ, ಆನಂದಪಡಿಸುವವನು ?

(ಭಾಷ್ಯ)

೧೮೭. ಯತ್ ಯದಿ ಏಷ ಆಕಾಶೇ ಪರಮೇ ವ್ಯೋಮ್ನಿ ಗುಹಾಯಾಂ ನಿಹಿತಃ ಆನನ್ದಃ ನ ಸ್ಯಾತ್ ನ ಭವೇತ್ ಕೋ ಹ್ಯೇವ ಲೋಕೇ ಅನ್ಯಾತ್ ಅಪಾನ ಚೇಷ್ಟಾಂ ಕುರ್ಯಾತ್? ತಸ್ಮಾತ್ ಅಸ್ತಿ ತದ್ ಬ್ರಹ್ಮ ಯದರ್ಥಾಃ ಕಾರ್ಯ ಕರಣಪ್ರಾಣನಾದಿಚೇಷ್ಟಾಃ । ತತ್ಕೃತ ಏವ ಚಾನನ್ದೋ ಲೋಕಸ್ಯ । ಕುತಃ? ಏಷ ಹಿ ಏವ ಪರಃ ಆತ್ಮಾ ಆನನ್ದಯಾತಿ ಆನನ್ದಯತಿ ಸುಖಯತಿ ಲೋಕಂ ಧರ್ಮಾನುರೂಪಮ್ । ಸ ಏವಾತ್ಮಾ ಆನನ್ದರೂಪಃ ಅವಿದ್ಯಯಾ ಪರಿಚ್ಛಿನ್ನೋ ವಿಭಾವ್ಯತೇ ಪ್ರಾಣಿಭಿಃ ಇತ್ಯರ್ಥಃ ॥

(ಭಾಷ್ಯಾರ್ಥ)

ಯತ್ = ಯದಿ(ರೆ). ಆಕಾಶದಲ್ಲಿ ಎಂದರೆ ಪರಮವ್ಯೋಮದಲ್ಲಿರುವ ಗುಹೆಯಲ್ಲಿ [1] ಇಡಲ್ಪಟ್ಟಿರುವ ಆನಂದವು ಇಲ್ಲವಾಗಿದ್ದರೆ, ಇರದೆ ಇದ್ದರೆ, ಲೋಕದಲ್ಲಿ ಯಾವನುತಾನೆ 'ಅನ್ಯಾತ್' ಎಂದರೆ ಅಪಾನ(ವೃತ್ತಿಯ) ವ್ಯಾಪಾರವನ್ನು ಮಾಡಿಯಾನು? ಆದ್ದರಿಂದ ಯಾವದಕ್ಕಾಗಿ [2] ದೇಹ, ಇಂದ್ರಿಯ–ಇವುಗಳ ಪ್ರಾಣವ್ಯಾಪಾರವೇ ಮುಂತಾದವುಗಳು (ನಡೆಯುತ್ತಿರುವವೋ) ಆ ಬ್ರಹ್ಮವು ಇದೆ. ಅದರಿಂದಲೇ ಜನರಿಗೆ ಆನಂದವುಂಟಾಗುತ್ತದೆ. (ಅದು) ಹೇಗೆ? ಎಂದರೆ ಈತನೇ ಎಂದರೆ (ಈ)

---

1. ಹೃದಯಾಕಾಶದಲ್ಲಿರುವ ಬುದ್ಧಿಗುಹೆಯಲ್ಲಿ. ಭಾ. ಭಾ. ೧೦೮ನ್ನು ನೋಡಿ.

2. ಅಸಂಹತವಾದ ಯಾವ ವಸ್ತುವಿನ ಉಪಯೋಗಕ್ಕಾಗಿ ಸಂಹತವಾದ ದೇಹೇಂದ್ರಿಯವ್ಯಾಪಾರಗಳು ನಡೆಯುತ್ತಿರುವವೋ ಆ ವಸ್ತುವಿರಬೇಕು.

ಪರಮಾತ್ಮನೇ ಜನರನ್ನು (ಅವರ) ಧರ್ಮಕ್ಕೆ ಅನುಗುಣವಾಗಿ [1] (ಆನನ್ದಯಾತಿ = ಆನನ್ದಯತಿ) ಸುಖಿಗಳನ್ನಾಗಿ ಮಾಡುವನು. ಆ ಆನಂದರೂಪನಾದ ಆತ್ಮನೇ ಅವಿದ್ಯೆಯಿಂದ ಅಳತೆಗೆ ಕಟ್ಟುಬಿದ್ದ (ಸುಖವಾಗಿ) [2] ಪ್ರಾಣಿಗಳಿಗೆ ತೋರುತ್ತಿರುವನು ಎಂದರ್ಥ.

## ೧೫. ಭಯಾಭಯಗಳಿಗೆ ಕಾರಣವಾಗಿರುವದರಿಂದ ಬ್ರಹ್ಮವು ಇದೆ

(ಭಾಷ್ಯ)

೧೮೮. ಭಯಾಭಯಹೇತುತ್ವಾದ್ವಿದ್ವದವಿದುಷೋಃ ಅಸ್ತಿ ತದ್ ಬ್ರಹ್ಮ। ಸದ್ವಸ್ತ್ವಾಶ್ರಯಣೇನ ಹಿ ಅಭಯಂ ಭವತಿ। ನಾಸದ್ವಸ್ತ್ವಾಶ್ರಯಣೇನ ಭಯನಿವೃತ್ತಿರುಪಪದ್ಯತೇ। ಕಥಮಭಯಹೇತುತ್ವಮಿತಿ? ಉಚ್ಯತೇ—

(ಭಾಷ್ಯಾರ್ಥ)

ಅಜ್ಞಾನಿಗಳಿಗೂ ಜ್ಞಾನಿಗಳಿಗೂ ಹೆದರಿಕೆಗೂ ಹೆದರಿಕೆಯಿಲ್ಲದಿರುವದಕೂ ಕಾರಣವಾಗಿರುವದರಿಂದ ಆ ಬ್ರಹ್ಮವು ಇದೆ. ಇರುವ ವಸ್ತುವನ್ನು ಆಶ್ರಯಿಸುವದರಿಂದಲೇ ಅಲ್ಲವೆ, ಅಭಯವುಂಟಾಗುವದು? ಇಲ್ಲದ ವಸ್ತುವಿನ ಆಶ್ರಯದಿಂದ ಹೆದರಿಕೆಯು ಇಲ್ಲವಾಗುವದೆಂಬುದು ಹೊಂದುವದಿಲ್ಲ. (ಬ್ರಹ್ಮವು) ಅಭಯಕ್ಕೆ ಕಾರಣವಾಗಿದೆ ಎಂಬುದು ಹೇಗೆ? ಎಂದರೆ (ಶ್ರುತಿ) ಹೇಳುತ್ತದೆ:—

### ಜ್ಞಾನಿಗೆ ಅಭಯಕಾರಣವು ಬ್ರಹ್ಮ

**ಯದಾ ಹ್ಯೇವೈಷ ಏತಸ್ಮಿನ್ನದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽಭಯಂ ಪ್ರತಿಷ್ಠಾಂ ವಿನ್ದತೇ। ಅಥ ಸೋಽಭಯಂ ಗತೋ ಭವತಿ ॥ ೪ ॥**

---

1. ಧರ್ಮವು ಹೆಚ್ಚಾದರೆ ಆನಂದವೂ ಹೆಚ್ಚುತ್ತದೆ ಎಂದು ಭಾವ. ಉಳಿದವರಿಗೆ ಆನಂದವನ್ನುಂಟುಮಾಡುವವನು ತಾನು ಆನಂದಸ್ವರೂಪನಾಗಿರಬೇಕು. ಆದ್ದರಿಂದ ಜೀವರುಗಳಲ್ಲಿ ಧರ್ಮಕ್ಕೆ ತಕ್ಕಂತೆ ಆನಂದತಾರತಮ್ಯವು ಕಾಣುತ್ತಿರುವದರಿಂದ ಇದಕ್ಕೆ ಮೂಲವಾದ ಆನಂದಸ್ವರೂಪವಾದ ಬ್ರಹ್ಮವು ಇದೆ ಎಂದಾಯಿತು.

2. ವಿಷಯಸುಖದ ರೂಪದಿಂದ, ಭಾ. ಭಾ. ೧೮೭ ನ್ನು ನೋಡಿ.

೪. ಯಾವಾಗಲೇ ಈತನು ಈ ಅದೃಶ್ಯವಾದ ಅನಾತ್ಮ್ಯವಾದ ಅನಿರುಕ್ತವಾದ ಅನಿಲಯನವಾದ (ಬ್ರಹ್ಮದಲ್ಲಿ) ಅಭಯವಾಗಿ ಪ್ರತಿಷ್ಠೆಯನ್ನು ಪಡೆಯುತ್ತಾನೋ ಆಗಲೇ ಅವನು ಅಭಯವನ್ನು ಹೊಂದಿದವನಾಗುತ್ತಾನೆ.

(ಭಾಷ್ಯ)

೧೮೯. ಯದಾ ಹಿ ಏವ ಯಸ್ಮಾತ್ ಏಷಃ ಸಾಧಕಃ ಏತಸ್ಮಿನ್ ಬ್ರಹ್ಮಣಿ । ಕಿಂವಿಶಿಷ್ಟೇ ? ಅದೃಶ್ಯೇ ದೃಶ್ಯಂ ನಾಮ ದ್ರಷ್ಟವ್ಯಂ ವಿಕಾರಃ । ದರ್ಶನಾರ್ಥತ್ವಾದ್ ವಿಕಾರಸ್ಯ । ನ ದೃಶ್ಯಮ್ ಅದೃಶ್ಯಮ್ । ಅವಿಕಾರಃ ಇತ್ಯರ್ಥಃ । ಏತಸ್ಮಿನ್ ಅದೃಶ್ಯೇ ಅವಿಕಾರೇ ಅವಿಷಯಭೂತೇ ಅನಾತ್ಮ್ಯೇ ಅಶರೀರೇ । ಯಸ್ಮಾತ್ ಅದೃಶ್ಯಮ್, ತಸ್ಮಾತ್ ಅನಾತ್ಮ್ಯಮ್ । ಯಸ್ಮಾತ್ ಅನಾತ್ಮ್ಯಮ್ ತಸ್ಮಾತ್ ಅನಿರುಕ್ತಮ್ । ವಿಶೇಷೋ ಹಿ ನಿರುಚ್ಯತೇ ವಿಶೇಷಶ್ಚ ವಿಕಾರಃ । ಅವಿಕಾರಂ ಚ ಬ್ರಹ್ಮ । ಸರ್ವವಿಕಾರಹೇತುತ್ವಾತ್ । ತಸ್ಮಾತ್ ಅನಿರುಕ್ತಮ್ । ಯತ ಏವಮ್ ತಸ್ಮಾತ್ ಅನಿಲಯನಮ್ । ನಿಲಯನಂ ನೀಡಃ ಆಶ್ರಯಃ । ನ ನಿಲಯನಮ್ ಅನಿಲಯನಮ್ ಅನಾಧಾರಮ್ । ತಸ್ಮಿನ್ ಏತಸ್ಮಿನ್ ಅದೃಶ್ಯೇ ಅನಾತ್ಮ್ಯೇ ಅನಿರುಕ್ತೇ ಅನಿಲಯನೇ ಸರ್ವಕಾರ್ಯಧರ್ಮವಿಲಕ್ಷಣೇ ಬ್ರಹ್ಮಣಿ ಇತಿ ವಾಕ್ಯಾರ್ಥಃ । ಅಭಯಮ್ ಇತಿ ಕ್ರಿಯಾವಿಶೇಷಣಮ್ । ಅಭಯಾಮ್ ಇತಿ ವಾ ಲಿಙ್ಗಾನ್ತರಂ ಪರಿಣಮ್ಯತೇ । ಪ್ರತಿಷ್ಠಾಂ ಸ್ಥಿತಿಮ್ ಆತ್ಮಭಾವಂ ವಿನ್ದತೇ ಲಭತೇ । ಅಥ ತದಾ ಸಃ ತಸ್ಮಿನ್ ನಾನಾತ್ವಸ್ಯ ಭಯಹೇತೋಃ ಅವಿದ್ಯಾಕೃತಸ್ಯ ಅದರ್ಶನಾತ್ ಅಭಯಂ ಗತೋ ಭವತಿ ॥

(ಭಾಷ್ಯಾರ್ಥ)

ಯಾವಾಗಲೇ ಈ ಸಾಧಕನು 'ಹಿ' ಯಾವ ಕಾರಣದಿಂದ ಈ ಬ್ರಹ್ಮದಲ್ಲಿ. ಎಂಥ (ಬ್ರಹ್ಮದಲ್ಲಿ) ? ಎಂದರೆ **ಅದೃಶ್ಯವಾದ**–ದೃಶ್ಯವಾದ ಎಂದರೆ ನೋಡುವದಕ್ಕೆ ಆಗುವ ವಿಕಾರವು; ಏಕೆಂದರೆ ವಿಕಾರವಾಗುವದು ದರ್ಶನಕ್ಕಾಗಿ. ದೃಶ್ಯವಲ್ಲದ್ದು ಅದೃಶ್ಯವು; ಅವಿಕಾರವಾದದ್ದು ಎಂದರ್ಥ. ಈ ಅದೃಶ್ಯವಾದ ಅವಿಕಾರವಾದ–(ಯಾವದಕ್ಕೂ) ವಿಷಯವಲ್ಲದ ; ಅನಾತ್ಮ್ಯವಾದ ಎಂದರೆ ಶರೀರವಿಲ್ಲದ(ಎಂದರ್ಥ). ಅದೃಶ್ಯವಾಗಿರುತ್ತದೆ, ಆದ್ದರಿಂದಲೇ ಅನಾತ್ಮ್ಯವಾಗಿರುತ್ತದೆ; ಅನಾತ್ಮ್ಯವಾಗಿರುವದರಿಂದ ಅನಿರುಕ್ತವಾಗಿರುತ್ತದೆ. ವಿಶೇಷವನ್ನೇ ಅಲ್ಲವೆ, ಗೊತ್ತುಮಾಡಿ ಹೇಳುವರು ? ವಿಕಾರವೆಂಬುದು ವಿಶೇಷವು. ಆದರೆ ಬ್ರಹ್ಮವು ಅವಿಕಾರವಾಗಿರುತ್ತದೆ,

**ಏಕೆಂದರೆ ಅದು ಎಲ್ಲಾ ವಿಕಾರಗಳಿಗೂ**[1] **ಕಾರಣವಾಗಿರುತ್ತದೆ, ಆದ್ದರಿಂದ ಅದು ಅನಿರುಕ್ತವು.**[2] ಹೀಗಿರುತ್ತದೆಯಷ್ಟೆ, ಆದ್ದರಿಂದ (ಅದು) **ಅನಿಲಯನವು.** ನಿಲಯನ ಎಂದರೆ ಗೂಡು, ಆಶ್ರಯ; ನಿಲಯನವಲ್ಲದ್ದು ಅನಿಲಯನವು, ಆಧಾರ ವಲ್ಲದ್ದು ಎಂದರ್ಥ.[3] ಆ ಈ ಅದೃಶ್ಯವಾದ, ಅನಾತ್ಮ್ಯವಾದ, ಅನಿಲಯನವಾದ, ಎಂದರೆ ಕಾರ್ಯಗಳಲ್ಲಿರುವ ಯಾವ ಧರ್ಮವೂ (ಇಲ್ಲದ) ಬೇರೆಯ ಸ್ವಭಾವದ ಬ್ರಹ್ಮದಲ್ಲಿ ಎಂದು (ಒಟ್ಟು) ವಾಕ್ಯದ ಅರ್ಥವು. ಅಭಯಮ್ (ಹೆದರಿಕೆಯಿಲ್ಲದೆ) ಎಂಬುದು ಕ್ರಿಯಾವಿಶೇಷಣವು; ಅಥವಾ ಅಭಯಾಮ್ ಎಂದು ಮತ್ತೊಂದು ಲಿಂಗಕ್ಕೆ[4] ತಿರುಗಿಸಿಕೊಳ್ಳಬೇಕು. (ಅಂಜಿಕೆಯಿಲ್ಲದ) ಪ್ರತಿಷ್ಠೆಯನ್ನು, ಸ್ಥಿತಿಯನ್ನು, ತಾನೇ ಅದೆಂಬ ಭಾವನನ್ನು ಪಡೆಯುತ್ತಾನೋ (ಆ ಕಾರಣದಿಂದ)[5] ಆಗಲೇ ಅವನು ಆ (ಬ್ರಹ್ಮದಲ್ಲಿ) **ಭಯಕ್ಕೆ ಕಾರಣವಾದ ಅವಿದ್ಯಾಕಲ್ಪಿತವಾದ ನಾನಾತ್ವವನ್ನು**[6] ಕಾಣದಿರುವದರಿಂದ ಅಭಯವನ್ನು ಪಡೆದವನಾಗುತ್ತಾನೆ.

(ಭಾಷ್ಯ)

೧೯೦. ಸ್ವರೂಪಪ್ರತಿಷ್ಠೋ ಹಿ ಅಸೌ ಯದಾ ಭವತಿ ತದಾ ನಾನ್ಯತ್ ಪಶ್ಯತಿ, ನಾನ್ಯತ್ ಶೃಣೋತಿ, ನಾನ್ಯದ್ ವಿಜಾನಾತಿ । ಅನ್ಯಸ್ಯ ಹಿ ಅನ್ಯತೋ ಭಯಂ ಭವತಿ, ನಾತ್ಮನ ಏವ ಆತ್ಮನೋ ಭಯಂ ಯುಕ್ತಮ್ । ತಸ್ಮಾತ್ ಆತ್ಮೈವ ಆತ್ಮನೋ-ಭಯಕಾರಣಮ್ । ಸರ್ವತೋ ಹಿ ನಿರ್ಭಯಾ ಬ್ರಾಹ್ಮಣಾ ದೃಶ್ಯನ್ತೇ ಸತ್ಸು ಭಯಹೇತುಷು । ತಚ್ಚಾಯುಕ್ತಮ್ ಅಸತಿ ಭಯತ್ರಾಣೇ ಬ್ರಹ್ಮಣಿ । ತಸ್ಮಾತ್

---

1. ಕಾರ್ಯಗಳಿಗೂ. ಆಕಾಶವೇ ಮುಂತಾದ ಕಾರ್ಯಗಳಲ್ಲಿ ವಿಶೇಷಗಳಿರುತ್ತವೆ. ಎಲ್ಲಕ್ಕೂ ಕಾರಣವಾಗಿರುವ ಬ್ರಹ್ಮದಲ್ಲಿ ಯಾವ ವಿಶೇಷವೂ ಇರುವದಿಲ್ಲ.

2. ಅನಿರುಕ್ತ, ಅನಿಲಯನ–ಇವು ಅಮೂರ್ತದ ಧರ್ಮಗಳೆಂದು ಹೇಳಲಾಗಿತ್ತು. ಆದರೆ ಈಗ ಮೂರ್ತ, ಅಮೂರ್ತ–ಇವೆರಡಕ್ಕೂ ಅತ್ಯಂತವಿಲಕ್ಷಣವಾದ ಸ್ವಭಾವವುಳ್ಳದ್ದು ಎಂಬರ್ಥದಲ್ಲಿ ಬ್ರಹ್ಮದ ವಿಶೇಷಣಗಳಾಗಿ ಇವನ್ನು ವರ್ಣಿಸಿದೆ.

3. ಆಧಾರವಿಲ್ಲದ್ದು ಎಂದೂ ಈ ಮಾತಿಗೆ ಅರ್ಥವನ್ನು ಮಾಡಬಹುದು; ಏಕೆಂದರೆ ಬ್ರಹ್ಮವು ಮತ್ತೊಂದು ಆಧಾರವನ್ನು ಬಯಸುವದಿಲ್ಲ.

4. ಪ್ರತಿಷ್ಠಾಮ್ ಎಂಬ ಸ್ತ್ರೀಲಿಂಗವಿಶೇಷ್ಯಕ್ಕೆ ತಕ್ಕಂತೆ.

5. ತನ್ನಲ್ಲಿಯೇ ಪ್ರತಿಷ್ಠೆಯನ್ನು ಪಡೆದುಕೊಳ್ಳುತ್ತಾನಲ್ಲ, ಆ ಕಾರಣದಿಂದ ಎಂದರ್ಥ. ಯಸ್ಮಾತ್ ಎಂಬುದರ ಸ್ವಾರಸ್ಯವಿದು.

6. ಅಂಜಿಕೆಗೆ ನಾನಾತ್ವವೇ ಕಾರಣ. ಬೃ. ೧-೪-೨; ನಾನಾತ್ವಕ್ಕೆ ಅವಿದ್ಯೆಯೇ ಕಾರಣ. ಬೃ. ಭಾ. ೪-೩-೨೧ " ಆತ್ಮನೋ ವಸ್ತ್ವನ್ತರಸ್ಯ ಪ್ರತ್ಯುಪಸ್ಥಾಪಿಕಾ ಅವಿದ್ಯಾ "

ತೇಷಾಮ್ ಅಭಯದರ್ಶನಾತ್ ಅಸ್ತಿ ತದಭಯಕಾರಣಂ ಬ್ರಹ್ಮ ಇತಿ । ಕದಾ ಅಸೌ ಅಭಯಂಗತೋ ಭವತಿ ಸಾಧಕಃ ? ಯದಾ ನಾನ್ಯತ್ ಪಶ್ಯತಿ ಆತ್ಮನಿ ಚ ಅನ್ತರಂ ಭೇದಂ ನ ಕುರುತೇ ತದಾ ಅಭಯಂ ಗತೋ ಭವತಿ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಏಕೆಂದರೆ ಯಾವಾಗ ಈತನು (ತನ್ನ) ಸ್ವರೂಪದಲ್ಲಿ ನಿಂತವನಾಗುವನೋ ಆಗ ಮತ್ತೊಂದನ್ನು ಕಾಣುವದಿಲ್ಲ, ಮತ್ತೊಂದನ್ನು ಕೇಳುವದಿಲ್ಲ, ಮತ್ತೊಂದನ್ನು ಅರಿಯುವದಿಲ್ಲ.[2] (ಬೇರೆಯಾದ) ಒಬ್ಬರಿಗೆ (ತನಗಿಂತ) ಬೇರೆಯಾದದ್ದರಿಂದಲಲ್ಲವೆ, ಭಯವುಂಟಾಗುವದು ? ತನ್ನಿಂದಲೇ ತನಗೆ ಭಯ(ವುಂಟಾಗುವ)ದೆಂಬುದು ಯುಕ್ತವಾಗುವದಿಲ್ಲ.[1] ಆದ್ದರಿಂದ ತನಗೆ ತಾನೇ[3] ಅಭಯಕ್ಕೆ ಕಾರಣವು. ಭಯಕ್ಕೆ ಕಾರಣಗಳು ಇದ್ದರೂ[4] ಬ್ರಾಹ್ಮಣರು[5] ಏತರಿಂದಲೂ ಅಂಜಿಕೆಯಿಲ್ಲದೆ (ಇರುವದು) ಕಂಡುಬರುತ್ತದೆಯಲ್ಲವೆ? ಭಯದಿಂದ ರಕ್ಷಿಸುವ ಬ್ರಹ್ಮವು ಇಲ್ಲದಿದ್ದರೆ ಅದು ಹೊಂದುವಹಾಗಿಲ್ಲ. ಆದ್ದರಿಂದ ಅವರಿಗೆ ಅಭಯ(ವಿರುವದು) ಕಂಡುಬರುವದರಿಂದ ಅವರ ಅಭಯಕ್ಕೆ ಕಾರಣವಾಗಿರುವ ಬ್ರಹ್ಮವು ಇದೆ ಎಂದಾಯಿತು. ಈ ಸಾಧಕನು ಯಾವಾಗ ಅಭಯವನ್ನು ಪಡೆದುಕೊಂಡವನಾಗುತ್ತಾನೆ? ಎಂದರೆ ಯಾವಾಗ ಮತ್ತೊಂದನ್ನು ಕಾಣುವದಿಲ್ಲವೋ, ತನ್ನಲ್ಲಿ ಅಂತರವನ್ನು ಎಂದರೆ ಭೇದವನ್ನು ಮಾಡಿಕೊಳ್ಳುವದಿಲ್ಲವೋ[6] ಆಗ ಅಭಯವನ್ನು ಹೊಂದಿದವನಾಗುತ್ತಾನೆ ಎಂದು ಅಭಿಪ್ರಾಯ.

## ಅಜ್ಞಾನಿಗೆ ಭಯಕಾರಣವು ಬ್ರಹ್ಮ

**ಯದಾ ಹ್ಯೇವೈಷ ಏತಸ್ಮಿನ್ನುದರಮನ್ತರಂ ಕುರುತೇ । ಅಥ ತಸ್ಯ ಭಯಂ ಭವತಿ। ತತ್ತ್ವೇವ ಭಯಂ ವಿದುಷೋಽಮನ್ವಾನಸ್ಯ ॥ ೫ ॥**

೫. ಯಾವಾಗಲೇ ಈತನು ಇದರಲ್ಲಿ ಸ್ವಲ್ಪವಾದರೂ ಅಂತರವನ್ನು ಮಾಡಿಕೊಳ್ಳುತ್ತಾನೋ ಅದರಿಂದ ಇವನಿಗೆ ಭಯವು ಆಗುತ್ತದೆ. ಅದೇ (ಹಾಗೆ) ತಿಳಿಯುವ (ಆ) ತಿಳಿಯದಾತನಿಗೆ ಭಯವು.

---

1. ಛಾ. ೭-೨೪-೧.
2. ಬೃ. ೧-೪-೨ ; ಮಾಂ. ಕಾ. ಭಾ. ೩-೩೯.
3. ತನ್ನ ಅದ್ವಿತೀಯಸ್ವರೂಪವೇ.
4. ಇರುವಂತೆ ನಮ್ಮಗಳಿಗೆ ತೋರುತ್ತಿದ್ದರೂ.
5. ಜ್ಞಾನಿಗಳು.
6. ತನಗಿಂತ ಬೇರೆಯಾಗಿ ಮತ್ತೊಂದು ಇದೆಯೆಂದು ತಿಳಿದುಕೊಳ್ಳುವದಿಲ್ಲವೋ, ತನ್ನದು ಅದ್ವಿತೀಯಚೈತನ್ಯರೂಪವೆಂದು ಕಂಡುಕೊಳ್ಳುವನೋ.

(ಭಾಷ್ಯ)

೧೯೧. ಯದಾ ಪುನಃ ಅವಿದ್ಯಾವಸ್ಥಾಯಾಂ ಹಿ ಯಸ್ಮಾತ್ ಏಷಃ ಅವಿದ್ಯಾವಾನ್ ಅವಿದ್ಯಯಾ ಪ್ರತ್ಯುಪಸ್ಥಾಪಿತಂ ವಸ್ತು ತೈಮಿರಿಕದ್ವಿತೀಯಚನ್ದ್ರವತ್ ಪಶ್ಯತಿ ಆತ್ಮನಿ ಚ ಏತಸ್ಮಿನ್ ಬ್ರಹ್ಮಣಿ ಉತ್ ಅಪಿ ಅರಮ್ ಅಲ್ಪಮಪಿ ಅನ್ತರಂ ಛಿದ್ರಂ ಭೇದದರ್ಶನಂ ಕುರುತೇ । ಭೇದದರ್ಶನಮೇವ ಹಿ ಅನ್ತರಕರಣಮ್ ।[1] ಅಲ್ಪಮಪಿ ಭೇದಂ ಪಶ್ಯತಿ ಇತ್ಯರ್ಥಃ । ಅಥ ತಸ್ಮಾತ್ ಭೇದದರ್ಶನಾತ್ ಹೇತೋಃ ಅಸ್ಯ ಭೇದದರ್ಶಿನಃ ಆತ್ಮನಃ ಭಯಂ ಭವತಿ । ತಸ್ಮಾತ್ ಆತ್ಮೈವ ಆತ್ಮನೋ ಭಯಕಾರಣಮ್ ಅವಿದುಷಃ ॥

(ಭಾಷ್ಯಾರ್ಥ)

ಇದಕ್ಕೆ ಬದಲಾಗಿ ಯಾವಾಗ ಎಂದರೆ (ಯಾವ) ಅವಿದ್ಯಾವಸ್ಥೆಯಲ್ಲಿ ಈತನು ಎಂದರೆ ಅವಿದ್ಯೆಯಿಂದ ಕೂಡಿರುವವನು, ಅವಿದ್ಯೆಯಿಂದ ಮುಂದಿಡಲ್ಪಟ್ಟ ವಸ್ತುವನ್ನು, ಪರೆಗಣ್ಣಿನವನಿಗೆ ಕಾಣುವ ಎರಡನೆಯ ಚಂದ್ರನಂತೆ (ಕಲ್ಪಿತವಾದ ವಸ್ತುವನ್ನು) ಕಾಣುತ್ತಾನೋ, ಮತ್ತು ತನ್ನ ಆತ್ಮನಾಗಿರುವ ಬ್ರಹ್ಮದಲ್ಲಿ 'ಉತ್' ಕೂಡ ಅರಮ್ ಅಲ್ಪವಾದರೂ ಅಂತರವನ್ನು ಎಂದರೆ ಛಿದ್ರವನ್ನು, ಭೇದದರ್ಶನವನ್ನು ಮಾಡಿಕೊಳ್ಳುತ್ತಾನೋ-ಭೇದವನ್ನು ಕಾಣುವದೆ ಅಲ್ಲವೆ, ಅಂತರವನ್ನು ಮಾಡಿಕೊಳ್ಳುವದು ?-ಸ್ವಲ್ಪವಾದರೂ ಭೇದವನ್ನು ಕಾಣುತ್ತಾನೋ ಎಂದರ್ಥ. (ಯಾವ ಕಾರಣದಿಂದ ಹೀಗೆ ಕಾಣುತ್ತಾನೋ) "ಅಥ" ಆ ಕಾರಣದಿಂದ (ಆ) ಭೇದವನ್ನು ಕಂಡದ್ದೆಂಬ ಹೇತುವಿನಿಂದ ಅವನಿಗೆ ಎಂದರೆ (ಈ) ಭೇದವನ್ನು ಕಾಣುವಾತನಿಗೆ ಆತ್ಮನಿಂದ ಭಯವಾಗುತ್ತದೆ. ಆದ್ದರಿಂದ ಅಜ್ಞನಿಗೆ ತಾನೇ[2] ತನಗೆ ಭಯಕಾರಣವು.

(ಭಾಷ್ಯ)

೧೯೨. ತದೇತದಾಹ-ತತ್ ಬ್ರಹ್ಮ ತ್ವೇವ ಭಯಂ ಭೇದದರ್ಶಿನೋ ವಿದುಷಃ । "ಈಶ್ವರೋಽನ್ಯೋ ಮತ್ತಃ, ಅಹಮನ್ಯಃ ಸಂಸಾರೀ" ಇತ್ಯೇವಂ ವಿದುಷಃ ಭೇದದೃಷ್ಟಮ್ ಈಶ್ವರಾಖ್ಯಂ ತದೇವ ಬ್ರಹ್ಮ ಅಲ್ಪಮಪಿ ಅನ್ತರಂ ಕುರ್ವತೋ ಭಯಂ ಭವತಿ ಏಕತ್ವೇನ ಅಮನ್ವಾನಸ್ಯ । ತಸ್ಮಾತ್ ವಿದ್ವಾನಪಿ ಅವಿದ್ವಾನೇವಾಸೌ ಯೋಽಯಮ್ ಏಕಮ್ ಅಭಿನ್ನಮ್ ಆತ್ಮತತ್ತ್ವಂ ನ ಪಶ್ಯತಿ ॥

---

1. "ಭಯಕಾರಣಮ್" ಎಂದು ವಾ॥ ಪಾಠ.
2. ಭಿನ್ನನಾಗಿ ಕಂಡ ಆತ್ಮನೇ.

(ಭಾಷ್ಯಾರ್ಥ)

ಆ ಈ (ಅರ್ಥವನ್ನೇ ಶ್ರುತಿಯು) ಹೇಳುತ್ತದೆ: ಆ ಬ್ರಹ್ಮವೇ ಭೇದವನ್ನು ಕಾಣುವ ಜ್ಞಾತೃವಿಗೆ ಭಯವು. "ಈಶ್ವರನು ನನಗಿಂತ ಬೇರೆ, ಸಂಸಾರಿಯಾಗಿ ರುವ ನಾನು ಬೇರೆ" ಎಂದೀಪರಿಯಲ್ಲಿ ತಿಳಿಯುವವನಿಗೆ ಬೇರೆಯಾಗಿ ಕಂಡ ಈಶ್ವರ ನೆಂಬ ಹೆಸರಿನ[1] ಅದೇ ಬ್ರಹ್ಮವೇ ಅಲ್ಪವಾದರೂ ಅಂತರವನ್ನು ಮಾಡಿಕೊಳ್ಳುವ (ಅದೂ ತಾನೂ) ಒಂದೇ ಎಂದು ತಿಳಿದುಕೊಳ್ಳದಾತನಿಗೆ ಭಯವಾಗುತ್ತದೆ. ಆದ್ದ ರಿಂದ ತಿಳಿದವನಾದರೂ[2], ಒಂದೇ ಆಗಿ,(ತನಗಿಂತ) ಬೇರೆಯಲ್ಲದ ಆತ್ಮತತ್ತ್ವವನ್ನು ಅರಿತುಕೊಳ್ಳದಿರುವವನು ಯಾವನೋ, ಅವನು ತಿಳಿಯದವನೇ.

## ಭಯಕಾರಣವಾಗಿರುವ ಬ್ರಹ್ಮ

**ತದಪ್ಯೇಷ ಶ್ಲೋಕೋ ಭವತಿ ॥ ೬ ॥**

(ಇತಿ ಸಪ್ತಮೋಽನುವಾಕಃ)

**ಭೀಷಾಸ್ಮಾದ್ವಾತಃ ಪವತೇ । ಭೀಷೋದೇತಿ ಸೂರ್ಯಃ ।**
**ಭೀಷಾಸ್ಮಾದಗ್ನಿಶ್ಚೇನ್ದ್ರಶ್ಚ । ಮೃತ್ಯುರ್ಧಾವತಿ ಪಞ್ಚಮ ಇತಿ ॥ ೧ ॥**

೬. ಅದರ ವಿಷಯದಲ್ಲಿಯೇ ಈ ಶ್ಲೋಕವಿರುವದು :

(ಏಳನೆಯ ಅನುವಾಕವು ಮುಗಿಯಿತು)

೧. "ಈತನ ಭಯದಿಂದ ವಾಯುವು ಬೀಸುತ್ತಾನೆ, ಭಯದಿಂದ ಸೂರ್ಯನು ಉದಯಿಸುತ್ತಾನೆ. ಈತನ ಭಯದಿಂದ ಅಗ್ನಿಯೂ ಇಂದ್ರನೂ (ಕೆಲಸಮಾಡುತ್ತಾರೆ), ಐದನೆಯವನಾದ ಮೃತ್ಯುವೂ ಓಡುತ್ತಾನೆ.

---

1. ಅಜ್ಞಾನದಿಂದ ಬ್ರಹ್ಮವು ಈಶ್ವರನಾಗುವದು, ತಾನು ಈಶಿತವ್ಯನಾಗುವನು. ಸೂ. ಭಾ. ೨-೨-೧೪.

2. ಮೂಲದಲ್ಲಿ (ವಿದುಷಃ) "ತಿಳಿಯುವವನಿಗೆ" ಎಂದಿದ್ದರೂ ತಪ್ಪು ತಿಳಿಯುವ ವನಿಗೆ ಎಂದರ್ಥವೆಂದು ಭಾವ.

(ಭಾಷ್ಯ)

೧೯೩. ಉಚ್ಛೇದಹೇತುದರ್ಶನಾದ್ಧಿ ಉಚ್ಛೇದ್ಯಾಭಿಮತಸ್ಯ ಭಯಂ ಭವತಿ । ಅನುಚ್ಛೇದ್ಯೋ ಹಿ ಉಚ್ಛೇದಹೇತುಃ । ತತ್ರ ಅಸತ್ಯುಚ್ಛೇದಹೇತೌ ಉಚ್ಛೇದ್ಯೇ ನ ತದ್ದರ್ಶನಕಾರ್ಯಂ ಭಯಂ ಯುಕ್ತಮ್ । ಸರ್ವಂ ಚ ಜಗದ್ ಭಯವದ್ ದೃಶ್ಯತೇ । ತಸ್ಮಾತ್ ಜಗತೋ ಭಯದರ್ಶನಾತ್ ಗಮ್ಯತೇ ನೂನಂ ತದಸ್ತಿ ಭಯಕಾರಣಮ್ ಉಚ್ಛೇದಹೇತುಃ ಅನುಚ್ಛೇದ್ಯಾತ್ಮಕಂ ಯತೋ ಜಗದ್ ಬಿಭೇತಿ ಇತಿ । ತತ್ ಏತಸ್ಮಿನ್ನಪ್ಯರ್ಥೇ ಏಷ ಶ್ಲೋಕೋ ಭವತಿ ॥

(ಭಾಷ್ಯಾರ್ಥ)

ನಾಶಕ್ಕೆ ಕಾರಣವಾದದ್ದನ್ನು ಕಾಣುವದರಿಂದಲೆ ಅಲ್ಲವೆ, (ತಾನು) ನಾಶವಾಗುವವನೆಂದು ತಿಳಿದುಕೊಂಡವನಿಗೆ ಹೆದರಿಕೆಯುಂಟಾಗುವದು? ನಾಶಕ್ಕೆ ಕಾರಣವಾದದ್ದು (ತಾನು) ನಾಶವಾಗತಕ್ಕದ್ದಾಗಿರಲಾರದಷ್ಟೆ? ಹೀಗಿರುವಲ್ಲಿ ನಾಶಕ್ಕೆ ಕಾರಣವಾದದ್ದು ಇಲ್ಲದಿದ್ದರೆ ಅದನ್ನು ಕಂಡದ್ದರಿಂದಾಗಬೇಕಾದ ಹೆದರಿಕೆ ಎಂಬ ಕಾರ್ಯವು ನಾಶವಾಗತಕ್ಕವನಲ್ಲಿ (ಆಗುವದು) ಸರಿಯಾಗುವದಿಲ್ಲ. ಇಡಿಯ ಜಗತ್ತೇ ಹೆದರಿಕೆಯುಳ್ಳದ್ದಾಗಿರುವದು ಕಂಡುಬರುತ್ತದೆ. ಆದ್ದರಿಂದ (ಹೀಗೆ) ಜಗತ್ತಿಗೆ ಹೆದರಿಕೆಯಾಗುವದು ಕಂಡುಬರುತ್ತಿರುವದರಿಂದ ಯಾವದಕ್ಕೆ ಜಗತ್ತು ಹೆದರುತ್ತಿದೆಯೋ ಆ ನಾಶಕ್ಕೆ ಹೇತುವಾದ ತನಗೆ ನಾಶವಿಲ್ಲದೆ (ಮಿಕ್ಕದ್ದಕ್ಕೆ) ಹೆದರಿಕೆಗೆ ಕಾರಣವಾಗಿರುವ ಆ (ಬ್ರಹ್ಮವು) ಇದೆ ಎಂದು ನಿಶ್ಚಯವಾಗುತ್ತದೆ. ಅಲ್ಲ ಎಂದರೆ ಆ ವಿಷಯದಲ್ಲಿಯೂ ಈ (ಮುಂದಿನ) ಶ್ಲೋಕವಿರುವದು.

(ಭಾಷ್ಯ)

೧೯೪. ಭೀಷಾ ಭಯೇನ ಅಸ್ಮಾತ್ ವಾತಃ ಪವತೇ ಭೀಷಾ ಉದೇತಿ ಸೂರ್ಯಃ । ಭೀಷಾ ಅಸ್ಮಾತ್ ಅಗ್ನಿಶ್ಚ ಇನ್ದ್ರಶ್ಚ । ಮೃತ್ಯುರ್ಧಾವತಿ ಪಞ್ಚಮ ಇತಿ । ವಾತಾದಯೋ ಹಿ ಮಹಾರ್ಹಾಃ ಸ್ವಯಮ್ ಈಶ್ವರಾಃ ಸನ್ತಃ ಪವನಾದಿ ಕಾರ್ಯೇಷು ಆಯಾಸಬಹುಲೇಷು ನಿಯತಾಃ ಪ್ರವರ್ತನ್ತೇ । ತದ್ ಯುಕ್ತಂ ಪ್ರಶಾಸ್ತರಿ ಸತಿ ಅನ್ಯಸ್ಮಿನ್[1] ನಿಯಮೇನ ತೇಷಾಂ ಪ್ರವರ್ತನಮ್ । ತಸ್ಮಾತ್ ಅಸ್ತಿ ಭಯಕಾರಣಂ ತೇಷಾಂ ಪ್ರಶಾಸ್ತೃ ಬ್ರಹ್ಮ । ಯತಸ್ತೇ ಭೃತ್ಯಾ ಇವ ರಾಜ್ಞಃ ಅಸ್ಮಾದ್ ಬ್ರಹ್ಮಣೋ ಭಯೇನ ಪ್ರವರ್ತನ್ತೇ ॥

---

1. "ಯಸ್ಮಾತ್" ಎಂದು ವಾ॥ ಪಾಠ

(ಭಾಷ್ಯಾರ್ಥ)

'ಭೀಷಾ' ಎಂದರೆ ಈತನ ಅಂಜಿಕೆಯಿಂದ ವಾಯು ಬೀಸುತ್ತಾನೆ. ಸೂರ್ಯನು ಅಂಜಿಕೆಯಿಂದ ಉದಯಿಸುತ್ತಾನೆ. ಈತನ ಅಂಜಿಕೆಯಿಂದ ಅಗ್ನಿಯೂ ಇಂದ್ರನೂ (ಕೆಲಸಮಾಡುತ್ತಾರೆ.) ಐದನೆಯವನಾದ ಮೃತ್ಯುವೂ ಓಡುತ್ತಾನೆ. (ಇಲ್ಲಿ ಹೇಳಿರುವ) ವಾಯುವೇ ಮುಂತಾದವರು ಬಹು ಪೂಜ್ಯರಾದವರೂ ಸ್ವತಃ ಸ್ವತಂತ್ರರಾದವರೂ ಆಗಿದ್ದುಕೊಂಡು ಬಹಳ ಆಯಾಸಕರವಾದ ಬೀಸುವದೇ ಮುಂತಾದ ಕಾರ್ಯಗಳಲ್ಲಿ ಗೊತ್ತಾಗಿ ತೊಡಗಿರುತ್ತಾರೆ. (ಅವರಿಗಿಂತ) ಬೇರೆಯಾದ (ಅವರಿಗೆ) ಅಪ್ಪಣೆಮಾಡುವಾತನೊಬ್ಬನು ಇದ್ದರೆ ಹೀಗೆ ಅವರು ಗೊತ್ತಾಗಿ ತೊಡಗುವದೆಂಬುದು ಯುಕ್ತವಾಗುತ್ತದೆ. ಆದ್ದರಿಂದ ಅಂಜಿಕೆಗೆ ಕಾರಣವಾಗಿ ಅವರನ್ನು ಆಳುತ್ತಿರುವ ಬ್ರಹ್ಮವು ಇದೆ (ಎಂದು ನಿಶ್ಚಯವಾಗುತ್ತದೆ). ಆ ಯಾವ (ಈ) ಬ್ರಹ್ಮದ ಅಂಜಿಕೆಯಿಂದಲೇ ಅರಸನ (ಅಂಜಿಕೆಯಿಂದ ಕೆಲಸದಲ್ಲಿ ತೊಡಗುವ) ಸಂಬಳದಾಳುಗಳಂತೆ ಅವರು ಕೆಲಸದಲ್ಲಿ ತೊಡಗಿರುತ್ತಾರೆ.

# ೧೬. ಬ್ರಹ್ಮದ ಆನಂದವು ಸ್ವಾಭಾವಿಕವಾದದ್ದು

## ಆನಂದದ ವಿಷಯಕ್ಕೆ ವಿಚಾರ

**ಸೈಷಾನನ್ದಸ್ಯ ಮೀಮಾಗ್ಂಸಾ ಭವತಿ ॥ ೨ ॥**

೨. ಆ ಇದು ಆನಂದದ ಮೀಮಾಂಸೆಯಾಗಿರುತ್ತದೆ.

(ಭಾಷ್ಯ)

೧೯೫. ತಚ್ಚ ಭಯಕಾರಣಮ್ ಆನನ್ದಂ ಬ್ರಹ್ಮ । ತಸ್ಯಾಸ್ಯ ಬ್ರಹ್ಮಣಃ ಆನನ್ದಸ್ಯ ಏಷಾ[1] ಮೀಮಾಂಸಾ ವಿಚಾರಣಾ ಭವತಿ । ಕಿಮ್ ಆನನ್ದಸ್ಯ ಮೀಮಾಂಸ್ಯಮ್ ಇತಿ? ಉಚ್ಯತೇ । ಕಿಮಾನನ್ದೋ ವಿಷಯವಿಷಯಿಸಂಬನ್ಧಜನಿತೋ ಲೌಕಿಕಾನನ್ದವತ್, ಆಹೋಸ್ವಿತ್ ಸ್ವಾಭಾವಿಕಃ? ಇತ್ಯೇವಮೇಷಾ ಆನನ್ದಸ್ಯ ಮೀಮಾಂಸಾ ॥

1. ಮೂಲದಲ್ಲಿರುವ "ಸೈಷಾ" ಎಂಬಲ್ಲಿ ಕಾಣುವ 'ಸಾ' ಎಂಬ ಮಾತು ಭಾಷ್ಯದಲ್ಲಿ ಬಿಟ್ಟುಹೋಗಿದೆ.

(ಭಾಷ್ಯಾರ್ಥ)

ಆ ಅಂಜಿಕೆಗೆ ಕಾರಣವಾದದ್ದು ಆನಂದರೂಪವಾದ ಬ್ರಹ್ಮವು.[1] ಆ ಈ ಬ್ರಹ್ಮದ ಆನಂದವನ್ನು ಕುರಿತು ಈ ಮೀಮಾಂಸೆಯು, ವಿಚಾರವು ಉಂಟಾಗುತ್ತದೆ.

(ಪ್ರಶ್ನೆ) : —ಆನಂದದ ವಿಷಯಕ್ಕೆ ವಿಚಾರಮಾಡತಕ್ಕದ್ದು ಏನಿದೆ?

(ಉತ್ತರ) :—ಹೇಳುತ್ತೇವೆ. (ಈ) ಆನಂದವು ಲೌಕಿಕಾನಂದದಂತೆ[2] ವಿಷಯ ವಿಷಯಿ-ಇವುಗಳ ಸಂಬಂಧದಿಂದ ಉಂಟಾದದ್ದೋ, ಅಥವಾ ಸ್ವಾಭಾವಿಕವಾದದ್ದೋ?[3] ಹೀಗೆಂಬುದೇ ಆನಂದದ ವಿಷಯಕ್ಕೆ (ಮಾಡಬೇಕಾಗಿರುವ) ವಿಚಾರವು.

## ಲೌಕಿಕಾನಂದದಿಂದ ಪರಮಾನಂದವನ್ನು ಗೊತ್ತುಪಡಿಸಬಹುದು

(ಭಾಷ್ಯ)

೧೯೬. ತತ್ರ ಲೌಕಿಕ ಆನನ್ದೋ ಬಾಹ್ಯಾಧ್ಯಾತ್ಮಿಕಸಾಧನಸಂಪತ್ತಿನಿಮಿತ್ತಃ ಉತ್ಕೃಷ್ಟಃ ಸಃ ಯ ಏಷ ನಿರ್ದಿಶ್ಯತೇ ಬ್ರಹ್ಮಾನನ್ದಾನುಗಮಾರ್ಥಮ್ । ಅನೇನ ಹಿ ಪ್ರಸಿದ್ಧೇನ ಆನನ್ದೇನ ವ್ಯಾವೃತ್ತವಿಷಯಬುದ್ಧಿಗಮ್ಯ ಆನನ್ದೋಽನುಗನ್ತುಂ ಶಕ್ಯತೇ । ಲೌಕಿಕೋಽಪಿ ಆನನ್ದೋ ಬಹ್ಮಾನನ್ದಸ್ಯೈವ ಮಾತ್ರಾ । ಅವಿದ್ಯಯಾ ತಿರಸ್ಕ್ರಿಯಮಾಣೇ ವಿಜ್ಞಾನೇ ಉತ್ಕೃಷ್ಯಮಾಣಾಯಾಂ ಚಾವಿದ್ಯಾಯಾಂ ಬ್ರಹ್ಮಾದಿಭಿಃ ಕರ್ಮವಶಾತ್ ಯಥಾವಿಜ್ಞಾನಂ ವಿಷಯಾದಿಸಾಧನಸಂಬನ್ಧವಶಾಚ್ಚ ವಿಭಾವ್ಯಮಾನಶ್ಚ ಲೋಕೇ ಅನವಸ್ಥಿತೋ ಲೌಕಿಕಃ ಸಂಪದ್ಯತೇ । ಸ ಏವ ಅವಿದ್ಯಾಕಾಮಕರ್ಮಾಪಕರ್ಷೇಣ ಮನುಷ್ಯಗನ್ಧರ್ವಾದ್ಯುತ್ತರೋತ್ತರಭೂಮಿಷು ಅಕಾಮಹತವಿದ್ವಚ್ಛ್ರೋತ್ರಿಯಪ್ರತ್ಯಕ್ಷೋ ವಿಭಾವ್ಯತೇ ಶತಗುಣೋತ್ತರೋತ್ತರೋತ್ಕರ್ಷೇಣ ಯಾವತ್ ಹಿರಣ್ಯಗರ್ಭಸ್ಯ ಬ್ರಹ್ಮಣ ಆನನ್ದಃ ಇತಿ । ನಿರಸ್ತೇತು ಅವಿದ್ಯಾಕೃತೇ ವಿಷಯವಿಷಯಿವಿಭಾಗೇ ವಿದ್ಯಯಾ ಸ್ವಾಭಾವಿಕಃ ಪರಿಪೂರ್ಣಃ ಏಕ ಆನನ್ದೋಽದ್ವೈತೋ ಭವತಿ । ಇತ್ಯೇತಮರ್ಥಂ ವಿಭಾವಯಿಷ್ಯನ್ ಆಹ—

---

1. ತಮ್ಮ ಆತ್ಮನಾದ ಬ್ರಹ್ಮವು ಆನಂದರೂಪವಾದದ್ದೆಂಬುದನ್ನರಿಯದವರಿಗೇ ಅಂಜಿಕೆ.

2. ವಿಷಯದಿಂದಾಗುವ ಸುಖದಂತೆ.

3. ಇಂದ್ರಿಯವಿಷಯಗಳ ಸಂಬಂಧದಿಂದ ಆಗತಕ್ಕದ್ದೋ, ಸೂರ್ಯನ ಬೆಳಕಿನಂತೆ ಆತ್ಮಸ್ವರೂಪಕ್ಕೇ ಸೇರಿದ್ದೋ?

4. ಅ॥ ಪಾಠದಲ್ಲಿ "ಶತಗುಣೋತ್ತರೋತ್ಕರ್ಷೇಣ" ಎಂದಿದೆ.

(ಭಾಷ್ಯಾರ್ಥ)

ಲೌಕಿಕವಾದ ಆನಂದವು ಹೊರಗಿನ ಮತ್ತು ಒಳಗಿನ ಸಾಧನಸಂಪತ್ತಿಯ [1] ನಿಮಿತ್ತದಿಂದ ಉತ್ಕೃಷ್ಟವಾಗಿರುವದು ಯಾವದೋ ಅದನ್ನು [2] ಬ್ರಹ್ಮಾನಂದವನ್ನು ಬೆಂಬಿಡಿದು ತಿಳಿದುಕೊಳ್ಳುವದಕ್ಕಾಗಿ ಇಲ್ಲಿ ತಿಳಿಸಿರುತ್ತದೆ. ಏಕೆಂದರೆ ಈ ಪ್ರಸಿದ್ಧವಾದ ಆನಂದದಿಂದಲೇ ವಿಷಯಗಳಿಂದ ಹಿಂತಿರುಗಿದ ಬುದ್ಧಿಗೆ (ಮಾತ್ರ) ತಿಳಿಯಬರುವ ಆನಂದವನ್ನು ಬೆಂಬಿಡಿದು ತಿಳಿದುಕೊಳ್ಳುವದಕ್ಕೆ ಸಾಧ್ಯವಾಗುತ್ತದೆ.[3]

ಲೌಕಿಕವಾದ ಆನಂದವುಕೂಡ ಬ್ರಹ್ಮಾನಂದದ್ದೇ ಒಂದು ಅಂಶವು.[4] ಅವಿದ್ಯೆಯಿಂದ ಜ್ಞಾನವು ಮರೆಯಾಗಿ ಅವಿದ್ಯೆಯು ಹೆಚ್ಚುತ್ತಾ ಬಂದಂತೆ ಬ್ರಹ್ಮವೇ ಮುಂತಾದ ಪ್ರಾಣಿಗಳಿಂದ ಕರ್ಮವಶದಿಂದಲೂ ಅವರವರ ತಿಳಿವಳಿಕೆಯ ವಾಸನೆಯಿಂದ [5] ವಿಷಯವೇ ಮುಂತಾದ ಸಾಧನಗಳ ಸಂಬಂಧದ ಕಾರಣದಿಂದಲೂ ಲೋಕದಲ್ಲಿ ಅನುಭವಕ್ಕೆ ಬರುವದಾಗಿ ನಿತ್ಯವಲ್ಲದಿರುವ ಲೌಕಿಕವಾದ (ಆನಂದ)ವಾಗುತ್ತದೆ.[6] ಅವಿದ್ಯೆ, ಕಾಮ, ಕರ್ಮ–ಇವುಗಳು ಕಡಿಮೆಕಡಿಮೆಯಾಗುವದರಿಂದ ಮನುಷ್ಯಗಂಧರ್ವರೇ ಮುಂತಾದವರ ಮೇಲುಮೇಲಿನ ಅಂತಸ್ತುಗಳಲ್ಲಿ, ಕಾಮದ ಹೊಡೆತವಿಲ್ಲದ ಜ್ಞಾನಿಯಾದ ಶ್ರೋತ್ರಿಯನಿಗೆ ಪ್ರತ್ಯಕ್ಷವಾಗಿ (ಅನುಭವಕ್ಕೆ ಬರುತ್ತಿರುವ) ಆ (ಬ್ರಹ್ಮಾನಂದವೇ) ನೂರುಮಡಿಯಾಗಿ ಮುಂದುಮುಂದಕ್ಕೆ ಹೆಚ್ಚುತ್ತಾ ಹಿರಣ್ಯಗರ್ಭನೆಂಬ ಬ್ರಹ್ಮನ ಆನಂದದವರೆಗೂ (ಹಬ್ಬಿರುತ್ತದೆ)[7]. ಆದ್ದರಿಂದ

---

1. ಹೊರಗಿನ ಸಾಧನವೆಂದರೆ ವಿತ್ತಾದಿಗಳು; ಒಳಗಿನ ಸಾಧನವೆಂದರೆ ಆರೋಗ್ಯ, ಅಧ್ಯಯನ, ತಿಳಿವಳಿಕೆ ಮುಂತಾದವುಗಳು.

2. ಮನುಷ್ಯನಿಂದ ಹಿಡಿದು ಬ್ರಹ್ಮನವರೆಗೆ ಹೆಚ್ಚುಹೆಚ್ಚುತ್ತಾ ಬಂದಿರುವದನ್ನು.

3. ಯಾವದಕ್ಕಿಂತ ಹೆಚ್ಚಿಲ್ಲವೋ ಯಾವದು ಸಾಧನವನ್ನು ಬಯಸದೆ ನಿತ್ಯವಾಗಿರುವದೋ ಅದೇ ಬ್ರಹ್ಮಾನಂದವು ಎಂದು ತಿಳಿಯುವದಕ್ಕಾಗುತ್ತದೆ.

4. ಹಿಂದೆ ಭಾ. ಭಾ. ೧೪೭ ರಲ್ಲಿ ಈ ಆನಂದದ ವರ್ಣನೆಯನ್ನು ಮಾಡಿರುವ ಬಗೆಯನ್ನು ಇದಕ್ಕೆ ಹೋಲಿಸಿ.

5. ಕ. ೨-೨-೭, ಬೃ. ೪-೪-೨ ಇವುಗಳಲ್ಲಿ ಶ್ರುತ, ಪೂರ್ವಪ್ರಜ್ಞಾ-ಎಂದಿರುವದು ಇದೇ.

6. ಕಾರಣವು ಅನಿತ್ಯವಾಗಿರುವದರಿಂದ ಈ ಆನಂದವೂ ಅನಿತ್ಯವಾಗಿ ತೋರುತ್ತದೆ.

7. ಆನಂದವು ಬ್ರಹ್ಮಾದಿಯಾಗಿ ಸ್ಥಾವರಪ್ರಾಣಿಯವರೆಗೂ ಸಾಧನತಾರತಮ್ಯದಿಂದ ಕಡಿಮೆಯಾಗಿ ತೋರುತ್ತದೆ; ಮೇಲುಮೇಲಕ್ಕೆ ಹೋಗುತ್ತಾ ಹೆಚ್ಚಾಗಿ ತೋರುತ್ತದೆ. ಸೂ. ಭಾ. ೧-೧-೪; ಜ್ಞಾನೈಶ್ವರ್ಯಾದಿಗಳು ಬ್ರಹ್ಮನವರೆಗೆ ಹೆಚ್ಚುತ್ತಿರುವದೇ ಆನಂದತಾರತಮ್ಯಕ್ಕೆ ಕಾರಣ. ಸೂ. ಭಾ. ೧-೩-೩೦.

ಅವಿದ್ಯಾಕಲ್ಪಿತವಾದ ವಿಷಯ, ವಿಷಯಿ–ಎಂಬ ವಿಭಾಗವು ವಿದ್ಯೆಯಿಂದ ತೊಲಗ ಲಾಗಿ ಸ್ವಾಭಾವಿಕವೂ ಪರಿಪೂರ್ಣವೂ ಆಗಿ ಒಂದೇ ಆಗಿರುವ ಅದ್ವೈತಾನಂದವಾಗುತ್ತದೆ[1]–ಎಂಬೀ ಅಭಿಪ್ರಾಯವನ್ನು ಮನಸ್ಸಿಗೆ ತಂದುಕೊಡುವದಕ್ಕಾಗಿ (ಶ್ರುತಿಯು ಹೀಗೆಂದು) ಹೇಳುತ್ತದೆ :—

## ಲೌಕಿಕಾನಂದದ ತಾರತಮ್ಯ

ಯುವಾ ಸ್ಯಾತ್ ಸಾಧು ಯುವಾಧ್ಯಾಯಕಃ । ಆಶಿಷ್ಠೋ ದ್ರಢಿಷ್ಠೋ ಬಲಿಷ್ಠಃ । ತಸ್ಯೇಯಂ ಪೃಥಿವೀ ಸರ್ವಾ ವಿತ್ತಸ್ಯ ಪೂರ್ಣಾ ಸ್ಯಾತ್ । ಸ ಏಕೋ ಮಾನುಷ ಆನನ್ದಃ । ತೇ ಯೇ ಶತಂ ಮಾನುಷಾ ಆನನ್ದಾಃ । ಸ ಏಕೋ ಮನುಷ್ಯಗಂಧರ್ವಾಣಾಮಾನನ್ದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ಮನುಷ್ಯಗನ್ಧರ್ವಾಣಾಮಾನನ್ದಾಃ । ಸ ಏಕೋ ದೇವಗನ್ಧರ್ವಾಣಾಮಾನನ್ದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ದೇವಗನ್ಧರ್ವಾಣಾಮಾನನ್ದಾಃ । ಸ ಏಕಃ ಪಿತೃಣಾಂ ಚಿರಲೋಕಲೋಕಾನಾಮಾನನ್ದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ಪಿತೃಣಾಂ ಚಿರಲೋಕಲೋಕಾನಾಮಾನನ್ದಾಃ । ಸ ಏಕ ಆಜಾನಜಾನಾಂ ದೇವಾನಾಮಾನನ್ದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಮಾಜಾನಜಾನಾಂ ದೇವಾನಾಮಾನನ್ದಾಃ । ಸ ಏಕಃ ಕರ್ಮದೇವಾನಾಂ ದೇವಾನಾಮಾನನ್ದಃ । ಯೇ ಕರ್ಮಣಾ ದೇವಾನಪಿ ಯನ್ತಿ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ಕರ್ಮದೇವಾನಾಂ ದೇವಾನಾಮಾನನ್ದಾಃ । ಸ ಏಕೋ ದೇವಾನಾಮಾನನ್ದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ದೇವಾನಾಮಾನನ್ದಾಃ । ಸ ಏಕ ಇನ್ದ್ರಸ್ಯಾನನ್ದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಮಿನ್ದ್ರಸ್ಯಾನನ್ದಾಃ । ಸ ಏಕೋ ಬೃಹಸ್ಪತೇರಾನನ್ದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ಬೃಹಸ್ಪ

---

1. ಅದ್ದರಿಂದ ಉಪಾಧಿನಿಮಿತ್ತದಿಂದ ತಾರತಮ್ಯವುಳ್ಳದ್ದಾಗಿ ಕಾಣಬರುತ್ತಿರುವ ಆನಂದವು ಸ್ವತಃ ಬ್ರಹ್ಮಾನಂದವೇ ಎಂದು ಅದನ್ನು ಬೆಂಬಿಡಿದು ತಿಳಿಯಬಹುದು.

**ತೇರಾನನ್ದಾಃ । ಸ ಏಕಃ ಪ್ರಜಾಪತೇರಾನನ್ದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ಪ್ರಜಾಪತೇರಾನನ್ದಾಃ । ಸ ಏಕೋ ಬ್ರಹ್ಮಣ ಆನನ್ದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ ॥ ೩ ॥**

೩. ಯೌವನವಂತನಾಗಿರಬೇತು, ಒಳ್ಳೆಯ ಯೌವನವಂತನಾಗಿರಬೇಕು, ಅಧ್ಯಯನಮಾಡಿದವನಾಗಿರಬೇಕು, ಆಶಿಷ್ಠನಾಗಿ ದ್ರಢಿಷ್ಠನಾಗಿ ಬಲಿಷ್ಠನಾಗಿರಬೇಕು. ಅವನಿಗೆ ಈ ವಿತ್ತಪೂರ್ಣವಾದ ಇಡಿಯ ಪೃಥ್ವಿಯೂ ಇರಬೇಕು. ಅದು ಒಂದು ಮಾನುಷ ಆನಂದವು. ಆ ಮಾನುಷ ಆನಂದಗಳು ನೂರಾಗುವವಲ್ಲ, ಅದು ಮನುಷ್ಯಗಂಧರ್ವರ ಆನಂದವು, ಮತ್ತು ಅಕಾಮಹತನಾದ ಶ್ರೋತ್ರಿಯನದು. ಆ ಮನುಷ್ಯಗಂಧರ್ವರ ಆನಂದಗಳು ನೂರಾಗುವವಲ್ಲ, ಅದು ಒಂದು ದೇವಗಂಧರ್ವರ ಆನಂದವು, ಮತ್ತು ಅಕಾಮುಹತನಾದ ಶ್ರೋತ್ರಿಯನದು. ಆ ದೇವಗಂಧರ್ವರ ಆನಂದಗಳು ನೂರಾಗುವವಲ್ಲ, ಅದು ಒಂದು ಚಿರಲೋಕಲೋಕವುಳ್ಳ ಪಿತೃಗಳ ಆನಂದವು, ಮತ್ತು ಅಕಾಮುಹತನಾದ ಶ್ರೋತ್ರಿಯುನದು. ಆ ಚಿರಲೋಕಲೋಕವುಳ್ಳ ಪಿತೃಗಳ ಆನಂದಗಳು ನೂರಾಗುವವಲ್ಲ, ಅದು ಒಂದು ಆಜಾನಜ ದೇವತೆಗಳ ಆನಂದವು, ಮತ್ತು ಅಕಾಮುಹತನಾದ ಶ್ರೋತ್ರಿಯನದು. ಆ ಆಜಾನಜ ದೇವತೆಗಳ ಆನಂದಗಳು ನೂರಾಗುವವಲ್ಲ, ಅದು ಒಂದು ಕರ್ಮದೇವತೆಗಳಾದ ದೇವತೆಗಳ ಆನಂದವು; ಅವರು ಕರ್ಮದಿಂದ ದೇವತೆಗಳನ್ನು ಸೇರಿಕೊಂಡಿರುತ್ತಾರೆ. ಮತ್ತು (ಅದು) ಅಕಾಮುಹತನಾದ ಶ್ರೋತ್ರಿಯನದೂ (ಆಗಿರುತ್ತದೆ). ಆ ಕರ್ಮದೇವತೆಗಳಾದ ದೇವತೆಗಳ ಆನಂದಗಳು ನೂರು ಆಗುವವಲ್ಲ, ಅದು ಒಂದು ದೇವತೆಗಳ ಆನಂದವು; ಮತ್ತು ಅಕಾಮುಹತನಾದ ಶ್ರೋತ್ರಿಯನದು. ಆ ದೇವತೆಗಳ ಆನಂದಗಳು ನೂರು ಆಗುವವಲ್ಲ, ಅದು ಒಂದು ಇಂದ್ರನ ಆನಂದವು; ಮತ್ತು ಅಕಾಮುಹತನಾದ ಶ್ರೋತ್ರಿಯನದು. ಆ ಇಂದ್ರನ ಆನಂದಗಳು ನೂರಾಗುವವಲ್ಲ, ಅದು ಒಂದು ಬೃಹಸ್ಪತಿಯ ಆನಂದವು; ಮತ್ತು ಅಕಾಮುಹತನಾದ ಶ್ರೋತ್ರಿಯನದು. ಆ ಬೃಹಸ್ಪತಿಯ ಆನಂದಗಳು ನೂರಾಗುವವಲ್ಲ, ಅದು ಒಂದು ಪ್ರಜಾಪತಿಯ ಆನಂದವು; ಮತ್ತು ಅಕಾಮುಹತನಾದ ಶ್ರೋತ್ರಿಯನದು. ಆ ಪ್ರಜಾಪತಿಯ ಆನಂದಗಳು ನೂರಾಗುವವಲ್ಲ,

ಅದು ಒಂದು ಬ್ರಹ್ಮದ ಆನಂದವು; ಮತ್ತು ಅಕಾಮಹತನಾದ ಶ್ರೋತ್ರಿಯನದು.

(ಭಾಷ್ಯ)

೧೯೮. ಯುವಾ ಪ್ರಥಮವಯಾಃ । ಸಾಧುಯುವಾ ಇತಿ । ಸಾಧುಶ್ಚ ಅಸೌ ಯುವಾ ಚ ಇತಿ ಯೂನೋ ವಿಶೇಷಣಮ್ । ಯುವಾಪಿ ಅಸಾಧುರ್ಭವತಿ, ಸಾಧುರಪಿ ಅಯುವಾ; ಅತೋ ವಿಶೇಷಣಂ ಯುವಾ ಸ್ಯಾತ್ ಸಾಧುಯುವಾ ಇತಿ । ಅಧ್ಯಾಯಕಃ ಅಧೀತವೇದಃ । ಆಶಿಷ್ಠಃ ಆಶಾಸ್ತೃತಮಃ । ದ್ರಢಿಷ್ಠಃ ದೃಢತಮಃ । ಬಲಿಷ್ಠಃ ಬಲವತ್ತಮಃ । ಏವಮ್ ಆಧ್ಯಾತ್ಮಿಕಸಾಧನಸಂಪನ್ನಃ । ತಸ್ಯ ಇಯಂ ಪೃಥಿವೀ ಉರ್ವೀ ಸರ್ವಾ ವಿತ್ತಸ್ಯ ವಿತ್ತೇನ ಉಪಭೋಗಸಾಧನೇನ ದೃಷ್ಟಾರ್ಥೇನ ಅದೃಷ್ಟಾರ್ಥೇನ ಚ ಕರ್ಮಸಾಧನೇನ ಸಂಪನ್ನಾ ಪೂರ್ಣಾ (ಸ್ಯಾತ್) । ರಾಜಾ ಪೃಥಿವೀಪತಿಃ ಇತ್ಯರ್ಥಃ । ತಸ್ಯ ಯ ಆನನ್ದಃ ಸ ಏಕಃ ಮಾನುಷಃ ಮನುಷ್ಯಾಣಾಂ ಪ್ರಕೃಷ್ಟಃ ಏಕ ಆನನ್ದಃ ॥

(ಭಾಷ್ಯಾರ್ಥ)

ಯೌವನವಂತನೆಂದರೆ ಮೊದಲನೆಯ ವಯಸ್ಸಿನವನು. 'ಒಳ್ಳೆಯ ಯೌವನವಂತನು' ಎಂಬಲ್ಲಿ ಒಳ್ಳೆಯವನೂ ಯೌವನವಂತನೂ (ಆಗಿರಬೇಕು) ಎಂದು ಯೌವನವಂತನಿಗೆ ವಿಶೇಷಣವನ್ನು ಕೊಟ್ಟಿರುತ್ತದೆ. ಯೌವನವಂತನಾದರೂ ಒಳ್ಳೆಯುವನಾಗದಿರುವದುಂಟು; ಒಳ್ಳೆಯುವನಾದರೂ ಯೌವನವಂತನಲ್ಲದೆ ಇರುವದುಂಟು; ಆದ್ದರಿಂದ ಯೌವನವಂತನಾಗಿರಬೇಕು, ಒಳ್ಳೆಯ ಯೌವನವಂತನಾಗಿರಬೇಕು ಎಂದು ವಿಶೇಷಣವನ್ನು (ಕೊಟ್ಟಿರುತ್ತದೆ). ಅಧ್ಯಯನವನ್ನು ಮಾಡಿದವನು ಎಂದರೆ ವೇದವನ್ನು ಅಧ್ಯಯನಮಾಡಿದವನು. ಆಶಿಷ್ಠನು ಎಂದರೆ ಅತ್ಯಂತವಾಗಿ ಆಶೆಯುಳ್ಳವನು[1], ದ್ರಢಿಷ್ಠನು ಎಂದರೆ ಅತ್ಯಂತ ಗಟ್ಟಿಗನು, ಬಲಿಷ್ಠನು ಎಂದರೆ ಅತ್ಯಂತ ಬಲವಂತನು. ಹೀಗೆ ಒಳಗಿನ ಸಾಧನಗಳಿಂದ ಕೂಡಿರುವವನಾ(ಗಿರಬೇಕು). ಅವನಿಗೆ ಈ ಪೃಥಿವಿಯು ಭೂಮಿಯು ಎಲ್ಲವೂ (ವಿತ್ತಸ್ಯ = ವಿತ್ತೇನ) ವಿತ್ತದಿಂದ ಎಂದರೆ ಉಪಯೋಗಸಾಧನವಾದ, ದೃಷ್ಟ(ವಾದ ಈ ಲೋಕದ) ಪ್ರಯೋಜನ

---

1. ಆಶು ಎಂಬುದಕ್ಕೆ ಇಷ್ಠ ಎಂಬ ಪ್ರತ್ಯಯವು ಸೇರಿದೆ ಎಂದು ಭಾವಿಸಿದರೆ ಅತ್ಯಂತ ವೇಗವಾಗಿರುವವನು ಎಂದೂ ಅರ್ಥಮಾಡಬಹುದಾಗಿತ್ತು. ಮನುಷ್ಯರಲ್ಲಿ ಹೆಚ್ಚಿನ ಆಶೆಯೂ ಅದನ್ನು ಪೂರ್ತಿಗೊಳಿಸಿಕೊಳ್ಳುವ ಸಾಧನವೂ ಉಳ್ಳವನು ಎಂಬುದನ್ನು ತಿಳಿಸುವದಕ್ಕೆ ಭಾಷ್ಯದ ಅರ್ಥವು ಸಾಧಕವಾಗಿರುತ್ತದೆ.

ವನ್ನೂ ಅದೃಷ್ಟ(ವಾದ ಪರಲೋಕದ) ಪ್ರಯೋಜನವನ್ನೂ ಕೊಡುವ ಕರ್ಮಸಾಧನದಿಂದ[1] ಪೂರ್ಣವಾಗಿ(ರಬೇಕು). ರಾಜನಾಗಿ (ಇಡಿಯ) ನೆಲದೊಡೆಯ(ನಾಗಿರಬೇಕು) ಎಂದರ್ಥ. ಅವನಿಗಿರುವ ಆನಂದವಿದೆಯಲ್ಲ, ಅದು ಮಾನುಷವಾದ **ಮನುಷ್ಯರಿಗಿರುವ ಉತ್ತಮವಾದ ಒಂದು ಆನಂದ(ವಾಗುವದು).**

## ಲೌಕಿಕಾನಂದದ ತಾರತಮ್ಯಕ್ಕೆ ಕಾರಣ

(ಭಾಷ್ಯ)

೧೯೮. ತೇ ಯೇ ಶತಂ ಮಾನುಷಾ ಆನನ್ದಾಃ ಸ ಏಕೋ ಮನುಷ್ಯಗನ್ಧರ್ವಾಣಾಮ್ ಆನನ್ದಃ । ಮಾನುಷಾನನ್ದಾತ್ ಶತಗುಣೇನ ಉತ್ಕೃಷ್ಟಃ ಮನುಷ್ಯಗನ್ಧರ್ವಾಣಾಮ್ ಆನನ್ದೋ ಭವತಿ । ಮನುಷ್ಯಾಃ ಸನ್ತಃ ಕರ್ಮವಿದ್ಯಾವಿಶೇಷಾತ್ ಗನ್ಧರ್ವತ್ವಂ ಪ್ರಾಪ್ತಾ ಮನುಷ್ಯಗನ್ಧರ್ವಾಃ । ತೇ ಹಿ ಅನ್ತರ್ಧಾನಾದಿಶಕ್ತಿಸಂಪನ್ನಾಃ ಸೂಕ್ಷ್ಮಕಾರ್ಯಕರಣಾಃ । ತಸ್ಮಾತ್ ಪ್ರತಿಘಾತಾಲ್ಪತ್ವಂ ತೇಷಾಂ ದ್ವಂದ್ವಪ್ರತಿಘಾತಶಕ್ತಿಸಾಧನಸಂಪತ್ತಿಶ್ಚ । ತತಃ ಅಪ್ರತಿಹನ್ಯಮಾನಸ್ಯ ಪ್ರತೀಕಾರವತಃ ಮನುಷ್ಯಗನ್ಧರ್ವಸ್ಯ ಸ್ಯಾತ್ ಚಿತ್ತಪ್ರಸಾದಃ । ತತ್ಪ್ರಸಾದವಿಶೇಷಾತ್ ಸುಖವಿಶೇಷಾಭಿವ್ಯಕ್ತಿಃ । ಏವಂ ಪೂರ್ವಸ್ಯಾಃ ಪೂರ್ವಸ್ಯಾ ಭೂಮೇಃ ಉತ್ತರಸ್ಯಾಮುತ್ತರಸ್ಯಾಂ ಭೂಮೌ ಪ್ರಸಾದವಿಶೇಷತಃ ಶತಗುಣೇನ ಆನನ್ದೋತ್ಕರ್ಷ ಉಪಪದ್ಯತೇ ॥

(ಭಾಷ್ಯಾರ್ಥ)

'ಆ ಮಾನುಷ ಆನಂದಗಳು ನೂರಾಗುವವಲ್ಲ, ಅದು ಒಂದು ಮನುಷ್ಯಗಂಧರ್ವರ ಆನಂದವು,'' ಮಾನುಷ ಆನಂದಕ್ಕಿಂತ ಮನುಷ್ಯ ಗಂಧರ್ವರ ಆನಂದವು ನೂರುಮಡಿಯಾಗಿ ಹೆಚ್ಚಿನದಾಗಿರುವದು. ಮನುಷ್ಯರಾಗಿದ್ದು ಕರ್ಮವಿಶೇಷದಿಂದಲೂ ಜ್ಞಾನ(ವಾಸನೆಯ) ವಿಶೇಷದಿಂದಲೂ[2] ಗಂಧರ್ವತ್ವವನ್ನು ಹೊಂದಿದವರು '**ಮನುಷ್ಯ ಗಂಧರ್ವರು.**' ಏಕೆಂದರೆ ಅವರು ಅಂತರ್ಧಾನವೇ ಮುಂತಾದ ಶಕ್ತಿಗಳಿಂದೊಡಗೂಡಿ ಸೂಕ್ಷ್ಮವಾದ ದೇಹೇಂದ್ರಿಯಗಳುಳ್ಳವರಾಗಿರುತ್ತಾರೆ. ಆದ್ದರಿಂದ ಅವರಿಗೆ ಅಡಚಣೆಗಳು ಅಲ್ಪವಾಗಿರುತ್ತವೆ; ದ್ವಂದ್ವಗಳಿಂದಾಗುವ ಅಡಚಣೆಗಳನ್ನು[3] ತಪ್ಪಿಸಿಕೊಳ್ಳುವ ಶಕ್ತಿಯೂ ಸಾಧನವೂ ಅವರಿಗೆ (ಇರುತ್ತದೆ). ಆದ್ದರಿಂದ

---

1. ಬೃ. ೧-೪-೧೭.

2. ಈ ಜ್ಞಾನವು ಹಿಂದಿನ ಜನ್ಮದ ವಿಚಾರಗಳು ಮತ್ತು ಹಿಂದೆ ಅನುಭವಿಸಿದ್ದರ ವಾಸನೆ-ಇವುಗಳಿಂದಾಗಿರುತ್ತದೆ. ಇದು ಉತ್ಕೃಷ್ಟವಾಗಿದ್ದರೆ ಉತ್ಕೃಷ್ಟ ಕರ್ಮಕ್ಕೆ ಮುಂದಿನ ಜನ್ಮದಲ್ಲಿ ಸಾಧಕವಾಗುತ್ತದೆ. ಬೃ. ಭಾ. ೪-೪-೨.

3. ಶೀತೋಷ್ಣಾದಿಗಳಿಂದಾಗುವ ಬಾಧೆಯನ್ನು.

(ಯಾವ) ಅಡಚಣೆಯೂ ಇಲ್ಲದೆ (ಅಡಚಣೆಗೆ) ಪ್ರತೀಕಾರವನ್ನೂ ಇಟ್ಟುಕೊಂಡಿರುವ ಮನುಷ್ಯ ಗಂಧರ್ವನಿಗೆ ಚಿತ್ತವು ತಿಳಿಯಾಗುವದು.[1] ಹಾಗೆ ಆದ ತಿಳಿಯು ಕಾರಣದಿಂದ ಒಂದಾನೊಂದು (ಹೆಚ್ಚಿನ) ಸುಖವು ತೋರಿಕೊಳ್ಳುವದು.[2] ಹೀಗೆಯೇ ಹಿಂದು ಹಿಂದಿನ ಅಂತಸ್ತಿಗಿಂತ ಮುಂದು ಮುಂದಿನ ಅಂತಸ್ತಿನಲ್ಲಿ (ಚಿತ್ತವು) ಹೆಚ್ಚು ಹೆಚ್ಚು ತಿಳಿಯಾಗುವದರಿಂದ ನೂರುಮಡಿಯಾಗಿ ಆನಂದವು ಹೆಚ್ಚುವದೆಂಬುದು ಯುಕ್ತವಾಗಿದೆ.

(ಭಾಷ್ಯ)

೧೯೯. ಪ್ರಥಮಂ ತು ಅಕಾಮಹತಾಗ್ರಹಣಂ ಮನುಷ್ಯವಿಷಯಭೋಗಕಾಮಾನಭಿಹತಸ್ಯ ಶ್ರೋತ್ರಿಯಸ್ಯ ಮನುಷ್ಯಾನನ್ದಾತ್ ಶತಗುಣೇನ ಆನನ್ದೋತ್ಕರ್ಷೋ ಮನುಷ್ಯಗನ್ಧರ್ವೇಣ ತುಲ್ಯೋ ವಕ್ತವ್ಯಃ ಇತ್ಯೇವಮರ್ಥಮ್ । 'ಸಾಧು ಯುವಾಧ್ಯಾಯಕಃ' ಇತಿ ಶ್ರೋತ್ರಿಯತ್ವಾವೃಜಿನತ್ವೇ ಗೃಹ್ಯೇತೇ । ತೇ ಹಿ ಅವಿಶಿಷ್ಟೇ ಸರ್ವತ್ರ । ಅಕಾಮಹತತ್ವಂ ತು ವಿಷಯೋತ್ಕರ್ಷಾಪಕರ್ಷತಃ ಸುಖೋತ್ಕರ್ಷಾಪಕರ್ಷಾಯ ವಿಶೇಷ್ಯತೇ । ಅತಃ ಅಕಾಮಹತಗ್ರಹಣಂ ತದ್ವಿಶೇಷತಃ ಶತಗುಣಸುಖೋತ್ಕರ್ಷೋಪಲಬ್ಧೇಃ ಅಕಾಮಹತತ್ವಸ್ಯ ಪರಮಾನನ್ದಪ್ರಾಪ್ತಿಸಾಧನತ್ವವಿಧಾನಾರ್ಥಮ್ ॥

(ಭಾಷ್ಯಾರ್ಥ)

ಮೊದಲನೆಯ (ಪರ್ಯಾಯದಲ್ಲಿ) 'ಅಕಾಮಹತ' ಎಂಬ ಮಾತನ್ನು ಪ್ರಯೋಗಿಸದೆ ಇರುವದೇಕೆಂದರೆ, ಮನುಷ್ಯರ ವಿಷಯಭೋಗಗಳ ಕಾಮದ ಹೊಡೆತವಿಲ್ಲದ ಶ್ರೋತ್ರಿಯನಿಗೆ ಮನುಷ್ಯಾನಂದಕ್ಕಿಂತ ನೂರುಮಡಿಯಾಗಿ ಹೆಚ್ಚಿನ ಮನುಷ್ಯ ಗಂಧರ್ವನ (ಆನಂದಕ್ಕೆ) ಸಮನಾದ ಆನಂದವು (ಆಗುವ)ದೆಂದು ಹೇಳಬೇಕೆಂಬ ಉದ್ದೇಶದಿಂದ.[3] 'ಸಾಧುಯುವಾ', 'ಅಧ್ಯಾಯಕಃ' ಎಂಬ (ಮಾತುಗಳಿಂದ) ಶ್ರೋತ್ರಿಯತ್ವ, ಅವೃಜಿನತ್ವ[4]-(ಇವನ್ನು) ಗ್ರಹಿಸಬೇಕು. ಏಕೆಂದರೆ ಅವು ಎಲ್ಲ

---

1. ಹೊರಗೆ ಚಿತ್ತಕ್ಕೆ ಆಗುವ ತಡೆಯೇ ಅದು ತಿಳಿಯಾಗದಿರುವದಕ್ಕೆ ಕಾರಣವು.

2. ಆನಂದವು ಬ್ರಹ್ಮಸ್ವರೂಪವೇ ಆಗಿದ್ದರೂ ಚಿತ್ತಪ್ರಸನ್ನತೆಯ ತಾರತಮ್ಯದಿಂದ ಅಷ್ಟಷ್ಟುಮಟ್ಟಿಗೆ ತೋರಿಕೊಳ್ಳುತ್ತದೆ.

3. ಹಿಂದಿನ ಅಂತಸ್ತಿನ ಭೋಗದಲ್ಲಿ ಕಾಮವಿಲ್ಲದವರಿಗೆ ಮುಂದಿನ ಅಂತಸ್ತಿನ ಆನಂದವಾಗುವದೆಂಬುದನ್ನು ತಿಳಿಸುವ ಉದ್ದೇಶದಿಂದ.

4. ಬೃ. ೪-೩-೩೩ನ್ನು ನೋಡಿ.

ರಲ್ಲಿಯೂ ಸಮಾನವಾಗಿರುತ್ತವೆ[1]. ಆದರೆ ಕಾಮದ ಹೊಡೆತವಿಲ್ಲದಿರುವಿಕೆ ಎಂಬುದನ್ನು ಮಾತ್ರ ವಿಷಯದ ಹೆಚ್ಚುಗಾರಿಕೆ, ಅಥವಾ ಕೀಳುತನ–ಇವುಗಳಿಂದ ಸುಖವೂ ಉತ್ತಮವಾದದ್ದು ಅಥವಾ ಕೀಳಾದದ್ದು (ಆಗುವದೆಂದು ತಿಳಿಸುವದಕ್ಕಾಗಿ) ವಿಶೇಷವಾಗಿ ಹೇಳಿರುತ್ತದೆ.[2] ಆದ್ದರಿಂದ 'ಅಕಾಮಹತ' ಎಂಬ ಮಾತನ್ನು ಪ್ರಯೋಗಿಸಿರುವದು ಅದು ವಿಶೇಷವಾದಂತೆ ನೂರು (ನೂರು) ಮಡಿಯಾಗಿ ಹೆಚ್ಚಿನ ಸುಖವು ಕಾಣಬರುವದರಿಂದ ಅಕಾಮಹತತ್ವವು ಪರಮಾನಂದಪ್ರಾಪ್ತಿಗೆ ಸಾಧನವೆಂದು ತಿಳಿಸುವದಕ್ಕೆ.[3]

## ಹಿರಣ್ಯಗರ್ಭನವರೆಗಿನ ಆನಂದಜೀವರುಗಳು

(ಭಾಷ್ಯ)

೨೦೦ ವ್ಯಾಖ್ಯಾತಮನ್ಯತ್ । ದೇವಗನ್ಧರ್ವಾಃ ಜಾತಿತ ಏವ । ಚಿರಲೋಕಲೋಕಾನಾಮ್ ಇತಿ ಪಿತೄಣಾಂ ವಿಶೇಷಣಮ್ । ಚಿರಕಾಲಸ್ಥಾಯೀ ಲೋಕಃ ಯೇಷಾಂ ಪಿತೄಣಾಮ್ ತೇ ಚಿರಲೋಕಲೋಕಾಃ । ಆಜಾನ ಇತಿ ದೇವಲೋಕಃ । ತಸ್ಮಿನ್ ಆಜಾನೇ ಜಾತಾಃ ಆಜಾನಜಾಃ ದೇವಾಃ । ಸ್ಮಾರ್ತಕರ್ಮವಿಶೇಷತೋ ದೇವಸ್ಥಾನೇಷು ಜಾತಾಃ । ಕರ್ಮದೇವಾಃ ಯೇ ವೈದಿಕೇನ ಕರ್ಮಣಾ ಅಗ್ನಿಹೋತ್ರಾದಿನಾ ಕೇವಲೇನ ದೇವಾನ್ ಅಪಿಯನ್ತಿ । ದೇವಾಃ ತ್ರಯಸ್ತ್ರಿಂಶತ್ ಹವಿರ್ಭುಜಃ । ಇನ್ದ್ರಃ ತೇಷಾಂ ಸ್ವಾಮೀ । ತಸ್ಯ ಆಚಾರ್ಯಃ ಬೃಹಸ್ಪತಿಃ । ಪ್ರಜಾಪತಿಃ ವಿರಾಟ್ ತ್ರೈಲೋಕ್ಯಶರೀರಃ । ಬ್ರಹ್ಮಾ ಸಮಷ್ಟಿವ್ಯಷ್ಟಿರೂಪಃ ಸಂಸಾರಮಣ್ಡಲವ್ಯಾಪೀ ; ಯತ್ರ ಏತೇ ಆನನ್ದಭೇದಾಃ ಏಕತಾಂ ಗಚ್ಛನ್ತಿ, ಧರ್ಮಶ್ಚ ತನ್ನಿ

---

1. ಕೆಳಗಿನ ಭೂಮಿಕೆಗಳಲ್ಲಿಯೂ ಮೇಲಿನ ಭೂಮಿಕೆಗಳಲ್ಲಿಯೂ ಇರುತ್ತವೆ. ಆದ್ದರಿಂದ ಅವು ಮೇಲಿನ ಅಂತಸ್ತಿನ ಆನಂದಕ್ಕೆ ಅಸಾಧಾರಣವಾದ ಹೇತುವಲ್ಲ

2. ವಿಷಯವು ಉತ್ತಮವಾದಂತೆ ಆನಂದವೂ ಉತ್ತಮವಾಗುತ್ತದೆ ಎಂದು ತಿಳಿಸುವದಕ್ಕೆ ಕೆಳಗಿನಂತಸ್ತಿನ ವಿಷಯದಲ್ಲಿ ಅಕಾಮಹತತ್ವವನ್ನೂ ಹೇಳಿದೆ. ಆದ್ದರಿಂದ ಅಕಾಮಹತತ್ವವೆಂಬುದು ಪ್ರತಿಯೊಂದು ಪರ್ಯಾಯದಲ್ಲಿಯೂ ಬೇರೆಬೇರೆಯ ಸ್ವಭಾವದ್ದು.

3. ತನ್ನ ವಿಷಯಕ್ಕಿಂತ ಕಡಿಮೆಯಾಗಿರುವ ಕೀಳ್ತರದ ವಿಷಯಗಳಲ್ಲಿ ಅಕಾಮಹತತ್ವವುಂಟಾದರೆ ಆಯಾ ವಿಷಯದಿಂದ ಆನಂದವುಂಟಾಗುತ್ತದೆ. ಆದ್ದರಿಂದ ಪರಮಾನಂದವಾದ ಬ್ರಹ್ಮಾನಂದವೂ ಅದಕ್ಕಿಂತ ಕೀಳಾಗಿರುವ ಎಲ್ಲಾ ಅನಾತ್ಮವಸ್ತುಗಳಲ್ಲಿ ಅಕಾಮಹತನಾಗಿರುವದರಿಂದ ಉಂಟಾಗುತ್ತದೆ.

ಮಿತ್ತಃ ಜ್ಞಾನಂ ಚ ತದ್ವಿಷಯಮ್ ಅಕಾಮಹತತ್ವಂ ಚ ನಿರತಿಶಯಂ ಯತ್ರ ಸ ಏವ ಹಿರಣ್ಯಗರ್ಭೋ ಬ್ರಹ್ಮಾ । ತಸ್ಯೈಷ ಆನನ್ದಃ ಶ್ರೋತ್ರಿಯೇಣ ಅವೃಜಿನೇನ ಅಕಾಮಹತೇನ ಚ ಸರ್ವತಃ ಪ್ರತ್ಯಕ್ಷಮ್ ಉಪಲಭ್ಯತೇ ॥

(ಭಾಷ್ಯಾರ್ಥ)

ಉಳಿದದ್ದನ್ನು ವಿವರಿಸಿದಂತೆಯೇ (ಆಗಿದೆ). **ದೇವಗಂಧರ್ವರು** ಎಂದರೆ ಹುಟ್ಟುವಾಗಲೇ (ಗಂಧರ್ವರಾಗಿ ಹುಟ್ಟಿರುವವರು). **ಚಿರಲೋಕಲೋಕವುಳ್ಳ** ಎಂಬುದು ಪಿತೃಗಳಿಗೆ ವಿಶೇಷಣವು. ಬಹುಕಾಲ ನಿಲ್ಲುವ ಲೋಕವು ಯಾರಿಗೆ ಎಂದರೆ (ಯಾವ) ಪಿತೃಗಳಿಗೆ (ಇರುವದೋ) ಅವರು ಚಿರಲೋಕಲೋಕವುಳ್ಳವರೆನಿಸುತ್ತಾರೆ. ಆಜಾನವೆಂದರೆ ದೇವಲೋಕವು; ಆ ಆಜಾನದಲ್ಲಿ ಹುಟ್ಟುವವರು ಆಜಾನಜದೇವತೆಗಳು, ಕೆಲವು ಸ್ಮಾರ್ತಕರ್ಮಗಳಿಂದ ದೇವತೆಗಳ ಸ್ಥಾನದಲ್ಲಿ ಹುಟ್ಟಿರುವವರು. **ಕರ್ಮದೇವತೆಗಳು** ಎಂದರೆ ಅಗ್ನಿಹೋತ್ರವೇ ಮುಂತಾದ ಬರಿಯ ಶ್ರೌತಕರ್ಮಗಳಿಂದಲೇ ದೇವತೆಗಳ ಸಾಯುಜ್ಯವನ್ನು ಪಡೆದಿರುವವರು; ದೇವತೆಗಳು ಎಂದರೆ ಹವಿಸ್ಸನ್ನು ಅನುಭವಿಸುವ ಮೂವತ್ತುಮೂರು ಮಂದಿ.[1] **ಇಂದ್ರ**ನೆಂದರೆ ಆ (ದೇವತೆಗಳ) ಒಡೆಯ. ಅವನ ಆಚಾರ್ಯನು **ಬೃಹಸ್ಪತಿ. ಪ್ರಜಾಪತಿ** ಎಂದರೆ ಮೂರು ಲೋಕಗಳೆಂಬ ಶರೀರವುಳ್ಳ ವಿರಾಟ್ಪುರುಷನು. ಬ್ರಹ್ಮನು ಎಂದರೆ ಸಮಷ್ಟಿರೂಪನಾಗಿಯೂ ವ್ಯಷ್ಟಿರೂಪನಾಗಿಯೂ[2] ಸಂಸಾರ ಮಂಡಲವನ್ನೆಲ್ಲ ವ್ಯಾಪಿಸಿರುವವನು; ಆತನಲ್ಲಿ ಈ (ಮೇಲೆ ಹೇಳಿದ) ಬೇರೆಬೇರೆಯ ಆನಂದಗಳು ಒಂದಾಗಿ ಸೇರಿಕೊಂಡಿರುವವು;[3] ಆ (ಆನಂದಕ್ಕೆ) ನಿಮಿತ್ತವಾದ ಧರ್ಮವೂ ಅದರ ವಿಷಯವಾದ ಜ್ಞಾನವೂ ಕಾಮದ ಹೊಡೆತವಿಲ್ಲದಿರುವಿಕೆಯೂ ಆತನಲ್ಲಿ ಮಿಗಿಲಿಲ್ಲದಷ್ಟು ಇರುವವು.[4] ಆ ಈತನೇ ಹಿರಣ್ಯಗರ್ಭನೆಂಬ ಬ್ರಹ್ಮನು.

---

1. ಅಷ್ಟವಸುಗಳು, ಏಕಾದಶರುದ್ರರು, ದ್ವಾದಶಾದಿತ್ಯರು, ಇಂದ್ರನು, ಪ್ರಜಾಪತಿ-ಈ ಮೂವತ್ತುಮೂರು ಮಂದಿ ದೇವತೆಗಳು. ಇಲ್ಲಿ ಇಂದ್ರ, ಪ್ರಜಾಪತಿ-ಇಬ್ಬರನ್ನು ಬಿಟ್ಟು ಮಿಕ್ಕವರನ್ನು ಗ್ರಹಿಸಬೇಕು.

2. ಬೇರೆಬೇರೆಯಾಗಿ ತೋರುವ ಜೀವರುಗಳೂ ಅವರ ಒಟ್ಟೂ ಬ್ರಹ್ಮನೇ.

3. ಅದರಲ್ಲಿ ಅಡಕವಾಗಿರುವವು.

4. ಮುಂ. ಭಾ. ೧-೧-೧; ಬೃ. ಭಾ. ೧-೪-೬ರಲ್ಲಿ ಹಿರಣ್ಯಗರ್ಭನ ವಿಷಯದ ಚರ್ಚೆಯನ್ನು ನೋಡಿರಿ.

ಆತನ ಈ ಆನಂದವು ಶ್ರೋತ್ರಿಯನೂ ಅವೃಜಿನನೂ [1] ಅಕಾಮಹತನೂ ಆಗಿರುವವನಿಗೆ ಎಲ್ಲೆಲ್ಲಿಯೂ [2] ಪ್ರತ್ಯಕ್ಷವಾಗಿ ಕಾಣಬರುತ್ತಿರುವದು.

## ಪರಮಾನಂದಕ್ಕೆ ಸಾಧನಗಳು

(ಭಾಷ್ಯ)

೨೧೧. ತಸ್ಮಾತ್ ಏತಾನಿ ತ್ರೀಣಿ ಸಾಧನಾನಿ ಇತ್ಯವಗಮ್ಯತೇ । ತತ್ರ ಶ್ರೋತ್ರಿಯತ್ವಾವೃಜಿನತ್ವೇ ನಿಯತೇ, ಅಕಾಮಹತತ್ವಂ ತು ಉತ್ಕೃಷ್ಯತೇ ಇತಿ ಪ್ರಕೃಷ್ಟಸಾಧನತಾ ಅವಗಮ್ಯತೇ ॥

(ಭಾಷ್ಯಾರ್ಥ)

ಹೀಗಿರುವದರಿಂದ ಈ ಮೂರೂ (ಪರಮಾನಂದಕ್ಕೆ) ಸಾಧನಗಳು ಎಂದು ನಿಶ್ಚಯವಾಯಿತು. ಇವುಗಳಲ್ಲಿ ಶ್ರೋತ್ರಿಯತ್ವ, ಅವೃಜಿನತ್ವ—ಇವುಗಳು ಒಂದೇ ಸಮವಾಗಿರುತ್ತವೆ; ಅಕಾಮಹತತ್ವವು ಮಾತ್ರ ಹೆಚ್ಚುತ್ತಿರುತ್ತದೆ. ಆದ್ದರಿಂದ (ಅದು ಪರಮಾನಂದಕ್ಕೆ) ಎಲ್ಲಕ್ಕಿಂತಲೂ ಹೆಚ್ಚಿನ ಸಾಧನವೆಂದು ನಿಶ್ಚಯವಾಯಿತು.

## ಪರಮಾನಂದ

(ಭಾಷ್ಯ)

೨೧೨. ತಸ್ಯ ಅಕಾಮಹತತ್ವಪ್ರಕರ್ಷತಶ್ಚ ಉಪಲಭ್ಯಮಾನಃ ಶ್ರೋತ್ರಿಯಪ್ರತ್ಯಕ್ಷೋ ಬ್ರಹ್ಮಣ ಆನನ್ದಃ ಯಸ್ಯ ಪರಮಾನನ್ದಸ್ಯ ಮಾತ್ರಾ ಏಕದೇಶಃ "ಏತಸ್ಯೈವಾನನ್ದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವನ್ತಿ" (ಬೃ. ೪-೩-೩೨) ಇತಿ ಶ್ರುತ್ಯನ್ತರಾತ್ । ಸ ಏಷ ಆನನ್ದಃ, ಯಸ್ಯ ಮಾತ್ರಾಃ ಸಮುದ್ರಾಮ್ಭಸ ಇವ ವಿಪ್ರುಷಃ ಪ್ರವಿಭಕ್ತಾಃ ಯತ್ರೈಕತಾಂ ಗತಾಃ ಸ ಏಷ ಪರಮಾನನ್ದಃ ಸ್ವಾಭಾವಿಕಃ । ಅದ್ವೈತತ್ವಾತ್ । ಆನನ್ದಾನನ್ದಿನೋಶ್ಚ ಅವಿಭಾಗೋಽತ್ರ ॥

(ಭಾಷ್ಯಾರ್ಥ)

೨೧೨. ಅಕಾಮಹತತ್ವವು (ತೀರ) ಹೆಚ್ಚಾಗಿರುವದರಿಂದ ಅನುಭವಕ್ಕೆ ಬರುವದಾಗಿಯೂ ಶ್ರೋತ್ರಿಯರಿಗೆ ಪ್ರತ್ಯಕ್ಷವಾಗಿರುವದಾಗಿಯೂ ಇರುವ ಆ ಬ್ರಹ್ಮನ

---

1. ಪಾಪರಹಿತನೂ. ಪಾಪವು ಆನಂದಕ್ಕೆ ಮರೆಯಾಗಿರುವದು.
2. ಗೀ. ಭಾ. ೫-೨೬.

ಆನಂದವು "ಇದೇ ಆನಂದದ ಮಾತ್ರೆಯನ್ನು ಮಿಕ್ಕ ಭೂತಗಳು ಆಶ್ರಯಿಸಿಕೊಂಡಿರುವವು" (ಬೃ. ೪-೩-೩೨) ಎಂಬ ಬೇರೊಂದು ಶ್ರುತಿಯು ಹೇಳಿರುವಂತೆ ಯಾವ ಪರಮಾನಂದಕ್ಕೆ ಮಾತ್ರೆಯಾಗಿ ಎಂದರೆ ಒಂದಂಶವಾಗಿ (ಇರುವದೋ), ಆ ಈ ಆನಂದವು,[1] ಯಾವದರ ಅಂಶಗಳಾಗಿರುವ (ಮಿಕ್ಕ ಆನಂದಗಳು) ಸಮುದ್ರದ ನೀರಿನ ಬೇರೆಬೇರೆಯಾಗಿರುವ ಹನಿಗಳಂತೆ ಯಾವದರಲ್ಲಿ ಒಂದಾಗಿರುವವೋ[2] ಆ ಈ ಪರಮಾನಂದವು, ಸ್ವಾಭಾವಿಕವಾದದ್ದು; ಏಕೆಂದರೆ ಅದು ತನಗೆರಡನೆಯದಿಲ್ಲದ್ದಾಗಿರುತ್ತದೆ. ಮತ್ತು ಆನಂದ, ಆನಂದಿ–ಇವೆರಡೂ ವಿಂಗಡವಾಗಿರದೆ (ಒಂದಾಗಿ)ರುವವು.[3]

## ಪರಮಾನಂದವು ಅದ್ವಿತೀಯವಾಗಿರುತ್ತದೆ

(ಭಾಷ್ಯ)

೨೦೩. ತದೇತನ್ಮೀಮಾಂಸಾಫಲಮ್ ಉಪಸಂಹ್ರಿಯತೇ–"ಸ ಯಶ್ಚಾಯಂ ಪುರುಷೇ" ಇತಿ ||

(ಭಾಷ್ಯಾರ್ಥ)

ಆ ಈ ವಿಚಾರದ ಫಲವನ್ನು "ಸ ಯಶ್ಚಾಯಂ ಪುರುಷೇ" ಎಂಬ (ವಾಕ್ಯದಲ್ಲಿ) ಉಪಸಂಹಾರಮಾಡಲಾಗುತ್ತದೆ: –

**ಸ ಯಶ್ಚಾಯಂ ಪುರುಷೇ । ಯಶ್ಚಾಸಾವಾದಿತ್ಯೇ । ಸ ಏಕಃ ||೪||**

೪. ಯಾವ ಆ ಇವನು ಪುರುಷನಲ್ಲಿರುವನೋ ಮತ್ತು ಯಾವ ಅವನು ಆದಿತ್ಯನಲ್ಲಿರುವನೋ ಅವನು ಒಬ್ಬನೇ.

1. "ಸ ಏಷ ಆನನ್ದಃ", "ಸ ಏಷ ಪರಮಾನನ್ದಃ"-ಎಂದು ಎರಡುಸಲ ಬಂದಿರುವದು "ಸ್ವಾಭಾವಿಕಃ" ಎಂಬುದರ ಸಂಬಂಧವನ್ನು ತಿಳಿಸುವದಕ್ಕೆ.

2. "ಮಾತ್ರಾಃ" ಎಂಬ ಪಾ॥ ಪಾಠವನ್ನು ಇಟ್ಟುಕೊಂಡಿದೆ. ವಿಪ್ರುಷಃ ಎಂಬ ದೃಷ್ಟಾಂತಕ್ಕೆ ಇದು ಅನುಗುಣವಾಗಿಯೂ ಇದೆಯಲ್ಲದೆ ಹಿರಣ್ಯಗರ್ಭನ ಆನಂದವೂ ಮಿಕ್ಕ ಆನಂದಗಳೂ ಪರಮಾನಂದದಲ್ಲಿಯೇ ಅಡಕವಾಗಿರುವವು ಎಂಬರ್ಥವನ್ನೂ ಕೊಡುತ್ತದೆ.

3. ತನಗೆರಡನೆಯದಿಲ್ಲವಾದ್ದರಿಂದ ಮತ್ತೊಂದರಿಂದ ಆದದ್ದಲ್ಲ, ಮತ್ತೊಂದರ ಧರ್ಮವೂ ಅಲ್ಲ ಎಂದು ಅದ್ವಿತೀಯತ್ವಾತ್ ಎಂಬ ಪದವನ್ನು ಎರಡು ಕಡೆಗೂ ಅನ್ವಯಿಸಿಕೊಳ್ಳಬೇಕು.

(ಭಾಷ್ಯ)

೨೦೪. ಯೋ ಗುಹಾಯಾಂ ನಿಹಿತಃ ಪರಮೇ ವ್ಯೋಮ್ನಿ ಆಕಾಶಾದಿ ಕಾರ್ಯಂ ಸೃಷ್ಟ್ವಾ ಅನ್ನಮಯಾನ್ತಂ ತದೇವಾನುಪ್ರವಿಷ್ಟಃ ಸ "ಯಃ" ಇತಿ ನಿರ್ದಿಶ್ಯತೇ । ಕೋಽಸೌ? ಅಯಂ ಪುರುಷೇ । ಯಶ್ಚಾಸಾವಾದಿತ್ಯೇ । ಯಃ ಪರಮಾನನ್ದಃ ಶ್ರೋತ್ರಿಯಪ್ರತ್ಯಕ್ಷೋ ನಿರ್ದಿಷ್ಟಃ, ಯಸ್ಯ ಏಕದೇಶಂ ಬ್ರಹ್ಮಾದೀನಿ ಭೂತಾನಿ ಸುಖಾರ್ಹಾಣಿ ಉಪಜೀವನ್ತಿ । ಸ "ಯಶ್ಚಾಸಾವಾದಿತ್ಯೇ" ಇತಿ ನಿರ್ದಿಶ್ಯತೇ । ಸ ಏಕಃ ಭಿನ್ನಪ್ರದೇಶಸ್ಥಘಟಾಕಾಶಾಕಾಶೈಕತ್ವವತ್ ॥

(ಭಾಷ್ಯಾರ್ಥ)

ಯಾವನು ಪರಮವ್ಯೋಮದಲ್ಲಿ ಗುಹೆಯಲ್ಲಿಡಲ್ಪಟ್ಟಿರುವನೋ[1] ಆಕಾಶವೇ ಮುಂತಾದ ಅನ್ನಮಯದವರೆಗಿನ ಕಾರ್ಯವನ್ನು ಸೃಷ್ಟಿಮಾಡಿ[2] ಅದನ್ನೇ ಒಳಹೊಕ್ಕಿರುವನೋ[3] ಅವನನ್ನು "ಸ ಯಃ" (ಯಾವ ಅವನು) ಎಂದು ತಿಳಿಸಿರುತ್ತದೆ. ಅವನು ಯಾರು? ಎಂದರೆ ಪುರುಷನಲ್ಲಿರುವ ಇವನು "ಯಾವ ಅವನು ಆದಿತ್ಯನಲ್ಲಿರುವನೋ" ಯಾವ ಪರಮಾನಂದ(ರೂಪನಾದ ಆತ್ಮನು) ಶ್ರೋತ್ರಿಯರಿಗೆ ಪ್ರತ್ಯಕ್ಷವಾಗಿರುವನೆಂದು ತಿಳಿಸಲಾಯಿತೋ ಯಾವ (ಪರಮಾತ್ಮನ ಆನಂದದ) ಒಂದಂಶವನ್ನು ಸುಖಕ್ಕೆ ತಕ್ಕ[4] ಬ್ರಹ್ಮನೇ ಮುಂತಾದ ಪ್ರಾಣಿಗಳು ಆಶ್ರಯಿಸಿಕೊಂಡು ಬಾಳುವವೋ ಅವನನ್ನು "ಯಶ್ಚಾಸಾವಾದಿತ್ಯೇ" (ಮತ್ತು ಯಾವ ಅವನು ಆದಿತ್ಯನಲ್ಲಿರುವನೋ) ಎಂದು ತಿಳಿಸಿರುತ್ತದೆ. ಅವನು, ಬೇರೆಬೇರೆಯ ಪ್ರದೇಶಗಲ್ಲಿರುವ ಗಡಿಗೆಯ ಆಕಾಶವೂ (ಮಹಾ)ಕಾಶವೂ ಒಂದೇ ಆಗಿರುವಂತೆ, ಒಬ್ಬನೇ[5]

(ಭಾಷ್ಯ)

೨೦೫. ನನು ತನ್ನಿರ್ದೇಶೇ "ಸ ಯಶ್ಚಾಯಂ ಪುರುಷೇ" ಇತಿ ಅವಿಶೇಷತೋಽಧ್ಯಾತ್ಮಂ ನ ಯುಕ್ತೋ ನಿರ್ದೇಶಃ । "ಯಶ್ಚಾಯಂ ದಕ್ಷಿಣೇಽಕ್ಷನ್ ಇತಿ ತು

---

1. ೨-೧. 2. ೨-೧. 3. ೨-೬.

4. ಬರಿಯ ದುಃಖವನ್ನೇ ಅನುಭವಿಸುವ ಪಾಪಿಗಳನ್ನು ಬಿಟ್ಟು ಮಿಕ್ಕವರನ್ನೇ ಇಲ್ಲಿ ಭೂತಗಳೆಂಬ ಮಾತಿನಿಂದ ತಿಳಿಸಿದೆ ಎಂದು ಭಾವ.

5. ಗಡಿಗೆ ಎಂಬ ಉಪಾಧಿಯಿಂದ ಬೇರೆಯಾಗಿ ತೋರಿದರೂ ಆಕಾಶವು ಯಾವಾಗಲೂ ಅಖಂಡಿತವಾಗಿ ಒಂದೇ ಆಗಿರುವಂತೆ ಆತ್ಮನಸ್ವರೂಪವಾದ ಆನಂದವು ಆಯಾ ಜೀವರಲ್ಲಿ ಉಪಾಧಿಯಿಂದ ಬೇರೆಬೇರೆಯಾಗಿ ತೋರಿದರೂ ಅಖಂಡಿತವಾಗಿ ಒಂದೇ ಆಗಿರುತ್ತದೆ ಎಂದರ್ಥ.

ಯುಕ್ತಃ । ಪ್ರಸಿದ್ಧತ್ವಾತ್ । ನ[1] ಪರಾಧಿಕಾರಾತ್ । ಪರೋ ಹಿ ಆತ್ಮಾ ಅತ್ರ ಅಧಿಕೃತಃ "ಅದೃಶ್ಯೇಽನಾತ್ಮ್ಯೇ" (೨-೭), ಭೀಷಾಸ್ಮಾದ್ ವಾತಃ ಪವತೇ (೨-೮), "ಸೈಷಾ ಆನನ್ದಸ್ಯ ಮೀಮಾಂಸಾ" (೨-೮) ಇತಿ । ನ ಹಿ ಅಕಸ್ಮಾತ್ ಅಪ್ರಕೃತೋ ಯುಕ್ತೋ ನಿರ್ದೇಷ್ಟುಮ್ । ಪರಮಾತ್ಮವಿಜ್ಞಾನಂ ಚ ವಿವಕ್ಷಿತಮ್ । ತಸ್ಮಾತ್ ಪರ ಏವ ನಿರ್ದಿಶ್ಯತೇ "ಸ ಏಕಃ" ಇತಿ ॥

(ಭಾಷ್ಯಾರ್ಥ)

(ಆಕ್ಷೇಪ): ಅಧ್ಯಾತ್ಮವಾಗಿ ಆ (ಆತ್ಮನನ್ನು) ತಿಳಿಸುವಾಗ ಯಾವ ವಿಶೇಷವೂ ಇಲ್ಲದೆ "ಯಾವ ಆ ಇವನು ಪುರುಷನಲ್ಲಿರುವನೋ" ಎಂದು ಗೊತ್ತಾದ (ಪ್ರದೇಶವನ್ನು ಹೇಳದೆ) ತಿಳಿಸಿರುವದು ಸರಿಯಾಗುವದಿಲ್ಲವಲ್ಲ![1] "ಮತ್ತು ಯಾವ ಈತನು ಬಲಗಣ್ಣಿನಲ್ಲಿರುವನೋ" ಎಂದು ಬೇಕಾದರೆ (ತಿಳಿಸುವದು) ಸರಿಯಾದೀತು. ಏಕೆಂದರೆ (ಹಾಗೆ ತಿಳಿಸುವದು ಶ್ರುತಿ) ಪ್ರಸಿದ್ಧವಾಗಿರುತ್ತದೆ.[2]

(ಪರಿಹಾರ):—ಹಾಗಲ್ಲ. ಏಕೆಂದರೆ (ಇದು) ಪರಮಾತ್ಮನ ಪ್ರಕರಣವಾಗಿರುತ್ತದೆ. "ಅದೃಶ್ಯವೂ ಅನಾತ್ಮ್ಯವೂ ಆದ (ಪರಮಾತ್ಮತತ್ತ್ವದಲ್ಲಿ ಅಭಯವಾದ ಪ್ರತಿಷ್ಠೆಯನ್ನು ಹೊಂದುವನು)" (೨-೭) "ಇವನ ಅಂಜಿಕೆಯಿಂದ ವಾಯುವು ಬೀಸುತ್ತಾನೆ" (೨-೮), "ಆ ಇದು ಆನಂದದ ಮೀಮಾಂಸೆಯು" (೨-೮) ಎಂದು ಇಲ್ಲಿ ಪರಮಾತ್ಮನನ್ನು ಕುರಿತೇ ಹೇಳಿರುತ್ತದೆ. ತಟ್ಟನೆ ಅಪ್ರಕೃತನಾದ (ಹಿರಣ್ಯಗರ್ಭನನ್ನು)[2] ತಿಳಿಸುವದು ಯುಕ್ತವಾಗಲಾರದಷ್ಟೆ. ಮತ್ತು (ಇಲ್ಲಿ) ಪರಮಾತ್ಮನ ವಿಜ್ಞಾನವನ್ನು ಹೇಳಬೇಕೆಂದು ಹೊರಟಿರುತ್ತದೆ. ಆದ್ದರಿಂದ ಪರ(ಮಾತ್ಮನನ್ನೇ) "ಅವನು ಒಬ್ಬನೇ" ಎಂದು (ಇಲ್ಲಿ) ತಿಳಿಸಿರುತ್ತದೆ.

1. ಶರೀರದಲ್ಲಿ ಇಂಥದ್ದೊಂದು ಗೊತ್ತಾದ ಪ್ರದೇಶದಲ್ಲಿರುವನೆಂದು ಹೇಳದೆ ಸಾಮಾನ್ಯವಾಗಿ ಪುರುಷನಲ್ಲಿ ಎಂದರೆ ಶರೀರದಲ್ಲಿ ಇರುವನೆಂದು ತಿಳಿಸಿರುವದು ಸರಿಯಲ್ಲ ಎಂದು ಅಭಿಪ್ರಾಯ.

2. ಬೃ. ೫-೫-೨ನ್ನು ನೋಡಿ.

3. ಬೃಹದಾರಣ್ಯಕದಲ್ಲಿ "ಸತ್ಯ" ಎಂಬ ಹೆಸರಿನಿಂದ ವ್ಯಾಹೃತ್ಯವಯವಯುಕ್ತನಾದ ಹಿರಣ್ಯಗರ್ಭನನ್ನು ಉಪಾಸನೆಮಾಡುವದಕ್ಕೆಂದು ಅಧ್ಯಾತ್ಮ, ಅಧಿದೈವ-ಎಂಬ ಎರಡು ವಿಧಗಳಿಂದ ನಿರ್ದೇಶಮಾಡಿರುತ್ತದೆ. ಆದರೆ ಇಲ್ಲಿ ಹಿರಣ್ಯಗರ್ಭನ ವಿಷಯವೇನೂ ಬಂದಿಲ್ಲ.

(ಭಾಷ್ಯ)

೨೦೬. ನನ್ವಾನನ್ದಸ್ಯ ಮೀಮಾಂಸಾ ಪ್ರಕೃತಾ । ತಸ್ಯಾ ಅಪಿ ಫಲಮ್ ಉಪಸಂಹರ್ತವ್ಯಮ್ । ಅಭಿನ್ನಃ ಸ್ವಾಭಾವಿಕ ಆನನ್ದಃ ಪರಮಾತ್ಮೈವ ನ ವಿಷಯ ವಿಷಯಿಸಮ್ಬನ್ಧಜನಿತಃ ಇತಿ । ನನು ತದನುರೂಪ ಏವಾಯಂ ನಿರ್ದೇಶಃ "ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ ಸ ಏಕಃ" ಇತಿ ಭಿನ್ನಾಧಿಕರಣಸ್ಥ ವಿಶೇಷೋಪಮರ್ದೇನ । ನನ್ವೇವಮಪಿ ಆದಿತ್ಯವಿಶೇಷಗ್ರಹಣಮ್ ಅನರ್ಥಕಮ್ । ನಾನರ್ಥಕಮ್।[1] ಉತ್ಕರ್ಷಾಪಕರ್ಷಾಪೋಹಾರ್ಥತ್ವಾತ್ । ದ್ವೈತಸ್ಯ ಹಿ ಮೂರ್ತಾ ಮೂರ್ತಲಕ್ಷಣಸ್ಯ ಪರ ಉತ್ಕರ್ಷಃ ಸವಿತ್ರಭ್ಯನ್ತರ್ಗತಃ । ಸ ಚೇತ್ ಪುರುಷಗತ ವಿಶೇಷೋಪಮರ್ದೇನ ಪರಮಾನನ್ದಮಪೇಕ್ಷ್ಯ ಸಮೋ ಭವತಿ ನ ಕಶ್ಚಿದುತ್ಕರ್ಷೋಽ ಪಕರ್ಷೋ ವಾ ತಾಂ ಗತಿಂ ಗತಸ್ಯ ಇತಿ 'ಅಭಯಂ ಪ್ರತಿಷ್ಠಾಂ ವಿನ್ದತೇ" ಇತ್ಯುಪ ಪನ್ನಮ್ ॥

(ಭಾಷ್ಯಾರ್ಥ)

(ಆಕ್ಷೇಪ) :—ಆನಂದದ ವಿಚಾರವು (ಇಲ್ಲಿ) ಪ್ರಕೃತವಾಗಿರುತ್ತದೆ. (ಆದ್ದ ರಿಂದ) ಆ (ವಿಚಾರದ) ಫಲವನ್ನೂ ಉಪಸಂಹಾರಮಾಡಬೇಕು. ಆನಂದವು ಭೇದ ವಿಲ್ಲದ್ದು, ಸ್ವಾಭಾವಿಕವಾದದ್ದು,[2] ಪರಮಾತ್ಮ (ಸ್ವರೂಪ)ವೇ, ವಿಷಯವಿಷಯಿಗಳ ಸಂಬಂಧದಿಂದ ಉಂಟಾದದ್ದಲ್ಲ ಎಂದು (ತಿಳಿಸಬೇಕಲ್ಲವೆ) ?

(ಪರಿಹಾರ) :—"ಯಾವ ಆ ಇವನು ಪುರುಷನಲ್ಲಿರುವನೋ ಮತ್ತು ಯಾವ ಅವನು ಆದಿತ್ಯನಲ್ಲಿರುವನೋ ಅವನು ಒಬ್ಬನೇ" ಎಂದು ಬೇರೆಬೇರೆಯ ಅಧಿಕರಣಗಳಲ್ಲಿರುವ (ಆನಂದದಲ್ಲಿ) ವಿಶೇಷವನ್ನು ಅಲ್ಲಗಳೆದು ಹೇಳಿರುವ ಈ ಉಪದೇಶವು ಆ (ಫಲಕಥನಕ್ಕೆ) ಅನುಗುಣವಾಗಿಯೇ ಇದೆಯಲ್ಲವೆ ?

(ಆಕ್ಷೇಪ) :—ಹೀಗೆಂದು (ಒಪ್ಪಿಕೊಂಡ)ರೂ ಆದಿತ್ಯ(ನೆಂಬ ಅಧಿಕರಣ) ವಿಶೇಷವನ್ನು (ಇಲ್ಲಿ) ತಿಳಿಸಿರುವದು ವ್ಯರ್ಥವೇ[3] (ಆಗುತ್ತದೆಯಲ್ಲ !)

1. ಇದು ವಾ॥ಕಾ॥ ಪಾಠದಂತೆ ಬರೆದುಕೊಂಡದ್ದು.

2. ಕೃತಕವಾಗಿ ಮತ್ತೊಂದರಿಂದ ಆದದ್ದಲ್ಲ.

3. ಉಪಾಸನೆಗೆಂದು ಹೇಳಿರುವ ಬೃಹದಾರಣ್ಯಕವಾಕ್ಯದಲ್ಲಿ ಉಪಾಧಿಯೂ ವಿವಕ್ಷಿತವಾಗಿರುವದರಿಂದ ಆದಿತ್ಯನೆಂಬ ಮಾತನ್ನುಪಯೋಗಿಸಿರುವದಕ್ಕೆ ಪ್ರಯೋಜನವುಂಟು. ನಿರ್ವಿಶೇಷಾತ್ಮನನ್ನು ಹೇಳುವ ಈ ಪ್ರಕರಣವಲ್ಲಿ ಅದರಿಂದೇನಾಗಬೇಕು ?- ಎಂದು ಆಕ್ಷೇಪ.

(ಪರಿಹಾರ):—ವ್ಯರ್ಥವಲ್ಲ. ಏಕೆಂದರೆ (ಅದು) ಹೆಚ್ಚುಕಡಿಮೆಗಳನ್ನು ಒರಸಿಹಾಕುವದಕ್ಕಾಗಿ (ಹೇಳಿದ್ದಾಗಿದೆ). ಮೂರ್ತಾಮೂರ್ತರೂಪವಾದ ದ್ವೈತದ ಅತ್ಯಂತ ಹೆಚ್ಚಿನ (ಕಟ್ಟಕಡೆಯ) ಉತ್ತಮತ್ವವು ಸೂರ್ಯನ ಒಳಗಿರುತ್ತದೆಯಷ್ಟೆ.[1] ಪುರುಷನಲ್ಲಿರುವ ವಿಶೇಷವನ್ನು[2] ಒರಸಿಹಾಕಿ ಪರಮಾನಂದವನ್ನೇ ಲೆಕ್ಕಕ್ಕೆ ಇಟ್ಟುಕೊಂಡರೆ ಅದು (ಪುರುಷನಲ್ಲಿರುವ ಆನಂದಕ್ಕೆ) ಸಮವಾಗುತ್ತದೆ ಎಂದಮೇಲೆ ಆ ಗತಿಯನ್ನು ಪಡೆದವನಿಗೆ[3] ಯಾವ ಹೆಚ್ಚಿಗೆಯಾಗಲಿ ಕುಂದಾಗಲಿ ಇರುವದಿಲ್ಲ; ಆದ್ದರಿಂದಲೇ "ಅಭಯವಾಗಿ ಪ್ರತಿಷ್ಠೆಯನ್ನು ಪಡೆದುಕೊಳ್ಳುತ್ತಾನೆ" (೨-೮) ಎಂದು ಹೇಳಿದ್ದು ಯುಕ್ತವಾಗಿರುತ್ತದೆ.[4]

# ೧೭. ಬ್ರಹ್ಮಜ್ಞಾನದ ಫಲ

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೨೦೭. ಅಸ್ತಿ ನಾಸ್ತಿ-ಇತ್ಯನುಪ್ರಶ್ನೋ ವ್ಯಾಖ್ಯಾತಃ । ಕಾರ್ಯರಸಲಾಭಪ್ರಾಣನಾಭಯದರ್ಶನೋಪಪತ್ತಿಭ್ಯೋಽಸ್ತ್ಯೇವ ತದಾಕಾಶಾದಿಕಾರಣಂ ಬ್ರಹ್ಮ ಇತ್ಯಪಾಕೃತೋಽನುಪ್ರಶ್ನ ಏಕಃ । ದ್ವಾವನ್ಯೌ ಅನುಪ್ರಶ್ನೌ ವಿದ್ವದವಿದುಷೋರ್ಬ್ರಹ್ಮಪ್ರಾಪ್ತ್ಯಪ್ರಾಪ್ತಿವಿಷಯೌ । ತತ್ರ ವಿದ್ವಾನ್ ಸಮಶ್ನುತೇ ನ ಸಮಶ್ನುತೇ ಇತ್ಯನುಪ್ರಶ್ನೋಽನ್ತ್ಯಃ । ತದಪಾಕರಣಾಯ ಉಚ್ಯತೇ । ಮಧ್ಯಮೋಽನುಪ್ರಶ್ನಃ ಅನ್ತ್ಯಾಪಾಕರಣಾದೇವ ಅಪಾಕೃತಃ ಇತಿ ತದಪಾಕರಣಾಯ ನ ಯತ್ಯತೇ ॥

(ಭಾಷ್ಯಾರ್ಥ)

(ಬ್ರಹ್ಮವು) ಇದೆಯೊ, ಇಲ್ಲವೊ ?-ಎಂಬ ಅನುಪ್ರಶ್ನೆಗೆ ಉತ್ತರವನ್ನು ಹೇಳಿದ್ದಾಯಿತು. ಕಾರ್ಯ, ರಸಲಾಭ, ಪ್ರಾಣನ, ಅಭಯಪ್ರತಿಷ್ಠೆ, ಭಯದರ್ಶನ-ಎಂಬ[5]

---

1. ಬೃ. ೨-೩-೨, ೩ ನೋಡಿ.

2. ಇಂದ್ರಿಯಗಳು, ಲಿಂಗಶರೀರ-ಎಂಬ ವಿಶೇಷಗಳನ್ನು.

3. ಪರಮಾನಂದರೂಪವಾದ ಬ್ರಹ್ಮವನ್ನು ಪಡೆದವನಿಗೆ.

4. ಇಲ್ಲದಿದ್ದರೆ ತನಗಿಂತ ಬೇರೆಯಾದ ಹೆಚ್ಚಿನ ಸ್ಥಿತಿಯಿದೆ ಎಂಬ ಅರಿವಿನಿಂದ ಭಯವುಂಟಾಗಲೇ ಬೇಕು.

5. ಕಾರ್ಯವು ಕಾರಣವಿಲ್ಲದೆ ಇರಲಾರದು; ಆನಂದವು ರಸವನ್ನು ಪಡೆದಲ್ಲದೆ ಉಂಟಾಗಲಾರದು; ಪ್ರಾಣೇಂದ್ರಿಯಚೇಷ್ಟೆಗಳು ಅಸಂಹತಸ್ವತಂತ್ರವಸ್ತುವಿಲ್ಲದೆ ಆಗಲಾರವು; ಜ್ಞಾನಿಯ ಅಭಯವು ಅದರ ಕಾರಣವಿಲ್ಲದೆ ಆಗಲಾರದು; ದೊಡ್ಡವರಿಗೆಕೂಡ ಆಗುವ ಭಯವು ಭಯಕಾರಣವಿಲ್ಲದೆ ಆಗಲಾರದು-ಎಂಬ ಯುಕ್ತಿಗಳಿಂದ.

ಯುಕ್ತಿಗಳಿಂದ ಆಕಾಶವೇ ಮುಂತಾದದ್ದಕ್ಕೆ ಕಾರಣವಾದ ಆ ಬ್ರಹ್ಮವು ಇದ್ದೇ ಇದೆ-ಎಂದು ಒಂದು ಅನುಪ್ರಶ್ನೆಗೆ ಉತ್ತರವನ್ನು ಹೇಳಿದ್ದಾಯಿತು. ಜ್ಞಾನಿಗೂ ಅಜ್ಞಾನಿಗೂ ಬ್ರಹ್ಮಪ್ರಾಪ್ತಿಯಾಗುವದೊ, ಇಲ್ಲವೊ ?-ಎಂಬ ವಿಷಯದಲ್ಲಿ ಇನ್ನೆರಡು ಅನುಪ್ರಶ್ನೆಗಳು (ಉಳಿದಿವೆ). ಅವುಗಳಲ್ಲಿ ಜ್ಞಾನಿಯು ಪಡೆಯುತ್ತಾನೊ, ಇಲ್ಲವೊ ?-ಎಂಬುದು ಕೊನೆಯ ಅನುಪ್ರಶ್ನೆ. ಅದಕ್ಕೆ ಉತ್ತರವನ್ನು ಕೊಡುವದಕ್ಕಾಗಿ (ಶ್ರುತಿಯು ಮುಂದಿನ ವಾಕ್ಯವನ್ನು) ಹೇಳುತ್ತದೆ. ನಡುವಿನ ಅನುಪ್ರಶ್ನೆಗೆ, ಕೊನೆಯದಕ್ಕೆ ಉತ್ತರವನ್ನು ಕೊಟ್ಟದ್ದರಿಂದಲೇ ಉತ್ತರವನ್ನು ಕೊಟ್ಟಂತಾಗುವದರಿಂದ ಆದಕ್ಕೆ (ಬೇರೆಯಾಗಿ) ಉತ್ತರವನ್ನು ಕೊಡುವದಕ್ಕೆ (ಶ್ರುತಿಯು) ಯತ್ನವನ್ನು ಮಾಡುವದಿಲ್ಲ.[1]

## ಬ್ರಹ್ಮವನ್ನು ಅರಿಯುವದೇ ಅದರ ಪ್ರಾಪ್ತಿ

**ಸ ಯ ಏವಂ ವಿತ್ । ಅಸ್ಮಾಲ್ಲೋಕಾತ್ ಪ್ರೇತ್ಯ । ಏತಮನ್ನಮಯಮಾತ್ಮಾನಮುಪಸಂಕ್ರಾಮತಿ । ಏತಂ ಪ್ರಾಣಮಯಮಾತ್ಮಾನಮುಪಸಂಕ್ರಾಮತಿ । ಏತಂ ಮನೋಮಯಮಾತ್ಮಾನಮುಪಸಂಕ್ರಾಮತಿ । ಏತಂ ವಿಜ್ಞಾನಮಯಮಾತ್ಮಾನಮುಪಸಂಕ್ರಾಮತಿ । ಏತಮಾನನ್ದಮಯಮಾತ್ಮಾನಮುಪಸಂಕ್ರಾಮತಿ ॥ ೫ ॥**

೫. ಯಾವನು ಹೀಗೆ ಅರಿತುಕೊಂಡವನೋ ಅವನು ಈ ಲೋಕದಿಂದ ಹೊರಟುಹೋಗಿ ಈ ಅನ್ನಮಯನೆಂಬ ಆತ್ಮನನ್ನು ಪಡೆದುಕೊಳ್ಳುತ್ತಾನೆ, ಈ ಪ್ರಾಣಮಯನೆಂಬ ಆತ್ಮನನ್ನು ಪಡೆದುಕೊಳ್ಳುತ್ತಾನೆ, ಈ ಮನೋಮಯನೆಂಬ ಆತ್ಮನನ್ನು ಪಡೆದುಕೊಳ್ಳುತ್ತಾನೆ. ಈ ವಿಜ್ಞಾನಮಯನೆಂಬ ಆತ್ಮನನ್ನು ಪಡೆದುಕೊಳ್ಳುತ್ತಾನೆ, ಈ ಆನಂದಮಯನೆಂಬ ಆತ್ಮನನ್ನು ಪಡೆದುಕೊಳ್ಳುತ್ತಾನೆ.

---

1. ಜ್ಞಾನಿಯು ಪಡೆಯುತ್ತಾನೊ, ಇಲ್ಲವೊ ? ಅಜ್ಞಾನಿಯು ಪಡೆಯುತ್ತಾನೊ, ಇಲ್ಲವೊ ? ಎಂಬೀ ಎರಡು ಅನುಪ್ರಶ್ನೆಗಳಿಗೂ ನೇರಾಗಿ "ಯದಾ ಹಿ" ಎಂಬ ಶ್ರುತಿಯಿಂದಲೇ ಉತ್ತರವನ್ನು ಹೇಳಿದೆ ; ಇವೆಯೊ, ಇಲ್ಲವೊ ? ಎಂಬ ಪ್ರಶ್ನೆಗೂ ಅದರಿಂದಲೇ ಉತ್ತರ ಹೇಳಿದಂತಾಗಿದೆ-ಎಂದು ವಾರ್ತಿಕಕಾರರು (೨-೫೮೧, ೫೮೩ ರಲ್ಲಿ) ಅಭಿಪ್ರಾಯಪಟ್ಟಿದ್ದಾರೆ. ಆದರೆ ಭೀಷಾಸ್ಮಾತ್ ಎಂಬ ಶ್ರುತಿಯು ಭಾಷ್ಯದ ಕಡೆಗೇ ಸ್ವರಸವಾಗಿ ಒಲಿಯುತ್ತದೆ ಎಂದು ತೋರುತ್ತದೆ.

(ಭಾಷ್ಯ)

೨೦೮. ಸ ಯಃ ಕಶ್ಚಿತ್ ಏವಂ ಯಥೋಕ್ತಂ ಬ್ರಹ್ಮ ಉತ್ಸೃಜ್ಯೋತ್ಕರ್ಷಾಪಕರ್ಷಮ್ "ಅದ್ವೈತಂ ಸತ್ಯಂ ಜ್ಞಾನಮನನ್ತಮಸ್ಮಿ" ಇತ್ಯೇವಂ ವೇತ್ತಿ ಇತಿ ಏವಂವಿತ್ । ಏವಂಶಬ್ದಸ್ಯ ಪ್ರಕೃತಪರಾಮರ್ಶಾರ್ಥತ್ವಾತ್ । ಸ ಕಿಮ್ ? ಅಸ್ಮಾತ್ ಲೋಕಾತ್ ಪ್ರೇತ್ಯ । ದೃಷ್ಟಾದೃಷ್ಟೇಷ್ಟವಿಷಯಸಮುದಾಯೋ ಹಿ ಅಯಂ ಲೋಕಃ । ತಸ್ಮಾತ್ ಅಸ್ಮಾತ್ ಲೋಕಾತ್ ಪ್ರೇತ್ಯ ಪ್ರತ್ಯಾವೃತ್ತ್ಯ ನಿರಪೇಕ್ಷೋ ಭೂತ್ವಾ ಏತಂ ಯಥಾವ್ಯಾಖ್ಯಾತಮ್ ಅನ್ನಮಯಾತ್ಮಾನಮ್ ಉಪಸಂಕ್ರಾಮತಿ । ವಿಷಯಜಾತಮ್ ಅನ್ನಮಯಾತ್ ಪಿಣ್ಡಾತ್ಮನೋ ವ್ಯತಿರಿಕ್ತಂ ನ ಪಶ್ಯತಿ । ಸರ್ವಂ ಸ್ಥೂಲಭೂತಮ್ ಅನ್ನಮಯಮಾತ್ಮಾನಂ ಪಶ್ಯತಿ ಇತ್ಯರ್ಥಃ । ತತಃ ಅಭ್ಯನ್ತರಮ್ ಏತಂ ಪ್ರಾಣಮಯಂ ಸರ್ವಾನ್ನಮಯಾತ್ಮಸ್ಥಮ್ ಅವಿಭಕ್ತಮ್ । ಅಥೈತಂ ಮನೋಮಯಂ ವಿಜ್ಞಾನಮಯಮ್ ಆನನ್ದಮಯಮ್ ಆತ್ಮಾನಮ್ ಉಪಸಂಕ್ರಾಮತಿ । ಅಥ "ಅದೃಶ್ಯೇ, ಅನಾತ್ಮ್ಯೇ, ಅನಿರುಕ್ತೇ, ಅನಿಲಯನೇ ಅಭಯಂ ಪ್ರತಿಷ್ಠಾಂ ವಿನ್ದತೇ" ॥

(ಭಾಷ್ಯಾರ್ಥ)

ಯಾವನೇ ಆಗಲಿ, ಈ ರೀತಿಯಲ್ಲಿ ಮೇಲೆ ಹೇಳಿದ ಬ್ರಹ್ಮವನ್ನು ಹೆಚ್ಚುಕುಂದು(ಗಳ ಭಾವ)ವನ್ನು ಬಿಟ್ಟು "ಅದ್ವೈತವೂ ಸತ್ಯವೂ ಜ್ಞಾನವೂ ಅನಂತವೂ (ಆದ ಬ್ರಹ್ಮ)ವೇ ನಾನಾಗಿರುವೆನು" ಎಂದೀಪರಿಯಲ್ಲಿ ಅರಿತುಕೊಂಡವನಾದ್ದರಿಂದ ಅವನಿಗೆ "ಏವಂವಿತ್" (ಹೀಗೆ ಅರಿತುಕೊಂಡವನು ಎಂದು ಹೆಸರು). ಏಕೆಂದರೆ "ಏವಮ್" (ಹೀಗೆ) ಎಂಬ ಮಾತು ಪ್ರಕೃತವಾದದ್ದನ್ನು ಪರಾಮರ್ಶಿಸುವದಕ್ಕೇ (ಬರುತ್ತದೆ). ಯಾವನು ಹೀಗೆ ಅರಿತುಕೊಳ್ಳುವನೋ ಅವನು ಏನು ? ಎಂದರೆ 'ಈ' ಲೋಕದಿಂದ ಹೊರಟುಹೋಗಿ'. ಕಂಡ ಮತ್ತು ಕಾಣದ ಇಷ್ಟವಿಷಯಗಳ ಸಮುದಾಯವೇ ಅಲ್ಲವೆ, ಈ ಲೋಕವು ? ಆ ಈ ಲೋಕದಿಂದ ಹೊರಟುಹೋಗಿ ಎಂದರೆ ಹಿಂತಿರುಗಿ ಯಾವ ಅಪೇಕ್ಷೆಯೂ ಇಲ್ಲದವನಾಗಿ[2]

1. ಈ ಲೋಕವೆಂದರೆ ಇಹಲೋಕವೆಂದು ಅರ್ಥವಲ್ಲ ; ಪರಮಾರ್ಥವಲ್ಲದ ವಿಷಯಗಳ ಸಮೂಹವು. ಅದು ಇಹಲೋಕಪರಲೋಕ-ಎರಡನ್ನೂ ಒಳಗೊಂಡಿರುತ್ತದೆ.

2. ಕೇ. ಭಾ. ೧-೨ (ಛಾ. ಭಾ. ೨೩)ರಲ್ಲಿ "ಪ್ರೇತ್ಯಾಸ್ಮಾಲ್ಲೋಕಾತ್" ಎಂಬುದರ ವಿವರವನ್ನು ನೋಡಿರಿ.

ಈ ಹಿಂದೆ ವಿವರಿಸಿರುವ ಅನ್ನಮಯನಾದ ಶರೀರಾತ್ಮನಿಗಿಂತ ಬೇರೆಯಾಗಿ ಏನನ್ನೂ ಕಾಣುವದಿಲ್ಲ, ಎಲ್ಲವೂ ಸ್ಥೂಲವಾಗಿರುವ ಅನ್ನಮಯಾತ್ಮನೇ ಎಂದು ಅರಿತು ಕೊಳ್ಳುತ್ತಾನೆ[1] ಎಂದರ್ಥ. ಅದಕ್ಕೂ ಒಳಗಿರುವ ಈ ಪ್ರಾಣಮಯನನ್ನು, ಎಲ್ಲಾ ಅನ್ನಮಯಾತ್ಮರೊಳಗೆ ಇರುವ ವಿಂಗಡವಾಗಿಲ್ಲದ (ಪ್ರಾಣಮಯಾತ್ಮನನ್ನು)[2], ಆ ಮೇಲೆ ಈ ಮನೋಮಯನೆಂಬ, ವಿಜ್ಞಾನಮಯನೆಂಬ, ಆನಂದಮಯನೆಂಬ, ಆತ್ಮನನ್ನು ಪಡೆದುಕೊಳ್ಳುತ್ತಾನೆ. ಬಳಿಕ ಅದೃಶ್ಯವಾದ, ಅನಾತ್ಮ್ಯವಾದ, ಅನಿರುಕ್ತ ವಾದ, ಅನಿಲಯನವಾದ,(ಬ್ರಹ್ಮದಲ್ಲಿ) ಅಭಯವಾಗಿ ಪ್ರತಿಷ್ಠೆಯನ್ನು ಹೊಂದುತ್ತಾನೆ.

## ಸಂಕ್ರಮಣದ ವಿಷಯದಲ್ಲಿ ವಿಚಾರದ ಆವಶ್ಯಕತೆ

(ಭಾಷ್ಯ)

೨೮. ತತ್ರ ಏತಚ್ಚಿನ್ತ್ಯಮ್ । ಕೋಽಯಮ್ ಏವಂವಿತ್? ಕಥಂ ವಾ ಸಂಕ್ರಾಮತಿ? ಇತಿ । ಕಿಂ ಪರಸ್ಮಾದಾತ್ಮನೋಽನ್ಯಃ ಸಂಕ್ರಮಣಕರ್ತಾ ಪ್ರವಿಭಕ್ತಃ । ಉತ ಸ ಏವ ಇತಿ । ಕಿಂ ತತಃ? ಯದಿ ಅನ್ಯಃ ಸ್ಯಾತ್ ಶ್ರುತಿವಿರೋಧಃ । "ತತ್ ಸೃಷ್ಟ್ವಾ ತದೇವಾನುಪ್ರಾವಿಶತ್" (೨-೬) "ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ" (ಬೃ. ೧-೪-೧೦), "ಏಕಮೇವಾದ್ವಿತೀಯಮ್" (ಛಾ. ೬-೨-೧), "ತತ್ತ್ವಮಸಿ" (ಛಾ. ೬-೮-೭) ಇತಿ । ಅಥ ಸ ಏವ ಆನನ್ದಮಯಮಾತ್ಮಾನಮ್ ಉಪಸಂಕ್ರಾಮತೀತಿ, ಕರ್ಮಕರ್ತೃತ್ವಾನುಪಪತ್ತಿಃ । ಪರಸ್ಯೈವ ಚ ಸಂಸಾರಿತ್ವಮ್, ಪರಾಭಾವೋ ವಾ। ಯದಿ ಉಭಯಥಾ ಪ್ರಾಪ್ತೋ ದೋಷಃ ನ ಪರಿಹರ್ತುಂ ಶಕ್ಯತೇ ಇತಿ ವ್ಯರ್ಥಾ ಚಿನ್ತಾ । ಅಥ ಅನ್ಯತರಸ್ಮಿನ್ ಪಕ್ಷೇ ದೋಷಾಪ್ರಾಪ್ತಿಃ, ತೃತೀಯೇ ವಾ ಪಕ್ಷೇ ಅದುಷ್ಟೇ[3] ಸ ಏವ ಶಾಸ್ತ್ರಾರ್ಥಃ ಇತಿ ವ್ಯರ್ಥೈವ ಚಿನ್ತಾ । ನ । ತನ್ನಿರ್ಧಾರಣಾರ್ಥತ್ವಾತ್ । ಸತ್ಯಂ ಪ್ರಾಪ್ತೋ ದೋಷೋ ನ ಶಕ್ಯಃ ಪರಿಹರ್ತುಮ್ । ಅನ್ಯತರಸ್ಮಿನ್ ತೃತೀಯೇ ವಾ ಪಕ್ಷೇಽದುಷ್ಟೇ ಅವಧೃತೇ ವ್ಯರ್ಥಾ ಚಿನ್ತಾ

---

1. ವಿರಾಡ್ರೂಪದಿಂದಲೇ ಅರಿತುಕೊಳ್ಳುತ್ತಾನೆ.

2. ಸಮಷ್ಟಿರೂಪನಾದ ಸೂತ್ರಾತ್ಮನೇ ಎಂದು ಅರಿತುಕೊಳ್ಳುತ್ತಾನೆ ಎಂದರ್ಥ. ಹೀಗೆಯೇ ಮನೋಮಯ, ವಿಜ್ಞಾನಮಯ ಮುಂತಾದವುಗಳೂ ಸಮಷ್ಟಿರೂಪವೇ ಎಂದರಿಯ ಬೇಕು.

3. "ತೃತೀಯೋ ವಾ ಪಕ್ಷೋಽದುಷ್ಟಃ" ಎಂದಿದ್ದರೆ ಸರಳವಾಗಿ ಅನ್ವಯ ವಾಗುತ್ತದೆ.

ಸ್ಯಾತ್ । ನ ತು ಸೋಽವಧೃತಃ ಇತಿ ತದವಧಾರಣಾರ್ಥತ್ವಾತ್ ಅರ್ಥವತ್ಯೇವ ಏಷಾ ಚಿನ್ತಾ । ಸತ್ಯಮ್ ಅರ್ಥವತೀ ಚಿನ್ತಾ ಶಾಸ್ತ್ರಾರ್ಥಾವಧಾರಣಾರ್ಥತ್ವಾತ್ । ಚಿನ್ತಯಸಿ ಚ ತ್ವಂ ನ ತು ನಿರ್ಣೇಷ್ಯಸಿ । ಕಿಂ ನ ನಿರ್ಣೇತವ್ಯಮ್ ಇತಿ ವೇದವಚನಮ್ ? ನ । ಕಥಂ ತರ್ಹಿ ? ಬಹುಪ್ರತಿಪಕ್ಷತ್ವಾತ್ । ಏಕತ್ವವಾದೀ ತ್ವಮ್, ವೇದಾರ್ಥಪರತ್ವಾತ್ । ಬಹವೋ ಹಿ ನಾನಾತ್ವವಾದಿನೋ ವೇದಬಾಹ್ಯಾಃ ತ್ವತ್ಪ್ರತಿಪಕ್ಷಾಃ । ಅತೋ ಮಮಾಶಙ್ಕಾಂ ನ ನಿರ್ಣೇಷ್ಯಸೀತಿ । ಏತದೇವ ಮೇ ಸ್ವಸ್ತ್ಯಯನಮ್ ಯನ್ಮಾಮ್ ಏಕಯೋಗಿನಮ್ ಅನೇಕಯೋಗಿಬಹುಪ್ರತಿಪಕ್ಷಮಾತ್ಥ । ಅತೋ ಜೇಷ್ಯಾಮಿ ಸರ್ವಾನ್, ಆರಭೇ ಚ ಚಿನ್ತಾಮ್ ॥

(ಭಾಷ್ಯಾರ್ಥ)

ಇಲ್ಲಿ ಇದನ್ನು ವಿಚಾರಮಾಡಬೇಕಾಗಿರುತ್ತದೆ. ಹೀಗೆ ಅರಿತುಕೊಂಡವನು ಎಂದರೆ ಯಾರು ? ಮತ್ತು (ಅವನು ಬ್ರಹ್ಮವನ್ನು) ಪಡೆದುಕೊಳ್ಳುವನೆಂಬುದಾದರೂ ಹೇಗೆ? ಪಡೆದುಕೊಳ್ಳುವವನು ಪರಮಾತ್ಮನಿಗಿಂತ ಬೇರೆಯಾಗಿ (ಅವನಿಗಿಂತ) ವಿಂಗಡವಾಗಿರುವನೊ ಅಥವಾ ಅವನೇಯೊ ?

(ಪ್ರಶ್ನೆ) :—ಇದರಿಂದ ಏನು(ಪ್ರಯೋಜನ) ? [1]

(ಉತ್ತರ) :—ಬೇರೆಯಾದರೆ " ಅದನ್ನು ಸೃಷ್ಟಿಸಿ ಅದನ್ನೇ ಒಳಹೊಕ್ಕನು " (೨-೬), "ಅವನು ಬೇರೆ, ನಾನು ಬೇರೆ (ಎಂದು ಉಪಾಸನೆಮಾಡುತ್ತಾನಲ್ಲ), ಅವನು ಅರಿಯನು " (ಬೃ. ೧-೪-೧೦), "(ತನಗೆ)ರಡನೆಯದಿಲ್ಲದ ಒಂದೇ" (ಛಾ. ೬-೨-೧), " ಅದೇ ನೀನಾಗಿರುವೆ '' (ಛಾ. ೬-೮-೭) ಎಂಬ ಶ್ರುತಿಗಳಿಗೆ ವಿರೋಧವಾಗುತ್ತದೆ. ಹಾಗಿಲ್ಲದೆ ಅವನೇ ಆನಂದಮಯಾತ್ಮನನ್ನು ಪಡೆದುಕೊಳ್ಳುವನೆಂದಾದರೆ (ಪಡೆದುಕೊಳ್ಳುವ ಕ್ರಿಯೆಗೆ ತಾನೇ) ಕರ್ಮವು, (ತಾನೇ) ಕರ್ತೃ ಎಂಬುದು ವಿರುದ್ಧವಾಗುತ್ತದೆ. ಮತ್ತು ಪರ(ಮಾತ್ಮನಿಗೇ) ಸಂಸಾರಿತ್ವವೆಂದೋ ಪರಮಾತ್ಮನೇ ಇಲ್ಲವೆಂದೋ ಆಗುವದು.[2]

1. ಬೇರೆಯಾದರೇನು, ಅವನೇ ಆದರೇನು ?

2. ಪರಮಾತ್ಮನೊಬ್ಬನೇ ನಿಜವಾಗಿರುವನೆಂದರೆ ಸಂಸಾರವೂ ಅವನಿಗೇ ಎಂದಾಗುವದು ; ಸಂಸಾರಿಯೊಬ್ಬನೇ ಇರುವನೆಂದರೆ ಪರಮಾತ್ಮನಿಲ್ಲವೆಂದಾಗುವದು. ಈ ಪೂರ್ವಪಕ್ಷವನ್ನು ಸೂ. ಭಾ. ೪-೧-೩ ; ಗೀ. ಭಾ. ೧೩-೨ ; ಬೃ. ಭಾ. ೨-೧-೨೦ ಇವುಗಳಲ್ಲಿ ನೋಡಿರಿ.

(ಆಕ್ಷೇಪ) :—ಹೀಗೆ ಎರಡುಪಕ್ಷದಲ್ಲಿಯೂ ಒದಗುವ ದೋಷವನ್ನು ಪರಿಹರಿಸುವದಕ್ಕೆ ಆಗುವಹಾಗಿಲ್ಲವಾದರೆ (ಈ) ವಿಚಾರವು ವ್ಯರ್ಥ. ಹಾಗಿಲ್ಲದೆ ಇವೆರಡಲ್ಲಿ ಒಂದು ಪಕ್ಷದಲ್ಲಿ ದೋಷವಿಲ್ಲವೆಂದಾದರೆ ಅಥವಾ ಮೂರನೆಯ ಪಕ್ಷವೊಂದು ದೋಷವಿಲ್ಲದ್ದೆಂದಾದರೆ ಅದೇ ಶಾಸ್ತ್ರಾರ್ಥ(ವೆಂದಾಗುವ)ದರಿಂದ (ಈ) ವಿಚಾರವು ವ್ಯರ್ಥವೇ (ಆಗುವದಲ್ಲವೆ)?

(ಪರಿಹಾರ) :—ಹಾಗಲ್ಲ. ಏಕೆಂದರೆ ಅದನ್ನು ಗೊತ್ತುಪಡಿಸುವದಕ್ಕಾಗಿಯೇ (ವಿಚಾರವು ಬೇಕಾಗಿದೆ). ದೋಷವು ಒದಗಿದರೆ (ಅದನ್ನು) ಪರಿಹರಿಸುವದು ಆಗಲಾರದೆಂಬುದು ನಿಜ, ಅಥವಾ ಇವೆರಡರಲ್ಲಿ ಒಂದು (ಪಕ್ಷ)ವಾಗಲಿ ಮೂರನೆಯ ಪಕ್ಷವಾಗಲಿ ದೋಷವಿಲ್ಲದ್ದೆಂದು ಗೊತ್ತಾದರೆ ವಿಚಾರವು ವ್ಯರ್ಥವಾಗುವದೆಂಬದೂ (ನಿಜ). ಆದರೆ ಆ (ಪಕ್ಷವು ಯಾವದೆಂಬುದು) ಗೊತ್ತಾಗಿರುವದಿಲ್ಲ; ಆದ್ದರಿಂದ ಅದನ್ನು ಗೊತ್ತುಪಡಿಸುವದಕ್ಕಾಗಿರುವದರಿಂದ ಈ ವಿಚಾರವು ಸಪ್ರಯೋಜನವೇ (ಆಗಿರುತ್ತದೆ).[1]

(ಆಕ್ಷೇಪ) :—ನಿಜ, ವಿಚಾರವು ಸಪ್ರಯೋಜನವಾದದ್ದೇ; ಏಕೆಂದರೆ ಶಾಸ್ತ್ರಾರ್ಥವನ್ನು ಗೊತ್ತುಪಡಿಸುವದಕ್ಕೆ (ಅದು ಬೇಕಾಗಿರುತ್ತದೆ). ಆದರೆ ನೀನು ವಿಚಾರಮಾಡುತ್ತೀಯೇ ಹೊರತು ಗೊತ್ತುಪಡಿಸುವದಿಲ್ಲವಲ್ಲ!

(ಪರಿಹಾರ) : ಗೊತ್ತುಪಡಿಸಬಾರದು ಎಂದೇನಾದರೂ ವೇದವಚನವಿದೆಯೇನು?

(ಆಕ್ಷೇಪ) : ಹಾಗೇನೂ ಇಲ್ಲ. ಮತ್ತೇನೆಂದರೆ (ನಿನಗೆ) ಪ್ರತಿಪಕ್ಷಗಳು ಬಹುವಾಗಿರುವದರಿಂದ (ಹೀಗೆಂದು ಹೇಳಬೇಕಾಗಿದೆ). ನೀನು ವೇದಾರ್ಥದಲ್ಲಿಯೇ ತಾತ್ಪರ್ಯವುಳ್ಳವನಾದ್ದರಿಂದ ಏಕತ್ವವಾದಿಯಾಗಿರುತ್ತೀಯೆ.[2] ನಿನಗೆ ಪ್ರತಿಪಕ್ಷದವರಾದ ನಾನಾತ್ವವಾದಿಗಳು ವೇದಬಾಹ್ಯವಾಗಿರುವದರಿಂದ ಅನೇಕರಿರುತ್ತಾರೆ. ಆದ್ದರಿಂದ ನನ್ನ ಆಶಂಕೆಯನ್ನು (ನೀನು) ಪರಿಹರಿಸಲಾರೆ.

(ಪರಿಹಾರ):—ನಾನು ಏಕತ್ವವಾದಿಯೆಂದೂ ಅನೇಕತ್ವವಾದಿಗಳಾದ ಪ್ರತಿಪಕ್ಷದವರು ನನಗೆ ಬಹಳವಿರುವರೆಂದೂ ಹೇಳುವೆಯಲ್ಲ, ಇದೇ ನನಗೆ ಸ್ವಸ್ತ್ಯಯನ

---

1. ನಿರ್ಣೀತವಾಗಿರುವ ವಿಷಯದಲ್ಲಿ ವಿಚಾರವು ಬೇಕಿರುವದಿಲ್ಲ; ಆದರೆ ನಿರ್ಣಯವಾಗಿಲ್ಲದ್ದರಿಂದ ಅದು ಬೇಕು.

2. ಆಚಾರ್ಯರ ಕಾಲದಲ್ಲಿ ವೇದವಾದಿಗಳೆಲ್ಲರೂ ಏಕತ್ವವಾದಿಗಳಾಗಿದ್ದರೆಂಬುದಕ್ಕೆ ಈ ವಾಕ್ಯವೊಂದು ಗಮಕವಾಗಿರುತ್ತದೆ.

ವನ್ನು ಹೇಳಿದಂತಾಯಿತು. ಆದ್ದರಿಂದ ಎಲ್ಲರನ್ನೂ ಜಯಿಸುವೆನು.[1] ವಿಚಾರ ವನ್ನೂ ಮೊದಲು ಮಾಡುವೆನು.

## ಏಕತ್ವವೇ ಪರಮಾರ್ಥವು, ಅನೇಕತ್ವವು ಅವಿದ್ಯಾಕೃತ

(ಭಾಷ್ಯ)

೨೧೦. ಸ ಏವ ತು ಸ್ಯಾತ್ । ತದ್ಭಾವಸ್ಯ ವಿವಕ್ಷಿತತ್ವಾತ್ । ತದ್ವಿಜ್ಞಾನೇನ ಪರಮಾತ್ಮಭಾವೋ ಹಿ ಅತ್ರ ವಿವಕ್ಷಿತಃ "ಬ್ರಹ್ಮವಿದಾಪ್ನೋತಿ ಪರಮ್" (೨-೧) ಇತಿ । ನ ಹ್ಯನ್ಯಸ್ಯ ಅನ್ಯಭಾವಾಪತ್ತಿರುಪಪದ್ಯತೇ। ನನು ತಸ್ಯಾಪಿ ತದ್ಭಾವಾಪತ್ತಿರನುಪಪನ್ನೈವ । ನ । ಅವಿದ್ಯಾಕೃತತಾದಾತ್ಮ್ಯಾಪೋಹಾರ್ಥತ್ವಾತ್ । ಯಾ ಹಿ ಬ್ರಹ್ಮವಿದ್ಯಯಾ ಸ್ವಾತ್ಮಪ್ರಾಪ್ತಿರುಪದಿಶ್ಯತೇ ಸಾ ಅವಿದ್ಯಾಕೃತಸ್ಯ ಅನ್ನಾದಿ ವಿಶೇಷಾತ್ಮನಃ ಆತ್ಮತ್ವೇನಾಧ್ಯಾರೋಪಿತಸ್ಯ ಅನಾತ್ಮನೋಽಪೋಹಾರ್ಥಾ ॥

(ಭಾಷ್ಯಾರ್ಥ)

ಅವನೇ ಆಗಿರಬೇಕು.[2] ಏಕೆಂದರೆ ಅದೇ ರೂಪವನ್ನು (ಪಡೆಯುತ್ತಾನೆಂದು) ಹೇಳುವದು (ಶ್ರುತಿಯ) ಅಭಿಪ್ರಾಯವಿರುತ್ತದೆ. ಅದನ್ನು ಅರಿಯುವದರಿಂದ ಪರಮಾತ್ಮಸ್ವರೂಪ(ವನ್ನೇ ಪಡೆಯುವನೆಂದ)ಲ್ಲವೆ, "ಬ್ರಹ್ಮವನ್ನು ಬಲ್ಲವನು ಪರವನ್ನು ಪಡೆಯುತ್ತಾನೆ" ಎಂಬೀ (೨-೧) ಶ್ರುತಿಯಲ್ಲಿ ವಿವಕ್ಷಿತವಾಗಿರುತ್ತದೆ[3]? ಒಬ್ಬನು ಮತ್ತೊಂದರ ಭಾವವನ್ನು ಹೊಂದುವನೆಂಬುದು ಯುಕ್ತವಾಗುವದೇ ಇಲ್ಲವಷ್ಟೆ.[4]

(ಆಕ್ಷೇಪ) :—ಅವನೇ ಅದೇ ಸ್ವರೂಪವನ್ನು ಹೊಂದುವದೆಂಬುದೂ ಅಯುಕ್ತವೇ ಆಗಿರುವದಲ್ಲ ![5]

---

1. ಇತರ ಮತಗಳ ಅಸಾರತೆಯನ್ನು ತಿಳಿಸಿ ಏಕತ್ವವನ್ನು ನಿರ್ಣಯಿಸುವದಕ್ಕಾಗಿ ವಿಚಾರವು ಅವಶ್ಯಕ.

2. ಸಂಕ್ರಮಣಕರ್ತನಾದ ಜ್ಞಾನಿಯು ಪ್ರಾಪ್ಯವಾದ ಪರಮಾತ್ಮನೇ ಆಗಿರಬೇಕು.

3. ಈ ಶ್ರುತಿಯಲ್ಲಿ ಪರ (ಪುರುಷಾರ್ಥ) ವನ್ನು ಪಡೆಯುತ್ತಾನೆ ಎಂದಿಷ್ಟೇ ಹೇಳಿದ್ದರೂ ಪರಮಾತ್ಮರೂಪವನ್ನೇ ಪಡೆಯುತ್ತಾನೆಂಬುದು ವಿವಕ್ಷಿತಾರ್ಥವೆಂದು ಭಾ. ಭಾ. ೬೨ ರಲ್ಲಿ ತೋರಿಸಿರುತ್ತದೆ.

4. ಮತ್ತೊಂದು ರೂಪವನ್ನು ಹೊಂದುವದಕ್ಕೆ ತಾನೇ ನಾಶವಾಗಬೇಕಾಗುತ್ತದೆ.

5. ತಾನು ತನ್ನ ರೂಪವನ್ನು ಹೊಂದಿಯೇ ಇರುವದರಿಂದ ಅದಕ್ಕಾಗಿ ಉಪದೇಶ ವೇಕೆ ? ಎಂದು ಆಕ್ಷೇಪ.

(ಪರಿಹಾರ);—ಹಾಗಲ್ಲ. ಏಕೆಂದರೆ ಅವಿದ್ಯೆಯಿಂದ ಕಲ್ಪಿತವಾದ ತಾದಾತ್ಮ್ಯ[1]ವನ್ನು ಕಳೆಯುವದಕ್ಕಾಗಿ (ಈ ಶ್ರುತಿ ಬಂದಿರುತ್ತದೆ). **ಬ್ರಹ್ಮವಿದ್ಯೆಯಿಂದ ತನ್ನ ಆತ್ಮನ ಪ್ರಾಪ್ತಿಯಾಗುವದೆಂದು ಉಪದೇಶಿಸಿರುತ್ತದೆಯಲ್ಲ, ಅದು ಅವಿದ್ಯಾಕಲ್ಪಿತನಾದ ಅನ್ನ(ಮಯ)ನೇ ಮುಂತಾದ ವಿಶೇಷರೂಪವೇ (ತನ್ನ) ಆತ್ಮನೆಂದು ಹುಟ್ಟುಗಟ್ಟಿರುವ ಅನಾತ್ಮನನ್ನು ಅಲ್ಲಗಳೆಯುವದಕ್ಕೆ.**[2]

## ಜ್ಞಾನಮಾತ್ರದಿಂದ ಆತ್ಮಪ್ರಾಪ್ತಿಯನ್ನು ಹೇಳಿರುವದರಿಂದ ಏಕತ್ವವೇ ಪರಮಾರ್ಥ

(ಭಾಷ್ಯ)

೨೧೧. ಕಥಮ್ ಏವಮರ್ಥತಾ ಅವಗಮ್ಯತೇ? ವಿದ್ಯಾಮಾತ್ರೋಪದೇಶಾತ್ । ವಿದ್ಯಾಯಾಶ್ಚ ದೃಷ್ಟಂ ಕಾರ್ಯಮ್ ಅವಿದ್ಯಾನಿವೃತ್ತಿಃ । ತಚ್ಚೇಹ ವಿದ್ಯಾಮಾತ್ರಮ್ ಆತ್ಮಪ್ರಾಪ್ತೌ ಸಾಧನಮ್ ಉಪದಿಶ್ಯತೇ । ಮಾರ್ಗವಿಜ್ಞಾನೋಪದೇಶವತ್ ಇತಿ ಚೇತ್ । ತದಾತ್ಮತ್ವೇ ವಿದ್ಯಾಮಾತ್ರಸಾಧನೋಪದೇಶೋಽಹೇತುಃ । ಕಸ್ಮಾತ್? ದೇಶಾನ್ತರಪ್ರಾಪ್ತೌ ಮಾರ್ಗವಿಜ್ಞಾನೋಪದೇಶದರ್ಶನಾತ್ । ನ ಹಿ ಗ್ರಾಮ ಏವ ಗನ್ತಾ ಇತಿ ಚೇತ್ । ನ । ವೈಧರ್ಮ್ಯಾತ್ । ತತ್ರ ಹಿ ಗ್ರಾಮವಿಷಯಂ ವಿಜ್ಞಾನಂ ನೋಪದಿಶ್ಯತೇ ತತ್ಪ್ರಾಪ್ತಿಮಾರ್ಗವಿಷಯಮೇವೋಪದಿಶ್ಯತೇ ವಿಜ್ಞಾನಮ್। ನ ತಥಾ ಇಹ ಬ್ರಹ್ಮವಿಜ್ಞಾನವ್ಯತಿರೇಕೇಣ ಸಾಧನಾನ್ತರವಿಷಯಂ ವಿಜ್ಞಾನಮ್ ಉಪದಿಶ್ಯತೇ । ಉಕ್ತಕರ್ಮಾದಿಸಾಧನಾಪೇಕ್ಷಂ ಬ್ರಹ್ಮವಿಜ್ಞಾನಂ ಪರಪ್ರಾಪ್ತೌ ಸಾಧನಮ್ ಉಪದಿಶ್ಯತೇ ಇತಿ ಚೇತ್ । ನ । ನಿತ್ಯತ್ವಾನ್ಮೋಕ್ಷಸ್ಯ ಇತ್ಯಾದಿನಾ ಪ್ರತ್ಯುಕ್ತತ್ವಾತ್ ॥

(ಭಾಷ್ಯಾರ್ಥ)

(ಪ್ರಶ್ನೆ):—(ಶ್ರುತಿಗೆ) ಇದೇ ಅರ್ಥವೆಂದು[3] ಹೇಗೆ ನಿಶ್ಚಯಿಸಬೇಕು?

---

1. ತಾನೇ ಅದೆಂಬ ಭಾವವನ್ನು.

2. ಅನಾತ್ಮವು ಆತ್ಮನಲ್ಲವೆಂದು ತಿಳಿಸುವದಕ್ಕೆ ಉಪದೇಶಿಸಿರುತ್ತದೆ. ಮೊದಲೇ ಪಡೆದಿರುವದು ಅವಿದ್ಯೆಯಿಂದ ಮರೆಯಾಗಿರುವಾಗ ವಿದ್ಯೆಯಿಂದ ಮರೆಯನ್ನು ಕಳೆಯುವದಕ್ಕೆ ಉಪದೇಶವು ಬೇಕಾಗುತ್ತದೆ ಎಂದು ಭಾವ.

3. ಅವಿದ್ಯಾಕಲ್ಪಿತನಾದ ಅನಾತ್ಮನೇ ತಾನೆಂದು ತಿಳಿದಿರುವದನ್ನು ಅಲ್ಲಗಳೆದು ಪರಮಾತ್ಮನೇ ನೀನೆಂದು ಬೋಧಿಸುವದರಲ್ಲಿಯೇ ಶ್ರುತಿಯ ತಾತ್ಪರ್ಯವೆಂದು.

(ಉತ್ತರ):—ಏಕೆಂದರೆ ವಿದ್ಯೆಯನ್ನು ಮಾತ್ರ (ಇಲ್ಲಿ) ಉಪದೇಶಿಸಿರುತ್ತದೆ.[1] ಅವಿದ್ಯೆಯನ್ನು ತೊಲಗಿಸುವ(ದೊಂ)ದೇ ವಿದ್ಯೆಯ ಕಾರ್ಯವೆಂದು (ಅನುಭವವಲ್ಲಿ) ಕಂಡಿರುತ್ತದೆ.[2] ಆ ವಿದ್ಯೆಯನ್ನು ಮಾತ್ರ ಆತ್ಮಪ್ರಾಪ್ತಿಗೆ ಸಾಧನವೆಂದು ಇಲ್ಲಿ ಉಪದೇಶಿಸಿರುತ್ತದೆ.[3]

(ಆಕ್ಷೇಪ):—ಮಾರ್ಗದ ಜ್ಞಾನವನ್ನು ಉಪದೇಶಮಾಡಿರುವಂತೆಯೇ (ಇದು). ವಿದ್ಯೆಯನ್ನು ಮಾತ್ರ ಸಾಧನವೆಂದು ಉಪದೇಶಿಸಿರುವದು ಅವನೇ (ಪರಮಾತ್ಮನು) ಎಂಬುದಕ್ಕೆ ಹೇತುವಾಗಲಾರದು. ಏಕೆಂದರೆ ಮತ್ತೊಂದು ಸ್ಥಲವನ್ನು ಪಡೆಯುವದಕ್ಕೆ ಮಾರ್ಗದ ಜ್ಞಾನವನ್ನು ಉಪದೇಶಮಾಡುವದೂ ಕಂಡುಬರುತ್ತದೆ. ಹಳ್ಳಿಯೇ (ಹಳ್ಳಿಗೆ) ಹೋಗುವವನೂ ಅಲ್ಲವಷ್ಟೆ?[4]

(ಪರಿಹಾರ):—ಹಾಗಲ್ಲ, ಏಕೆಂ)ದರೆ (ಅದಕ್ಕೂ ಇದಕ್ಕೂ) ವೈಲಕ್ಷಣ್ಯವಿದೆ. ಆ (ದೃಷ್ಟಾಂತ)ದಲ್ಲಿ ಹಳ್ಳಿಯ ವಿಷಯದ ಜ್ಞಾನವನ್ನಲ್ಲ, ಉಪದೇಶಿಸಿರುವದು; ಅದನ್ನು ಪಡೆದುಕೊಳ್ಳುವ ಮಾರ್ಗದ ವಿಷಯದ ಜ್ಞಾನವನ್ನು ಮಾತ್ರ ಉಪದೇಶಿಸಿರುತ್ತದೆ. ಹಾಗೇನೂ ಇಲ್ಲಿ ಬ್ರಹ್ಮವಿಜ್ಞಾನಕ್ಕಿಂತ ಬೇರೆಯಾಗಿ ಮತ್ತೊಂದು ಸಾಧನದ ವಿಷಯದ ವಿಜ್ಞಾನವನ್ನು ಉಪದೇಶಿಸಿಲ್ಲ.

(ಆಕ್ಷೇಪ):—ಹಿಂದೆ ಹೇಳಿರುವ ಕರ್ಮವೇ ಮುಂತಾದ ಸಾಧನದೊಡನೆ ಕೂಡಿರುವ ಬ್ರಹ್ಮವಿಜ್ಞಾನವು[5] ಪರಮಾತ್ಮನನ್ನು ಪಡೆಯುವದಕ್ಕೆ ಸಾಧನವೆಂದು (ಇಲ್ಲಿಯೂ) ಉಪದೇಶಿಸಿರುತ್ತದೆ[6] (ಎನ್ನ)ಬಹುದಲ್ಲವೆ)?

---

1. ಸಾಧನವನ್ನೇನೂ ಉಪದೇಶಿಸಿಲ್ಲ.

2. ಜ್ಞಾನವು ಹೊಸದಾಗಿ ಏನನ್ನೂ ಉಂಟುಮಾಡುವದಿಲ್ಲ, ಇರುವದನ್ನು ಯಾವದನ್ನೂ ಕಳೆಯುವದಿಲ್ಲ. ಬೃ. ಭಾ. ೧-೪-೧೦.

3. ಆದ್ದರಿಂದ ಆತ್ಮವಿಷಯದ ಅಜ್ಞಾನವನ್ನು ಕಳೆಯುವದೊಂದೇ ಶ್ರುತಿಯ ಉದ್ದೇಶವೇ ಹೊರತು, ನಿಜವಾದ ಪ್ರಾಪ್ತಿಯನ್ನು ಹೇಳುವದಲ್ಲ.

4. ಬ್ರಹ್ಮವನ್ನು ಪಡೆಯುವದಕ್ಕೆ ಸಾಧನವನ್ನು ಉಪದೇಶಿಸಿದ ಮಾತ್ರಕ್ಕೆ ಜಡನೇ ಬ್ರಹ್ಮವೆಂದೇಕಾಗಬೇಕು, ಎಂದು ಆಕ್ಷೇಪ.

5. ಉಪಾಸನೆಯನ್ನೂ ಇಲ್ಲಿ ಸೇರಿಸಿಕೊಳ್ಳಬೇಕು. ಬರಿಯ ಜ್ಞಾನವನ್ನು ಪ್ರಾಪ್ತಿಗೆ ಹೇಳಿಲ್ಲ; ಜ್ಞಾನದಿಂದೊಡಗೂಡಿದ ಉಪಾಸನಾರೂಪವಾದ ಸಾಧನವನ್ನು ಹೇಳಿದೆ ಎಂದು ಭಾವ. ಇದೇ ವೃತ್ತಿಕಾರರ ಮತವು.

(ಪರಿಹಾರ):— ಹಾಗಲ್ಲ. ಏಕೆಂದರೆ ಮೋಕ್ಷವು ನಿತ್ಯವಾಗಿರುವದರಿಂದ ಇದು ಸರಿಯಲ್ಲ ಎಂದು ಮುಂತಾಗಿ (ಈ ಪಕ್ಷವನ್ನು) ಹಿಂದೆಯೇ[1] ತಿರಸ್ಕರಿಸಲಾಗಿದೆ.

## ಶ್ರುತಿಯಲ್ಲಿ ಏಕತ್ವವನ್ನು ಹೇಳಿಯೂ ಇದೆ

(ಭಾಷ್ಯ)

೨೧೨. ಶ್ರುತಿಶ್ಚ "ತತ್ಸೃಷ್ಟ್ವಾ ತದೇವಾನುಪ್ರಾವಿಶತ್" (೨-೬) ಇತಿ ಕಾರ್ಯಸ್ಥಸ್ಯ ತದಾತ್ಮತ್ವಂ ದರ್ಶಯತಿ ॥

(ಭಾಷ್ಯಾರ್ಥ)

ಮತ್ತು ಶ್ರುತಿಯಲ್ಲಿ ಕಾರ್ಯವಾದ (ಸೃಷ್ಟಿಯಲ್ಲಿ)ರುವ ಜೀವನು ಆ (ಪರ) ಮಾತ್ಮನೇ ಎಂಬುದನ್ನು "ಅದನ್ನು ಸೃಷ್ಟಿಸಿ ಅದನ್ನೇ ಒಳಹೊಕ್ಕನು" (೨-೩) ಎಂದು ತಿಳಿಸಿಯೂ ಇರುತ್ತದೆ.[2]

## ಮುಕ್ತಿಯಲ್ಲಿ ಅಭಯಪ್ರಾಪ್ತಿಯು ಏಕತ್ವಪಕ್ಷಕ್ಕೇ ಹೊಂದುತ್ತದೆ

(ಭಾಷ್ಯ)

೨೧೩. ಅಭಯಪ್ರತಿಷ್ಠೋಪಪತ್ತೇಶ್ಚ । ಯದಿ ಹಿ ವಿದ್ವಾನ್ ಸ್ವಾತ್ಮನೋಽನ್ಯನ್ನ ಪಶ್ಯತಿ, ತತಃ "ಅಭಯಂ ಪ್ರತಿಷ್ಠಾಂ ವಿನ್ದತೇ" (೨-೭) ಇತಿ ಸ್ಯಾತ್। ಭಯಹೇತೋಃ ಪರಸ್ಯ ಅನ್ಯಸ್ಯ ಅಭಾವಾತ್ । ಅನ್ಯಸ್ಯ ಚ ಅವಿದ್ಯಾಕೃತತ್ವೇ ವಿದ್ಯಯಾ ಅವಸ್ತುತ್ವದರ್ಶನೋಪಪತ್ತಿಃ । ತದ್ ಹಿ ದ್ವಿತೀಯಚನ್ದ್ರಸ್ಯ ಅಸತ್ತ್ವಂ ಯದತೈಮಿರಿಕೇಣ ಚಕ್ಷುಷ್ಮತಾ ನ ಗೃಹ್ಯತೇ ॥

(ಭಾಷ್ಯಾರ್ಥ)

ಅಂಜಿಕೆಯಿಲ್ಲದೆ ಪ್ರತಿಷ್ಠೆಯನ್ನು ಹೊಂದುವನೆಂಬುದು (ಈ ಪಕ್ಷದಲ್ಲಿಯೇ) ಹೊಂದುವದರಿಂದಲೂ (ಏಕತ್ವವೇ ಸತ್ಯವೆಂದು ತಿಳಿಯಬೇಕು). ಜ್ಞಾನವುಳ್ಳಾತನು

1. ಶೀಕ್ಷಾವಲ್ಲಿ ಭಾ. ಭಾ. ೯, ೭೩-ಇವುಗಳಲ್ಲಿ.

2. ವಿದ್ಯಾಮಾತ್ರವನ್ನುಪದೇಶಿಸಿರುವದರಿಂದ ಜೀವಪರಮಾತ್ಮೈಕ್ಯವು ಶ್ರುತಿಗೆ ವಿವಕ್ಷಿತವಾಗಿರಬೇಕು ಎಂಬುದು ಶ್ರುತಾರ್ಥಾಪತ್ತಿ. ಈಗ ಹೇಳುವದು ಸಾಕ್ಷಾತ್ತಾದ ಶ್ರುತಿ.

3. "ಸತ್ತ್ವಮ್" ಎಂಬ ಆ॥ ಪಾಠಕ್ಕಿಂತ ಈ ವಾ॥ ಕಾ॥ ಪಾಠವೇ ಉತ್ತಮ.

ತನಗಿಂತ ಬೇರೆಯಾಗಿ (ಮತ್ತೇನನ್ನೂ) ಕಾಣುವದಿಲ್ಲವೆಂದಾದರೆ ಆಗ "ಅಂಜಿ ಯಿಲ್ಲದೆ ಪ್ರತಿಷ್ಠೆಯನ್ನು ಹೊಂದುತ್ತಾನೆ" (೨-೭) ಎಂದು (ಹೇಳಿರುವದು ಸರಿ ಯಾದೀತು. ಏಕೆಂದರೆ ಅಂಜಿಕೆಗೆ ಕಾರಣವಾದ ಮತ್ತೊಂದು (ವಸ್ತು) ಆಗ ಇರುವದಿಲ್ಲ. ಮತ್ತೊಂದು (ವಸ್ತು) ಅವಿದ್ಯಾಕಲ್ಪಿತವೆಂದಾದರೆ ಜ್ಞಾನದಿಂ (ಅದು ನಿಜವಾದ) ವಸ್ತುವಲ್ಲವೆಂದು ಕಂಡುಕೊಳ್ಳಲೂಬಹುದು. ಕಣ್ಣುಪರೆಯಿಲ್ಲ (ಸರಿಯಾದ) ಕಣ್ಣುಳ್ಳವನಿಗೆ ಕಾಣದೆ ಇರುವದೇ ಅಲ್ಲವೆ, ಎರಡನೆಯ ಚಂದ್ರನ ಮಿಥ್ಯೆಯಾಗಿರುವದೆಂಬುದು ?

## ಅದ್ವೈತವು ಅನುಭವಾರೂಢವಾಗಿದೆ

(ಭಾಷ್ಯ)

೨೧೪. ನೈವಂ ನ ಗೃಹ್ಯತೇ ಇತಿ ಚೇತ್ । ನ । ಸುಷುಪ್ತಸಮಾಹಿ ಯೋರಗ್ರಹಣಾತ್ । ಸುಷುಪ್ತೇ ಅಗ್ರಹಣಮ್ ಅನ್ಯಾಸಕ್ತವತ್ ಇತಿ ಚೇತ್ । ನ ಸರ್ವಾಗ್ರಹಣಾತ್ । ಜಾಗ್ರತ್ಸ್ವಪ್ನಯೋರನ್ಯಸ್ಯ ಗ್ರಹಣಾತ್ ಸತ್ತ್ವಮೇವ ಇ ಚೇತ್ । ನ । ಅವಿದ್ಯಾಕೃತತ್ವಾತ್ ಜಾಗ್ರತ್ಸ್ವಪ್ನಯೋಃ । ಯದನ್ಯಗ್ರಹಣ ಜಾಗ್ರತ್ಸ್ವಪ್ನಯೋಃ, ತದವಿದ್ಯಾಕೃತಮ್ । ಅವಿದ್ಯಾಭಾವೇ[3] ಅಭಾವಾತ್ । ಸುಷುಪ್ತೇ ಅಗ್ರಹಣಮಪಿ ಅವಿದ್ಯಾಕೃತಮ್ ಇತಿ ಚೇತ್ । ನ । ಸ್ವಾಭಾವಿಕತ್ವಾತ್ ದ್ರವ್ಯಸ್ಯ ಹಿ ತತ್ತ್ವಮ್ ಅವಿಕ್ರಿಯಾ । ಪರಾನಪೇಕ್ಷತ್ವಾತ್ । ನ ಹಿ ಕಾರಕ ಪೇಕ್ಷಂ ವಸ್ತುನಸ್ತತ್ತ್ವಮ್ । ಸತೋ ವಿಶೇಷಃ ಕಾರಕಾಪೇಕ್ಷಃ । ವಿಶೇಷ ವಿಕ್ರಿಯಾ । ಜಾಗ್ರತ್ಸ್ವಪ್ನಯೋಶ್ಚ ಗ್ರಹಣಂ ವಿಶೇಷಃ । ಯದ್ಧಿ ಯಸ್ಯ ನಾನ್ಯಾಪೇಕ್ಷ ಸ್ವರೂಪಂ ತತ್ ತಸ್ಯ ತತ್ತ್ವಮ್ । ಯದನ್ಯಾಪೇಕ್ಷಂ ನ ತತ್ ತತ್ತ್ವಮ್ । ಅನ ಭಾವೇ ಅಭಾವಾತ್ । ತಸ್ಮಾತ್ ಸ್ವಾಭಾವಿಕತ್ವಾತ್ ಜಾಗ್ರತ್ಸ್ವಪ್ನವತ್ ನ ಸುಷುಪ್ತೇ ವಿಶೇಷಃ ॥

---

1. ಇದರಂತೆ ದ್ವೈತವು ಮಿಥ್ಯೆಯೆಂಬುದಕ್ಕೆ ಅದು ಜ್ಞಾನಿಗೆ ಕಾಣುವದಿಲ್ಲವೆಂಬುದ ಹೇತು. ಹೀಗಾದರೇ ಜ್ಞಾನಿಗೆ ಅಭಯದಲ್ಲಿ ನಿಲುಗಡೆಯಾಗುವದೆಂಬ ಶ್ರುತಿಯು ಹೊಂದ ತ್ತದೆ ಎಂದಭಿಪ್ರಾಯ.

2. ಸುಪ್ತಸಮಾಹಿತಯೋಃ ಎಂಬುದು ಆ॥ ಪಾಠ.

3. "ವಿದ್ಯಾಭಾವೇ" ಎಂಬ ವಾ॥ ಪಾಠಕ್ಕಿಂತ ಈ ಆ॥ ಪಾಠವು ಮೇಲು.

(ಭಾಷ್ಯಾರ್ಥ)

(ಆಕ್ಷೇಪ):—ಹೀಗೆ (ದ್ವೈತವು) ಕಾಣುವದಿಲ್ಲವೆಂಬುದು ಇಲ್ಲವಲ್ಲ!

(ಪರಿಹಾರ):—ಹಾಗಲ್ಲ. ಏಕೆಂದರೆ **ತನಿನಿದ್ರೆಯಲ್ಲಿರುವವನಿಗೂ ಸಮಾಧಿಯಲ್ಲಿರುವವನಿಗೂ**[1] **(ಮತ್ತೊಂದು ವಸ್ತು) ಕಾಣಿಸುವದಿಲ್ಲ.**

(ಆಕ್ಷೇಪ):—ತನಿನಿದ್ರೆಯಲ್ಲಿ ಕಾಣದಿರುವದು ಮತ್ತೊಂದರಲ್ಲಿ ಆಸಕ್ತನಾದವನಿಗೆ (ಕಾಣಿಸದಿರು)ವಂತೆ (ಎನ್ನಬಹುದಲ್ಲವೆ)?

(ಪರಿಹಾರ)!—ಹಾಗಲ್ಲ. ಏಕೆಂದರೆ ಅಲ್ಲಿ ಏನನ್ನೂ ಕಾಣುವದೇ ಇಲ್ಲ.[3]

(ಆಕ್ಷೇಪ):—ಎಚ್ಚರಕನಸುಗಳಲ್ಲಿ ಮತ್ತೊಂದು (ವಸ್ತು)ವನ್ನೂ ಕಾಣುವದರಿಂದ (ಅದು ನಿಜವಾಗಿ) ಇರುವದೆಂಬೇ (ಹೇಳಬಹುದಲ್ಲ)!

(ಪರಿಹಾರ):—ಹಾಗಲ್ಲ. ಏಕೆಂದರೆ **ಎಚ್ಚರಕನಸುಗಳು ಅವಿದ್ಯೆಯಿಂದಾದವುಗಳಾಗಿರುತ್ತವೆ.**[4] ಎಚ್ಚರಕನಸುಗಳಲ್ಲಿ ಮತ್ತೊಂದು (ವಸ್ತು)ವನ್ನು ಕಾಣುವದೆಂಬುದು ಅವಿದ್ಯೆಯಿಂದಾಗಿರುತ್ತದೆ, ಏಕೆಂದರೆ ಅವಿದ್ಯೆಯಿಲ್ಲದಾಗ (ಅದು) ಇರುವದಿಲ್ಲ.

(ಆಕ್ಷೇಪ):—ತನಿನಿದ್ರೆಯಲ್ಲಿ (ಮತ್ತೊಂದು ವಸ್ತುವನ್ನು) ಕಾಣದಿರುವದೂ ಅವಿದ್ಯೆಯಿಂದಾದದ್ದೇ (ಎಂದರೊ)?

(ಪರಿಹಾರ):—ಹಾಗಲ್ಲ. ಏಕೆಂದರೆ (ಅದು) **ಸ್ವಾಭಾವಿಕವಾಗಿರುತ್ತದೆ.**[5] ಅದು ಹೇಗೆಂದರೆ, ದ್ರವ್ಯಕ್ಕೆ ವಿಕಾರವಿಲ್ಲದಿರುವದೇ ತತ್ತ್ವವು, ಏಕೆಂದರೆ (ಅದು) ಮತ್ತೊಂದರ ಅವಲಂಬನೆಯಿಂದ ಇರುವದಲ್ಲ. ವಿಕಾರವಾಗುವದು (ದ್ರವ್ಯದ)

---

1. ತನಿನಿದ್ರೆ, ಸಮಾಧಿ-ಎರಡರಲ್ಲಿಯೂ ಎರಡನೆಯ ವಸ್ತುವನ್ನು ಕಾಣುವದಿಲ್ಲ; ಆದ್ದರಿಂದ ಎರಡನೆಯ ವಸ್ತು ಮಿಥ್ಯೆ. ಸೂ. ಭಾ. ೨-೧-೯, ಮಾಂ. ಕಾ. ಭಾ. ೪-೨೫.

2. ಬಾಣಹೊಡೆಯುವವನು ಗುರಿಯಲ್ಲಿ ಲಕ್ಷ್ಯವಿಟ್ಟದ್ದರಿಂದ ಮತ್ತೊಂದು ವಸ್ತುವನ್ನು ಕಾಣದಿರುವಂತೆ. ಸೂ. ಭಾ. ೩-೨-೧೦.

3. ನಾನು, ಮತ್ತೊಂದು—ಏನನ್ನೂ ಕಾಣುವದಿಲ್ಲ; ಇದಕ್ಕೆ ಏಕತ್ವವೇ ಕಾರಣ. ಬೃ. ಭಾ. ೪-೩-೧೧, ಛಾ. ಭಾ. ೬-೮-೧, ಸೂ. ಭಾ. ೩-೨-೭. ಇಲ್ಲಿ ವ್ಯಾಖ್ಯಾನಕಾರರು ಕೊಟ್ಟಿರುವ ವಿವರಣೆ ಭಾಷ್ಯಸಮ್ಮತವಲ್ಲ; ಪೀಠಿಕೆಯನ್ನು ನೋಡಿ.

4. ತಾನಲ್ಲದ್ದನ್ನು ತಾನೆಂದು ಭಾವಿಸುವ ತಪ್ಪುತಿಳಿವಳಿಕೆ.

5. ಆತ್ಮಸ್ವರೂಪಕ್ಕೇ ಸೇರಿದ್ದು.

ತತ್ತ್ವವಲ್ಲ, ಏಕೆಂದರೆ ಅದು ಮತ್ತೊಂದರ ಅವಲಂಬನೆಯಿಂದ (ಆಗತಕ್ಕದ್ದು). ವಸ್ತುವಿನ ತತ್ತ್ವವು[1] ಕಾರಕಗಳನ್ನು ಅವಲಂಬಿಸಿರುವದಿಲ್ಲ. ಇರುವ (ವಸ್ತುವಿಗೆ ಆಗುವ) ವಿಶೇಷವು ಕಾರಕಗಳನ್ನು ಅವಲಂಬಿಸಿ (ಆಗತಕ್ಕದ್ದಾಗಿ)ದೆ. ವಿಶೇಷವೆಂಬುದು ವಿಕಾರವಾಗಿರುತ್ತದೆ. ಎಚ್ಚರಕನಸುಗಳಲ್ಲಿ (ಮತ್ತೊಂದು ವಸ್ತುವನ್ನು) ಕಾಣುವದೆಂಬುದು ವಿಶೇಷವಾಗಿರುತ್ತದೆ. ಯಾವದಕ್ಕೆ ಯಾವದು ಮತ್ತೊಂದನ್ನು ಬಯಸದ ಸ್ವರೂಪವೋ ಅದು ಅದರ ತತ್ತ್ವವು; ಯಾವದು ಮತ್ತೊಂದನ್ನು ಬಯಸುವದೋ ಅದು (ಅದರ) ತತ್ತ್ವವಲ್ಲ, ಏಕೆಂದರೆ (ಅದು ಆ) ಮತ್ತೊಂದಿಲ್ಲದಾಗ ಇರುವದಿಲ್ಲ. ಆದ್ದರಿಂದ (ನಿದ್ರೆಯಲ್ಲಿರುವ ಆತ್ಮರೂಪವು) ಸ್ವಾಭಾವಿಕವಾಗಿರುವದರಿಂದ ಎಚ್ಚರಕನಸುಗಳಂತೆ ತನಿನಿದ್ರೆಯಲ್ಲಿ ವಿಶೇಷವು ಇರುವದಿಲ್ಲ.

## ದ್ವೈತಿಗಳ ಪಕ್ಷದಲ್ಲಿ ಅಭಯಪ್ರಾಪ್ತಿಯಿಲ್ಲ

(ಭಾಷ್ಯ)

೨೧೫. ಯೇಷಾಂ ಪುನಃ ಈಶ್ವರೋಽನ್ಯ ಆತ್ಮನಃ, ಕಾರ್ಯಂ ಚ ಅನ್ಯತ್, ತೇಷಾಂ ಭಯಾನಿವೃತ್ತಿಃ। ಭಯಸ್ಯ ಅನ್ಯನಿಮಿತ್ತತ್ವಾತ್। ಸತಶ್ಚ ಅನ್ಯಸ್ಯ ಆತ್ಮಹಾನಾನುಪಪತ್ತಿಃ। ನ ಚ ಅಸತ ಆತ್ಮಲಾಭಃ। ಸಾಪೇಕ್ಷಸ್ಯ ಅನ್ಯಸ್ಯ ಭಯಹೇತುತ್ವಮ್ ಇತಿ ಚೇತ್। ನ। ತಸ್ಯಾಪಿ ತುಲ್ಯತ್ವಾತ್। ಯತ್ ಧರ್ಮಾದ್ಯನುಸಹಾಯೀಭೂತಂ ನಿತ್ಯಮ್ ಅನಿತ್ಯಂ ವಾ ನಿಮಿತ್ತಮ್ ಅಪೇಕ್ಷ್ಯ ಅನ್ಯತ್ ಭಯಕಾರಣಂ ಸ್ಯಾತ್ ತಸ್ಯಾಪಿ ತಥಾಭೂತಸ್ಯ ಆತ್ಮಹಾನಾಭಾವಾತ್ ಭಯಾನಿವೃತ್ತಿಃ। ಆತ್ಮಹಾನೇ ವಾ ಸದಸತೋರಿತರೇತರಾಪತ್ತೌ ಸರ್ವತ್ರ ಅನಾಶ್ವಾಸ ಏವ। ಏಕತ್ವಪಕ್ಷೇ ಪುನಃ ಸನಿಮಿತ್ತಸ್ಯ ಸಂಸಾರಸ್ಯ ಅವಿದ್ಯಾಕಲ್ಪಿತತ್ವಾತ್ ಅದೋಷಃ। ತೈಮಿರಿಕದೃಷ್ಟಸ್ಯ ಹಿ ದ್ವಿತೀಯಚನ್ದ್ರಸ್ಯ ನಾತ್ಮಲಾಭೋ ವಿನಾಶೋ ವಾ ಅಸ್ತಿ॥

(ಭಾಷ್ಯಾರ್ಥ)

ಆದರೆ ಯಾರ (ಮತದಲ್ಲಿ) ಈಶ್ವರನು ತನಗಿಂತ ಬೇರೆಯಾಗಿರುವನೋ, ಮತ್ತು ಕಾರ್ಯವಾದ (ಜಗತ್ತೂ) ಬೇರೆಯಾಗಿರುವದೋ ಅವರ (ಮತದಲ್ಲಿ) ಭಯವು ತೊಲಗುವಹಾಗೇ ಇಲ್ಲ. ಏಕೆಂದರೆ ಭಯವು ಮತ್ತೊಂದು ನಿಮಿತ್ತ

---

1. ಇಲ್ಲಿ ತತ್ತ್ವವೆಂದರೆ ಸತ್ತ್ವವು, ಸ್ವರೂಪವು.

ದಿಂದ (ಆಗಿರುತ್ತದೆ). (ನಿಜವಾಗಿ) ಇರುವ (ಅ) ಮತ್ತೊಂದು ನಾಶವಾಗುವ ಹಾಗಿಲ್ಲ; ಇಲ್ಲದಿರುವದು ಹುಟ್ಟುವ (ಹಾಗೂ) ಇಲ್ಲ.[1]

(ಶಂಕೆ) :—(ಅ) ಮತ್ತೊಂದು (ಒಂದರ) ಅಪೇಕ್ಷೆಯಿಂದಲೇ[2] ಭಯಕ್ಕೆ ಕಾರಣವಾಗಿರಬಹುದಲ್ಲವೆ?

(ಪರಿಹಾರ) :—ಹಾಗಲ್ಲ. ಏಕೆಂದರೆ ಅದೂ (ಇದಕ್ಕೆ) ಸಮಾನವಾಗಿದೆ. (ಈ ಅಭಿಪ್ರಾಯದ ವಿವರವೇನೆಂದರೆ): ಯಾವ ಧರ್ಮವೇ ಮುಂತಾದ[3] ಸಹಾಯಸಾಮಗ್ರಿಯಾಗಿರುವ ನಿತ್ಯವಾದ ಅಥವಾ ಅನಿತ್ಯವಾದ ನಿಮಿತ್ತವನ್ನಿಟ್ಟುಕೊಂಡು[4] (ಅ) ಇನ್ನೊಂದು ಭಯಕಾರಣವೆನ್ನಬಹುದೋ ಆ (ನಿಮಿತ್ತ) ವೂ ಸತ್ಯವಾದರೆ ನಾಶವಾಗಲಾರದಾದ್ದರಿಂದ ಭಯವು ತೊಲಗಲೇ ಆರದು. (ಒಂದು ವೇಳೆ ಅದು) ನಾಶವಾದರೆ ಸತ್ತು, ಅಸತ್ತು-ಇವುಗಳಲ್ಲಿ ಒಂದು ಇನ್ನೊಂದಾಗಬಹುದಾಗುವದರಿಂದ[5] ಏತರಲ್ಲಿಯೂ ನಂಬಿಕೆಯಿಲ್ಲದೆ ಹೋಗುವದು.[6]

ಇದರ ಬದಲು ಏಕತ್ವಪಕ್ಷವನ್ನೇ ಅವಲಂಬಿಸಿದರೆ ನಿಮಿತ್ತಸಹಿತವಾದ ಸಂಸಾರವು ಅವಿದ್ಯಾಕಲ್ಪಿತವಾಗಿರುವದರಿಂದ (ಯಾವ) ದೋಷವೂ ಇರುವದಿಲ್ಲ. ಏಕೆಂದರೆ ಪರೆಗಣ್ಣಿನವನಿಗೆ ಕಾಣುವ ಎರಡನೆಯ ಚಂದ್ರನಿಗೆ ಹುಟ್ಟೂ ಇಲ್ಲ, ಹೊಂದೂ ಇಲ್ಲ.[7]

## ವಿದ್ಯಾವಿದ್ಯೆಗಳೂ ಪರಮಾರ್ಥವಾಗಿ ಆತ್ಮಧರ್ಮವಲ್ಲ

(ಭಾಷ್ಯ)

೨೧೬. ವಿದ್ಯಾವಿದ್ಯಯೋಃ ತದ್ಧರ್ಮತ್ವಮ್ ಇತಿ ಚೇತ್ । ನ । ಪ್ರತ್ಯಕ್ಷತ್ವಾತ್ । ವಿವೇಕಾವಿವೇಕೌ ರೂಪಾದಿವತ್ ಪ್ರತ್ಯಕ್ಷೌ ಉಪಲಭ್ಯೇತೇ ಅನ್ತಃಕರಣ

---

1. ಇರುವ ಸಂಸಾರಭಯವು ಹೋಗಲಾರದು, ಇಲ್ಲದ ಮುಕ್ತಿಯು ಬರಲಾರದು.

2. ಧರ್ಮಾಧರ್ಮಗಳನ್ನವಲಂಬಿಸಿ ಈಶ್ವರನು ಭಯಕಾರಣನಾಗಬಹುದಲ್ಲ!

3. "ಧರ್ಮಾದಿ" ಎಂಬ ವಾ॥ಕಾ॥ ಪಾಠವನ್ನಿಟ್ಟುಕೊಂಡಿದೆ.

4. ಧರ್ಮಾಧರ್ಮಗಳು ಕರ್ಮರೂಪವಾದರೆ ಅನಿತ್ಯ, ಅದೃಷ್ಟರೂಪವಾದರೆ ನಿತ್ಯ.

5. ಇದ್ದ ಸಂಸಾರವು ಹೋಗಿ ಇಲ್ಲದ ಮುಕ್ತಿಯು ಉಂಟಾಗುವದಾದರೆ ಸತ್ತೂ ಅಸತ್ತಾಗಬಹುದು, ಅಸತ್ತೂ ಸತ್ತಾಗಬಹುದು-ಎಂದಾಗುವದು. ಗೀ. ಭಾ. ೧೩-೨ ೧೮-೪೮.

6. ಕರ್ಮಾದಿಸಾಧನಗಳಲ್ಲಿಯೂ ವಿಶ್ವಾಸವುಂಟಾಗದು ಏಕೆಂದರೆ ಸಾಧನವು ಸಾಧನವಲ್ಲದೆ ಹೋಗಬಹುದು, ಫಲವು ಫಲವಲ್ಲದೆ ಹೋಗಬಹುದು.

7. ಮಾಂ. ಕಾ. ಭಾ. ೧-೧೭.

ಸ್ಥೌ । ನ ಹಿ ರೂಪಸ್ಯ ಪ್ರತ್ಯಕ್ಷಸ್ಯ ಸತೋ ದ್ರಷ್ಟೃಧರ್ಮತ್ವಮ್ । ಅವಿದ್ಯಾ ಚ ಸ್ವಾನುಭವೇನ ರೂಪ್ಯತೇ "ಮೂಢೋಽಹಮ್ ಅವಿವಿಕ್ತಂ ಮಮ ವಿಜ್ಞಾನಮ್" ಇತಿ । ತಥಾ ವಿದ್ಯಾವಿವೇಕೋಽನುಭೂಯತೇ । ಉಪದಿಶನ್ತಿ ಚ ಅನ್ಯೇಭ್ಯ ಆತ್ಮನೋ ವಿದ್ಯಾಂ ಬುಧಾಃ । ತಥಾ ಚ ಅನ್ಯೇ ಅವಧಾರಯನ್ತಿ । ತಸ್ಮಾತ್ ನಾಮರೂಪಪಕ್ಷಸ್ಯೈವ ವಿದ್ಯಾವಿದ್ಯೇ । ನಾಮರೂಪೇ[1] ಚ ನಾತ್ಮಧರ್ಮೌ । "ನಾಮ ರೂಪಯೋರ್ನಿರ್ವಹಿತಾ ತೇ ಯದನ್ತರಾ ತದ್ ಬ್ರಹ್ಮ (ಛಾ. ೮-೧೪-೧) ಇತಿ ಶ್ರುತ್ಯನ್ತರಾತ್ । ತೇ ಚ ಪುನರ್ನಾಮರೂಪೇ ಸವಿತರಿ ಅಹೋರಾತ್ರೇ ಇವ ಕಲ್ಪಿತೇ ನ ಪರಮಾರ್ಥತೋ ವಿದ್ಯಮಾನೇ ॥

(ಭಾಷ್ಯಾರ್ಥ)

(ಆಕ್ಷೇಪ) :—(ಹಾಗಾದರೆ) ವಿದ್ಯಾವಿದ್ಯೆಗಳು ಆ (ಆತ್ಮನ) ಧರ್ಮಗಳೆಂದಾಯಿತು[1] !

(ಪರಿಹಾರ) :—ಅಲ್ಲ. ಏಕೆಂದರೆ (ಅವು) ಪ್ರತ್ಯಕ್ಷವಾಗಿರುತ್ತವೆ.[2] ವಿವೇಕ, ಅವಿವೇಕ-ಇವೆರಡೂ ರೂಪವೇ ಮುಂತಾದವುಗಳಂತೆಯೇ ಅಂತಃಕರಣದಲ್ಲಿರುವದು (ಪ್ರತ್ಯಕ್ಷವಾಗಿರುತ್ತದೆ). ಪ್ರತ್ಯಕ್ಷವಾಗಿರುವ ರೂಪವು (ಅದನ್ನು) ನೋಡುವವನ ಧರ್ಮವಲ್ಲವಷ್ಟೆ? "ನಾನು ಮೂಢನು, ನನ್ನ ಜ್ಞಾನವು ವಿಂಗಡಿಸಿ (ತಿಳಿಸುವ) ದಿಲ್ಲ" ಎಂದು ಅವಿದ್ಯೆಯು ತನ್ನ ಅನುಭವಕ್ಕೆ ವಿಷಯವಾಗುತ್ತದೆ.[3] ಇದರಂತೆ ವಿದ್ಯೆಯೆಂಬ ವಿವೇಕವೂ ಅನುಭವಕ್ಕೆ ಬರುತ್ತದೆ. ತಿಳಿದವರು ತಮ್ಮ ವಿದ್ಯೆಯನ್ನು ಮತ್ತೊಬ್ಬರಿಗೆ ಉಪದೇಶಮಾಡುತ್ತಾರೆ; ಹಾಗೂ (ಆ) ಮತ್ತೊಬ್ಬರೂ (ಅದನ್ನು) ಗೊತ್ತುಪಡಿಸಿಕೊಳ್ಳುತ್ತಾರೆ. ಆದ್ದರಿಂದ ವಿದ್ಯೆ, ಅವಿದ್ಯೆ-ಇವೆರಡೂ ನಾಮರೂಪಗಳ ಪಕ್ಷಕ್ಕೇ (ಸೇರಿದವುಗಳು). ನಾಮರೂಪಗಳಂತೂ ಆತ್ಮನ ಧರ್ಮವಲ್ಲ. (ಆಕಾಶನೆಂದು ಪ್ರಸಿದ್ಧನಾಗಿರುವ ಆತ್ಮನು) ನಾಮರೂಪಗಳನ್ನು ಬಿಡಿಸುವವನು ; ಅವುಗ

---

1. ಅವಿದ್ಯೆಯಿಂದಾಗಿರುವ ಬಂಧವನ್ನು ವಿದ್ಯೆಯಿಂದ ಕಳೆದುಕೊಂಡು ಮುಕ್ತಿಯನ್ನು ಪಡೆಯಬೇಕು ಎಂಬ ಅದ್ವೈತಪಕ್ಷದಲ್ಲಿ ವಿದ್ಯಾವಿದ್ಯೆಗಳಾದರೂ ಆತ್ಮನಿಗೆ ಇರಬೇಕೆಂದಾಗುವದು. ಅವಿದ್ದರೆ ಅದ್ವೈತಹಾನಿ ಎಂದು ಪೂರ್ವಪಕ್ಷಿಯ ಭಾವ.

2. ನೇರಾಗಿ ಅನುಭವಕ್ಕೆ ವಿಷಯವಾಗಿರುತ್ತವೆ-ವಿದ್ಯಾವಿದ್ಯೆಗಳು ಆತ್ಮನ ಧರ್ಮವಲ್ಲವೆಂಬುದನ್ನು ಗೀ. ಭಾ. ೧೩-೨, ಬೃ. ಭಾ. ೩-೫-೧, ಕ. ಭಾ. ೨-೨-೧೧ರಲ್ಲಿ ಕಾಣಬಹುದು.

3. ಆದ್ದರಿಂದ ಅದು ಅರಿಯುವ ಆತ್ಮನ ಧರ್ಮವಲ್ಲ, ಬೃ. ಭಾ. ೪-೪-೬.

ಳೊಳಗೆ ಬೇರೆಯಾಗಿರುವದೇ ಬ್ರಹ್ಮವು" (ಛಾ. ೮-೧೪-೫) ಎಂಬ ಮತ್ತೊಂದು ಶ್ರುತಿಯು ಇದಕ್ಕೆ ಪ್ರಮಾಣವು. ಈ ನಾಮರೂಪಗಳೆಂಬವುಗಳಾದರೋ ಸೂರ್ಯ ನಲ್ಲಿ ಹಗಲುರಾತ್ರಿಗಳಂತೆ ಕಲ್ಪಿತವಾಗಿರುವವೇ ಹೊರತು ನಿಜವಾಗಿ ಇರುವವಲ್ಲ.[1]

## ಸಂಕ್ರಮಣವೆಂದರೆ ಜ್ಞಾನವೇ

(ಭಾಷ್ಯ)

೨೧೭. ಅಭೇದೇ "ಏತಮಾನನ್ದಮಯಮಾತ್ಮಾನಮುಪಸಂಕ್ರಾಮತಿ" ಇತಿ ಕರ್ಮಕರ್ತೃತ್ವಾನುಪಪತ್ತಿಃ ಇತಿ ಚೇತ್ । ನ । ವಿಜ್ಞಾನಮಾತ್ರತ್ವಾತ್ ಸಂ ಕ್ರಮಣಸ್ಯ। ನ ಜಲೂಕಾದಿವತ್ ಸಂಕ್ರಮಣಮ್ ಇಹ ಉಪದಿಶ್ಯತೇ, ಕಿಂ ತರ್ಹಿ, ವಿಜ್ಞಾನಮಾತ್ರಂ ಸಂಕ್ರಮಣಶ್ರುತೇರರ್ಥಃ । ನನು ಮುಖ್ಯಮೇವ ಸಂಕ್ರಮಣಂ ಶ್ರೂಯತೇ "ಉಪಸಂಕ್ರಾಮತಿ" ಇತಿ (ಇತಿ ?) ಚೇತ್। ನ । ಅನ್ನಮಯೇ ಆದರ್ಶ ನಾತ್ । ನ ಹಿ ಅನ್ನಮಯಮ್ ಉಪಸಂಕ್ರಾಮತಃ ಬಾಹ್ಯಾತ್ ಅಸ್ಮಾತ್ ಲೋಕಾತ್ ಜಲೂಕಾವತ್ ಸಂಕ್ರಮಣಂ ದೃಶ್ಯತೇ ಅನ್ಯಥಾ ವಾ । ಮನೋಮಯಸ್ಯ ಬಹಿ ರ್ನಿರ್ಗತಸ್ಯ ವಿಜ್ಞಾನಮಯಸ್ಯ ವಾ ಪುನಃ ಪ್ರತ್ಯಾವೃತ್ತ್ಯಾ ಆತ್ಮಸಂಕ್ರಮಣಮ್ ಇತಿ ಚೇತ್ । ನ । ಸ್ವಾತ್ಮನಿ ಕ್ರಿಯಾವಿರೋಧಾತ್, ಅನ್ಯೋಽನ್ನಮಯಮ್ ಉಪ ಸಂಕ್ರಾಮತಿ ಇತಿ ಪ್ರಕೃತ್ಯ ಮನೋಮಯೋ ವಿಜ್ಞಾನಮಯೋ ವಾ ಸ್ವಾತ್ಮಾನ ಮೇವ ಉಪಸಂಕ್ರಾಮತಿ ಇತಿ ವಿರೋಧಃ ಸ್ಯಾತ್ । ತಥಾ ನಾನನ್ದಮಯಸ್ಯ ಆತ್ಮ ಸಂಕ್ರಮಣಮ್ ಉಪಪದ್ಯತೇ ॥

(ಭಾಷ್ಯಾರ್ಥ)

(ಆಕ್ಷೇಪ) :—ಅಭೇದಪಕ್ಷದಲ್ಲಿ "ಈ ಆನಂದಮಯನೆಂಬ ಆತ್ಮನನ್ನು ಪಡೆದುಕೊಳ್ಳುತ್ತಾನೆ" ಎಂದು (ಸಂಕ್ರಮಣ - ಬಂದು ಪಡೆಯುವಿಕೆ ಎಂಬ ಕ್ರಿಯೆಗೆ ತಾನೇ) ಕರ್ಮವೂ ಕರ್ತೃವೂ ಆಗಿರುವದು ಅಯುಕ್ತವಲ್ಲವೆ ?

(ಪರಿಹಾರ) : --ಹಾಗಲ್ಲ. ಏಕೆಂದರೆ ಸಂಕ್ರಮಣ (ಪಡೆದುಕೊಳ್ಳುವದು) ಎಂದರೆ ಬರಿಯ ಜ್ಞಾನವೇ ಆಗಿರುತ್ತದೆ. ಜಿಗಣೆಯ ಹುಳುವೇ ಮುಂತಾದವು ಗಳಂತೆ (ಚಲಿಸಿಕೊಂಡುಹೋಗಿ) ಪಡೆದುಕೊಳ್ಳುವದನ್ನೇನೂ ಇಲ್ಲಿ ಹೇಳಿರುವದಿಲ್ಲ ;

---

1 ಆದ್ದರಿಂದ ಅವು ಆತ್ಮನ ಧರ್ಮವಲ್ಲ; ಅವು ಕಲ್ಪಿತವಾಗಿರುವವರಿಂದ ಅದ್ವೈತಕ್ಕೆ ಹಾನಿಯೂ ಇಲ್ಲ. ಬೃ ಭಾ. ೩-೫-೧. ಇಲ್ಲಿ ವ್ಯಾಖ್ಯಾನದಲ್ಲಿ ಕೊಟ್ಟಿರುವ ಅವಿದ್ಯಾಪ್ರಕ್ರಿ ಯೆಯ ವಿಷಯದ ಅವತರಣಿಕೆಗೆ ಭಾಷ್ಯಾಧಾರವಿಲ್ಲ. ಪೀಠಿಕೆಯನ್ನು ನೋಡಿ.

ಮತ್ತೇನೆಂದರೆ 'ಸಂಕ್ರಮಣ' ಎಂಬ ಶ್ರುತಿಗೆ ಅರಿತುಕೊಳ್ಳುವದೆಂಬುದು ಮಾತ್ರ ಅರ್ಥ(ವಾಗಿರುತ್ತದೆ).

(ಆಕ್ಷೇಪ):—"ಉಪಸಂಕ್ರಾಮತಿ" (ಬಂದು ಸೇರುತ್ತಾನೆ) ಎಂದು ಮುಖ್ಯಾರ್ಥದಲ್ಲಿಯೇ ಸಂಕ್ರಮಣವನ್ನು (ಪಡೆದುಕೊಳ್ಳುವದನ್ನು) ಶ್ರುತಿ ಹೇಳುತ್ತಿದೆಯಲ್ಲ!

(ಪರಿಹಾರ) :—ಹಾಗಲ್ಲ. ಏಕೆಂದರೆ (ಈ ಬಗೆಯ ಸಂಕ್ರಮಣವು) ಅನ್ನಮಯನ ವಿಷಯದಲ್ಲಿ ಕಂಡುಬರುವದಿಲ್ಲ. ಅನ್ನಮಯನನ್ನು ಸೇರುವದಕ್ಕೆ, ಹೊರಗಿನ ಈ ಲೋಕದಿಂದ ಜಿಗಣೆಯಂತೆ ಬಂದುಸೇರುವ (ಸಂಕ್ರಮಣ)ವಾಗಲಿ, ಬೇರೆಯ ಬಗೆಯ (ಸಂಕ್ರಮಣ)ವಾಗಲಿ, ಕಂಡುಬರುವದಿಲ್ಲವಷ್ಟೆ.

(ಆಕ್ಷೇಪ):—ಮನೋಮಯನು ಅಥವಾ ವಿಜ್ಞಾನಮಯನು ಹೊರಕ್ಕೆ ಹೊರಟಿದ್ದವನು ಮತ್ತೆ ಹಿಂತಿರುಗಿ ಬಂದು ತನ್ನನ್ನೇ (ತಾನು) ಸೇರಿಕೊಳ್ಳಬಹುದಲ್ಲವೆ?

(ಪರಿಹಾರ):—ಹಾಗಲ್ಲ. ಏಕೆಂದರೆ ತನ್ನ ವಿಷಯದಲ್ಲಿ (ತನ್ನ) ಕ್ರಿಯೆಯೇ (ಕೆಲಸಮಾಡುವದೆಂಬುದು) ವಿರುದ್ಧವಾಗಿರುತ್ತದೆ. "ಅನ್ನಮಯನನ್ನು ಮತ್ತೊಬ್ಬನು (ಬಂದು) ಸೇರುತ್ತಾನೆ" ಎಂದು ಪ್ರಾರಂಭಿಸಿ ಮನೋಮಯನು ಅಥವಾ ವಿಜ್ಞಾನಮಯನು ತನ್ನನ್ನೇ ಬಂದು ಸೇರಿಕೊಳ್ಳುತ್ತಾನೆ ಎಂಬುದು (ಪ್ರಕ್ರಮ ವಿರುದ್ಧವಾಗುತ್ತದೆ.[1] ಇದರಂತೆ ಆನಂದಮಯನು ತನ್ನನ್ನೇ ಬಂದು ಸೇರಿಕೊಳ್ಳುತ್ತಾನೆ ಎಂಬುದೂ ಯುಕ್ತವಾಗುವದಿಲ್ಲ.[2]

(ಭಾಷ್ಯ)

೨೧೮. ತಸ್ಮಾತ್ ನ ಪ್ರಾಪ್ತಿಃ ಸಂಕ್ರಮಣಮ್, ನಾಪಿ ಅನ್ನಮಯಾದೀನಾಮನ್ಯತಮಕರ್ತೃಕಮ್ । ಪಾರಿಶೇಷ್ಯಾತ್ ಅನ್ನಮಯಾದ್ಯಾನನ್ದಮಯಾನ್ತಾತ್ಮವ್ಯತಿರಿಕ್ತಕರ್ತೃಕಂ ಜ್ಞಾನಮಾತ್ರಂ ಚ ಸಂಕ್ರಮಣಮ್ ಉಪಪದ್ಯತೇ । ಜ್ಞಾನಮಾತ್ರತ್ವೇ

---

1. ಮನಸ್ಸು ಅಥವಾ ವಿಜ್ಞಾನವು ಹೊರಗಿನ ವಿಷಯಗಳ ಬಳಿಗೆ ಹೋಗಿದ್ದು ಹಿಂದಕ್ಕೆ ಬರಬಹುದು; ಅದೇ ಸಂಕ್ರಮಣವು ಎಂದು ಪೂರ್ವಪಕ್ಷಿ ಹೇಳಿದ್ದು ಅನ್ನಮಯನ ವಿಷಯಕ್ಕೆ ಹೊಂದಬಹುದು ದೇಹಕ್ಕಿಂತ ಬೇರೆಯ ವಿಷಯಗಳನ್ನು ಬಿಟ್ಟು ದೇಹಕ್ಕೆ ಮನಸ್ಸು ಹಿಂತಿರುಗಿತು ಎಂದು ಹೇಳಬಹುದು. ಆದರೆ ಮನಸ್ಸು ಮನಸ್ಸಿಗೆ ಬಂದು ಸೇರಿತು, ವಿಜ್ಞಾನವು ವಿಜ್ಞಾನದ ಬಳಿಗೆ ಬಂದು ಸೇರಿತು—ಎಂದರೆ ಅರ್ಥವಿಲ್ಲ ತಾನೇ ತನ್ನನ್ನೇ ಸೇರುವದು ಆಗಲಾರದು.

2. ಅನ್ನಮಯನನ್ನು ಬಿಟ್ಟರೆ ಮಿಕ್ಕ ಆತ್ಮರುಗಳ ವಿಷಯದಲ್ಲೆಲ್ಲ ಕರ್ಮಕರ್ತೃತ್ವ ವಿರೋಧವು ಬರುವದರಿಂದ ಮುಖ್ಯಸಂಕ್ರಮಣಪಕ್ಷವನ್ನು ಕೈಬಿಡಬೇಕು ಎಂದಭಿಪ್ರಾಯ.

ಚ ಆನನ್ದಮಯಾನ್ತಃಸ್ಥಸ್ಯೈವ ಸರ್ವಾನ್ತರಸ್ಯ ಆಕಾಶಾದ್ಯನ್ನಮಯಾನ್ತಂ ಕಾರ್ಯಂ ಸೃಷ್ಟ್ವಾ ಅನುಪ್ರವಿಷ್ಟಸ್ಯ ಹೃದಯಗುಹಾಭಿಸಂಬನ್ಧಾತ್ ಅನ್ನಮಯಾದಿಷ್ವನಾತ್ಮಸು ಆತ್ಮವಿಭ್ರಮಃ ಸಂಕ್ರಮಣೇನ ಆತ್ಮವಿವೇಕವಿಜ್ಞಾನೋತ್ಪತ್ತ್ಯಾ ವಿನಶ್ಯತಿ । ನ ಹಿ ಅನ್ಯಥಾ ಸರ್ವಗತಸ್ಯ ಆತ್ಮನಃ ಸಂಕ್ರಮಣಮ್ ಉಪಪದ್ಯತೇ । ತದೇತಸ್ಮಿನ್ ಅವಿದ್ಯಾವಿಭ್ರಮನಾಶೇ ಸಂಕ್ರಮಣಶಬ್ದಃ ಉಪಚರ್ಯತೇ । ವಸ್ತ್ವನ್ತರಾಭಾವಾಚ್ಚ । ನ ಚ ಸ್ವಾತ್ಮನ ಏವ ಸಂಕ್ರಮಣಮ್ । ನ ಹಿ ಜಲೂಕಾ ಆತ್ಮಾನಮೇವ ಸಂಕ್ರಾಮತಿ ॥

(ಭಾಷ್ಯಾರ್ಥ)

ಆದ್ದರಿಂದ (ಇಲ್ಲಿ) ಸಂಕ್ರಮಣವೆಂದರೆ (ನಿಜವಾಗಿ ಹೋಗಿ) ಪಡೆದುಕೊಳ್ಳುವದು (ಎಂದರ್ಥ)ವಲ್ಲ; ಅನ್ನಮಯನೇ ಮೊದಲಾದ (ಆತ್ಮರುಗಳಲ್ಲಿ) ಯಾವನೋ ಒಬ್ಬನು (ಪಡೆದು) ಕೊಳ್ಳತಕ್ಕದ್ದೂ ಅಲ್ಲ.[1] ಆದ್ದರಿಂದ (ಇನ್ನು) ಉಳಿದಿರುವ (ಒಂದೇ ಒಂದು ಪಕ್ಷವು ಯಾವದೆಂದರೆ), **ಅನ್ನಮಯನಿಂದ ಹಿಡಿದು ಆನಂದಮಯನವರೆಗಿನ ಆತ್ಮರುಗಳಿಗಿಂತ ಬೇರೆಯಾಗಿರುವವನು (ಸಂಕ್ರಮಣಕ್ಕೆ) ಕರ್ತೃ. (ಆತ್ಮನನ್ನು)** ಅರಿತುಕೊಳ್ಳುವದೇ ಸಂಕ್ರಮಣವು ಎಂಬುದು ಯುಕ್ತ. (ಹೀಗೆ) ಅರಿಯುವದೆಂಬುದೇ (ಸಂಕ್ರಮಣವೆಂದಾಗಲಾಗಿ) **ಆನಂದಮಯನ ಒಳಗೆ ಇರುವ ಎಲ್ಲರಿಗೂ ಒಳಗಿನ (ಆತ್ಮನೇ) ಆಕಾಶವೇ ಮುಂತಾಗಿ ಅನ್ನಮಯದವರೆಗಿನ ಕಾರ್ಯವನ್ನು ಸೃಷ್ಟಿಸಿ ಒಳಹೊಕ್ಕಿರುವಲ್ಲಿ ಹೃದಯಗುಹೆಯ ಸಂಬಂಧದಿಂದ ಅನ್ನಮಯನೇ ಮುಂತಾದ ಅನಾತ್ಮಗಳಲ್ಲಿ (ಉಂಟಾಗಿದ್ದ) ಆತ್ಮತ್ವಭ್ರಾಂತಿಯು ಸಂಕ್ರಮಣದಿಂದ, ಎಂದರೆ ಆತ್ಮನನ್ನು ವಿಂಗಡಿಸಿ ಅರಿತುಕೊಂಡ ತಿಳಿವಳಿಕೆಯು ಹುಟ್ಟುವದರಿಂದ, ಹೋಗುತ್ತದೆ.**[2] ಆ ಈ ಅವಿದ್ಯಾಭ್ರಾಂತಿಯ ನಾಶವನ್ನು (ಹೇಳುವದಕ್ಕೆ) 'ಸಂಕ್ರಮಣ' ಎಂಬ ಶಬ್ದವನ್ನು ಉಪಚಾರದಿಂದ[3] ಉಪಯೋಗಿಸಿರುತ್ತದೆ. ಸರ್ವಗತನಾದ ಆತ್ಮನಿಗೆ

1. ಏಕೆಂದರೆ ಅನ್ನಮಯನು ತಾನು ಹೊಂದುವಂತಿಲ್ಲ; ಮಿಕ್ಕವರನ್ನೂ ಹೋಗಿ ಸೇರುವಂತಿಲ್ಲ; ಮನೋಮಯಾದ್ಯಾತ್ಮರು ತಮ್ಮನ್ನು ತಾವು ಸೇರಿಕೊಳ್ಳುವ ಹಾಗಿಲ್ಲ,

2. ಹತ್ತನೆಯವನ ಕಥೆಯಿಂದ ಹಿಂದೆ ಭಾ. ಭಾ. ೯೩ ರಲ್ಲಿ ಹೇಳಿದ್ದ ಜ್ಞಾನವೇ ಇದು. ಈ ಜ್ಞಾನವು ಅಜ್ಞಾನವನ್ನು ನಾಶಮಾಡುವದೆಂಬ ವೃತ್ತಿಯು ಅಂತಃಕರಣದಲ್ಲಿಯೇ ಉಂಟಾಗುವದಾದರೂ ಅನ್ನಮಯಾದಿ ಪಂಚಕೋಶಗಳಿಗಿಂತ ಬೇರೆಯಾದ ಆತ್ಮನಲ್ಲಿ ನೆಲೆನಿಂತದ್ದರಿಂದ ಆಗಿರುವದರಿಂದ ಆತ್ಮನನ್ನೇ ಜ್ಞಾನಿಯೆಂದು ವ್ಯವಹರಿಸಲಾಗುತ್ತದೆ. ಗೀ. ಭಾ. ೨-೨೧ ನ್ನು ನೋಡಿ.

3. ಅವಿದ್ಯೆಯಿಂದ ಅನಾಪ್ತನಾದಂತಿದ್ದ ಆತ್ಮನು ವಿದ್ಯೆಯಿಂದ ಆಪ್ತನಾದಂತೆ ಆಗುತ್ತಾನೆ ಎಂಬುದನ್ನು ತಿಳಿಸುವದಕ್ಕೆ ಸಂಕ್ರಮಣಶಬ್ದವನ್ನು ಇಲ್ಲಿ ಗೌಣವೃತ್ತಿಯಿಂದ ಉಪಯೋಗಿಸಿದೆ.

(ಇನ್ನು ಯಾವ) ಬೇರೆಯ ವಿಧದಿಂದಲೂ 'ಸಂಕ್ರಮಣ' (ಪಡೆದುಕೊಳ್ಳುವಿಕೆ) ಎಂಬುದು ಹೊಂದುವದಿಲ್ಲ. ಮತ್ತೊಂದು ವಸ್ತುವಿಲ್ಲದ್ದರಿಂದಲೂ (ಹೀಗೆಂದು ತಿಳಿಯಬೇಕು.[1]) ತನ್ನನ್ನು ತಾನೇ ಪಡೆಯುವದೆಂಬುದೂ ಸಲ್ಲದು. ಜಿಗಣೆಯ ಹುಳು ತನ್ನನ್ನೇ ತಾನು ಸೇರಿಕೊಳ್ಳುವದಿಲ್ಲವಷ್ಟೆ?[2]

# ೧೮. ನಿರ್ವಿಕಲ್ಪಾತ್ಮಜ್ಞಾನದ ಉಪಸಂಹಾರ

**ತದಪ್ಯೇಷ ಶ್ಲೋಕೋ ಭವತಿ ॥ ೬ ॥**

(ಇತ್ಯಷ್ಟಮೋಽನುವಾಕಃ)

**ಯತೋ ವಾಚೋ ನಿವರ್ತನ್ತೇ । ಅಪ್ರಾಪ್ಯ ಮನಸಾ ಸಹ ।**
**ಆನನ್ದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕುತಶ್ಚನೇತಿ ॥ ೧ ॥**

೬. ಆದರ ವಿಷಯದಲ್ಲಿಯೇ ಈ ಶ್ಲೋಕವಿರುವದು.

(ಎಂಟನೆಯ ಅನುವಾಕವು ಮುಗಿಯಿತು)

೧. ಯಾವದರಿಂದ ವಾಕ್ಕುಗಳು ಮನಸ್ಸಿನೊಡನೆ (ಅದನ್ನು) ಮುಟ್ಟಲಾರದೆ ಹಿಂತಿರುಗುವವೋ (ಆ) ಬ್ರಹ್ಮದ ಆನಂದವನ್ನು ತಿಳಿದವನು ಏತಕ್ಕೂ ಅಂಜುವದಿಲ್ಲ.

## ನಿರ್ವಿಕಲ್ಪಾತ್ಮಜ್ಞಾನಕ್ಕೆ ಉಪಾಯ

(ಭಾಷ್ಯ)

೨೧೯. ತಸ್ಮಾತ್ "ಸತ್ಯಂ ಜ್ಞಾನಮನನ್ತಂ ಬ್ರಹ್ಮ" ಇತಿ ಯಥೋಕ್ತಲಕ್ಷಣಾತ್ಮಪ್ರತಿಪತ್ತ್ಯರ್ಥಮೇವ ಬಹುಭವನಸರ್ಗಪ್ರವೇಶರಸಲಾಭಾಭಯಸಂಕ್ರಮಣಾದಿ ಪರಿಕಲ್ಪ್ಯತೇ ಬ್ರಹ್ಮಣಿ ಸರ್ವಂ[3] ವ್ಯವಹಾರವಿಷಯೇ । ನ ತು ಪರಮಾ

---

1 ಆತ್ಮನಿಗಿಂತ ಬೇರೆಯಾಗಿರುವ ವಸ್ತುವೇ ಇಲ್ಲ; ನಾಮರೂಪಗಳೆಲ್ಲವೂ ಆತ್ಮವ್ಯಾಪ್ತವಾಗಿಯೇ ಇವೆ. ಹೀಗಿರುವಲ್ಲಿ ಆತ್ಮನು ಏನನ್ನು ಪಡೆಯಬೇಕಾಗಿದೆ?

2. ಜಿಗಣೆಗೆ ಅವಯವಗಳಿರುವದರಿಂದ ಒಂದು ಅವಯವದಿಂದ ಮತ್ತೊಂದನ್ನು ಅದು ಸೇರಿದರೂ ಸೇರಬಹುದು; ಆದರೆ ಆತ್ಮನಿಗೆ ಅವಯವಗಳೂ ಇಲ್ಲ ತೈ. ವಾ. ೨-೫೮೪

3. "ಸರ್ವವ್ಯವಹಾರವಿಷಯೇ" ಆ॥ವಾ॥ "ಸರ್ವವ್ಯವಹಾರಾವಿಷಯೇ" ಕಾ॥ ಈ ಎರಡು ಪಾಠಗಳನ್ನೂ ಬಿಟ್ಟು "ಸರ್ವಂ ವ್ಯವಹಾರವಿಷಯೇ" ಎಂದು ತಿದ್ದಿಕೊಂಡಿದೆ. ವ್ಯವಹಾರಕ್ಕಾಗಿ ಬ್ರಹ್ಮದಲ್ಲಿದ್ದಂತೆ ಅಧ್ಯಾರೋಪಮಾಡಿಕೊಂಡು ತಿಳಿಸಿದೆ ಎಂಬ ಅರ್ಥವು ಇದರಿಂದ ಹೊರಡುತ್ತದೆ

ರ್ಥತೋ ನಿರ್ವಿಕಲ್ಪೇ ಬ್ರಹ್ಮಣಿ ಕಶ್ಚಿದಪಿ ವಿಕಲ್ಪ ಉಪಪದ್ಯತೇ । ತಮೇತಂ ನಿರ್ವಿಕಲ್ಪಮ್ ಆತ್ಮಾನಮ್ ಏವಂಕ್ರಮೇಣ ಉಪಸಂಕ್ರಮ್ಯ ವಿದಿತ್ವಾ ನ ಬಿಭೇತಿ ಕುತಶ್ಚನ ಅಭಯಂ ಪ್ರತಿಷ್ಠಾಂ ವಿನ್ದತೇ ಇತ್ಯೇತಸ್ಮಿನ್ ಅರ್ಥೇऽಪಿ ಏಷ ಶ್ಲೋಕೋ ಭವತಿ ಸರ್ವಸ್ಯೈವ ಅಸ್ಯ ಪ್ರಕರಣಸ್ಯ ಆನನ್ದವಲ್ಲ್ಯರ್ಥಸ್ಯ ಸಂಕ್ಷೇಪತಃ ಪ್ರಕಾಶನಾಯ ಏಷ ಮನ್ತ್ರೋ ಭವತಿ ॥

(ಭಾಷ್ಯಾರ್ಥ)

ಆದ್ದರಿಂದ "ಸತ್ಯವೂ ಜ್ಞಾನವೂ ಅನಂತವೂ ಆದ ಬ್ರಹ್ಮವು" (೧-೧) ಎಂದು ಹಿಂದೆ ಹೇಳಿದ ಲಕ್ಷಣವುಳ್ಳ **ಆತ್ಮನನ್ನು ತಿಳಿಯುವದಕ್ಕೋಸ್ಕರವೇ ಬಹುವಾಗುವಿಕೆ, ಸೃಷ್ಟಿ, ಪ್ರವೇಶ, ರಸವನ್ನು ಹೊಂದುವಿಕೆ, ಅಭಯ, ಸಂಕ್ರಮಣ–ಮುಂತಾದದ್ದೆಲ್ಲವನ್ನೂ ವ್ಯವಹಾರದೃಷ್ಟಿಯಿಂದ ಬ್ರಹ್ಮದಲ್ಲಿ ಕಲ್ಪಿಸಲಾಗಿದೆ.**[1] ಆದರೆ ನಿರ್ವಿಕಲ್ಪವಾಗಿರುವ ಬ್ರಹ್ಮದಲ್ಲಿ ನಿಜವಾಗಿ ಯಾವದೊಂದೂ ವಿಕಲ್ಪವೂ ಇರುವದೆಂಬುದು ಹೊಂದುವದಿಲ್ಲ. ಆ ಈ ನಿರ್ವಿಕಲ್ಪನಾದ ಆತ್ಮನನ್ನು ಈ ಕ್ರಮದಿಂದ[2] ಪಡೆದುಕೊಂಡರೆ ಎಂದರೆ ಅರಿತುಕೊಂಡರೆ ಏತಕ್ಕೂ ಅಂಜುವದಿಲ್ಲ, ಅಭಯವಾಗಿ ಪ್ರತಿಷ್ಠೆಯನ್ನು ಹೊಂದುತ್ತಾನೆ–ಎಂಬೀ ಅರ್ಥದಲ್ಲಿ ಈ ಶ್ಲೋಕವೂ ಇರುತ್ತದೆ. **ಆನಂದವಲ್ಲಿಯ** ಅರ್ಥವಾದ ಈ ಪ್ರಕರಣವನ್ನೆಲ್ಲ ಸಂಗ್ರಹವಾಗಿ ತಿಳಿಸುವದಕ್ಕಾಗಿ ಈ ಮಂತ್ರವು ಬಂದಿರುತ್ತದೆ (ಎಂದರ್ಥ).

## ನಿರ್ವಿಕಲ್ಪಾತ್ಮಜ್ಞಾನದ ಫಲ

(ಭಾಷ್ಯ)

೨೨೦. ಯತಃ ಯಸ್ಮಾತ್ ನಿರ್ವಿಕಲ್ಪಾತ್ ಯಥೋಕ್ತಲಕ್ಷಣಾತ್ ಅದ್ವಯಾನನ್ದಾತ್ ಆತ್ಮನಃ ವಾಚಃ ಅಭಿಧಾನಾನಿ ದ್ರವ್ಯಾದಿಸವಿಕಲ್ಪವಸ್ತುವಿಷಯಾಣಿ ವಸ್ತುಸಾಮಾನ್ಯಾತ್ ನಿರ್ವಿಕಲ್ಪೇ ಅದ್ವಯೇऽಪಿ ಬ್ರಹ್ಮಣಿ ಪ್ರಯೋಕ್ತೃಭಿಃ

---

1. ಅಧ್ಯಾರೋಪಾಪವಾದಗಳಿಂದ ನಿಷ್ಪ್ರಪಂಚವಾದ ತತ್ತ್ವವನ್ನು ವಿಸ್ತರಿಸುತ್ತಾರೆ ಎಂಬ ನ್ಯಾಯದ ಸೂಚನೆಯಿದು. ಬೃ. ಭಾ. ೩-೮-೨೦ ಉತ್ಪತ್ತ್ಯಾದಿಕಲ್ಪನೆಯ ಭಾಷ್ಯವನ್ನೂ ಅಂಶಾಂಶ್ಯಾದಿಕಲ್ಪನಾಭಾಷ್ಯವನ್ನೂ ನೋಡಿ; ಸೂ. ಭಾ. ೪-೩-೧೪ರಲ್ಲಿ ಉತ್ಪತ್ತ್ಯಾದಿಶ್ರುತಿ ವಿಚಾರವನ್ನು ನೋಡಿ.

2. ಬ್ರಹ್ಮದ ಸ್ವರೂಪವು ನಿರ್ವಿಶೇಷವಾದ ಆನಂದವೆಂದು ತಿಳಿಸುವದರಿಂದ ಈ ವಲ್ಲಿಯನ್ನು ಆನಂದವಲ್ಲಿ ಯೆಂದು ಕರೆಯುತ್ತಾರೆ; ಈ ಕಾರಣದಿಂದಲೇ ಇದನ್ನು ಬ್ರಹ್ಮಾನಂದ ವಲ್ಲಿ ಎಂದೂ ಕರೆಯುವಮಂಟು.

ಪ್ರಕಾಶನಾಯ ಪ್ರಯುಜ್ಯಮಾನಾನಿ ಅಪ್ರಾಪ್ಯ ಅಪ್ರಕಾಶ್ಯೈವ ನಿವರ್ತನ್ತೇ ಸಾಮರ್ಥ್ಯಾತ್ ಹೀಯನ್ತೇ । ಮನಃ ಇತಿ ಪ್ರತ್ಯಯಃ, ವಿಜ್ಞಾನಮ್ । ತಚ್ಚ ಯತ್ರಾಭಿಧಾನಂ ಪ್ರವೃತ್ತಮ್ ಅತೀನ್ದ್ರಿಯೇಽಪ್ಯರ್ಥೇ ತದರ್ಥೇ ಚ ಪ್ರವರ್ತತೇ ಪ್ರಕಾಶನಾಯ । ಯತ್ರ ಚ ವಿಜ್ಞಾನಮ್ ತತ್ರ ವಾಚಃ ಪ್ರವೃತ್ತಿಃ । ತಸ್ಮಾತ್ ಸಹೈವ ವಾಙ್ಮನಸಯೋಃ ಅಭಿಧಾನಪ್ರತ್ಯಯಯೋಃ ಪ್ರವೃತ್ತಿಃ ಸರ್ವತ್ರ । ತಸ್ಮಾತ್ ಚ ಬ್ರಹ್ಮಪ್ರಕಾಶನಾಯ ಸರ್ವಥಾ ಪ್ರಯೋಕ್ತೃಭಿಃ ಪ್ರಯುಜ್ಯಮಾನಾ ಅಪಿ ವಾಚಃ, ಯಸ್ಮಾತ್ ಅಪ್ರತ್ಯಯವಿಷಯಾತ್ ಅನಭಿಧೇಯಾತ್, ಅದೃಶ್ಯಾದಿವಿಶೇಷಣಾತ್, ಸಹೈವ ಮನಸಾ ವಿಜ್ಞಾನೇನ ಸರ್ವಪ್ರಕಾಶನಸಮರ್ಥೇನ ನಿವರ್ತನ್ತೇ । ತಂ ಬ್ರಹ್ಮಣ ಆನನ್ದಂ ಶ್ರೋತ್ರಿಯಸ್ಯ, ಅವೃಜಿನಸ್ಯ, ಅಕಾಮಹತಸ್ಯ ಸರ್ವೈಷಣಾವಿನಿರ್ಮುಕ್ತಸ್ಯ ಆತ್ಮಭೂತಂ ವಿಷಯವಿಷಯಿಸಂಬನ್ಧವಿನಿರ್ಮುಕ್ತಂ ಸ್ವಾಭಾವಿಕಂ, ನಿತ್ಯಮ್, ಅವಿಭಕ್ತಂ ಪರಮಾನನ್ದಂ ಬ್ರಹ್ಮಣೋ ವಿದ್ವಾನ್ ಯಥೋಕ್ತೇನ ವಿಧಿನಾ ನ ಬಿಭೇತಿ ಕುತಶ್ಚನ । ನಿಮಿತ್ತಾಭಾವಾತ್ ॥

(ಭಾಷ್ಯಾರ್ಥ)

ಯಾವದರಿಂದ ಎಂದರೆ ಯಾವ ನಿರ್ವಿಕಲ್ಪವಾದ ಹಿಂದೆ ಹೇಳಿದ ಲಕ್ಷಣದ ಅದ್ವಯಾನಂದವಾದ ಆತ್ಮನಿಂದ ವಾಕ್ಕುಗಳು ಎಂದರೆ ದ್ರವ್ಯವೇ ಮುಂತಾದ ಸವಿಕಲ್ಪವಸ್ತುಗಳನ್ನು[1] ವಿಷಯಮಾಡುವ ಹೆಸರುಗಳು (ಇದೂ) ವಸ್ತುವೆಂಬ ಹೋಲಿಕೆಯಿಂದ ಅದ್ವಯವಾದ ಬ್ರಹ್ಮದಲ್ಲಿಯೂ (ಶಬ್ದ) ಪ್ರಯೋಗವನ್ನು ಮಾಡುವವರು (ಅದನ್ನು) ತಿಳಿಸುವದಕ್ಕೋಸ್ಕರ ಪ್ರಯೋಗಮಾಡಲಾಗಿ (ಅದನ್ನು) ಮುಟ್ಟಲಾರದೆ ಎಂದರೆ ಬೆಳಗಲಾರದೆಯೇ ಹಿಂತಿರುಗುವವೋ ತಮ್ಮ ಸಾಮರ್ಥ್ಯವನ್ನು ಕಳೆದುಕೊಳ್ಳುವವೋ. (ಇಲ್ಲಿ) 'ಮನಸ್ಸು' ಎಂದರೆ ಪ್ರತ್ಯಯವು, ವಿಜ್ಞಾನವು. ಅದು ಎಲ್ಲಿ ಹೆಸರು ಪ್ರವರ್ತಿಸುವದೋ, (ಅಂಥ) ವಿಷಯವು ಅತೀಂದ್ರಿಯವೇ ಆಗಿದ್ದರೂ, ಆ ಅರ್ಥವನ್ನು ಬೆಳಗುವದಕ್ಕೆ ಹೊರಡುತ್ತದೆ. ಮತ್ತು ಎಲ್ಲಿ ವಿಜ್ಞಾನವು (ಪ್ರವರ್ತಿಸುವದೋ) ಅಲ್ಲಿ ವಾಕ್ಕು ಪ್ರವರ್ತಿಸುತ್ತದೆ. ಆದ್ದರಿಂದ ವಾಕ್ಕು, ಮನಸ್ಸು-ಎಂಬ ಹೆಸರು, ಪ್ರತ್ಯಯ-ಇವೆರಡೂ ಎಲ್ಲೆಲ್ಲಿಯೂ (ಜೊತೆ) ಜೊತೆಯಾಗಿಯೇ ಪ್ರವರ್ತಿಸುತ್ತವೆ.[2] ಆದ್ದರಿಂದ ಬ್ರಹ್ಮವನ್ನು ಬೆಳಗುವದಕ್ಕೆಂದು (ಶಬ್ದವನ್ನು)

---

1. ದ್ರವ್ಯ, ಗುಣ, ಕ್ರಿಯಾ, ಜಾತಿ-ಮುಂತಾದವುಗಳನ್ನು ಮಾತ್ರ ಶಬ್ದವು ಹೇಳೀತು. ಗೀ. ಭಾ. ೧೩-೧೨, ಮಾಂ. ಭಾ. ೭, ಬೃ. ಭಾ. ೨-೩-೬.

2. ಒಂದು ಇಲ್ಲದಲ್ಲಿ ಇನ್ನೊಂದು ಪ್ರವರ್ತಿಸುವದಿಲ್ಲ.

ಪ್ರಯೋಗಿಸುವವರು ಶಬ್ದಗಳನ್ನು ಹೇಗೆಯೇ ಪ್ರಯೋಗಿಸಿದರೂ (ಅವು) ಪ್ರತ್ಯಯಕ್ಕೆ ವಿಷಯವಲ್ಲದ[1] ಹೆಸರಿಟ್ಟು ಹೇಳಲಾಗದ[2] ಅದೃಶ್ಯತ್ವವೇ ಮುಂತಾದ ವಿಶೇಷಣಗಳಿಂದ ಕೂಡಿರುವ[3] ಯಾವ (ಬ್ರಹ್ಮದಿಂದ) ಎಲ್ಲವನ್ನೂ ಬೆಳಗುವ ಶಕ್ತಿಯುಳ್ಳ ಮನಸ್ಸಿನಿಂದೊಡಗೂಡಿಯೇ ಹಿಂತಿರುಗುವವೋ ಆ ಬ್ರಹ್ಮದ ಆನಂದವನ್ನು, ಶ್ರೋತ್ರಿಯನೂ ಅವೃಜಿನನೂ ಅಕಾಮಹತನೂ ಆಗಿ ಏಷಣೆಗಳನ್ನೆಲ್ಲ ಬಿಟ್ಟಿರುವ (ಜ್ಞಾನಿಯ) ಸ್ವರೂಪವೇ[4] ಆಗಿ ವಿಷಯವಿಷಯಿಗಳ ಸಂಬಂಧವಿಲ್ಲದೆ ಸ್ವಾಭಾವಿಕವೂ ನಿತ್ಯವೂ ವಿಂಗಡವಿಂಗಡವಾಗಿಲ್ಲದ್ದೂ ಆಗಿರುವ ಬ್ರಹ್ಮದ ಪರಮಾನಂದವನ್ನು, ಹಿಂದೆ ಹೇಳಿದ ರೀತಿಯಿಂದ ತಿಳಿಯುವವನು[5] ಏತಕ್ಕೂ ಹೆದರುವದಿಲ್ಲ; ಏಕೆಂದರೆ (ಹೆದರಿಕೆಗೆ) ನಿಮಿತ್ತವೇ ಇರುವದಿಲ್ಲ.

(ಭಾಷ್ಯ)

೨೨೧. ನ ಹಿ ತಸ್ಮಾದ್ ವಿದುಷಃ ಅನ್ಯದ್ ವಸ್ತ್ವನ್ತರಮಸ್ತಿ ಭಿನ್ನಂ ಯತೋ ಬಿಭೇತಿ । ಅವಿದ್ಯಯಾ ಯದಾ "ಉದರಮನ್ತರಂ ಕುರುತೇ । ಅಥ ತಸ್ಯ ಭಯಂ ಭವತಿ" (೨-೭) ಇತಿ ಹಿ ಉಕ್ತಮ್ । ವಿದುಷಶ್ಚ ಅವಿದ್ಯಾಕಾರ್ಯಸ್ಯ ತೈಮಿರಿಕದೃಷ್ಟದ್ವಿತೀಯಚನ್ದ್ರವತ್ ನಾಶಾದ್ ಭಯನಿಮಿತ್ತಸ್ಯ "ನ ಬಿಭೇತಿ ಕುತಶ್ಚನ" ಇತಿ ಯುಜ್ಯತೇ । ಮನೋಮಯೇ ಚೋದಾಹೃತೋ ಮನ್ತ್ರಃ । ಮನಸೋ ಬ್ರಹ್ಮವಿಜ್ಞಾನಾತ್ ತತ್ರ ಬ್ರಹ್ಮತ್ವಮ್ ಅಧ್ಯಾರೋಪ್ಯ ತತ್ಸ್ತುತ್ಯರ್ಥಂ "ನ ಬಿಭೇತಿ ಕದಾಚನ" (೨-೪) ಇತಿ ಭಯಮಾತ್ರಂ ಪ್ರತಿಷಿದ್ಧಮ್ । ಇಹ ಅದ್ವೈತವಿಷಯೇ "ನ ಬಿಭೇತಿ ಕುತಶ್ಚನ" ಇತಿ ಭಯನಿಮಿತ್ತಮೇವ ಪ್ರತಿಷಿಧ್ಯತೇ ॥

---

1. ಬ್ರಹ್ಮವನ್ನು ಅರಿಯುವದೆಂದರೆ (ಅದು) ಅವಿಷಯವೆಂದು ತಿಳಿದುಕೊಳ್ಳುವದೇ.

2 ಪ್ರತ್ಯಯಕ್ಕೆ ವಿಷಯವಲ್ಲದ್ದರಿಂದ ಬ್ರಹ್ಮವು ವಾಕ್ಯಕ್ಕೂ ವಿಷಯವಲ್ಲ; ಅದ್ದರಿಂದ ಬ್ರಹ್ಮವನ್ನು ಅರಿತುಕೊಳ್ಳಬೇಕೆಂದು ಶಾಸ್ತ್ರವು ಕಟ್ಟುಮಾಡುತ್ತದೆ ಎಂಬ ಜ್ಞಾನನಿಯೋಗವಾದವು ಯುಕ್ತಿಬಾಹ್ಯವೆಂದು ವಾರ್ತಿಕದಲ್ಲಿ ಹೇಳಿದೆ.

3. "ಅದೃಶ್ಯೇಽನಾತ್ಮ್ಯೇ" ಎಂಬ (೨-೭) ವಾಕ್ಯದಲ್ಲಿರುವ.

4. ಆನಂದಮೀಮಾಂಸೆಯಲ್ಲಿ ಶ್ರೋತ್ರಿಯ, ಅವೃಜಿನ, ಅಕಾಮಹತ_ಎಂದು ಮತ್ತೆ ಮತ್ತೆ ಹೇಳಿರುವದು ವಿರಕ್ತನಾದ ಜ್ಞಾನಿಯ ಸ್ವರೂಪವೇ ಆನಂದವೆಂದು ತಿಳಿಸುವದಕ್ಕೆ.

5. ಉಪಾಧಿಯಿಂದ ತೋರುವ ಹೆಚ್ಚುಕಡಿಮೆಗಳನ್ನು ಬಿಟ್ಟು, ಬ್ರಹ್ಮಾನಂದವು ತನ್ನ ಸ್ವರೂಪವೇ ಎಂದು ತಿಳಿಯುವವನು.

(ಭಾಷ್ಯಾರ್ಥ)

ಆ ಜ್ಞಾನಿಗಿಂತ ಮತ್ತೊಂದಾದ[1] (ತಾನೇ) ಬೇರೆಯಾಗಿರುವ[2] ಇನ್ನು ಯಾವ ವಸ್ತುವೂ ಇಲ್ಲವಷ್ಟೆ; ಹಾಗಿದ್ದರೆ (ಅವನು) ಅದಕ್ಕೆ ಹೆದರುತ್ತಾನೆ (ಎಂದಾದೀತು). ಅವಿದ್ಯೆಯಿಂದ ಯಾವಾಗ "ಸ್ವಲ್ಪವಾದರೂ ಭೇದವನ್ನು ಮಾಡಿಕೊಳ್ಳುವನೋ ಆಗ ಅವನಿಗೆ ಭಯವುಂಟಾಗುತ್ತದೆ" (೨-೭) ಎಂದಲ್ಲವೆ, ಹಿಂದೆ ಹೇಳಿದೆ? ಜ್ಞಾನಿಗೋ ಎಂದರೆ ಅವಿದ್ಯೆಯ ಕಾರ್ಯವಾದ ಭಯಕಾರಣವು[3] ಪರೆಗಣ್ಣಿನವನು ಕಾಣುತ್ತಿದ್ದ ಎರಡನೆಯ ಚಂದ್ರನಂತೆ ನಾಶವಾಗಿರುವದರಿಂದ "(ಅವನು) ಏತಕ್ಕೂ ಹೆದರುವದಿಲ್ಲ" ಎಂಬುದು ಯುಕ್ತವಾಗುತ್ತದೆ. ಈ) ಮಂತ್ರವನ್ನು ಮನೋಮಯನ ವಿಷಯದಲ್ಲಿಯೂ ಉದಾಹರಿಸಿತ್ತು. ಮನಸ್ಸು ಬ್ರಹ್ಮಜ್ಞಾನಕ್ಕೆ ಸಾಧನವಾಗಿರುವದರಿಂದ[4] ಅದರಲ್ಲಿ ಬ್ರಹ್ಮಭಾವವನ್ನು ಕಲ್ಪಿಸಿ ಅದನ್ನು ಹೊಗಳುವದಕ್ಕಾಗಿ "ಎಂದಿಗೂ ಹೆದರುವದಿಲ್ಲ" (೨-೪) ಎಂದು ಭಯವನ್ನು ಮಾತ್ರ ಅಲ್ಲಗಳೆದಿತ್ತು.[5] ಇಲ್ಲಿ ಅದ್ವೈತವನ್ನು ಕುರಿತು (ಹೇಳುತ್ತಿರುವದರಿಂದ) "ಏತಕ್ಕೂ ಹೆದರುವದಿಲ್ಲ" ಎಂದು ಭಯದ ಕಾರಣವನ್ನೇ[6] ಇಲ್ಲವೆಂದಿರುತ್ತದೆ.

## ಜ್ಞಾನಿಗೆ ಭಯನಿಮಿತ್ತವಿಲ್ಲವೆಂಬುದು ಹೇಗೆ?

(ಭಾಷ್ಯ)

೨೨೨. ನನು ಅಸ್ತಿ ಭಯನಿಮಿತ್ತಂ ಸಾಧ್ವಕರಣಮ್ ಪಾಪಕ್ರಿಯಾ ಚ ನೈವಮ್ ? ಕಥಮಿತಿ ? ಉಚ್ಯತೇ–

(ಭಾಷ್ಯಾರ್ಥ)

(ಆಕ್ಷೇಪ) :—ಪುಣ್ಯಕರ್ಮವನ್ನು ಮಾಡದಿರುವದು, ಪಾಪ(ಕರ್ಮವನ್ನು) ಮಾಡಿರುವದು–ಎಂಬ ಭಯನಿಮಿತ್ತವು ಇದೆಯಲ್ಲ!

---

1. ವಿಲಕ್ಷಣವಾದ.

2. ನಾಮರೂಪಗಳು ಆತ್ಮನಿಗಿಂತ ವಿಲಕ್ಷಣವಾಗಿದ್ದರೂ ಅವನಿಗಿಂತ ಭಿನ್ನವಲ್ಲ; ನೊರೆಯು ನೀರೇ ಆಗಿರುವಂತೆ ಅವೂ ಆತ್ಮನೇ ಆಗಿರುತ್ತವೆ.

3. ತನಗಿಂತ ಬೇರೆಯಾದ ಈಶ್ವರ, ಧರ್ಮಾಧರ್ಮ-ಮುಂತಾದದ್ದು.

4. ಸಂಸ್ಕಾರವನ್ನು ಹೊಂದಿದ ಮನಸ್ಸಿನಿಂದಲೇ ಬ್ರಹ್ಮವನ್ನು ತಿಳಿದುಕೊಳ್ಳಬೇಕಾದ್ದರಿಂದ.

5. ಸಮಷ್ಟಿಮನಸ್ಸನ್ನು ಬ್ರಹ್ಮವೆಂದು ತಿಳಿದಾತನು ಉತ್ತಮವಾದ ಜ್ಞಾನವನ್ನು ಪಡೆಯುತ್ತಾನಾದ್ದರಿಂದ ಮಿಕ್ಕವರಂತೆ ಹೆದರುವದಿಲ್ಲ ಎಂದು ಹೇಳಿತ್ತು.

6. ಆತ್ಮನಿಗಿಂತ ಬೇರೆಯಾದ ಹೆದರಿಕೆಯಾಗಲಿ ಹೆದರಿಕೆಯ ನಿಮಿತ್ತವಾಗಲಿ ಇಲ್ಲದ್ದರಿಂದ ಹೆದರುವದಿಲ್ಲ ಎಂದು ಹೆದರಿಕೆಯ ಮೂಲಕಾರಣವನ್ನೇ ಕಿತ್ತು ಹಾಕಿದೆ.

(ಪರಿಹಾರ) :—ಹಾಗಲ್ಲ. ಅದು ಹೇಗೆ? ಎಂದರೆ (ಶ್ರುತಿ) ಹೇಳುತ್ತದೆ :—
**ಏತಗ್ಂ ಹ ವಾವ ನ ತಪತಿ । ಕಿಮಹಗ್ಂ ಸಾಧು ನಾಕರವಮ್।
ಕಿಮಹಂ ಪಾಪಮಕರವಮಿತಿ । ಸ ಯ ಏವಂ ವಿದ್ವಾನೇತೇ
ಆತ್ಮಾನಗ್ಂ ಸ್ಪೃಣುತೇ । ಉಭೇ ಹ್ಯೇವೈಷ ಏತೇ ಆತ್ಮಾ
ನಗ್ಂ ಸ್ಪೃಣುತೇ। ಯ ಏವಂ ವೇದ ॥ ೨ ॥**

೨. "ನಾನು ಒಳ್ಳೆಯದನ್ನೇಕೆ ಮಾಡಲಿಲ್ಲ? ನಾನು ಪಾಪವನ್ನೇಕೆ ಮಾಡಿದೆನು ?" ಎಂಬ (ಯೋಚನೆಯು) ಇವನನ್ನು ಸುಡುವದೇ ಇಲ್ಲ, ಯಾವನು ಹೀಗೆ ಅರಿತುಕೊಂಡಿರುವನೋ ಅವನು ಈ ಎರಡನ್ನೂ ಆತ್ಮನನ್ನಾಗಿ ಮಾಡಿಕೊಂಡಿರುತ್ತಾನೆ. ಯಾವನು ಹೀಗೆಂದು ತಿಳಿಯುವನೋ ಅವನು ಈ ಎರಡನ್ನೂ ಆತ್ಮನನ್ನಾಗಿಯೇ ಮಾಡಿಕೊಳ್ಳುತ್ತಾನಲ್ಲವೆ ?

(ಭಾಷ್ಯ)

೨೨೩. ಏತಂ ಯಥೋಕ್ತಮ್ ಏವಂವಿದಂ ಹ ವಾವ ಇತ್ಯವಧಾರಣಾರ್ಥೌ । ನ ತಪತಿ ನೋದ್ವೇಜಯತಿ ನ ಸಂತಾಪಯತಿ । ಕಥಂ ಪುನಃ ಸಾಧ್ವಕರಣಂ ಪಾಪಕ್ರಿಯಾ ಚ ನ ತಪತಿ ಇತಿ ? ಉಚ್ಯತೇ। ಕಿಂ ಕಸ್ಮಾತ್ ಸಾಧು ಶೋಭನಂ ಕರ್ಮ ನಾಕರವಮ್ ನ ಕೃತವಾನ್ ಅಸ್ಮಿ ? ಇತಿ ಪಶ್ಚಾತ್ ಸನ್ತಾಪೋ ಭವತಿ ಆಸನ್ನೇ ಮರಣಕಾಲೇ । ತಥಾ ಕಿಂ ಕಸ್ಮಾತ್ ಪಾಪಂ ಪ್ರತಿಷಿದ್ಧಂ ಕರ್ಮ ಅಕರವಂ ಕೃತವಾನ್ ಅಸ್ಮಿ ? ಇತಿ ಚ ನರಕಪತನಾದಿದುಃಖಭಯಾತ್ ತಾಪೋ ಭವತಿ। ತೇ ಏತೇ ಸಾಧ್ವಕರಣಪಾಪಕ್ರಿಯೇ ಏವಮ್ ಏನಂ ನ ತಪತಃ, ಯಥಾ ಅವಿದ್ವಾಂಸಂ ತಪತಃ ॥

(ಭಾಷ್ಯಾರ್ಥ)

ಇವನನ್ನು ಎಂದರೆ ಹಿಂದೆ ಹೇಳಿದಂತೆ ಈ ರೀತಿಯಲ್ಲಿ ಅರಿತುಕೊಂಡಾತನನ್ನು 'ಹ' 'ವಾವ' (ಏ) ಎಂಬಿವೆರಡೂ ಅವಧಾರಣೆಯನ್ನು ತಿಳಿಸುತ್ತವೆ. ತಪಿಸುವದಿಲ್ಲ, ಕಳವಳಪಡಿಸುವದಿಲ್ಲ, ಬೇಗುದಿಗೊಳಿಸುವದಿಲ್ಲ. ಪುಣ್ಯವನ್ನು ಮಾಡದಿರುವದಾಗಲಿ ಪಾಪವನ್ನು ಮಾಡಿರುವದಾಗಲಿ ಹೇಗೆಂದು ತಪಿಸುವದಿಲ್ಲ?–ಎಂದರೆ (ಶ್ರುತಿ) ಹೇಳುತ್ತದೆ: ಏತಕ್ಕೆ, ಯಾವಕಾರಣದಿಂದ, ಒಳ್ಳೆಯದನ್ನು ಎಂದರೆ ಪುಣ್ಯಕರ್ಮವನ್ನು (ನಾನು) ಮಾಡಲಿಲ್ಲ, ಮಾಡಿದವನಾಗಲಿಲ್ಲ?–ಎಂದು ಸಾಯುವ ಕಾಲವು ಹತ್ತಿರವಾಗಲು ಪಶ್ಚಾತ್ತಾಪವಾಗುತ್ತದೆ. ಹಾಗೂ ಏತಕ್ಕೆ ಯಾವ ಕಾರಣದಿಂದ ಪಾಪವನ್ನು ಎಂದರೆ (ಶಾಸ್ತ್ರದಲ್ಲಿ) ಮಾಡಬಾರದೆಂದಿರುವ ಕರ್ಮವನ್ನು ಮಾಡಿರುವೆನು, ಮಾಡಿದವನಾಗಿರುವೆನು?–ಎಂದೂ ನರಕಕ್ಕೆ ಬೀಳುವದೇ ಮುಂತಾದ

ದುಃಖದ ಅಂಜಿಕೆಯಿಂದ ತಾಪವಾಗುತ್ತದೆ. ಪುಣ್ಯವನ್ನು ಮಾಡದಿರುವದು, ಪಾಪವನ್ನು ಮಾಡಿರುವದು–ಎಂಬ ಆ ಈ ಎರಡೂ ಅಜ್ಞನನ್ನು ಹೇಗೆ ತಪಿಸುವವೋ ಹಾಗೆ ಇವನನ್ನು ತಪಿಸುವದಿಲ್ಲ.

(ಭಾಷ್ಯ)

೨೨೪. ಕಸ್ಮಾತ್ ಪುನರ್ವಿದ್ವಾಂಸಂ ನ ತಪತಃ ಇತಿ? ಉಚ್ಯತೇ । ಸ ಯ ಏವಂವಿದ್ವಾನ್ ಏತೇ ಸಾಧ್ವಸಾಧುನೀ ತಾಪಹೇತೂ ಇತಿ ಆತ್ಮಾನಂ ಸ್ಪೃಣುತೇ ಪ್ರೀಣಾತಿ ಬಲಯತಿ ವಾ । ಪರಮಾತ್ಮಭಾವೇನ ಉಭೇ ಪಶ್ಯತಿ ಇತ್ಯರ್ಥಃ । ಉಭೇ ಪುಣ್ಯಪಾಪೇ ಹಿ ಯಸ್ಮಾತ್ ಏವಮ್ ಏಷ ವಿದ್ವಾನ್ ಏತೇ ಆತ್ಮಾನಮ್ ಆತ್ಮರೂಪೇಣೈವ ಪುಣ್ಯಪಾಪೇ ಸ್ವೇನ ವಿಶೇಷರೂಪೇಣ ಶೂನ್ಯೇ ಕೃತ್ವಾ ಆತ್ಮಾನಂ ಸ್ಪೃಣುತೇ ಏವ । ಕಃ? ಯಃ ಏವಂ ವೇದ ಯಥೋಕ್ತಮ್ ಅದ್ವೈತಮ್ ಆನನ್ದಂ ಬ್ರಹ್ಮ ವೇದ । ತಸ್ಯ ಆತ್ಮಭಾವೇನ ದೃಷ್ಟೇ ಪುಣ್ಯಪಾಪೇ ನಿರ್ವೀರ್ಯೇ ಅತಾಪಕೇ ಜನ್ಮಾನ್ತರಾರಮ್ಭಕೇ ನ ಭವತಃ ॥

(ಭಾಷ್ಯಾರ್ಥ)

ಅದೇಕೆ ಜ್ಞಾನಿಯನ್ನು (ಅವೆರಡೂ)ತಪಿಸುವದಿಲ್ಲ? ಎಂದರೆ (ಶ್ರುತಿ) ಹೇಳುತ್ತದೆ; ಯಾವಾತನು ಹೀಗೆಂದು ಅರಿತುಕೊಳ್ಳುವನೋ ಆತನು ತಾಪಕ್ಕೆ ಕಾರಣವಾಗಿರುವ ಈ ಒಳ್ಳೆಯ ಮತ್ತು ಕೆಟ್ಟ (ಕರ್ಮ)ಗಳನ್ನು ಹೀಗೆಂದು (ಅರಿತುಕೊಂಡು[1] ತನ್ನನ್ನು ಸ್ಪೃಣುತೇ ಸಂತೋಷಗೊಳಿಸಿಕೊಳ್ಳುತ್ತಾನೆ; ಅಥವಾ ಬಲಪಡಿಸಿಕೊಳ್ಳುತ್ತಾನೆ.[2] ಪರಮಾತ್ಮರೂಪದಿಂದ ಇವೆರಡನ್ನೂ ಕಾಣುತ್ತಾನೆ ಎಂದರ್ಥ. ಈ ಪುಣ್ಯ, ಪಾಪ–ಎರಡನ್ನೂ ಈ ಜ್ಞಾನಿಯು ಹೀಗೆ ತಮ್ಮ ವಿಶೇಷರೂಪದಿಂದ[3] ಇಲ್ಲವಾಗಿ ಮಾಡಿಕೊಂಡು ಆತ್ಮನನ್ನು, ಆತ್ಮರೂಪದಿಂದಲೇ, (ಕಂಡುಕೊಂಡು) ತನ್ನನ್ನು ಸಂತೋಷಗೊಳಿಸಿಕೊಂಡೇ ತೀರುತ್ತಾನೆ. ಅಲ್ಲವೆ? (ಆದ್ದರಿಂದ ಅವನನ್ನು

---

1. ಅದ್ವಿತೀಯಾನಂದರೂಪವಾದ ಬ್ರಹ್ಮವೇ ನನ್ನ ಆತ್ಮನೆಂದು ಅರಿತುಕೊಂಡು.

2. ಸ್ಪೃ ಪ್ರೀತಿಪಾಲನಯೋಃ ಎಂಬ ಪಾಠದಂತೆ ಸಂತೋಷಗೊಳ್ಳು ಕಾಪಾಡು ಎಂಬುದು ಧಾತುವಿನ ಅರ್ಥವು; ಪ್ರೀತಿಚಲನಯೋಃ ಎಂಬ ಪಾಠದಲ್ಲಿ ಚಲನವೆಂದರೆ ಜೀವನ. ಬಲಯತಿ ಎಂಬುದು ಈ ಎರಡನೆಯ ಅರ್ಥವೆಂದು ಭಾಷ್ಯಕಾರರು ಭಾವಿಸಿರಬಹುದು. ಕರ್ಮವನ್ನೂ ಫಲವನ್ನೂ ಆತ್ಮರೂಪದಿಂದ ಕಾಣುವದರಿಂದ ಜ್ಞಾನಿಗೆ ಹರ್ಷವಾಗುತ್ತದೆ. ಜ್ಞಾನವೇ ಅವನಿಗಿರುವ ಬಲ ಎಂಬುದು ವಾಕ್ಯಾರ್ಥ.

3. ಪುಣ್ಯಪಾಪಗಳ ರೂಪದಿಂದ.

ತಪಿಸುವದಿಲ್ಲ). ಯಾವನು (ಸಂತೋಷಗೊಳಿಸಿಕೊಳ್ಳುತ್ತಾನೆ) ? ಎಂದರೆ ಯಾವನು ಹೀಗೆಂದು ಅರಿತುಕೊಳ್ಳುವನೋ ; ಹಿಂದೆ ಹೇಳಿದ ಅದ್ವೈತವಾದ ಆನಂದ (ರೂಪ) ವಾದ ಬ್ರಹ್ಮವನ್ನು ತಿಳಿದುಕೊಳ್ಳುವನೋ (ಅವನು) ಆತ್ಮರೂಪದಿಂದ ಕಂಡುಕೊಂಡ ಅವನ ಪುಣ್ಯಪಾಪಗಳೂ (ಫಲವನ್ನು ಕೊಡುವ) ಸಾಮರ್ಥ್ಯವಿಲ್ಲದೆ (ಅವನನ್ನು) ಸಂತಾಪಗೊಳಿಸದೆ (ಇರುತ್ತವೆ), ಜನ್ಮಾಂತರವನ್ನುಂಟುಮಾಡುವವಾಗುವದಿಲ್ಲ. [1]

## ೧೯. ಆನಂದವಲ್ಲಿಯ ಉಪಸಂಹಾರ

**ಇತ್ಯುಪನಿಷತ್** ॥ ೩ ॥

೩. ಇಂತು ಉಪನಿಷತ್ತು.

(**ಭಾಷ್ಯ**)

೨೨೫. ಇತಿ ಇಯಮ್ ಏವಂ ಯಥೋಕ್ತಾ ಅಸ್ಯಾಂ ವಲ್ಲ್ಯಾಂ ಬ್ರಹ್ಮವಿದ್ಯಾ ಉಪನಿಷತ್ ಸರ್ವಾಭ್ಯೋ ವಿದ್ಯಾಭ್ಯಃ ಪರಮರಹಸ್ಯಂ ದರ್ಶಿತಮ್ ಇತ್ಯರ್ಥಃ । ಪರಂ ಶ್ರೇಯಃ ಅಸ್ಯಾಂ ನಿಷಣ್ಣಮ್ ಇತಿ ॥

(**ಭಾಷ್ಯಾರ್ಥ**)

ಇಂತು ಹೀಗೆ ಈ ವಲ್ಲಿಯಲ್ಲಿ ಹಿಂದೆ ಹೇಳಿದ ಈ ಬ್ರಹ್ಮವಿದ್ಯೆಯೆಂಬ ಉಪನಿಷತ್ತು; ಎಂದರೆ ಎಲ್ಲಾ ವಿದ್ಯೆಗಳಿಗಿಂತಲೂ ಹೆಚ್ಚಿನ ರಹಸ್ಯವನ್ನು[2] ತಿಳಿಸಿದ್ದಾಯಿತು. ಇದರಲ್ಲಿ ಅತ್ಯಂತ ಹೆಚ್ಚಿನ ಶ್ರೇಯಸ್ಸು ಇದ್ದುಕೊಂಡಿರುತ್ತದೆ. [3]



---

1. ಕರ್ಮಗಳು ಜ್ಞಾನಿಗೆ ಅಂಟುವದಿಲ್ಲವೆಂಬ ವೇದಾಂತಸಿದ್ಧಾಂತವನ್ನು ಸೂ. ಭಾ. ೪-೧-೧೩ ರಿಂದ ೧೯ ರ ವರೆಗಿನ ಸೂತ್ರಗಳಲ್ಲಿ ಸ್ಪಷ್ಟಗೊಳಿಸಿದೆ

2. ಉಪನಿಷತ್ತು ಎಂಬ ಶಬ್ದಕ್ಕೆ ರಹಸ್ಯವು ಎಂದರ್ಥ ಗೀ. ೯-೨ ರಲ್ಲಿರುವ 'ರಾಜಗುಹ್ಯಮ್' ಎಂಬ ಶಬ್ದದ ಭಾಷ್ಯವನ್ನು ನೋಡಿ.

3. ಉಪನಿಷತ್ ಎಂಬ ಶಬ್ದದ ವ್ಯುತ್ಪತ್ತಿಯನ್ನು ಇಲ್ಲಿ ಇನ್ನೊಂದು ಸಲ ಸೂಚಿಸಿದೆ. ಶೀಕ್ಷಾವಲ್ಲಿಯ ಸಂಬಂಧಭಾಷ್ಯವನ್ನು ನೋಡಿರಿ.

# ಭೃಗುವಲ್ಲಿ

## ಈ ವಲ್ಲಿಯ ಸಂಬಂಧ

(ಭಾಷ್ಯ)

೨೨೬. ಸತ್ಯಂ ಜ್ಞಾನಮನನ್ತಂ ಬ್ರಹ್ಮ ಆಕಾಶಾದಿಕಾರ್ಯಮ್ ಅನ್ನಮಯಾನ್ತಂ ಸೃಷ್ಟ್ವಾ ತದೇವ ಅನುಪ್ರವಿಷ್ಟಂ ವಿಶೇಷವದಿವ ಉಪಲಭ್ಯಮಾನಂ ಯಸ್ಮಾತ್ ತಸ್ಮಾತ್ ಸರ್ವಕಾರ್ಯವಿಲಕ್ಷಣಮ್ ಅದೃಶ್ಯಾದಿ(ಶ್ಯತ್ವಾದಿ)ಧರ್ಮಕಮೇವ ಆನನ್ದಂ 'ತದೇವಾಹಮ್' ಇತಿ ವಿಜಾನೀಯಾತ್ । ಅನುಪ್ರವೇಶಸ್ಯ ತದರ್ಥತ್ವಾತ್ । ತಸ್ಯೈವಂ ವಿಜಾನತಃ ಶುಭಾಶುಭೇ ಕರ್ಮಣೀ ಜನ್ಮಾನ್ತರಾರಮ್ಭಕೇ ನ ಭವತಃ ಇತ್ಯೇವಮ್ ಆನನ್ದವಲ್ಲ್ಯಾಂ ವಿವಕ್ಷಿತೋಽರ್ಥಃ । ಪರಿಸಮಾಪ್ತಾ ಚ ಬ್ರಹ್ಮವಿದ್ಯಾ । ಅತಃ ಪರಂ ಬ್ರಹ್ಮವಿದ್ಯಾಸಾಧನಂ ತಪೋ ವಕ್ತವ್ಯಮ್, ಅನ್ನಾದಿವಿಷಯಾಣಿ ಚೋಪಾಸನಾನ್ಯನುಕ್ತಾನಿ । ಇತ್ಯತಃ ಇದಮ್ ಆರಭ್ಯತೇ—

(ಭಾಷ್ಯಾರ್ಥ)

ಸತ್ಯವೂ ಜ್ಞಾನವೂ ಅನಂತವೂ ಆದ ಬ್ರಹ್ಮವು ಆಕಾಶವು ಮೊದಲಾಗಿ ಅನ್ನಮಯದವರೆಗಿನ ಕಾರ್ಯವನ್ನು ಸೃಷ್ಟಿಸಿ ಅದನ್ನೇ ಒಳಹೊಕ್ಕು ವಿಶೇಷಗಳಿಂದ ಕೂಡಿಕೊಂಡಿರುವಂತೆ ಕಾಣುತ್ತಿರುವದಷ್ಟೆ. ಆದ್ದರಿಂದ ಎಲ್ಲಾ ಕಾರ್ಯಗಳಿಗಿಂತಲೂ ಬೇರೆಯ ಸ್ವಭಾವದ್ದಾಗಿ ಅದೃಶ್ಯತ್ವವೇ ಮುಂತಾದ ಧರ್ಮವುಳ್ಳ ಆನಂದವನ್ನೇ "ಅದೇ ನಾನು" ಎಂದು ಅರಿತುಕೊಳ್ಳಬೇಕು ; ಏಕೆಂದರೆ ಒಳಹೊಕ್ಕನೆಂದು (ಶ್ರುತಿಯಲ್ಲಿ ಹೇಳಿರುವದು) ಅದಕ್ಕಾಗಿಯೇ. ಹೀಗೆಂದು ಅರಿತುಕೊಳ್ಳುವ ಆ (ಜ್ಞಾನಿಗೆ) ಪುಣ್ಯಪಾಪಗಳೆಂಬ ಕರ್ಮಗಳು ಮತ್ತೊಂದು ಜನ್ಮಕ್ಕೆ ಕಾರಣವಾಗುವದಿಲ್ಲ ಎಂಬುದೇ **ಆನಂದವಲ್ಲಿಯಲ್ಲಿ (ಮುಖ್ಯವಾಗಿ) ಹೇಳ ಹೊರಟಿದ್ದ ವಿಷಯವು.** (ಇಲ್ಲಿಗೆ) ಬ್ರಹ್ಮವಿದ್ಯೆಯೂ ಮುಗಿಯಿತು. ಇಲ್ಲಿಂದ ಮುಂದೆ ಬ್ರಹ್ಮವಿದ್ಯೆಗೆ ಸಾಧನವಾದ ತಪಸ್ಸನ್ನೂ[1] (ಹಿಂದೆ) ಹೇಳದಿರುವ ಅನ್ನಾದಿವಿಷಯದ ಉಪಾಸನೆಗಳನ್ನೂ[2] ಹೇಳಬೇಕಾಗಿದೆ ; ಆದ್ದರಿಂದ ಇದನ್ನು ಪ್ರಾರಂಭಿಸಿರುತ್ತದೆ.

---

1. ಬ್ರಹ್ಮದ ಸ್ವರೂಪ, ಅದನ್ನು ಅರಿತುಕೊಳ್ಳುವದರಿಂದ ಆಗುವ ಫಲ-ಇವುಗಳನ್ನು ಹೇಳಿದ್ದಾಯಿತು. ಈಗ ಅದನ್ನು ಅರಿತುಕೊಳ್ಳುವದಕ್ಕೆ ಉಪಾಯವನ್ನು ಹೇಳುತ್ತದೆ.

2. ಬ್ರಹ್ಮವಿದ್ಯೆಗೆ ದ್ವಾರವಾಗಿ ಅನ್ನಾದಿಗಳ ಉಪಾಸನೆ, ಮತ್ತು ಬ್ರಹ್ಮದ ಹಲವು ಬಗೆಯ ಉಪಾಸನೆಗಳು_ಇವನ್ನು ಹೇಳಬೇಕಾಗಿದೆ.

# ೧. ಬ್ರಹ್ಮಜ್ಞಾನಕ್ಕೆ ಸಾಧನ

## ಕಥೆಯ ಸಂಬಂಧ

**ಭೃಗುರ್ವೈ ವಾರುಣಿಃ । ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ[1]॥ ೧ ॥**

೧. ಭೃಗುವೆಂಬ ವಾರುಣಿ ಇದ್ದನಷ್ಟೆ, (ಅವನು) ತಂದೆಯಾದ ವರುಣನನ್ನು "ಭಗವಂತನೆ, ಬ್ರಹ್ಮವನ್ನು ಹೇಳಿಕೊಡು" ಎಂದು ಸಮೀಪಿಸಿದನು.

(ಭಾಷ್ಯ)

೨೨೭. ಆಖ್ಯಾಯಿಕಾ ವಿದ್ಯಾಸ್ತುತಯೇ, ಪ್ರಿಯಾಯ ಪುತ್ರಾಯ ಪಿತ್ರಾ ಉಕ್ತಾ ಇತಿ । ಭೃಗುರ್ವೈ ವಾರುಣಿಃ । ವೈಶಬ್ದಃ ಪ್ರಸಿದ್ಧಾನುಸ್ಮಾರಕಃ । ಭೃಗುಃ ಇತ್ಯೇವಂನಾಮಾ ಪ್ರಸಿದ್ಧಃ ಅನುಸ್ಮಾರ್ಯತೇ । ವಾರುಣಿಃ ವರುಣಸ್ಯ ಅಪತ್ಯಂ ವಾರುಣಿಃ । ವರುಣಂ ಪಿತರಂ ಬ್ರಹ್ಮ ವಿಜಿಜ್ಞಾಸುಃ ಉಪಸಸಾರ ಉಪಗತವಾನ್ । "ಅಧೀಹಿ ಭಗವೋ ಬ್ರಹ್ಮ" ಇತ್ಯನೇನ ಮನ್ತ್ರೇಣ । ಅಧೀಹಿ ಅಧ್ಯಾಪಯ ಕಥಯ ಇತ್ಯರ್ಥಃ[2] ॥

(ಭಾಷ್ಯಾರ್ಥ)

ಕಥೆಯ(ನ್ನು ಹೇಳಿರುವದು) ಪ್ರಿಯನಾದ ಮಗನಿಗೆ ತಂದೆಯು ಹೇಳಿದ್ದು ಎಂದು ವಿದ್ಯೆಯನ್ನು ಹೊಗಳುವದಕ್ಕೆ.[3] ('ಭಗುರ್ವೈ ವಾರುಣಿಃ' ಎಂಬಲ್ಲಿ) ವೈ (ಅಷ್ಟೆ) ಎಂಬ ಮಾತು ಪ್ರಸಿದ್ಧವಾದದ್ದನ್ನು ಅನುವಾದಮಾಡಿ ನೆನಪಿಗೆ ಕೊಡುವದಕ್ಕೆ (ಬಂದಿದೆ). ಭೃಗು ಎಂಬ ಹೆಸರಿನಿಂದ ಪ್ರಸಿದ್ಧನಾದ (ಪುರುಷನನ್ನು)

---

1. ಬ್ರಹ್ಮವಲ್ಲಿಯ ಕೊನೆಯಲ್ಲಿಯೂ ಭೃಗುವಲ್ಲಿಯ ಮೊದಲಿನಲ್ಲಿಯೂ "ಸಹ ನಾವವತು" ಎಂಬ ಶಾಂತಿಯನ್ನು ಹೇಳಿಕೊಳ್ಳುವ ರೂಢಿಯು ವೈದಿಕರಲ್ಲಿದೆ; ಆದರೆ ಇದಕ್ಕೆ ಭಾಷ್ಯದಲ್ಲಿ, ವಾರ್ತಿಕದಲ್ಲಿ ಅಥವಾ ಸಾಯಣಭಾಷ್ಯದಲ್ಲಿ ಆಧಾರವು ಕಾಣುತ್ತಿಲ್ಲ. ಪೀಠಿಕೆಯನ್ನು ನೋಡಿ.

2. ಈ ವಾಕ್ಯವು ಅ॥ ಪಾಠದಲ್ಲಿಲ್ಲ.

3. ಕರ್ಮವನ್ನು ಹೇಳುವ ವೇದವಾಕ್ಯಗಳ ಬಳಿಯಲ್ಲಿರುವ ಕಥೆಗಳು ಹೇಗೆ ಕರ್ಮವಿಧಿಯನ್ನು ಹೊಗಳುವವೋ ಹಾಗೆಯೇ ವಿದ್ಯಾಪ್ರಕರಣದಲ್ಲಿರುವ ಕಥೆಗಳು ವಿದ್ಯೆಯನ್ನು ಹೊಗಳುವ ಅರ್ಥವಾದಗಳಾಗಿರುತ್ತವೆ. ಸೂ. ಭಾ ೩-೪-೨೪.

ಅನುವಾದದಿಂದ (ಇಲ್ಲಿ) ನೆನಪಿಗೆ ತರಲಾಗಿದೆ. 'ವಾರುಣಿಃ' ವರುಣನ ಮಗನು ವಾರುಣಿಯು. (ಅವನು) ಬ್ರಹ್ಮವನ್ನು ವಿಶೇಷವಾಗಿ ಅರಿತುಕೊಳ್ಳಬೇಕೆಂಬ ಇಚ್ಛೆಯಿಂದ "ಅಧೀಹಿ ಭಗವೋ ಬ್ರಹ್ಮ" (ಭಗವಂತನೆ, ಬ್ರಹ್ಮವನ್ನು ಹೇಳಿಕೊಡು) ಎಂಬ **ಮಂತ್ರ**ದಿಂದ[1] ತಂದೆಯಾದ ವರುಣನನ್ನು ಬಳಿಸಾರಿದನು.[2] ಅಧೀಹಿ ಎಂದರೆ ಅಧ್ಯಾಪಯ, ಹೇಳಿಕೊಡು ಎಂದರ್ಥ.[3]

**ತಸ್ಮಾ ಏತತ್ ಪ್ರೋವಾಚ । ಅನ್ನಂ ಪ್ರಾಣಂ ಚಕ್ಷುಃ ಶ್ರೋತ್ರಂ ಮನೋ ವಾಚಮಿತಿ ॥ ೨ ॥**

೨. ಅವನಿಗೆ "ಅನ್ನ, ಪ್ರಾಣ, ಚಕ್ಷುಸ್ಸು, ಶ್ರೋತ್ರ, ಮನಸ್ಸು, ವಾಕ್ಕು" ಎಂಬುದನ್ನು ಹೇಳಿದನು.

(ಭಾಷ್ಯ)

೨೨೮. ಸ ಚ ಪಿತಾ ವಿಧಿವತ್ ಉಪಸನ್ನಾಯ ತಸ್ಮೈ ಪುತ್ರಾಯ **ಏತತ್** ವಚನಮ್ ಪ್ರೋವಾಚ । "ಅನ್ನಂ ಪ್ರಾಣಂ ಚಕ್ಷುಃ ಶ್ರೋತ್ರಂ ಮನೋ ವಾಚಮ್" **ಇತಿ** । ಅನ್ನಂ ಶರೀರಮ್, ತದಭ್ಯನ್ತರಂ ಚ ಪ್ರಾಣಮ್ ಅತ್ತಾರಮ್, ಉಪಲಬ್ಧಿಸಾಧನಾನಿ ಚಕ್ಷುಃ, ಶ್ರೋತ್ರಮ್, ಮನಃ, ವಾಚಮ್ ಇತಿ ಏತಾನಿ ಬ್ರಹ್ಮೋಪಲಬ್ಧೌ ದ್ವಾರಾಣಿ ಉಕ್ತವಾನ್ ॥

(ಭಾಷ್ಯಾರ್ಥ)

ಆ ತಂದೆಯುಕೂಡ ವಿಧ್ಯುಕ್ತವಾಗಿ ತನ್ನಬಳಿಗೆ ಬಂದಿರುವ ಆ ಮಗನಿಗೆ ಈ (ಮಾತನ್ನು)[4] ಹೇಳಿದನು. ಅನ್ನ, ಪ್ರಾಣ, ಚಕ್ಷುಸ್ಸು, ಶ್ರೋತ್ರ, ಮನಸ್ಸು, ವಾಕ್ಕು".

1. ತೈತ್ತಿರೀಯರು ಬ್ರಹ್ಮವಿದ್ಯೆಗೆಂದು ಗುರುವಿನ ಬಳಿಗೆ ಶಿಷ್ಯರಾಗಿ ಬರುವಾಗ ಹೇಳುವ ಮಂತ್ರವಿದು.

2. 'ಶಿಷ್ಯನಾಗಿ ಬಂದನು' ಎಂದದ್ದರಿಂದ ಮಗನುಕೂಡ ವಿದ್ಯೆಯನ್ನು ಹೇಳುವ ತಂದೆಯನ್ನು ಗುರುವಿನಂತೆ ವಿಶೇಷವಾಗಿ ಸತ್ಕರಿಸಬೇಕು ಎಂಬ ಆಚಾರವು ಸೂಚಿತವಾಗಿದೆ.

3. ಈ ವಾಕ್ಯವು ಕೆಲವು ಕೋಶಗಳಲ್ಲಿಮಾತ್ರ ಕಂಡುಬರುತ್ತದೆ 'ಅಧೀಹಿ' ಎಂಬ ಮಾತಿಗೆ ಅಧ್ಯಯನಮಾಡು ಎಂದು ಅರ್ಥವಲ್ಲ; ಇದರಲ್ಲಿ (ಪ್ರೇರಣೆಯನ್ನು ಹೇಳುವ) ಣಿಜರ್ಥವೂ ಅಡಗಿರುತ್ತದೆ ಎಂದು ಭಾವ.

4. ಏತತ್ ಎಂದರೆ ಈ ಮಾತನ್ನು ಎಂದು ಅರ್ಥಮಾಡುವಾಗ "ಪ್ರಾಣಮ್" ಎಂಬುದನ್ನು "ಪ್ರಾಣಃ" ಎಂದು ಪ್ರಥಮಾವಿಭಕ್ತಿಗೆ ತಿರುಗಿಸಿಕೊಳ್ಳಬೇಕು ಅಥವಾ ಇವುಗಳನ್ನು ವಿಚಾರಿಸು ಎಂಬರ್ಥದ ಕ್ರಿಯೆಯನ್ನು ಅಧ್ಯಾಹಾರಮಾಡಿಕೊಂಡರೆ ದ್ವಿತೀಯಾವಿಭಕ್ತಿಯೇ ಇರಬಹುದು.

ಅನ್ನವನ್ನು ಎಂದರೆ ಶರೀರವನ್ನು[1], ಅದರ ಒಳಗೆ ಇರುವ ಅತ್ತೃವಾದ[2] ಪ್ರಾಣವನ್ನು ಚಕ್ಷುಸ್ಸನ್ನು, ಶ್ರೋತ್ರವನ್ನು, ಮನಸ್ಸನ್ನು, ವಾಕ್ಕನ್ನು–ಬ್ರಹ್ಮವನ್ನು ಅರಿತುಕೊಳ್ಳುವದಕ್ಕೆ (ಉಪಯೋಗವಾಗುವ) ಈ ದ್ವಾರಗಳನ್ನು[3] ಹೇಳಿದನು.

## ಬ್ರಹ್ಮಲಕ್ಷಣ

**ತಗ್ಂ ಹೋವಾಚ । ಯತೋ ವಾ ಇಮಾನಿ ಭೂತಾನಿ ಜಾಯನ್ತೇ । ಯೇನ ಜಾತಾನಿ ಜೀವನ್ತಿ । ಯತ್ ಪ್ರಯನ್ತ್ಯಭಿಸಂವಿಶನ್ತಿ । ತದ್ವಿಜಿಜ್ಞಾಸಸ್ವ । ತದ್ಬ್ರಹ್ಮೇತಿ ॥ ೩ ॥**

೩. ಅವನಿಗೆ ಹೇಳಿದನೇನೆಂದರೆ "ಈ ಭೂತಗಳು ಯಾವದರಿಂದಲೇ ಹುಟ್ಟುತ್ತವೆಯೋ ಯಾವದರಿಂದ ಹುಟ್ಟಿ ಜೀವಿಸುತ್ತವೆಯೋ, ಯಾವದನ್ನು ಕುರಿತುಹೋಗಿ ಚೆನ್ನಾಗಿ ಸೇರಿಕೊಳ್ಳುತ್ತವೆಯೋ, ಅದನ್ನು ತಿಳಿಯಲೆಳಸುವವನಾಗು, ಅದು ಬ್ರಹ್ಮವು"

(ಭಾಷ್ಯ)

೨೯೯. ಉಕ್ತ್ವಾ ಚ ದ್ವಾರಭೂತಾಸಿ ಏತಾಸಿ ಅನ್ನಾದೀನಿ ತಂ ಭೃಗುಂ ಹ ಉವಾಚ ಬ್ರಹ್ಮಣೋ ಲಕ್ಷಣಮ್ । ಕಿಂ ತತ್? ಯತಃ ಯಸ್ಮಾತ್ ವಾ ಇಮಾನಿ ಬ್ರಹ್ಮಾದೀನಿ ಸ್ತಮ್ಬಪರ್ಯನ್ತಾಸಿ ಭೂತಾಸಿ ಜಾಯನ್ತೇ। ಯೇನ ಜಾತಾನಿ ಜೀವನ್ತಿ ಪ್ರಾಣಾನ್ ಧಾರಯನ್ತಿ ವರ್ಧನ್ತೇ। ವಿನಾಶಕಾಲೇ ಚ ಯತ್ ಪ್ರಯನ್ತಿ ಯದ್ ಬ್ರಹ್ಮ ಪ್ರತಿಗಚ್ಛನ್ತಿ ಅಭಿಸಂವಿಶನ್ತಿ ತಾದಾತ್ಮ್ಯಮೇವ ಪ್ರತಿಪದ್ಯನ್ತೇ । ಉತ್ಪತ್ತಿಸ್ಥಿತಿಲಯಕಾಲೇಷು ಯದಾತ್ಮತಾಂ ನ ಜಹತಿ ಭೂತಾಸಿ ತದೇತದ್ ಬ್ರಹ್ಮಣೋ ಲಕ್ಷಣಮ್ । ತದ್ ಬ್ರಹ್ಮ ವಿಜಿಜ್ಞಾಸಸ್ವ ವಿಶೇಷೇಣ ಜ್ಞಾತುಮ್ ಇಚ್ಛಸ್ವ (?) । ಯತ್ ಏವಂಲಕ್ಷಣಂ ಬ್ರಹ್ಮ ತತ್ ಅನ್ನಾದಿದ್ವಾರೇಣ ಪ್ರತಿಪದ್ಯಸ್ವ ಇತ್ಯರ್ಥಃ। ಶ್ರುತ್ಯನ್ತರಂ ಚ "ಪ್ರಾಣಸ್ಯ ಪ್ರಾಣಮುತಚಕ್ಷುಷಶ್ಚಕ್ಷುರುತ ಶ್ರೋತ್ರಸ್ಯ ಶ್ರೋತ್ರ

---

1. ಅನ್ನಮಯವೇ ಮುಂತಾದವುಗಳಿಗೆ ಕಾರಣವಾಗಿರುವ ಅನ್ನಾದಿಗಳನ್ನೇ ಇಲ್ಲಿ ತಿಳಿಸುವದಾದರೂ ಶರೀರಾದಿಗಳ ಮೂಲಕ ಆತ್ಮನನ್ನು ತಿಳಿದುಕೊಳ್ಳಬೇಕೆಂಬುದೂ ವಿವಕ್ಷಿತವಾಗಿದೆ.

2. ಪ್ರ. ಭಾ. ೨ನೆಯ ಪ್ರಶ್ನೆ.

3. ಏತತ್ ಎಂದರೆ ಈ ದ್ವಾರವನ್ನು ಎಂಬ ಎರಡನೆಯ ಅರ್ಥವನ್ನು ಇಲ್ಲಿ ಸೂಚಿಸಿದೆ.

ಮನ್ನಸ್ಯಾನ್ನಂ ಮನಸೋ ಯೇ ಮನೋ ವಿದುಸ್ತೇ ನಿಚಿಕ್ಯುರ್ಬ್ರಹ್ಮ ಪುರಾಣ ಮಗ್ರ್ಯಮ್" (ಬೃ. ೪-೪-೧೮) ಇತಿ ಬ್ರಹ್ಮೋಪಲಬ್ಧೌ ದ್ವಾರಾಣ್ಯೇತಾನಿ ಇತಿ ದರ್ಶಯತಿ ||

(ಭಾಷ್ಯಾರ್ಥ)

(ಬ್ರಹ್ಮವನ್ನು ತಿಳಿಯುವದಕ್ಕೆ) ದ್ವಾರವಾಗಿರುವ ಈ ಅನ್ನಾದಿಗಳನ್ನು ಹೇಳಿದ ಬಳಿಕ ಆ ಭೃಗುವನ್ನು ಕುರಿತು ಬ್ರಹ್ಮದ ಲಕ್ಷಣವನ್ನು ಹೇಳಿದನು. ಅದು ಯಾವದು? ಎಂದರೆ: ಯಾವದರಿಂದ ಯಾವ (ಕಾರಣದಿಂದ) ಈ ಬ್ರಹ್ಮನು ಮೊದಲಾಗಿ ಸ್ಥಾವರದವರೆಗಿನ ಪ್ರಾಣಿಗಳು ಹುಟ್ಟುತ್ತವೆಯೋ; ಹುಟ್ಟಿದ ಬಳಿಕ ಯಾವದರಿಂದ ಜೀವಿಸುತ್ತವೆಯೋ ಎಂದರೆ ಪ್ರಾಣವನ್ನು ಧರಿಸಿರುತ್ತವೆಯೋ ಬೆಳೆಯುತ್ತಿರುವವೋ (ಎಂದರ್ಥ); ಮತ್ತು ನಾಶವಾಗುವ ಕಾಲದಲ್ಲಿ ಯಾವದನ್ನು ಕುರಿತು ಹೋಗುತ್ತವೆಯೋ ; ಯಾವ ಬ್ರಹ್ಮದ ಕಡೆಗೆ ನಡೆಯುವವೋ, ಚೆನ್ನಾಗಿ ಸೇರಿಕೊಳ್ಳುತ್ತವೆಯೋ ಎಂದರೆ ಅದರ ಸ್ವರೂಪವನ್ನೇ ಹೊಂದುತ್ತಿರುವವೋ; ಹುಟ್ಟು, ಇರವು, ನಾಶ–(ಈ) ಕಾಲಗಳಲ್ಲಿ ಯಾವದರ ಸ್ವರೂಪವನ್ನು ಭೂತಗಳು ಬಿಡದಿರುವವೋ ಆ ಇದೇ ಬ್ರಹ್ಮದ ಲಕ್ಷಣ.[1] ಆ ಬ್ರಹ್ಮವನ್ನು ವಿಜಿಜ್ಞಾಸೆಮಾಡು, ಎಂದರೆ ವಿಶೇಷದಿಂದ ಅರಿತುಕೊಳ್ಳಲು ಇಚ್ಛಿಸು, ಯಾವದು ಈ ಲಕ್ಷಣದ ಬ್ರಹ್ಮವೋ ಅದನ್ನು ಅನ್ನವೇ ಮುಂತಾದ ದ್ವಾರದಿಂದ ಅರಿತುಕೊ ಎಂದರ್ಥ. ಮತ್ತೊಂದು ಶ್ರುತಿಯೂ "ಪ್ರಾಣದ ಪ್ರಾಣವನ್ನೂ ಚಕ್ಷುವಿನ ಚಕ್ಷುಸ್ಸನ್ನೂ ಶ್ರೋತ್ರದ ಶ್ರೋತ್ರವನ್ನೂ ಅನ್ನದ ಅನ್ನವನ್ನೂ ಮನಸ್ಸಿನ ಮನಸ್ಸನ್ನೂ ಯಾರು ಅರಿತುಕೊಳ್ಳುವರೋ ಅವರು ಹಿಂದಿನ, ಎಲ್ಲಕ್ಕೂ ಮೊದಲಿನ, ಬ್ರಹ್ಮವನ್ನು ಗೊತ್ತುಪಡಿಸಿಕೊಂಡಿರುವರು" (ಬೃ. ೪-೪-೧೮) ಎಂದು ಇವು ಬ್ರಹ್ಮವನ್ನರಿಯುವದಕ್ಕೆ ದ್ವಾರಗಳೆಂದು ತಿಳಿಸುತ್ತದೆ

## ಬ್ರಹ್ಮವನ್ನು ಅರಿಯುವದಕ್ಕೆ ತಪಸ್ಸು ಬೇಕು

**ಸ ತಪೋಽತಪ್ಯತ || ೪ ||**

೪. ಅವನು ತಪಸ್ಸನ್ನು ಮಾಡಿದನು.

---

1. ಬ್ರಹ್ಮವು ಜಗತ್ತಿನ ಜನ್ಮಾದಿಗಳಿಗೆ ಕಾರಣವೆಂದರೆ ಜಗತ್ತು ತೋರುವಾಗಲೂ ಅಡಗುವಾಗಲೂ ಬ್ರಹ್ಮರೂಪವಾಗಿರುವದೆಂದೇ ಅರ್ಥ.

(ಭಾಷ್ಯ)

೨೩೦. ಸ ಭೃಗುಃ ಬ್ರಹ್ಮೋಪಲಬ್ಧಿದ್ವಾರಾಣಿ ಬ್ರಹ್ಮಲಕ್ಷಣಂ ಚ ಶ್ರುತ್ವಾ ಪಿತುಃ ತಪಃ ಬ್ರಹ್ಮೋಪಲಬ್ಧಿಸಾಧನತ್ವೇನ ಅತಪ್ಯತ ತಪ್ತವಾನ್। ಕುತಃ ಪುನರನುಪದಿಷ್ಟಸ್ಯೈವ ತಪಸಃ ಸಾಧನತ್ವಪ್ರತಿಪತ್ತಿರ್ಭೃಗೋಃ? ಸಾವಶೇಷೋಕ್ತೇಃ। ಅನ್ನಾದಿಬ್ರಹ್ಮಣಃ ಪ್ರತಿಪತ್ತೌ ದ್ವಾರಂ ಲಕ್ಷಣಂ ಚ "ಯತೋ ವಾ ಇಮಾನಿ" ಇತ್ಯಾದಿ ಉಕ್ತವಾನ್। ಸಾವಶೇಷಂ ಹಿ ತತ್। ಸಾಕ್ಷಾದ್ ಬ್ರಹ್ಮಣೋಽನಿರ್ದೇಶಾತ್। ಅನ್ಯಥಾ ಹಿ ಸ್ವರೂಪೇಣೈವ ಬ್ರಹ್ಮ ನಿರ್ದೇಷ್ಟವ್ಯಂ ಜಿಜ್ಞಾಸವೇ ಪುತ್ರಾಯ ಇದಮ್ ಇತ್ಥಂರೂಪಂ ಬ್ರಹ್ಮ ಇತಿ। ನ ಚೈವಂ ನಿರದಿಶತ್। ಕಿಂ ತರ್ಹಿ ಸಾವಶೇಷಮೇವ ಉಕ್ತವಾನ್। ಅತೋಽವಗಮ್ಯತೇ ನೂನಂ ಸಾಧನಾನ್ತರಮಪಿ ಅಪೇಕ್ಷತೇ ಪಿತಾ ಬ್ರಹ್ಮವಿಜ್ಞಾನಂ ಪ್ರತಿ ಇತಿ. ತಪೋವಿಶೇಷಪ್ರತಿಪತ್ತಿಸ್ತು, ಸರ್ವಸಾಧಕತಮತ್ವಾತ್। ಸರ್ವೇಷಾಂ ಹಿ [1] ನಿಯತಸಾಧ್ಯವಿಷಯಾಣಾಂ ಸಾಧನಾನಾಂ ತಪ ಏವ ಸಾಧಕತಮಂ ಸಾಧನಮ್ ಇತಿ ಹಿ ಪ್ರಸಿದ್ಧಂ ಲೋಕೇ। ತಸ್ಮಾತ್ ಪಿತ್ರಾ ಅನುಪದಿಷ್ಟಮಪಿ ಬ್ರಹ್ಮವಿಜ್ಞಾನಸಾಧನತ್ವೇನ ತಪಃ ಪ್ರತಿಪೇದೇ ಭೃಗುಃ। ತಚ್ಚ ತಪಃ ಬಾಹ್ಯಾನ್ತಃಕರಣಸಮಾಧಾನಮ್। ತದ್ದ್ವಾರಕತ್ವಾತ್ ಬ್ರಹ್ಮಪ್ರತಿಪತ್ತೇಃ। "ಮನಸಶ್ಚೇನ್ದ್ರಿಯಾಣಾಂ ಚ ಹ್ಯೈಕಾಗ್ರ್ಯಂ [2] ಪರಮಂ ತಪಃ। ತಜ್ಜ್ಯಾಯಃ ಸರ್ವಧರ್ಮೇಭ್ಯಃ ಸ ಧರ್ಮಃ ಪರ ಉಚ್ಯತೇ॥" (ಮೋ. ಧ. ೨೫೦-೪) ಇತಿ ಸ್ಮೃತೇಃ॥

(ಭಾಷ್ಯಾರ್ಥ)

ಆ ಭೃಗುವು ಬ್ರಹ್ಮವನ್ನು ಅರಿತುಕೊಳ್ಳುವದಕ್ಕೆ ದ್ವಾರವನ್ನೂ ಬ್ರಹ್ಮದ ಲಕ್ಷಣವನ್ನೂ ತಂದೆಯಿಂದ ಕೇಳಿ (ತಿಳಿದುಕೊಂಡ)ವನಾಗಿ ಬ್ರಹ್ಮವನ್ನು ಅರಿತುಕೊಳ್ಳುವದಕ್ಕೆ ಸಾಧನವಾಗಿ ತಪಸ್ಸನ್ನು ತಪಿಸಿದನು, ತಪಸ್ಸುಮಾಡಿದವನಾದನು.

(ಪ್ರಶ್ನೆ):—(ತಂದೆಯು) ಹೇಳಿಕೊಡದೆ ಇದ್ದರೂ ತಪಸ್ಸು ಸಾಧನವೆಂದು ಭೃಗು ತಿಳಿದುಕೊಂಡದ್ದು ಹೇಗೆ?

---

1 ಈ ವಾಕ್ಯದಲ್ಲಿ ಒಂದು 'ಹಿ' ಹೆಚ್ಚಾಗಿರುವಂತೆ ಕಾಣುತ್ತದೆ.

2. "ಚಾಪ್ಯೈಕಾಗ್ರ್ಯಮ್" ಎಂದು ಮುದ್ರಿತಭಾರತದ ಪಾಠ.

(ಉತ್ತರ):—(ಹೇಳಬೇಕಾದದ್ದನ್ನು) ಇನ್ನೂ ಉಳಿಸಿ[1] (ತಂದೆಯು) ಹೇಳಿರುವದರಿಂದ. ಬ್ರಹ್ಮವನ್ನು ತಿಳಿದುಕೊಳ್ಳುವದಕ್ಕೆ ಅನ್ನವೇ ಮುಂತಾದ ದ್ವಾರವನ್ನೂ "ಯಾವದರಿಂದ ಈ (ಭೂತಗಳು....)" ಎಂದು ಮುಂತಾಗಿರುವ ಲಕ್ಷಣವನ್ನೂ (ತಂದೆ) ಹೇಳಿರುತ್ತಾನೆ. ಅದು (ಇನ್ನೂ) ಅಪೂರ್ಣವಾಗಿಯೇ ಇರುತ್ತದೆ, ಏಕೆಂದರೆ ಬ್ರಹ್ಮವನ್ನು ನೇರಾಗಿ ತಿಳಿಸಿಕೊಟ್ಟಿರುವದಿಲ್ಲ. ಹೀಗಲ್ಲದೆ ಇದ್ದರೆ[2] (ಬ್ರಹ್ಮವನ್ನು) ಅರಿತುಕೊಳ್ಳಬೇಕೆಂಬ ಇಚ್ಛೆಯುಳ್ಳ ಪುತ್ರನಿಗೆ ಬ್ರಹ್ಮವು ಇದು, ಇಂಥ ರೂಪದ್ದು–ಎಂದು ತನ್ನ ರೂಪದಿಂದಲೇ ಬ್ರಹ್ಮವನ್ನು ತಿಳಿಸಿಕೊಡಬೇಕಾಗಿತ್ತು. ಆದರೆ ಹಾಗೆ ಹೇಳಿಕೊಡಲಿಲ್ಲ, ಮತ್ತೇನೆಂದರೆ ಇನ್ನೂ ಉಳಿಸಿಯೇ ಹೇಳಿರುತ್ತಾನೆ. ಆದ್ದರಿಂದ ಬ್ರಹ್ಮವನ್ನು ವಿಶೇಷವಾಗಿ ಅರಿತುಕೊಳ್ಳುವದಕ್ಕೆ ಮತ್ತೊಂದು ಸಾಧನವೂ (ಬೇಕೆಂದು) ತಂದೆಯು ಅಭಿಪ್ರಾಯಪಟ್ಟಿರಬೇಕು ಎಂದು ನಿಶ್ಚಯವಾಗುತ್ತದೆ.[3] (ಆ ಸಾಧನವು) ತಪಸ್ಸೇ ಎಂದು ವಿಶೇಷರೂಪದಿಂದ ತಿಳಿದುಕೊಂಡದ್ದೇ ಎಂದರೆ (ಅದು) ಎಲ್ಲಕ್ಕಿಂತಲೂ ಹೆಚ್ಚಿನ ಸಾಧನವಾಗಿರುವದರಿಂದ. ಆಯಾ ಸಾಧ್ಯಗಳನ್ನು ನಿಯಮದಿಂದ ಉಂಟುಮಾಡುವ ಸಾಧನಗಳೆಲ್ಲಕ್ಕಿಂತಲೂ ತಪಸ್ಸೇ ಅತ್ಯಂತವಾಗಿ ಹೆಚ್ಚಿನ ಸಾಧನವು ಎಂದು ಲೋಕದಲ್ಲಿ ಪ್ರಸಿದ್ಧವೇ ಆಗಿರುತ್ತದೆ. ಆದ್ದರಿಂದ ತಂದೆಯು ಹೇಳಿಕೊಡದೆ ಇದ್ದರೂ ತಪಸ್ಸು ಬ್ರಹ್ಮವನ್ನು ಅರಿತುಕೊಳ್ಳುವದಕ್ಕೆ ಸಾಧನವೆಂದು ಭೃಗು ಅರಿತುಕೊಂಡನು. ಆ ತಪಸ್ಸೆಂದರೆ ಹೊರಗಿನ ಮತ್ತು ಒಳಗಿನ ಕರಣಗಳ ಸಮಾಧಾನರೂಪವಾದದ್ದೇ[4]; ಏಕೆಂದರೆ ಅದರ ಮೂಲಕವಾಗಿಯೇ ಬ್ರಹ್ಮದ ಜ್ಞಾನವಾಗುತ್ತದೆ.[5] "ಮನಸ್ಸು ಮತ್ತು ಇಂದ್ರಿಯಗಳ ಏಕಾಗ್ರ್ಯವೇ ಹೆಚ್ಚಿನ ತಪಸ್ಸು; ಅದು ಎಲ್ಲಾ ಧರ್ಮಗಳಿಗಿಂತಲೂ ಹೆಚ್ಚಿನದು, ಆ ಧರ್ಮವೇ ಪರಮಧರ್ಮವೆನಿಸುತ್ತದೆ." (ಮೋ. ಧ. ೨೫೦-೪), ಎಂಬ ಸ್ಮೃತಿ ಇದಕ್ಕೆ ಪ್ರಮಾಣವು.

---

1. ಹೇಳುವದನ್ನು ನೇರಾಗಿ ಹೇಳಿಬಿಡದೆ.

2. ತಂದೆಯು ಹೇಳಿದಷ್ಟೇ ಪೂರ್ಣವಾಗಬೇಕಾಗಿದ್ದರೆ.

3. ಗುರುವು ಹೇಳಿಕೊಟ್ಟಮೇಲೂ ಶಿಷ್ಯನು ಮಾಡತಕ್ಕ ಸಾಧನವಿದೆ ಎಂದು ಭಾವ.

4 ಕೃಚ್ಛ್ರವೇ, ಮುಂತಾದದ್ದಲ್ಲ, ಏಕೆಂದರೆ ಇಲ್ಲಿ ಜ್ಞಾನಕ್ಕೆ ಸಾಧನವನ್ನು ಹೇಳುವದಕ್ಕೆ ಹೊರಟಿದೆ.

5. ಬರಿಯ ದೇಹದಂಡನೆಯಿಂದ ಬ್ರಹ್ಮಜ್ಞಾನವಾಗುವದಿಲ್ಲ.

# ೨. ಬ್ರಹ್ಮವಿಜ್ಞಾನದ ಮೆಟ್ಟಿಲುಗಳು

## ಅನ್ನವು ಬ್ರಹ್ಮವೆಂಬ ಜ್ಞಾನ

**ಸ ತಪಸ್ತಪ್ತ್ವಾ ॥ ೫ ॥**

(ಇತಿ ಪ್ರಥಮೋಽನುವಾಕಃ)

**ಅನ್ನಂ ಬ್ರಹ್ಮೇತಿ ವ್ಯಜಾನಾತ್ । ಅನ್ನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯನ್ತೇ । ಅನ್ನೇನ ಜಾತಾನಿ ಜೀವನ್ತಿ । ಅನ್ನಂ ಪ್ರಯನ್ತ್ಯಭಿಸಂವಿಶನ್ತೀತಿ ॥ ೧ ॥**

೫. ಅವನು ತಪಸ್ಸನ್ನು ಮಾಡಿ

(ಒಂದನೆಯ ಅನುವಾಕವು ಮುಗಿಯಿತು)[1]

೧. ಅನ್ನವು ಬ್ರಹ್ಮವೆಂದು ಅರಿತುಕೊಂಡನು. ಏಕೆಂದರೆ ಅನ್ನದಿಂದಲೇ ಈ ಭೂತಗಳು ಹುಟ್ಟುತ್ತವೆ; ಅನ್ನದಿಂದ ಹುಟ್ಟಿ ಜೀವಿಸುತ್ತವೆ; ಅನ್ನವನ್ನು ಕುರಿತು ಹೋಗಿ ಚೆನ್ನಾಗಿ ಸೇರಿಕೊಳ್ಳುತ್ತವೆ; ಆದ್ದರಿಂದ.

(ಭಾಷ್ಯ)

೨೩೧. ಸ ಚ ತಪಸ್ತಪ್ತ್ವಾ ಅನ್ನಂ ಬ್ರಹ್ಮ ಇತಿ ವ್ಯಜಾನಾತ್ ವಿಜ್ಞಾತವಾನ್ । ತದ್ ಹಿ ಯಥೋಕ್ತಲಕ್ಷಣೋಪೇತಮ್ । ಕಥಮ್ ? ಅನ್ನಾದ್ ಹಿ ಏವ ಖಲು ಇಮಾನಿ ಭೂತಾನಿ ಜಾಯನ್ತೇ । ಅನ್ನೇನ ಜಾತಾನಿ ಜೀವನ್ತಿ, ಅನ್ನಂ ಪ್ರಯನ್ತಿ, ಅಭಿಸಂವಿಶನ್ತಿ । ಇತಿ ತಸ್ಮಾತ್ ಯುಕ್ತಮ್ ಅನ್ನಸ್ಯ ಬ್ರಹ್ಮತ್ವಮ್ **ಇತ್ಯಭಿಪ್ರಾಯಃ** ॥

(ಭಾಷ್ಯಾರ್ಥ)

ಆ (ಭೃಗುವು) ತಪಸ್ಸುಮಾಡಿ ಅನ್ನವು[2] ಬ್ರಹ್ಮವೆಂದು ಅರಿತುಕೊಂಡನು, ಅರಿತುಕೊಂಡವನಾದನು. ಏಕೆಂದರೆ ಅದು (ತಂದೆಯು) ಹೇಳಿದಂಥ ಲಕ್ಷಣದಿಂದ ಕೂಡಿರುತ್ತದೆ. (ಅದು) ಹೇಗೆ? ಎಂದರೆ ಅನ್ನದಿಂದಲೇ ಅಲ್ಲವೆ, ಈ

---

1. ಆನಂದವಲ್ಲಿಯಂತೆಯೇ ಭೃಗುವಲ್ಲಿಯನ್ನೂ ವೈದಿಕರು ಅನುವಾಕಗಳಾಗಿ ಒಡೆದುಕೊಂಡು ಅಧ್ಯಯನಮಾಡುತ್ತಾರೆ. ಆದರೆ ಭಾಷ್ಯದಲ್ಲಿ ಇವಕ್ಕೆ ಆಧಾರವೇನೂ ಕಾಣುವದಿಲ್ಲ. ಪೀಠಿಕೆಯನ್ನು ನೋಡಿ.

2. ವಿರಾಟ್ಪುರುಷನ ಉಪಾಧಿಯಾದ ಸಮಷ್ಟ್ಯನ್ನ ; ಭೂತಪಂಚಕ.

ಭೂತಗಳು ಹುಟ್ಟುತ್ತವೆ? ಹುಟ್ಟಿದ ಬಳಿಕ ಅನ್ನದಿಂದಲೇ ಜೀವಿಸುತ್ತವೆ. ಅನ್ನವನ್ನು ಕುರಿತು ಹೋಗಿ ಅದರಲ್ಲಿಯೇ ಚೆನ್ನಾಗಿ ಸೇರಿಕೊಳ್ಳುತ್ತವೆ. ಆದ್ದರಿಂದ ಅನ್ನವು ಬ್ರಹ್ಮವೆಂಬುದು ಯುಕ್ತವಾಗಿದೆಯೆಂದು ಅಭಿಪ್ರಾಯ.

## ತಪಸ್ಸು ಕೊನೆಯುವರೆಗೂ ಬೇಕಾದ ಸಾಧನ

**ತದ್ವಿಜ್ಞಾಯ । ಪುನರೇವ ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಗ್ಂ ಹೋವಾಚ । ತಪಸಾ ಬ್ರಹ್ಮ ವಿಜಿಜ್ಞಾಸಸ್ವ । ತಪೋ ಬ್ರಹ್ಮೇತಿ ॥ ೨ ॥**

೨. ಅದನ್ನು ಅರಿತುಕೊಂಡು ಮತ್ತೂ "ಭಗವಂತನೆ, ಬ್ರಹ್ಮವನ್ನು ಹೇಳಿಕೊಡು" ಎಂದು ತಂದೆಯಾದ ವರುಣನನ್ನು ಸಮೀಪಿಸಿದನು. ಅವನನ್ನು ಕುರಿತು (ವರುಣನು) ಇಂತೆಂದನು. "ತಪಸ್ಸಿನಿಂದ ಬ್ರಹ್ಮವನ್ನು ಅರಿತುಕೊಳ್ಳಲಿಚ್ಛಿಸು; ತಪಸ್ಸೇ ಬ್ರಹ್ಮವು."

(ಭಾಷ್ಯ)

೨೩೨. ಸಃ ಏವಂ ತಪಸ್ತಪ್ತ್ವಾ ಅನ್ನಂ ಬ್ರಹ್ಮ ಇತಿ ವಿಜ್ಞಾಯ ಲಕ್ಷಣೇನ ಉಪಪತ್ತ್ಯಾ ಚ, ಪುನರೇವ ಸಂಶಯಮಾಪನ್ನಃ ವರುಣಂ ಪಿತರಮ್ ಉಪಸಸಾರ "ಅಧೀಹಿ ಭಗವೋ ಬ್ರಹ್ಮ" ಇತಿ । ಕಃ ಪುನಃ ಸಂಶಯಹೇತುರಸ್ಯ ಇತಿ? ಉಚ್ಯತೇ । ಅನ್ನಸ್ಯ ಉತ್ಪತ್ತಿದರ್ಶನಾತ್ । ತಪಸಃ ಪುನಃಪುನರುಪದೇಶಃ ಸಾಧನಾತಿಶಯತ್ವಾವಧಾರಣಾರ್ಥಃ । ಯಾವತ್ ಬ್ರಹ್ಮಣೋ ಲಕ್ಷಣಂ ನಿರತಿಶಯಂ ನ ಭವತಿ ಯಾವಚ್ಚ ಜಿಜ್ಞಾಸಾ ನ ನಿವರ್ತತೇ ತಾವತ್ ತಪ ಏವ ತೇ ಸಾಧನಮ್ । ತಪಸೈವ ಬ್ರಹ್ಮ ವಿಜಿಜ್ಞಾಸಸ್ವ ಇತ್ಯರ್ಥಃ । ಋಜ್ವನ್ಯತ್ ॥

(ಭಾಷ್ಯಾರ್ಥ)

ಅವನು ಹೀಗೆ ತಪಸ್ಸನ್ನು ಮಾಡಿ ಅನ್ನವು ಬ್ರಹ್ಮವೆಂದು ಲಕ್ಷಣದಿಂದಲೂ ಯುಕ್ತಿಯಿಂದಲೂ[1] ಅರಿತುಕೊಂಡು, ಮತ್ತೂ ಸಂಶಯವನ್ನು ಹೊಂದಿದವನಾಗಿ ತಂದೆಯಾದ ವರುಣನ ಬಳಿಗೆ "ಪೂಜ್ಯನೆ, ಬ್ರಹ್ಮವನ್ನು ಹೇಳಿಕೊಡು" ಎಂದು ಸಮೀಪಿಸಿದನು.

---

1. ಯಾವದಕ್ಕೆ ಲಕ್ಷಣವು ಹೊಂದುತ್ತದೆಯೋ ಅದು ಬ್ರಹ್ಮವು, ಹೊಂದದೆ ಇರುವದು ಅಬ್ರಹ್ಮವು ಎಂಬ ಯುಕ್ತಿಯನ್ನಿಟ್ಟುಕೊಂಡು.

(ಪ್ರಶ್ನೆ) :—ಅವನಿಗೆ ಸಂಶಯ(ವುಂಟಾದದ್ದಕ್ಕೆ) ಕಾರಣವಾದರೂ ಏನು ?

(ಉತ್ತರ) :—ಹೇಳುತ್ತೇವೆ. ಅನ್ನಕ್ಕೆ ಉತ್ಪತ್ತಿ(ಯಿರುವದು) ಕಂಡುಬರುವದರಿಂದ. ತಪಸ್ಸನ್ನು ಮತ್ತೆ ಮತ್ತೆ ಹೇಳಿರುವದು (ಅದು) ಮಿಗಿಲಿಲ್ಲದ ಸಾಧನವೆಂದು ಒತ್ತಿ ಹೇಳುವದಕ್ಕೆ. **ಎಲ್ಲಿಯವರೆಗೂ ಬ್ರಹ್ಮದ ಲಕ್ಷಣವು ಮಿಗಿಲಿಲ್ಲದಂತೆ (ಹೊಂದಿತೆಂದು) ಆಗುವದಿಲ್ಲವೋ, ಎಲ್ಲಿಯವರೆಗೂ (ಇನ್ನೂ) ತಿಳಿಯಬೇಕೆಂಬ ಇಚ್ಛೆಯು ತೊಲಗುವದಿಲ್ಲವೋ ಅಲ್ಲಿಯವರೆಗೂ ತಪಸ್ಸೇ ನಿನಗೆ ಸಾಧನವು; (ಆದ್ದರಿಂದ) ತಪಸ್ಸಿನಿಂದಲೇ ಬ್ರಹ್ಮವನ್ನು ತಿಳಿಯಲಿಚ್ಛಿಸು** ಎಂದು ಅರ್ಥ. ಉಳಿದದ್ದು ಸ್ಪಷ್ಟವಾಗಿದೆ.[1]

## ಪ್ರಾಣವು ಬ್ರಹ್ಮವೆಂಬ ಜ್ಞಾನ

**ಸ ತಪೋಽತಪ್ಯತ । ಸ ತಪಸ್ತಪ್ತ್ವಾ ॥ ೩ ॥**

(ಇತಿ ದ್ವಿತೀಯೋಽನುವಾಕಃ)

**ಪ್ರಾಣೋ ಬ್ರಹ್ಮೇತಿ ವ್ಯಜಾನಾತ್ । ಪ್ರಾಣಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯನ್ತೇ । ಪ್ರಾಣೇನ ಜಾತಾನಿ ಜೀವನ್ತಿ । ಪ್ರಾಣಂ ಪ್ರಯನ್ತ್ಯಭಿಸಂವಿಶನ್ತೀತಿ ॥ ೧ ॥**

೩. ಅವನು ತಪಸ್ಸನ್ನು ಮಾಡಿದನು. ಅವನು ತಪಸ್ಸನ್ನು ಮಾಡಿ–

(ಎರಡನೆಯ ಅನುವಾಕವು ಮುಗಿಯಿತು.)

೧. ಪ್ರಾಣವು[2] ಬ್ರಹ್ಮವೆಂದು ಅರಿತುಕೊಂಡನು. ಏಕೆಂದರೆ ಪ್ರಾಣದಿಂದಲೇ ಈ ಭೂತಗಳು ಹುಟ್ಟುತ್ತವೆ; ಪ್ರಾಣದಿಂದ ಹುಟ್ಟಿ ಜೀವಿಸುತ್ತವೆ. ಪ್ರಾಣವನ್ನು ಕುರಿತು ಹೋಗಿ ಚೆನ್ನಾಗಿ ಸೇರಿಕೊಳ್ಳುತ್ತವೆ; ಆದ್ದರಿಂದ.

1. ತಪಸ್ಸೇ ಬ್ರಹ್ಮವೆಂದರೆ ಬ್ರಹ್ಮವನ್ನು ಅರಿತುಕೊಳ್ಳುವದಕ್ಕೆ **ಉತ್ತಮ ಸಾಧನವು ಎಂದರ್ಥ. ಇದು ಸ್ಪಷ್ಟನೇ ಆಗಿದೆ.**

2. ಕ್ರಿಯಾಶಕ್ತಿಪ್ರಧಾನನಾದ **ಸೂತ್ರಾತ್ಮನ ಉಪಾಧಿಯು.**

## ಭೃಗುವಿನ ತಪಸ್ಸು

**ತದ್ವಿಜ್ಞಾಯ । ಪುನರೇವ ವರುಣಂ ಪಿತರಮುಪಸಸಾರ ।**
**ಅಧೀಹಿ ಭಗವೋ ಬ್ರಹ್ಮೇತಿ ॥ ೨ ॥**

೨. ಅದನ್ನು ಅರಿತುಕೊಂಡು ಮತ್ತೂ "ಭಗವಂತನೆ, ಬ್ರಹ್ಮವನ್ನು ಹೇಳಿಕೊಡು" ಎಂದು ತಂದೆಯಾದ ವರುಣನನ್ನು ಸಮೀಪಿಸಿದನು.

**ತಗ್ಂ ಹೋವಾಚ । ತಪಸಾ ಬ್ರಹ್ಮ ವಿಜಿಜ್ಞಾಸಸ್ವ । ತಪೋ**
**ಬ್ರಹ್ಮೇತಿ ॥ ೩ ॥**

೩. ಅವನನ್ನು ಕುರಿತು (ವರುಣ)ನಿಂತೆಂದನು. "ತಪಸ್ಸಿನಿಂದ ಬ್ರಹ್ಮವನ್ನು ಅರಿತುಕೊಳ್ಳಲಿಚ್ಛಿಸು. ತಪಸ್ಸೇ ಬ್ರಹ್ಮವು."

## ಮನಸ್ಸು ಬ್ರಹ್ಮವೆಂಬ ಜ್ಞಾನ

**ಸ ತಪೋಽತಪ್ಯತ । ಸ ತಪಸ್ತಪ್ತ್ವಾ ॥ ೪ ॥**

**(ಇತಿ ತೃತೀಯೋಽನುವಾಕಃ)**

**ಮನೋ ಬ್ರಹ್ಮೇತಿ ವ್ಯಜಾನಾತ್ । ಮನಸೋ ಹ್ಯೇವ ಖಲ್ವಿ**
**ಮಾನಿ ಭೂತಾನಿ ಜಾಯನ್ತೇ । ಮನಸಾ ಜಾತಾನಿ ಜೀವನ್ತಿ ।**
**ಮನಃ ಪ್ರಯನ್ತ್ಯಭಿಸಂವಿಶನ್ತೀತಿ ॥ ೧ ॥**

೪. ಅವನು ತಪಸ್ಸನ್ನುಮಾಡಿದನು. ಅವನು ತಪಸ್ಸನ್ನುಮಾಡಿ—

**(ಮೂರನೆಯ ಅನುವಾಕವು ಮುಗಿಯಿತು)**

೧. ಮನಸ್ಸು[1] ಬ್ರಹ್ಮವೆಂದು ಅರಿತುಕೊಂಡನು. ಏಕೆಂದರೆ ಮನಸ್ಸಿನಿಂದಲೇ ಈ ಭೂತಗಳು ಹುಟ್ಟುತ್ತವೆ; ಹುಟ್ಟಿ ಮನಸ್ಸಿನಿಂದ ಜೀವಿಸುತ್ತವೆ; ಮನಸ್ಸನ್ನು ಕುರಿತುಹೋಗಿ ಚೆನ್ನಾಗಿ ಸೇರಿಕೊಳ್ಳುತ್ತವೆ, ಆದ್ದರಿಂದ.

---

1. **ಸಮಷ್ಟಿಸಂಕಲ್ಪವು; ಹಿರಣ್ಯಗರ್ಭನ ಉಪಾಧಿಯು.**

## ಭೃಗುವಿನ ತಪಸ್ಸು

**ತದ್ವಿಜ್ಞಾಯ । ಪುನರೇವ ವರುಣಂ ಪಿತರಮುಪಸಸಾರ ।**
**ಅಧೀಹಿ ಭಗವೋ ಬ್ರಹ್ಮೇತಿ । ತಗ್ಂ ಹೋವಾಚ । ತಪಸಾ**
**ಬ್ರಹ್ಮ ವಿಜಿಜ್ಞಾಸಸ್ವ । ತಪೋ ಬ್ರಹ್ಮೇತಿ ॥ ೨ ॥**

೨. ಅದನ್ನು ಅರಿತುಕೊಂಡು ಮತ್ತೂ "ಭಗವಂತನೆ, ಬ್ರಹ್ಮವನ್ನು ಹೇಳಿಕೊಡು" ಎಂದು ತಂದೆಯಾದ ವರುಣನನ್ನು ಸಮೀಪಿಸಿದನು. ಅವನನ್ನು ಕುರಿತು (ವರುಣ)ನಿಂತೆಂದನು. ತಪಸ್ಸಿನಿಂದ ಬ್ರಹ್ಮವನ್ನು ಅರಿತು ಕೊಳ್ಳಲಿಚ್ಛಿಸು, ತಪಸ್ಸೇ ಬ್ರಹ್ಮವು.

## ವಿಜ್ಞಾನವು ಬ್ರಹ್ಮವೆಂಬ ಜ್ಞಾನ

**ಸ ತಪೋಽತಪ್ಯತ । ಸ ತಪಸ್ತಪ್ತ್ವಾ ॥ ೩ ॥**

**(ಇತಿ ಚತುರ್ಥೋಽನುವಾಕಃ)**

**ವಿಜ್ಞಾನಂ ಬ್ರಹ್ಮೇತಿ ವ್ಯಜಾನಾತ್ । ವಿಜ್ಞಾನಾದ್ಧ್ಯೇವ ಖಲ್ವಿ**
**ಮಾನಿ ಭೂತಾನಿ ಜಾಯನ್ತೇ।ವಿಜ್ಞಾನೇನ ಜಾತಾನಿ ಜೀವನ್ತಿ।**
**ವಿಜ್ಞಾನಂ ಪ್ರಯನ್ತ್ಯಭಿಸಂವಿಶನ್ತೀತಿ ॥ ೧ ॥**

೩. ಅವನು ತಪಸ್ಸನ್ನು ಮಾಡಿದನು: ಅವನು ತಪಸ್ಸನ್ನುಮಾಡಿ—

(ನಾಲ್ಕನೆಯ ಅನುವಾಕವು ಮುಗಿಯಿತು)

೧. ವಿಜ್ಞಾನವು[1] ಬ್ರಹ್ಮವೆಂದು ತಿಳಿದುಕೊಂಡನು. ಏಕೆಂದರೆ ವಿಜ್ಞಾನದಿಂದಲೇ ಈ ಭೂತಗಳು ಹುಟ್ಟುತ್ತವೆ; ಹುಟ್ಟಿ ವಿಜ್ಞಾನದಿಂದ ಜೀವಿಸುತ್ತವೆ; ವಿಜ್ಞಾನವನ್ನು ಕುರಿತು ಹೋಗಿ ಚೆನ್ನಾಗಿ ಸೇರಿಕೊಳ್ಳು ತ್ತವೆ; ಆದ್ದರಿಂದ.

## ಭೃಗುವಿನ ತಪಸ್ಸು

**ತದ್ವಿಜ್ಞಾಯ । ಪುನರೇವ ವರುಣಂ ಪಿತರಮುಪಸಸಾರ ।**
**ಅಧೀಹಿ ಭಗವೋ ಬ್ರಹ್ಮೇತಿ । ತಗ್ಂ ಹೋವಾಚ । ತಪಸಾ**
**ಬ್ರಹ್ಮ ವಿಜಿಜ್ಞಾಸಸ್ವ । ತಪೋ ಬ್ರಹ್ಮೇತಿ ॥ ೨ ॥**

---

1. ಹಿರಣ್ಯಗರ್ಭನ ಉಪಾಧಿಯಾದ ಸಮಷ್ಟಿಬುದ್ಧಿ.

೨. ಅದನ್ನು ಅರಿತುಕೊಂಡು ಮತ್ತೂ "ಭಗವಂತನೆ, ಬ್ರಹ್ಮವನ್ನು ಹೇಳಿಕೊಡು" ಎಂದು ತಂದೆಯಾದ ವರುಣನನ್ನು ಸಮೀಪಿಸಿದನು. ಅವನನ್ನು ಕುರಿತು ವರುಣನಿಂತೆಂದನು. ತಪಸ್ಸಿನಿಂದ ಬ್ರಹ್ಮವನ್ನು ಅರಿತುಕೊಳ್ಳಲಿಚ್ಛಿಸು. ತಪಸ್ಸೇ ಬ್ರಹ್ಮವು.

## ಆನಂದವು ಬ್ರಹ್ಮವೆಂಬ ಜ್ಞಾನ

**ಸ ತಪೋಽತಪ್ಯತ । ಸ ತಪಸ್ತಪ್ತ್ವಾ ।**

(ಇತಿ ಪಞ್ಚಮೋಽನುವಾಕಃ)

**ಆನನ್ದೋ ಬ್ರಹ್ಮೇತಿ ವ್ಯಜಾನಾತ್ । ಆನನ್ದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯನ್ತೇ । ಆನನ್ದೇನ ಜಾತಾನಿ ಜೀವನ್ತಿ । ಆನನ್ದಂ ಪ್ರಯನ್ತ್ಯಭಿಸಂವಿಶನ್ತೀತಿ ॥ ೧ ॥**

೩. ಅವನು ತಪಸ್ಸನ್ನು ಮಾಡಿದನು. ಅವನು ತಪಸ್ಸನ್ನು ಮಾಡಿ :-

(ಐದನೆಯ ಅನುವಾಕವು ಮುಗಿಯಿತು)

೧. ಆನಂದವು[1] ಬ್ರಹ್ಮವೆಂದು ಅರಿತಿಕೊಂಡನು. ಏಕೆಂದರೆ ಆನಂದದಿಂದಲೇ ಈ ಭೂತಗಳು ಹುಟ್ಟುತ್ತವೆ; ಆನಂದದಿಂದ ಹುಟ್ಟಿ ಜೀವಿಸುತ್ತವೆ; ಆನಂದವನ್ನು ಕುರಿತು ಹೋಗಿ ಚೆನ್ನಾಗಿ ಸೇರಿಕೊಳ್ಳುತ್ತವೆ.

(ಭಾಷ್ಯ)

೨೩೩. ಏವಂ ತಪಸಾ ವಿಶುದ್ಧಾತ್ಮಾ ಪ್ರಾಣಾದಿಷು ಸಾಕಲ್ಯೇನ ಬ್ರಹ್ಮಲಕ್ಷಣಮ್ ಅಪಶ್ಯನ್ ಶನೈಃ ಶನೈಃ ಅನ್ತರನುಪ್ರವಿಶ್ಯ ಅನ್ತರತಮಮ್ ಆನನ್ದಂ ಬ್ರಹ್ಮ ವಿಜ್ಞಾತವಾನ್ ತಪಸೈವ ಸಾಧನೇನ ಭೃಗುಃ । ತಸ್ಮಾತ್ ಬ್ರಹ್ಮ ವಿಜಿಜ್ಞಾಸುನಾ ಬಾಹ್ಯಾನ್ತಃಕರಣಸಮಾಧಾನಲಕ್ಷಣಂ ಪರಮಂ ತಪಃ ಸಾಧನಮ್ **ಅನುಷ್ಠೇಯಮ್** ಇತಿ ಪ್ರಕರಣಾರ್ಥಃ ॥

---

1. ಆನಂದಮಯನ ಆತ್ಮನಾಗಿರುವ ಬ್ರಹ್ಮವು.

(ಭಾಷ್ಯಾರ್ಥ)

ಹೀಗೆ ಭೃಗುವು ತಪಸ್ಸಿನಿಂದ ಅಂತಃಕರಣಶುದ್ಧಿಯನ್ನು ಹೊಂದಿದವನಾಗಿ ಪ್ರಾಣವೇ ಮುಂತಾದವುಗಳಲ್ಲಿ ಬ್ರಹ್ಮದ ಲಕ್ಷಣವನ್ನು ಸಂಪೂರ್ಣವಾಗಿ ಕಾಣದೆ ಮೆಲ್ಲಮೆಲ್ಲಗೆ[1] ಒಳಗೆ ಹೊಕ್ಕವನಾಗಿ ತೀರ ಒಳಗಿರುವ[2] ಆನಂದವೇ ಬ್ರಹ್ಮವೆಂದು ತಪಸ್ಸೆಂಬ ಸಾಧನದಿಂದಲೇ ಅರಿತುಕೊಂಡನು. ಆದ್ದರಿಂದ ಬ್ರಹ್ಮವನ್ನು ಅರಿತುಕೊಳ್ಳಬೇಕೆನ್ನುವಾತನು ಹೊರಗಿನ ಮತ್ತು ಒಳಗಿನ ಕರಣಗಳನ್ನು ಸಮಾಧಾನದಲ್ಲಿಡುವದೆಂಬ ಹೆಚ್ಚಿನ ತಪಸ್ಸೆಂಬ ಸಾಧನವನ್ನು ಅಭ್ಯಾಸಮಾಡಬೇಕು ಎಂಬುದು (ಈ) ಪ್ರಕರಣದ ಅರ್ಥವು.

# ೩. ಭೃಗುವರುಣರ ಸಂವಾದದ ಸಾರ

(ಭಾಷ್ಯ)

೨೩೪. ಅಧುನಾ ಆಖ್ಯಾಯಿಕಾತೋಽಪಸೃತ್ಯ ಶ್ರುತಿಃ ಸ್ವೇನ ವಚನೇನ ಆಖ್ಯಾಯಿಕಾನಿರ್ವೃತ್ತಮ್ ಅರ್ಥಮ್ ಆಚಷ್ಟೇ.--

(ಭಾಷ್ಯಾರ್ಥ)

ಈಗ ಶ್ರುತಿಯು ಕಥೆಯನ್ನು ಬಿಟ್ಟು ತನ್ನ ಮಾತಿನಿಂದಲೇ ಕಥೆಯಿಂದ ಏರ್ಪಟ್ಟ ವಿಷಯವನ್ನು ಹೇಳುತ್ತದೆ :--

**ಸೈಷಾ ಭಾರ್ಗವೀ ವಾರುಣೀ ವಿದ್ಯಾ । ಪರಮೇ ವ್ಯೋಮನ್ ಪ್ರತಿಷ್ಠಿತಾ । ಸ ಯ ಏವಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ । ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ॥ ೨ ॥**

೨. ಆ ಈ ಭಾರ್ಗವೀ ವಾರುಣೀ ವಿದ್ಯೆಯು ಪರಮವ್ಯೋಮದಲ್ಲಿ ನಿಂತಿರುವದು. ಯಾವನು ಹೀಗೆಂಬು ಅರಿತುಕೊಳ್ಳುವನೋ ಅವನು ನೆಲೆನಿಲ್ಲುತ್ತಾನೆ. ಅನ್ನವಂತ(ನಾಗುತ್ತಾನೆ), ಅನ್ನಾದನಾಗುತ್ತಾನೆ; ಪ್ರಜೆಯಿಂದಲೂ ಪಶುಗಳಿಂದಲೂ ಬ್ರಹ್ಮವರ್ಚಸ್ಸಿನಿಂದಲೂ ದೊಡ್ಡವನಾಗುತ್ತಾನೆ. ಕೀರ್ತಿಯಿಂದಲೂ ದೊಡ್ಡವನಾಗುತ್ತಾನೆ.

---

1. ಸ್ಥೂಲವಾಗಿರುವ ಅನ್ನಾದಿಗಳನ್ನು ಸೂಕ್ಷ್ಮವಾದ ಮುಂದುಮುಂದಿನ ಪ್ರಾಣಾದಿಗಳಲ್ಲಿ ಲಯಮಾಡುತ್ತಾ.

2. ಹೃದಯಗುಹೆಯಲ್ಲಿರುವದೆಂದು ಶ್ರುತಿಯಲ್ಲಿ ಹೇಳಿರುವ.

(ಭಾಷ್ಯ)

೨೩೫. ಸೈಷಾ ಭಾರ್ಗವೀ ಭೃಗುಣಾ ವಿದಿತಾ ವರುಣೇನ ಪ್ರೋಕ್ತಾ ವಾರುಣೀ ವಿದ್ಯಾ ಪರಮೇ ವ್ಯೋಮನ್ ಹೃದಯಾಕಾಶಗುಹಾಯಾಂ ಪರಮೇ ಆನನ್ದೇ ಅದ್ವೈತೇ ಪ್ರತಿಷ್ಠಿತಾ ಪರಿಸಮಾಪ್ತಾ ಅನ್ನಮಯಾತ್ ಆತ್ಮನೋ ಅಧಿ ಪ್ರವೃತ್ತಾ। ಯ ಏವಮ್ ಅನ್ಯೋಽಪಿ ತಪಸೈವ ಸಾಧನೇನ ಅನೇನೈವ ಕ್ರಮೇಣ ಅನುಪ್ರವಿಶ್ಯ ಆನನ್ದಂ ಬ್ರಹ್ಮ ವೇದ ಸ ಏವಂ ವಿದ್ಯಾ ಪ್ರತಿಷ್ಠಾನಾತ್ ಪ್ರತಿತಿಷ್ಠತಿ ಆನನ್ದೇ ಪರಮೇ ಬ್ರಹ್ಮಣಿ। ಬ್ರಹ್ಮೈವ ಭವತಿ ಇತ್ಯರ್ಥಃ ॥

(ಭಾಷ್ಯಾರ್ಥ)

ಆ ಈ ಭಾರ್ಗವೀ ಎಂದರೆ ಭೃಗುವು ತಿಳಿದುಕೊಂಡ, ವಾರುಣೀ ಎಂದರೆ ವರುಣನು ಹೇಳಿಕೊಟ್ಟ ವಿದ್ಯೆಯು ಪರಮವ್ಯೋಮದಲ್ಲಿ ಎಂದರೆ ಹೃದಯಾಕಾಶದ ಗುಹೆಯಲ್ಲಿರುವ ಅದ್ವೈತವಾದ ಪರಮಾನಂದದಲ್ಲಿ[1] ನಿಂತಿತು, ಎಂದರೆ ಅನ್ನಮಯನೆಂಬ ಆತ್ಮನಿಂದ ಮುಂದಕ್ಕೆ ಹೊರಟು (ಆನಂದದಲ್ಲಿ) ಕೊನೆಗಂಡಿತು. ಮತ್ತೊಬ್ಬನೂ ಯಾವನು ತಪಸ್ಸೆಂಬ ಸಾಧನದಿಂದಲೇ ಇದೇ ಕ್ರಮದಿಂದ ಒಳಹೊಕ್ಕು ಆನಂದ(ವನ್ನು) ಬ್ರಹ್ಮವೆಂದು ಅರಿತುಕೊಳ್ಳುವನೋ ಅವನು ಈ ರೀತಿಯಲ್ಲಿ ವಿದ್ಯೆಯು ಕೊನೆಗಂಡದ್ದರಿಂದ ಆನಂದವೆಂಬ ಪರಬ್ರಹ್ಮದಲ್ಲಿ ನೆಲೆನಿಲ್ಲುತ್ತಾನೆ; ಬ್ರಹ್ಮವೇ ಆಗುತ್ತಾನೆ[2] ಎಂದರ್ಥ.

(ಭಾಷ್ಯ)

೨೩೬. ದೃಷ್ಟಂ ಚ ಫಲಂ ತಸ್ಯ ಉಚ್ಯತೇ। ಅನ್ನವಾನ್ ಪ್ರಭೂತಮ್ ಅನ್ನಮ್ ಅಸ್ಯ ವಿದ್ಯತೇ ಇತಿ ಅನ್ನವಾನ್। ಸತ್ತಾಮಾತ್ರೇಣ ತು ಸರ್ವೋ ಹಿ ಅನ್ನವಾನ್ ಇತಿ ವಿದ್ಯಾಯಾ ವಿಶೇಷೋ ನ ಸ್ಯಾತ್। ಏವಮ್ ಅನ್ನಮ್ ಅತ್ತಿ, ಇತಿ ಅನ್ನಾದಃ ದೀಪ್ತಾಗ್ನಿರ್ಭವತಿ ಇತ್ಯರ್ಥಃ। ಮಹಾನ್ ಭವತಿ। ಕೇನ ಮಹತ್ತ್ವಮ್ ಇತಿ? ಅತ ಆಹ। ಪ್ರಜಯಾ ಪುತ್ರಾದಿನಾ, ಪಶುಭಿಃ ಗವಾಶ್ವಾದಿಭಿಃ, ಬ್ರಹ್ಮವರ್ಚಸೇನ ಶಮದಮಜ್ಞಾನಾದಿನಿಮಿತ್ತೇನ ತೇಜಸಾ। ಮಹಾನ್ ಭವತಿ ಕೀರ್ತ್ಯಾ ಖ್ಯಾತ್ಯಾ ಶುಭಾಚಾರನಿಮಿತ್ತಯಾ ॥

---

1. ಆಕಾಶದಲ್ಲಿಯೇ ಎಂದು ಅಕ್ಷರಾರ್ಥವನ್ನು ಹಿಡಿಯಬಾರದು, ಆಕಾಶವೆಂಬ ಶಬ್ದವನ್ನು ಬ್ರಹ್ಮಕ್ಕೂ ಉಪಯೋಗಿಸುವದುಂಟು ಸೂ. ಭಾ ೧-೧-೨೨, ೧-೩-೧೪

2. ಬ್ರಹ್ಮದಲ್ಲಿ ನಿಲ್ಲುತ್ತಾನೆ ಎಂದದ್ದರಿಂದ ಭೇದವೇನೂ ವಿವಕ್ಷಿತವಲ್ಲ.

(ಭಾಷ್ಯಾರ್ಥ)

ಅವನಿಗೆ ಆಗುವ ದೃಷ್ಟಫಲವನ್ನೂ ಶ್ರುತಿ ಹೇಳುತ್ತದೆ. ಅನ್ನವಂತ(ನಾಗುತ್ತಾನೆ); ಬೇಕಾದಷ್ಟು ಅನ್ನವು ಇವನಿಗೆ ಇರುವದರಿಂದ ಅನ್ನವಂತನೆನಿಸುತ್ತಾನೆ. (ಅನ್ನವು) ಇದ್ದ ಮಾತ್ರದಿಂದ ಎಲ್ಲರೂ ಅನ್ನವಂತರೇ (ಆಗಿರುವದರಿಂದ ಅಷ್ಟರಿಂದ) ಜ್ಞಾನದಲ್ಲಿ ವಿಶೇಷವೇನೂ ಆಗಲಾರದು [1]. ಇದರಂತೆ ಅನ್ನವನ್ನು ತಿನ್ನುತ್ತಾನಾದ್ದರಿಂದ ಅನ್ನಾದನಾಗುತ್ತಾನೆ; ಎಂದರೆ ದೀಪ್ತಾಗ್ನಿಯಾಗುತ್ತಾನೆ [2] ಎಂದರ್ಥ, ದೊಡ್ಡವನು ಆಗುತ್ತಾನೆ. ಏತರಿಂದ ದೊಡ್ಡಸ್ತಿಕೆ (ಬರುತ್ತದೆ)? ಎಂದರೆ, ಅದಕ್ಕೆ (ಶ್ರುತಿ) ಹೇಳುತ್ತದೆ. ಪ್ರಜೆಯಿಂದಲೂ ಎಂದರೆ ಮಗನೇ ಮುಂತಾದ [3] (ಸಂತತಿಯಿಂದಲೂ) ಪಶುಗಳಿಂದಲೂ ಹಸು, ಕುದುರೆ ಮುಂತಾದವುಗಳಿಂದಲೂ ಬ್ರಹ್ಮವರ್ಚಸ್ಸಿನಿಂದಲೂ ಎಂದರೆ ಶಮ, ದಮ, ಜ್ಞಾನ-ಮುಂತಾದ ಕಾರಣದಿಂದ (ಉಂಟಾಗಿರುವ) ಕಾಂತಿಯಿಂದಲೂ (ದೊಡ್ಡವನಾಗುತ್ತಾನೆ) ಕೀರ್ತಿಯಿಂದಲೂ ಎಂದರೆ ಒಳ್ಳೆಯ ನಡತೆಯಿಂದುಂಟಾದ [4] ಹೆಸರುವಾಸಿಯಿಂದಲೂ ದೊಡ್ಡವನಾಗುತ್ತಾನೆ [5].

## ಅನ್ನವನ್ನು ನಿಂದಿಸಬಾರದು

(ಅಥ ಸಪ್ತಮೋಽನುವಾಕಃ)

**ಅನ್ನಂ ನ ನಿನ್ದ್ಯಾತ್ । ತದ್ ವ್ರತಮ್ ॥ ೧ ॥**

೧. ಅನ್ನವನ್ನು ನಿಂದಿಸಬಾರದು, ಅದು ವ್ರತವು.

1, ಅಜ್ಞರಿಗೂ ಸಾಕಾದಷ್ಟು ಅನ್ನವಿರುತ್ತದೆ; ಅನ್ನವಾನ್ ಎಂಬಲ್ಲಿರುವ ಪ್ರತ್ಯಯವು ಬೇಕಾದಷ್ಟು ಹೆಚ್ಚಾಗಿ ಉಳ್ಳವನು ಎಂಬರ್ಥವನ್ನು ಸೂಚಿಸುತ್ತದೆ.

2. ಅನ್ನವನ್ನು ತಿಂದು ಅರಗಿಸಿಕೊಳ್ಳುವ ಶಕ್ತಿಯೂ ಇರುವವನಾಗುತ್ತಾನೆ.

3. ಮೊಮ್ಮಗನು, ಮರಿಮಗನು ಮುಂತಾದ.

4. "ಶುಭಪ್ರಚಾರ" ಎಂಬ ಆ॥ ಪಾಠಕ್ಕೂ ಇದೇ ಅರ್ಥ.

5. "ಇಲ್ಲಿ ಅನ್ನವಂತನಾಗುತ್ತಾನೆ" ಎಂದು ಮುಂತಾಗಿ ಬ್ರಹ್ಮಜ್ಞಾನಿಗೆ ಫಲವನ್ನು ಹೇಳಿರುವದು ಜೀವನ್ಮುಕ್ತನಿಗೂ ಅವಿದ್ಯಾಲೇಶವಿರುವದರಿಂದ ದ್ವೈತಾಭಾಸವು ಕಾಣಬಹುದೆಂಬ ಕಾರಣದಿಂದ ಸರಿಯಾಗಿದೆ ಎಂದು (ಆ॥) ಟೀಕೆಯಲ್ಲಿದೆ; ಆದರೆ ಅನ್ನಾದ್ಯುಪಾಸಕರಿಗೆ ಈ ಫಲವಾಗುವದೆಂದು ಹೇಳಿರುವದನ್ನಿಟ್ಟುಕೊಂಡು ಆ ಫಲವೂ ಬ್ರಹ್ಮಜ್ಞಾನಿಯದೇ ಎಂದು ವಿದ್ಯಾಸ್ತುತಿಗಾಗಿ ಹೇಳಿದೆಯೆಂದೂ ಅರ್ಥಮಾಡಬಹುದಾಗಿದೆ.

(ಭಾಷ್ಯ)

೨೩೭. ಕಿಂ ಚ ಅನ್ನೇನ ದ್ವಾರಭೂತೇನ ಬ್ರಹ್ಮ ವಿಜ್ಞಾತಂ ಯಸ್ಮಾತ್ ತಸ್ಮಾತ್ ಗುರುಮಿವ ಅನ್ನಂ ನ ನಿನ್ದ್ಯಾತ್। ತದಸ್ಯ ಏವಂ ಬ್ರಹ್ಮವಿದೋ ವ್ರತಮ್ ಉಪದಿಶ್ಯತೇ। ವ್ರತೋಪದೇಶೋಽನ್ನಸ್ತುತಯೇ। ಸ್ತುತಿಭಾಕ್ತ್ವಂ ಚ ಅನ್ನಸ್ಯ ಬ್ರಹ್ಮೋಪಲಬ್ಧ್ಯುಪಾಯತ್ವಾತ್ ॥

(ಭಾಷ್ಯಾರ್ಥ)

ಮತ್ತು (ಜ್ಞಾನಕ್ಕೆ) ದ್ವಾರವಾಗಿರುವ ಅನ್ನದಿಂದ ಬ್ರಹ್ಮವನ್ನು ಅರಿತುಕೊಂಡದ್ದಾಯಿತಲ್ಲವೆ, ಆದ್ದರಿಂದ ಗುರುವನ್ನು (ಹೇಗೆ ನಿಂದಿಸಬಾರದೋ) ಹಾಗೆ ಅನ್ನವನ್ನು ನಿಂದಿಸಬಾರದು. ಅದು, ಹೀಗೆ ಬ್ರಹ್ಮವನ್ನು ಅರಿತುಕೊಂಡಿರುವ ಈ (ಜ್ಞಾನಿಗೆ) ವ್ರತವೆಂದು ಉಪದಿಷ್ಟವಾಗಿರುತ್ತದೆ. ವ್ರತವೆಂದು ಹೇಳಿರುವದು ಅನ್ನವನ್ನು ಹೊಗಳುವದಕ್ಕೆ.[1] ಅನ್ನವು ಹೊಗಳತಕ್ಕದ್ದಾಗಿರುವದು (ಏಕೆಂದರೆ) ಬ್ರಹ್ಮವನ್ನು ಅರಿತುಕೊಳ್ಳುವದಕ್ಕೆ ಸಾಧನವಾಗಿರುವದರಿಂದ.

# ೮. ಅನ್ನಾನ್ನಾದರ ಉಪಾಸನೆಗಳು

## ಶರೀರಪ್ರಾಣಗಳೆಂಬ ಅನ್ನಾನ್ನಾದಗಳು

**ಪ್ರಾಣೋ ವಾ ಅನ್ನಮ್। ಶರೀರಮನ್ನಾದಮ್। ಪ್ರಾಣೇ ಶರೀರಂ ಪ್ರತಿಷ್ಠಿತಮ್। ಶರೀರೇ ಪ್ರಾಣಃ ಪ್ರತಿಷ್ಠಿತಃ। ತದೇತದನ್ನಮನ್ನೇ ಪ್ರತಿಷ್ಠಿತಮ್ ॥ ೨ ॥**

೨. ಪ್ರಾಣವೇ ಅನ್ನವು, ಶರೀರವು ಅನ್ನಾದವು. ಪ್ರಾಣದಲ್ಲಿ ಶರೀರವು ನಿಂತಿರುತ್ತದೆ; ಶರೀರದಲ್ಲಿ ಪ್ರಾಣವು ನಿಂತಿರುತ್ತದೆ. ಆ ಈ ಅನ್ನವು ಅನ್ನದಲ್ಲಿ ನಿಂತಿರುತ್ತದೆ.

(ಭಾಷ್ಯ)

೨೩೮. ಪ್ರಾಣೋ ವೈ ಅನ್ನಮ್। ಶರೀರಾನ್ತರ್ಭಾವಾತ್ ಪ್ರಾಣಸ್ಯ ಯತ್ ಯಸ್ಯಾನ್ತಃ ಪ್ರತಿಷ್ಠಿತಮ್ ಭವತಿ ತತ್ ತಸ್ಯ ಅನ್ನಂ ಭವತಿ ಇತಿ। ಶರೀರೇ ಚ

---

1. ಜ್ಞಾನಿಗೆ ಉಪದೇಶವು ಹೊಂದುವದಿಲ್ಲವಾದ್ದರಿಂದ ಜ್ಞಾನಿಯು ವ್ರತದಂತೆ ಅದನ್ನು ನಡೆಯಿಸುತ್ತಲೇ ಇರುವನೆಂದೂ ಸಾಧಕರು ಹಾಗೆ ಮಾಡಬೇಕೆಂದೂ ಅರ್ಥಮಾಡಿಕೊಳ್ಳಬೇಕು. ಅನ್ನಬ್ರಹ್ಮೋಪಾಸಕನು ಅನ್ನವನ್ನು ನಿಂದಿಸಬಾರದು ಎಂದು ವಿಧಿಯನ್ನು ಕಲ್ಪಿಸಿದರೆ ಯಾವ ಕೊಂದರೆಯೂ ಇರುವದಿಲ್ಲ.

ಪ್ರಾಣಃ ಪ್ರತಿಷ್ಠಿತಃ । ತಸ್ಮಾತ್ ಪ್ರಾಣೋಽನ್ನಮ್, ಶರೀರಮ್ ಅನ್ನಾದಮ್ । ತಥಾ ಶರೀರಮಪಿ ಅನ್ನಮ್, ಪ್ರಾಣೋಽನ್ನಾದಃ । ತಸ್ಮಾತ್ ಪ್ರಾಣೇ ಶರೀರಂ ಪ್ರತಿಷ್ಠಿತಮ್ ತನ್ನಿಮಿತ್ತತ್ವಾತ್ ಶರೀರಸ್ಥಿತೇಃ । ತಸ್ಮಾತ್ ತದೇತತ್ ಉಭಯಂ ಶರೀರಂ ಪ್ರಾಣಶ್ಚ ಅನ್ನಮನ್ನದಶ್ಚ । ಯೇನ ಅನ್ಯೋನ್ಯಸ್ಮಿನ್ ಪ್ರತಿಷ್ಠಿತಂ ತೇನ ಅನ್ನಮ್ । ಯೇನ ಅನ್ಯೋನ್ಯಸ್ಯ ಪ್ರತಿಷ್ಠಾ ತೇನ ಅನ್ನಾದಃ । ತಸ್ಮಾತ್ ಪ್ರಾಣಃ ಶರೀರಂ ಚ ಉಭಯಮ್ ಅನ್ನಮ್ ಅನ್ನಾದಂ ಚ ॥

(ಭಾಷ್ಯಾರ್ಥ)

ಪ್ರಾಣವೇ ಅನ್ನವು, ಏಕೆಂದರೆ ಪ್ರಾಣವು ಶರೀರದೊಳಗೆ ಇರುತ್ತದೆ. ಯಾವದು ಯಾವದರ ಒಳಗೆ ಇದ್ದುಕೊಂಡಿರುವದೋ ಅದು ಅದಕ್ಕೆ ಅನ್ನವು ಆಗುತ್ತದೆ ಎಂದು [1] (ಪ್ರಸಿದ್ಧವು). ಶರೀರದೊಳಗೆ ಪ್ರಾಣವು ಇದ್ದುಕೊಂಡಿರುತ್ತದೆ ; ಆದ್ದರಿಂದ ಪ್ರಾಣವು ಅನ್ನವು, ಶರೀರವು ಅನ್ನಾದವು. ಇದರಂತೆ ಶರೀರವೂ ಅನ್ನವು, ಪ್ರಾಣವು ಅನ್ನಾದವು. ಹೇಗೆ ? ಎಂದರೆ ಪ್ರಾಣದಲ್ಲಿ ಶರೀರವು ಇದ್ದುಕೊಂಡಿರುತ್ತದೆ ; ಏಕೆಂದರೆ ಆ (ಪ್ರಾಣ) ನಿಮಿತ್ತದಿಂದಲೇ ಶರೀರವು ನಿಂತಿರುತ್ತದೆ. ಆದ್ದರಿಂದ ಆ ಈ ಶರೀರ, ಪ್ರಾಣ ಎಂಬೆರಡು ಅನ್ನವೂ ಅನ್ನಾದವೂ (ಆಗಿವೆ). ಒಂದು ಇನ್ನೊಂದರಲ್ಲಿ ಇದ್ದುಕೊಂಡಿರುತ್ತದೆಯಲ್ಲ, ಅದರಿಂದ ಅನ್ನವು ; ಒಂದು ಇನ್ನೊಂದಕ್ಕೆ ಆಶ್ರಯವಾಗಿರುತ್ತದೆಯಲ್ಲ, ಅದರಿಂದ ಅನ್ನಾದವು. ಆದ್ದರಿಂದ ಪ್ರಾಣವೂ ಶರೀರವೂ ಎರಡೂ ಅನ್ನವೂ ಅನ್ನಾದವೂ (ಆಗಿರುತ್ತದೆ).

## ಈ ಉಪಾಸನೆಯ ಫಲ

**ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ। ಅನ್ನವಾನನ್ನಾದೋ ಭವತಿ । ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ॥ ೩ ॥**

೩. ಯಾವನು ಈ ಅನ್ನವು ಅನ್ನದಲ್ಲಿ ಇದ್ದುಕೊಂಡಿರುವದೆಂಬುದನ್ನು ಅರಿತುಕೊಳ್ಳುವನೋ ಅವನು ನೆಲೆನಿಲ್ಲುತ್ತಾನೆ. ಅನ್ನವಂತ(ನಾಗುತ್ತಾನೆ), ಅನ್ನಾದನಾಗುತ್ತಾನೆ ; ಪ್ರಜೆಯಿಂದಲೂ ಪಶುಗಳಿಂದಲೂ ಬ್ರಹ್ಮವರ್ಚಸ್ಸಿನಿಂದಲೂ ದೊಡ್ಡವನಾಗುತ್ತಾನೆ, ಕೀರ್ತಿಯಿಂದಲೂ ದೊಡ್ಡವನಾಗುತ್ತಾನೆ.

---

1. ಉದಾಹರಣೆಗೆ ಶರೀರಕ್ಕೆ ಅನ್ನವಾದದ್ದು ಶರೀರದೊಳಗೆ ಇರುತ್ತದೆ.

(ಭಾಷ್ಯ)

೨೩೯. ಸ ಯ ಏವಮ್ ಏತದನ್ನಮ್ ಅನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ ಅನ್ನಾನ್ನಾದಾತ್ಮನೈವ । ಕಿಂ ಚ ಅನ್ನವಾನನ್ನಾದೋ ಭವತಿ ಇತ್ಯಾದಿ ಪೂರ್ವವತ್ ॥

(ಭಾಷ್ಯಾರ್ಥ)

ಯಾವನು ಹೀಗೆ ಈ ಅನ್ನವು ಅನ್ನದಲ್ಲಿ ಇದ್ದುಕೊಂಡಿರುವದೆಂಬುದನ್ನು ಅರಿತುಕೊಳ್ಳುವನೋ ಅವನು ಅನ್ನ ಮತ್ತು ಅನ್ನಾದ-ಇವುಗಳ ರೂಪದಿಂದಲೇ ನೆಲೆನಿಲ್ಲುತ್ತಾನೆ[1] ಮತ್ತು "ಅನ್ನವಂತನಾಗುತ್ತಾನೆ, ಅನ್ನಾದನಾಗುತ್ತಾನೆ" ಇದೇ ಮುಂತಾದದ್ದನ್ನು ಹಿಂದಿನಂತೆ (ಅರ್ಥಮಾಡಿಕೊಳ್ಳಬೇಕು.)

## ಅನ್ನವನ್ನು ಬೇಡವೆನ್ನಬಾರದು

(ಅಥಾಷ್ಟಮೋಽನುವಾಕಃ)

**ಅನ್ನಂ ನ ಪರಿಚಕ್ಷೀತ । ತದ್ ವ್ರತಮ್ । ೧ ॥**

(ಎಂಟನೆಯ ಅನುವಾಕದ ಪ್ರಾರಂಭವು)

(ಭಾಷ್ಯ)

೨೪೦. ಅನ್ನಂ ನ ಪರಿಚಕ್ಷೀತ ನ ಪರಿಹರೇತ್ । ತದ್ ವ್ರತಮ್ । ಪೂರ್ವವತ್ ಸ್ತುತ್ಯರ್ಥಮ್ । ತದೇವಂ ಶುಭಾಶುಭಕಲ್ಪನಯಾ ಅಪರಿಗೃಹ್ಯಮಾಣಂ ಸ್ತುತಂ ಮಹೀಕೃತಮ್ ಅನ್ನಂ ಸ್ಯಾತ್ ॥

(ಭಾಷ್ಯಾರ್ಥ)

ಅನ್ನವನ್ನು ಬೇಡವೆನ್ನಬಾರದು, "ಅದು ವ್ರತವು" ಎಂಬುದು ಹಿಂದೆ ಹೇಳಿದಂತೆ (ಅನ್ನವನ್ನು) ಹೊಗಳುವದಕ್ಕೆ. ಹೀಗೆ ಒಳ್ಳೆಯದು, ಕೆಟ್ಟದ್ದು-ಎಂಬ ಕಲ್ಪನೆಯಿಂದ ಅನ್ನವನ್ನು ಭಾವಿಸದೆ[2] ಇರುವದರಿಂದ ಅನ್ನವನ್ನು ಹೊಗಳಿ ದೊಡ್ಡದು ಮಾಡಿದಂತೆ ಆಗುತ್ತದೆ.

---

1. ಶರೀರ, ಪ್ರಾಣ -ಇವುಗಳಲ್ಲಿ ಒಂದು ಅನ್ನವು ಮತ್ತೊಂದರಲ್ಲಿರುವದೆಂದು ಉಪಾಸನೆಮಾಡಿರುವವನು ಆಯಾ ಅನ್ನ, ಅನ್ನಾದ—ಇವುಗಳ ರೂಪದಿಂದ ನೆಲೆನಿಲ್ಲುತ್ತಾನೆ.

2. "ಅಪರಿಗೃಹ್ಯಮಾಣಮ್" ಎಂಬ ಪಾ॥ ಪಾಠಕ್ಕೆ ಬಿಡದೆ ಇದ್ದರೆ ಎಂದರ್ಥ.

(ಭಾಷ್ಯ)

೨೪೧. ಏವಂ ಯಥೋಕ್ತಮ್ ಉತ್ತರೇಷ್ವಪಿ "ಆಪೋ ವಾ ಅನ್ನಮ್" ಇತ್ಯಾದಿಷು ಯೋಜಯೇತ್ ||

(ಭಾಷ್ಯಾರ್ಥ)

"ನೀರೇ ಅನ್ನವು" ಮುಂತಾದ ಈ ವಾಕ್ಯಗಳಲ್ಲಿಯೂ ಹೀಗೆಯೇ ಹಿಂದೆ ಹೇಳಿದ (ವ್ಯಾಖ್ಯಾನವನ್ನೇ)[1] ಹೊಂದಿಸಿಕೊಳ್ಳಬೇಕು.

## ಅಪ್ಪು, ಜ್ಯೋತಿ-ಎಂಬ ಅನ್ನಾನ್ನಾದಿಗಳು

**ಆಪೋ ವಾ ಅನ್ನಮ್ । ಜ್ಯೋತಿರನ್ನಾದಮ್ । ಅಪ್ಸು ಜ್ಯೋತಿಃ ಪ್ರತಿಷ್ಠಿತಮ್ । ಜ್ಯೋತಿಷ್ಯಾಪಃ ಪ್ರತಿಷ್ಠಿತಾಃ । ತದೇತದನ್ನಮನ್ನೇ ಪ್ರತಿಷ್ಠಿತಮ್ । ೨ ॥**

೨. ಅಪ್ಪೇ ಅನ್ನವು, ಜ್ಯೋತಿಯು ಅನ್ನಾದವು; ಅಪ್ಪಿನಲ್ಲಿ ಜ್ಯೋತಿಯು ಇದ್ದುಕೊಂಡಿರುತ್ತದೆ ಜ್ಯೋತಿಯಲ್ಲಿ ಅಪ್ಪು ಇದ್ದುಕೊಂಡಿರುತ್ತದೆ. ಆ ಈ ಅನ್ನವು ಅನ್ನದಲ್ಲಿದ್ದುಕೊಂಡಿದೆ.

## ಈ ಉಪಾಸನೆಯ ಫಲ

**ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ॥ ೩ ॥**

೩. ಯಾವನು ಈ ಅನ್ನವು ಅನ್ನದಲ್ಲಿದ್ದುಕೊಂಡಿರುವದನ್ನು ಅರಿತುಕೊಳ್ಳುವನೋ ಅವನು ನೆಲೆನಿಲ್ಲುತ್ತಾನೆ, ಅನ್ನವಂತ(ನಾಗುತ್ತಾನೆ), ಅನ್ನಾದನಾಗುತ್ತಾನೆ, ಪ್ರಜೆಯಿಂದಲೂ ಪಶುಗಳಿಂದಲೂ ಬ್ರಹ್ಮವರ್ಚಸ್ಸಿನಿಂದಲೂ ದೊಡ್ಡವನಾಗುತ್ತಾನೆ; ಕೀರ್ತಿಯಿಂದ ದೊಡ್ಡವನಾಗುತ್ತಾನೆ.

1. ಒಂದರೊಳಗೊಂದಿರುವದರಿಂದ ಒಂದೊಂದೂ ಅನ್ನವೂ ಅನ್ನಾದವೂ ಆಗಿರುವದೆಂಬದನ್ನು ಹಿಂದಿನ ಭಾಷ್ಯದಲ್ಲಿ ಹೇಳಿದಂತೆ ತಿಳಿಯಬೇಕು. ಫಲವಾಕ್ಯದ ಅರ್ಥವನ್ನು ಹಾಗೆಯೇ ಸಂದರ್ಭಕ್ಕೆ ತಕ್ಕಂತೆ ಹೊಂದಿಸಿಕೊಂಡು ಅರ್ಥಮಾಡಿಕೊಳ್ಳಬೇಕು.

## ಅನ್ನವನ್ನು ಬಹುವಾಗಿ ಮಾಡಬೇಕು

(ಅಥ ನವಮೋಽನುವಾಕಃ)

**ಅನ್ನಂ ಬಹು ಕುರ್ವೀತ ॥ ತದ್ ವ್ರತಮ್ ॥ ೧ ॥**

(ಒಂಬತ್ತನೆಯ ಅನುವಾಕದ ಪ್ರಾರಂಭವು)

೧. ಅನ್ನವನ್ನು ಬಹುವಾಗಿ ಮಾಡಿಕೊಳ್ಳಬೇಕು, ಅದು ವ್ರತವು.

(ಭಾಷ್ಯ)

೨೪೨. "ಅಪ್ಸು ಜ್ಯೋತಿಃ '' ಇತಿ ಅಬ್ಜ್ಯೋತಿಷೋರನ್ನಾನ್ನಾದಗುಣತ್ವೇನ, ಉಪಾಸಕಸ್ಯ ಅನ್ನಸ್ಯ ಬಹುಕರಣಂ ವ್ರತಮ್ ।

(ಭಾಷ್ಯಾರ್ಥ)

"ಅಪ್ಪಿನಲ್ಲಿ ಜ್ಯೋತಿ(ಯಿದ್ದುಕೊಂಡಿದೆ)" ಎಂದು (ಮುಂತಾದ ಕಾರಣದಿಂದ) ಅಪ್ಪು, ಜ್ಯೋತಿ–ಇವುಗಳನ್ನು ಅನ್ನ ಮತ್ತು ಅನ್ನಾದ ಎಂಬ ಗುಣದಿಂದ ಕೂಡಿದವನ್ನಾಗಿ ಉಪಾಸನೆಮಾಡುತ್ತಿರುವವನಿಗೆ ಅನ್ನವನ್ನು ಬಹುವಾಗಿ ಮಾಡಿಕೊಳ್ಳುವದು ವ್ರತವು.

## ಪೃಥಿವಿ, ಆಕಾಶ–ಎಂಬ ಅನ್ನಾನ್ನಾದಿಗಳು

**ಪೃಥಿವೀ ವಾ ಅನ್ನಮ್ । ಆಕಾಶೋಽನ್ನಾದಃ । ಪೃಥಿವ್ಯಾಮಾಕಾಶಃ ಪ್ರತಿಷ್ಠಿತಃ । ಆಕಾಶೇ ಪೃಥಿವೀ ಪ್ರತಿಷ್ಠಿತಾ। ತದೇತದನ್ನಮನ್ನೇ ಪ್ರತಿಷ್ಠಿತಮ್ । ೨ ॥**

೨. ಪೃಥಿವಿಯೇ ಅನ್ನವು ಆಕಾಶವೇ ಅನ್ನಾದವು. ಪೃಥಿವಿಯಲ್ಲಿ ಆಕಾಶವು ಇದ್ದುಕೊಂಡಿರುತ್ತದೆ. ಆಕಾಶದಲ್ಲಿ ಪೃಥಿವಿಯು ಇದ್ದುಕೊಂಡಿರುತ್ತದೆ. ಆ ಈ ಅನ್ನವು ಅನ್ನದಲ್ಲಿ ಇದ್ದುಕೊಂಡಿದೆ.

## ಈ ಉಪಾಸನೆಯ ಫಲ

**ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ॥ ೨ ॥**

೨. ಯಾವನು ಈ ಅನ್ನವು ಅನ್ನದಲ್ಲಿ ಇದ್ದುಕೊಂಡಿರುವದೆಂಬು ದನ್ನು ಅರಿತುಕೊಳ್ಳುವನೋ ಅವನು ನೆಲೆನಿಲ್ಲುತ್ತಾನೆ. ಪ್ರಜೆಯಿಂದಲೂ ಪಶುಗಳಿಂದಲೂ ಬ್ರಹ್ಮವರ್ಚಸ್ಸಿನಿಂದಲೂ ದೊಡ್ಡವನಾಗುತ್ತಾನೆ. ಕೀರ್ತಿ ಯಿಂದ ದೊಡ್ಡವನಾಗುತ್ತಾನೆ.

## ವಸತಿ ಇಲ್ಲವೆನ್ನಬಾರದು, ಹೆಚ್ಚು ಅನ್ನವನ್ನು ಸಂಗ್ರಹಿಸಬೇಕು

(ಅಥ ದಶಮೋಽನುವಾಕಃ)

**ನ ಕಂಚನ ವಸತೌ ಪ್ರತ್ಯಾಚಕ್ಷೀತ। ತದ್ ವ್ರತಮ್। ತಸ್ಮಾದ್ ಯಯಾ ಕಯಾ ಚ ವಿಧಯಾ ಬಹ್ವನ್ನಂ ಪ್ರಾಪ್ನುಯಾತ್। ಅರಾಧ್ಯಸ್ಮಾ ಅನ್ನಮಿತ್ಯಾಚಕ್ಷತೇ ॥ ೧ ॥**

(ಹತ್ತನೆಯ ಅನುವಾಕದ ಆರಂಭ)

೧. ವಸತಿಯ (ವಿಷಯ)ದಲ್ಲಿ ಯಾರನ್ನೂ ಬೇಡವೆನ್ನಬಾರದು. ಅದು ವ್ರತವು. ಆದ್ದರಿಂದ ಯಾವದಾದರೂ ವಿಧದಿಂದ ಬಹು ಅನ್ನವನ್ನು ಪಡೆದುಕೊಳ್ಳಬೇಕು. "ಇವನಿಗೆ" ಅನ್ನವು ಸಿದ್ಧವಾಗಿದೆ ಎನ್ನುತ್ತಾರೆ.

(ಭಾಷ್ಯ)

೨೪೬. ತಥಾ ಪೃಥಿವ್ಯಾಕಾಶೋಪಾಸಕಸ್ಯ। ವಸತೌ ವಸತಿನಿಮಿತ್ತಂ ಕಂಚ ನ ಕಂಚಿದಪಿ ನ ಪ್ರತ್ಯಾಚಕ್ಷೀತ। ವಸತ್ಯರ್ಥಮಾಗತಂ ನ ನಿವಾರಯೇತ್ ಇತ್ಯರ್ಥಃ। ವಾಸೇ ಚ ದತ್ತೇ ಹಿ[1] ಅವಶ್ಯಮ್ ಅಶನಂ ದಾತವ್ಯಮ್। ತಸ್ಮಾತ್ ಯಯಾ ಕಯಾ ಚ ವಿಧಯಾ ಯೇನಕೇನ ಚ ಪ್ರಕಾರೇಣ ಬಹ್ವನ್ನಂ ಪ್ರಾಪ್ನುಯಾತ್ ಬಹ್ವನ್ನ ಸಂಗ್ರಹಂ ಕುರ್ಯಾತ್ ಇತ್ಯರ್ಥಃ। ಯಸ್ಮಾತ್ ಅನ್ನವನ್ತೋ ವಿದ್ವಾಂಸಃ ಅಭ್ಯಾ ಗತಾಯ ಅನ್ನಾರ್ಥಿನೇ ಅರಾಧಿ ಸಂಸಿದ್ಧಮ್ ಅಸ್ಮೈ ಅನ್ನಮ್ ಇತಿ ಆಚಕ್ಷತೇ ನ ನಾಸ್ತಿ ಇತಿ ಪ್ರತ್ಯಾಖ್ಯಾನಂ ಕುರ್ವನ್ತಿ ತಸ್ಮಾಚ್ಚ ಹೇತೋಃ ಬಹು ಅನ್ನಂ ಪ್ರಾಪ್ನು ಯಾತ್ ಇತಿ ಪೂರ್ವೇಣ ಸಂಬನ್ಧಃ ॥

---

1. ಈ ಮಾತು ವಾ॥ ಪಾಠದಲ್ಲಿಲ್ಲ; ಈ ವಾಕ್ಯದಲ್ಲಿ ಒಂದು ಹಿ ಹೆಚ್ಚಾಗಿಯೂ ಇದೆ.

(ಭಾಷ್ಯಾರ್ಥ)

ಇದರಂತೆ ಪೃಥಿವಿ, ಆಕಾಶ-ಇವುಗಳನ್ನು ಉಪಾಸನೆಮಾಡುವವನಿಗೆ (ಇದು ವ್ರತವು).[1] ವಸತಿಯ (ವಿಷಯದಲ್ಲಿ) ಎಂದರೆ ವಸತಿಯ ಕಾರಣದಿಂದ ಯಾರನ್ನೂ ಯಾರೊಬ್ಬನನ್ನೂ ಬೇಡವೆನ್ನಬಾರದು. ವಾಸವನ್ನು ಕೊಟ್ಟಬಳಿಕ ಅವಶ್ಯವಾಗಿ ಊಟವನ್ನು ಕೊಡಬೇಕಾಗುವದಷ್ಟೆ. ಆದ್ದರಿಂದ ಯಾವದಾದರೂ ವಿಧದಿಂದ ಯಾವದೊಂದು ಪ್ರಕಾರದಿಂದಲೇ ಆಗಲಿ, ಬಹಳ ಅನ್ನವನ್ನು ಪಡೆದುಕೊಳ್ಳಬೇಕು, ಬಹಳವಾಗಿ ಅನ್ನವನ್ನು ಕೂಡಿಹಾಕಿಕೊಳ್ಳಬೇಕು ಎಂದು ಅರ್ಥ. ಅನ್ನವುಳ್ಳ ವಿವೇಕಿಗಳು ಅನ್ನಕ್ಕಾಗಿ ಮನೆಗೆ ಬಂದವನಿಗೆ " ಇವನಿಗೆ ಅನ್ನವು ಸಿದ್ಧವಾಗಿದೆ. ಸಜ್ಜಾಗಿದೆ ಎನ್ನುತ್ತಾರಲ್ಲವೆ? "ಇಲ್ಲ" ಎಂದು ತಿರಸ್ಕಾರಮಾಡುವದಿಲ್ಲವಲ್ಲವೆ? ಆ ಕಾರಣದಿಂದಲೂ ಬಹಳ ಅನ್ನವನ್ನು ಪಡೆದುಕೊಳ್ಳಬೇಕು ಎಂದು ಹಿಂದಿನ (ವಾಕ್ಯಕ್ಕೆ) ಸಂಬಂಧ(ವನ್ನು ಮಾಡಿಕೊಳ್ಳಬೇಕು).

## ಅನ್ನದಾನದ ಹೆಚ್ಚುಗಾರಿಕೆ

(ಭಾಷ್ಯ)

೨೪೪. ಅಪಿ ಚ ಅನ್ನದಾನಸ್ಯ ಮಾಹಾತ್ಮ್ಯಮ್ ಉಚ್ಯತೇ ಯಥಾ ಯತ್ಕಾಲಂ ಪ್ರಯಚ್ಛತಿ ಅನ್ನಮ್ ತಥಾ ತತ್ಕಾಲಮೇವ ಪ್ರತ್ಯುಪನಮತೇ । ಕಥಮ್ ಇತಿ? ತದೇತದಾಹ ।

(ಭಾಷ್ಯಾರ್ಥ)

ಮತ್ತು ಅನ್ನದಾನದ ಮಾಹಾತ್ಮ್ಯವನ್ನು (ಶ್ರುತಿ) ಹೇಳುತ್ತದೆ. ಹೇಗೆ ಯಾವ ಕಾಲದಲ್ಲಿ ಅನ್ನವನ್ನು ಕೊಡುತ್ತಾರೋ ಹಾಗೆಯೇ ಅದೇ ಕಾಲದಲ್ಲಿ (ಅದು ಅವರಿಗೆ) ಹಿಂತಿರುಗಿಬರುತ್ತದೆ. ಹೇಗೆ? ಎಂದರೆ ಆ ಇದನ್ನು (ಶ್ರುತಿ) ಹೇಳುತ್ತದೆ :-

**ಏತದ್ವೈ ಮುಖತೋಽನ್ನಗ್ಂ ರಾದ್ಧಮ್ । ಮುಖತೋಽಸ್ಮಾ ಅನ್ನಗ್ಂ ರಾಧ್ಯತೇ। ಏತದ್ವೈ ಮಧ್ಯತೋಽನ್ನಗ್ಂ ರಾದ್ಧಮ್। ಮಧ್ಯತೋಽಸ್ಮಾ ಅನ್ನಗ್ಂ ರಾಧ್ಯತೇ । ಏತದ್ವಾ ಅನ್ತನೋಽನ್ನಗ್ಂ ರಾದ್ಧಮ್ । ಅನ್ತತೋಽಸ್ಮಾ ಅನ್ನಗ್ಂ ರಾಧ್ಯತೇ । ಯ ಏವಂ ವೇದ ॥ ೨ ॥**

---

1. "ತದ್ ವ್ರತಮ್" ಎಂಬ ಮಾತುಗಳು ಭಾಷ್ಯದಲ್ಲಿ ಬಿಟ್ಟು ಹೋಗಿವೆ; ಅಥವಾ ಅನುಷಂಗವನ್ನು ಮಾಡಿಕೊಳ್ಳಬೇಕು.

೨. ಇದೇ ಅನ್ನವು ಮುಖ್ಯದಿಂದ ಸಿದ್ಧವಾದರೆ ಮುಖ್ಯದಿಂದ ಇವನಿಗೆ ಅನ್ನವು ಸಿದ್ಧವಾಗುತ್ತದೆ. ಇದೇ ಅನ್ನವು ಮಧ್ಯದಿಂದ ಸಿದ್ಧವಾದರೆ ಮಧ್ಯದಿಂದ ಇವನಿಗೆ ಅನ್ನವು ಸಿದ್ಧವಾಗುತ್ತದೆ. ಇದೇ ಅನ್ನವು ಅಂತ್ಯದಿಂದ ಸಿದ್ಧವಾದರೆ ಅಂತ್ಯದಿಂದ ಇವನಿಗೆ ಅನ್ನವು ಸಿದ್ಧವಾಗುತ್ತದೆ. (ಇದು) ಯಾವನು ಹೀಗೆಂದು ಅರಿಯುತ್ತಾನೋ (ಅವನಿಗೆ).

(ಭಾಷ್ಯ)

೨೪೫. ಏತದ್ ವೈ ಅನ್ನಂ ಮುಖತಃ ಮುಖ್ಯೇ ಪ್ರಥಮೇ ವಯಸಿ ಮುಖ್ಯಯಾ ವಾ ವೃತ್ತ್ಯಾ ಪೂಜಾಪುರಸ್ಸರಮ್ ಅಭ್ಯಾಗತಾಯ ಅನ್ನಾರ್ಥಿನೇ ರಾದ್ಧಂ ಸಂಸಿದ್ಧಂ ಪ್ರಯಚ್ಛತಿ ಇತಿ ಶೇಷಃ[1] । ತಸ್ಯ ಕಿಂ ಫಲಂ ಸ್ಯಾತ್ ಇತಿ? ಉಚ್ಯತೇ । ಮುಖತಃ ಪೂರ್ವೇ ವಯಸಿ ಮುಖ್ಯಯಾ ವಾ ವೃತ್ತ್ಯಾ ಅಸ್ಮೈ ಅನ್ನದಾಯ ಅನ್ನಂ ರಾಧ್ಯತೇ ಯಥಾದತ್ತಮ್ ಉಪತಿಷ್ಠತೇ ಇತ್ಯರ್ಥಃ । ಏವಂ ಮಧ್ಯತಃ ಮಧ್ಯಮೇ ವಯಸಿ ಮಧ್ಯಮೇನ ವಾ ಉಪಚಾರೇಣ ತಥಾ ಅನ್ತತಃ ಅನ್ತೇ ವಯಸಿ ಜಘನ್ಯೇನ ವಾ ಉಪಚಾರೇಣ ಪರಿಭವೇನ । ತಥೈವ ಅಸ್ಮೈ ರಾಧ್ಯತೇ ಸಂಸಿಧ್ಯತಿ ಅನ್ನಮ್ । ಯ ಏವಂ ವೇದ ಯ ಏವಮ್ ಅನ್ನಸ್ಯ ಯಥೋಕ್ತಂ ಮಾಹಾತ್ಮ್ಯಂ ವೇದ ತದ್ದಾನಸ್ಯ ಯಥೋಕ್ತಂ ಫಲಮ್ ಉಪನಮತೇ ॥[2]

(ಭಾಷ್ಯಾರ್ಥ)

ಇದೇ ಅನ್ನವು ಮುಖತಃ ಎಂದರೆ ಮುಖ್ಯವಾದ ಮೊದಲನೆಯ ವಯಸ್ಸಿನಲ್ಲಿ, ಅಥವಾ ಮುಖ್ಯವಾದ ವೃತ್ತಿಯಿಂದ ಎಂದರೆ ಗೌರವಪೂರ್ವಕವಾಗಿ[3] ಅನ್ನಕ್ಕಾಗಿ ಮನೆಗೆ ಬಂದವನಿಗೆ ಸಿದ್ಧವಾದರೆ ಎಂದರೆ ಸಜ್ಜುಮಾಡಿ 'ಕೊಟ್ಟರೆ' ಎಂದು ಸೇರಿಸಿಕೊಳ್ಳಬೇಕು. ಅವನಿಗೆ ಯಾವ ಫಲವಾಗುವದು? ಎಂದರೆ (ಶ್ರುತಿ) ಹೇಳುತ್ತದೆ. 'ಮುಖತಃ' ಎಂದರೆ ಮೊದಲನೆಯ ವಯಸ್ಸಿನಲ್ಲಿ ಅಥವಾ ಮುಖ್ಯವಾದ ವೃತ್ತಿ

---

1. "ವಾಕ್ಯಶೇಷತಃ" ವಾ॥ ಪಾಠ.

2. ಉಪನಮೇತ್ ಎಂಬ ಆ॥ ಪಾಠಕ್ಕಿಂತ ಇದು ಉತ್ತಮ. ಈ ವಾ॥ ಪಾಠದಲ್ಲಿ ತದ್ದಾನಸ್ಯ, ಎಂಬ ಮಾತಿನ ಮುಂದೆ "ಚ ಫಲಂ ತಸ್ಯ" ಎಂಬ ಮಾತುಗಳು ಹೆಚ್ಚಾಗಿವೆ.

3. ಮುಖವು ಮೊದಲು ಕಾಣುವಂತೆ ಇರುವ ಮೊದಲನೆಯ ವಯಸ್ಸು ಅಥವಾ ಉತ್ತಮವಾದ ಉಪಚಾರವು ಎಂಬುದು ಮುಖ್ಯತಃ ಎಂಬ ಮಾತಿನ ಅರ್ಥವೆಂದು ಭಾವ. ಹೀಗೆಯೇ 'ಮಧ್ಯತಃ', 'ಅನ್ತತಃ' ಎಂಬ ಮಾತುಗಳಿಗೆ ಎರಡೆರಡು ಅರ್ಥ.

ಯಿಂದ ಈ ಅನ್ನದಾನಿಗೆ (ಅವನು) ಕೊಟ್ಟಂತೆಯೇ ಸಿದ್ಧವಾಗುತ್ತದೆ, ಬಂದು ಸೇರುತ್ತದೆ ಎಂದರ್ಥ. ಹೀಗೆಯೇ 'ಮಧ್ಯತಃ' ಎಂದರೆ ನಡುವಿನ ವಯಸ್ಸಿನಲ್ಲಿ ಅಥವಾ ನಡುತರದ ಉಪಚಾರದಿಂದ, ಹಾಗೂ 'ಅನ್ತತಃ' ಎಂದರೆ ಕಡೆಯ ವಯಸ್ಸಿನಲ್ಲಿ ಅಥವಾ ಕೀಳಾದ ಉಪಚಾರದಿಂದ ಎಂದರೆ ತಿರಸ್ಕಾರ(ಭಾವ)ದಿಂದ (ಕೊಟ್ಟರೆ) ಹಾಗೆಯೇ ಇವನಿಗೆ ಅನ್ನವು ಸಿದ್ಧವಾಗುತ್ತದೆ, ಬರುತ್ತದೆ. ಯಾವನು ಹೀಗೆಂದು ತಿಳಿಯುವನೋ ಎಂದರೆ ಯಾವನು ಹೀಗೆಂದು ಮೇಲೆ ಹೇಳಿದ ಅನ್ನದ ಮಾಹಾತ್ಮ್ಯೆಯನ್ನು ಅರಿಯುವನೋ ಅವನ ದಾನಕ್ಕೆ ಮೇಲೆ ಹೇಳಿದ ಫಲವು[1] (ಅವನಲ್ಲಿಗೆ) ಬಂದುಸೇರುತ್ತದೆ.

# ೫. ಬ್ರಹ್ಮದ ಬಗೆಬಗೆಯ ಉಪಾಸನೆಗಳು

## ಆಧ್ಯಾತ್ಮಿಕ ಉಪಾಸನೆಗಳು

(ಭಾಷ್ಯ)

೨೪೬. ಇದಾನೀಂ ಬ್ರಹ್ಮಣಃ ಉಪಾಸನಪ್ರಕಾರ ಉಚ್ಯತೇ—

(ಭಾಷ್ಯಾರ್ಥ)

ಈಗ ಬ್ರಹ್ಮವನ್ನು ಉಪಾಸನೆಮಾಡುವ ರೀತಿಯನ್ನು[2] ಹೇಳಲಾಗುತ್ತದೆ.

**ಕ್ಷೇಮ ಇತಿ ವಾಚಿ। ಯೋಗಕ್ಷೇಮ ಇತಿ ಪ್ರಾಣಾಪಾನಯೋಃ। ಕರ್ಮೇತಿ ಹಸ್ತಯೋಃ। ಗತಿರಿತಿ ಪಾದಯೋಃ। ವಿಮುಕ್ತಿರಿತಿ ಪಾಯೌ। ಇತಿ ಮಾನುಷೀಃ ಸಮಾಜ್ಞಾಃ ॥ ೩ ॥**

೩. ಕ್ಷೇಮವೆಂದು ವಾಕ್ಕಿನಲ್ಲಿ, ಯೋಗಕ್ಷೇಮವೆಂದು ಪ್ರಾಣಾಪಾನಗಳಲ್ಲಿ ಕರ್ಮವೆಂದು ಹಸ್ತಗಳಲ್ಲಿ, ಗತಿ ಎಂದು ಪಾದಗಳಲ್ಲಿ, ಬಿಡುಗಡೆ ಎಂದು ಪಾಯುವಿನಲ್ಲಿ–ಹೀಗೆ ಮಾನುಷವಾದ ಸಮಾಜ್ಞೆಗಳು.

---

1. "ಮಾಹಾತ್ಮ್ಯೆಯನ್ನೂ ಅದರ ದಾನದ ಫಲವನ್ನೂ ಅರಿಯುವನೋ" ಎಂದು ವಾ॥ ಪಾಠಕ್ಕೆ ಅರ್ಥ.

2. 'ಪ್ರಕಾರಃ' ಎಂದು ಏಕವಚನವಿದ್ದರೂ ಇಲ್ಲಿ ಅನೇಕ ಪ್ರಕಾರಗಳನ್ನು ಹೇಳಲಾಗಿದೆ.

(ಭಾಷ್ಯ)

೨೪೭. ಕ್ಷೇಮಃ ಇತಿ ವಾಚಿ । ಕ್ಷೇಮೋ ನಾಮ ಉಪಾತ್ತಪರಿರಕ್ಷಣಮ್, ಬ್ರಹ್ಮ ವಾಚಿ ಕ್ಷೇಮರೂಪೇಣ ಪ್ರತಿಷ್ಠಿತಮ್ ಇತಿ ಉಪಾಸ್ಯಮ್ । ಯೋಗಕ್ಷೇಮಃ ಇತಿ । ಯೋಗಃ ಅನುಪಾತ್ತಸ್ಯ ಉಪಾದಾನಮ್ । ತೌ ಹಿ ಯೋಗಕ್ಷೇಮೌ ಪ್ರಾಣಾಪಾನಯೋಃ [1] ಸತೋರ್ಭವತಃ ಯದ್ಯಪಿ ತಥಾಪಿ ನ ಪ್ರಾಣಾಪಾನನಿಮಿತ್ತಾವೇವ, ಕಿಂ ತರ್ಹಿ ಬ್ರಹ್ಮನಿಮಿತ್ತೌ । ತಸ್ಮಾತ್ ಬ್ರಹ್ಮ ಯೋಗಕ್ಷೇಮಾತ್ಮನಾ ಪ್ರಾಣಾಪಾನಯೋಃ ಪ್ರತಿಷ್ಠಿತಮ್ ಇತಿ ಉಪಾಸ್ಯಮ್ । ಕರ್ಮಣೋ ಬ್ರಹ್ಮನಿರ್ವರ್ತ್ಯತ್ವಾತ್ ಹಸ್ತಯೋಃ ಕರ್ಮಾತ್ಮನಾ ಬ್ರಹ್ಮ ಪ್ರತಿಷ್ಠಿತಮ್, ಇತಿ ಉಪಾಸ್ಯಮ್ । ಗತಿಃ ಇತಿ ಪಾದಯೋಃ । ವಿಮುಕ್ತಿಃ ಇತಿ ಪಾಯೌ । ಇತಿ ಏತಾಃ ಮಾನುಷೀಃ ಮನುಷ್ಯೇಷು ಭವಾಃ ಮಾನುಷ್ಯಃ ಸಮಾಜ್ಞಾಃ ಜ್ಞಾನಾನಿ ವಿಜ್ಞಾನಾನಿ ಉಪಾಸನಾನಿ ಇತ್ಯರ್ಥಃ ॥

(ಭಾಷ್ಯಾರ್ಥ)

ಕ್ಷೇಮವೆಂದು ವಾಕ್ಕಿನಲ್ಲಿ; ಕ್ಷೇಮ ಎಂದರೆ ಪಡೆದುಕೊಂಡಿರುವದನ್ನು ಕಾಪಾಡಿಕೊಳ್ಳುವದು. ಬ್ರಹ್ಮವು ವಾಕ್ಕಿನಲ್ಲಿ ಕ್ಷೇಮರೂಪದಿಂದ ಇರುತ್ತದೆ [2] ಎಂದು ಉಪಾಸನೆಮಾಡಬೇಕು. 'ಯೋಗಕ್ಷೇಮವೆಂದು' (ಎಂಬಲ್ಲಿ) ಯೋಗವೆಂದರೆ ಪಡೆಯದೆ ಇರುವದನ್ನು ಪಡೆದುಕೊಳ್ಳುವದು. ಈ ಯೋಗಕ್ಷೇಮಗಳು ಪ್ರಾಣ, ಅಪಾನ-ಇವುಗಳು ಇರುವಾಗಲೇ ಆಗುತ್ತವೆ ಎಂಬುದೇನೋ ಸರಿಯೆ; ಆದರೂ (ಅವು ಬರಿಯ) ಪ್ರಾಣಾಪಾನಗಳ ಕಾರಣದಿಂದಲೇ (ದೊರಕುವ)ದಿಲ್ಲ, ಮತ್ತೇನೆಂದರೆ ಬ್ರಹ್ಮವೆಂಬ ಕಾರಣದಿಂದಲೇ [3] (ದೊರಕುತ್ತವೆ). ಆದ್ದರಿಂದ ಬ್ರಹ್ಮವು ಯೋಗಕ್ಷೇಮಗಳ ರೂಪದಿಂದ ಪ್ರಾಣಾಪಾನಗಳಲ್ಲಿ ಇರುತ್ತದೆ ಎಂದು ಉಪಾಸನೆಮಾಡಬೇಕು. ಇದರಂತೆ ಮುಂದೆಯೂ ಆಯಾ ರೂಪದಿಂದ ಬ್ರಹ್ಮವನ್ನೇ ಉಪಾಸನೆಮಾಡಬೇಕು. ಕರ್ಮವು ಬ್ರಹ್ಮದಿಂದಲೇ ಆಗುವದರಿಂದ [4]

1. ಇಲ್ಲಿ 'ಬಲವತೋಃ' (ಬಲವುಳ್ಳ) ಎಂಬ ವಿಶೇಷಣವೊಂದು ವಾ॥ ಪಾಠದಲ್ಲಿ ಹೆಚ್ಚಾಗಿದೆ.

2 ಮಾತಿನಿಂದ ಯಾವದನ್ನು ಕಾಪಾಡಿಕೊಳ್ಳುವೆವೋ ಅದರ ಕ್ಷೇಮವು ಬ್ರಹ್ಮದ ರೂಪವು ಎಂದು ಭಾವಿಸಬೇಕು. ಗೀತೆಯ ೧೦ನೆಯ ಅಧ್ಯಾಯವೇ ಮುಂತಾದ ಕಡೆಗಳಲ್ಲಿ ಹೇಳಿರುವ ವಿಭೂತಿಗಳಂತೆ ಇಲ್ಲಿ ಹೇಳಿರುವ ಬ್ರಹ್ಮರೂಪಗಳನ್ನೂ ಅರಿಯಬೇಕು.

3. ಕ. ೨-೨-೫ನ್ನು ನೋಡಿ.

4. ಪ್ರಾಣಿಗಳ ಪ್ರವೃತ್ತಿಗಳೆಲ್ಲ ಬ್ರಹ್ಮದಿಂದಲೇ ಆಗುವವು. ಗೀ. ೧೮-೪೬

ಹಸ್ತಗಳಲ್ಲಿ ಕರ್ಮದ ರೂಪದಿಂದ ಬ್ರಹ್ಮವು ಇರುತ್ತದೆ ಎಂದು ಉಪಾಸನೆಮಾಡಬೇಕು. ಗತಿ ಎಂದು ಪಾದಗಳಲ್ಲಿ, ಬಿಡುವಿಕೆ ಎಂದು ಪಾಯುವಿನಲ್ಲಿ (ಉಪಾಸನೆ ಮಾಡಬೇಕು). ಇಂತಿವು (ಮಾನುಷೀಃ ಮಾನುಷ್ಯಃ) ಮಾನುಷವಾದ, ಮನುಷ್ಯರಲ್ಲಿ ಉಂಟಾಗುವ, ಮನುಷ್ಯಸಂಬಂಧವಾದ, ಎಂದರೆ ಆಧ್ಯಾತ್ಮಿಕವಾದ ಸಮಾಜ್ಞೆಗಳು, ಎಂದರೆ ಜ್ಞಾನಗಳು, ತಿಳಿವಳಿಕೆಗಳು, ಉಪಾಸನೆಗಳು ಎಂದರ್ಥ.

## ಆಧಿದೈವಿಕವಾದ ಉಪಾಸನೆಗಳು

**ಅಥ ದೈವೀಃ । ತೃಪ್ತಿರಿತಿ ವೃಷ್ಟೌ । ಬಲಮಿತಿ ವಿದ್ಯುತಿ । ಯಶ ಇತಿ ಪಶುಷು । ಜ್ಯೋತಿರಿತಿ ನಕ್ಷತ್ರೇಷು । ಪ್ರಜಾತಿರಮೃತ ಮಾನನ್ದ ಇತ್ಯುಪಸ್ಥೇ । ಸರ್ವಮಿತ್ಯಾಕಾಶೇ ॥ ೪ ॥**

೪. ಇನ್ನು ದೈವ (ಸಮಾಜ್ಞೆಗಳು); ತೃಪ್ತಿಯೆಂದು ಮಳೆಯಲ್ಲಿ; ಬಲವೆಂದು ಮಿಂಚಿನಲ್ಲಿ; ಯಶಸ್ಸೆಂದು ಪಶುಗಳಲ್ಲಿ; ಜ್ಯೋತಿ ಎಂದು ನಕ್ಷತ್ರಗಳಲ್ಲಿ; ಪ್ರಜಾತಿ, ಅಮೃತ, ಆನಂದ ಎಂದು ಉಪಸ್ಥದಲ್ಲಿ; ಎಲ್ಲವೂ ಎಂದು ಆಕಾಶದಲ್ಲಿ.

(ಭಾಷ್ಯ)

**೨೪೮.** ಅಥ ಅನನ್ತರಂ ದೈವೀಃ ದೈವ್ಯಃ, ದೇವೇಷು ಭವಾಃ ಸಮಾಜ್ಞಾಃ ಉಚ್ಯನ್ತೇ । ತೃಪ್ತಿಃ ಇತಿ ವೃಷ್ಟೌ। ವೃಷ್ಟೇಃ ಅನ್ನಾದಿದ್ವಾರೇಣ ತೃಪ್ತಿಹೇತುತ್ವಾತ್ ಬ್ರಹ್ಮೈವ ತೃಪ್ತ್ಯಾತ್ಮನಾ ವೃಷ್ಟೌ ವ್ಯವಸ್ಥಿತಮ್ ಇತಿ ಉಪಾಸ್ಯಮ್ । ತಥಾ ಬಲರೂಪೇಣ ವಿದ್ಯುತಿ । ಯಶೋರೂಪೇಣ ಪಶುಷು । ಜ್ಯೋತೀರೂಪೇಣ ನಕ್ಷತ್ರೇಷು। ಪ್ರಜಾತಿಃ, ಅಮೃತಮ್, ಅಮೃತತ್ವಪ್ರಾಪ್ತಿಃ ಪುತ್ರೇಣ ಋಣವಿಮೋಕ್ಷದ್ವಾರೇಣ, ಆನನ್ದಃ ಸುಖಮ್ ಇತ್ಯೇತತ್ ಸರ್ವಮ್ ಉಪಸ್ಥನಿಮಿತ್ತಮ್ ಬ್ರಹ್ಮೈವ ಅನೇನಾತ್ಮನಾ ಪತಿಷ್ಠಿತಮ್ ಇತಿ ಉಪಾಸ್ಯಮ್ । ಸರ್ವಂ ಹಿ ಆಕಾಶೇ ಪ್ರತಿಷ್ಠಿತಮ್ ಅತಃ ಯತ್ ಸರ್ವಮ್ ಆಕಾಶೇ, ತದ್ ಬ್ರಹ್ಮೈವ ಇತಿ ಉಪಾಸ್ಯಮ್ ॥

(ಭಾಷ್ಯಾರ್ಥ)

ಇನ್ನು (ಅಧ್ಯಾತ್ಮವಾದ) ಬಳಿಕ (ದೈವೀಃ - ದೈವ್ಯಃ) ದೈವವಾದ ಎಂದರೆ ದೇವತೆಗಳಲ್ಲಿರುವ ಸಮಾಜ್ಞೆಗಳನ್ನು ಹೇಳಲಾಗುತ್ತದೆ. ತೃಪ್ತಿ ಎಂದು ಮಳೆಯಲ್ಲಿ. ಮಳೆಯು ಅನ್ನವೇ ಮುಂತಾದವುಗಳ ಮೂಲಕ ತೃಪ್ತಿಗೆ ಕಾರಣವಾಗಿರುವದರಿಂದ ಬ್ರಹ್ಮವೇ ತೃಪ್ತಿಯ ರೂಪದಿಂದ ಮಳೆಯಲ್ಲಿ ಇರುತ್ತದೆ ಎಂದು ಉಪಾಸನೆಮಾಡ

ಬೇಕು. ಇದರಂತೆ ಉಳಿದ (ಕಡೆ)ಗಳಲ್ಲಿಯೂ ಆಯಾ ರೂಪದಿಂದ ಬ್ರಹ್ಮವನ್ನೇ[1] ಉಪಾಸನೆಮಾಡಬೇಕು. ಹೀಗೆಯೇ ಬಲರೂಪದಿಂದ ಮಿಂಚಿನಲ್ಲಿ; ಕೀರ್ತಿಯ ರೂಪದಿಂದ ಪಶುಗಳಲ್ಲಿ; ಬೆಳಕಿನ ರೂಪದಿಂದ ನಕ್ಷತ್ರಗಳಲ್ಲಿ; ಮಕ್ಕಳುಮರಿಗಳನ್ನು ಪಡೆಯುವಿಕೆ, ಅಮೃತವು ಎಂದರೆ ಮಗನ ಮೂಲಕವಾಗಿ ಋಣವನ್ನು ತೀರಿಸಿಕೊಳ್ಳುವದರ ಮೂಲಕ ಅಮೃತತ್ವವನ್ನು ಪಡೆಯುವಿಕೆ[2], ಆನಂದವು ಎಂದರೆ ಸುಖವು[3]-ಎಂಬದೆಲ್ಲವೂ ಉಪಸ್ಥೇಂದ್ರಿಯದ ನಿಮಿತ್ತದಿಂದ (ಆಗತಕ್ಕದ್ದು, ಆದ್ದರಿಂದ) ಬ್ರಹ್ಮವೇ[4] ಈ ರೂಪದಿಂದ ಉಪಸ್ಥದಲ್ಲಿರುತ್ತದೆ-ಎಂದು ಉಪಾಸನೆಮಾಡಬೇಕು. ಎಲ್ಲವೂ ಆಕಾಶದಲ್ಲಿ ಇದ್ದುಕೊಂಡಿರುತ್ತದೆಯಲ್ಲವೆ?[5] ಆದ್ದರಿಂದ ಆಕಾಶದಲ್ಲಿರುವ ಎಲ್ಲ ಎಂಬುದು ಯಾವದೋ ಅದು ಬ್ರಹ್ಮವೇ ಎಂದು ಉಪಾಸನೆಮಾಡಬೇಕು.

## ಬ್ರಹ್ಮವನ್ನು ಬೇರೆಬೇರೆಯ ಧರ್ಮಗಳುಳ್ಳದ್ದೆಂದು ಮಾಡುವ ಉಪಾಸನೆಗಳು

**ತತ್ ಪ್ರತಿಷ್ಠೇತ್ಯುಪಾಸೀತ । ಪ್ರತಿಷ್ಠಾವಾನ್ ಭವತಿ । ತನ್ಮಹ ಇತ್ಯುಪಾಸೀತ । ಮಹಾನ್ ಭವತಿ । ತನ್ಮನ ಇತ್ಯುಪಾಸೀತ । ಮಾನವಾನ್ ಭವತಿ। ತನ್ನಮ ಇತ್ಯುಪಾಸೀತ। ನಮ್ಯಂತೇಽಸ್ಮೈ ಕಾಮಾಃ । ತತ್ ಬ್ರಹ್ಮೇತ್ಯುಪಾಸೀತ । ಬ್ರಹ್ಮವಾನ್ ಭವತಿ । ತತ್ ಬ್ರಹ್ಮಣಃ ಪರಿಮರ ಇತ್ಯುಪಾಸೀತ । ಪರ್ಯೇಣಂ ಮ್ರಿಯಂತೇ ದ್ವಿಷಂತಃ ಸಪತ್ನಾಃ । ಪರಿಯೇಽಪ್ರಿಯಾ ಭ್ರಾತೃವ್ಯಾಃ ॥ ೫ ॥**

---

1. ಮಳೆಯನ್ನಾಗಲಿ ತೃಪ್ತಿಯನ್ನಾಗಲಿ ಉಪಾಸನೆಮಾಡತಕ್ಕದ್ದಲ್ಲ, ಮಳೆಯಲ್ಲಿ ತೃಪ್ತಿರೂಪದಿಂದ ತೋರುವವನೆಂದು ಬ್ರಹ್ಮವನ್ನು ಉಪಾಸನೆಮಾಡಬೇಕು. ಹೀಗೆಯೇ ಮಿಕ್ಕ ಪರ್ಯಾಯಗಳಲ್ಲಿಯೂ ತಿಳಿಯಬೇಕು.

2. ಪಿತೃಋಣವನ್ನು ತೀರಿಸಿಕೊಂಡು ಮೋಕ್ಷಸಾಧನವನ್ನುಮಾಡಿ ಮೋಕ್ಷವನ್ನು ಪಡೆಯುವದು.

3. ವಿಷಯಸುಖವು.

4. ವಿಷಯತ್ವಬುದ್ಧಿ ಹೋಗಬೇಕು, ಬ್ರಹ್ಮಬುದ್ಧಿ ಬರಬೇಕು.

5. ಆಕಾಶವು ಎಲ್ಲಕ್ಕೂ ಆಧಾರವಾಗಿರುತ್ತದೆ.

೫. ಅದನ್ನು ಪ್ರತಿಷ್ಠೆ ಎಂದು ಉಪಾಸನೆ ಮಾಡಬೇಕು ; ಪ್ರ
ಷ್ಠಾವಂತನಾಗುತ್ತಾನೆ. ಅದನ್ನು ಮಹತ್ತೆಂದು ಉಪಾಸನೆಮಾಡಬೇಕು
ಮಹಾ(ಪುರುಷ)ನಾಗುತ್ತಾನೆ. ಅದು ಮನಸ್ಸೆಂದು ಉಪಾಸನೆಮಾಡಬೇಕು
ಮಾನವಂತನಾಗುತ್ತಾನೆ. ಅದು ನಮ(ಸ್ಕಾರ)ವೆಂದು ಉಪಾಸ
ಮಾಡಬೇಕು, ಇವನಿಗೆ ಕಾಮಗಳು ನಮಸ್ಕರಿಸುವವು. ಅನು ಬ್ರಹ್ಮ
ವೆಂದು ಉಪಾಸನೆಮಾಡಬೇಕು, ಬ್ರಹ್ಮವುಳ್ಳವನಾಗುತ್ತಾನೆ. ಅದ
ಬ್ರಹ್ಮದ ಪರಿಮರವೆಂದು ಉಪಾಸನೆಮಾಡಬೇಕು, ಇವನನ್ನು ಹ
ಮಾಡುವ ಶತ್ರುಗಳು ಸಾಯುತ್ತಾರೆ, (ಇವನಿಗೆ) ಅಪ್ರಿಯರಾದ ಭ್ರಾತ
ವ್ಯರೂ (ಸಾಯುತ್ತಾರೆ).

(ಭಾಷ್ಯ)

೨೪೯. ತಚ್ಚ ಆಕಾಶಂ ಬ್ರಹ್ಮೈವ । ತಸ್ಮಾತ್ ತತ್ ಸರ್ವಸ್ಯ ಪ್ರತಿಷ್ಠಾ
ಇತಿ ಉಪಾಸೀತ । ಪ್ರತಿಷ್ಠಾಗುಣೋಪಾಸನಾತ್ ಪ್ರತಿಷ್ಠಾವಾನ್ ಭವತಿ । ಏವ
ಪೂರ್ವೇಷ್ವಪಿ ಯದ್ ಯದಧೀನಂ ಫಲಂ [1] ತದ್ ಬ್ರಹ್ಮೈವ । ತದುಪಾಸನಾತ
ತದ್ವಾನ್ ಭವತಿ ಇತಿ ದ್ರಷ್ಟವ್ಯಮ್ । ಶ್ರುತ್ಯಂತರಾಚ್ಚ–"ತಂ ಯಥಾ ಯಥೋ
ಪಾಸತೇ ತದೇವ ಭವತಿ" (ಶತ.ಬ್ರಾ..?) ಇತಿ । ತತ್ ಮಹಃ ಇತಿ ಉಪ
ಸೀತ । ಮಹಃ ಮಹತ್ತ್ವಗುಣವತ್ ತತ್ ಉಪಾಸೀತ । ಮಹಾನ್ ಭವತಿ
ತತ್ ಮನಃ ಇತಿ ಉಪಾಸೀತ । ಮನನಂ ಮನಃ । ಮಾನವಾನ್ ಭವತಿ
ಮನನಸಮರ್ಥೋ ಭವತಿ । ತತ್ ನಮಃ ಇತಿ ಉಪಾಸೀತ । ನಮನ
ನಮಃ ನಮನಗುಣವತ್ ತತ್ ಉಪಾಸೀತ । ನಮ್ಯನ್ತೇ ಪ್ರಹ್ವೀಭವನ್ತಿ
ಅಸ್ಮೈ ಉಪಾಸಿತ್ರೇ ಕಾಮಾಃ ಕಾಮ್ಯನ್ತ ಇತಿ ಭೋಗ್ಯವಿಷಯಾಃ ಇತ್ಯರ್ಥಃ
ತತ್ ಬ್ರಹ್ಮ ಪರಿವೃಢತಮಮ್ ಇತಿ ಉಪಾಸೀತ । ಬ್ರಹ್ಮವಾನ್ ತದ್ಗುಣಃ ಭವತಿ
ತದ್ ಬ್ರಹ್ಮಣಃ ಪರಿಮರಃ ಇತಿ ಉಪಾಸೀತ । ಬ್ರಹ್ಮಣಃ ಪರಿಮರಃ । ಪ
ಮ್ರಿಯನ್ತೇ ಅಸ್ಮಿನ್ ಪಞ್ಚ ದೇವತಾಃ ವಿದ್ಯುತ್ ವೃಷ್ಟಿಃ ಚನ್ದ್ರಮಾಃ ಆದಿತ್ಯ
ಅಗ್ನಿಃ ಇತ್ಯೇತಾಃ, ಅತೋ [2] ವಾಯುಃ ಪರಿಮರಃ ! ಶ್ರುತ್ಯನ್ತರಪ್ರಸಿದ್ಧೇಃ । ಸ ಏ

---

1. "ಏವಂ ಸರ್ವೇಷ್ವಪಿ ಯದ್ ಯತ್ರಾಧಿಗತವ್ ಫಲಮ್" ಎಂದು ವಾ॥ ಪಾಠ

2. ಇತಿ ಎಂದೋ ಇತ್ಯತಃ ಎಂದೋ ಭಾಷ್ಯಕಾರರು ಬರೆದಿರಬಹುದೆಂದು ತೋರ
ತ್ತದೆ.

(ಏವಾಯಂ) [1] ಆಕಾಶೇನ ಅನನ್ಯಃ ಇತಿ ಆಕಾಶೋ ಬ್ರಹ್ಮಣಃ ಪರಿಮರಃ । **ತಮ್** [2] ಆಕಾಶಂ ವಾಯ್ವಾತ್ಮಾನಂ ಬ್ರಹ್ಮಣಃ ಪರಿಮರಃ ಇತಿ ಉಪಾಸೀತ । ಪರಿ ಏನಂ [3] ಏವಂವಿಧಂ ಪ್ರತಿಸ್ಪರ್ಧಿನಃ ದ್ವಿಷನ್ತಃ–ಅದ್ವಿಷನ್ತೋಽಪಿ ಸಪತ್ನಾ ಯತೋ ಭವನ್ತಿ, ಅತಃ ವಿಶೇಷ್ಯನ್ತೇ ದ್ವಿಷನ್ತಃ ಸಪತ್ನಾಃ ಇತಿ । ಯ [4] ಏವಂ ದ್ವಿಷನ್ತಃ ಸಪತ್ನಾಃ ತೇ ಪರಿಮ್ರಿಯನ್ತೇ ಪ್ರಾಣಾನ್ ಜಹತಿ । ಕಿಂ ಚ ಯೇ ಚ ಅಪ್ರಿಯಾ ಅಸ್ಯ ಭ್ರಾತೃವ್ಯಾ ಅದ್ವಿಷನ್ತೋಽಪಿ ತೇ ಚ ಪರಿಮ್ರಿಯನ್ತೇ ॥

(ಭಾಷ್ಯಾರ್ಥ)

ಆ ಆಕಾಶವೂ ಬ್ರಹ್ಮವೇ. ಆದ್ದರಿಂದ ಅದು ಎಲ್ಲಕ್ಕೂ ಪ್ರತಿಷ್ಠೆ ಎಂದು ಉಪಾಸನೆಮಾಡಬೇಕು [5] ; ಪ್ರತಿಷ್ಠಾಗುಣವನ್ನು ಉಪಾಸನೆಮಾಡುವದರಿಂದ ಪ್ರತಿಷ್ಠೆಯುಳ್ಳವನಾಗುತ್ತಾನೆ. ಹೀಗೆಯೇ ಹಿಂದಿನ (ಪರ್ಯಾಯಗಳಲ್ಲಿಯೂ) ಯಾವ ಯಾವದಕ್ಕೆ ಫಲವು ಅಧೀನವಾಗಿರುತ್ತದೆಯೋ ಅದು ಬ್ರಹ್ಮವೇ [6]; ಅದನ್ನು (ಬ್ರಹ್ಮವೆಂದು) ಉಪಾಸನೆಮಾಡುವದರಿಂದ ಆ (ಫಲ)ವುಳ್ಳವನಾಗುತ್ತಾನೆ ಎಂದು ಇಟ್ಟುಕೊಳ್ಳಬೇಕು. "ಅವನನ್ನು ಹೇಗೆಹೇಗೆ ಉಪಾಸನೆಮಾಡುವರೋ ಅದೇ ಆಗುತ್ತದೆ'' (ಶತ.ಬ್ರಾ.) ಎಂಬ ಬೇರೊಂದು ಶ್ರುತಿಯಿರುವದರಿಂದಲೂ (ಹೀಗೆಂದು ತಿಳಿಯಬೇಕು). "ಅದನ್ನು ಮಹಃ ಎಂದು ಉಪಾಸನೆಮಾಡಬೇಕು." ಇಲ್ಲಿ ಮಹಃ ಎಂದರೆ ಮಹತ್ತ್ವಗುಣವುಳ್ಳದ್ದು ; (ಹಾಗೆಂದು) ಅದನ್ನು ಉಪಾಸನೆಮಾಡಬೇಕು. ಮಹಾ (ಪುರುಷ)ನಾಗುತ್ತಾನೆ. ಅದನ್ನು ಮನಸ್ಸು ಎಂದು ಉಪಾಸನೆಮಾಡಬೇಕು'' (ಎಂಬಲ್ಲಿ) ಮನಸ್ಸೆಂದರೆ ಮನನವು; (ಆ ಉಪಾಸನೆಯಿಂದ) ಮಾನವಂತನಾಗುತ್ತಾನೆ ಎಂದರೆ ಮನನಮಾಡುವದಕ್ಕೆ ಶಕ್ತನಾಗುತ್ತಾನೆ. "ಅದನ್ನು ನಮಃ ಎಂದು ಉಪಾಸನೆಮಾಡಬೇಕು" (ಎಂಬಲ್ಲಿ) ನಮಃ ಎಂದರೆ ನಮಸ್ಕಾರಮಾಡು

1. 'ಏವಾಯಂ' ಎಂಬುದು ಇಲ್ಲದಿದ್ದರೂ ಸಾಗುತ್ತದೆ.
2. '**ತಸ್ಮಾತ್**' ಎಂದು ವಾ॥ ಪಾಠ.
3. ಈ ಎರಡು ಮಾತುಗಳು ವಾ॥ ಪಾಠದಲ್ಲಿ ಕೈಬಿಟ್ಟುಹೋಗಿವೆ.
4. '**ಯಃ**' ಎಂಬ ಮಾತು ವಾ॥ ಪಾಠದಲ್ಲಿಲ್ಲ.
5. ಪ್ರತಿಷ್ಠಾಗುಣವುಳ್ಳ ಆಕಾಶವು ಬ್ರಹ್ಮಕಾರ್ಯವಾಗಿರುವದರಿಂದ ಬ್ರಹ್ಮವೇ ಆ ಗುಣವುಳ್ಳದ್ದೆಂದು ಉಪಾಸನೆಮಾಡಬೇಕು.
6. "**ಯತ್ ಯದಧೀನಂ ಫಲಮ್**" ಎಂದು ಬಿಡಿಸಿದರೆ ಯಾವ ಫಲವು ಯಾವದರ ಅಧೀನವೋ ಆ ಆಶ್ರಯವನ್ನು ಉಪಾಸನೆಮಾಡುವದರಿಂದ ಆ ಫಲವುಳ್ಳವನಾಗುವನು ಎಂದರ್ಥ. ವಾ॥ ಪಾಠಕ್ಕೆ "ಹೀಗೆ ಎಲ್ಲಾ ಕಡೆಯಲ್ಲಿಯೂ ಯಾವ ಫಲವು ಎಲ್ಲಿರುವದೆಂದು ತಿಳಿಯಬರುವದೋ" ಎಂದರ್ಥ.

ವದು. ನಮಸ್ಕರಿಸುವ ಗುಣವುಳ್ಳದ್ದೆಂದು ಅದನ್ನು ಉಪಾಸನೆಮಾಡಬೇಕು. ಈ ಉಪಾಸಕನಿಗೆ ಕಾಮಗಳು ಎಂದರೆ ಕಾಮಿಸಲ್ಪಡುವ ಭೋಗ್ಯವಿಷಯಗಳು ಎಂದರ್ಥ; (ಅವು) ನಮಿಸುವವು, ತಲೆಬಾಗುವವು. ಅದು ಬ್ರಹ್ಮವು, ಎಂದರೆ ಅತ್ಯಂತ ದೊಡ್ಡದು ಎಂದು ಉಪಾಸನೆಮಾಡಬೇಕು. ಇದರಲ್ಲಿ ಮಿಂಚು, ಮಳೆ, ಚಂದ್ರ, ಆದಿತ್ಯ, ಅಗ್ನಿ-ಎಂಬೀ ಐದು ದೇವತೆಗಳು ನಾಶವಾಗುತ್ತಾರೆ (ಪರಿಮ್ರಿಯನ್ತೇ), ಆದ್ದರಿಂದ ವಾಯುವು ಪರಿಮರವು; ಇದು ಬೇರೊಂದು ಶ್ರುತಿಯಲ್ಲಿ (?)[1] ಪ್ರಸಿದ್ಧವಾಗಿರುತ್ತದೆ. ಆ ಈ ವಾಯುವು ಆಕಾಶಕ್ಕಿಂತ ಬೇರೆಯಲ್ಲ[2] ಎಂಬದರಿಂದ ಆಕಾಶವು ಬ್ರಹ್ಮದ ಪರಿಮರವು. ಆ ಆಕಾಶವನ್ನು ಬ್ರಹ್ಮದ ಪರಿಮರವೆಂದು ಉಪಾಸನೆಮಾಡಬೇಕು. ಹೀಗೆ ಉಪಾಸನೆಮಾಡುವಾತನನ್ನು ಇವನ ಮೇಲೆ ಪೈಪೋಟಿಯನ್ನು ಮಾಡುವ, ಹಗೆಮಾಡುವ (ಶತ್ರುಗಳು)-ಹಗೆಮಾಡದಿರುವ ಶತ್ರುಗಳೂ ಉಂಟಾದ್ದರಿಂದ ಹಗೆಮಾಡುವ ಶತ್ರುಗಳು ಎಂದು (ಶತ್ರುಗಳಿಗೆ) ವಿಶೇಷಣವನ್ನು ಹಾಕಿರುತ್ತದೆ. ಇವನನ್ನು ಹಗೆಮಾಡುವ-ಶತ್ರುಗಳು ಯಾರಿರುವರೋ ಅವರು ಸಾಯುತ್ತಾರೆ, ಎಂದರೆ ಪ್ರಾಣವನ್ನು ಬಿಡುತ್ತಾರೆ. ಮತ್ತು ಯಾರು ಇವನಿಗೆ ಪ್ರಿಯರಲ್ಲದ ವಿರೋಧಿಗಳಿರುವರೋ ಹಗೆಮಾಡದಿದ್ದರೂ ಅವರೂ ಸಾಯುತ್ತಾರೆ.

## ೬. ಜ್ಞಾನದಿಂದ ಪರಮಪುರುಷಾರ್ಥ

### ಆತ್ಮನು ಎಂದೆಂದಿಗೂ ಅಸಂಸಾರಿಯೇ

(ಭಾಷ್ಯ)

೨೫೦. "ಪ್ರಾಣೋ ವಾ ಅನ್ನಮ್, ಶರೀರಮನ್ನಾದಮ್" (೩-೭) ಇತ್ಯಾರಭ್ಯ ಆಕಾಶಾನ್ತಸ್ಯ ಕಾರ್ಯಸ್ಯೈವ ಅನ್ನಾನ್ನಾದತ್ವಮುಕ್ತಮ್ । ಉಕ್ತಂ ನಾಮ, ಕಿಂ ತೇನ? ತೇನ ಏತತ್ ಸಿದ್ಧಂ ಭವತಿ-ಕಾರ್ಯವಿಷಯ ಏವ ಭೋಜ್ಯಭೋಕ್ತೃತ್ವಕೃತಃ ಸಂಸಾರಃ, ನ ತ್ವಾತ್ಮನಿ ಇತಿ । ಆತ್ಮನಿ ತು ಭ್ರಾನ್ತ್ಯಾ ಉಪಚರ್ಯತೇ ॥

(ಭಾಷ್ಯಾರ್ಥ)

"ಪ್ರಾಣವೇ ಅನ್ನವು, ಶರೀರವೇ ಅನ್ನಾದವು" (೩-೭) ಎಂಬುದರಿಂದ ಹಿಡಿದು ಆಕಾಶದವರೆಗಿನ ಕಾರ್ಯವನ್ನೇ ಅನ್ನವು, ಅನ್ನಾದವು-ಎಂದು ಹೇಳಲಾಗಿರುತ್ತದೆ.

---

1. ಛಾ. ೪-೩-೧ರಲ್ಲಿ ವಾಯುವಿನಲ್ಲಿ ಎಲ್ಲವೂ ಲಯವಾಗುವವೆಂದು ಹೇಳಿರುತ್ತದೆ; ಆದರೆ ಅಲ್ಲಿ ಮಿಂಚು ಮಳೆಗಳನ್ನು ಹೇಳಿಲ್ಲ. ಆಚಾರ್ಯರು ನಿಜವಾಗಿ ಯಾವ ಶ್ರುತಿಯನ್ನು ಮನಸ್ಸಿನಲ್ಲಿಟ್ಟುಕೊಂಡು ಹೇಳಿರುವರೋ ತಿಳಿಯದು.

2. ಕಾರ್ಯವು ಕಾರಣಕ್ಕಿಂತ ಬೇರೆಯಲ್ಲ; ವಾಯುರೂಪವಾದ ಆಕಾಶದಲ್ಲಿ ಎಲ್ಲವೂ ಲಯಿಸುತ್ತದೆ ಎಂದಂತೆ ಆಯಿತು.

(ಪ್ರಶ್ನೆ):—ಹೇಳಿರಲಿ. ಅದರಿಂದೇನು ?

(ಉತ್ತರ):—ಅದರಿಂದ ಇದು ಸಿದ್ಧವಾಯಿತು : (ಏನೆಂದರೆ) ಭೋಜ್ಯ, ಭೋಕ್ತೃ-ಎಂಬ ಸಂಬಂಧದಿಂದಾಗಿರುವ ಸಂಸಾರವು ಕಾರ್ಯಕ್ಕೇ ಸೇರಿದ್ದೇ ಹೊರತು ಆತ್ಮನಲ್ಲಿರುವದಿಲ್ಲ. ಆತ್ಮನಲ್ಲಿಯೋ ಎಂದರೆ ಅದು ಭ್ರಾಂತಿಯಿಂದ ಇದೆ ಎಂದು ಭಾವಿಸಲ್ಪಡುತ್ತದೆ.[1]

## ಜೀವನು ಪರಮಾತ್ಮನ ಕಾರ್ಯವಲ್ಲ

(ಭಾಷ್ಯ)

೨೫೧. ನನು ಆತ್ಮಾಪಿ ಪರಮಾತ್ಮನಃ ಕಾರ್ಯಮ್, ತತೋ ಯುಕ್ತಸ್ತಸ್ಯ ಸಂಸಾರ ಇತಿ । ನ । ಅಸಂಸಾರಿಣ ಏವ ಪ್ರವೇಶಶ್ರುತೇಃ । "ತತ್ ಸೃಷ್ಟ್ವಾ । ತದೇವಾನುಪ್ರಾವಿಶತ್" (೨-೬) ಇತಿ ಆಕಾಶಾದಿಕಾರಣಸ್ಯ ಹಿ ಅಸಂಸಾರಿಣ ಏವ ಪರಮಾತ್ಮನಃ ಕಾರ್ಯೇ ಅನುಪ್ರವೇಶಃ ಶ್ರೂಯತೇ । ತಸ್ಮಾತ್ ಕಾರ್ಯಾನುಪ್ರವಿಷ್ಟೋ ಜೀವ ಆತ್ಮಾ ಪರ ಏವ ಅಸಂಸಾರೀ । "ಸೃಷ್ಟ್ವಾ ಅನುಪ್ರಾವಿಶತ್" ಇತಿ ಸಮಾನಕರ್ತೃಕತ್ವೋಪಪತ್ತೇಶ್ಚ । ಸರ್ಗಪ್ರವೇಶಕ್ರಿಯಯೋಶ್ಚ ಏಕಶ್ಚೇತ್ ಕರ್ತಾ ತತಃ ಕ್ತ್ವಾಪ್ರತ್ಯಯೋ ಯುಕ್ತಃ । ಪ್ರವಿಷ್ಟಸ್ಯ ತು ಭಾವಾನ್ತರಾಪತ್ತಿಃ ಇತಿ ಚೇತ್ । ನ । ಪ್ರವೇಶಸ್ಯ ಅನ್ಯಾರ್ಥತ್ವೇನ ಪ್ರತ್ಯಾಖ್ಯಾತತ್ವಾತ್ । "ಅನೇನ ಜೀವೇನ" (ಛಾ. ೬-೩-೨) ಇತಿ ವಿಶೇಷಶ್ರುತೇಃ ಧರ್ಮಾನ್ತರೇಣ ಅನುಪ್ರವೇಶಃ ಇತಿ ಚೇತ್ । ನ । "ತತ್ತ್ವಮಸಿ" (ಛಾ. ೬-೮-೭) ಇತಿ ಪುನಸ್ತದ್ಭಾವೋಕ್ತೇಃ । ಭಾವಾನ್ತರಾಪನ್ನಸ್ಯೈವ ತದಪೋಹಾರ್ಥಾ ಸಂಪತ್ ಇತಿ ಚೇತ್ ।[2] ನ । "ತತ್ ಸತ್ಯಂ ಸ ಆತ್ಮಾ ತತ್ತ್ವಮಸಿ" (ಛಾ. ೬-೮-೬) ಇತಿ ಸಾಮಾನಾಧಿಕರಣ್ಯಾತ್ ॥

(ಭಾಷ್ಯಾರ್ಥ)

(ಆಕ್ಷೇಪ):—ಆತ್ಮನೂ ಪರಮಾತ್ಮನ ಕಾರ್ಯವೇ[2]; ಆದ್ದರಿಂದ ಅವನಿಗೆ ಸಂಸಾರವಿರುವದು ಯುಕ್ತವೇ (ಆಗಿರುತ್ತದೆಯಲ್ಲವೆ) ?

(ಪರಿಹಾರ) :—ಹಾಗಲ್ಲ. ಏಕೆಂದರೆ ಅಸಂಸಾರಿಯಾದ (ಪರಮಾತ್ಮನೇ) ಪ್ರವೇಶಮಾಡಿದನೆಂದು ಶ್ರುತಿಯಲ್ಲಿದೆ. "ಅದನ್ನು ಸೃಷ್ಟಿಸಿ ಅದನ್ನೇ ಒಳ

---

1. ಭೋಕ್ತೃ ಭೋಗ್ಯ ವ್ಯವಹಾರವು ಪರಮಾರ್ಥವಲ್ಲ, ವ್ಯಾವಹಾರಿಕವೇ ಎಂಬುದನ್ನು ಸೂ. ಭಾ. ೨-೧-೧೩,೧೪ ರಲ್ಲಿ ನಿರ್ಣಯಿಸಿದೆ.

2. ಈ ಮತವು ಭಾಗವತರದು. ಸೂ. ೨-೨-೪೨ ನ್ನು ನೋಡಿ. ಆತ್ಮನು ಹುಟ್ಟುವದಿಲ್ಲವೆಂಬುದನ್ನು ಸೂ. ಭಾ. ೨-೩-೧೭ ರಲ್ಲಿ ವರ್ಣಿಸಿದೆ.

ಹೊಕ್ಕನು" (೨-೬) ಎಂದು ಆಕಾಶವೇ ಮುಂತಾದದ್ದಕ್ಕೆ ಕಾರಣವಾಗಿರುವ ಅಸಂಸಾರಿಯಾದ ಪರಮಾತ್ಮನೇ ಕಾರ್ಯದಲ್ಲಿ ಒಳಹೊಕ್ಕನೆಂದು ಶ್ರುತಿಯಲ್ಲಿದೆ. ಆದ್ದರಿಂದ ಕಾರ್ಯವನ್ನು ಒಳಹೊಕ್ಕ ಜೀವಾತ್ಮನು ಅಸಂಸಾರಿಯಾದ ಪರಮಾತ್ಮನೇ. "ಸೃಷ್ಟಿಸಿ ಒಳಹೊಕ್ಕನು" ಎಂದು ಸಮಾನಕರ್ತೃಕವಾಗಿ (ಹೇಳಿರುವದು) ಹೊಂದುವದರಿಂದಲೂ (ಹೀಗೆಂದು ತಿಳಿಯಬೇಕು). ಸೃಷ್ಟಿ, ಹೊಗುವದು-ಎಂಬ ಎರಡು ಕ್ರಿಯೆಗಳಿಗೂ ಒಬ್ಬನೇ ಕರ್ತೃವಾದರೆ ಆಗ "ಕ್ತ್ವಾ" (ಎಂಬ ಭೂತಕೃದಂತದ) ಪ್ರತ್ಯಯವನ್ನು (ಪ್ರಯೋಗಿಸಿರುವದು) ಸರಿಯಾಗುತ್ತದೆ.

(ಆಕ್ಷೇಪ) :—ಆದರೆ ಪ್ರವೇಶಮಾಡಿದಮೇಲೆ (ಪರಮಾತ್ಮನು) ಮತ್ತೊಂದು ಪದಾರ್ಥವಾಗುತ್ತಾನೆ (ಎಂದರೊ) ?

(ಪರಿಹಾರ): —ಹಾಗಲ್ಲ. ಏಕೆಂದರೆ ಪ್ರವೇಶವೆಂಬ ಶ್ರುತಿಗೆ ಬೇರೆಯ ಉದ್ದೇಶವಿರುವದೆಂದು ಆಗಲೆ [1] (ಈ ಮತವನ್ನು) ತಿರಸ್ಕರಿಸಿರುತ್ತೇವೆ.

(ಆಕ್ಷೇಪ) :—"ಈ ಜೀವನ (ರೂಪದಿಂದ)" (ಛಾ. ೬-೩-೨) ಎಂದು ವಿಶೇಷ(ರೂಪವನ್ನು) ಹೇಳುವ [2] ಶ್ರುತಿಯ ಪ್ರಮಾಣದಿಂದ ಮತ್ತೊಂದು ಸ್ವಭಾವದಿಂದ [3] ಒಳಹೊಕ್ಕನು (ಎನ್ನುವದೇ ಯುಕ್ತ).

(ಪರಿಹಾರ): —ಹಾಗಲ್ಲ. ಏಕೆಂದರೆ "ಅದೇ ನೀನಾಗಿದ್ದೀಯೆ" (ಛಾ ೬-೮-೭) ಎಂದು ಮತ್ತೂ ಅದೇ ಸ್ವರೂಪವನ್ನು (ಶ್ರುತಿಯಲ್ಲಿ) ಹೇಳಿರುತ್ತದೆ.[4]

---

1, ಭಾ. ಭಾ. ೧೭೬ ರಲ್ಲಿ.

2. "ಅದನ್ನೇ ಒಳಹೊಕ್ಕಿತು" ಎಂಬದು ಸಾಮಾನ್ಯವಾಕ್ಯ; ಅದರಲ್ಲಿ ಇಂಥ ರೂಪದಿಂದ ಹೊಕ್ಕನು ಎಂಬುದನ್ನೇನೂ ಹೇಳಿಲ್ಲ. ಛಾಂದೋಗ್ಯದಲ್ಲಿ ಜೀವರೂಪದಿಂದ ಹೊಕ್ಕನು ಎಂದು ಹೇಳಿರುವದು ವಿಶೇಷವಾಕ್ಯ. ಸಾಮಾನ್ಯವಾಕ್ಯಕ್ಕಿಂತ ವಿಶೇಷವಾಕ್ಯವು ಪ್ರಬಲವಾದ್ದರಿಂದ ಇಲ್ಲಿಯೂ ರೂಪಾಂತರವನ್ನು ಹೊಂದಿ ಹೊಕ್ಕನು ಎಂದು ಅರ್ಥಮಾಡುವದು ಯುಕ್ತ ಎಂದು ಭಾವ.

3. "ಪಾಷಾಣಸರ್ಪಾದಿವತ್ ಧರ್ಮಾನ್ತರೇಣೇತಿ ಚೇತ್" ಎಂಬ ಬೃ. ಭಾ. ೧-೪-೭ ಪೂರ್ವಪಕ್ಷವನ್ನೂ ಅದರ ಪರಿಹಾರವನ್ನೂ ನೋಡಿ.

4. ಜೀವನಾದ ಶ್ವೇತಕೇತುವಿಗೆ ಆ ಸದ್ರೂಪಬ್ರಹ್ಮವು ನೀನು ಎಂದು ಉಪದೇಶಿಸಿರುವದರಿಂದ ಶ್ರುತಿಗೆ ವಿಶೇಷರೂಪವು ಪರಮಾರ್ಥವೆಂಬ ಅಭಿಪ್ರಾಯವಿಲ್ಲ ಎಂದು ಭಾವ.

ಮತ್ತೊಂದು ಸ್ವರೂಪವನ್ನು ಪಡೆದುಕೊಂಡ (ಜೀವನಿಗೇ) ಅದನ್ನು ಕಳೆದುಕೊಳ್ಳುವದಕ್ಕಾಗಿ (ಹೇಳಿದ) ಸಂಪತ್ತು[1] (ಎಂದರೊ) ?

(ಪರಿಹಾರ) :—ಹಾಗಲ್ಲ. ಏಕೆಂದರೆ "ಅದು ಸತ್ಯವು ; ಅದೇ ಆತ್ಮನು, ಅದೇ ನೀನಾಗಿರುತ್ತೀಯೆ" (ಛಾ. ೬-೮-೭) ಎಂದು ಸಮಾನಾಧಿಕರಣವಾಗಿ (ಉಪದೇಶಮಾಡಿರುತ್ತದೆ).[2]

## ಆತ್ಮನಲ್ಲಿ ಸಂಸಾರಿತ್ವವಿದೆ ಎಂಬುದು ಯುಕ್ತಿವಿರುದ್ಧ

(ಭಾಷ್ಯ)

೨೫೨. ದೃಷ್ಟಂ ಜೀವಸ್ಯ ಸಂಸಾರಿತ್ವಮ್ ಇತಿ ಚೇತ್ । ನ । ಉಪಲಬ್ಧುಃ ಅನುಪಲಭ್ಯತ್ವಾತ್ । ಸಂಸಾರಧರ್ಮವಿಶಿಷ್ಟ ಆತ್ಮಾ ಉಪಲಭ್ಯತೇ ಇತಿ ಚೇತ್ । ನ । ಧರ್ಮಾಣಾಂ ಧರ್ಮಿಣೋಽವ್ಯತಿರೇಕಾತ್ ಕರ್ಮತ್ವಾನುಪಪತ್ತೇಃ । ಉಷ್ಣಪ್ರಕಾಶಯೋರ್ದಾಹ್ಯಪ್ರಕಾಶ್ಯತ್ವಾನುಪಪತ್ತಿವತ್ । ತ್ರಾಸಾದಿದರ್ಶನಾತ್ ದುಃಖಿತ್ವಾದ್ಯನುಮೀಯತೇ ಇತಿ ಚೇತ್ । ನ । ತ್ರಾಸಾದೇರ್ದುಃಖಸ್ಯ ಚ ಉಪಲಭ್ಯಮಾನತ್ವಾತ್ ನೋಪಲಬ್ಧೃಧರ್ಮತ್ವಮ್ । ಕಾಪಿಲಕಾಣಾದಾದಿತರ್ಕಶಾಸ್ತ್ರವಿರೋಧಃ ಇತಿ ಚೇತ್ । ನ । ತೇಷಾಂ ಮೂಲಾಭಾವೇ ವೇದವಿರೋಧೇ ಚ ಭ್ರಾಂತತ್ವೋಪಪತ್ತೇಃ । ಶ್ರುತ್ಯುಪಪತ್ತಿಭ್ಯಾಂ ಚ ಸಿದ್ಧಮ್ ಆತ್ಮನೋಽಸಂಸಾರಿತ್ವಮ್ ॥

(ಭಾಷ್ಯಾರ್ಥ)

(ಆಕ್ಷೇಪ) : ಜೀವನಿಗೆ ಸಂಸಾರಿತ್ವವಿರುವದು (ಅನುಭವದಲ್ಲಿ) ಕಂಡು ಬರುತ್ತದೆಯಲ್ಲ !

---

1. ಜೀವನನ್ನು ಪರಮಾತ್ಮನೆಂದು ಚಿಂತಿಸಬೇಕು ಎಂಬುದು ಶ್ರುತಿಯ ಅರ್ಥ. ಪರಮಾತ್ಮನ ಧರ್ಮವನ್ನು ಜೀವನಲ್ಲಿದೆಯೆಂಬ ಸಂಪಾದನ (ಉಂಟೆಂಬ ಚಿಂತನೆ) [illegible] ಬಳಿಕ ಮುಕ್ತಿಯಾಗುತ್ತದೆ ಎಂದು ಪೂರ್ವಪಕ್ಷಿಯ ಭಾವ. ಐಕ್ಯವನ್ನು ಹೇಳುವ ವಾಕ್ಯಗಳನ್ನು ಹೀಗೆ ಉಪಾಸನಾಪರವಾಗಿ ಮಾಡುವ ಪೂರ್ವಪಕ್ಷವನ್ನು ಛಾ. ಭಾ. ೬ ನೆಯ ಅಧ್ಯಾಯದ ಉಪಸಂಹಾರದಲ್ಲಿಯೂ ಸೂ. ಭಾ. ೧-೧-೪ರಲ್ಲಿಯೂ ಖಂಡಿಸಿದೆ.

2. ಶ್ರುತಿಯಲ್ಲಿ ನೀನು ಈಗಲೇ ಬ್ರಹ್ಮವಾಗಿದ್ದೀಯೆ ಎಂದು ಹೇಳಿದೆ ; ಚಿಂತಿಸಿದರೆ ಮುಂದೆ ಆಗುವೆ ಎಂದೇನೂ ಹೇಳಿಲ್ಲ ಎಂದು ಭಾವ.

3. ಶ್ರುತಿಯನ್ನು ಬಿಟ್ಟು ಪ್ರತ್ಯಕ್ಷಾನುಮಾನಗಳಿಂದಲೇ ಜೀವಬ್ರಹ್ಮಭೇದವನ್ನು ಸಾಧಿಸುವದಕ್ಕೆ ಪೂರ್ವಪಕ್ಷಿ ಹೊರಟಿರುತ್ತಾನೆ.

(ಪರಿಹಾರ) :—ಹಾಗಲ್ಲ. ಏಕೆಂದರೆ ಅರಿಯುವ (ಆತ್ಮನು) ಅರಿಯಲ್ಪಡುವವನಾಗಲಾರನು.[1]

(ಆಕ್ಷೇಪ) :—ಸಂಸಾರವೆಂಬ ಧರ್ಮದಿಂದ ಕೂಡಿಯೇ ಆತ್ಮನು ಕಂಡುಬರುತ್ತಿದಾನಲ್ಲ ![2]

(ಪರಿಹಾರ): —ಹಾಗಲ್ಲ. ಏಕೆಂದರೆ ಧರ್ಮಗಳು ಧರ್ಮಿಗಿಂತ ಬೇರೆಯಾಗಿ (ಅದನ್ನು ಬಿಟ್ಟು) ಇರಲಾರವಾದ್ದರಿಂದ (ಅವೂ) ವಿಷಯವಾಗಲಾರವು.[3] ಹೇಗೆ ಬಿಸಿ, ಬೆಳಕು ಸುಡಲ್ಪಡುವದು, ಬೆಳಗಲ್ಪಡುವದು ಎಂಬುದು ಹೇಗೆ ಹೊಂದುವದಿಲ್ಲವೋ ಅದರಂತೆಯೇ (ಇದು).[4]

(ಆಕ್ಷೇಪ): —ಅಂಜಿಕೆಯೇ ಮುಂತಾದವುಗಳು ಕಂಡುಬರುವದರಿಂದ ದುಃಖಿತ್ವವೇ ಮುಂತಾದದ್ದು (ಆತ್ಮನ ಧರ್ಮವೆಂದು) ಅನುಮಾನಿಸಬಹುದಲ್ಲ![5]

(ಪರಿಹಾರ) :—ಹಾಗಲ್ಲ. ಅಂಜಿಕೆಯೇ ಮುಂತಾದದ್ದೂ ದುಃಖವೂ ಅರಿಯಲ್ಪಡುತ್ತಿರುವದರಿಂದ (ಅವು) ಅರಿಯುವಾತನ ಧರ್ಮವಾಗಲಾರವು.[6]

(ಆಕ್ಷೇಪ) :—**ಕಪಿಲರು, ಕಣಾದರು** -ಮುಂತಾದವರ ತರ್ಕಶಾಸ್ತ್ರಕ್ಕೆ ವಿರುದ್ಧವಾಗಿದೆಯಲ್ಲ (ನಿಮ್ಮ ಮತ) !

(ಪರಿಹಾರ):—ಹಾಗಲ್ಲ. ಏಕೆಂದರೆ ಅವರಿಗೆ **ಮೂಲ (ಪ್ರಮಾಣ)ವಿಲ್ಲದ್ದರಿಂದಲೂ (ಅವರು) ವೇದಕ್ಕೆ ವಿರುದ್ಧವಾಗಿರುವದರಿಂದಲೂ ಅವರು**

---

1. ಆತ್ಮನು ತನಗೆ ತಾನೇ ಜ್ಞೇಯವಲ್ಲ. ಐ. ಭಾ. ಒಂದನೆಯ ಅಧ್ಯಾಯದ ಉಪಸಂಹಾರಭಾಷ್ಯವನ್ನು ನೋಡಿ. ಛಾ. ಭಾ. ೮-೧೨-೧ ರಲ್ಲಿ ಜೀವನಲ್ಲಿ ಸಂಸಾರಿತ್ವವಿಲ್ಲವೆಂದು ಹೇಳಿರುವ ಭಾಷ್ಯವನ್ನೂ ನೋಡಿ.

2. ಕೇವಲಾತ್ಮನು ವಿಷಯನಾಗದೆ ಇದ್ದರೂ ಗುಣವಿಶಿಷ್ಟನಾದ ಆತ್ಮನು ವಿಷಯನಾಗಲಿ_ಎಂದು ಭಾವ.

3. ಅವು ಆತ್ಮನ ಧರ್ಮಗಳಾದರೆ ಆತ್ಮನಂತೆ ಅವೂ ವಿಷಯವಾಗಬಾರದು ; ಆದರೆ ವಿಷಯವಾಗುತ್ತವೆಯಾದ್ದರಿಂದ ಅವು ಆತ್ಮನ ಧರ್ಮವಲ್ಲ.

4. ಸುಡುವದು ಎಂಬುದು ಬೆಂಕಿಯನ್ನು ವಿಷಯಮಾಡಲಾರದು ; ಅದರಂತೆ ಬಿಸಿಯನ್ನೂ ವಿಷಯೀಕರಿಸಲಾರದು ; ಅದರಂತೆ ಜ್ಞಾನವು ಆತ್ಮನನ್ನಾಗಲಿ ಆತ್ಮನ ಧರ್ಮವನ್ನಾಗಲಿ ವಿಷಯೀಕರಿಸಲಾರದು.

5. ಅಂಜಿಕೊಂಡು ಓಡುತ್ತಿರುವವನಿಗೆ ಅವನು ಯಾವದಕ್ಕೆ ಅಂಜಿದ್ದಾನೋ ಅದರಿಂದ ದುಃಖವಾಗಿದೆ ಎಂದು ಊಹಿಸಬಹುದಲ್ಲ! ಎಂದು ಭಾವ.

6. ಆದ್ದರಿಂದ ಅನುಮಾನವು ಸರಿಯಲ್ಲ.

7. ಕಪಿಲರು ಭೋಕ್ತೃತ್ವವು ಪರಮಾರ್ಥವೆನ್ನುತ್ತಾರೆ ; ಕಣಾದರು ಕರ್ತೃತ್ವವೂ ಪರಮಾರ್ಥವೆನ್ನುತ್ತಾರೆ.

**ಭ್ರಾಂತರು ಎಂಬುದು ಯುಕ್ತ.[1] ಶ್ರುತಿ, ಯುಕ್ತಿ–ಎರಡರಿಂದಲೂ ಆತ್ಮನು ಅಸಂಸಾರಿ ಎಂದು ಸಿದ್ಧವೂ ಆಗಿರುತ್ತದೆ.**

## ಆತ್ಮನು ಒಬ್ಬನೇ ಆದ್ದರಿಂದ ಸಂಸಾರಿತ್ವವು ನಿಜವಲ್ಲ

(ಭಾಷ್ಯ)

೨೫೪. ಏಕತ್ವಾಚ್ಚ । ಕಥಮ್ ಏಕತ್ವಮಿತಿ ? ಉಚ್ಯತೇ —

(ಭಾಷ್ಯಾರ್ಥ)

(ಆತ್ಮನು) ಒಬ್ಬನೇ ಆಗಿರುವದರಿಂದಲೂ (ಅವನಲ್ಲಿ) ನಿಜವಾಗಿ ಸಂಸಾರಿತ್ವ ವಿರುವದಿಲ್ಲ). ಒಬ್ಬನೇ ಎಂಬುದು ಹೇಗೆ ? ಎಂದರೆ (ಶ್ರುತಿ) ಹೇಳುತ್ತದೆ:—

**ಸ ಯಶ್ಚಾಯಂ ಪುರುಷೇ । ಯಶ್ಚಾಸಾವಾದಿತ್ಯೇ ಸ ಏಕಃ ॥ ೬ ॥**

೬. ಯಾವ ಈ ಇವನು ಪುರುಷನಲ್ಲಿರುವನೋ ಮತ್ತು ಯಾವ ಅವನು ಆದಿತ್ಯನಲ್ಲಿರುವನೋ ಅವನು ಒಬ್ಬನೇ.

(ಭಾಷ್ಯ)

೨೫೫. "ಸ ಯಶ್ಚಾಯಂ ಪುರುಷೇ । ಯಶ್ಚಾಸಾವಾದಿತ್ಯೇ ಸ ಏಕಃ ।" ಇತ್ಯೇವಮಾದಿ ಪೂರ್ವವತ್ ಸರ್ವಮ್ ।

(ಭಾಷ್ಯಾರ್ಥ)

"ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ ಸ ಏಕಃ" ಎಂದು ಮುಂತಾಗಿರುವದೆಲ್ಲವನ್ನೂ ಹಿಂದೆ (೨-೮ರಲ್ಲಿ ವಿವರಿಸಿರು)ವಂತೆ[2] (ಅರ್ಥಮಾಡಿ ಕೊಳ್ಳಬೇಕು).

**ಸ ಯ ಏವಂ ವಿತ್ । ಅಸ್ಮಾಲ್ಲೋಕಾತ್ ಪ್ರೇತ್ಯ । ಏತಮನ್ನ ಮಯಮಾತ್ಮಾನಮುಪಸಂಕ್ರಮ್ಯ । ಏತಂ ಪ್ರಾಣಮಯ ಮಾತ್ಮಾನಮುಪಸಂಕ್ರಮ್ಯ । ಏತಂ ಮನೋಮಯಮಾತ್ಮಾನ ಮುಪಸಂಕ್ರಮ್ಯ । ಏತಂ ವಿಜ್ಞಾನಮಯಮಾತ್ಮಾನ ಮುಪ**

---

1. ಪ್ರಮಾಣವನ್ನು ಪರಿಶೋಧಿಸುವದಕ್ಕೆ ತರ್ಕವು ಬೇಕು. ; ಪ್ರಮಾಣವಿಲ್ಲದ ಒಣ ತರ್ಕದಿಂದ ಯಾವದೂ ಸಿದ್ಧವಾಗಲಾರದು. ಆದ್ದರಿಂದ ಈ ವಿಷಯಕ್ಕೆ ಕಪಿಲಾದಿಗಳ ಮಾತನ್ನು ಆಪ್ತವಚನವೆಂದು ಭಾವಿಸಲಾಗದು ಎಂಬ ಭಾವ.

2. "ಉಪಾಧಿಗಳಿಂದಾದ ಹೆಚ್ಚುಕಡಿಮೆಗಳಿಲ್ಲದೆ ಒಬ್ಬನೇ ಆತ್ಮನು ಎಲ್ಲೆಲ್ಲಿಯೂ ಇರುತ್ತಾನೆ ; ಹೀಗೆಂದು ಅರಿತವನು ಜ್ಞಾನದಿಂದಲೇ ಆತ್ಮಸ್ವರೂಪವನ್ನು ಪಡೆದುಕೊಳ್ಳುತ್ತಾನೆ" ಎಂದು ಆನಂದಮಯಮಾತ್ಮಾನಮುಪಸಂಕ್ರಮ್ಯ ಎಂಬವರೆಗಿನ ಗ್ರಂಥದ ಅರ್ಥ.

**ಸಂಕ್ರಮ್ಯ । ಏತಮಾನನ್ದಮಯಮಾತ್ಮಾನಮುಪಸಂಕ್ರಮ್ಯ। ಇಮಾಲ್ಲೋಕಾನ್ ಕಾಮಾನ್ನೀ ಕಾಮರೂಪ್ಯನುಸಂಚರನ್ । ಏತತ್ ಸಾಮಗಾಯನ್ನಾಸ್ತೇ ॥ ೭ ॥**

೭. ಯಾವನು ಹೀಗೆಂದು ಅರಿತುಕೊಳ್ಳುವನೋ ಅವನು ಈ ಲೋಕದಿಂದ ಹೊರಟುಹೋಗಿ ಈ ಅನ್ನಮಯನೆಂಬ ಆತ್ಮನನ್ನು ಪಡೆದುಕೊಂಡು ಈ ಪ್ರಾಣಮಯನೆಂಬ ಆತ್ಮನನ್ನು ಪಡೆದುಕೊಂಡು, ಈ ಮನೋಮಯನೆಂಬ ಆತ್ಮನನ್ನು ಪಡೆದುಕೊಂಡು, ಈ ಆನಂದಮಯನೆಂಬ ಆತ್ಮನನ್ನು ಪಡೆದುಕೊಂಡು, ಈ ಲೋಕಗಳನ್ನು ಕಾಮಾನ್ನಿಯಾಗಿ ಕಾಮರೂಪಿಯಾಗಿ ಸಂಚರಿಸುತ್ತಾ ಈ (ಮುಂದೆ ಹೇಳುವ) ಸಾಮವನ್ನು ಗಾನಮಾಡುತ್ತ ಇರುವನು.

(ಭಾಷ್ಯ)

೫೫೫. ಅನ್ನಮಯಾದಿಕ್ರಮೇಣ ಆನನ್ದಮಯಮಾತ್ಮಾನಮ್ ಉಪಸಂಕ್ರಮ್ಯ ಏತತ್ ಸಾಮ ಗಾಯನ್ ಆಸ್ತೇ । "ಸತ್ಯಂ ಜ್ಞಾನಮ್" ಇತ್ಯಸ್ಯಾ ಋಚೋಽರ್ಥೋ ವ್ಯಾಖ್ಯಾತೋ ವಿಸ್ತರೇಣ ತದ್ವಿವರಣಭೂತಯಾ ಆನನ್ದವಲ್ಲ್ಯಾ। "ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ" ಇತಿ ತಸ್ಯ (?)[1] ಫಲವಚನಸ್ಯ ಅರ್ಥವಿಸ್ತಾರೋ ನೋಕ್ತಃ । ಕೇ ತೇ ? ಕಿಂವಿಷಯಾ ವಾ ಸರ್ವೇ ಕಾಮಾಃ ? ಕಥಂ ವಾ ಬ್ರಹ್ಮಣಾ ಸಹ ಸಮಶ್ನುತೇ ಇತ್ಯೇತದ್ ವಕ್ತವ್ಯಮ್ ಇತಿ ಇದಮಿದಾನೀಮ್ ಆರಭ್ಯತೇ । ತತ್ರ ಪಿತಾಪುತ್ರಾಖ್ಯಾಯಿಕಾಯಾಂ ಪೂರ್ವವಿದ್ಯಾಶೇಷಭೂತಾಯಾಂ ತಪೋ ಬ್ರಹ್ಮವಿದ್ಯಾಸಾಧನಮ್ ಉಕ್ತಮ್ । ಪ್ರಾಣಾದೇಃ ಆಕಾಶಾನ್ತಸ್ಯ ಚ ಕಾರ್ಯಸ್ಯ ಅನ್ನಾನ್ನಾದತ್ವೇನ ವಿನಿಯೋಗಶ್ಚ ಉಕ್ತಃ । ಬ್ರಹ್ಮವಿಷಯೋಪಾಸನಾನಿ ಚ । ಯೇ ಚ ಸರ್ವೇ ಕಾಮಾಃ ಪ್ರತಿನಿಯತಾನೇಕಸಾಧನಸಾಧ್ಯಾ ಆಕಾಶಾದಿಕಾರ್ಯಭೇದವಿಷಯಾಃ ಏತೇ ದರ್ಶಿತಾಃ । ಏಕತ್ವೇ ಪುನಃ ಕಾಮಕಾಮಿತ್ವಾನುಪಪತ್ತಿಃ । ಭೇದಜಾತಸ್ಯ ಸರ್ವಸ್ಯ ಆತ್ಮಭೂತತ್ವಾತ್ । ತತ್ರ ಕಥಂ ಯುಗಪದ್ ಬ್ರಹ್ಮಸ್ವರೂಪೇಣ ಸರ್ವಾನ್ ಕಾಮಾನ್ ಏವಂವಿತ್ ಸಮಶ್ನುತೇ ಇತಿ ? ಉಚ್ಯತೇ । ಸರ್ವಾತ್ಮತ್ವೋಪಪತ್ತೇಃ[2]॥

---

1. "ಇತ್ಯೇತಸ್ಯ" ಎಂದೋ "ಇತಿ ತಸ್ಯಾಃ" ಎಂದೋ ಭಾಷ್ಯವು ಇದ್ದಿರಬೇಕೆಂದು ತೋರುತ್ತದೆ.

2. "ಸರ್ವಾತ್ಮತ್ವೋಪಪತ್ತೇಃ" ಎಂಬ ವಾ॥ ಪಾಠಕ್ಕಿಂತ ಈ ಪಾಠವೇ ಮೇಲು.

(ಭಾಷ್ಯಾರ್ಥ)

ಅನ್ನಮಯನೇ ಮುಂತಾದ ಕ್ರಮದಿಂದ ಆನಂದಮಯನೆಂಬ ಆತ್ಮನನ್ನು ಪಡೆದುಕೊಂಡು ಈ (ಮುಂದೆ ಹೇಳುವ) ಸಾಮವನ್ನು ಗಾನಮಾಡುತ್ತಾ ಇರುತ್ತಾನೆ.

"ಸತ್ಯವೂ ಜ್ಞಾನವೂ (ಅನಂತವೂ ಆದದ್ದು ಬ್ರಹ್ಮವು)" ಎಂಬೀ ಋಕ್ಕಿನ ಅರ್ಥವನ್ನು ಅದರ ವಿವರಣವಾಗಿರುವ ಆನಂದವಲ್ಲಿಯಲ್ಲಿ ವಿಸ್ತಾರವಾಗಿ ವ್ಯಾಖ್ಯಾನ ಮಾಡಿದ್ದಾಗಿದೆ. (ಆದರೆ) "ಅವನು ಎಲ್ಲಾ ಕಾಮುಗಳನ್ನೂ ಒಮ್ಮೆಗೇ ವಿಪಶ್ಚಿತ್ತಾದ ಬ್ರಹ್ಮವಾಗಿ ಪಡೆದುಕೊಳ್ಳುತ್ತಾನೆ" ಎಂಬೀ ಫಲವಚನದ ಅರ್ಥವನ್ನು ವಿಸ್ತಾರವಾಗಿ ಹೇಳಿರುವದಿಲ್ಲ. ಆ (ಕಾಮುಗಳು) ಯಾವವು? ಯಾವ ವಿಷಯದ ಕಾಮುಗಳು? ಬ್ರಹ್ಮರೂಪದಿಂದ ಅವುಗಳನ್ನು ಒಮ್ಮೆಗೇ ಪಡೆಯುತ್ತಾನೆಂಬುದು ಹೇಗೆ?–ಎಂಬಿದನ್ನು ಹೇಳಬೇಕಾಗಿರುವದರಿಂದ ಈ (ಮುಂದಿನ) ಗ್ರಂಥವನ್ನು ಈಗ ಆರಂಭಿಸಿರುತ್ತದೆ. ಹಿಂದೆ (ಹೇಳಿರುವ) ವಿದ್ಯೆಗೆ ಶೇಷವಾಗಿರುವ ತಂದೆಮಕ್ಕಳ ಕಥೆಯು,[1] ತಪಸ್ಸು ಬ್ರಹ್ಮವಿದ್ಯೆಗೆ ಸಾಧನವೆಂದು ಹೇಳಲಾಗಿದೆ. ಪ್ರಾಣವೇ ಮುಂತಾಗಿ ಆಕಾಶದವರೆಗಿನ ಕಾರ್ಯವು ಅನ್ನ, ಅನ್ನಾದ–ಈ ಸಂಬಂಧದಿಂದ ಇದ್ದುಕೊಂಡಿರುವದೆಂದು (ಅದಕ್ಕೆ) ವಿನಿಯೋಗವನ್ನೂ ಹೇಳಲಾಗಿದೆ. ಬ್ರಹ್ಮವಿಷಯದ ಉಪಾಸನೆಗಳನ್ನೂ (ಹೇಳಿದ್ದಾಗಿದೆ). ಮತ್ತು (ಇಂತಿಂಥವೆಂದು) ಗೊತ್ತಾಗಿರುವ ಅನೇಕ ಸಾಧನಗಳಿಂದ ಸಾಧ್ಯವಾಗಿರುವ ಆಕಾಶವೇ ಮುಂತಾದ ಬೇರೆಬೇರೆಯ ಕಾರ್ಯಗಳ ವಿಷಯುವಾದ ಕಾಮುಗಳು ಯಾವವೋ ಅವನ್ನೆಲ್ಲ ತಿಳಿಸಿದ್ದಾಗಿದೆ. ಆದರೆ (ಆತ್ಮನು) ಒಬ್ಬನೇ ಆಗಿರುವಲ್ಲಿ ಕಾಮುಗಳು, ಕಾಮಿ–ಎಂಬ (ಸಂಬಂಧವು) ಇರುವದೆಂಬುದು ಹೊಂದುವಹಾಗಿಲ್ಲ: ಏಕೆಂದರೆ ಭೇದಸಮೂಹವೆಲ್ಲವೂ ಆತ್ಮನಾಗಿ ಬಿಟ್ಟಿರುತ್ತದೆ.[2] ಹೀಗಿರುವಲ್ಲಿ ಈ ರೀತಿಯಲ್ಲಿ ಬ್ರಹ್ಮವನ್ನು ತಿಳಿದುಕೊಂಡವನು ಹೇಗೆ ಒಮ್ಮೆಗೇ ಬ್ರಹ್ಮಸ್ವರೂಪದಿಂದ ಎಲ್ಲಾ ಕಾಮುಗಳನ್ನೂ ಪಡೆದುಕೊಳ್ಳುತ್ತಾನೆ? ಎಂದರೆ (ಶ್ರುತಿ) ಹೇಳುತ್ತದೆ: ಏಕೆಂದರೆ ಸರ್ವವೂ ತಾನೇ ಆಗಿಬಿಡುವದರಿಂದ.

---

1. ಉಪನಿಷತ್ತಿನಲ್ಲಿ ಜ್ಞಾನಸಂಬಂಧವಾಗಿರುವ ಈ ಬಗೆಯ ಕಥೆಗಳು ಕರ್ಮಕ್ಕೆ ಅಂಗವೆಂದು ಭಾವಿಸಬಾರದೆಂಬುದಕ್ಕೆ ಸೂ. ಭಾ. ೩-೪-೨೩ ನ್ನು ನೋಡಿ.

2. ಭೇದವು ಇದ್ದ ಹೊರತು ಕಾಮವುಂಟಾಗುವದಿಲ್ಲ.

# ಜ್ಞಾನಿಯ ಸರ್ವಾತ್ಮಭಾವ

(ಭಾಷ್ಯ)

೨೫೬. ಕಥಂ ಸರ್ವಾತ್ಮತ್ವಾಪತ್ತಿರಿತಿ?[1] ಆಹ—ಪುರುಷಾದಿತ್ಯಸ್ಥಾತ್ಮೈಕತ್ವ ವಿಜ್ಞಾನೇನ ಅಪೋಹ್ಯ ಉತ್ಕರ್ಷಾಪಕರ್ಷೌ ಅನ್ನಮಯಾದೀನ್ ಆತ್ಮನೋಽ[2] ವಿದ್ಯಾಕಲ್ಪಿತಾನ್ ಕ್ರಮೇಣ ಸಂಕ್ರಮ್ಯ ಆನನ್ದಮಯಾನ್ತಾನ್ ಸತ್ಯಂ ಜ್ಞಾನಮನನ್ತಂ ಬ್ರಹ್ಮ ಅದೃಶ್ಯಾದಿಧರ್ಮಕಂ ಸ್ವಾಭಾವಿಕಮಾನನ್ದಮ್ ಅಜಮ್ ಅಮೃತಮ್ ಅಭಯಮ್ ಅದ್ವೈತಂ ಫಲಭೂತಮ್ ಆಪನ್ನಃ ಇಮಾನ್ ಲೋಕಾನ್ ಭೂರಾದೀನ್ 'ಅನುಸಂಚರನ್' ಇತಿ ವ್ಯವಹಿತೇನ ಸಂಬನ್ಧಃ । ಕಥಮ್ ಅನುಸಂಚರನ್? ಕಾಮಾನ್ನೀ ಕಾಮತೋಽನ್ನಮ್ ಅಸ್ಯ ಇತಿ ಕಾಮಾನ್ನೀ । ತಥಾ ಕಾಮತೋ ರೂಪಾಣಿ ಅಸ್ಯ ಇತಿ ಕಾಮರೂಪೀ ಅನುಸಞ್ಚರನ್ ಸರ್ವಾತ್ಮನಾ ಇಮಾನ್ ಲೋಕಾನ್ ಆತ್ಮತ್ವೇನ ಅನುಭವನ್ । ಕಿಮ್? ಏತತ್ ಸಾಮ ಗಾಯನ್ ಆಸ್ತೇ ಸಮತ್ವಾತ್ ಬ್ರಹ್ಮೈವ ಸಾಮ ಸರ್ವಾನನ್ಯರೂಪಂ ಗಾಯನ್ ಶಬ್ದಯನ್ ಪ್ರಖ್ಯಾಪಯನ್ ಲೋಕಾನುಗ್ರಹಾರ್ಥಂ ತದ್ವಿಜ್ಞಾನಫಲಂ ಚ ಅತೀವ ಕೃತಾರ್ಥತ್ವಂ ಗಾಯನ್ ಆಸ್ತೇ ತಿಷ್ಠತಿ॥

(ಭಾಷ್ಯಾರ್ಥ)

(ಅವನು) ಸರ್ವವೂ ತಾನೇ ಆಗಿರುವನೆಂಬುದು ಹೇಗೆ? ಎಂದರೆ (ಶ್ರುತಿ) ಹೇಳುತ್ತದೆ: ಪುರುಷನಲ್ಲಿಯೂ ಆದಿತ್ಯನಲ್ಲಿಯೂ ಇರುವ ಆತ್ಮನು ಒಬ್ಬನೇ ಎಂಬ ಅರಿವಿನಿಂದ ಹೆಚ್ಚುಕುಂದುಗಳನ್ನು ತಳ್ಳಿಹಾಕಿ ಅನ್ನಮಯನು ಮೊದಲಾಗಿ ಆನಂದಮಯನವರೆಗಿನ ಅವಿದ್ಯಾಕಲ್ಪಿತರಾಗಿರುವ ಆತ್ಮರುಗಳನ್ನು (ಕ್ರಮವಾಗಿ) ಪಡೆದುಕೊಂಡು[3] ಸತ್ಯವೂ ಜ್ಞಾನವೂ ಅನಂತವೂ ಆಗಿರುವ ಬ್ರಹ್ಮವೇ, ಅದೃಶ್ಯತ್ವವೇ ಮುಂತಾದ ಧರ್ಮಗಳುಳ್ಳ ಹುಟ್ಟಿಲ್ಲದ ಸಾವಿಲ್ಲದ ಅಂಜಿಕೆಯಿಲ್ಲದ ಅದ್ವೈತವಾದ ಫಲರೂಪವಾದ ಆನಂದವೇ, ತಾನಾಗಿ ಈ ಲೋಕಗಳನ್ನು ಎಂದರೆ (ಈ) ಭೂರಾದಿ (ಲೋಕ)ಗಳನ್ನು ಸಂಚರಿಸುತ್ತಾ (ಅನುಸಂಚರನ್ ಎಂಬ) ದೂರ ಇರುವ

1. "ಸರ್ವಾತ್ಮತ್ವೋಪಪತ್ತಿಃ" ಎಂಬ ಪಾ॥ ಪಾಠವು ಅವಶ್ಯವಿಲ್ಲ.

2. ಇದು ಪಾ॥ ಪಾಠ; "ಅನ್ನಮಯಾದ್ಯಾತ್ಮನಃ" ಎಂದು ಆ॥ ಪಾಠ.

3. "ಕ್ರಮಕ್ರಮವಾಗಿ ದಾಟಿ" ಎಂದೂ ಅರ್ಥಮಾಡಬಹುದಾದರೂ ಹಿಂದೆ ಭಾ. ಭಾ. ೨೧೭ ರಲ್ಲಿ ಹೇಳಿರುವಂತೆ ಉಪಸಂಕ್ರಮಿಸಿ ಎಂದರೆ ಪಡೆದುಕೊಂಡು, ಅರಿತುಕೊಂಡು, ಎಂದು ಅರ್ಥಮಾಡಿದರೆ ಸಾಕಾಗಿದೆ.

ಮಾತಿಗೆ (ಈ ಲೋಕಗಳನ್ನು ಎಂಬುದನ್ನು) ಸಂಬಂಧಮಾಡಿಕೊಳ್ಳಬೇಕು. ಹೇಗೆ ಅನು ಸಂಚಾರಮಾಡುತ್ತಾ ? ಎಂದರೆ ಕಾಮಾನ್ನಿಯಾಗಿ-(ತನ್ನ) ಇಚ್ಛೆಯಂತೆ (ಬೇಕಾದ) ಅನ್ನವು ಇವನಿಗೆ (ದೊರಕುತ್ತದೆ)ಯಾದ್ದರಿಂದ ಕಾಮಾನ್ನಿಯಾಗಿ (ಎಂದಿದೆ)-ಇದ ರಂತೆ (ತನ್ನ) ಇಚ್ಛೆಯಂತೆ (ಬೇಕಾದ) ರೂಪಗಳು ಇವನಿಗೆ (ದೊರಕುವ)ದರಿಂದ ಕಾಮರೂಪಿಯಾಗಿ ಅನುಸಂಚಾರಮಾಡುತ್ತಾ; ಎಂದರೆ ಸರ್ವವೂ ತಾನೇ ಆಗಿ ಈ ಲೋಕಗಳನ್ನು (ಅವುಗಳ) ಆತ್ಮನಾಗಿ ಅನುಭವಿಸುತ್ತಾ[2]. ಅನುಭವಿಸುತ್ತಾ ಏನು ? ಎಂದರೆ ಈ ಸಾಮವನ್ನು ಗಾನಮಾಡುತ್ತಾ ಇರುತ್ತಾನೆ. ಸಮವಾಗಿರುವದರಿಂದ[3] ಸಾಮವೆನಿಸಿರುವದು ಎಲ್ಲಕ್ಕೂ ಅಭಿನ್ನವಾಗಿರುವ ಬ್ರಹ್ಮವೇ; (ಆ ಸಾಮವನ್ನು) ಗಾನಮಾಡುತ್ತಾ ಎಂದರೆ ತಿಳಿಯಹೇಳುತ್ತಾ ಜನರಿಗೆ ಅನುಗ್ರಹಮಾಡಬೇಕೆಂದು[4] ಪ್ರಕಟಿಸುತ್ತಾ ಆ (ಬ್ರಹ್ಮವನ್ನು) ಅರಿತುಕೊಂಡದ್ದರ ಫಲವಾಗಿ (ತಾನು) ಅತ್ಯಂತ ವಾಗಿ ಕೃತಾರ್ಥನಾಗಿರುವೆನೆಂಬುದನ್ನೂ, ಗಾನಮಾಡುತ್ತಾ ಇರುತ್ತಾನೆ, ಇದ್ದು ಕೊಂಡಿರುತ್ತಾನೆ.

## ಜ್ಞಾನಿಯ ಏಕತ್ವದ ಗಾನ

**ಹಾ೩ವು ಹಾ೩ವು ಹಾ೩ವು । ಅಹಮನ್ನಮಹಮನ್ನಮಹ ಮನ್ನಮ್ । ಅಹಮನ್ನಾದೋ೩ಽಹಮನ್ನಾದೋಽಹಮನ್ನಾದಃ । ಅಹಗ್ಂ ಶ್ಲೋಕಕೃದಹಗ್ಂ ಶ್ಲೋಕಕೃದಹಗ್ಂ ಶ್ಲೋಕಕೃತ್ । ಅಹಮಸ್ಮಿ ಪ್ರಥಮಜಾ ಋತಾ೩ಸ್ಯ । ಪೂರ್ವಂ ದೇವೇಭ್ಯೋಽ ಮೃತಸ್ಯ ನಾ೩ಭಾಯಿ । ಯೋ ಮಾ ದದಾತಿ ಸ ಇದೇವ ಮಾ೩ಽವಾಃ । ಅಹಮನ್ನ ಮನ್ನಮದಂತಮಾ೩ದ್ಮಿ । ಅಹಂ ವಿಶ್ವಂ ಭುವನಮಭ್ಯಭವಾ೩ಮ್ । ಸುವರ್ನಜ್ಯೋತೀಃ ॥ ೬ ॥**

---

1. ಫಲವಂತೆ ಭೋಗದ ಕೊನೆಯಲ್ಲಿ ಕಾಣುವ ಆನಂದವು ನಿಜವಾಗಿ ಆತ್ಮನೇ ಛಾ. ಭಾ. ೧೪೭ನ್ನು ನೋಡಿ.

2. ಯಾವ ಲೋಕದಲ್ಲಿ ಯಾವ ಭೋಗವನ್ನು ಯಾವನು ಅನಭವಿಸುತ್ತಿದ್ದರೂ ಅವನ ಆತ್ಮನು ಬ್ರಹ್ಮವೇ. ಬ್ರಹ್ಮಜ್ಞಾನಿಯು ಬ್ರಹ್ಮವೇ ಆಗಿರುವದರಿಂದ ಕಾಮಾನ್ನಿಯೂ ಕಾಮ ರೂಪಿಯೂ ಆಗಿ ಲೋಕಗಳನ್ನು ಅನುಸಂಚಾರಮಾಡುತ್ತಾ ಇರುತ್ತಾನೆ; ಎಂದರೆ ಉಪಾಧಿಗಳನ್ನು ಅನುಸರಿಸಿ ಅನುಭವಿಸುತ್ತಿರುತ್ತಾನೆ. ಬ್ರಹ್ಮವನ್ನು ಉಪಾಸನೆಮಾಡುವವರಿಗೆ ಬರುವ ಸರ್ವ ಲೋಕಾನುಭವದ ಐಶ್ವರ್ಯವೂ ಅವರ ಆತ್ಮನಾದ ಜ್ಞಾನಿಯದೇ ಆದ್ದರಿಂದ ಅನುಸಂಚಾರ ಮಾಡುತ್ತಾ ಎಂದರೆ ಲೋಕಗಳನ್ನು ಅನುಕ್ರಮದಿಂದ ಸಂಚರಿಸುತ್ತಾ ಎಂದೂ ಜ್ಞಾನದ ಸ್ತುತಿಯಾಗಿ ಅರ್ಥಮಾಡಬಹುದು.

3. ಗೀ. ಭಾ. ೧೪-೨೭, ೨೬, ೧೬-೧೯.

4. ಜ್ಞಾನಿಯು ಬ್ರಹ್ಮವಿಷಯವಾಗಿ ಮಾತನಾಡುವದಕ್ಕೆ ಪರಾನುಗ್ರಹವೇ ಕಾರಣ.

೮. ಆಹಾ! ಆಹಾ! ಇಹಾ! ನಾನು ಅನ್ನವು, ನಾನು ಅನ್ನವು, ನಾನು ಅನ್ನವು! ನಾನು ಅನ್ನಾದವು, ನಾನು ಅನ್ನಾದವು, ನಾನು ಅನ್ನಾದವು! ನಾನು ಶ್ಲೋಕಕರ್ತನು, ನಾನು ಶ್ಲೋಕಕರ್ತನು, ನಾನು ಶ್ಲೋಕಕರ್ತನು! ನಾನು ಋತಕ್ಕೆ ಮೊದಲು ಹುಟ್ಟಿದವನಾಗಿರುತ್ತೇನೆ, ದೇವತೆಗಳಿಗಿಂತ ಮೊದಲು; ಅಮೃತಕ್ಕೆ ನಾಭಿಯು. ಅನ್ನವಾಗಿರುವ ನಾನು, ಅನ್ನವನ್ನುಣ್ಣುವವನನ್ನು ಉಣ್ಣುತ್ತೇನೆ. ನಾನು ಇಡಿಯ ಭುವನವನ್ನು ತಿರಸ್ಕರಿಸುವೆನು. ಸೂರ್ಯನಂತಿರುವ ಜ್ಯೋತಿಯು!

(ಭಾಷ್ಯ)

೫೫೭. "ಹಾ೩ವು ಹಾ೩ವು ಹಾ೩ವು" । ಅಹೋ ಇತ್ಯಸ್ಮಿನ್ ಅರ್ಥೇ ಅತ್ಯನ್ತವಿಸ್ಮಯಖ್ಯಾಪನಾರ್ಥಮ್ । ಕಃ ಪುನರಸೌ ವಿಸ್ಮಯಃ? ಉಚ್ಯತೇ । ಅದ್ವೈತ ಆತ್ಮಾ ನಿರಞ್ಜನೋಽಪಿ ಸನ್ ಅಹಮೇವ ಅನ್ನಮ್, ಅನ್ನಾದಶ್ಚ । ಕಿಂ ಚ ಅಹಮೇವ ಶ್ಲೋಕಕೃತ್ । ಶ್ಲೋಕೋ ನಾಮ ಅನ್ನಾನ್ನಾದಯೋಃ ಸಙ್ಘಾತಃ । ತಸ್ಯ ಕರ್ತಾ ಚೇತನಾವಾನ್ । ಅನ್ನಸ್ಯೈವ ವಾ ಪರಾರ್ಥಸ್ಯ ಅನ್ನಾದಾರ್ಥಸ್ಯ ಸತಃ, ಅನೇಕಾತ್ಮಕಸ್ಯ ಪಾರಾರ್ಥ್ಯೇನ ಹೇತುನಾ ಸಙ್ಘಾತಕೃತ್ । ತ್ರಿರುಕ್ತಿರ್ವಿಸ್ಮಯ(ತ್ವ)[1] ಖ್ಯಾಪನಾರ್ಥಾ ॥

(ಭಾಷ್ಯಾರ್ಥ)

"ಹಾ೩ವು, ಹಾ೩ವು, ಹಾ೩ವು" ಎಂಬುದು ಆಹಾ! ಎಂಬರ್ಥದಲ್ಲಿ ಉಪಯೋಗಿಸಿರುವ (ಶಬ್ದವು. ಇದನ್ನು) ಅತ್ಯಂತ ಆಶ್ಚರ್ಯವನ್ನು ತೋರಿಸುವದಕ್ಕೆ (ಉಪಯೋಗಿಸಿದೆ). ಈ ಆಶ್ಚರ್ಯವೆಂಬುದಾದರೂ ಯಾವದು? ಎಂದರೆ ಹೇಳುತ್ತಾನೆ: ಅದ್ವೈತನಾದ, ಮತ್ತೊಂದರ ಅಂಟಿಲ್ಲದ, ಆತ್ಮನಾದರೂ ನಾನೇ ಅನ್ನವೂ ಅನ್ನಾದವೂ ಆಗಿರುವೆನಲ್ಲ![2] ಮತ್ತೇ ನಾನೇ ಶ್ಲೋಕಕರ್ತನು; ಶ್ಲೋಕವೆಂದರೆ ಅನ್ನಾನ್ನಾದಗಳ ಗುಂಪು. ಅದರ ಕರ್ತೃವಾದ ಚೇತನಾವಂತನೂ[3] ನಾನೇ!

---

1. 'ತ್ವ' ಎಂಬುದು ಇಲ್ಲದಿದ್ದರೂ ಸಾಕಾಗುತ್ತದೆ.

2. ಅನ್ನಾನ್ನಾದಗಳು ಅಧ್ಯಸ್ತವಾಗಿರುವದರಿಂದ ತಮಗೆ ಆಧಾರವಾಗಿರುವ ಸಚ್ಚಿದಾನಂದಸ್ವರೂಪನಾದ ಆತ್ಮನಿಗಿಂತ ಬೇರೆಯಿಲ್ಲ. ಅವೆರಡೂ ಅವನೇ.

3. ಇದು ಈ ಅನ್ನಾದನ ಅನ್ನವು—ಎಂದು ಅನ್ನಾನ್ನಾದಗಳ ಗುಂಪನ್ನು ಗೊತ್ತುಪಡಿಸಿರುವ ಚೇತನನಾದ ಈಶ್ವರನು ನಾನೇ.

ಅಥವಾ [1] ಮತ್ತೊಬ್ಬನಿಗಾಗಿರುವ, ಅನ್ನಾದನಿಗಾಗಿದ್ದುಕೊಂಡಿರುವ, ಅನ್ನವೇ ಅನೇಕಾತ್ಮಕವಾಗಿಯೂ ಮತ್ತೊಬ್ಬರಿಗಾಗಿರತಕ್ಕದ್ದಾಗಿಯೂ ಇರುವದೆಂಬ ಕಾರಣ ದಿಂದ (ಅದನ್ನು) ಒಟ್ಟುಗೂಡಿಸುವವನೂ [2] (ನಾನೇ) !

(ಭಾಷ್ಯ)

೨೫೮. ಅಹಮ್ ಅಸ್ಮಿ ಭವಾಮಿ ಪ್ರಥಮಜಾಃ ಪ್ರಥಮೋತ್ಪನ್ನಃ ಋತಸ್ಯ ಸತ್ಯಸ್ಯ ಮೂರ್ತಾಮೂರ್ತಸ್ಯ ಅಸ್ಯ ಜಗತಃ ದೇವೇಭ್ಯಶ್ಚ ಪೂರ್ವಮ್ । ಅಮೃತಸ್ಯ ನಾಭಿಃ ಅಮೃತಸ್ಯ ನಾಭಿಃ ಮಧ್ಯಮ್ । ಮತ್ಸಂಸ್ಥಮ್ ಅಮೃತತ್ವಂ ಪ್ರಾಣಿನಾಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ನಾನೇ (ಪ್ರಥಮಜಾಃ = ಪ್ರಥಮಜಃ) ಮೊದಲು ಹುಟ್ಟಿದ (ಹಿರಣ್ಯಗರ್ಭನು). ಋತಕ್ಕೆ ಎಂದರೆ ಸತ್ಯಕ್ಕೆ ಮೂರ್ತಾಮೂರ್ತರೂಪವಾದ (ಈ) ಜಗತ್ತಿಗೆ [3] (ಮೊದಲು ಹುಟ್ಟಿರುವವನು). [4] ಮತ್ತು ದೇವತೆಗಳಿಗಿಂತಲೂ ಮೊದಲು (ಹುಟ್ಟಿ ರುವ ಹಿರಣ್ಯಗರ್ಭನು) [5]. ಅಮೃತಕ್ಕೆ ನಾಭಿಯು ಎಂದರೆ ಮಧ್ಯವು ; ಪ್ರಾಣಿಗಳಿಗೆ ದೊರಕಬೇಕಾದ ಅಮೃತತ್ವವು ನನ್ನ ಅಧೀನವಾಗಿರುತ್ತದೆ ಎಂದರ್ಥ.

(ಭಾಷ್ಯ)

೨೫೯. ಯಃ ಕಶ್ಚಿತ್ ಮಾ ಮಾಮ್ ಅನ್ನಮ್ ಅನ್ನಾರ್ಥಿಭ್ಯಃ ದದಾತಿ ಪ್ರಯಚ್ಛತಿ ಅನ್ನಾತ್ಮನಾ ಬ್ರವೀತಿ (?) ಸಃ ಇತ್ ಇತ್ಥಮ್ ಏವಮ್ ಅವಿನಷ್ಟಂ [6] ಯಥಾಭೂತಮ್ ಆವಾಃ ಅವತಿ ಇತ್ಯರ್ಥಃ । ಯಃ ಪುನರನ್ಯಃ ಮಾಮ್ ಅದತ್ವಾ ಅರ್ಥಿಭ್ಯಃ ಕಾಲೇ ಪ್ರಾಪ್ತೇ ಅನ್ನಮತ್ತಿ ತಮನ್ನಮ್ ಅದನ್ತಂ ಭಕ್ಷಯನ್ತಂ ಪುರುಷಮ್ ಅಹಮ್ ಅನ್ನಮೇವ ಸಂಪ್ರತಿ ಅದ್ಮಿ ಭಕ್ಷಯಾಮಿ ॥

---

1 ಮೊದಲನೆಯ ವ್ಯಾಖ್ಯಾನದಲ್ಲಿ ಶ್ಲೋಕವೆಂದರೆ ಒಟ್ಟುಕೂಡಿಸುವದು; ಎರಡ ನೆಯ ವ್ಯಾಖ್ಯಾನದಲ್ಲಿ ಅನ್ನವೇ.

2 ಅನ್ನವನ್ನು ಆಯಾ ಅನ್ನಾದರಿಗೆ ತಕ್ಕಂತೆ ಏರ್ಪಡಿಸಿರುವವನೂ ನಾನೇ.

3 '' ಸತ್ಯ '' ಎಂಬ ಶಬ್ದಕ್ಕೆ ಈ ಅರ್ಥವನ್ನು ಬೃ. ೨-೩-೨, ೩ರಲ್ಲಿ ಕಾಣಬಹುದು.

4. ಕ. ಭಾ ಭಾ. ೧೧೭ರಲ್ಲಿ '' ಅದ್ಭ್ಯಃ ಪೂರ್ವಮ್ '' ಎಂಬದರ ವಿವರವನ್ನು ನೋಡಿ.

5. ಅವ್ಯಾಕೃತದಿಂದ ಮೊದಲು ಹುಟ್ಟುವ, ದೇವತೆಗಳ ಸಮಷ್ಟಿಯಾದ, ಹಿರಣ್ಯ ಗರ್ಭನೂ ನಾನೇ.

6. '' ಅವಿಶಿಷ್ಟಮ್ '' ಎಂಬ ಆ॥ ಪಾಠಕ್ಕಿಂತ ಈ ವಾ॥ ಪಾಠವು ಮೇಲು.

(ಭಾಷ್ಯಾರ್ಥ)

ಯಾವನೇ ಆಗಲಿ ಅನ್ನಾದ ನನ್ನನ್ನು ಅನ್ನವು ಬೇಕೆನ್ನುವವರಿಗೆ ಕೊಡುತ್ತಾನೋ ದಾನಮಾಡುತ್ತಾನೋ (ನಾನು) ಅನ್ನವೆಂದು ಹೇಳುತ್ತಾನೋ[1] ಅವನು (ಇತ್ ಇತ್ಥಮ್) ಹೀಗೆ ನಾಶವಾಗದೆ ಇದ್ದದ್ದು ಇದ್ದಂತೆ (ಆವಾಃ = ಅವತಿ) ಕಾಪಾಡಿಕೊಳ್ಳುತ್ತಾನೆ[2] ಎಂದರ್ಥ. ಇನ್ನು ಯಾವನು (ಇವನಿಗಿಂತ) ಬೇರೆಯಾಗಿರುವವನು, ನನ್ನನ್ನು ಕೇಳುವವರಿಗೆ ಸಮಯವು ಒದಗಿರುವಾಗ[3] ಕೊಡದೆ ಅನ್ನವನ್ನು ಉಣ್ಣುವನೋ ಆ ಅನ್ನವನ್ನು ಉಣ್ಣುವ ಭಕ್ಷಿಸುವ ಮನುಷ್ಯನನ್ನು ಅನ್ನಾದ ನಾನೇ ಈಗ ತಿನ್ನುತ್ತಿರುವೆನು, ಭಕ್ಷಿಸುತ್ತಿರುವೆನು.[4]

## ಅನ್ನಾನ್ನಾದಿಗಳು ನಿಜವಾಗಿ ಬ್ರಹ್ಮವೇ

(ಭಾಷ್ಯ)

೨೬೦. ಅತ್ರಾಹ–ಏವಂ ತರ್ಹಿ ಬಿಭೇಮಿ ಸರ್ವಾತ್ಮತ್ವಪ್ರಾಪ್ತೇರ್ಮೋಕ್ಷಾತ್ । ಅಸ್ತು ಸಂಸಾರ ಏವ । ಯತೋ ಮುಕ್ತೋಽಪಿ ಅಹಮ್ ಅನ್ನಭೂತಃ ಆದ್ಯಃ[6] ಸ್ಯಾಮ್ ಅನ್ಯಸ್ಯ[5] । ಏವಂ ಮಾ ಭೈಷೀಃ । ಸಂವ್ಯವಹಾರವಿಷಯತ್ವಾತ್ ಸರ್ವಕಾಮಾಶನಸ್ಯ । ಅತೀತ್ಯಾಯಂ ಸಂವ್ಯವಹಾರವಿಷಯಮ್ ಅನ್ನಾನ್ನಾದಿಲಕ್ಷಣಮ್ ಅವಿದ್ಯಾಕೃತಂ ವಿದ್ಯಯಾ ಬ್ರಹ್ಮತ್ವಮ್ ಆಪನ್ನೋ ವಿದ್ವಾನ್ । ತಸ್ಯ ನೈವ ದ್ವಿತೀಯಂ ವಸ್ತ್ವಂತರಮಸ್ತಿ ಯತೋ ಬಿಭೇತಿ । ಅತಃ ನ ಭೇತವ್ಯಂ ಮೋಕ್ಷಾತ್ । ಏವಂ ತರ್ಹಿ ಕಿಮಿದಮಾಹ "ಅಹಮನ್ನಮ್" "ಅಹಮನ್ನಾದಃ" ಇತಿ? ಉಚ್ಯತೇ । ಯೋಽಯಮ್ ಅನ್ನಾನ್ನಾದಿಲಕ್ಷಣಃ ಸಂವ್ಯವಹಾರಃ ಕಾರ್ಯಭೂತಃ ಸ ಸಂವ್ಯವಹಾರಮಾತ್ರಮೇವ ನ ಪರಮಾರ್ಥವಸ್ತು । ಸ ಏವಂಭೂತೋಽಪಿ ಬ್ರಹ್ಮ

---

1. ಬ್ರಹ್ಮವು ಅನ್ನರೂಪದಿಂದ ತೋರುತ್ತಿರುವದೆಂದು ತಿಳಿಸುತ್ತಾನೋ ಎಂದರ್ಥ. ಅನ್ನರೂಪನಾದ ನನ್ನನ್ನು ಉಂಟೆಂದು ಹೇಳುತ್ತಾನೋ ಎಂದೂ ಅರ್ಥವನ್ನು ಮಾಡಬಹುದು ಈ ವಾಕ್ಯಭಾಗವು ಮೂಲಭಾಷ್ಯದಲ್ಲಿತ್ತೋ ಇಲ್ಲವೋ ಹೇಳುವದು ಕಷ್ಟ. ಮುದ್ರಿತ ಪುಸ್ತಕಗಳಲ್ಲೆಲ್ಲ ಇದೆ.

2. ಅವನಿಗೆ ಎಂದೆಂದಿಗೂ ಅನ್ನವು ದೊರಕುತ್ತದೆ.

3. ದೇಶಕಾಲಪಾತ್ರಗಳನ್ನರಿತು ಎಂದರ್ಥ.

4. ಅನ್ನದಾನವನ್ನು ಮಾಡದವನನ್ನು ಅನ್ನವೇ ಈಗ ತಿನ್ನುತ್ತಿರುವದು, ಎಂದರೆ ಅವನು ಪಾಪದ ಫಲವನ್ನೇ ಉಣ್ಣುತ್ತಿರುವನು ಎಂದರ್ಥ. ಗೀ. ೩-೧೩.

5. "ಆದ್ಯಃ" ಪಾ॥ ಪಾಠ.

6. "ಅನ್ನಸ್ಯ" ಎಂದು ಅ॥ ಪಾಠ.

ನಿಮಿತ್ತೋ ಬ್ರಹ್ಮವ್ಯತಿರೇಕೇಣ ಅಸನ್ ಇತಿ ಕೃತ್ವಾ ಬ್ರಹ್ಮವಿದ್ಯಾಕಾರ್ಯಸ್ಯ ಬ್ರಹ್ಮಭಾವಸ್ಯ ಸ್ತುತ್ಯರ್ಥಮ್ ಉಚ್ಯತೇ—"ಅಹಮನ್ನಮಹಮನ್ನಮಹಮನ್ನಮ್ । ಅಹಮನ್ನಾದೋಽಹಮನ್ನಾದೋಽಹಮನ್ನಾದಃ" ಇತ್ಯಾದಿ । ಅತಃ ಭಯಾದಿದೋಷಗನ್ಧೋಽಪಿ ಅವಿದ್ಯಾನಿಮಿತ್ತಃ ಅವಿದ್ಯೋಚ್ಛೇದಾದ್ ಬ್ರಹ್ಮಭೂತಸ್ಯ ನಾಸ್ತಿ ಇತಿ ॥

(ಭಾಷ್ಯಾರ್ಥ)

(ಆಕ್ಷೇಪ):— ಹೀಗಾದರೆ ಎಲ್ಲವೂ ನಾನೇ ಆಗುವದೆಂಬ (ಈ) ಮೋಕ್ಷಕ್ಕೆ ಹೆದರುತ್ತೇನೆ. ಸಂಸಾರವೇ ಇದ್ದುಕೊಂಡಿರಲಿ! ಏಕೆಂದರೆ ಮುಕ್ತನಾದರೂ ನಾನು ಅನ್ನವಾಗಿ ಮತ್ತೊಬ್ಬನಿಗೆ[1] ತಿನ್ನತಕ್ಕ (ಪದಾರ್ಥ)ವಾದೇನು!

(ಪರಿಹಾರ):— ಹೀಗೆ ಹೆದರದಿರು. ಏಕೆಂದರೆ ಕಾಮಗಳು, ಉಣ್ಣುವದು— ಎಂಬುದೆಲ್ಲ[2] ಸಂವ್ಯವಹಾರಕ್ಕೆ[3] ಸೇರಿದ್ದಾಗಿದೆ. ಅನ್ನ, ಅನ್ನಾದ—ಮುಂತಾದ ರೂಪದ ಅವಿದ್ಯೆಯಿಂದಾಗಿರುವ ಸಂವ್ಯವಹಾರಕ್ಕೆ ಸೇರಿರುವದನ್ನು ಮೀರಿ ಜ್ಞಾನಿಯು ವಿದ್ಯೆಯಿಂದ ಬ್ರಹ್ಮತ್ವವನ್ನು ಪಡೆದುಕೊಂಡಿರುತ್ತಾನೆ. ಅವನಿಗೆ ಎರಡನೆಯದಾದ ಮತ್ತೊಂದು ವಸ್ತುವೇ ಇರುವದಿಲ್ಲ; ಹಾಗಿರುವದಾಗಿದ್ದರೆ ಅದಕ್ಕೆ ಹೆದರಬೇಕಾಗಿತ್ತು. ಹೀಗಿರುವದರಿಂದ ಮೋಕ್ಷಕ್ಕೆ ಹೆದರಬೇಕಾದದ್ದಿಲ್ಲ.

(ಆಕ್ಷೇಪ):— ಹಾಗಾದರೆ "ನಾನು ಅನ್ನವು", "ನಾನು ಅನ್ನಾದನು" ಎಂದು (ಶ್ರುತಿಯು) ಹೇಳಿದೆಯಲ್ಲ, ಇದೇನು?

(ಪರಿಹಾರ):— ಹೇಳುತ್ತೇವೆ (ಕೇಳಿರಿ). ಅನ್ನ, ಅನ್ನಾದ—ಎಂಬ ಕಾರ್ಯವಾದ ಈ ಸಂವ್ಯವಹಾರವಿದೆಯಲ್ಲ ಇದು ಬರಿಯ ಸಂವ್ಯವಹಾರವೇ[4] ಹೊರತು ಪರಮಾರ್ಥವಾದ ವಸ್ತುವಲ್ಲ. ಈ (ಅನ್ನಾನ್ನಾದತ್ವವು) ಇಂಥದ್ದಾಗಿರುವದಾದರೂ[4] ಬ್ರಹ್ಮವೆಂಬ

---

1. "ಅನ್ನಸ್ಯ" ಎಂಬ ವಾ॥ ಪಾಠಕ್ಕೆ ಅರ್ಥವಿದು. ನಾನು ಅನ್ನವಾದರೆ ನನ್ನನ್ನು ಅನ್ನಾದನಾದ ಮತ್ತೊಬ್ಬನು ತಿನ್ನುವನೆಂದಾಯಿತಲ್ಲ! ಎಂದು ಆಕ್ಷೇಪ "ಅನ್ನಸ್ಯ" ಎಂಬ ಆ॥ ಪಾಠದಲ್ಲಿ ನಾನು ಮತ್ತೊಬ್ಬನಿಗೆ ಕೊಡದೆ ಇದ್ದರೆ ಅನ್ನವೇ ನನ್ನನ್ನು ತಿನ್ನುತ್ತದೆಯೆಂದಾಯಿತಲ್ಲ! ಎಂದು ಭಾವ.

2. ಕಾಮಗಳು ಅನ್ನವು, ಅವುಗಳನ್ನು ಉಣ್ಣುವದು ಅನ್ನಾದತ್ವವು; ಅನ್ನ, ಅನ್ನಾದತ್ವ ಎಂಬುದು ಬರಿಯ ವ್ಯವಹಾರಮಾತ್ರವಾಗಿದೆ.

3. ಅಜ್ಞರ ವ್ಯವಹಾರ, ತಿಳಿದವರು ತಿಳಿದುಮಾಡುವ ವ್ಯವಹಾರ—ಇವೆರಡನ್ನೂ ಸಂವ್ಯವಹಾರ ಎಂಬ ಮಾತಿನಿಂದ ಕರೆದಿರುವದು ಭಾಷ್ಯದಲ್ಲಿ ಕೆಲವು ಕಡೆಗಳಲ್ಲಿ ಕಂಡುಬರುತ್ತದೆ. ಬೃ.ಭಾ. ೪-೫-೧೨ರಲ್ಲಿ ನಾಮರೂಪಗಳ ವಿಚಾರದ ಭಾಷ್ಯವನ್ನು ನೋಡಿ.

4. ಬರಿಯ ವ್ಯವಹಾರಮಾತ್ರಕ್ಕೆ ಸೇರಿದ್ದಾದರೂ.

ಕಾರಣದಿಂದಲೇ ಆಗಿರುತ್ತದೆ.[1] ಆದ್ದರಿಂದ) ಬ್ರಹ್ಮಕ್ಕಿಂತ ಬೇರೆಯಾಗಿ ಇರುವದಿಲ್ಲ ಎಂದಿಟ್ಟುಕೊಂಡು ಬ್ರಹ್ಮವಿದ್ಯೆಯ ಫಲವಾದ ಬ್ರಹ್ಮತ್ವವನ್ನು ಹೊಗಳುವದಕ್ಕಾಗಿ[2] "ನಾನು ಅನ್ನವು, ನಾನು ಅನ್ನವು, ನಾನು ಅನ್ನವು; ನಾನು ಅನ್ನಾದನು, ನಾನು ಅನ್ನಾದನು, ನಾನು ಅನ್ನಾದನು" ಎಂದು ಮುಂತಾಗಿ ಹೇಳಿರುತ್ತದೆ. ಆದ್ದರಿಂದ ಅವಿದ್ಯೆಯ ನಿಮಿತ್ತದಿಂದಾಗುವ ಹೆದರಿಕೆಯೇ ಮುಂತಾದ[3] ದೋಷಗಳ ಗಂಧವೂ ಅವಿದ್ಯೆಯನ್ನು ನಾಶಪಡಿಸಿಕೊಂಡು ಬ್ರಹ್ಮವಾದವನಿಗೆ ಇರುವದಿಲ್ಲ ಎಂದು (ನಿಶ್ಚಯಿಸಬೇಕು).

(ಭಾಷ್ಯ)

೨೬೧. **ಅಹಂ** ವಿಶ್ವಂ ಸಮಸ್ತಂ ಭುವನಂ ಭೂತೈಃ ಸಂಭಜನೀಯಂ ಬ್ರಹ್ಮಾದಿಭಿಃ । **ಭವನ್ತಿ** ವಾ[4] **ಅಸ್ಮಿನ್ ಭೂತಾನಿ ಇತಿ ಭುವನಮ್** । ಅಭ್ಯಭವಾಮ್ ಅಭಿಭವಾಮಿ ಪರೇಣ **ಈಶ್ವರೇಣ** ರೂಪೇಣ । ಸುವರ್ನಜ್ಯೋತೀಃ । ಸುವಃ ಆದಿತ್ಯಃ । ನಕಾರ ಉಪಮಾರ್ಥೇ । ಆದಿತ್ಯ ಇವ ಸಕೃದ್ವಿಭಾತಮ್ ಅಸ್ಮದೀಯಂ ಜ್ಯೋತಿಃ ಜ್ಯೋತಿಃ ಪ್ರಕಾಶಃ ಇತ್ಯರ್ಥಃ ।

(ಭಾಷ್ಯಾರ್ಥ)

ನಾನು ಇಡಿಯ ಸಮಸ್ತವಾದ ಭುವನವನ್ನು–ಬ್ರಹ್ಮನೇ ಮುಂತಾದ ಭೂತಗಳು (ಇದನ್ನು) ಪ್ರೀತಿಸುತ್ತವೆಯಾದ್ದರಿಂದ,[5] ಅಥವಾ ಇದರಲ್ಲಿ ಭೂತಗಳು ಇರುತ್ತವೆಯಾದ್ದರಿಂದ,[6] (ಇದಕ್ಕೆ) **ಭುವನ**ವೆಂದು ಹೆಸರು. (ಆ ಭುವನವನ್ನು) ಉತ್ತಮವಾದ ಈಶ್ವರರೂಪದಿಂದ (ಅಭ್ಯಭವಾಮ್ – ಅಭಿಭವಾಮಿ) ಹೋಗಲಾಡಿಸುತ್ತೇನೆ.[7] ಸುವಃ ಎಂದರೆ ಆದಿತ್ಯನು; (ಇಲ್ಲಿರುವ) ನಕಾರವು ಉಪಮಾರ್ಥದಲ್ಲಿ[8] ಪ್ರಯುಕ್ತವಾಗಿರು

---

1 ತೋರಿಕೆಯ ಹಾವು ಹಗ್ಗದ ಆಧಾರದಿಂದಲೇ ತೋರುವಂತೆ ಬ್ರಹ್ಮವೆಂಬ ಆಧಾರದಲ್ಲಿಯೇ ತೋರತಕ್ಕದ್ದಾಗಿದೆ.

2 ಬ್ರಹ್ಮಜ್ಞಾನಿಯು ಅನ್ನಾನ್ನಾದಾದಿಯಾಗಿ ಸರ್ವವೂ ಆಗಿರುತ್ತಾನೆ ಎಂದು ಹೊಗಳುವದಕ್ಕಾಗಿ.

3. ಹೆದರಿಕೆ, ದುಃಖಪ್ರಾಪ್ತಿ, ಸ್ವರೂಪನಾಶ ಮುಂತಾದ.

4. 'ಭವನ್ತೀತಿ ವಾ' ಎಂಬ ಪಾಠದಲ್ಲಿ ಇತಿ ಹೆಚ್ಚು.

5. ಭೂ (ಭೂತಗಳಿಂದ) ವನ (ವನನೀಯ, ಬೇಡಲ್ಪಡತಕ್ಕದ್ದು) ಎಂದು ಅರ್ಥವನ್ನು ಕಲ್ಪಿಸಿದೆ. ಕ.ಭಾ. ೨-೨-೩ರಲ್ಲಿ ವಾಮನ ಎಂಬ ಶಬ್ದದ ಅರ್ಥವನ್ನು ನೋಡಿ.

6. ಗೀ. ಭಾ. ೮-೧೬.

7. ಅವಿದ್ಯೆಯಿಂದಾಗಿರುವದೆಲ್ಲವನ್ನೂ ಈ ಸ್ವರೂಪದ ಜ್ಞಾನದಿಂದ ನಾಶಗೊಳಿಸುತ್ತೇನೆ ಎಂದರ್ಥ. ಈ. ಭಾ. ೧ ನೋಡಿ.

8. ವೇದದಲ್ಲಿ ನಕಾರಕ್ಕೆ ಈ ಅರ್ಥವೂ ಇದೆ; ಆದರೆ ಇದು ಮಾತಿನ ಮುಂದೆ ಇದ್ದರೆ ಮಾತ್ರ ಹೀಗೆ ಅರ್ಥವಾಗುವದು.

ತ್ತದೆ. ನನ್ನ (ಜ್ಯೋತೀಃ = ಜ್ಯೋತಿಃ) ಬೆಳಕು ಸೂರ್ಯನ ಬೆಳಕಿನಂತೆ ಎಂದೆಂದಿಗೂ ಬೆಳಗುತ್ತಲೇ (ಇರುತ್ತದೆ)[1] ಎಂದರ್ಥ.

**ಯ ಏವಂ ವೇದ । ಇತ್ಯುಪನಿಷತ್ ॥ ೬ ॥**

೬. ಯಾವನು ಹೀಗೆಂದು ತಿಳಿಯುವನೋ (ಅವನಿಗೆ ಈ ಫಲವು) ಇಂತು ಉಪನಿಷತ್ತು.

(ಭಾಷ್ಯ)

೨೬೨. ಇತಿ ವಲ್ಲೀದ್ವಯವಿಹಿತಾ ಉಪನಿಷತ್ ಪರಮಾತ್ಮಜ್ಞಾನಮ್ । ತಾಮ್ ಏತಾಂ ಯಥೋಕ್ತಾಂ ಶಾನ್ತೋ ದಾನ್ತ ಉಪರತಃ ತಿತಿಕ್ಷುಃ ಸಮಾಹಿತೋ ಭೂತ್ವಾ ಭೃಗುವತ್ ತಪೋ ಮಹದಾಸ್ಥಾಯ ಯ ಏವಂ ವೇದ ತಸ್ಯ ಇದಂ ಫಲಂ ಯಥೋಕ್ತಮ್[2] ಓಮಿತಿ ॥

**ಇತಿ ತೈತ್ತಿರೀಯೋಪನಿಷದ್ಭಾಷ್ಯಂ ಸಂಪೂರ್ಣಮ್**

(ಭಾಷ್ಯಾರ್ಥ)

ಇಂತಿದು (ಈ) ಎರಡುವಲ್ಲಿಗಳಲ್ಲಿ ಹೇಳಿರುವ[3] ಉಪನಿಷತ್ತು, ಪರಮಾತ್ಮಜ್ಞಾನವು. ಆ ಈ (ವಲ್ಲಿಗಳಲ್ಲಿ) ಹೇಳಿರುವಂಥ (ಉಪನಿಷತ್ತನ್ನು) ಶಾಂತನಾಗಿ ದಾಂತನಾಗಿ ಉಪರತನಾಗಿ ತಿತಿಕ್ಷುವಾಗಿ ಸಮಾಹಿತನಾಗಿ[4] ಭೃಗುವಿನಂತೆ ಹೆಚ್ಚಿನ ತಪಸ್ಸನ್ನು ಮಾಡಿ ಯಾವನು ಹೀಗೆಂದು ಅರಿತುಕೊಳ್ಳುವನೋ ಅವನಿಗೆ ಈ ಹೇಳಿದ ಫಲವು[5] (ಆಗುತ್ತದೆ) ಓಮ್ ![6]

ಓಂ ತತ್ ಸತ್

---

1 ನಿತ್ಯಪ್ರಕಾಶಸ್ವರೂಪನು, ನನ್ನ ಪ್ರಕಾಶವು ಹುಟ್ಟಿ ನಾಶವಾಗುವದಲ್ಲ ಎಂದರ್ಥ.

2. "ಯಥೋಕ್ತಮೋಕ್ಷಃ" ಎಂದು ಪಾ॥ ಪಾಠ.

3. ಆನಂದವಲ್ಲಿ, ಭೃಗುವಲ್ಲಿ ಎರಡೂ ಪರಬ್ರಹ್ಮವಿದ್ಯೆಯನ್ನೇ ತಿಳಿಸುವವು; ಭೃಗುವಲ್ಲಿಯಲ್ಲಿ ಹೇಳಿರುವ ಉಪಾಸನೆಗಳು ಮಹಾಪ್ರಕರಣಕ್ಕೆ ಸೇರಿದವುಗಳಲ್ಲ.

4. ಶಮ-ಅಂತಃಕರಣನಿಗ್ರಹ, ದಮ-ಇಂದ್ರಿಯನಿಗ್ರಹ, ಉಪರತಿ-ಕರ್ಮತ್ಯಾಗ, ತಿತಿಕ್ಷೆ,-ದ್ವಂದ್ವಸಹಿಷ್ಣುತೆ, ಸಮಾಧಾನ-ಕರಣಗಳನ್ನು ಏಕಾಗ್ರತೆಗೊಳಿಸಿಕೊಳ್ಳುವಿಕೆ, ಈ ಐದು ಸಾಧನಗಳೂ ಆತ್ಮದರ್ಶನಕ್ಕೆ ಬೇಕೆಂದು ಬೃ. ೪-೪-೨೩ ರಲ್ಲಿ ಹೇಳಿದೆ. ಶ್ರದ್ಧೆ ಎಂಬ ಸಾಧನವೊಂದನ್ನು ಹೆಚ್ಚಾಗಿ ಆ ಉಪನಿಷತ್ತಿನ ಮಾಧ್ಯಂದಿನಪಾಠದಲ್ಲಿ ಹೇಳಿದೆ.

5. ಸರ್ವಾತ್ಮಭಾವವು.

6. ಹತ್ತನೆಯ ಅನುವಾಕವಾದ ಬಳಿಕ "ಶಂ ನೋ ಮಿತ್ರಃ"ದ ಬದಲು "ಸಹನಾವವತು" ಎಂಬ ಶಾಂತಿಯನ್ನು ಪಠಿಸುವದು ವೈದಿಕರ ಪದ್ಧತಿ. ಭಾಷ್ಯಕಾರರು ಹತ್ತನೆಯ ಅನುವಾಕದ ಕೊನೆಯಲ್ಲೇ ಉಪನಿಷತ್ಸಮಾಪ್ತಿಯನ್ನು "ಓಮಿತಿ" ಎಂಬ ಮಾತುಗಳಿಂದ ಸೂಚಿಸಿದ್ದಾರೆ.

# ಉಪನಿಷತ್ತಿನ ಸಾರ

---

## ಶೀಕ್ಷಾವಲ್ಲಿ

(ಅನು ೧) ಬ್ರಹ್ಮವಿದ್ಯೆಯನ್ನು ಸಂಪಾದಿಸಿಕೊಳ್ಳಬೇಕೆನ್ನುವಾತನು ಮಿತ್ರಾದಿದೇವತೆಗಳನ್ನು ತನ್ನ ಕರಣಗಳಿಗೆ ಬಲವನ್ನು ಕೊಟ್ಟು ಸುಖವನ್ನುಂಟುಮಾಡುವಂತೆ ನಿತ್ಯವೂ ಪ್ರಾರ್ಥಿಸುತ್ತಿರಬೇಕು. ಇದರಂತೆ ಅಪರಬ್ರಹ್ಮವಾದ ವಾಯುವನ್ನು (ಅಥವಾ ಹಿರಣ್ಯಗರ್ಭನನ್ನು) ಶ್ರದ್ಧಾಭಕ್ತಿಗಳಿಂದ ನಮಸ್ಕರಿಸುತ್ತಾ ಬ್ರಹ್ಮಭಾವನೆಯಿಂದ ಸ್ತುತಿಸುತ್ತಿರಬೇಕು. ಇದರಿಂದ ಗುರುಗಳಿಗೆ ವಿದ್ಯೆಯನ್ನು ಹೇಳಿಕೊಡುವ ಸಾಮರ್ಥ್ಯವೂ ತನಗೆ ವಿದ್ಯೆಯ ಪ್ರಾಪ್ತಿಯೂ ಆಗುವದು, ಆಧ್ಯಾತ್ಮಾದಿತಾಪತ್ರಯಗಳೂ ತೊಲಗುವವು.

(೨) ಉಪನಿಷತ್ತಿಗೆ ಅರ್ಥವೇ ಮುಖ್ಯವಾದರೂ ಸ್ವರವರ್ಣಾದಿಗಳನ್ನು ಸರಿಯಾಗಿ ಉಚ್ಚರಿಸಿ ಅಧ್ಯಯನಮಾಡುವದನ್ನು ಮರೆಯಬಾರದು.

(೩) ವೇದದಲ್ಲಿ ಆಗುವ ಸಂಹಿತೆ (ಸಂಧಿ) ಗಳನ್ನು ಕುರಿತು ಐದು ಬಗೆಯಲ್ಲಿ ಉಪಾಸನೆಮಾಡಬೇಕು. [ಅ] ಹಿಂದಿನ ವರ್ಣವು ಪೃಥ್ವಿ; ಮುಂದಿನದು ಸ್ವರ್ಗ; ಸಂಧಿಯು ಎಂದರೆ ಈ ವರ್ಣಗಳ ನಡುವೆ ಆಕಾಶವು ಎಂದು ಲೋಕದೃಷ್ಟಿಯಿಂದಲೂ [ಆ] ಇದರಂತೆ ಈ ಅವಯವಗಳನ್ನು ಅಗ್ನಿ, ಆದಿತ್ಯ, ಅಪ್ಪು, ಮಿಂಚು ಎಂದು ಜ್ಯೋತಿಯ ದೃಷ್ಟಿಯಿಂದಲೂ [ಇ] ಆಚಾರ್ಯ, ಶಿಷ್ಯ, ವಿದ್ಯೆ, ಹೇಳಿಕೊಡುವ ಕರ್ಮ ಎಂದು ವಿದ್ಯೆಯ ದೃಷ್ಟಿಯಿಂದಲೂ [ಈ] ತಾಯಿ, ತಂದೆ, ಪ್ರಜೆ, ಪ್ರಜೋತ್ಪತ್ತಿಯೆಂದು ಪ್ರಜಾದೃಷ್ಟಿಯಿಂದಲೂ [ಉ] ಕೆಳದವಡೆ, ಮೇಲುದವಡೆ, ಮಾತು, ನಾಲಿಗೆ-ಎಂದು ಅಧ್ಯಾತ್ಮದೃಷ್ಟಿಯಿಂದಲೂ ಉಪಾಸನೆಮಾಡಬೇಕು. ಹೀಗೆ ಐದು ಬಗೆಯಿಂದ ಮಾಡುವ ಉಪಾಸನೆಯಿಂದ ಗುರುವಿಗೂ ಶಿಷ್ಯನಿಗೂ ಕೀರ್ತಿಯೂ ಬ್ರಹ್ಮವರ್ಚಸ್ಸೂ ಉಂಟಾಗುತ್ತದೆ.

(೪) ಮುಮುಕ್ಷುವಾದವನು ವೇದಸಾರವಾದ ಓಂಕಾರವನ್ನು ಹೊಗಳುವ "ಯಶ್ಛಂದಸಾಮ್" ಎಂಬ ಮಂತ್ರವನ್ನು ಜಪಿಸುತ್ತಿರಬೇಕು. ಇದರಿಂದ ಧಾರಣಶಕ್ತಿಯುಂಟಾಗುತ್ತದೆ. ಶರೀರೇಂದ್ರಿಯಗಳು ಜ್ಞಾನಸಂಪಾದನೆಗೆ ತಕ್ಕವಾಗುತ್ತವೆ, ಜ್ಞಾನವು ದಕ್ಕುತ್ತದೆ. ಇದರಂತೆ ಶ್ರೀಕಾಮನಾದವನು "ಆವಹನ್ತೀ" ಮುಂತಾದ ಮಂತ್ರದಿಂದ ಹೋಮವನ್ನು ಮಾಡಬೇಕು. ಶಿಷ್ಯರು ತನಗೆ ಆಗಬೇಕೆನ್ನುವವನು "ಆ ಮಾ ಯನ್ತು" ಮುಂತಾದ ಮಂತ್ರಗಳಿಂದ ಹೋಮವನ್ನು ಮಾಡಬೇಕು. ಇಲ್ಲಿ ಹೇಳಿರುವ ಶ್ರೀಕಾಮಾದಿಗಳು ಕರ್ಮದ್ವಾರದಿಂದ ಚಿತ್ತಶುದ್ಧಿಯಾಗಿ ಜ್ಞಾನವು ಪ್ರಾಪ್ತವಾಗಲೆಂಬ ಉದ್ದೇಶದಿಂದ ಉಕ್ತವಾಗಿವೆ.

(೫) ಬ್ರಹ್ಮವನ್ನು 'ಮಹಃ' ಎಂಬ ವ್ಯಾಹೃತಿರೂಪವಾದದ್ದೆಂದೂ ಭೂಃ ಭುವಃ ಸುವಃ ಎಂಬ ಅಂಗಗಳುಳ್ಳದ್ದೆಂದೂ ಉಪಾಸನೆಮಾಡಬೇಕು. ಭೂರಾದಿಲೋಕ

ಗಳನ್ನು ವ್ಯಾಪಿಸಿಕೊಂಡಿರುವ ಆದಿತ್ಯ, ಅಗ್ನಿವಾಯ್ವಾದಿತ್ಯರನ್ನು ವ್ಯಾಪಿಸಿರುವ ಚಂದ್ರ, ಋಕ್ಸಾಮಯಜುಸ್ಸುಗಳನ್ನು ವ್ಯಾಪಿಸಿರುವ ಓಂಕಾರ, ಪ್ರಾಣಾಪಾನವ್ಯಾನಗಳನ್ನು ಪೋಷಿಸುವ ಮೂಲಕ ವ್ಯಾಪಿಸಿರುವ ಅನ್ನ—ಇವೆಲ್ಲವೂ 'ಮಹಃ' ಎಂಬ ವ್ಯಾಹೃತಿಯೇ. ಈ ವ್ಯಾಹೃತಿಯನ್ನು ಮಾಹಾಚಮಸ್ಯನೆಂಬ ಋಷಿಯು ಕಂಡು ಹಿಡಿದಿರುತ್ತಾನೆ. ಅದು ಬ್ರಹ್ಮವೇ, ಮಿಕ್ಕ ವ್ಯಾಹೃತಿಗಳ ಆತ್ಮನೇ. ಈ ಬ್ರಹ್ಮವು ಹೃದಯಾಕಾಶದಲ್ಲಿ ಮನೋಮಯವಾಗಿ ಅಮೃತವಾಗಿ ಹಿರಣ್ಮಯವಾಗಿ ನೆಲಸಿರುತ್ತದೆ; ಆಕಾಶಶರೀರವುಳ್ಳದ್ದು, ಸತ್ಯರೂಪವಾದದ್ದು, ಪ್ರಾಣಾರಾಮವಾದದ್ದು, ಆನಂದಕಾರಿಯಾಗಿರುವ ಮನಸ್ಸುಳ್ಳದ್ದು, ಶಾಂತಿಯಿಂದ ಚೆನ್ನಾಗಿ ಅನುಭವಕ್ಕೆ ಬರತಕ್ಕದ್ದು-ಹೀಗೆಂದು ಉಪಾಸನೆಮಾಡಬೇಕು. ಉಪಾಸಕನು ಹೃದಯದಿಂದ ಮೇಲಕ್ಕೆ ಹೋಗಿ ಮೂರ್ಧಪ್ರದೇಶವನ್ನು ಒಡೆದುಕೊಂಡು ಹೋಗಿರುವ ಸುಷುಮ್ನಾನಾಡಿಯ ಮೂಲಕವಾಗಿ ಹೊರಟು ಭೂಃ ಎಂಬ ವ್ಯಾಹೃತಿಯ ಅರ್ಥವಾದ ಅಗ್ನಿಯ ರೂಪವನ್ನೂ ಭುವಃ ಎಂಬುದರರ್ಥವಾದ ವಾಯುವಿನ ರೂಪವನ್ನೂ ಸುವಃ ಎಂಬುದರ ಅರ್ಥವಾದ ಆದಿತ್ಯನ ರೂಪವನ್ನೂ ಕ್ರಮಕ್ರಮವಾಗಿ ಪಡೆದುಕೊಂಡು ಕೊನೆಗೆ 'ಮಹಃ' ಎಂಬ ವ್ಯಾಹೃತಿಯ ಅರ್ಥವಾದ ಇಂದ್ರಿಯಗಳ ಮತ್ತು ಅಂತಃಕರಣಗಳ ಒಟ್ಟಿನ ಒಡೆಯನಾಗಿರುವ ಮೇಲೆ ಹೇಳಿರುವ ಬ್ರಹ್ಮದ ರೂಪದಲ್ಲಿ ನೆಲೆನಿಲ್ಲುತ್ತಾನೆ.

(೬) ಇದೇ ಬ್ರಹ್ಮವನ್ನು ಲೋಕಪಾಙ್ಕ್ತ, ದೇವತಾಪಾಙ್ಕ್ತ, ಭೂತಪಾಙ್ಕ್ತ, ವಾಯುಪಾಙ್ಕ್ತ, ಇಂದ್ರಿಯಪಾಙ್ಕ್ತ, ಧಾತುಪಾಙ್ಕ್ತ-ಎಂಬ ಪಾಙ್ಕ್ತಗಳ ರೂಪದಿಂದ ಉಪಾಸನೆಮಾಡಬಹುದು. ಪಾಙ್ಕ್ತವೆಂದರೆ ಐದೈದಾಗಿ ವಿಂಗಡಿಸಿಕೊಂಡಿರುವದು. ಆಧ್ಯಾತ್ಮಿಕವಾದ ಪಾಙ್ಕ್ತವನ್ನು ಹೊರಗಿನ ಪಾಙ್ಕ್ತಗಳೊಡನೆ ಒಂದುಗೂಡಿಸಿ ಇಡಿಯ ಜಗತ್ತೇ ಪಾಙ್ಕ್ತರೂಪವಾಗಿರುತ್ತದೆಯೆಂದು ಮಾಡಿಕೊಂಡು ಪಾಙ್ಕ್ತವೆಂಬ ಉಪಾಧಿಯ ಮೂಲಕವಾಗಿ ಬ್ರಹ್ಮವನ್ನು ಉಪಾಸನೆಮಾಡುವಾತನಿಗೆ ಪಾಙ್ಕ್ತರೂಪನಾದ ಪ್ರಜಾಪತಿಯ ರೂಪವೇ ಪ್ರಾಪ್ತವಾಗುತ್ತದೆ.

(೭) ಓಂಕಾರವೆಂಬುದು ಪರಬ್ರಹ್ಮದ ಉಪಾಸನೆಗೂ ಅಪರಬ್ರಹ್ಮದ ಉಪಾಸನೆಗೂ ಅಂಗವಾಗಿರುತ್ತದೆ. ಓಂಕಾರವನ್ನು ಪ್ರತೀಕವಾಗಿ ಮಾಡಿಕೊಂಡು ಈ ಎರಡು ಬಗೆಯ ಬ್ರಹ್ಮವನ್ನೂ ಉಪಾಸನೆಮಾಡಿ ಪಡೆದುಕೊಳ್ಳಬಹುದು. ಓಂಕಾರವು ಸರ್ವವೂ ಆಗಿರುತ್ತದೆ. ಓಂಕಾರದ ಪೂರ್ವಕವಾಗಿ ಮಾಡುವ ಕರ್ಮಗಳೆಲ್ಲವೂ ಸಫಲವಾಗುತ್ತವೆ. ಆದ್ದರಿಂದ ಓಂಕಾರವನ್ನು ಬ್ರಹ್ಮವೆಂದು ಉಪಾಸನೆಮಾಡಬೇಕು. (೮-೧೧) ಉಪಾಸನೆಯಿಂದಲೇ ಬ್ರಹ್ಮವನ್ನು ಪಡೆದುಕೊಳ್ಳಬಹುದೆಂದದ್ದರಿಂದ ಕರ್ಮಗಳು ವ್ಯರ್ಥವೆಂದು ತಿಳಿಯಬಾರದು. ಋತ, ಸತ್ಯ, ತಪಸ್ಸು, ದಮ, ಶಮ, ಅಗ್ನಿಹೋತ್ರ, ಅತಿಥಿಪೂಜೆ, ಲೌಕಿಕವ್ಯವಹಾರ, ಪ್ರಜಾಸಂತತಿ ಪ್ರಾಪ್ತಿ—ಈ ಎಲ್ಲಾ ಕರ್ಮಗಳೂ ಅವಶ್ಯ; ಅಧ್ಯಯನವೂ ಅಧ್ಯಾಪನವೂ ಅತ್ಯವಶ್ಯ. ಸತ್ಯ ತಪಸ್ಸು, ಅಧ್ಯಯನಾಧ್ಯಾಪನಗಳು—ಈ ಮೂರೂ ಕರ್ಮಗಳಲ್ಲಿ ಮುಖ್ಯವಾದವುಗಳು, ಕರ್ಮದಿಂದ ಉತ್ತಮವಾದ ಆರ್ಷದರ್ಶನಗಳು ಉಂಟಾಗುವವು; ಹೀಗೆ ಉಂಟಾದ ದರ್ಶನದಿಂದ ತ್ರಿಶಂಕುವೆಂಬ ಋಷಿಯು ಹೊರಪಡಿಸಿರುವ "ಅಹಂ ವೃಕ್ಷಸ್ಯ" ಎಂಬ ಮಂತ್ರವನ್ನು ಮುಮುಕ್ಷುಗಳು ನಿತ್ಯವೂ ಜಪಿಸುತ್ತಿರಬೇಕು. ಕರ್ಮಗಳಿಂದ ಚಿತ್ತಶುದ್ಧಿಯಾಗಿ ಬ್ರಹ್ಮಜ್ಞಾನವೂ

ಉಂಟಾಗುತ್ತದೆಯಾದ್ದರಿಂದ ಜ್ಞಾನೋತ್ಪತ್ತಿಗಾಗಿಯೂ ಕರ್ಮಗಳನ್ನು ಮಾಡುತ್ತಿರಬೇಕು. ಇದುವರೆಗೂ ಹೇಳಿದ ಕರ್ಮಗಳೂ ಉಪಾಸನೆಗಳೂ ಶಾಸ್ತ್ರವಿಹಿತವಾಗಿರುವದರಿಂದಲೂ ಹಿರಿಯರು ಉಪದೇಶಿಸಿರುವವಾದ್ದರಿಂದಲೂ ವೇದದ ರಹಸ್ಯವಾಗಿರುವದರಿಂದಲೂ ಇವನ್ನು ಅವಶ್ಯವಾಗಿ ಅನುಷ್ಠಾನಮಾಡಬೇಕು.

# ಆನಂದವಲ್ಲಿ

(ಭಾ. ಭಾ. ೮೭-೮೯) ಹಿಂದಿನವಲ್ಲಿಯಲ್ಲಿ ಹೇಳಿರುವದು ಅಪರಬ್ರಹ್ಮದ ಉಪಾಸನೆ, ಈ ವಲ್ಲಿಯಲ್ಲಿ ಪ್ರಾರಂಭಿಸಿರುವದು ಪರಬ್ರಹ್ಮದ ಜ್ಞಾನ. ಈ ಜ್ಞಾನದ ಪ್ರಾಪ್ತಿಗೆ ಇರುವ ಅಡ್ಡಿಗಳನ್ನು ಕಳೆದುಕೊಳ್ಳಬೇಕೆನ್ನುವವರು " ಶಂ ನೋ ಮಿತ್ರಃ " " ಸಹ ನಾವವತು " ಎಂಬ ಶಾಂತಿಗಳನ್ನು ನಿತ್ಯವೂ ಪಠಿಸುತ್ತಿರಬೇಕು.

೯೦-೧೦೯. ಬ್ರಹ್ಮವನ್ನು ಅರಿತುಕೊಂಡವನು ಪರಮಪುರುಷಾರ್ಥವನ್ನು ಪಡೆಯುತ್ತಾನೆ. ಬ್ರಹ್ಮವು ಸತ್ಯಜ್ಞಾನಾನಂತಸ್ವರೂಪವಾಗಿದೆ. ಅದು ಹೃದಯಾಕಾಶದಲ್ಲಿ ಬುದ್ಧಿಗುಹೆಯಲ್ಲಿದೆ ಎಂದು ತಿಳಿದುಕೊಂಡವನಿಗೆ ಎಲ್ಲಾ ಕಾಮುಗಳೂ ಒಮ್ಮೆಗೇ ದೊರಕುವವು; ಬ್ರಹ್ಮರೂಪದಿಂದ ಅವನ್ನು ಅವನು ಅನುಭವಿಸುತ್ತಾನೆ.

೧೧೦-೧೫೨. ಬ್ರಹ್ಮವು ನಮ್ಮೆಲ್ಲರ ಆತ್ಮನೇ; ಅದರಿಂದಲೇ ಆಕಾಶಾದಿಪಂಚಭೂತಗಳಾಗಿರುತ್ತವೆ. ಭೂಮಿಯಲ್ಲಿರುವ ಸಸ್ಯಗಳಿಂದ ಅನ್ನವಾಗಿ ಅನ್ನದಿಂದ ಮನುಷ್ಯನ ಶರೀರವಾಗಿರುತ್ತದೆಯಷ್ಟೆ. ಈ ಅನ್ನಮಯವಾದ ಶರೀರದಿಂದ ಹಿಡಿದು ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ-ಎಂಬ ನಾಲ್ಕು ಕೋಶಗಳು ಒಂದರೊಳಗೊಂದು ಇರುತ್ತವೆ. ಇವುಗಳನ್ನು ಒಂದೊಂದಾಗಿ ಮುಂದುಮುಂದಿನದು ಆತ್ಮನೆಂಬ ತಿಳಿವಳಿಕೆಯನ್ನು ಸಂಪಾದಿಸಿಕೊಂಡು ಹಿಂದುಹಿಂದಿನದನ್ನು ಅನಾತ್ಮಬುದ್ಧಿಯಿಂದ ಕೈಬಿಡುತ್ತಾ ಹೋಗಿ ಕೊನೆಗೆ ಆನಂದಮಯಕೋಶದ ಆತ್ಮನಾಗಿರುವ ಆನಂದವೇ ನಿಜವಾದ ಬ್ರಹ್ಮವೆಂದೂ ಆನಂದಮಯಕ್ಕೂ ಅದು ಆಧಾರವಾಗಿರುವದೆಂದೂ ತಿಳಿದುಕೊಳ್ಳಬೇಕು. ಈ ಬ್ರಹ್ಮವು ಇಲ್ಲವೆಂದು ತಿಳಿದರೆ ತಾನೇ ಇಲ್ಲವಾಗುವನು; ಆದು ಇದೆ ಎಂದು ಅರಿತುಕೊಂಡರೆ ತಾನೇ ಇದ್ದಂತೆ.

೧೫೩-೧೫೫. ಈವರೆಗೆ ಹೇಳಿದ ಉಪದೇಶವನ್ನು ಪಡೆದವರು ಈ ಪ್ರಶ್ನೆಗಳನ್ನು ಕೇಳಬಹುದು; ಬ್ರಹ್ಮವು ಎಲ್ಲರಿಗೂ ಆತ್ಮನಾದ ಮೇಲೆ ಅಜ್ಞನು ಅದನ್ನು ಹೊಂದುವದಿಲ್ಲವೇಕೆ? ಅವನಿಗೆ ಅದು ದೊರಕದಿದ್ದರೆ ಜ್ಞಾನಿಗಾದರೂ ಅದು ದೊರಕುವದೆಂದು ಹೇಗೆ ಗೊತ್ತು? ಇಲ್ಲವೆಂದು ಅರಿತವನಿಗೆ ಇಂಥ ಗತಿ, ಇದೆಯೆಂದು ಅರಿತವನಿಗೆ ಇಂಥ ಗತಿ ಎಂದಿದ್ದರಿಂದ ಒಂದು ಸಂಶಯವುಂಟಾಗುತ್ತದೆ; ಅದು ಇದೆಯೋ, ಇಲ್ಲವೋ? ಅದು ಇದೆ ಎಂಬುದು ಹೇಗೆ?

೧೫೬-೧೯೪. ಈ ಪ್ರಶ್ನೆಗಳಿಗೆ ಉತ್ತರವನ್ನು ಹೇಳಬೇಕಷ್ಟೆ. ಮೊದಲು ಬ್ರಹ್ಮವು ಇದೆ ಎಂಬುದಕ್ಕೆ ಉತ್ತರವನ್ನು ಹೇಳಲಾಗುತ್ತದೆ: (೧) ಜಗತ್ತನ್ನು ವಿಚಾರಪೂರ್ವಕವಾಗಿ ಸೃಷ್ಟಿಸುವ ಕಾರಣವಾಗಿರುವದರಿಂದ ಇದೆ. (೨) ಸೃಷ್ಟಿಸಿರುವ ಜಗತ್ತಿನಲ್ಲಿ ಜೀವರೂಪದಿಂದ ಹೊಕ್ಕಿರುವದರಿಂದ ಇದೆ. (೩) ಹೊರಗೆ ಕಾಣುವ ಮೂರ್ತಾಮೂರ್ತಪದಾರ್ಥಗಳೆಲ್ಲವೂ ಅದೇ ಆಗಿರುವದರಿಂದ ಇದೆ. (೪) ಬ್ರಹ್ಮವು ತಾನೇ ತನ್ನನ್ನು ಮಾಡಿಕೊಂಡಿರುವದರಿಂದಲೂ

ಪುಣ್ಯಕ್ಕೆ ಫಲವನ್ನು ಕೊಡುವದರಿಂದಲೂ ಇದೆ. (೫) ಜೀವರ ಆನಂದಕ್ಕೆ ಹೇತುವಾದ್ದರಿಂದ ಇದೆ. (೬) ಪ್ರಾಣಿಗಳ ಪ್ರವೃತ್ತಿಗೆ ಕಾರಣವಾಗಿರುವದರಿಂದ ಇದೆ. (೭) ಜ್ಞಾನಿಗೂ ಅಜ್ಞಾನಿಗೂ ಭಯಾಭಯಗಳಿಗೆ ಕಾರಣವಾಗಿರುವದರಿಂದ ಇದೆ.

೧೯೫-೨೦೬. ಬ್ರಹ್ಮಸ್ವರೂಪವಾದ ಆನಂದವು ಪ್ರಾಣಿಗಳಲ್ಲಿ ಮನುಷ್ಯನಿಂದ ಹಿಡಿದು ಬ್ರಹ್ಮನವರೆಗೆ ತಾರತಮ್ಯದಿಂದ ಇರುವಂತೆ ಕಂಡರೂ ನಿಜವಾಗಿ ಅದ್ವಿತೀಯವಾಗಿರುತ್ತದೆ. ಉತ್ಕೃಷ್ಟೋಪಾಧಿಯಾದ ಸೂರ್ಯನಲ್ಲಿಯೂ ನಿಕೃಷ್ಟೋಪಾಧಿಯಾದ ಮನುಷ್ಯನಲ್ಲಿಯೂ ಒಂದೇ ಆಗಿರುತ್ತದೆ. ಅದು ವಿಷಯವಿಷಯಿಗಳ ಸಂಬಂಧದಿಂದ ಉಂಟಾದದ್ದಲ್ಲ, ಸ್ವಾಭಾವಿಕವಾದದ್ದು. ಶ್ರೋತ್ರಿಯನೂ ಅಕಾಮಹತನೂ ಆದವನಿಗೆ ಈ ಆನಂದದ ಅನುಭವವಿರುತ್ತದೆ.

೨೦೭-೨೨೫. ಈಗ ಉಳಿದ ಇನ್ನೆರಡು ಪ್ರಶ್ನೆಗಳಿಗೆ ಉತ್ತರವನ್ನು ಹೇಳಲಾಗುತ್ತದೆ. ಯಾವನು ಇಂಥ ಸ್ವಾಭಾವಿಕವಾದ ಆನಂದವೇ ಸತ್ಯಜ್ಞಾನಾನಂತವಾಗಿರುವ ಬ್ರಹ್ಮವು ಎಂದು ತಿಳಿಯುತ್ತಾನೋ ಅವನು ಈ ಲೋಕದಿಂದ ಹಿಂತಿರುಗಿ ಅನ್ನಮಯಾದಿಗಳನ್ನು ಮೀರಿ ಅದೃಶ್ಯತ್ವಾದಿಗುಣಗಳಿಂದ ಕೂಡಿರುವ ಈ ಬ್ರಹ್ಮದಲ್ಲಿ ಅಭಯಪ್ರತಿಷ್ಠೆಯನ್ನು ಹೊಂದುತ್ತಾನೆ. ಮನೋವಾಕ್ಕುಗಳಿಗೆ ದೂರವಾಗಿರುವ ಬ್ರಹ್ಮಾನಂದವು ತನ್ನ ಆತ್ಮನೇ ಎಂದು ತಿಳಿದವನು ಮಾತ್ರ ಏತಕ್ಕೂ ಹೆದರುವದಿಲ್ಲ. ಆದ್ದರಿಂದ ಅಂಥ ಜ್ಞಾನಿಯು ಮಾತ್ರ ಬ್ರಹ್ಮವನ್ನು ಪಡೆದುಕೊಳ್ಳುತ್ತಾನೆ. ಅಜ್ಞಾನಿಗೆ ಬ್ರಹ್ಮವು ಆತ್ಮನಾಗಿದ್ದರೂ ಅವನಿಗೆ ಅದರ ಪ್ರಾಪ್ತಿಯಿಲ್ಲ, ಪಾಪವನ್ನು ಮಾಡಿರುವದರಿಂದಲೂ ಪುಣ್ಯವನ್ನು ಮಾಡದಿರುವದರಿಂದಲೂ ಆಗುವ ಸಂತಾಪವು ಅವನಿಗೆ ಉಂಟು. ಆದರೆ ಜ್ಞಾನಿಯ ದೃಷ್ಟಿಯಲ್ಲಿ ಪಾಪಪುಣ್ಯಗಳು, ಅವುಗಳ ಫಲಗಳು_ಎಲ್ಲವೂ ಆನಂದಸ್ವರೂಪನಾದ ಆತ್ಮನೇ ಆಗಿಬಿಟ್ಟಿರುವದರಿಂದ ಅವನಿಗೆ ಯಾವ ಸಂತಾಪವೂ ಇರುವದಿಲ್ಲ. ಈ ಜ್ಞಾನವೇ ವಿದ್ಯೆಗಳಲ್ಲೆಲ್ಲ ರಹಸ್ಯವೆನಿಸಿರುವ ಬ್ರಹ್ಮವಿದ್ಯೆಯು.

## ಭೃಗುವಲ್ಲಿ

(೨೨೬-೨೨೯.) ಭೃಗುವೆಂಬಾತನು ತಂದೆಯಾದ ವರುಣನಲ್ಲಿಗೆ ಬಂದು "ಪೂಜ್ಯನೆ, ಬ್ರಹ್ಮವನ್ನು ತಿಳಿಸಿಕೊಡು" ಎಂದು ಕೇಳಿಕೊಂಡನು. ತಂದೆಯು ಶರೀರ, ಪ್ರಾಣ, ಚಕ್ಷುಸ್ಸು, ಶ್ರೋತ್ರ, ಮನಸ್ಸು, ವಾಕ್ಕು_ಎಂಬ ಜ್ಞಾನದ್ವಾರಗಳನ್ನು ಅವನಿಗೆ ಉಪದೇಶಿಸಿದನು. ಬಳಿಕ "ಯಾವದರಿಂದ ಭೂತಗಳು ಹುಟ್ಟುತ್ತವೆಯೋ ಹುಟ್ಟಿದ ಬಳಿಕ ಯಾವದರಿಂದ ಭೂತಗಳು ಬದುಕಿರುತ್ತವೆಯೋ ಕೊನೆಗೆ ಯಾವದರಲ್ಲಿ ಸೇರಿ ಒಂದಾಗಿಬಿಡುವವೋ ಅದನ್ನು ತಿಳಿದುಕೊ; ಅದೇ ಬ್ರಹ್ಮವು" ಎಂದು ಬ್ರಹ್ಮದ ಸಾಮಾನ್ಯಲಕ್ಷಣವನ್ನು ಹೇಳಿಕೊಟ್ಟನು.

(೨೩೦-೨೪೪.) ಭೃಗುವು ಇಂದ್ರಿಯಗಳನ್ನೂ ಅಂತಃಕರಣಗಳನ್ನೂ ಏಕಾಗ್ರವಾಗಿಸಿ ವಿಚಾರಮಾಡುವ ತಪಸ್ಸಿನಿಂದ ಅನ್ನವನ್ನು ಬ್ರಹ್ಮವೆಂದು ತಿಳಿದುಕೊಂಡನು. ಆಮೇಲೆ ಅದಕ್ಕೆ ಲಕ್ಷಣವು ಪೂರ್ಣವಾಗಿ ಹೊಂದುವದಿಲ್ಲವೆಂದು ಮತ್ತೆ ತಂದೆಯ ಉಪದೇಶದಿಂದ ತಪಸ್ಸುಮಾಡಿ ಪ್ರಾಣವನ್ನು ಬ್ರಹ್ಮವೆಂದು ತಿಳಿದುಕೊಂಡನು. ಆಮೇಲೆ ಅದರಿಂದಲೂ ಸಮಾಧಾನವನ್ನು ಹೊಂದದೆ ಕ್ರಮಕ್ರಮವಾಗಿ ಮನಸ್ಸು, ವಿಜ್ಞಾನ ಇವುಗಳನ್ನು ಬ್ರಹ್ಮವೆಂದು ತಿಳಿದುಕೊಂಡು ಕೊನೆಗೆ ಎಲ್ಲಕ್ಕೂ ಒಳಗಿರುವ ಆನಂದವೇ ಬ್ರಹ್ಮವೆಂದು ನಿಶ್ಚಯಿಸಿದನು.

(೨೩೪-೨೩೬.) ಭೃಗುವಿನಂತೆಯೇ ತಪಸ್ಸು ಮಾಡಿ ಈ ಅದ್ವೈತಾನಂದವನ್ನು ಬ್ರಹ್ಮವೆಂದು ಮನಗಂಡವನು ಬ್ರಹ್ಮವೇ ಆಗುತ್ತಾನೆ. ಅವನಿಗೆ ಬೇಕಾದಷ್ಟು ಅನ್ನವು ದೊರೆಯುತ್ತದೆ; ಅವನು ಅನ್ನವನ್ನುಣ್ಣುವ ದೀಪ್ತಾಗ್ನಿಯಾಗುತ್ತಾನೆ; ಅವನಿಗೆ ಪ್ರಜಾಸಂತತಿ, ಪಶುಗಳು, ಬ್ರಹ್ಮವರ್ಚಸ್ಸು, ಕೀರ್ತಿ_ಇವೆಲ್ಲವೂ ಹೆಚ್ಚುತ್ತವೆ.

೨೩೭-೨೪೬. ಪ್ರಾಣವು ಅನ್ನವು, ಶರೀರವು ಅನ್ನಾದವು; ಇನ್ನೊಂದು ದೃಷ್ಟಿಯಿಂದ ಶರೀರವೇ ಅನ್ನವು, ಪ್ರಾಣವು ಅನ್ನಾದವು. ಹೀಗೆ ಅನ್ನವನ್ನು ಉಪಾಸನೆಮಾಡುವವನು ಅನ್ನವನ್ನು ನಿಂದಿಸಬಾರದು. ಶರೀರಪ್ರಾಣಗಳನ್ನು ಅನ್ನವೆಂದು ಉಪಾಸನೆಮಾಡುವವನು ಅನ್ನವನ್ನು ಬೇಡ ಎನ್ನಬಾರದು. ಹೀಗೆಯೇ ಅಪ್ಪು, ಜ್ಯೋತಿ_ಇವುಗಳು ಪರಸ್ಪರವಾಗಿ ಅನ್ನಾನ್ನಾದಗಳೆಂದು ಉಪಾಸನೆಮಾಡಬೇಕು. ಹಾಗೆ ಮಾಡುವವನು ಅನ್ನವನ್ನು ಹೆಚ್ಚಾಗಿ ಸಂಪಾದಿಸಿಕೊಳ್ಳಬೇಕು. ಪೃಥಿವಿ, ಆಕಾಶ_ಇವುಗಳು ಒಂದಕ್ಕೊಂದು ಅನ್ನಾನ್ನಾದಗಳೆಂದು ಉಪಾಸನೆಮಾಡಬೇಕು; ಆ ಉಪಾಸಕನು ಎಲ್ಲರಿಗೂ ವಾಸಗೃಹವನ್ನು ಕೊಟ್ಟು ಅನ್ನವನ್ನೂ ನೀಡಬೇಕು. ಯಾವನು ಇವುಗಳಲ್ಲಿ ಯಾವಯಾವ ಜೋಡಿಯನ್ನು ಅನ್ನಾನ್ನಾದವೆಂದೂ ಒಂದರಲ್ಲಿ ಒಂದು ನಿಂತಿರುವವೆಂದೂ ಉಪಾಸನೆಮಾಡುತ್ತಾನೋ ಅವನು ಆಯಾ ರೂಪದಿಂದ ನೆಲೆನಿಲ್ಲುವನು; ಪ್ರಜಾದಿಗಳನ್ನು ಪಡೆದುಕೊಳ್ಳುವನು. ಯಾವನು ಅನ್ನೋಪಾಸಕನಾಗಿ ಅನ್ನವನ್ನು ಯಾವಯಾವ ಅವಸ್ಥೆಯಲ್ಲಿ ಹೇಗೆ ಹೇಗೆ ದಾನಮಾಡಿರುವನೋ ಅವನಿಗೆ ಹಾಗೆ ಹಾಗೆಯೇ ಹಿಂತಿರುಗಿ ಅನ್ನವು ಒದಗುವದು.

೨೪೭-೨೬೧. ಬ್ರಹ್ಮವನ್ನು ಆಧ್ಯಾತ್ಮಿಕವಾಗಿಯೂ ಆಧಿದೈವಿಕವಾಗಿಯೂ ಶಾಸ್ತ್ರದಲ್ಲಿ ಹೇಳಿರುವಂತೆ ಉಪಾಸನೆಮಾಡುವವರಿಗೆ ಶಾಸ್ತ್ರದಲ್ಲಿ ಹೇಳಿರುವ ಬಗೆಬಗೆಯ ದೃಷ್ಟಫಲಗಳಾಗುವವು. ಆದರೆ ಭೋಕ್ತೃಭೋಜ್ಯವೆಂಬ ಅನ್ನಾನ್ನಾದರೂಪವಾಗಿರುವದೆಲ್ಲವೂ ಸಂಸಾರವೇ ಆಗಿರುವದರಿಂದ ಯಾವನು ಈ ಸಂಸಾರಲೋಕವನ್ನು ತೂರೆದು ಆತ್ಮನು ಒಬ್ಬನೇ ಇರುವವನು, ಅವನಲ್ಲಿ ಉಪಾಧಿಗಳಿಂದ ತೋರುವ ಉತ್ಕರ್ಷಾಪಕರ್ಷಗಳು ಯಾವವೂ ಇರುವದಿಲ್ಲ_ಎಂಬ ತತ್ತ್ವವನ್ನು ಮನಗಾಣುವನೋ ಅವನು ಅನ್ನಮಯಾದಿಯಾಗಿ ಆನಂದಮಯನವರೆಗಿನ ಅನಾತ್ಮಗಳನ್ನು ಮೀರಿ ಸರ್ವರಿಗೂ ಆತ್ಮನಾಗಿರುವ ಅದ್ವೈತಾನಂದವೆಂಬ ಬ್ರಹ್ಮಸ್ವರೂಪದಿಂದ ಎಲ್ಲವನ್ನೂ ಅನುಭವಿಸುತ್ತಾ "ಆಹಾ! ಅನ್ನ, ಅನ್ನಾದ, ಅವುಗಳ ಸಂಬಂಧದಿಂದಾಗಿರುವ ಒಟ್ಟು_ಇದೆಲ್ಲವೂ ನಾನೇ! ಸರ್ವ ಜಗತ್ತಿಗೂ ಅಗ್ರಜನಾಗಿರುವ, ದೇವತೆಗಳೆಲ್ಲರಿಗೂ ಪೂರ್ವಜನಾದ, ಹಿರಣ್ಯಗರ್ಭನೂ ನಾನೇ. ಸರ್ವರಿಗೂ ಮುಕ್ತಿಯು ನನ್ನಿಂದಲೇ ಆಗುತ್ತದೆ. ಅನ್ನರೂಪನಾದ ನನ್ನನ್ನು ದಾನಮಾಡುವವರಿಗೆ ಅನ್ನವು ಸುರಕ್ಷಿತವಾಗಿ ದೊರಕುವದು. ದಾನಮಾಡದೆ ತಿನ್ನುವವರನ್ನು ಅನ್ನರೂಪನಾದ ನಾನೇ ತಿನ್ನುತ್ತಿರುವೆನು! ನನ್ನ ಬ್ರಹ್ಮಸ್ವರೂಪದಲ್ಲಿ ಇಡಿಯ ಜಗತ್ತೇ ಲಯವಾಗುತ್ತದೆ; ನಾನು ನಿತ್ಯಸ್ವಯಂಪ್ರಕಾಶನು!

೨೬೨. ಹೀಗೆಂಬ ತತ್ತ್ವವನ್ನು ಯಾರು ಭೃಗುವಿನಂತೆ ಮನಗಾಣುವರೋ ಅವರೂ ಈ ಫಲವನ್ನು ಹೊಂದುವರು. ಇವೇ ಆನಂದವಲ್ಲಿ, ಭೃಗುವಲ್ಲಿ_ಈ ಎರಡರಲ್ಲಿ ಹೇಳಿರುವ ಪರಮಾತ್ಮಜ್ಞಾನವು.

# ಅನುವಾಕಗಳ ಅನುಕ್ರಮಣಿಕೆ

ವಿ. ಸೂ. ವೈದಿಕರು ಅಧ್ಯಯನಮಾಡುವಾಗ ಮಾಡಿಕೊಂಡಿರುವ ಅನುವಾಕಗಳ ಕ್ರಮವನ್ನು ಆನಂದಾಶ್ರಮಮುದ್ರಣಾಲಯದ ಪುಸ್ತಕಕ್ಕೆ ಅನುಗುಣವಾಗಿ ಕೊಟ್ಟಿದೆ. ಅನುವಾಕ ವಿಭಾಗಗಳ ವಿಷಯಕ್ಕೆ ಪೀಠಿಕೆಯನ್ನು ನೋಡಿ.

# ಶಬ್ದಾನುಕ್ರಮಣಿಕೆ

ಇಲ್ಲಿ ಕೊಟ್ಟಿರುವ ಸಂಖ್ಯೆಗಳು ಸಂಸ್ಕೃತಭಾಷ್ಯದ ಭಾಗವನ್ನು ಸೂಚಿಸುವವು.

೧. **ಅಕ್ಷರಮ್**—
ಶಬ್ದ ೧೩೩.

೨. **ಅಜ್ಞಾನಮ್**—
ಬ್ರಹ್ಮದ ವಿಷಯದ ತಪ್ಪುತಿಳಿವಳಿಕೆ೦

೩. **ಆತ್ಮಾ**—
ಶರೀರದೊಳಗೆ ಇದ್ದುಕೊಂಡು ವಿಷಯಗಳನ್ನು ಭೋಗಿಸುವ ಪ್ರಾಣ, ೯೬.

೪. **ಅದೃಷ್ಟಾರ್ಥ**—
ಪರಲೋಕದಲ್ಲಿ ಪಡೆಯಬೇಕಾದ ಫಲಕ್ಕಾಗಿ ಮಾಡುವ (ಕರ್ಮ) ೬೩, ೧೯೭.

೫. **ಅಧಿಕಾರಃ**—
(ಕರ್ಮಕ್ಕೆ ಅಥವಾ ಜ್ಞಾನಕ್ಕೆಬೇಕಾದ) ಯೋಗ್ಯತೆ ೭೦, ೭೨, ೮೬.

೬. **ಅಧ್ಯಾತ್ಮ**—
ನಮ್ಮ ಒಳಗಿನ ೧೩, ೪೨.

೭. **ಅನಾತ್ಮದರ್ಶೀ, ಅನಾತ್ಮವಿತ್**
ಆತ್ಮನಲ್ಲದ ದೇಹಾದಿಗಳನ್ನು ತಾನೆಂದುಕೊಂಡು ವಿಷಯಗಳನ್ನು ಸತ್ಯವೆಂದು ತಿಳಿಯುವವನು ೬, ೮೦.

೮. **ಅನುಶಾಸನಮ್**—
ಗುರುಹಿರಿಯರ ಅಪ್ಪಣೆ ೬೧, ೬೮; ಈಶ್ವರವಚನ ೬೮.

೯. **ಅನುಷಙ್ಗಃ**—
ಹಿಂದಿನ ಮಾತನ್ನು ಇಲ್ಲಿಯೂ ಸೇರಿಸಿಕೊಳ್ಳುವದು ೧೩.

೧೦. **ಅನೃತಮ್**—
ಮಾರ್ಪಡುವ ಸ್ವರೂಪದ್ದು ೯೮, ೧೦೩, ೧೧೨; ಹುಸಿತೋರಿಕೆ (ಬಿಸಿಲುಕುದುರೆಯ ನೀರಿನಂಥದ್ದು) ೧೭೯.

೧೧. **ಅನ್ತರ್ಯಾಮೀ**
ನಮ್ಮೊಳಗಿದ್ದುಕೊಂಡು ನಮ್ಮ ಶರೀರೇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಂಡಿರುವ ಆತ್ಮ, ೫೭.

೧೨. **ಅನ್ತಃಕರಣಗುಹಾ**—
ಬುದ್ಧಿಯೆಂಬ ಗುಹೆ, ೧೭೬.

೧೩. **ಅನ್ನರಸಮಯಃ, ಅನ್ನಮಯಃ**—
ಅನ್ನರಸದಿಂದ ಆಗಿರುವ ಶರೀರ, ಆತ್ಮನೆಂದು ಜನರು ತಪ್ಪಾಗಿ ತಿಳಿದುಕೊಂಡಿರುವ ಕೋಶಗಳಲ್ಲಿ ಒಂದು, ೧೧೫, ೧೧೮, ೧೧೯, ೧೨೨.

೧೪. **ಅನ್ನಬ್ರಹ್ಮವಿತ್**—
ಸಮಷ್ಟ್ಯನ್ನವನ್ನು ಬ್ರಹ್ಮವೆಂದು ಉಪಾಸನೆಮಾಡುವವನು, ೧೨೦.

೧೫. **ಅನ್ನಾನ್ನಾದೌ**—
ಭೋಜ್ಯ, ಭೋಕ್ತೃ. ಯಾವದು ಒಳಗೆ ಅಧೀನದಲ್ಲಿರುವದೋ ಅದು ಅನ್ನ, ಯಾವದರ ಅಧೀನದಲ್ಲಿ, ಅದರೊಳಗೆ ಇರುವದೋ ಅದು ಅನ್ನಾದವು, ೨೫೮.

**೧೬. ಅಪಮೃತ್ಯುಃ** —
ಆಯುಸ್ಸು ಮುಗಿಯುವದರೊಳಗೇ ಒದಗುವ ಮೃತ್ಯು, ೧೨೯.

**೧೭. ಅಭಿಧಾನಮ್**—
ಹೆಸರು, ೫೧, ೨೨೦.

**೧೮. ಅಭಿಧೇಯಮ್**—
ಹೆಸರಿಸುವ ವಸ್ತು, ೫೧.

**೧೯. ಅಯಂ ಲೋಕಃ** —
ಭೂಲೋಕ, ೪೪, ೮೨; ಇಹಪರಲೋಕಗಳಲ್ಲಿರುವ ಇಷ್ಟವಿಷಯಗಳ ಸಮೂಹ ೨೦೯, ೧.

**೨೦. ಅವಿದ್ಯಾ**—
ಬ್ರಹ್ಮಸ್ವರೂಪವು ಇಲ್ಲವೆಂದು ತಿಳಿಯುವದು, ಅನಾತ್ಮವನ್ನು ಕಾಣುವ ತಪ್ಪುತಿಳಿವಳಿಕೆ, ೯೪, ೧೯೧, ೧೯೬, ೨೧೪, ೨೧೬, ೨೨೧.

**೨೧. ಅವಿದ್ಯಾಕಲ್ಪಿತ**—
ತಪ್ಪುತಿಳಿವಳಿಕೆಯಿಂದ ಹುಟ್ಟುಗಟ್ಟಿರುವ (ದ್ವೈತ) ೧೪೯ (ಆತ್ಮರು) ೨೫೭, (ಸಂಸಾರ) ೨೧೫.

**೨೨. ಅವಿದ್ಯಾಕೃತ**—
ಅವಿದ್ಯೆಯಿಂದ ಮಾಡಲ್ಪಟ್ಟಿರುವ ತಪ್ಪುತಿಳಿವಳಿಕೆಯಿಂದ ಕಾಣುವ (ಅನ್ನಮಯಾದಿ ವಿಶೇಷಾತ್ಮರು) ೨೨೧, (ಅನ್ಯವಸ್ತು) ೨೧೩, (ಎಚ್ಚರಕನಸುಗಳು) ೨೧೪, (ತಾದಾತ್ಮ್ಯ) ೫೧; (ನಾನಾತ್ವ) ೧೪೯; (ಪಂಚಕೋಶಗಳು) ೧೨೨, ೧೨೭; (ಬಯಹೇತು) ೧೪೯, (ವಿಷಯವಿಷಯಿವಿಭಾಗ) ೧೯೬.

**೨೩. ಅವಿದ್ಯಾಕಾಮಕರ್ಮಾಣಿ**—
ಬ್ರಹ್ಮದಲ್ಲಿ ವಿಷಯಗಳನ್ನು ಕಾಣುವ ತಪ್ಪುತಿಳಿವು, ಅವುಗಳ ಬಯಕ್ಕೆ, ಮತ್ತು ಅವುಗಳನ್ನು ಪಡೆಯುವದಕ್ಕೆ ಅಥವಾ ತೊಲಗಿಸುವದಕ್ಕೆ ಮಾಡುವ ಕರ್ಮ, ೧೯೭.

**೨೪. ಅವಿದ್ಯಾಕಾರ್ಯಮ್**—
ತಪ್ಪುತಿಳಿವಳಿಕೆಯ ಫಲವಾಗಿ ತೋರುವದು, ೨೨೧.

**೨೫. ಅವಿದ್ಯಾನಿವೃತ್ತಿಃ**—
ಬ್ರಹ್ಮದ ವಿಷಯದ ತಪ್ಪುತಿಳಿವಳಿಕೆಯು ತೊಲಗುವದು ೨, ೧೧, ೯೧.

**೨೬. ಅವಿದ್ಯಾವಸ್ಥಾ**—
ಆತ್ಮನಿಗಿಂತ ಬೇರೆಯಾದ ಅನಾತ್ಮವನ್ನು ಕಾಣುವ ಸ್ಥಿತಿ, ೧೯೧

**೨೭. ಅವಿದ್ವಾನ್**—
ಆತ್ಮತತ್ತ್ವವನ್ನು ತಿಳಿಯುವವನು, ೧೫೪, ೧೫೫.

**೨೮. ಅವ್ಯಾಕೃತ**—
ವಿಂಗಡವಾಗಿ ಬಿಡಿಸದೆ ಇರುವ (ನಾಮರೂಪಗಳು) ೧೮೬.

**೨೯. ಅಸತ್**—
ಇಲ್ಲದಿರುವದು ೧೫೦; ನಾಮರೂಪಗಳ ವಿಂಗಡವಿಲ್ಲದ ಅವ್ಯಾಕೃತರೂಪವಾದ ಬ್ರಹ್ಮ, ೧೮೨.

**೩೦. ಅಸನ್**—
ಇದ್ದರೂ ಇಲ್ಲದಂತೆ ಎಣಿಸುವ, ಪುರುಷಾರ್ಥದ ಸಂಬಂಧವಿಲ್ಲದ ೧೫೦; ಸನ್ಮಾರ್ಗದಲ್ಲಿಲ್ಲದ, ೧೫೦.

**೩೧. ಅಸ್ತಿತ್ವಭಾವಿತ**—
ಇದೆ ಎಂದು ಗಟ್ಟಿಯಾದ ಭಾವನೆಯುಳ್ಳ (ಬುದ್ಧಿ) ೧೫೦.

**೩೨. ಅಸೌ ಲೋಕಃ**—
ಆ ಲೋಕ, ಸ್ವರ್ಗಲೋಕ, ೪೮; ಪರಮಾತ್ಮ, ೧೫೪.

**೩೩. ಆಕಾಶಃ—**
ಪಂಚಭೂತಗಳಲ್ಲಿ ಒಂದು, ೧೧೩, ೧೧೪, ೨೨೬, ಆಕಾಶದಲ್ಲಿರುವ ಸಮಾನವೆಂಬ ಪ್ರಾಣವೃತ್ತಿ, ೧೨೪, ಹೃದಯಾಕಾರದ, ೧೮೭.

**೩೪. ಆಚಾರ್ಯಃ—**
ಶಾಸ್ತ್ರವನ್ನು ಹೇಳಿಕೊಡುವ ಗುರು ೧೪, ೧೭, ೪೫, ೬೪.

**೩೫. ಆತ್ಮಾ—**
ಸ್ವರೂಪ, ೧೦೫, ೧೦೬, ೧೧೪, ೧೨೭, ೧೩೧, ೧೬೬, ೨೫೦ ; ವ್ಯಾಪಿಸಿರುವ (ವ್ಯಾಪ್ತಿ) ೩೨ ; ನಡುವೆ ಇರುವ ಅವಯವ, ೧೧೭, ೧೨೪, ವಿರಾಟ್ಪುರುಷ, ೪೭.

**೩೬. ಆತ್ಮಚೈತನ್ಯಮ್—**
ಸ್ವರೂಪವಾಗಿರುವ ಅರಿವು ೧೩೩.

**೩೭. ಆತ್ಮದರ್ಶನಮ್—**
ಆತ್ಮನ ಉಪಾಸನೆ.

**೩೮. ಆತ್ಮಭಾವಃ, ಆತ್ಮಾಭಿಮಾನಃ**
ತಾನೇ ಅದೆಂಬ ಭಾವನೆ, ೧೪೧, ೧೮೯.

**೩೯. ಆತ್ಮಭೂತ—**
ಸ್ವರೂಪವಾಗಿರುವ ೪೧, ೯೩.

**೪೦. ಆತ್ಮಭಾವಿತ—**
ಆತ್ಮನೆಂಬ ಭಾವನೆಯಿಂದ ಕೂಡಿದ, ೧೧೭, ೧೪[illegible].

**೪೧. ಆತ್ಮವಿದ್ಯಾ—**
ಬ್ರಹ್ಮರೂಪವಾದ ಆತ್ಮನ ನಿಜದ ಅರಿವು, ೮೯.

**೪೨. ಆತ್ಮವಿವೇಕವಿಜ್ಞಾನಮ್—**
ಆತ್ಮನನ್ನು ಬಿಡಿಸಿ ತಿಳಿದುಕೊಳ್ಳುವದು, ೨೧೮.

**೪೩. ಆತ್ಮೈಕತ್ವವಿಜ್ಞಾನಮ್—**
ಆತ್ಮನು ಅದ್ವಿತೀಯನೆಂಬ ತಿಳಿವಳಿಕೆ, ೫೮, ೭೮, ೨೫೭.

**೪೪. ಆತ್ಯನ್ತಿಕಃ ಸಂಸಾರಾಭಾವಃ—**
ಸಂಸಾರವು ಸ್ವಲ್ಪವೂ ಉಳಿಯದೆ ಹೋಗಿಬಿಡುವದು, ೯೧.

**೪೫. ಆಧ್ಯಾತ್ಮಿಕ—**
ನಮ್ಮ ಒಳಗಿರುವ, ೧೨೪.

**೪೬. ಆನನ್ದಮಯಃ—**
ಕರ್ಮ ಮತ್ತು ಉಪಾಸನೆ_ಇವುಗಳ ಫಲಭೋಕ್ತೃವಾದ ಆತ್ಮ, ೧೨೨, ೧೪೪, ೧೪೫, ೧೪೬, ೧೪೮, ೧೪೯, ೨೦೯.

**೪೭. ಆರಬ್ಧ—**
ಫಲವನ್ನುಂಟುಮಾಡಿರುವ (ಕರ್ಮ)೩, ೪, ೫, ೭೧.

**೪೮. ಆರಭ್ಯ—**
ಹೊಸದಾಗಿ ಉಂಟುಮಾಡಬಹುದಾದ, ೯.

**೪೯. ಆರಮ್ಭಕ—**
ಕಾರಣವಾಗಿರುವ, ೭೪.

**೫೦. ಆರ್ಷದರ್ಶನಮ್—**
ತಾನೇ ಹೊಳೆಯುವ ಅಮೂಲ್ಯಜ್ಞಾನ, ೫೮.

**೫೧. ಇನ್ದ್ರಃ—**
ಒಡೆಯ (ಸರ್ವಕಾಮುಗಳನ್ನೂ ಕೊಡುವ ಓಂಕಾರ), ೨೨, ದೇವತೆಗಳ ಒಡೆಯ, ೧೪೦, ೧೯೪, ೨೦೦ ; ಸಗುಣಬ್ರಹ್ಮ, ೪೨.

**೫೨. ಈಶ್ವರಃ—**
ಪರಮೇಶ್ವರನು, ೯೨, ೨೧೫; ಸ್ವತಂತ್ರನಾದ, ೧೯೪.

**೫೩. ಉತ್ಪತ್ತ್ಯಾದಿಃ—**
ಉತ್ಪತ್ತಿ (ಹುಟ್ಟುವದು), ಸಂಸ್ಕಾರ (ಗುಣವನ್ನುಂಟುಮಾಡುವದು) ವಿಕಾರ (ಮಾರ್ಪಡಿಸುವದು), ಆಪ್ತಿ

**೮೯. ನಿರೀಷಣಾಃ—**
ಮಕ್ಕಳು, ಕರ್ಮ ಉಪಾಸನೆಗಳು ಇವುಗಳ ಫಲವನ್ನು ಬಯಸದವರು, ೧೮೫.

**೯೦. ನಿರ್ವಿಶೇಷಮ್—**
ಯಾವ ವಿಶೇಷವೂ ಇಲ್ಲದ(ಅಭಾವ)೯, ಬ್ರಹ್ಮ, ೧೦೮.

**೯೧. ನಿರ್ವಿಕಲ್ಪ—**
ದ್ರವ್ಯ, ಗುಣ, ಕ್ರಿಯೆ ಮುಂತಾದ ವಿಕಲ್ಪಗಳಿಲ್ಲದ, ೧೭೬, ೨೧೯, ೨೨೦.

**೯೨. ಪಂಚಕೋಶಃ—**
ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ—ಎಂಬ (ಆತ್ಮನ) ಮುಸುಕುಗಳು, ೧೪೮.

**೯೩. ಪರ ಆತ್ಮಾ, ಪರಮಾತ್ಮಾ—**
ನಿಜವಾಗಿ ನಮ್ಮ ಸ್ವರೂಪವಾಗಿರುವ ಆತ್ಮ, ೧೪೪, ೨೦೫, ೨೦೯.

**೯೪. ಪರಂ ಶ್ರೇಯಃ—**
ಹೆಚ್ಚಿನ ಶ್ರೇಯಸ್ಸು, ಮುಕ್ತಿ, ೬೯, ೮೧, ೮೬, ೮೯.

**೯೫. ಪರಪ್ರಾಪ್ತಿಃ—**
ಹೆಚ್ಚಿನ ಪುರುಷಾರ್ಥವನ್ನು ಪಡೆಯುವದು, ಬ್ರಹ್ಮವನ್ನು ಪಡೆಯುವರು, ೨.

**೯೬. ಪರಮಾರ್ಥಬ್ರಹ್ಮ—**
ನಿಜವಾಗಿಯೂ ಬ್ರಹ್ಮವಾಗಿರುವ ಆತ್ಮ, ೧೪೮.

**೯೭. ಪರಮಾರ್ಥಸತ್ಯಮ್—**
ನಿಜವಾಗಿಯೂ ಸತ್ಯವಾಗಿರುವ ಬ್ರಹ್ಮ, ೯೮, ೧೧೨, ೧೭೯.

**೯೮. ಪರಮಾರ್ಥಸದಾಪನ್ನಃ—**
ನಿಜವಾಗಿರುವ ಬ್ರಹ್ಮದ ರೂಪವನ್ನು ಪಡೆದುಕೊಂಡವನು, ೧೫೦.

**೯೯. ಪರಮಾತ್ಮಭಾವಃ—**
ಪರಮಾತ್ಮನ ಸ್ವರೂಪ, ೨೧೦, ೨೨೪.

**೧೦೦. ಪರಮಾನನ್ದ—**
ಮಿಗಿಲಿಲ್ಲದ ಆನಂದ, ಬ್ರಹ್ಮ, ೧೯೬, ೧೯೯, ೨೦೪, ೨೦೬, ೨೨೦.

**೧೦೧. ಪರಂ ಬ್ರಹ್ಮ—**
ಹೆಚ್ಚಿನ ನಿರುಪಾಧಿಕವಾದ ಬ್ರಹ್ಮ, ೬, ೧೪೭.

**೧೦೨. ಪರಾರ್ಥಃ—**
ಮತ್ತೊಂದಕ್ಕಾಗಿರುವ (ವಿಶೇಷಣ)೯೭.

**೧೦೩. ಪಾರಿಶೇಷ್ಯಮ್—**
ಮಿಕ್ಕವುಗಳು ಆಗದೆ ಇರುವದರಿಂದ ಇದೊಂದೇ ಉಳಿಯುವದೆಂಬ ನ್ಯಾಯ, ೨೧೮

**೧೦೪. ಪಿಣ್ಡಃ—**
ಶರೀರ, ೧೨೩, ೧೮೬, ೨೧೯.

**೧೦೫. ಪುರುಷಃ—**
ತಲೆ ಕೈ ಮುಂತಾದವುಗಳುಳ್ಳ ಶರೀರ, ಮನುಷ್ಯ, ೧೧೪, ೧೧೫, ೧೧೬; ಶರೀರಗಳಲ್ಲಿರುವ ಅಥವಾ ಭೂರಾದಿಲೋಕಗಳನ್ನು ವ್ಯಾಪಿಸಿರುವ ಹಿರಣ್ಯಗರ್ಭ, ೪೦.

**೧೦೬. ಪುರುಷವಿಧಃ—**
ಪುರುಷನ ಆಕಾರವಾದ, ೧೨೩, ೧೨೪.

**೧೦೭. ಪುರುಷಾರ್ಥಃ—**
ಪುರುಷನು ಪಡೆಯಲು ಬಯಸುವ ಫಲ, ೫೩, ೭೮, ೧೫೦.

**೧೦೮. ಪ್ರಜಾಪತಿಃ—**
ಹಿರಣ್ಯಗರ್ಭ, ೨೨, ವಿರಾಟ್ಪುರುಷ, ೪೬, ೪೯, ೨೦೦.

**೧೦೯. ಪ್ರತಿಷಿದ್ಧಕರ್ಮಾಣಿ—**
ಮಾಡಕೂಡದೆಂದು ಶಾಸ್ತ್ರದಲ್ಲಿ ಹೇಳಿರುವ ಕರ್ಮಗಳು.

೧೩೩. **ಮನ್ತ್ರಾವೃತ್ತಿಃ, ಮಾನಸೋ ಜಪಃ** -
ಮಂತ್ರವನ್ನು ಮನಸ್ಸಿನಲ್ಲಿಯೇ ಮತ್ತೆ ಮತ್ತೆ ತಿರುಗಿಸುವದು, ೧೩೨, ೧೩೩.

೧೩೪. **ಮಹತ್ತತ್ತ್ವಮ್**—
ಮೊದಲು ಹುಟ್ಟಿದ ಹಿರಣ್ಯಗರ್ಭನ ಬುದ್ಧಿ, ೧೩೯.

೧೩೫. **ಮೂರ್ತಾಮೂರ್ತೇ**—
ವ್ಯಾಕೃತನಾಮರೂಪಗಳು, ೧೭೮, ೧೮೦, ೨೦೬.

೧೩೬. **ಮೋಕ್ಷಃ**—
ಸಂಸಾರದಿಂದ ಬಿಡುಗಡೆ, ೩, ೮, ೯, ೧೦, ೧೧.

೧೩೭. **ಯಾವಜ್ಜೀವಾದಿಶ್ರುತಯಃ**
ಬದುಕಿರುವವರೆಗೂ ಕರ್ಮವನ್ನು ಮಾಡಬೇಕೆಂದು ವಿಧಿಸುವ ಶ್ರುತಿಗಳು, ೫೪, ೮೨.

೧೩೮. **ರಸಾದಿಭಾವಃ**—
ಅನ್ನವು ರಸವೇ ಮುಂತಾದ ರೂಪದಿಂದ ಮಾರ್ಪಡುವದು, ೧೧೯.

೧೩೯. **ಲಕ್ಷಣಮ್**—
ಅಸಾಧಾರಣ ಧರ್ಮ, ೯೬, ೧೦೩, ೨೩೨, ೨೩೯.

೧೪೦. **ಲೌಕಿಕಂ ಜ್ಞಾನಮ್**—
ವೃತ್ತಿರೂಪವಾದ ಜ್ಞಾನವು, ೧೦೨.

೧೪೧. **ಲೌಕಿಕಾನನ್ದಃ**—
ವಿಷಯಗಳಿಂದ ಆಗುವ ಸುಖ, ೧೯೫, ೧೯೬.

೧೪೨. **ವಾಯುಃ**—
ಕ್ರಿಯಾಶಕ್ತಿಪ್ರಧಾನವಾದ ಅಪರಬ್ರಹ್ಮ, ಸೂತ್ರಾತ್ಮ, ೧೪.

೧೪೩. **ವಿಕಲ್ಪಃ** —
ವಸ್ತುವಿಲ್ಲದೆ ಬರಿಯ ಮಾತಿನಿಂದ ಉಂಟಾಗುವ ಪ್ರತ್ಯಯ, ೯; ದ್ರವ್ಯ, ಗುಣ ಎಂದು ಮುಂತಾಗಿ ಕಲ್ಪಿಸುವದು, ೧೫೦, ೧೭೬, ೨೧೯.

೧೪೪. **ವಿಕಾರಃ**—
ಕಾರ್ಯ, ೯೮, ೧೮೦.

೧೪೫. **ವಿಜ್ಞಾನಮ್**—
ಉಪಾಸನೆ, ೨೩, ೫೩; ಆತ್ಮಜ್ಞಾನ, ೧೧,೩೦,೫೯,೭೮, ೧೧೯; ವೇದಾರ್ಥನಿಶ್ಚಯ, ೧೩೮, ೧೩೯, ೧೪೧.

೧೪೬. **ವಿಜ್ಞಾನಮಯಃ**—
ವೇದಾರ್ಥನಿಶ್ಚಯದಿಂದಾದ ಬುದ್ಧಿ, ಒಂದು ಕೋಶ, ೧೩೮, ೧೩೯, ೧೪೦, ೧೪೧, ೧೫೨, ೨೦೯

೧೪೭. **ವಿದ್ಯಾ**—
ಉಪಾಸನೆ ಮತ್ತು ಜ್ಞಾನ, ೩೦, ೫೬, ೬೯, ೮೨; ಜ್ಞಾನ, ೬೦ ೭೮, ೮೨, ೮೩, ೮೪, ೮೫, ೮೬, ೨೧೬.

೧೪೮. **ವಿದ್ಯಾಪರಿಪಾಕಃ**—
ಜ್ಞಾನವು ಬಲಿತುಕೊಳ್ಳುವದು, ೮೨.

೧೪೯. **ವಿದ್ಯಾವಾನ್, ವಿದ್ವಾನ್**—
ಆತ್ಮಜ್ಞಾನಿ, ೧೫೪, ೧೫೫, ೧೯೨, ೨೦೭ ೨೨೩, ೨೨೪.

೧೫೦. **ವಿಶೇಷಣಮ್**—
ಸಜಾತೀಯ ವಸ್ತುಗಳಿಂದ ಬೇರ್ಪಡಿಸುವ ಧರ್ಮ, ೯೫.

೧೫೧. **ವಿಷಯವಿಷಯಿಸಂಬನ್ಧಃ**—
ಇದನ್ನು ಅನುಭವಿಸುವದು, ಇದು ಅನುಭವಿಸುವದು—ಎಂಬ ಸಂಬಂಧ; ೧೯೫, ೨೦೬, ೨೨೦.

೧೫೨. **ವೃತ್ತಿಃ**—
ಭಾಷ್ಯ, ೧೧೦, ೧೭೬; ಪ್ರಾಣದ ವ್ಯಾಪಾರ, ೧೨೪; ಮನಸ್ಸಿನ ಅಲೆ, ೧೦೮, ೧೩೨

೧೫೩. **ಶಬ್ದಾನುಗಮಃ**—
ಅರ್ಥವು ಮಾತುಗಳಿಗೆ ಹೊಂದಿಕೊಂಡಿರುವದು, ೧೫೭.

೧೫೪. **ಶಮಃ**—
ಅಂತಃಕರಣ ನಿಗ್ರಹ, ೮೨.

